# ಕಾನೂರು ಹೆಗ್ಗಡಿತಿ

ಕುವೆಂಪು





ಉದಯರವಿ ಪ್ರಕಾಶನ
ವಾಣೀವಿಲಾಸಪುರಂ ಮೈಸೂರು-೨

# ಕಾನೂರು ಹೆಗ್ಗಡಿತಿ

ಕುವೆಂಪು



ಉದಯರವಿ ಪ್ರಕಾಶನ

ವಾಣೀವಿಲಾಸಪುರಂ

ಮೈಸೂರು–೨

# ಅರಿಕೆ

ಕಾದಂಬರಿ ಕರತಲ ರಂಗಭೂಮಿ: ಅಂಗೈಮೇಲಣ ನಾಟಕಶಾಲೆ. ಆದ್ದರಿಂದ ಕಾದಂಬರಿಯನ್ನು ಓದುವ ವಾಚಕರು ನಾಟಕವನ್ನು ನೋಡುವ ಪ್ರೇಕ್ಷಕರೂ ಆಗಬೇಕಾಗುತ್ತದೆ.

ವಾಚಕರ ಕಲ್ಪನೆ ಸದಾ ಎಚ್ಚತ್ತಿರಬೇಕು. ಅದು ನಿದ್ದೆಮಾಡುವುದಿರಲಿ, ತೂಕಡಿಸಿದರೂ ರಸಾಸ್ವಾದನೆಗೆ ಭಂಗ ಬರುತ್ತದೆ. ಸನ್ನಿವೇಶಗಳನ್ನು ಕಲ್ಪಿಸಿ ಕೊಳ್ಳುವಾಗ, ದೃಶ್ಯಗಳನ್ನು ಚಿತ್ರಿಸಿಕೊಳ್ಳುವಾಗ, ವ್ಯಕ್ತಿಗಳನ್ನು ಪರಿಚಯ ಮಾಡಿಕೊಳ್ಳುವಾಗ, ಅವರ ಸಂಭಾಷಣೆಗಳನ್ನು ಅವರವರ ಬೇರೆಬೇರೆಯ ವಾಣಿಗಳೊಡನೆ ಆಲಿಸುವಾಗ ವಾಚಕರು ಸಿನಿಮಾ ವಾಕ್ಚಿತ್ರವನ್ನು ತತ್ಪರತೆಯಿಂದ ನೋಡುತ್ತಿರುವ ಪ್ರೇಕ್ಷಕರಂತಾಗಬೇಕಾಗುತ್ತದೆ. ಹಾಗೆ ಮಾಡದಿದ್ದರೆ ಓದು ಸಾರ್ಥಕವಾಗುವುದಿಲ್ಲ.

ಎಲ್ಲಕ್ಕೂ ಬಹು ಮುಖ್ಯವಾದುದು ಸಹಾನುಭೂತಿ. ಅದಿಲ್ಲದಿದ್ದರೆ ನಂದನವೂ ಮರುಭೂಮಿಯಾಗುತ್ತದೆ.

ಕೃತಿರಚನೆಯಂತೆಯೆ ಕೃತಿಯ ರಸಾಸ್ವಾದನೆಯೂ ಒಂದು ಸೃಷ್ಟಿಕಾರ್ಯ. ಸೃಷ್ಟಿಕಾರ್ಯವಲ್ಲದ ಸರ್ವಕರ್ಮಗಳೂ ನೀರಸವಾಗುತ್ತವೆ. ಅಂತಹ ಕರ್ಮ ಗಳಿಂದ ನಮಗೆ ಒದಗುವುದು ಆನಂದವಲ್ಲ, ಬೇಸರ. ಆದ್ದರಿಂದ ಕಾದಂಬರಿ ಯನ್ನು ಓದುವವರ ಪ್ರತಿಭೆಯಲ್ಲಿ ಅದು ಮತ್ತೊಮ್ಮೆ ಸೃಷ್ಟಿಯಾಗಬೇಕಾಗುತ್ತದೆ. ರಸಾಸ್ವಾದನೆ ಎಂದರೆ ಕಟ್ಟಡದಿಂದ ಕಟ್ಟಡಕ್ಕೆ ವಿಗ್ರಹವನ್ನು ಸಾಗಿಸುವಂತಲ್ಲ; ಹೊಸದಾಗಿ ಉತ್ತು ಬಿತ್ತಿ ಹೂದೋಟವನ್ನು ಬೆಳೆಯಿಸುವಂತೆ ಅದೊಂದು ಸಜೀವವಾದ ಪ್ರಾಣಪೂರ್ಣವಾದ ಕ್ರೀಡಾಕ್ರಿಯೆ.

ಈ ನನ್ನ ಪ್ರಥಮ ಕಾದಂಬರಿಯನ್ನು ಓದುವವರಲ್ಲಿ ನನ್ನದೊಂದು ವಿಜ್ಞಾಪನೆ. ಇದನ್ನು ಕಥೆಯ ಕೋಲಾಹಲಕ್ಕಾಗಿ ಓದಬೇಡಿ. ಸಾವಧಾನ ವಾಗಿ ಸಚಿತ್ರವಾಗಿ ಸಜೀವವಾಗಿ ಓದಿ. ಇಲ್ಲಿ ಚಿತ್ರಿತವಾಗಿರುವುದು ಮಲೆನಾಡಿನ ಬಾಳಿನ ಕಡಲಿನಲ್ಲಿ ಒಂದು ಹನಿ. ಅನೇಕರಿಗೆ ಅದು ಸಂಪೂರ್ಣವಾಗಿ ಹೊಸ ಪ್ರಪಂಚವಾಗುತ್ತದೆ. ಹೊಸ ಊರಿಗೆ ಹೋಗುವವರು ಅಲ್ಲಿಯ ಜನ ಮತ್ತು ಜೀವನದ ವಿಚಾರವಾಗಿ ತಟಕ್ಕನೆ ಯಾವ ನಿರ್ಣಯಗಳನ್ನೂ ಮಾಡಿಕೊಳ್ಳದೆ ಸ್ವಲ್ಪಕಾಲ ತಾಳ್ಮೆಯಿಂದಿದ್ದು ಕ್ರಮೇಣ ಬಳಕೆಯಿಂದ ಜನರನ್ನೂ ಜೀವನವನ್ನೂ ಪರಿಚಯ ಮಾಡಿಕೊಳ್ಳುವಂತೆ ಈ ಕಾದಂಬರಿಯ ಅರಣ್ಯಜಗತ್ತನ್ನು ಪ್ರವೇಶಿಸುವ

ವಾಚಕರು ವರ್ತಿಸಬೇಕಾಗುತ್ತದೆ. ಎಂದರೆ, ಮೊದಲನೆಯ ಸಾರಿ ಓದಿದೊಡನೆ ಎಲ್ಲವನ್ನೂ ಪೂರೈಸಿದೆವು ಎಂದುಕೊಳ್ಳುವವರು, ಮೋಟಾರಿನಲ್ಲಿ ಕುಳಿತು ಒಂದೂರಿನ ಪೂರ್ವದ್ವಾರದಿಂದ ಒಳನುಗ್ಗಿ, ಅದರ ಬೀದಿಗಳಲ್ಲಿ ಸರ್‍ರನೆ ಸಂಚರಿಸಿ, ಪಶ್ಚಿಮ ದ್ವಾರದಿಂದ ಹೊರಹೊರಟು, ಆ ಊರಿನ ಪೂರ್ಣ ಪರಿಚಯ ಮಾಡಿಕೊಂಡಿದ್ದೇವೆ ಎನ್ನುವವರಂತೆ ಹಾಸ್ಯಾಸ್ಪದರಾಗುತ್ತಾರೆ.

ಈ ಕಾದಂಬರಿಯನ್ನು ರಚಿಸುವಾಗಲೂ ತರುವಾಯ ಮತ್ತೆ ಮತ್ತೆ ಓದುವಾಗಲೂ ನನಗೆ ಬಹುವಾಗಿ ಬಂದಿರುವ ರಸಸುಖದಲ್ಲಿ ಒಂದಿನಿತನ್ನಾದರೂ ಇದನ್ನು ಓದುವವರು ಸವಿಯುತ್ತಾರೆಂದು ಗೊತ್ತಾದರೆ ಕೃತಿ ಸಾರ್ಥಕವಾಯಿತೆಂದು ಭಾವಿಸುತ್ತೇನೆ.

ಅನೇಕ ಪುಟ ಸಂಖ್ಯೆಯ ಈ ದೊಡ್ಡ ಕಾದಂಬರಿಯನ್ನು ಅನಂತ ಶ್ರದ್ಧೆಯಿಂದಲೂ ಅಮಿತ ಶ್ರಮದಿಂದಲೂ ವಿಪುಲ ವಿಶ್ವಾಸದಿಂದಲೂ ಮುದ್ರಣಕ್ಕೆ ನಕಲು ಮಾಡಿಕೊಟ್ಟಿರುವ ಚಿ॥ ವಿಜಯದೇವನಿಗೂ, ಅಚ್ಚಿಗೆ ಕಳುಹಿಸುವುದರಿಂದ ಮೊದಲುಗೊಂಡು ಕರಡುಗಳನ್ನು ತಿದ್ದುವುದೇ ಮೊದಲಾದ ಎಲ್ಲ ಕಾರ್ಯಗಳನ್ನೂ ಮನಮುಟ್ಟಿ ವಹಿಸಿ ನಿರ್ವಹಿಸಿರುವ ನನ್ನ ಮಿತ್ರರಾದ ಶ್ರೀಮಾನ್ ಕೂಡಲಿ ಚಿದಂಬರಂರವರಿಗೂ, ಪುಸ್ತಕದ ಮೇಲಂಗಿಗೆ ಕಾಜಾಣಗಳ ಚಿತ್ರಗಳನ್ನು ಮನೋಹರವಾಗಿ ಬರೆದುಕೊಟ್ಟಿರುವ ಶ್ರೀಮಾನ್ ಎ. ಸೀತಾರಾಂರವರಿಗೂ ನಾನು ಕೃತಜ್ಞನಾಗಿದ್ದೇನೆ.

ನಾನು ಕಾದಂಬರಿಯನ್ನು ರಚಿಸುತ್ತಿದ್ದಾಗ ವಾರವಾರವೂ ಬಹು ದೂರದಿಂದ ಸುಡುಬಿಸಿಲಿನಲ್ಲಿ ತಪ್ಪದೆ ನಾನಿದ್ದಲ್ಲಿಗೆ ಬಂದು, ಅದನ್ನು ಓದಿಸಿ ಕೇಳಿ, ಚಿತ್ರಿಸಿಕೊಂಡು ನೋಡಿ, ತಾವೂ ಮಹದಾನಂದಪಟ್ಟು, ನನಗೂ ಉಲ್ಲಾಸವಿತ್ತ ಮತ್ತೊಬ್ಬ ಮಿತ್ರರಿಗೂ ನನ್ನ ವಂದನೆಗಳನ್ನು ಅರ್ಪಿಸುತ್ತೇನೆ. ಏಕೆಂದರೆ ಕವಿಗೆ ಸಹಾನುಭೂತಿ ಅರ್ಧ ಸ್ಫೂರ್ತಿ.

ಮೈಸೂರು,
ಡಿಸೆಂಬರು ೧೬, ೧೯೩೬

ಕುವೆಂಪು

# ವಿವರ

೧

## ರಾಮತೀರ್ಥದೆಡೆ ಕಲ್ಲುಸಾರದ ಮೇಲೆ

ಇನ್ನೂ ನಡುಹಗಲಾಗದಿದ್ದರೂ ಬೇಸಗೆಯ ಬಿಸಿಲು ಸುಡುತ್ತಿದ್ದುದರಿಂದ ತೀರ್ಥಹಳ್ಳಿಯ ಕಲ್ಲುಸಾರದ ಮಾರ್ಗವಾಗಿ ತುಂಗಾ ನದಿಯನ್ನು ದಾಟುತ್ತಿದ್ದ ಇಬ್ಬರು ತರುಣರು ಬಿಸಿಲ ಬೇಗೆಗೆ ಬಳಲಿ, ಬೆವರಿ, ವಾಹಿನಿಯ ದಕ್ಷಿಣತಟದಲ್ಲಿ ಕೊಬ್ಬಿ ಬೆಳೆದಿದ್ದ ಮರಗಳ ಹಸುರು ನೆಳಲನ್ನು ಆಶ್ರಯಿಸಲೆಂಬಂತೆ ಬೇಗ ಬೇಗನೆ ನಡೆಯುತ್ತಿದ್ದರು. ಅವರನ್ನು ನೋಡಿದ ಕೂಡಲೆ ಶ್ರೀಮಂತರ ಮನೆಯವರೆಂದು ಗೊತ್ತಾಗುತ್ತಿತ್ತು. ಬಹು ದೂರದಿಂದ ಬಂದ ಆಯಾಸ ದಿಂದಲೂ ಸಕಾಲಕ್ಕೆ ನಿದ್ರಾಹಾರಗಳು ದೊರೆಯದಿದ್ದುದರಿಂದಲೂ ಕಾಂತಿ ಯುಕ್ತವಾಗಿರುತ್ತಿದ್ದ ಅವರ ಮುಖಗಳು ನಸುಬಾಡಿದ್ದುವು.

ಒಬ್ಬನು ಎತ್ತರವಾಗಿ ತೆಳ್ಳಗಿದ್ದನು. ಆದರೂ ಬಲಿಷ್ಠನೂ ಆರೋಗ ದೃಢ ಕಾಯನೂ ಎಂಬುದು ಆತನ ಚಲನೆಯ ವೈಖರಿಯಿಂದ ತಿಳಿದುಬರುತ್ತಿತ್ತು. ಬಿಸಿಲಿನ ಡಾವರ ಅತಿಯಾಗಿದ್ದರೂ ಆತನು ತಲೆಗೆ ಟೋಪಿಯನ್ನೂ ಹಾಕಿರಲಿಲ್ಲ; ಕೊಡೆಯನ್ನೂ ಸೂಡಿರಲಿಲ್ಲ; ಕ್ರಾಪು ಪೊದೆ ಪೊದೆಯಾಗಿ ತಲೆಯನ್ನೆಲ್ಲ ಒಂದು ತೆರನಾದ ಧೀರ ಸ್ವಚ್ಛಂದತೆಯಿಂದ ಆವರಿಸಿತ್ತು. ಸ್ವಲ್ಪ ಉದ್ದವೆಂದು ಹೇಳಬಹುದಾಗಿದ್ದ ಆತನ ತಲೆಗೂದಲು ಕಾಡಿಗೆಯಂತೆ ಕಪ್ಪಾಗಿ ಸ್ನಿಗ್ಧ ಕೋಮಲವಾಗಿ ಗುಂಗುರು ಗುಂಗುರಾಗಿತ್ತು. ಒಂದೆರಡು ಮುಂಗುರುಳು ಬೆವರಿನಿಂದ ತೊಯ್ದು ಹಣೆಯ ಮೇಲೆ ಮೆತ್ತಿದಂತೆ ವಕ್ರವಿನ್ಯಾಸದಿಂದ ಶೋಭಿಸುತ್ತಿದ್ದುವು. ಆ ನಸುಗೆಂಪುಬಣ್ಣದ ಹಣೆಯ ಮೇಲೆ ಕಡುಗಪ್ಪು ಬಣ್ಣದ ಬಳ್ಳಿಗುರುಳು ರಮಣಿಯರ ಸೌಂದರ್ಯವನ್ನು ಮನಸ್ಸಿಗೆ ತರುವಂತಿತ್ತು. ಆದರೆ ಆ ಮುಖಭಂಗಿಯಲ್ಲಿ ಅಬಲತಾಭಾವ ಲೇಶವಾದರೂ ಇರಲಿಲ್ಲ. ಅದಕ್ಕೆ ಬದಲಾಗಿ ರಸಿಕತೆ ಮನಸ್ಸಿಗೆ ಬರುವಂತಿತ್ತು. ಹಣೆಗೆ ನೇರವಾಗಿ ತೆಗೆದಿದ್ದ ಬೈತಲೆ ಬಾಚದೆ ಇದ್ದುದರಿಂದ ಅಸ್ತವ್ಯಸ್ತವಾಗಿತ್ತು. ಕರಿಯ ಕೂದಲಿಗೆ ಎರಚಿದ "ಮಂಗಳೂರು ಪುಡಿ"ಯಂತೆ ಸಣ್ಣನೆ ನುಣ್ಣನೆ ಕೆಂಪುಧೂಳಿ ಹತ್ತಿ, ಆತನು ಮಾಡಿದ್ದ ಪ್ರಯಾಣದ ದೀರ್ಘತೆಯನ್ನೂ ಆ ಪ್ರಯಾಣದ ರಸ್ತೆಯ ಸ್ಥಿತಿಯನ್ನೂ ಸೂಚಿಸುತ್ತಿದ್ದುವು. ಆತನ ಕಣ್ಣುಗಳು ಅಷ್ಟೇನೂ ಅತಿಶಯ ವಿಸ್ತಾರವಾಗಿರದಿದ್ದರೂ ಉಜ್ಜ್ವಲವಾಗಿ, ಮರ್ಮಭೇದೀದೃಷ್ಟಿಯುತವಾಗಿ, ಯೋಗಿಯ ನಯನಗಳಂತೆ ಅಂತರ್ಮುಖವಾಗಿ, ತಿಳಿದವರಲ್ಲಿ ಗೌರವಭಾವ

ವನ್ನೂ ತಿಳಿಯದವರಲ್ಲಿ ಮೋಹವನ್ನೂ ಉದ್ರೇಕಿಸುವಂತಿದ್ದುವು. ಮೂಗು ಉದ್ದವಾಗಿ ತುದಿಯಲ್ಲಿ ಶುಕಚಂಚುವಿನಂತೆ ಬಾಗಿತ್ತು; ಸೃಷ್ಟಿಯ ರಹಸ್ಯಗಳನ್ನು ಕುಟುಕಿ ಒಳಹೊಕ್ಕು ನೋಡುತ್ತೇನೆ ಎನ್ನುವಂತಿತ್ತು. ಅದರ ಮೇಲಿದ್ದ ಒಂದು ನಸುಹಸುರಾದ ನರವು ಸೌಂದರ್ಯಕ್ಕೆ ಸಬಲತೆ ಗಾಂಭೀರ್ಯಗಳನ್ನು ಕೊಡುತ್ತಿತ್ತು. ಓಷ್ಠವು ಬಾಗಿದ ಧನುಸ್ಸಿನಂತೆಯೂ ಅಧರವು ಬಿಲ್ಲಿನ ಸಹಾಯದಿಂದಲೇ ಮಾತ್ರ ತನ್ನ ಶಿಥಿಲತೆಯನ್ನು ಪರಿಹರಿಸಿಕೊಂಡು ಪೌರುಷಯುಕ್ತವಾಗಿರುವ ಕೆಂಬಣ್ಣದ ಹೆದೆಯಂತೆಯೂ ಒಂದನ್ನೊಂದು ಆಶ್ರಯಿಸಿ, ಒಂದನ್ನೊಂದು ಆಲಿಂಗಿಸಿ, ಒಂದಕ್ಕೊಂದು ಅವಲಂಬನವಾಗಿ ಅಪ್ರತಿಹತವಾಗಿದ್ದುವು. ಎಂದರೆ, ಆ ಧನುಸ್ಸು ಸುರಚಾಪಕ್ಕಿಂತಲೂ ಹೆಚ್ಚಾಗಿ ಹರಚಾಪವನ್ನೇ ಹೋಲುವಂತಿತ್ತು. ಕೆನ್ನೆಗಳೂ ತುಟಿಗಳಂತೆಯೆ ಮನೋಹರವಾಗಿದ್ದರೂ ಕೋಮಲವಾಗಿರಲಿಲ್ಲ. ಪತಂಗಗಳನ್ನು ಆಕರ್ಷಿಸುವ ದೀಪದ್ಯುತಿಯಂತಿದ್ದುವು. ಗಲ್ಲವು ಸಣ್ಣಗೆ ದುಂಡಗೆ ಮೊನಚಾಗಿದ್ದು ಕಠೋರ ಸಾಧನೆಯನ್ನೂ ಒಂದು ವಿಧವಾದ ಹಠವನ್ನೂ ಮನಸ್ಸಿಗೆ ತರುತ್ತಿದ್ದುವು. ತಾರುಣ್ಯ ಯೌವನಗಳ ಮಧ್ಯೆ ನಿಂತು, ಆ ಎರಡು ಅವಸ್ಥೆಗಳ ಶ್ರೇಷ್ಠಾಂಶಗಳನ್ನು ಒಳಗೊಂಡಿದ್ದ ಆತನ ದೇಹವು ಒಂದು ಉದ್ದವಾದ ಷರ್ಟಿನಿಂದ ಆವೃತವಾಗಿ, ವಿಶಾಲವಾಗಿ ಉಬ್ಬಿದ ಉರಪ್ರದೇಶವನ್ನು ಪ್ರದರ್ಶಿಸುತ್ತಿತ್ತು. ಆತನು ಹಾಕಿಕೊಂಡಿದ್ದ ಖಾದಿಬಟ್ಟೆಯ ಷರ್ಟೂ ಅಡ್ಡಲಾಗಿ ಉಟ್ಟಿದ್ದ ಪಂಚೆಯೂ ಪ್ರಯಾಣ ಧೂಳಿಯಿಂದ ಮಲಿನವಾಗಿದ್ದುವು. ಒಟ್ಟಿನಲ್ಲಿ ಪೌರುಷ, ಆಧ್ಯಾತ್ಮಿಕತೆ, ಅಂತರ್ಮುಖತೆ, ರಸಿಕತೆ, ಮೇಧಾಶಕ್ತಿ, ಇತರರಿಗೆ ಕಷ್ಟವಲ್ಲದಿದ್ದರೂ ತನಗೇ ಕಷ್ಟಕರವಾಗಬಹುದಾದ ಹಠಭಾವ, ಇವುಗಳಿಂದ ಮೆರೆಯುತ್ತಿದ್ದ ಆತನು ಭವ್ಯ ವ್ಯಕ್ತಿಯಾಗಿದ್ದನು. ಜೊತೆಯಲ್ಲಿದ್ದ ಕಿರಿಯವನಲ್ಲಿ ಇದ್ದಂತೆ ಆತನಲ್ಲಿ ಯಾವ ವಿಧವಾದ ಭೋಗ ಸಾಮಾಗ್ರಿಯೂ ಕಂಡು ಬರುತ್ತಿರಲಿಲ್ಲ. ಆತನ ಸರಳ ಸೌಂದರ್ಯವೇ ಒಂದು ಗಂಭೀರ ಭೋಗವಾಗಿತ್ತು.

ಆತನ ಜೊತೆಯಲ್ಲಿದ್ದ ಕಿರಿಯ ತರುಣನಲ್ಲಿ ಅಷ್ಟೇನೂ ವಿಶೇಷ ವ್ಯಕ್ತಿತ್ವ ವಿರಲಿಲ್ಲ. ಆತನು ಸ್ವಲ್ಪ ಕುಳ್ಳಾಗಿ ದಪ್ಪವಾಗಿ ಸುಖಾಪೇಕ್ಷೆ ಹೆಚ್ಚಾಗಿರುವವನಂತೆ ಕಂಡುಬರುತ್ತಿದ್ದನು. ಆತನೂ ಖಾದಿ ಬಟ್ಟೆಯನ್ನೆ ಹಾಕಿಕೊಂಡಿದ್ದನು; ತಲೆಗೊಂದು ಬಿಳಿಯ ಖಾದಿ ಟೋಪಿ, ಮೈಗೆ ನೀಲಿಬಣ್ಣದ ಕೋಟು, ಕೋಟಿನ ಕಿರುಕಿಸೆಯಲ್ಲಿ ಒಂದು ಫೌಂಟನ್ ಪೆನ್, ಕೈಯಲ್ಲೊಂದು ಕೈ ಗಡಿಯಾರ, ಹೆಚ್ಚು ಎನ್ನಬಹುದಾದ ಅಂಚಿನ ಖಾದಿ ಪಂಚೆ. ವದನವು ಸರಳತೆ ಸೌಶೀಲ್ಯ ಗಳಿಂದ ಕೂಡಿ ಮುಗ್ಧವಾಗಿತ್ತು. ದೃಢಮನಸ್ಸಾಗಲಿ ದಕ್ಷತೆಯಾಗಲಿ ಮೂರ್ತಿ ಯಲ್ಲಿ ತೋರಿಬರುತ್ತಿರಲಿಲ್ಲ.

ಅಂತಹ ಬಿಸಿಲಿನಲ್ಲಿ ತೀರ್ಥಹಳ್ಳಿಯ ಕಲ್ಲುಸಾರದ ಮೇಲೆ ನಡೆಯುವುದು ಬಹು ಪ್ರಯಾಸ. ಆದರೆ ಆ ಇಬ್ಬರ ಕಾಲುಗಳಲ್ಲಿಯೂ ಮೆಟ್ಟುಗಳಿದ್ದುದರಿಂದ ನೋಯದೆ ನಡೆಯಬಹುದಾಗಿತ್ತು. ಕಿರಿಯವನು ಅತ್ತ ಇತ್ತ ನೋಡದೆ ಹಾದಿ ನಡೆಯುತ್ತಿದ್ದನು. ಹಿರಿಯವನು ಮಾತ್ರ ವೇಗವಾಗಿ ನಡೆಯುತ್ತಲೇ ಕ್ಷಣಕ್ಷಣಕ್ಕೂ ಕತ್ತೆತ್ತಿ ಸುತ್ತಲೂ ಬಯಕೆನೋಟವನ್ನಟ್ಟಿ ಸಂತೋಷಪಡುವಂತೆ ತೋರುತ್ತಿತ್ತು. ಹೊಳೆಯ ನಡುವೆ ಇರುವ ರಾಮತೀರ್ಥ ಸಮೀಪವಾಗಲು ಆತನ ನಡಿಗೆ ನಿಧಾನವಾಗಿ ಕಡೆಗೆ ನಿಶ್ಚಲವಾಯಿತು. ತಾನು ಕೆಲವು ವರ್ಷಗಳ ಹಿಂದೆ ತೀರ್ಥಹಳ್ಳಿಯಲ್ಲಿ ಓದುತ್ತಿದ್ದಾಗ ಆ ತುಂಗಾ ನದಿಯೂ ಆ ರಾಮ ತೀರ್ಥವೂ ನಿತ್ಯಯಾತ್ರಾಸ್ಥಾನಗಳಾಗಿದ್ದುದು ಆತನ ನೆನಪಿಗೆ ಬಂದಿತು. ಕೆಲವು ಹುಡುಗರು ಅಲ್ಲಿ ಈಜುತ್ತಿದ್ದುದನ್ನು ನೋಡಿ ತಾನೂ ಹಾಗೆಯೇ ಈಜಾಡಿದ್ದು ದನ್ನು ನೆನೆದನು. ಸನ್ನಿವೇಶವೇನೊ ಹಿಂದೆ ಇದ್ದಂತೆಯೇ ಕಂಡಿತು. ಆದರೆ ತಾನು ಮಾತ್ರ ಹಿಂದೆ ಇದ್ದಂತಿರಲಿಲ್ಲ. ಪರ್ವತಗಳ ಸಂಧಿಯಲ್ಲಿ ಕಾಣಿಸಿಕೊಂಡು ಹರಿದು ಬಂದ ಹೊಳೆ ಅಂದಿನಂತೆಯೆ ಇಂದೂ ಪರ್ವತಗಳ ಇಡುಕಿನಲ್ಲಿ ಕಣ್ಮರೆಯಾಗುತ್ತಿತ್ತು. ತುಂಗೆಯ ಇಕ್ಕೆಲದ ದಡಗಳಲ್ಲಿ ಅಂದಿನಂತೆಯೆ ಅರಣ್ಯಗಳು ಮಾಲೆ ಮಾಲೆಯಾಗಿ ನಿಂತಿದ್ದುವು. ಆಗಿದ್ದ ಮರಗಳಲ್ಲಿ ಈಗಲೂ ಅನೇಕವಿವೆ! ನದಿಯ ನಡುವೆ ಮಲಗಿದ್ದ ಆ ಹೆಬ್ಬಂಡೆಯ ರಾಶಿಗಳೂ ಈಗಲೂ ಅಂದಿನಂತೆಯೆ ಇವೆ. ಒಂದು ಮಾತ್ರ ಪ್ರವಾಹದಲ್ಲಿ ಉರುಳಿ ಬಿದ್ದಿದೆ. ಬಂಡೆಯಿಂದ ಬಂಡೆಗೆ ಧುಮುಕುತ್ತಿದ್ದ ಜಲರಾಶಿ ಸಂಮಥಿತವಾಗಿ ನೊರೆ ನೊರೆಯಾಗಿ ತುಂತುರು ತುಂತುರಾಗಿ ಘೂರ್ಣ್ಣಾಯಮಾನವಾಗಿ, ಕಡೆಗೆ ತೆರೆ ತೆರೆಯಾಗಿ, ಬಿಸಿಲಿನಲ್ಲಿ ಮಿರುಗಿ ಮಿರುಗಿ ಅಂದಿನಂತೆಯೆ ಇಂದೂ ಲೀಲಾಮಗ್ನವಾಗಿರುವಂತೆ ತೋರುತ್ತಿದೆ.

ಅಣ್ಣನು ಬಾರದೆ ನಿಂತುದನ್ನು ಕಂಡು ತಮ್ಮನು ಕೂಗಿದನು. ಅಣ್ಣನು ಎಚ್ಚತ್ತವನಂತೆ ಫಕ್ಕನೆ ತಿರುಗಿ ನೋಡಿ ಮುಂದೆ ಸಾಗಿದನು. ಮುಗುಳಾದ ಕಿರುನಗೆಯೊಂದು ಆತನ ತುಟಿಗಳಲ್ಲಿ ಕೊಂಕುತೋರಿ ಮರೆಯಾಯಿತು: ಎಷ್ಟು ಪರವಶವಾಗಿದ್ದೆ ಎಂದು!

ಹಿರಿಯವನು ಹತ್ತಿರ ಬರಲು ಕಿರಿಯವನು "ಏನು ನೋಡುತ್ತಿದ್ದೆಪ್ಪಾ, ಈ ಬಿಸಿಲಿನಲ್ಲಿ?" ಎಂದನು.

"ಹುಡುಗರು ಈಜುತ್ತಿದ್ದರು, ಅದನ್ನು ನೋಡಿ ನಾವು ಈಜುತ್ತಿದ್ದುದನ್ನು ನೆನೆದು ಹಾಗೆಯೆ ನಿಂತುಬಿಟ್ಟೆ. ಅವರು ಈಗಲೂ ನಾವು ಆಡಿದ ಕಲ್ಲಾಟವನ್ನೇ ಆಡುತ್ತಿದ್ದಾರೆ."

"ಬಾ ಹೋಗೋಣ, ಹೊತ್ತಾಯಿತು. ಸದ್ಯ ಮನೆ ಸೇರಿದರೆ ಸಾಕಾಗಿದೆ ......ಏನು ಬಿಸಿಲು!"

"ಅವರಿನ್ನೂ ಬರಲೇ ಇಲ್ಲ....ಏನು ನಾವೇ ಗಾಡಿ ಹೊಡೆದುಕೊಂಡು ಹೋಗೋಣವೇನು?"

ಇಬ್ಬರೂ ತಾವು ನಡೆದುಬಂದ ಕಲ್ಲುಸಾರದ ದಾರಿಯನ್ನೇ ಹೊಳೆಯ ಆಚೆಯ ದಡದವರೆಗೂ ನೋಡಿದರು. ಅವರು ಸುಮಾರು ಎರಡು ಫರ್ಲಾಂಗು ನಡೆದುಬಂದಿದ್ದರು. ಕಲ್ಲುಸಾರ ಇನ್ನೂ ಒಂದೂವರೆ ಫರ್ಲಾಂಗು ಇತ್ತು.

ತಮ್ಮನು ಮುನಿಸಿನಿಂದ "ಅವರು ಇನ್ನೂ ಏನು ಮಾಡುತ್ತಿದ್ದಾರೆ? ಎರಡು ಟ್ರಂಕು ಹೊತ್ತುಕೊಂಡು ಬರುವುದಕ್ಕೆ ಎಷ್ಟು ಹೊತ್ತು?" ಎಂದನು.

ಅಣ್ಣನು "ಪೇಟೆಯಲ್ಲಿ ಏನಾದರೂ ಕೆಲಸವಿತ್ತೋ ಏನೋ?" ಎಂದನು. ಇಬ್ಬರೂ ಮತ್ತೆ ಬೇಗ ಬೇಗನೆ ನಡೆದರು.

ತಮ್ಮನು "ಕೆಲಸವೇನು? ಹೋಟಲಿಗೆ ಹೋದರೋ ಏನೋ ? ಆ ಪುಟ್ಟಣ್ಣ ಹೋದಲ್ಲಿಯೇ ಹೀಗೆ" ಎಂದನು.

ಮತ್ತೆ ಅರ್ಧ ಫರ್ಲಾಂಗು ನಡೆದ ತರುವಾಯ ಹಿರಿಯವನು ಹಿಂತಿರುಗಿ ನೋಡಿ "ಓ ಅಲ್ಲಿ ಬರುತ್ತಿದ್ದಾರೆ" ಎಂದನು.

ತಮ್ಮನೂ ತಿರುಗಿ ನೋಡಿ "ಅದು ಯಾರದು! ಇನ್ನೊಬ್ಬರು ಇದ್ದಾರಲ್ಲ? ಪೇಟದವರು!" ಎಂದನು.

"ಯಾರೋ ಏನೋ? ದೂರಕ್ಕೆ ಗೊತ್ತಾಗುವುದಿಲ್ಲ."

ಇಬ್ಬರೂ ನದಿಯ ಕಲ್ಲುಸಾರವನ್ನು ದಾಟಿ, ತರುನಿಬಿಡವಾಗಿದ್ದ ದಡವನ್ನು ಸೇರಿ, ಮುಂದೆ ನಡೆದರು. ಮರದ ನೆಳಲು ತಿಳಿಗೊಳದಂತೆ ತಂಪಾಗಿತ್ತು. ಕುರುವಳ್ಳಿಯ ಅರಳಿಕಟ್ಟೆಯ ಬುಡದಲ್ಲಿ ಅವರ ಮನೆಯ ಕಮಾನು ಗಾಡಿ ನಿಂತಿತ್ತು. ನೊಗಕ್ಕೆ ಕಟ್ಟಿದ್ದ ಎತ್ತುಗಳೆರಡೂ ಮಲಗಿ ಅರೆಗಣ್ಣು ಮಾಡಿಕೊಂಡು ಮೆಲುಕು ಹಾಕುತ್ತಿದ್ದುವು. ಆಗಾಗ ಹಾರಿಬಂದು ಮೈಮೇಲೆ ಕೂರುತ್ತಿದ್ದ ನೊಣಗಳನ್ನು ಬಾಲದಿಂದ ಅಟ್ಟಿಕೊಳ್ಳುತ್ತಿದ್ದುವು. ಕೆಲವು ಸಾರಿ ಕುತ್ತಿಗೆಯ ಬುಡದಲ್ಲಿಯೂ ತಲೆಯಮೇಲೆಯೂ ಕೂರುತ್ತಿದ್ದ ನೊಣಗಳನ್ನು ತಲೆಯಲ್ಲಾಡಿಸಿ ಅಟ್ಟಿಕೊಳ್ಳುವಾಗ ಗಂಟೆಯ ಸರವು ಹತ್ತಾರು ಗಾನದ ಹನಿಗಳನ್ನು ಸೂಸಿ ಮತ್ತೆ ನಿಃಶಬ್ದವಾಗುತ್ತಿತ್ತು. ಅವುಗಳಲ್ಲಿ ಒಂದು ಎತ್ತು ಕಪ್ಪಾಗಿತ್ತು; ಮತ್ತೊಂದು ಬೂದು ಬಣ್ಣದ್ದು. ಇಬ್ಬರೂ ಗಾಡಿಯ ಬುಡಕ್ಕೆ ಹೋದಾಗ ಕಪ್ಪು ಎತ್ತು ಗಂಟೆಯ ಸರವನ್ನು ಗಾನಗೈಯುತ್ತ ಎದ್ದು ನಿಂತಿತು. ಹಿರಿಯವನು ಸ್ವಲ್ಪ ಹಿಂದಕ್ಕೆ ಸರಿದು "ರಾಮೂ, ಮುಂದೆ ಹೋಗಬೇಡ. ಎಲ್ಲಿಯಾದರೂ

ಹಾದುಬಿಟ್ಟರೆ ಕಷ್ಟ! ಅವರು ಬಂದಮೇಲೆಯೇ ಗಾಡಿಗೆ ಹತ್ತಿದರಾಯಿತು" ಎಂದು, ತನ್ನ ಭಯಕ್ಕೆ ತಾನೆ ಮುಗುಳು ನಕ್ಕನು.

ಕಿರಿಯವನು "ಸರಿ, ನಾವೇನು ಹೊಸಬರೇನು ಅವಕ್ಕೆ? ಎತ್ತಾದರೂ ಗುರುತು ಸಿಕ್ಕುವುದಿಲ್ಲವೇನು?" ಎಂದು ಮುಂದೆ ಹೋಗಿ ಮಲಗಿದ್ದ ಎತ್ತಿನ ಬೆನ್ನನ್ನು ಚಪ್ಪರಿಸಿ ತಟ್ಟಿ "ನಂದೀ, ಏಳು" ಎಂದನು.

ಆ ಸಾಧುಪ್ರಾಣಿ ಎದ್ದುನಿಂತು ಆಗಂತುಕನನ್ನು ನೋಡಿತು. ಅದರ ಕಣ್ಣುಗಳಲ್ಲಿ ಯಾವ ಜ್ಞಾನದ ಅಥವಾ ಅಜ್ಞಾನದ ಸುಳಿವೂ ಇರದಿದ್ದರೂ ಕಿರಿಯವನು ತನ್ನ ಗುರುತು ಅದಕ್ಕೆ ಸಿಕ್ಕಿತೆಂದು ಊಹಿಸಿಕೊಂಡು ಸ್ವಲ್ಪ ಹಿಗ್ಗಿದನು. ಅದರ ಗಂಗೆದೊವಲನ್ನು ನೀವಿ ಉಪಚಾರಮಾಡಿ, ಮತ್ತೊಂದು ಎತ್ತಿನ ಬಳಿಗೆ ಹೋಗುವಷ್ಟರಲ್ಲಿ ಅದು ಉದ್ವೇಗದಿಂದ ಕುಣಿದಾಡಿತು. ತಮ್ಮನು ಹಿಂದಕ್ಕೆ ನೆಗೆದುದನ್ನು ಕಂಡು ಅಣ್ಣನು ಗಹಗಹಿಸಿ ನಕ್ಕು "ನಾನು ಹೇಳಲಿಲ್ಲವೇನು ನಿನಗೆ?" ಎಂದನು.

ತಮ್ಮನು ಸ್ವಲ್ಪ ನಾಚಿ, ಕೋಪದಿಂದ ಕರಿಯ ಎತ್ತನ್ನು ನೋಡುತ್ತ "ಆ ಹಾಳು ಲಚ್ಚ, ಅದರ ಸ್ವಭಾವ ಎಲ್ಲಿ ಬಿಟ್ಟೀತು? ಹೊಸದಾಗಿ ತಂದಾಗ ಗಾಡಿಯವನನ್ನೇ ತಿವಿಯಲಿಲ್ಲವೇನು?" ಎನ್ನುತ್ತ ಅಣ್ಣನ ಬಳಿಗೆ ಬಂದನು.

ಅಂತೂ ಅವರಿಬ್ಬರಿಗೂ ಆ ಗಾಡಿ ಮತ್ತು ಎತ್ತುಗಳನ್ನು ನೋಡಿ, ಮನೆಯವರನ್ನೇ ಕಂಡಂತಾಗಿ, ಸಂತೋಷಗೊಂಡರು. ಅವುಗಳನ್ನು ನೋಡಿದ ಅವರ ಮನಸ್ಸಿನಿಂದ ಮೈಸೂರು, ಚಾಮುಂಡಿಬೆಟ್ಟ, ಅರಮನೆ, ಕುಕ್ಕನಹಳ್ಳಿಯ ಕೆರೆ, ಅಠಾರಾ ಕಚೇರಿ, ಹೈಸ್ಕೂಲು, ಕಾಲೇಜು, ಜನಸಂದಣಿ ಎಲ್ಲವೂ ಮಾಯವಾಗಿ, ಅದಕ್ಕೆ ಬದಲಾಗಿ ತಮ್ಮ ಮನೆ, ಕಾಡು, ಕೊಟ್ಟಿಗೆ, ಗದ್ದೆ, ದನಕರು, ತೋಟ, ಕೂಲಿಯಾಳುಗಳು ಮೊದಲಾದುವು ಸುಳಿದುವು. ಅಲ್ಲದೆ ತಮ್ಮನ್ನು ಮನೆಗೊಯ್ಯುವ ಪ್ರಾಣಿಗಳ ವಿಚಾರದಲ್ಲಿ ಅವರಿಗೆ ಪ್ರೀತಿಯಲ್ಲದೆ ಬೇರೆ ಯಾವ ಭಾವಕ್ಕೂ ಸ್ಥಳವಿರಲಿಲ್ಲ.

ಲಚ್ಚನ ತಂಟೆಗೆ ಹೋಗುವುದು ಅಪಾಯಕರವೆಂದು ತಿಳಿದ ರಾಮಯ್ಯನು ಪುನಃ ನಂದಿಯ ಬಳಿಗೆ ಹೋಗಿ ಅದನ್ನು ನಾನಾ ವಿಧವಾಗಿ ಮುದ್ದಿಸತೊಡಗಿದನು. ಹಿರಿಯವನಾದ ಹೂವಯ್ಯನು ತರಗು ಬಿದ್ದು ಮೃದುವಾಗಿದ್ದ ನೆಲದ ಮೇಲೆ ಕುಳಿತು, ಮೇಲೆ ಮರಗಳಲ್ಲಿ ಚಿಲಿಮಿಲಿಗುಟ್ಟುತ್ತ ಕೊಂಬೆಯಿಂದ ಕೊಂಬೆಗೆ ಕುಪ್ಪಳಿಸುತ್ತಿದ್ದ ಹಕ್ಕಿಗಳ ಕಡೆಗೂ, ಎದುರಿಗೆ ಕಾಣುತ್ತಿದ್ದ ಹೊಳೆಯಾಚೆಯ ಪುರದ ಮನೆಮಂದಿರಗಳ ಕಡೆಗೂ, ಮರಗಳ ವಿತಾನದ ಸಂಧಿ ಸಂಧಿಗಳಲ್ಲಿ ನೆತ್ತಿಯ ಮೇಲೆ ಕಾಣುತ್ತಿದ್ದ ನೀಲಾಕಾಶದ ಕಡೆಗೂ, ಅಲ್ಲಲ್ಲಿ ತೇಲುತ್ತಿದ್ದ

ಬಿಳಿಯ ಬಣ್ಣದ ಉಣ್ಣೆಮುಗಿಲುಗಳ ಕಡೆಗೂ ನೋಡುತ್ತ ಅಂತರ್ಮುಖಿಯಾಗಿ ಕುಳಿತನು. ಆತನ ಮನಸ್ಸಿನಲ್ಲಿ ಅನೇಕ ಆಲೋಚನೆಗಳೂ ಚಿತ್ರಗಳೂ ಸತತವಾಗಿ ಮಿಂಚುತ್ತಿದ್ದುವು. ತನ್ನ ವಿದ್ಯೆ, ತನ್ನ ಧ್ಯೇಯ, ತನಗೆ ಬರಲಿರುವ ಅಡಚಣೆಗಳು, ವಿಧವೆಯಾಗಿದ್ದ ತನ್ನ ತಾಯಿ, ತನ್ನ ಮತ್ತು ತನ್ನ ತಾಯಿಯ ಮೇಲೆ ತನ್ನ ಚಿಕ್ಕಪ್ಪನಿಗಿರುವ ಒಂದು ವಿಧವಾದ ಹೊಟ್ಟೆಕಿಚ್ಚು—ಇತ್ಯಾದಿ ವಿಷಯಗಳು ಮನೋರಾಜ್ಯದಲ್ಲಿ ಪ್ರವಹಿಸುತ್ತಿರಲು ಮರದಮೇಲೆ ಕೋಗಿಲೆಯೊಂದು 'ಕುಹೂ ಕುಹೂ' ಎಂದು ಕೂಗಿತು. ಹೂವಯ್ಯ ಒಂದು ಜಗತ್ತಿನಿಂದ ಮತ್ತೊಂದು ಜಗತ್ತಿಗೆ ಬಿದ್ದವನಂತೆ ಎಚ್ಚತ್ತು ನೋಡಿದನು. ಕೋಗಿಲೆ ಕಣ್ಣಿಗೆ ಬಿತ್ತು. ಹಸುರು ಎಲೆಗಳ ಮಧ್ಯೆ ಕರ್ರಗೆ ಕುಳಿತು ಕೂಗುತ್ತಿತ್ತು. ಆ ಕೂಗು ಹೂವಯ್ಯನಿಗೆ "ನನ್ನಂತಾಗು, ನನ್ನಂತಾಗು" ಎನ್ನುವಂತಿತ್ತು. ಅಷ್ಟರಲ್ಲಿ ದೂರದ ಮನೆಯೊಂದರಲ್ಲಿ ಎರಡು ಬೀದಿನಾಯಿಗಳು ಎಂಜಲೆಲೆಗಾಗಿ ಕಚ್ಚಾಡಿ ಗಲಭೆ ಎಬ್ಬಿಸಿದುವು. ಒಂದು ಮತ್ತೊಂದನ್ನು ಚೆನ್ನಾಗಿ ಮುರಿದು ಓಡಿಸಿತು. ಅದು ಊರೆಲ್ಲ ಎಚ್ಚರುವಂತೆ ಕುಂಯ್ಯೋ ಎಂದು ಕಿರಿಚುತ್ತ ಹೋಯಿತು.

ರಾಮಯ್ಯ ಹಿಂತಿರುಗಿ ನೋಡಿ ಸ್ವಲ್ಪ ಗಟ್ಟಿಯಾದ ಅಧಿಕಾರವಾಣಿಯಿಂದ "ಯಾಕೆ ಇಷ್ಟು ಹೊತ್ತಾಯಿತೋ?" ಎಂದನು.

ಹೂವಯ್ಯನೂ ತಿರುಗಿ ನೋಡಿದನು. ಗಾಡಿಯಾಳು ನಿಂಗ ತನ್ನ ಟ್ರಂಕನ್ನು ತಲೆಯ ಮೇಲೆ ಹೊರಲಾರದೆ ಹೊತ್ತುಕೊಂಡು ಬರುತ್ತಿದ್ದನು. ಅವನ ಮುಖದಲ್ಲಿ ಬೆವರು ಹನಿಪ್ರೋಣಿಸಿತ್ತು. ತಲೆಗೆ ಸುತ್ತಿದ್ದ ಕೆಂಪುವಸ್ತ್ರ ಒಂದು ಕಡೆಗೆ ಸರಿದುಹೋಗಿ ಜೋಲಾಡುತ್ತಿತ್ತು. ಅವನ ಜುಟ್ಟು ಸಿಕ್ಕು ಸಿಕ್ಕಾಗಿ ಕೆದರಿಹೋಗಿತ್ತು. ಅವನು ಹಾಕಿಕೊಂಡಿದ್ದ, ಯಾರೋ ದಾನಮಾಡಿದ್ದ ಕೋಟು ಗುಂಡಿ ಇಲ್ಲದುದರಿಂದ ಬಾಯ್ದೆರೆದುಕೊಂಡು ಅವನ ಡೊಳ್ಳು ಹೊಟ್ಟೆಯನ್ನು ಪ್ರದರ್ಶಿಸುತ್ತಿತ್ತು. ಆ ಡೊಳ್ಳು ಬೊಜ್ಜಿನಿಂದಾದುದಾಗಿರಲಿಲ್ಲ. ಹಲಸಿನ ಕಾಯಿ ದಪ್ಪದ ಜ್ವರಗಡ್ಡೆಯ ಮಹಿಮೆಯಿಂದಾದುದಾಗಿತ್ತು. ಅವನು ಮೊಳಕಾಲಿನವರೆಗೆ ಸುತ್ತಿದ್ದ ಪಂಚೆ ಕೊಳೆಯ ಬೀಡಾಗಿತ್ತು. ಒಂದು ಕಾಲಿಗೆ ಮಾತ್ರ ಬೆಳ್ಳಿಯಿಂದ ಮಾಡಿದ ದೇವರ ಸರಿಗೆಬಳೆ ಹಾಕಿದ್ದನು. ಗಡ್ಡದ ಕೂದಲು ಅರ್ಧ ಅಂಗುಲ ಬೆಳೆದಿತ್ತು. ಹೊಟ್ಟೆಯನ್ನು ಬೆಟ್ಟವೆಂದು ಭಾವಿಸಿದರೆ ಎದೆ ಕಣಿವೆಯಾಗಿತ್ತು. ಅವನನ್ನು ನೋಡಿದರೆ ಎಂತಹ ಕ್ರೂರಿಯೂ ಕೂಡ ಕರಗಿ ಹೋಗುವಂತಿದ್ದನು. ಟ್ರಂಕಿನ ಭಾರದಿಂದ ಅವನ ಕೀಲುಗಳೆಲ್ಲ ಎಲ್ಲಿ ಕಳಚಿ ಬೀಳವುವೋ ಎಂಬಂತೆ ಏದುತ್ತ ನಡೆದುಬರುತ್ತಿದ್ದನು. ರಾಮಯ್ಯನು ಕೇಳಿದ ಪ್ರಶ್ನೆಗೆ ಉತ್ತರ ಕೊಡಲೂ ಅವನಿಂದ ಸಾಧ್ಯವಾಗಲಿಲ್ಲ. ಹೂವಯ್ಯನ

ಸಹಾಯದಿಂದ ಟ್ರಂಕನ್ನು ಗಾಡಿಗಿಟ್ಟಮೇಲೆ ಅವನು ನಿಡುಸುಯ್ಯುತ್ತ ತನ್ನ ತಲೆಯ ಕೆಂಪುವಸ್ತ್ರವನ್ನು ಬಿಚ್ಚಿ ಮುಖದ ಬೆವರನ್ನು ಒರಸಿ, ಅದನ್ನು ಗಾಡಿಯ ಕತ್ತರಿಯ ಮೇಲೆ ಎಸೆದನು. ಅವನನ್ನು ಕಂಡರೆ ಹಳ್ಳಿಯ ದುಃಖ ರೋಗ ದಾರಿದ್ರ್ಯಗಳೆಲ್ಲ ಮೈವೆತ್ತಂತೆ ತೋರುತ್ತಿತ್ತು.

ರಾಮಯ್ಯನು "ಅವನೆಲ್ಲಿ ಹೋದನೋ? ಯಾಕೋ ಇಷ್ಟು ಹೊತ್ತಾಯಿತು?" ಎಂದನು.

"ಎಂಥದು ಹೇಳ್ಲಿ ಹೇಳಿ, ಈ ಬಿಸಿಲಾಗೆ ಕಾಲೇ ಬರಾದಿಲ್ಲ. ಅಲ್ರಯ್ಯಾ, ಈ ಟ್ರಂಕಾಗೆ ಏನಿಟ್ಟೀರಿ? ಕಬ್ಬಿಣಾ ನೆಗ್ದಂಗೆ ಆಗ್ತದೆ!"

"ಪುಸ್ತಕ ಕಣೋ!"

"ಕಾಗ್ದ ಕೂಡ ಇಷ್ಟು ಭಾರಾನ? ಇದನ್ನೆಲ್ಲಾ ಹ್ಯಾಂಗೋದುತ್ತೀರೋ ಏನೋ? ಒಂದು ಗಳಿಗೆ ಹೊರಾಕಾಗಲ್ಲಾ ನನ್ನಿಂದ."

ರಾಮಯ್ಯನಿಗೆ ನಗು ಬಂದು ಹೂವಯ್ಯನ ಕಡೆ ನೋಡಿದನು. ಅವನೂ ನಗುತ್ತಿದ್ದನು.

ಅಷ್ಟರಲ್ಲಿ ನಿಂಗ ಹೊಳೆಯಿಂದ ಬರುವ ಕಿರುದಾರಿಯ ಕಡೆಗೆ ನೋಡುತ್ತ "ಅಕೊಳ್ರಪ್ಪಾ ಬಂದ್ರಲ್ಲಾ!" ಎಂದನು.

ಪುಟ್ಟಣ್ಣನು ಮತ್ತೊಂದು ಟ್ರಂಕನ್ನು ಕೈಯಲ್ಲಿ ಎತ್ತಿಕೊಂಡು ಸಾವಕಾಶವಾಗಿ ಬರುತ್ತಿದ್ದನು. ಎಣ್ಣೆಗಪ್ಪಿನ ಮನುಷ್ಯ. ತಲೆಯಲ್ಲೊಂದು ಕರಿಯ ಹಾಸನದ ಟೋಪಿ. ಅದರೊಳಗೆ ಕ್ರಾಪಾಗಲಿ ಜುಟ್ಟಾಗಲಿ ಯಾವುದೂ ಇದ್ದಂತೆ ತೋರುತ್ತಿರಲಿಲ್ಲ; ಹುಡುಕಿದ್ದರೆ ಬೇಕಾದಷ್ಟು ಎಣ್ಣೆಜಿಡ್ಡು ಸಿಕ್ಕುತ್ತಿತ್ತು! ಗುಂಡಿಗಳಿದ್ದರೂ ಸೆಕೆಗಾಗಿ ತೆರೆದಿದ್ದ ಅಂಗಿ ಒಳಗಿದ್ದ ಕೊಳಕು ಷರ್ಟನ್ನು ಪ್ರದರ್ಶಿಸುತ್ತಿತ್ತು. ಆ ಷರ್ಟು ಹೊಲಿಸುವಾಗ ಜಾತಿಯಲ್ಲಿ ಬಿಳಿಯದಾಗಿದ್ದರೂ ಕ್ರಮೇಣ ಜಾತಿಗೆಟ್ಟು ಬಿಳಿಯದೂ ಅಲ್ಲ ಕಪ್ಪೂ ಅಲ್ಲವಾಗಿತ್ತು. ಅವನು ಸುತ್ತಿದ್ದ ಅಡ್ಡಪಂಚೆಯೇನೋ ಕಾಲಿನ ತುದಿಯವರೆಗೂ ಇತ್ತು. ಆದರೆ ಅದೂ ಬಿಳಿದು ಎನಿಸಿಕೊಳ್ಳಲು ಪ್ರಯತ್ನಪಡುತ್ತಿದ್ದಿತೇ ಹೊರತು ಬಿಳಿಯದಾಗಿರಲಿಲ್ಲ. ಒಟ್ಟಿನಲ್ಲಿ ಅವನನ್ನು ನೋಡಿದರೆ ಉಡುಪಿನಲ್ಲಾಗಲಿ ಮುಖಭಂಗಿ ರೀತಿ ನೀತಿಗಳಲ್ಲಾಗಲಿ ಯಾರೂ ಸೇವಕನೆಂದು ಹೇಳುವಹಾಗಿರಲಿಲ್ಲ. ಮುಖವು ಕಪ್ಪಗೆ ಗಟ್ಟಿಮುಟ್ಟಾಗಿದ್ದು ಆ ದಿನ ತಾನೇ ಕ್ಷೌರಮಾಡಿಕೊಂಡಿತ್ತು. ಎದೆ ಅಗಲವಾಗಿ, ಮೈಕಟ್ಟು ಬಲವಾಗಿ, ಒಂದು ರೀತಿಯಲ್ಲಿ ಪ್ರತಿಭಟನಾ ಮೂರ್ತಿಯಾಗಿ ಕಾಣುತ್ತಿದ್ದನು. ಅವನನ್ನು ನೋಡಿದರೆ ತ್ರಿಕೋಣದ ನೆನಪಾಗುತ್ತಿದ್ದಿತೆ ಹೊರತು ವೃತ್ತದ ನೆನಪಾಗುತ್ತಿರಲಿಲ್ಲ. ಆದರೆ ಸ್ವಭಾವದಲ್ಲಿ ಚಕ್ರದಂತೆ ಉರುಳಿಕೊಂಡು

ಹೋಗುವವನೇ ಹೊರತು ತ್ರಿಕೋಣದಂತೆ ಅಡಿಗಡಿಗೆ ಬೀಳುವಂತವನಾಗಿರಲಿಲ್ಲ. ಅವನ ವಯಸ್ಸು ಸುಮಾರು ಮೂವತ್ತೈದು ಎಂದು ಊಹಿಸಬಹುದಾಗಿತ್ತು.

ಹೂವಯ್ಯನನ್ನಾಗಲಿ ರಾಮಯ್ಯನನ್ನಾಗಲಿ "ಪುಟ್ಟಣ್ಣ ಯಾರು?" ಎಂದು ಕೇಳಿದ್ದರೆ ಹೇಳಲು ಅವರಿಗೆ ಸ್ವಲ್ಪ ಕಷ್ಟವೇ ಆಗುತ್ತಿತ್ತು. ಒಂದು ವೇಳೆ ಹೇಳಿದ್ದರೆ ಬಹುಶ "ನಮ್ಮ ಮನೆಯಲ್ಲಿದ್ದಾನೆ" ಅಥವಾ "ನಮ್ಮ ಜಾತಿ" ಎಂದು ಹೇಳುತ್ತಿದ್ದರೋ ಏನೋ? ಏಕೆಂದರೆ ಅವನು ಬಂಧುವೂ ಆಗಿರಲಿಲ್ಲ; ಸೇವಕನೂ ಆಗಿರಲಿಲ್ಲ. ಹೊರಗಿನವರು ಯಾರಾದರೂ ಕೇಳಿದ್ದರೆ ಬಹುಶ "ಅವನೊಬ್ಬ ಗಟ್ಟಿಗನಾದ ಬೇಟೆಗಾರ" ಎನ್ನಬಹುದಾಗಿತ್ತು. ಅವನಿಗೆ ಕೋವಿ ಕೆಲಸ, ಕಬ್ಬಿಣದ ಕೆಲಸ, ಬಡಗಿ ಕೆಲಸ, ಬೆತ್ತದ ಕೆಲಸ, ಇತ್ಯಾದಿ ಹತ್ತಾರು ಕಸಬುಗಳು ತಿಳಿದಿದ್ದುವು. ಆದರೆ ಯಾವುದನ್ನೂ ಸಂಪಾದನೆಗಾಗಿ ಉಪಯೋಗಿಸಿಕೊಂಡವನೇ ಅಲ್ಲ. ಆತನಿಗೆ ದುಡ್ಡು ಬೇಡವಾಗಿತ್ತು ಎಂದಲ್ಲ; ಅವನೊಂದು ತರಹದ ವಿರಾಮ ಮೂರ್ತಿ. ಕಠಿಣವಾಗಿ ಮಾತಾಡುವವರು ಅವನನ್ನು ಶುದ್ಧ ಸೋಮಾರಿ ಎಂದೂ ಕರೆಯುತ್ತಿದ್ದರು. ಅವನಿಗೆ ಮದುವೆಯಾಗಿರಲಿಲ್ಲ. ಮನೆ ಮಠ ಗದ್ದೆ ಗಿದ್ದೆ ಒಂದೂ ಇರಲಿಲ್ಲ. ಹೂವಯ್ಯನು ಅವನನ್ನು ವಿನೋದಕ್ಕಾಗಿ 'ಕಾಡು ಫಕೀರ' ಎಂದು ಕರೆಯುತ್ತಿದ್ದನು. ಹೂವಯ್ಯ ರಾಮಯ್ಯರಿಗೆ—ಹೆಚ್ಚಾಗಿ ಹೂವಯ್ಯನಿಗೆ ರಜಾ ಕಾಲದಲ್ಲಿ ಮನೆಗೆ ಬಂದಾಗಲೆಲ್ಲ ಪುಟ್ಟಣ್ಣನೆ ಬೇಟೆಯಲ್ಲಿ ಸಹಕಾರಿಯಾಗುತ್ತಿದ್ದನು. ಅವನು ಕಾಣದ ಕಾಡಿರಲಿಲ್ಲ; ಹೊಡೆಯದ ಮೃಗವಿರಲಿಲ್ಲ; ಮಾಡದ ಸಾಹಸವಿರಲಿಲ್ಲ.

ಪುಟ್ಟಣ್ಣನು ಸಮೀಪಸನಾಗುತ್ತಲೆ ಹೂವಯ್ಯನು ನಗುನಗುತ್ತ "ಏನು ಮಾಡುತ್ತ ಕೂತಿದ್ದೆಯೋ ಹೊಳೆಯ ಮಧ್ಯೆ ಇಷ್ಟು ಹೊತ್ತು? ನಾವಿನ್ನು ಮನೆ ಸೇರುವುದು ಯಾವಾಗ? ಈಗಾಗಲೆ ಹನ್ನೆರಡು ಗಂಟೆ ಹೊಡೆದು ಹೋಯ್ತು. ಹೊಟ್ಟೆಗೆ ಬೇರೆ ಬೆಂಕಿ ಬಿದ್ದಂತಾಗಿದೆ" ಎಂದನು.

ಪುಟ್ಟಣ್ಣ ಹಲ್ಲು ಬಿಡುತ್ತ "ಆದಕ್ಕೇನು? ದಾರಿಮೇಲೆ ನೆಂಟರ ಮನೆಗಳಿಗೆ ಬರಗಾಲವೇನು ನಿಮಗೆ?" ಎಂದನು.

ಹೂವಯ್ಯ "ಸರಿ, ಸರಿ; ನಿನಗೇನು? ಕಾಡು ಫಕೀರ! ಎಲ್ಲಂದರಲ್ಲಿ ಕೂಳು ತಿಂದು ಮಲಗಿಬಿಡುತ್ತೀಯ" ಎಂದು, ರಾಮಯ್ಯನ ಕಡೆಗೆ ತಿರುಗಿ "ಹೌದು, ರಾಮು, ದಾರಿಯಲ್ಲಿ ಮುತ್ತಳ್ಳಿ ಸಿಕ್ಕುತ್ತದೆ. ಅಲ್ಲಿ ಊಟ ಕತ್ತರಿಸಿಕೊಂಡೆ ಹೋಗಿಬಿಡೋಣ" ಎಂದನು.

ರಾಮಯ್ಯ "ಯಾರಾದರೂ ಸಿಕ್ಕಿ ಕರೆದರೆ ಹೋಗೋಣ. ಇಲ್ಲದಿದ್ದರೆ ನೆಟ್ಟಗೆ ಮನೆಗೆ ಹೋಗಿಬಿಡೋಣ" ಎಂದು ತನ್ನ ಕೈಲಿದ್ದ ಗಡಿಯಾರವನ್ನು

ನೋಡಿಕೊಂಡು "ಈಗೇನು ಹನ್ನೆರಡು ಗಂಟೆ. ಎರಡು ಗಂಟೆಗೆ ಮನೆಗೆ ಹೋಗುತ್ತೇವೆ... ನಿಂಗಾ, ಗಾಡಿ ಜೋರಾಗಿ ಬಿಡಬೇಕು" ಎಂದನು.

ಎತ್ತುಗಳನ್ನು ನೊಗಕ್ಕೆ ಕಟ್ಟಿ ಆಗಲೇ ಸಿದ್ಧನಾಗಿ ನಿಂತಿದ್ದ ನಿಂಗನು "ಆಗಲಿ ನನ್ನೊಡೆಯ, ರೈಲು ಹೋದ್ಹಾಂಗೆ ಹೋದರೆ ಸೈಯಲ್ಲಾ! ನಿಮಗ್ಯಾಕೆ? ಗಾಡಿ ಹತ್ತಿ; ನಾಗಾಲೋಟ ಓಡಿಸ್ತೀನಿ. ನೋಡಬೈದಂತೆ ಆಮೇಲೆ" ಎಂದು ಎತ್ತಿನ ಭುಜವನ್ನು ಚಪ್ಪರಿಸಿದನು.

"ಮಾರಾಯ, ನಿನ್ನ ರೈಲೂ ಬೇಡ, ಮೋಟಾರೂ ಬೇಡ! ಸದ್ಯ ಗಾಡಿ ಚರಂಡಿಗೆ ಮಗುಚಿಕೊಳ್ಳದಂತೆ ಹೊಡಕೊಂಡು ಹೋಗು. ಏನು ಒಂದು ಅರ್ಧ ಗಂಟೆ ಹೊತ್ತಾಗಿ ಹೋದರೂ ಚಿಂತೆಯಿಲ್ಲ" ಎಂದು ಹೇಳುತ್ತ ಪುಟ್ಟಣ್ಣನು ಗಾಡಿಯ ಹಿಂಭಾಗದಿಂದ ಟ್ರಂಕನ್ನು ಒಳಗಿಟ್ಟನು. ಮೊದಲು ರಾಮಯ್ಯ, ಆಮೇಲೆ ಹೂವಯ್ಯ, ಕಡೆಗೆ ಪುಟ್ಟಣ್ಣ ಗಾಡಿ ಹತ್ತಿದರು. ನಿಂಗ ಲೊಚಗುಟ್ಟುತ್ತ ಗಾಡಿಯ ಕತ್ತರಿಯ ಮೇಲೆ ನೆಗೆದನು. ಎತ್ತುಗಳು ಕೊರಳ ಕಿರು ಗಂಟೆಗಳ ಟಿಂಟಿಣಿಯ ದನಿಯೊಡನೆ ಭರದಿಂದ ಸಾಗಿದುವು. ಗಾಡಿಯ ನೆಳಲು ಕುರುವಳ್ಳಿಯ ಕಿರುಪೇಟೆಯ ಕೆಂಬೂದಿ ಬಣ್ಣದ ಬೀದಿಯಲ್ಲಿ ಗಾಡಿಯ ಅಡಿಯಲ್ಲಿಯೆ ಮಸಿಯ ಮುದ್ದೆಯಾಗಿ ಎತ್ತಿನ ನೆಳಲೊಡನೆ ಸಾಗಿತು.

## ೨

## ರಸ್ತೆಯಲ್ಲಿ ಶನಿ

ಹಿಂದಿನ ದಿನ ಕಾರ್ಯಾರ್ಥವಾಗಿ ತೀರ್ಥಹಳ್ಳಿಗೆ ಬಂದಿದ್ದ ಸೀತೆಮನೆ ಸಿಂಗಪ್ಪಗೌಡರು ಮರುದಿನ ತಮ್ಮ ಮನೆಗೆ ಹೋಗಲೆಂದು ಕಲ್ಲುಸಾರವನ್ನು ದಾಟುತ್ತಿದ್ದಾಗ ಟ್ರಂಕು ಹೊತ್ತುಕೊಂಡು ಹೋಗುತ್ತಿದ್ದ ನಿಂಗ ಪುಟ್ಟಣ್ಣರನ್ನು ಸಂಧಿಸಿದರು. ವಿಚಾರಿಸಲಾಗಿ ಕಾನೂರು ಚಂದ್ರಯ್ಯ ಗೌಡರ ಮಗ ರಾಮಯ್ಯನೂ ಅವರಣ್ಣನ ಮಗ ಹೂವಯ್ಯನೂ ಮೈಸೂರಿನಿಂದ ಬೇಸಗೆ ರಜಾಕ್ಕೆ ಬಂದಿದ್ದಾರೆಂದೂ, ಅವರನ್ನು ಮನೆಗೆ ಕರೆದೊಯ್ಯಲು ಗಾಡಿ ಕಳುಹಿಸಿದ್ದಾರೆಂದೂ ಗೊತ್ತಾಯಿತು. ಸಿಂಗಪ್ಪಗೌಡರಿಗೂ ಚಂದ್ರಯ್ಯಗೌಡರಿಗೂ ಕೆಲವು ತಿಂಗಳ ಹಿಂದೆ ಒಬ್ಬ ಕೂಲಿಯಾಳಿನ ಸಲುವಾಗಿ ಸ್ವಲ್ಪ ಮನಸ್ತಾಪವಾಗಿದ್ದುದರಿಂದ ಸೀತೆಮನೆಗೂ ಕಾನೂರಿಗೂ ಇದ್ದ ನಂಟರ ಬಳಕೆ ತಪ್ಪಿ ಹೋಗಿತ್ತು. ಹೂವಯ್ಯನ ತಾಯಿ ತಮ್ಮ ಹೆಂಡತಿಯ ಅಕ್ಕನಾದುದರಿಂದ ಅವನ ಯೋಗಕ್ಷೇಮವನ್ನೇನೊ

ವಿಚಾರಿಸಿದರು. ಅವನನ್ನು ನೋಡಲು ಅವರ ಮನಸ್ಸು ತವಕಪಟ್ಟರೂ ಅದನ್ನು ಬಿಗಿಹಿಡಿದು, ಹೊಳೆಯಿಂದ ನೇರವಾಗಿ ಕುರುವಳ್ಳಿಯ ರಸ್ತೆಗೆ ಸೇರುವ ಕಾಲು ಹಾದಿಯಲ್ಲಿ ಮುಂದೆ ಹೋದರು. ಸೀತೆಮನೆಗೆ ಹೋಗಲು ಕಾನೂರಿನ ಬಳಿಯಲ್ಲಿಯೆ ಹಾದುಹೋಗಬೇಕಾಗಿತ್ತು. ಆದ್ದರಿಂದ ಗಾಡಿಯ ಮೇಲೆ ಬನ್ನಿ ಎಂದು ಪುಟ್ಟಣ್ಣ ಕರೆದಿದ್ದರೂ ಅವರು ಆತನಿಗೆ ಕುಂಟು ಕಾರಣ ಹೇಳಿ ಮುಂದೆ ಸಾಗಿದ್ದರು. ಅವರೊಡನೆ ಮಾತಾಡುತ್ತಿದ್ದುದರಿಂದಲೆ ಪುಟ್ಟಣ್ಣ ಗಾಡಿಯ ಬಳಿಗೆ ಬರಲು ಹೊತ್ತಾದುದು. ಹೂವಯ್ಯ ರಾಮಯ್ಯರು ಸಿಂಗಪ್ಪಗೌಡರನ್ನು ಕಲ್ಲುಸಾರ ದಾಟಿ ಬರುವಾಗ ದೂರದಿಂದಲೆ ಕಂಡಿದ್ದರೂ ಯಾರೋ ಏನೋ ಎಂದು ಸುಮ್ಮನಾಗಿದ್ದರು. ಸಿಂಗಪ್ಪಗೌಡರು ಎಂದು ಗೊತ್ತಾಗಿದ್ದರೆ ಬಹುಶ ಇಬ್ಬರೂ ಅವರಿಗೆ ಸ್ವಾಗತಬಯಸಿ ಗಾಡಿಯಲ್ಲಿ ಕೂತುಕೊಳ್ಳುವಂತೆ ಮಾಡುತ್ತಿದ್ದರು. ಏಕೆಂದರೆ, ಮೈಸೂರಿನಲ್ಲಿದ್ದ ಅವರಿಗೆ ಚಂದ್ರಯ್ಯಗೌಡರಿಗೂ ಸಿಂಗಪ್ಪ ಗೌಡರಿಗೂ ಹೊಸದಾಗಿ ಬಂದೊದಗಿದ್ದ ವೈಮನಸ್ಸಿನ ವಿಚಾರ ತಿಳಿದಿರಲಿಲ್ಲ. ಅದರಲ್ಲಿಯೂ ಸಿಂಗಪ್ಪಗೌಡರು ಭಾರತ ರಾಮಾಯಣ ಮೊದಲಾದುವುಗಳನ್ನು ಓದುತ್ತಿದ್ದುದರಿಂದಲೂ, ಬಹಳ ಸರಸ ಪ್ರಕೃತಿಯವರಾಗಿದ್ದುದರಿಂದಲೂ, ಬಾಲ್ಯದಿಂದಲೂ ರಾಮಯ್ಯ ಹೂವಯ್ಯರಿಗೆ ಅವರನ್ನು ಕಂಡರೆ ಅಕ್ಕರೆ. ಆದ್ದರಿಂದಲೆ ಹಿರಿಯರಾಗಿದ್ದರೂ ಅವರನ್ನು ಏಕವಚನದಲ್ಲಿ ಮಾತಾಡಿಸುತ್ತಿದ್ದರು.

ಸಿಂಗಪ್ಪಗೌಡರು ಕೊಪ್ಪಕ್ಕೆ ಹೋಗುವ ರಸ್ತೆಯಲ್ಲಿ ಎರಡು ಫರ್ಲಾಂಗು ನಡೆದಿದ್ದರು. ಬಿಸಿಲ ಬೇಗೆಗೆ ಅವರು ಸೂಡಿದ್ದ ಕೊಡೆಯೂ ಕಾದು ಅವರಿಗೆ ಬಹಳ ಆಯಾಸವಾಯಿತು. ಬೆಳಗ್ಗೆ ಹೋಟಲಿನಲ್ಲಿ ತಿಂದಿದ್ದ ತಿಂಡಿಯೆಲ್ಲ ಕರಗಿ ಹೋಗಿ ಹಸಿವೂ ಹೆಚ್ಚಾಯಿತು. ರಸ್ತೆಯ ನುಣ್ಣನೆ ಕೆಂದೂಳಂತೂ ಸುಡುವಂತೆ ಕಾದು ಅವರ ಮುಂಗಾಲಿನವರೆಗೂ ಹಾರುತ್ತಿತ್ತು. ಅದಕ್ಕಾಗಿ ಅವರು ಉಟ್ಟಿದ್ದ ಕಚ್ಚೆ ಪಂಚೆಯನ್ನು ಮೊಳಕಾಲಿನ ಮೇಲಕ್ಕೆ ಎತ್ತಿ ಕಟ್ಟಿದ್ದರು. ಕೂದಲು ತುಂಬಿದ್ದ ಎದೆ ಕಾಣುವವರೆಗೂ ಕೋಟು ಷರ್ಟುಗಳ ಗುಂಡಿಗಳನ್ನು ಬಿಚ್ಚಿ ತೆರೆದಿದ್ದರು. ಒಂದು ಸಾರಿ ಪುಟ್ಟಣ್ಣ ಕರೆದಾಗ ಹೋಗಿದ್ದರೆ ಗಾಡಿಯಲ್ಲಿಯೆ ಕೂತುಕೊಂಡು ಹೋಗಬಹುದಾಗಿತ್ತು ಎಂದು ಎಣಿಸಿದರು. ಒಡನೆಯೆ ಅದನ್ನು ನಾಚಿಕೆಗೇಡೆಂದು ಮನಸ್ಸಿನಿಂದ ಅಟ್ಟಿಬಿಟ್ಟರು. ಅಷ್ಟರಲ್ಲಿ ಹಿಂದೆ ದೂರದಲ್ಲಿ ಗಾಡಿಯ ಮತ್ತು ಎತ್ತಿನ ಗಂಟೆಗಳ ಸದ್ದು ಕೇಳಿಸಿತು. ಹಿಂತಿರುಗಿ ನೋಡಿ, ಕಾನೂರಿನ ಗಾಡಿಯೆಂದರಿತು, ಗಾಡಿಯಲ್ಲಿರುವವರಿಗೆ ತಮ್ಮ ಆಯಾಸ ಪ್ರದರ್ಶನ ಮಾಡುವುದು ಗೌರವಕ್ಕೆ ಕಡಿಮೆ ಎಂದು ಭಾವಿಸಿ, ಬೇಗಬೇಗನೆ ನಡೆಯತೊಡಗಿದರು.

ಗಾಡಿಯಲ್ಲಿ ಮುಂದೆ ಕುಳಿತಿದ್ದ ರಾಮಯ್ಯನು ಸಿಂಗಪ್ಪಗೌಡರನ್ನು ನೋಡಿದನು. ಪುಟ್ಟಣ್ಣನೊಡನೆ ಬೇಟೆಯ ವಿಚಾರವಾಗಿಯೂ ಮನೆಯ ನಾಯಿಗಳ ವಿಚಾರವಾಗಿಯೂ ಕುತೂಹಲ ಉತ್ಸಾಹಗಳಿಂದ ಮಾತಾಡುತ್ತಿದ್ದ ಹೂವಯ್ಯನು ಅವರನ್ನು ಕಾಣಲಿಲ್ಲ.

"ಅದು ಯಾರೋ, ಅಲ್ಲಿ ಹೋಗುವವರು? ನಡಿಗೆ ನೋಡಿದರೆ ಸಿಂಗಪ್ಪ ಕಕ್ಕಯ್ಯನಂತೆ ಕಾಣುತ್ತದೆ" ಎಂದನು ರಾಮಯ್ಯ.

ಹೂವಯ್ಯನು ತಟಕ್ಕನೆ ನಿಮಿರಿ, ತಿರುಗಿ ನೋಡಿ, ಸಂತೋಷದಿಂದ "ಮತ್ತೆ ಯಾರು? ಅವನೇ ಇರಬೇಕು!" ಎಂದನು.

"ಅವರೇ ಹೌದು. ನಮ್ಮ ಜೊತೇಲಿ ಹೊಳೆ ದಾಟಿದರು. ಗಾಡಿ ಇದೆ ಬನ್ನಿ ಅಂದರೆ ಬರಲಿಲ್ಲ" ಎಂದ ಪುಟ್ಟಣ್ಣನು ಅವರು ಬರದಿದ್ದುದಕ್ಕೆ ಕಾರಣವನ್ನು ಹೇಳಲು ತೊಡಗುತ್ತಿದ್ದನು. ಅಷ್ಟರಲ್ಲಿ ರಾಮಯ್ಯನು ಕೈಚಪ್ಪಾಳೆ ಹೊಡೆದು "ಓ ಸಿಂಗಪ್ಪ ಕಕ್ಕಯ್ಯಾ, ನಿಲ್ಲೋ, ನಿಲ್ಲೋ" ಎಂದು ಗಟ್ಟಿಯಾಗಿ ಕೂಗಿದನು. ಕೂಗು ಕೇಳಿಸಿದರೂ ಸಿಂಗಪ್ಪಗೌಡರು ನಿಲ್ಲದೆ ಹತ್ತು ಹೆಜ್ಜೆ ಮುಂದೆ ಸರಿದರು. ಒಡನೆಯೇ ಹೂವಯ್ಯ ರಾಮಯ್ಯ ಇಬ್ಬರೂ ಕೂಗಿ ಕರೆಯ ತೊಡಗಿದರು. ಸಿಂಗಪ್ಪಗೌಡರು ತನಗೂ ಚಂದ್ರಯ್ಯಗೌಡರಿಗೂ ಮನಸ್ತಾಪವಾದರೆ ಹುಡುಗರು ನನಗೇನು ಮಾಡಿದ್ದಾರೆ ಎಂದು ಉದಾರಾಲೋಚನೆ ಮಾಡಿ ನಿಂತರು. ಆ ಔದಾರ್ಯಕ್ಕೆ ಸೂರ್ಯದೇವನೂ ಬಹುಮಟ್ಟಿಗೆ ಕಾರಣನಾಗಿದ್ದಿರಬಹುದು.

ವೇಗವಾಗಿ ದೌಡಾಯಿಸುತ್ತಿದ್ದ ಗಾಡಿ ಅವರ ಬಳಿ ಬಂದು ನಿಂತಿತು. ಎಂಟು ಖುರಗಳಿಂದಲೂ ಎರಡು ಚಕ್ರಗಳಿಂದಲೂ ಕೆದರಿ ಮೇಲೆದ್ದ ಕೆಮ್ಮಣ್ಣು ಧೂಳಿ ಮುಗಿಲು ಮುಗಿಲಾಗಿ ಗಾಡಿಯ ಒಳಗೂ ಹೊರಗೂ ತುಂಬಿಹೋಯಿತು. ನಿಂಗನು ಓಡುತ್ತಿದ್ದ ಎತ್ತುಗಳ ಮೂಗುದಾರದ ನೇಣನ್ನು ಬಲವಾಗಿ ಜಗ್ಗಿ ಎಳೆದು ನಿಲ್ಲಿಸಿದ್ದರಿಂದ ಅವು ಬುಸ್ಸೆಂದು ಏದುತ್ತ ನಿಂತುವು. ಮೂಗಿನಲ್ಲಿ ಬಲವಾಗಿ ಉಸಿರಾಡುತ್ತಿದ್ದುದರಿಂದ ಅಳ್ಳೆಗಳು ಹಿಂದಕ್ಕೂ ಮುಂದಕ್ಕೂ ತಿದಿಯೊತ್ತಿದಂತೆ ಆಡುತ್ತಿದ್ದುವು. ಎತ್ತಿನ ಗಂಟೆಯ ಸದ್ದು ನಿಲ್ಲಲು ಅರುಗಾಗಿದ್ದ ಸಿಂಗಪ್ಪಗೌಡರು ಗಾಡಿಯ ಮುಂದೆ ಬಂದರು. ಅವರ ಕೊಡೆಯನ್ನೂ ಉಡುಪನ್ನೂ ನೋಡಿ ಎತ್ತುಗಳು ಬೆಚ್ಚಿದುದರಿಂದ ಪುನಃ ಗಾಡಿಯ ಹಿಂದುಗಡೆಗೆ ಹೋದರು.

"ಏನು ಮಾರಾಯ, ಎಷ್ಟು ಕರೆದರೂ ಕೇಳಿಸುವುದಿಲ್ಲವೇ? ಈ ಬಿಸಿಲಿನಲ್ಲೇನು ರಣಪಿಶಾಚಿ ಹೋದಹಾಗೆ ಒಬ್ಬನೆ ಹೋಗುತ್ತಿದ್ದೀಯ!"

"ಯಾರು? ಹೂವಯ್ಯನೇ! ನಮಸ್ಕಾರ!" ಎಂದರು ಸಿಂಗಪ್ಪಗೌಡರು. ಅವರ ಒರಚುಗಣ್ಣು ಹೂವಯ್ಯನನ್ನು ನೋಡುತ್ತಿದ್ದರೂ ರಾಮಯ್ಯನನ್ನು ನೋಡುತ್ತಿದ್ದ ಹಾಗಿತ್ತು.

"ನಮಸ್ಕಾರ ಆಮೇಲೆ! ಮೊದಲು ಗಾಡಿ ಹತ್ತು!" ಎಂದನು ರಾಮಯ್ಯ, ಸಿಂಗಪ್ಪಗೌಡರು ತನ್ನ ಕಡೆ ನೋಡುತ್ತಿದ್ದಾರೆಂದು ಭಾವಿಸಿ.

"ನೀವೇ ಗಾಡಿ ತುಂಬ ಇದ್ದೀರಿ. ಪರ್ವಾಯಿಲ್ಲ. ನಾನು ನಡಕೊಂಡೇ ಬರ್ತೀನಿ" ಎಂದರು ನಗುನಗುತ್ತ ಸಿಂಗಪ್ಪಗೌಡರು.

ರಾಮಯ್ಯನು "ನಿನಗೇನು ಹುಚ್ಚೋ? ಮೊದಲು ಗಾಡಿ ಹತ್ತು, ಹೊತ್ತಾಯ್ತು. ಹೊಟ್ಟೆಗೆ ಬೆಂಕಿ ಬೇರೆ ಬಿದ್ದಿದೆ!" ಎಂದನು.

ಸಿಂಗಪ್ಪಗೌಡರು "ಆಗಲಿ ಮಾರಾಯ" ಎಂದು ಕೊಡೆಯನ್ನು ಮಡಿಸಿದರು. ಪುಟ್ಟಣ್ಣ ಅದನ್ನು ಕೈಗೆ ತೆಗೆದುಕೊಳ್ಳಲು ಮೆಟ್ಟುಗಳನ್ನು ಕಳಚಿ ಗಾಡಿಯ ಹುಲ್ಲಿನಲ್ಲಿ ಹುದುಗಿಸಿಟ್ಟು ಗಾಡಿ ಹತ್ತಿದರು. ಗಾಡಿ ಹೊರಟಿತು.

ಹೂವಯ್ಯನು ಧೂಳೀಮಯವಾಗಿದ್ದ ಸಿಂಗಪ್ಪಗೌಡರ ಕಾಲುಗಳನ್ನು ನೋಡಿ "ಕಕ್ಕಯ್ಯ, ಜಮಖಾನವೆಲ್ಲ ಕೊಳೆಯಾಗುತ್ತದೆ. ಅದನ್ನು ಮಡಿಸಿ ಹುಲ್ಲಿಗೆ ಕಾಲು ತಿಕ್ಕಿದರೆ ವಾಸಿ" ಎಂದನು. ಸಿಂಗಪ್ಪಗೌಡರು ಹಾಗೆಯೆ ಮಾಡಿ ನೆಮ್ಮದಿಯಾಗಿ ಕುಳಿತುಕೊಂಡರು.

ರಾಮಯ್ಯನು "ಏನು ಮಾರಾಯ; ಎಷ್ಟು ಕೂಗಿದರೂ ಕೇಳಿಸಲೇ ಇಲ್ಲವೇ?" ಎಂದನು.

"ಹೌದು! ನಿಮ್ಮ ಎತ್ತುಗಳಿಗೆ ಇನ್ನೂ ಎರಡು ಗಂಟೆ ಸರ ಹೆಚ್ಚಾಗಿ ಕಟ್ಟಿ. ಆಗ ಚೆನ್ನಾಗಿ ಕೇಳಿಸ್ತದೆ. ಆ ಗಂಟೆ ಗಲಾಟೆಯಲ್ಲಿ ಕದನಿ ಹೊಡೆದರೂ ಸಹ ಕೇಳಿಸುವುದಿಲ್ಲ. ಕೂಗಿದರೆ ಹ್ಯಾಗೆ ಕೇಳಿಸೀತು?" ಎಂದ ಸಿಂಗಪ್ಪಗೌಡರು ತಮಗೂ ಚಂದ್ರಯ್ಯಗೌಡರಿಗೂ ಆದ ವ್ಯವಹಾರ ಹುಡುಗರಿಗೆ ಗೊತ್ತಿಲ್ಲ ಎಂದು ಚೆನ್ನಾಗಿ ಮನಗಂಡರು.

ಹೂವಯ್ಯನು "ಆಗ ಹೊಳೆ ದಾಟುವಾಗ ಪುಟ್ಟಣ್ಣ ಕರೆದರೆ ಬರಲಿಲ್ಲವಂತೆ ನೀನು! ಅದೇಕೆ ಹಾಗೆ ಮಾಡಿದೆ? ನಾವು ಸುಮ್ಮನೆ ಗಾಡಿ ಹೊಡೆದುಕೊಂಡು ಹೋಗಿ, ನಿನ್ನನ್ನು ಬಿಸಿಲಿನಲ್ಲಿ ನಡೆಸಬೇಕಾಗಿತ್ತು" ಎಂದು ನಕ್ಕನು. ವ್ಯವಹಾರದ ವಿಚಾರ ಗೊತ್ತಿದ್ದರೆ ಹೂವಯ್ಯ ಖಂಡಿತವಾಗಿಯೂ ಹಾಗೆ ಮಾತಾಡುತ್ತಿರಲಿಲ್ಲ.

ಅದನ್ನರಿತು ಸಿಂಗಪ್ಪಗೌಡರು "ನೀವು ಬರುವುದು ಹೊತ್ತಾಗುತ್ತದೆ ಎಂದು ನಾನು ಮುಂದೆ ಹೊರಟುಬಿಟ್ಟೆ" ಎಂದು ಪುಟ್ಟಣ್ಣನ ಕಡೆ ನೋಡಿದರು. ಪುಟ್ಟಣ್ಣನು ಮುಗುಳು ನಗುತ್ತಿದ್ದನು.

ನಿಂಗನು ತನ್ನ ಕರ್ತವ್ಯದಲ್ಲಿ ತೊಡಗಿ ಯಾವ ಮಾತನ್ನೂ ಆಡದೆ ಇದ್ದನು. ಹೂವಯ್ಯ, ರಾಮಯ್ಯರು ಸಿಂಗಪ್ಪಗೌಡರು ಕೇಳಿದ ಪ್ರಶ್ನೆಗಳಿಗೆ ಉತ್ತರವಾಗಿ ಮೈಸೂರು, ಬೆಂಗಳೂರು, ಬೇಸಗೆ ರಜಾ, ಇತ್ಯಾದಿ ನಾನಾ ವಿಚಾರಗಳನ್ನು ಕುರಿತು ಪ್ರಸ್ತಾಪಿಸತೊಡಗಿದರು. ಪುಟ್ಟಣ್ಣನು ಅವರ ಮಾತು ಕತೆಗಳನ್ನು ಆಲಿಸುತ್ತ, ನಡುನಡುವೆ ಏನಾದರೊಂದು ಪ್ರಶ್ನೆ ಕೇಳುತ್ತ ಎಲೆಯಡಕೆ ಹಾಕಲು ಪ್ರಾರಂಭಿಸಿದ್ದನು. ಗಾಡಿಯ ಹಿಂಭಾಗದಲ್ಲಿ ಕುಳಿತಿದ್ದುದರಿಂದ ಹೊಗೆಸೊಪ್ಪು ಹಾಕಿದ ತಾಂಬೂಲವನ್ನು ಪದೇ ಪದೇ ಉಗುಳಲು ಅವನಿಗೆ ಬಹಳ ಅನುಕೂಲ ವಾಗಿತ್ತು. ಅವನು ಎರಡು ಮೂರು ನಿಮಿಷಗಳಿಗೊಂದಾವರ್ತಿ ಪಿಚಕ್ಕನೆ ಉಗುಳಲು ಆ ರಕ್ತಾರುಣ ಲಾಲಾಜಲಪಿಂಡವು ಹನಿಹನಿಯಾಗದೆ ಧಾರೆಧಾರೆ ಯಾಗದೆ ಮುದ್ದೆ ಮುದ್ದೆಯಾಗಿ ನೆಗೆದು ರಸ್ತೆಯ ಕೆಂಧೂಳಿಯನ್ನು ತಾಗಿದ ಕೂಡಲೆ ಇಂಗಿಹೋಗಿ ಸಣ್ಣ ಸಣ್ಣ ಕೆಂಪು ಮಣ್ಣಿನ ಉಂಡೆಗಳನ್ನು ರಚಿಸುತ್ತಿತ್ತು. ರಸ್ತೆಯಲ್ಲಿ ಚಕ್ರಗಳ ಸಮದೂರವಾದ ಸ್ಫುಟವಾದ ಅವಿಚ್ಛಿನ್ನ ರೇಖಾಮುದ್ರೆ ಗಾಡಿ ಚಲಿಸಿದಂತೆಲ್ಲ ಅದನ್ನು ಸರ್ಪಗಮನದಿಂದ ಹಿಂಬಾಲಿಸುವಂತಿತ್ತು.

ಬೇಸಗೆಯ ಮಧ್ಯಾಹ್ನದ ಸೂರ್ಯನ ತಪ್ತ ತಾಮ್ರ ಬಿಂಬವು ಕಠೋರ ನಿಷ್ಕಾರುಣ್ಯದಿಂದ ಕರೆಯುತ್ತಿದ್ದ ಪ್ರಖರ ಕಿರಣವರ್ಷದಲ್ಲಿ ದಟ್ಟವಾಗಿ ಕಾಡು ಬೆಳೆದು ತೆರೆತೆರೆಯಾಗಿ ಹಬ್ಬಿದ್ದ ಮಲೆನಾಡಿನ ಬೆಟ್ಟಗುಡ್ಡಗಳು ಆಯಾಸದಿಂದ ಮೂರ್ಛೆಗೊಂಡಂತೆ ಶ್ಯಾಮಲ ನಿದ್ರಾಸಕ್ತವಾಗಿದ್ದುವು. ಧೂಳುಗೆಂಪಿನ ರಸ್ತೆ ಸಹ್ಯಾದ್ರಿಯ ಅರಣ್ಯದೇವಿಯ ಮಹಾಮಸ್ತಕದ ಸುದೀರ್ಘವಾದ ಬೈತಲೆಯ ಸರಳ ವಕ್ರ ನಿಮ್ನೋನ್ನತ ರೇಖಾವಿನ್ಯಾಸದಂತೆ ಮೆರೆದಿತ್ತು. ರಸ್ತೆಯಲ್ಲಿ ಅಲ್ಲಲ್ಲಿ ತಂತಿಕಂಬಗಳಿದ್ದು ಬಾನಿಗೆದುರಾಗಿ ತಂತಿಯ ಕರಿಯ ಗೆರೆ ಕಂಬದಿಂದ ಕಂಬಕ್ಕೆ ಪ್ರವಹಿಸಿ ಓಡುವಂತಿತ್ತು. ಹೆದ್ದಾರಿಯ ಇಕ್ಕೆಲಗಳಲ್ಲಿಯೂ ಪ್ರಾರಂಭವಾಗಿ ಸ್ವಚ್ಛಂದ ಕಾನನಶ್ರೇಣಿ ದೃಷ್ಟಿದೂರದವರೆಗೂ ಪ್ರಸರಿಸಿತ್ತು. ಯಾವುದೊಂದು ಪ್ರಾಣಿಯ ಸಂಚಾರವೂ ಇರಲಿಲ್ಲ. ಆಗಾಗ ನೇರಿಲೆಯ ಪೊದರು ಮರಗಳಲ್ಲಿ ಪಿಕಳಾರ ಹಕ್ಕಿಗಳು ಮಾತ್ರ ಚಿಮ್ಮುತ್ತಿದ್ದುದು ಕಾಣಬರುತ್ತಿತ್ತು. ಆ ಮಟ ಮಟ ಮಧ್ಯಾಹ್ನದಲ್ಲಿ ಅವುಗಳ ಆ ಕಾರ್ಯವೂ ಧೂರ್ತತನವಲ್ಲದೆ ಲೀಲೆಯಾಗಿರ ಲಿಲ್ಲ. ಅವು ಕೂಗುತ್ತಿದ್ದುವೋ ಏನೋ? ಆದರೆ ಕೇಳಿಸುತ್ತಿರಲಿಲ್ಲ. ಎರಡು ಎತ್ತುಗಳ ಕುತ್ತಿಗೆಯಲ್ಲಿದ್ದ ಸುಮಾರು ನಾಲ್ವತ್ತು ಐವತ್ತು ಕಿರುಗಂಟೆಗಳು ಇಂಪಾಗಿ ನಾದಗೈದು ಮಹಾರಣ್ಯಮೌನವನ್ನು ಮಥಿಸುತ್ತಿದ್ದುವು. ಆ ಹಗಲು, ಆ ಬಿಸಿಲು, ಆ ಕಾಡಿನ ಹಸುರು ಶಾಂತಿ, ಆ ವಿಜನತೆ, ಆ ಗಾಡಿಯ ಡೋಲಾಯ ಮಾನತೆ, ಆ ಘಂಟಾನಾದದ ಜೋಗುಳದುಲಿ ಇವುಗಳಲ್ಲಿ ಗಾಡಿಯೊಳಗಿದ್ದ ಹಸಿದು

ಆಯಾಸಗೊಂಡಿದ್ದ ಜನಗಳು ಮಾತುಬಿಟ್ಟು ತೂಕಡಿಸಲಾರಂಭಿಸಿದ್ದರು. ನಿಂಗನು ಕೂಡ ಅರೆನಿದ್ದೆಯಲ್ಲಿದ್ದನು. ಅವನ ಕೈಲಿದ್ದ ಬಾರುಕೋಲು ತನ್ನ ಚಟುವಟಿಕೆಯನ್ನುಳಿದು ಬಾಗಿತ್ತು. ಅವನ ತಲೆ ಹೆಗಲಮೇಲೆ ಮಲಗಲೆಳಸುತ್ತಿತ್ತು. ಗಾಡಿ ತೂಗಿದಂತೆಲ್ಲ ತೂಗುತ್ತಿತ್ತು. ಆ ಮಹಾ ನಿಶ್ಚಲ ಜಗತ್ತಿನಲ್ಲಿ ಗಾಡಿಯೊಂದೇ ಚಲಿಸುವ ಕ್ಷುದ್ರವಸ್ತುವಾಗಿತ್ತು.

ಮನೆಯ ಕಡೆಗೆ ಮುಖ ಮಾಡಿದ ಎತ್ತುಗಳಿಗೆ ಹಾದಿಯನ್ನು ಹೇಳಿಕೊಡಬೇಕಾಗಿರಲಿಲ್ಲ. ಸಾರಥಿ ಇಲ್ಲದಿದ್ದರೂ ಸುರಕ್ಷಿತವಾಗಿ ಮನೆ ಸೇರುತ್ತವೆ. ಆದರೆ ಇಂದು ಒಂದು ಅಚಾತುರ್ಯ ನಡೆದಿತ್ತು. ನಿಂಗನು ಹೊರಡುವ ಗಡಿಬಿಡಿಯಲ್ಲಿ ಎತ್ತುಗಳಿಗೆ ನೀರು ಕುಡಿಸುವುದನ್ನು ಮರೆತುಬಿಟ್ಟಿದ್ದನು. ಗಾಡಿ ಹದಿನಾಲ್ಕನೆ ಮೈಲಿ ಕಲ್ಲನ್ನು ದಾಟಿ ತೀರ್ಥಹಳ್ಳಿಯಿಂದ ಒಂದೂವರೆ ಅಥವಾ ಎರಡು ಮೈಲಿ ಹೋಗಿತ್ತು. ಲಚ್ಚನಿಗೆ ಬಹಳ ಬಾಯಾರಿಕೆಯಾಗಿ ನೀರು ಕಂಡರೆ ಸಾಕು ಎನ್ನುವಷ್ಟಾಗಿತ್ತು. ಅನತಿದೂರದಲ್ಲಿ ಹಾದಿಯ ಪಕ್ಕದಲ್ಲಿ ಒಂದು ಕೆರೆಯಿದ್ದುದು ಅದರ ಕಣ್ಣಿಗೆ ಬಿತ್ತು. ಕೂಡಲೆ ನಡಿಗೆಯನ್ನು ಚುರುಕು ಮಾಡಿತು. ನಂದಿಗೆ ಅಷ್ಟು ಬಾಯಾರಿಕೆಯಾಗಿರದಿದ್ದರೂ ಜೊತೆಯ ಎತ್ತು ಜೋರಾಗಿ ಎಳೆದುದರಿಂದ ಅದೂ ಜೋರಾಗಿಯೆ ಕಾಲು ಹಾಕಿತು. ಗಾಡಿಯಲ್ಲಿ ಯಾರಿಗೂ ಬಾಹ್ಯಪ್ರಜ್ಞೆಯಿರಲಿಲ್ಲ. ಏರಿಯೇ ರಸ್ತೆಯಾಗಿದ್ದುದರಿಂದ ಕೆರೆ ಸ್ವಲ್ಪ ಕಡಿದಾಗಿತ್ತು. ಎತ್ತುಗಳು ಒಂದೇ ಸಮನೆ ನೀರಿನ ಕಡೆಗೆ ಭರದಿಂದ ಸಾಗಿದುವು. ಬಲಗಡೆ ಚಕ್ರವು ಮೊದಲು ಫಕ್ಕನೆ ಕೆಳಗಿಳಿದುದರಿಂದ ಗಾಡಿ ಬಲವಾಗಿ ಜಗ್ಗಿತು. ಕೂಡಲೆ ಎಚ್ಚತ್ತ ಸಿಂಗಪ್ಪಗೌಡರು ಅಪಾಯವೇನೆಂಬುದನ್ನು ಸರಿಯಾಗಿ ಅರಿಯದಿದ್ದರೂ "ನಿಂಗಾ! ನಿಂಗಾ! ನಿಂಗಾ!" ಎಂದು ಕೂಗಿದರು. ಉಳಿದವರೆಲ್ಲ ಎಚ್ಚತ್ತು 'ಹೋ ಹೋ ಹೋ' ಎಂದು ಕೂಗಿಕೊಂಡರು. ನಿಂಗನೂ ಎದ್ದು ಮೂಗುದಾರವನ್ನು ಬಲವಾಗಿ ಜಗ್ಗಿ ಎಳೆದನು. ಆದರೆ ಆಗಲೇ ಕಾಲ ಮಿಂಚಿದ್ದುದರಿಂದ ಗಾಡಿ ಉರುಳಿತು. ಏರಿಯ ಕೆಳಭಾಗದಲ್ಲಿದ್ದ ಒಂದು ಕಾಡುಮಾವಿನಮರಕ್ಕೆ ಕಮಾನು ಢಿಕ್ಕಿ ಹೊಡೆಯಿತು. ನಂದಿಗೆ ಕುತ್ತಿಗೆನೇಣು ಬಿಗಿಯಾಗಿ ಭೋರ್ಗರೆಯಲಾರಂಭಿಸಿತು. ಗಾಡಿಯಲ್ಲಿ ಒಬ್ಬರ ಮೇಲೊಬ್ಬರು ಉರುಳಿಬಿದ್ದರು. ಗಾಡಿ ಮರಕ್ಕೆ ತಾಗಿ ನಿಂತಕೂಡಲೆ ಪುಟ್ಟಣ್ಣ, ಸಿಂಗಪ್ಪಗೌಡರು, ರಾಮಯ್ಯ ಹೊರಗೆ ಹಾರಿದರು. ನಿಂಗನು ಗಾಡಿಯ ಕತ್ತರಿಯಿಂದ ಕೆಳಕ್ಕೆ ನೆಗೆದು, ನಂದಿಯ ಕೊರಳ ಕಣ್ಣಿಯನ್ನು ಬಿಚ್ಚಿ ಬಿಡಿಸಲೆಳಸಿದನು. ಆದರೆ ಸಾಧ್ಯವಾಗಲಿಲ್ಲ. ನಂದಿ ಮೆಳ್ಳೆಗಣ್ಣು ಮಾಡಿಕೊಂಡು ಬುಸುಗುಟ್ಟುತ್ತಿತ್ತು. ನೇಣು ಅದರ ಕುತ್ತಿಗೆಯನ್ನು ಕ್ಷಣಕ್ಷಣಕ್ಕೂ ಬಿಗಿಯು

ತ್ತಿತ್ತು. ನೇಣನ್ನು ಕೊಯ್ದು ಹಾಕಲು ಗಾಡಿಚೀಲದಲ್ಲಿ ಕತ್ತಿ ಹುಡುಕಿದನು. ದುರದೃಷ್ಟದಿಂದ ಅದೂ ಇರಲಿಲ್ಲ. ಎಲ್ಲರೂ ಗಾಬರಿಯಿಂದ ಏನುಮಾಡಲೂ ಸಾಧ್ಯವಾಗಲಿಲ್ಲ. ಕಡೆಗೆ ಪುಟ್ಟಣ್ಣನು ಒಂದು ದಪ್ಪ ಕಗ್ಗಲ್ಲನ್ನು ತೆಗೆದುಕೊಂಡು ಬಂದು ನೊಗಕ್ಕೆ ಬಿಗಿದಿದ್ದ ನೇಣನ್ನು ಜಜ್ಜಿ ಜಜ್ಜಿ ತುಂಡುಮಾಡಿದನು. ನಂದಿ ಕತ್ತನ್ನು ಇಳಿಸಿತು. ಅಷ್ಟರಲ್ಲಿ ಗಾಡಿಯ ಒಳಗಡೆಯಿಂದ ಹೂವಯ್ಯನು "ಕಕ್ಕಯ್ಯ, ಕಕ್ಕಯ್ಯ, ಅಯ್ಯೋ" ಎಂದು ನರಳುತ್ತಿದ್ದುದು ಕೇಳಿಬಂದು ಸಿಂಗಪ್ಪಗೌಡರು ಅಲ್ಲಿಗೆ ನುಗ್ಗಿದರು. ಅವನ ಬೆನ್ನುಮೂಳೆ ಟ್ರಂಕಿಗೆ ಬಡಿದು ಉಳುಕಿ ಬಹಳ ನೋವಾಗಿತ್ತು. ಅವನಿಗೆ ಏಳಲು ಸಾಧ್ಯವಾಗಲಿಲ್ಲ. ಪುಟ್ಟಣ್ಣ ಸಿಂಗಪ್ಪಗೌಡರು ಸೇರಿ ಅವನನ್ನು ಮೆಲ್ಲಗೆ ಕೆಳಗಿಳಿಸಿದರು. ಆದರೆ ಹೂವಯ್ಯನು ನಿಲ್ಲಲಾರದೆ ರಸ್ತೆಯ ಪಕ್ಕದಲ್ಲಿ ನೆಲದಮೇಲೆಯೆ ಮಲಗಿದನು.

ರಾಮಯ್ಯನು ತನ್ನ ತಲೆಗೆ ತಗುಲಿದ್ದ ಗಾಡಿಯ ಗೂಟದ ಪೆಟ್ಟಿನಿಂದ ನೋಯುತ್ತಿದ್ದರೂ ಹೂವಯ್ಯನ ಸ್ಥಿತಿಯನ್ನು ನೋಡಿ ಗಾಬರಿಯಾಗಿ ಅವನ ಬಳಿಗೆ ಬಂದು "ಏನಾಯ್ತು ಅಣ್ಣಯ್ಯ?" ಎಂದನು. ಹೂವಯ್ಯನು ಯಾತನಾ ಸೂಚಕವಾದ ಮುಖಖಿನ್ನತೆಯಿಂದಲೂ ಧ್ವನಿಯಿಂದಲೂ "ಟ್ರಂಕಿನ ಏಣು ಬೆನ್ನುಮೂಳೆಗೆ ಬಡಿದುಬಿಟ್ಟಿತು" ಎಂದನು. ರಾಮಯ್ಯನು ಹನಿಗಣ್ಣಾಗಿ ಅಣ್ಣನು ಹಾಕಿಕೊಂಡಿದ್ದ ಷರ್ಟನ್ನು ಎತ್ತಿ ಪೆಟ್ಟಾದ ಸ್ಥಳವನ್ನು ಅವಲೋಕಿಸಿದನು. ಗಾಯವೇನೂ ಆಗಿರಲಿಲ್ಲ. ಒಂದುಕಡೆ ಹಸುರುಗಟ್ಟಿ ಸುತ್ತಲೂ ಕೆಂಬಣ್ಣವೇರಿತ್ತು. ಅದನ್ನು ಮೆಲ್ಲಗೆ ನೀವಿದನು. ಹೂವಯ್ಯನು ನೋವನ್ನು ಸಹಿಸಲಾರದೆ 'ಅಯ್ಯೋ' ಎಂದು ಕೂಗಿಕೊಂಡನು. ರಾಮಯ್ಯನು ಅಣ್ಣನ ನೋವನ್ನು ಪರಿಹರಿಸಲು ಏನುಬೇಕಾದರೂ ಮಾಡಲು ಸಿದ್ಧನಾಗಿದ್ದನು. ಆದರೆ ಏನು ಮಾಡಲೂ ತೋಚಲಿಲ್ಲ.

ಪುಟ್ಟಣ್ಣ, ನಿಂಗ, ಸಿಂಗಪ್ಪಗೌಡರು ಮೂವರೂ ಗಾಡಿಯನ್ನು ಎತ್ತಿ ನಿಲ್ಲಿಸಿ ಅದನ್ನು ರಸ್ತೆಗೆ ತರುವ ಪ್ರಯತ್ನ ಮಾಡುತ್ತಿದ್ದರು. ಎತ್ತುಗಳೆರಡೂ ಕೆರೆಯ ಮೂಲೆಯ ಕೆಸರಿನಲ್ಲಿ ಮೊಳಕಾಲು ಮುಚ್ಚುವವರೆಗೂ ನಿಂತು ಹಾಯಾಗಿ ನೀರನ್ನು ಸೇದಿ ಕುಡಿಯುತ್ತಿದ್ದುವು. ಲಚ್ಚನ ಮೂಗುದಾರದ ನೇಣು ಹಸುರಾದ ಜೊಂಡುಹುಲ್ಲಿನ ಮೇಲೆ ಜೋಲಾಡುತ್ತಿತ್ತು. ಅದರ ನೆರಳು ಬಲಪಕ್ಕದ ಕಡೆಗೆ ಸರಿದು ಅರ್ಧ ನೀರಿನ ಮೇಲೆಯೂ ಅರ್ಧ ಹುಲ್ಲಿನ ಮೇಲೆಯೂ ಮಲಗಿತ್ತು. ಪ್ರತಿಬಿಂಬ ಮಾತ್ರ ನೀರಿನ ಮಾಸುಕನ್ನಡಿಯಲ್ಲಿ ನೇರವಾಗಿತ್ತು. ನಂದಿ ನೀರು ಕುಡಿದು ಹಿಂತಿರುಗಿತು. ಕೆಲವು ಕಪ್ಪೆಗಳು ಚಿಮ್ಮಿ ನೆಗೆದು ದೂರ ಸರಿದುವು.

ಗಾಡಿಯನ್ನೇನೋ ಎತ್ತಿ ನಿಲ್ಲಿಸಿದ್ದರು. ಆದರೆ ಇಳಿಜಾರು ಕಡಿದಾಗಿದ್ದುದರಿಂದ ಆ ಮೂವರ ಬಲವೂ ಅದನ್ನು ರಸ್ತೆಗೆ ನೂಕಲು ಸಾಲದಾಯಿತು. ಬಹಳ ಪ್ರಯತ್ನ ಮಾಡಿ ಬೆವರು ಸುರಿಸಿದರು. ಬಹುಶ ಬೇರೆ ಸಮಯದಲ್ಲಾಗಿದ್ದರೆ ಮೂವರ ಶಕ್ತಿಯೇ ಸಾಕಾಗುತ್ತಿತ್ತು. ಆದರೆ ಹಸಿದ ಹೊಟ್ಟೆಯಲ್ಲಿ ಯಾರು ತಾನೆ ಏನು ಮಾಡಿಯಾರು? ಅವರ ಪ್ರಯತ್ನ ವಿಫಲವಾಗುತ್ತಿದ್ದುದನ್ನು ಕಂಡು ರಾಮಯ್ಯನೂ ಸಹಾಯಕ್ಕೆ ಹೋದನು. ಆದರೂ ಗಾಡಿ ರಸ್ತೆಗೆ ಏರಿಬರಲಿಲ್ಲ.

ಅಪರಾಹ್ಣದ ಸೂರ್ಯನು ಹೊಳೆಯುತ್ತಲೆ ಇದ್ದನು. ಆಕಾಶದಲ್ಲಿ ಒಂದೆರಡು ತುಂಡು ಮುಗಿಲು ಸೋಮಾರಿಗಳಂತೆ ಸುತ್ತುತ್ತಿದ್ದುವು. ಸಮಸ್ತ ಅರಣ್ಯ ಪ್ರಾಂತವೂ ನಿಶ್ಚಲ ನೀರವವಾಗಿತ್ತು. ಗಾಳಿ ಕೂಡ ಬೀಸುತ್ತಿರಲಿಲ್ಲ. ಪಕ್ಕದಲ್ಲಿದ್ದ ಗದ್ದೆಯ ಕೋಗಿನಲ್ಲಿ ದೊಡ್ಡ ಮಾವಿನ ಮರದಡಿಯಲ್ಲಿ ಕೆಲವು ಕಾಲ್ನಡೆಗಳು ಮೇಯುವಂತೆ ತೋರುತ್ತಿತ್ತು. ಮತ್ತೆ ಕೆಲವು ಮಗ್ಗುಲಾಗಿ ನಿಶ್ಚಿಂತಾಲಸ್ಯದಿಂದ ತೂಕಡಿಸುತ್ತ ಮೆಲುಕು ಹಾಕುತ್ತಿದ್ದುವು.

ಇದ್ದಕ್ಕಿದ್ದಹಾಗೆ ಕೆರೆಯ ಆಚೆದಡದಲ್ಲಿ ದಟ್ಟವಾಗಿದ್ದ ಕಾಡಿನಿಂದ ಯಾರೋ ಕರೆದ ಸದ್ದಾಗಿ ಎಲ್ಲರೂ ಆ ಕಡೆ ನೋಡಿದರು. ಮರಗಳ ನೆಳಲಿನಲ್ಲಿ ಪೊದೆಗಳ ನಡುವೆ ಯಾರೋ ಇಬ್ಬರು ಬರುತ್ತಿದ್ದುದು ಕಣ್ಣಿಗೆ ಬಿತ್ತು.

## ೩

## ಚಿನ್ನಯ್ಯನ ಮೀನು ಶಿಕಾರಿ

ಮುತ್ತಳ್ಳಿ ತೀರ್ಥಹಳ್ಳಿಗೆ ಸುಮಾರು ಮೂರು ಮೂರುವರೆ ಮೈಲಿಯ ದೂರದಲ್ಲಿ ಕೊಪ್ಪಕ್ಕೆ ಹೋಗುವ ಸರಕಾರಿ ರಸ್ತೆಯ ಬಲಭಾಗದಲ್ಲಿತ್ತು. ಅಲ್ಲಿಯ ಸಾಹುಕಾರರೂ ಪಟೇಲರೂ ಆದ ಶ್ಯಾಮಯ್ಯಗೌಡರ ಹೆಂಚಿನ ಮನೆ ಮರಗಳ ಮರೆಯಲ್ಲಿದ್ದರೂ ರಸ್ತೆಗೆ ಸ್ವಲ್ಪಮಟ್ಟಿಗೆ ಕಾಣುವಂತಿತ್ತು. ರಸ್ತೆಯಿಂದ ಅವರ ಮನೆಗೆ ಸುಮಾರು ಎರಡು ಮೂರು ಫರ್ಲಾಂಗುಗಳಷ್ಟು ಗಾಡಿಹಾದಿಯಿತ್ತು. ಅಲ್ಲಿಗೆಲ್ಲ ಅವರದೊಂದೆ ದೊಡ್ಡಮನೆ. ಉಳಿದುವು ಅವರ ಒಕ್ಕಲುಗಳ ಹುಲ್ಲುಮನೆಗಳು ಮತ್ತು ಅವರ ಕೂಲಿಯಾಳುಗಳ ಹುಲ್ಲುಗುಡಿಸಲುಗಳು.

ಶ್ಯಾಮಯ್ಯಗೌಡರ ಮಗ ಚಿನ್ನಯ್ಯನು ತರುಣನು. ಅವನು ತೀರ್ಥಹಳ್ಳಿಯಲ್ಲಿ ಕೆಲವು ಕಾಲ ಓದಿ ಬಿಟ್ಟಿದ್ದನು. ಅವನಿಗೆ ಬೇಟೆ ಎಂದರೆ ಬಹಳ ಪ್ರೀತಿ.

ಹೊಟ್ಟೆಗೆ ಅನ್ನವಿಲ್ಲದಿದ್ದರೂ ಲಕ್ಷಿಸದೆ ಕೋವಿ ಹಿಡಿದು ಕಾಡಿನಲ್ಲಿ ತಿರುಗುವು ದೆಂದರೆ ಅವನಿಗೆ ಪರಮಾಹ್ಲಾದ. ಅವನು ಒಳ್ಳೆಯ ಈಡುಗಾರನೂ ಹೌದು. ಅವನಿಟ್ಟ ಗುರಿ ತಪ್ಪದು ಎಂದು ಹಳ್ಳಿಯವರಿಗೆಲ್ಲ ತಿಳಿದುಹೋಗಿತ್ತು. ಅವ ನದು ಒಳ್ಳೆಯ ಸಂತೋಷದ ಪ್ರಕೃತಿ; ಬಹಳ ಸರಳ ಸ್ವಭಾವದವನು. ಹೂವಯ್ಯ ರಾಮಯ್ಯರಲ್ಲಿ ಅವನಿಗೆ ಬಹಳ ಸ್ನೇಹ. ಬಾಂಧವ್ಯದ ಜೊತೆಗೆ ಸ್ನೇಹವೂ ಬೆರೆತರೆ ಕೇಳಬೇಕೆ?

ಪ್ರಾತಃಕಾಲ ತೋಟದ ಕಡೆಗೆ ಹೋಗಿದ್ದ ಚಿನ್ನಯ್ಯನು ಸರಕಾರಿ ರಸ್ತೆಯ ಮಾರ್ಗವಾಗಿ ತಮ್ಮ ಮನೆಗೆ ಹೋಗುತ್ತಿದ್ದನು. ಅವನು ಪ್ರತಿದಿನವೂ ಪ್ರಾತಃಕಾಲ ಹಾಗೆ ತಿರುಗಾಡುವುದು ವಾಡಿಕೆಯಾಗಿತ್ತು. ಒಳ್ಳೆಯ ಗಾಳಿಯನ್ನು ಸೇವಿಸಬೇಕೆಂದಲ್ಲ ಅವನು ಹಾಗೆ ಸಂಚಾರ ಹೋಗುತ್ತಿದ್ದುದು; ತಂದೆಗೆ ತಿಳಿಯ ದಂತೆ ಸಿಗರೇಟು ಸೇದಲೋಸುಗ! ತೀರ್ಥಹಳ್ಳಿಯ ಶಾಲೆಯಲ್ಲಿ ಅವನು ಕಲಿತ ವಿದ್ಯೆಗಳಲ್ಲಿ ಅದೊಂದು ಶಾಶ್ವತವಾಗಿ ಅವನನ್ನು ಕೈಬಿಡದಿತ್ತು.

ಚಿನ್ನಯ್ಯನು ರಸ್ತೆಯಲ್ಲಿ ವಿರಾಮವಾಗಿ ಸಿಗರೇಟು ಸೇದುತ್ತ ಬರುತ್ತಿದ್ದನು. ನಾಲ್ಕೈದು ನಾಯಿಗಳು ಅವನ ಸುತ್ತಮುತ್ತಲೂ ಪರಿವಾರ ಕಟ್ಟಿಕೊಂಡು ಬರುತ್ತಿದ್ದುವು. ಇದ್ದಕ್ಕಿದ್ದಹಾಗೆ ಗಾಡಿ ಎತ್ತಿನ ಗಂಟೆಯ ಸದ್ದು ಕೇಳಿಸಿತು. ತೀರ್ಥಹಳ್ಳಿಯಿಂದ ಕೊಪ್ಪಕ್ಕೆ ಹೋಗುವ ಗಾಡಿ ಇರಬಹುದೆಂದು ಚಿನ್ನಯ್ಯ ಹಿಂತಿರುಗಿ ನೋಡಿದನು. ಯಾವ ಗಾಡಿಯೂ ಕಾಣಿಸಲಿಲ್ಲ. ಪುನಃ ತಿರುಗಿ ಎದುರಿಗೆ ನೋಡಲು ಹಾದಿಯ ತಿರುಗಣೆಯಲ್ಲಿ ಕಮಾನುಗಾಡಿಯೊಂದು ತನ್ನ ಕಡೆಗೆ ಬರುತ್ತಿದ್ದುದು ಗೋಚರಿಸಿತು. ಕಾನೂರು ಚಂದ್ರಯ್ಯಗೌಡರ ಗಾಡಿ ಎಂಬುದು ಅವನಿಗೆ ಒಡನೆಯೆ ಗೊತ್ತಾಗಿ ಅರ್ಧ ಪೂರೈಸಿದ್ದ ಸಿಗರೇಟನ್ನು ಹಾದಿಯ ಪಕ್ಕದ ಒಂದು ಪೊದರಿಗೆ ಬಿಸಾಡಿದನು. ಅವನು ಹಾಗೆ ಮಾಡಿದು ದರಲ್ಲಿ ಏನೋ ಒಂದು ವಿಧವಾದ ಚೋರಭಾವವಿತ್ತು. ಸಿಗರೇಟನ್ನು ಪೊದೆಗೆ ಎಸೆಯಲು ಎರಡು ಮೂರು ನಾಯಿಗಳು ಅಲ್ಲಿಗೆ ಓಡಿಹೋಗಿ ಹೊಗೆಯಾಡುತ್ತಿದ್ದ ಅದನ್ನು ಮೂಸಿ ನೋಡಿದುವು. ಚಿನ್ನಯ್ಯನು ಗದರಿಸಿ ಕರೆಯಲು ಹಿಂದಕ್ಕೆ ಬಂದುವು.

ಗಾಡಿ ಅವನ ಪಕ್ಕದಲ್ಲಿ ನಿಂತಿತು. ಒಳಗಿನಿಂದ 'ನಮಸ್ಕಾರ' ಎಂದು ಧ್ವನಿಯಾಯಿತು.

"ಯಾರದು? ಪುಟ್ಟಣ್ಣನೇನೋ?" ಎಂದನು ಚಿನ್ನಯ್ಯ. ನಿಂಗ ಬಹಳ ಭಯಭಕ್ತಿಯಿಂದ "ಹೌದು, ಅಯ್ಯ" ಎಂದನು.

ಪುಟ್ಟಣ್ಣನು ಗಾಡಿಯ ಮುಂಭಾಗದಲ್ಲಿ ಹೊರಗೆ ಇಣಿಕಿ ಮುಖ ಹಾಕಿದನು.

"ದೂರ?" ಎಂದು ಕೇಳಿದನು ಚಿನ್ನಯ್ಯ.

"ಇಲ್ಲ ತೀರ್ಥಹಳ್ಳಿಯವರೆಗೆ."

"ಯಾಕೆ? — ಓಹೋ ಹೂವಯ್ಯ ರಾಮಯ್ಯ ಬರ್‍ತಾರೇನು?"

"ಹೌದು, ಕಾಗದ ಬಂದಿದೆ. ಅದಕ್ಕೇ ಗಾಡಿ ಕಳಿಸಿದ್ದಾರೆ."

"ನಾನು ಗಾಡಿಯಲ್ಲಿ ಮಾವ ಇದ್ದಾರೆ ಅಂತ ಮಾಡಿದ್ದೆ" ಎಂದು ಚಿನ್ನಯ್ಯನು ಹೇಳುತ್ತಿದ್ದ ಹಾಗೆಯೆ ಡೈಮಂಡು ರೂಬಿಯನ್ನು ಕಚ್ಚಿ ಮುರಿದು ಗಲಾಟೆ ಎಬ್ಬಿಸಿತು. ಓಡಿಹೋಗಿ ಡೈಮಂಡಿಗೆ ಒಂದು ಪೆಟ್ಟು ಕೊಟ್ಟು, ಓಡಿಸಿ ಬಂದು "ಹಾಗಾದರೆ ಮಧ್ಯಾಹ್ನದ ಊಟಕ್ಕೆ ನಮ್ಮಲ್ಲಿಗೆ ಬಂದುಬಿಡಲಿ" ಎಂದನು.

"ಗೌಡರು ಸೀದಾ ಮನೆಗೇ ಬಂದುಬಿಡಿ ಅಂತಾ ಹೇಳಿದಾರೆ."

"ಹೂವಯ್ಯನಿಗೆ ಹೇಳು, ನಾನು ಹೇಳ್ದೆ ಅಂತ. ಇವತ್ತೊಂದು ದಿನ ಮನೆಗೆ ಹೋಗದಿದ್ದರೆ ಗಂಟು ಮುಳುಗಿ ಹೋಗುವುದಿಲ್ಲ."

ಪುಟ್ಟಣ್ಣ ಹಲ್ಲುಬಿಟ್ಟು ನಗುತ್ತ "ಅದಕ್ಕಲ್ಲ! ಗೌಡರು ಸಿಟ್ಟು ಮಾಡ್ತಾರೋ ಏನೋ? ಎಂದು ನಾನು ಹಾಂಗೆ ಹೇಳಿದ್ದು. ನೀವು ಮತ್ತೇನೂ ತಿಳುಕೊಳ್ಳಬಾರದು" ಎಂದನು.

"ನಾನು ಹೇಳ್ದೆ ಅಂತ ಹೇಳು ಹೂವಯ್ಯನಿಗೆ. ನೀವು ಇಲ್ಲಿಗೆ ಬರಬೇಕಾದರೇನೆ ಹನ್ನೆರಡು ಗಂಟೆ ಹೊಡೆದಿರುತ್ತದೆ. ಊಟ ಮಾಡಿಕೊಂಡು ಹೊತ್ತು ಇಳಿದ ಮೇಲೆ ಹೋದರಾಯಿತು."

"ಆಗಲಿ ಹೇಳ್ತೀನಿ."

ಚಿನ್ನಯ್ಯನು ಮಾತಾಡುತ್ತ ಲಚ್ಚನ ತೊಡೆಯಮೇಲಿದ್ದ ಒಂದು ಸಣ್ಣ ಗಾಯವನ್ನೇ ನೋಡುತ್ತಿದ್ದವನು ಪುಟ್ಟಣ್ಣನೊಡನೆ ಮಾತು ನಿಂತೊಡನೆ "ಇದೇನೋ ನಿಂಗಾ, ಎತ್ತಿನ ತೊಡೆಯಮೇಲೆ ಗಾಯ?" ಎಂದನು.

ನಿಂಗನು "ಯಾವುದೋ ಎತ್ತು ಇಡಿದಿದ್ದು. ಏನು ಮಾಡೋದು? ಈ ಲಚ್ಚೆತ್ತು ಎಲ್ಲ ಎತ್ತಿನ ಕೈಲೂ ಕೋಡಾಟಕ್ಕೆ ಹೋಗ್ತದೆ. . ." ಎಂದು ಕಥೆಯನ್ನು ಮುಂದುವರಿಸುವುದರಲ್ಲಿದ್ದನು. ಚಿನ್ನಯ್ಯನು "ಹಾಗಾದರೆ ಹೊರಡಿ — ಪುಟ್ಟಣ್ಣಾ, ಅವರಿಬ್ಬರಿಗೂ ಹೇಳು ನಾನು ಕಾಯುತ್ತಿರ್ತೇನೆ ಅಂತಾ" ಎಂದನು.

ಪುಟ್ಟಣ್ಣನು "ಆಗಲಿ, ನಮಸ್ಕಾರ" ಎಂದನು. ಗಂಟೆಯ ನಾದದೊಡನೆ ಗಾಡಿ ಹೊರಟಿತು.

ಗಾಡಿ ಕಣ್ಮರೆಯಾದ ಮೇಲೆ ಚಿನ್ನಯ್ಯನು ಪೊದೆಯ ಬಳಿಗೆ ಹೋಗಿ ಹುಡುಕಿದನು. ಅವನು ಪೊದೆಗೆ ಕೈಯಿಟ್ಟ ಕೂಡಲೆ ಹಣ್ಣೋತಿಯೊಂದು ಚಿಮ್ಮಿ ನೆಗೆದು ಓಡಿತು. ನಾಯಿಗಳು ಅದನ್ನು ಬೆನ್ನಟ್ಟಿದುವು. ಆದರೆ ಅದು

ಸಿಕ್ಕದೆ ಮತ್ತೊಂದು ಪೊದೆಯಲ್ಲಿ ಅವಿತುಕೊಂಡು ಪ್ರಾಣರಕ್ಷಣೆ ಮಾಡಿಕೊಂಡಿತು. ಸಿಗರೇಟು ಇನ್ನೂ ಹೊಗೆಯಾಡುತ್ತಲೆ ಇತ್ತು. ಅದನ್ನು ಬಾಯಿಗಿಟ್ಟು ಸೇದಿದ ಕೂಡಲೆ ಸಜೀವವಾಯಿತು. ಚಿನ್ನಯ್ಯನು ತನ್ನ ಕೆಲಸಕ್ಕೆ ತಾನೇ ನಗದಿರಲಿಲ್ಲ.

ಮನೆಯ ಕಡೆಗೆ ಹೋಗುತ್ತಿದ್ದಾಗ ಅವನ ಮನಸ್ಸಿನಲ್ಲಿ ಏನೋ ಒಂದು ಹೊಸ ಯೋಚನೆ ಮೂಡಿ, ಅದನ್ನು ಸವಿದು ಸಂತೋಷಪಟ್ಟನು. ಹೂವಯ್ಯ ರಾಮಯ್ಯರನ್ನು ಆ ರಾತ್ರಿ ಮನೆಯಲ್ಲಿಯೇ ಉಳಿಸಿಕೊಳ್ಳಬೇಕೆಂದು ನಿರ್ಧರಿಸಿ, ರಾತ್ರಿಯ ಔತಣಕ್ಕಾಗಿ ಮೀನಿನ ಶಿಕಾರಿ ಮಾಡಬೇಕೆಂದು ಯೋಚಿಸಿ, ನಂಜನ ಹುಲ್ಲುಮನೆಯ ಬಳಿ ಹೋಗಿ ಅವನನ್ನು ಕೂಗಿದನು. ಕಂಬಳಿ ಹೊದೆದು ಕೊಂಡ ಕರಿಯ ವ್ಯಕ್ತಿಯೊಂದು ಗುಡಿಸಿಲಿನ ಕಗ್ಗವಿಯಿಂದ ಈಚೆಗೆ ಬಂದಿತು.

ಚಿನ್ನಯ್ಯನು "ಬೈಲುಕೆರೆಗೆ ಮೀನು ಹೊಡೆಯೋಕೆ ಹೋಗಬೇಕು. ಎಂಟುವರೆ ಗಂಟೆ ಹೊತ್ತಿಗೆ ಮನೆಗೆ ಬಾ" ಎಂದನು.

ನಂಜನು ಕಂಬಳಿಯ ಒಳಗೆ ತೊಡೆಯನ್ನು ಬರಬರನೆ ಕೆರೆದುಕೊಳ್ಳುತ್ತ ದೀರ್ಘವಾಗಿ "ಅದರಾಗೆಲ್ಲಿ ಮೀನು ಅವೆ? ಸಿಕ್ಕಿದೋರೆಲ್ಲ ಹೊಡೆದು ತೆಗೆದು ಬಿಟ್ಟಿದಾರೆ. ತೂಬಿನ ಕೆರೆಗಾದರೂ ಹೋಗಬೈದಿತ್ತು" ಎಂದನು.

"ಬೇಡ. ಬೈಲುಕೆರೆಗೇ ಹೋಗೋಣ. ರಸ್ತೆ ಪಕ್ಕದಲ್ಲಿದೆ. ಸುಲಭವಾಗಿ ಹೋಗಿ ಬರಬಹುದು. ಅದೂ ಅಲ್ಲದೆ ಕಾನೂರಿನ ಗಾಡಿ ತೀರ್ಥಹಳ್ಳಿಗೆ ಹೋಗಿದೆ. ಹನ್ನೆರಡು ಗಂಟೆ ಹೊತ್ತಿಗೆ ಹಿಂದಕ್ಕೆ ಬರಬಹುದು. ಬರುವಾಗ ಅದರ ಮೇಲೇ ಹತ್ತಿಕೊಂಡು ಬಂದರಾಯಿತು. ಮತ್ಯಾರು ಆ ತೂಬಿನ ಕೆರೆಗೆ ಸಾಯ್ತಾರೆ ಅಷ್ಟು ದೂರ ಆ ಬಿಸಿಲಿನಲ್ಲಿ?"

ನಂಜನು ಸಮ್ಮತಿಸಿದನು. ಚಿನ್ನಯ್ಯನು ಮನೆಯ ಕಡೆಗೆ ತಿರುಗಿ, ಸ್ನೇಹಿತ ರನ್ನು ಸಂಧಿಸುವ ಸಂತೋಷವನ್ನು ಮನಸ್ಸಿನಲ್ಲಿಯೆ ಸವಿಯುತ್ತ ಹೋದನು. ಶುನಕ ಪರಿವಾರವೂ ಆತನನ್ನು ಹಿಂಬಾಲಿಸಿತ್ತು.

ಹುಲ್ಲುಗುಡಿಸಿಲಿನ ಕಿರುಬಾಗಿಲಿನಲ್ಲಿ ಒಳಗರ್ಧ ಹೊರಗರ್ಧ ದೇಹ ಮಾಡಿಕೊಂಡು ಹೊಸ್ತಿಲಮೇಲೆ ಒಂದು ಕಾಲಿಟ್ಟು, ಬಾಗಿಲ ಎರಡು ನಿಲುವು ಗಳನ್ನು ಎರಡು ಕೈಯಿಂದಲೂ ಹಿಡಿದು ಬಿಲ್ಲಿನಂತೆ ಬಾಗಿ ನಿಂತಿದ್ದ ನಂಜನು ಹಾಕಿಕೊಂಡಿದ್ದ ತಾಂಬೂಲದ ಕೆಂಪು ಉಗುಳನ್ನು ಬಾಗಿಲಿನ ಒಂದು ಹೊರಭಾಗದ ಪಕ್ಕಕ್ಕೆ ಬಾಣದಂತೆ ಪಿಚಕ್ಕನೆ ಉಗುಳಿ, ಗಂಟಲು ಸರಿಮಾಡಿಕೊಳ್ಳಲೆಂಬಂತೆ ಕೆಮ್ಮುತ್ತ, ಆಮೆಯ ತಲೆ ಅದರ ದೇಹದಲ್ಲಿ ಹುದುಗುವಂತೆ ಗುಡಿಸಿಲೊಳಗೆ ಹೋದನು. ಹುಲ್ಲು, ತರಗು, ಕಬ್ಬಿನ ಸಿಪ್ಪೆ, ಮಡಕೆ ಚೂರು, ಕಂಬಳಿ ಚಿಂದಿ

ಮೊದಲಾದ ಪದಾರ್ಥ ಮತ್ತು ಪದಾರ್ಥಶೇಷಗಳು ಅಸ್ತವ್ಯಸ್ತವಾಗಿ ಕಿಕ್ಕಿರಿದು ಹರಡಿದ್ದ ಆ ಗುಡಿಸಿಲಿನ ಅಂಗಳದಲ್ಲಿ, ಅಥವಾ ಅಂಗಳ ಎಂಬ ಹೆಸರಿನ ಸ್ಥಾನದಲ್ಲಿ, ನಂಜನ ಎಂಜಲಿಗೂ ಸ್ಥಳ ಸಿಕ್ಕಿ, ಒಂದಷ್ಟು ಜಾಗ ಕೆಂಪಾಯಿತು. ಉಗುಳು ಬಿದ್ದ ಜಾಗದಿಂದ ಕೆಂಪು ನೊಣಗಳು ಗೊಂಯ್ಯೆಂದು ಹಾರಿ ಮತ್ತೆ ಕೂತುವು.

ನಂಜನು ಜಾತಿಯಲ್ಲಿ ಕುಂಬಾರ. ಆದರೆ ಅವನಿಗೆ ತನ್ನ ಜಾತಿಯ ಕಸುಬು ಒಂದು ವಿನಾ ಉಳಿದೆಲ್ಲ ಕಸುಬುಗಳೂ ತಕ್ಕಮಟ್ಟಿಗೆ ಬರುತ್ತಿದ್ದುವು. ಅವನು ಶಾಮಯ್ಯ ಗೌಡರ ಒಕ್ಕಲಾಗಿ ಅವರ ಗದ್ದೆ ಮಾಡಿಕೊಂಡಿದ್ದರೂ ಅವನ ಆಸಕ್ತಿಯೆಲ್ಲ ಬೇರೆಯ ಕಡೆಗಿತ್ತು. ಒಳ್ಳೆಯ ಈಡುಗಾರನಾಗಿದ್ದರೂ ಅನೇಕ ದೊಡ್ಡ ಬೇಟೆಗಳಲ್ಲಿ ಸಾಹಸಕಾರ್ಯಗಳನ್ನು ಸಾಧಿಸಿದ್ದರೂ ಆ ವಿಚಾರವಾಗಿ ಜನರು ಅವನನ್ನು ಹೊಗಳುತ್ತಿದ್ದರೂ ಅವನಿಗೆ ಅದರ ಲಕ್ಷ್ಯ ಇರಲಿಲ್ಲ. ಅವನು ಬೇಟೆಯಾಡುತ್ತಿದ್ದುದು ಮಾಂಸಕ್ಕಾಗಿ. ಅದನ್ನು ಹೊಗಳದೆ ತನ್ನ ಗುರಿ, ಸಾಮರ್ಥ್ಯ, ಧೈರ್ಯ ಇವುಗಳನ್ನು ಹೊಗಳುವುದರ ಅರ್ಥವೇ ಅವನಿಗಾಗುತ್ತಿರಲಿಲ್ಲ. ಅವನಿಗೆ ಪ್ರಾಣವಾಗಿದ್ದುದೆಂದರೆ ಹೆಂಡ, ಕಳ್ಳು. ಅದಕ್ಕಾಗಿ ಅವನು ರಾತ್ರಿ ಹಗಲೆನ್ನದೆ ಮಳೆ ಬಿಸಿಲೆನ್ನದೆ ದೂರ ಸಮೀಪ ಎನ್ನದೆ ಮನೆ ಮನೆಗೂ ಅಲೆಯುತ್ತಿದ್ದನು. ಎಷ್ಟೋ ಸಾರಿ ರಾತ್ರಿಯೆಲ್ಲಾ ಹಾದಿಯಬಳಿ ಕುಡಿದು ಬಿದ್ದಿದ್ದು ಬೆಳಗ್ಗೆ ಮನೆಗೆ ಬಂದಿದ್ದನು. ಒಂದು ಸಾರಿ ಮಳೆಗಾಲದ ಸಂಜೆಯಲ್ಲಿ ಅವನು ಒಂದು ಹಳ್ಳಿಗೆ ಹೋಗಿ ಚೆನ್ನಾಗಿ ಅಕ್ಕಿಬೋಜ ಕುಡಿದು, ಮತ್ತೇರಿ, ಕೆಸರುಗದ್ದೆಯ ಅಂಚಿನಲ್ಲಿ ತೂರಾಡುತ್ತ ಬರುತ್ತಿದ್ದನು. ಹೆಗಲ ಮೇಲೆ ಯಜಮಾನರು ಅವನಿಗಾಗಿ ಇಟ್ಟುಕೊಳ್ಳಲು ಕೊಟ್ಟಿದ್ದ ಒಂದು ಕೇಪಿನ ಬಂದೂಕೂ ಇತ್ತು. ಬಹುಶಃ ನಂಜನ ಮನೋರಾಜ್ಯದಲ್ಲಿ ಅವನೇ ಚಕ್ರೇಶ್ವರನಾಗಿದ್ದಂತೆ ತೋರುತ್ತಿದ್ದಿತೋ ಏನೋ? ಇದ್ದಕ್ಕಿದ್ದಂತೆ ಅವನ ಕಣ್ಣಿಗೆ ವಿಕಾರಾಕೃತಿಯುಳ್ಳ ಭಯಂಕರ ಶತ್ರುವೊಬ್ಬನು ಗೋಚರವಾದನು. ನಂಜನು ತೂರಾಡುತ್ತ ತೊದಲುತ್ತ "ಆ್ಹ! ನ-ನ್ನ ಮುಂ-ದೇ-ನೇ ನಿ-ನ್ನಾ-ಟ" ಎಂದು ಬಂದೂಕನ್ನು ಕೈಲಿ ತೆಗೆದುಕೊಂಡು, ನೆಲದ ಕಡೆಗೆ ಚಾಚಿ ಗದ್ದೆಯಂಚಿನ ಕೆಳಭಾಗಕ್ಕೆ ಗುರಿಯಿಟ್ಟನು. ಡೊಗರಿನಿಂದ ಆಹಾರಾನ್ವೇಷಣೆಗಾಗಿ ಆಗತಾನೆ ಹೊರಗೆ ಬಂದಿದ್ದ ಕಾರೇಡಿಯೊಂದು ತನ್ನ ಬಳಿಗೆ ಕರಿಯಕೋಲು ಬರುತ್ತಿದ್ದುದನ್ನು ಕಂಡು ಬೆದರಿ, ಕೊಂಬುಗಳನ್ನು ಮೇಲಕ್ಕೆ ನಿಮಿರಿಸಿಕೊಂಡು ಡೊಗರಿನ ಕಡೆಗೆ ಓಡತೊಡಗಿತು. ನಂಜನ ಕಣ್ಣಿಗೆ ಶತ್ರುವು ವಿಕಟಾಕಾರವಾದ ತನ್ನ ತೋಳುಗಳನ್ನು ಮೇಲೆತ್ತಿ ಉರವಣಿಸಿ ಬರುತ್ತಿದ್ದಂತೆ ತೋರಿ "ಆ್ಹ ಮತ್ತೆ! ನಾ-ನ್ಯಾ-ರು! ಗೊತ್ತೇ!" ಎಂದವನು ಗುಂಡು ಹಾರಿಸಿಯೆಬಿಟ್ಟನು. ಗುಂಡು ನಳ್ಳಿಗೆ ಸವರಿಕೊಂಡು

ಹೋಗಿ ಗದ್ದೆಯ ನೆಲವನ್ನು ಪ್ರವೇಶಿಸಿ ಕೆಸರನ್ನು ಮುದ್ದೆ ಮುದ್ದೆಯಾಗಿ ಮೇಲಕ್ಕೆ ಹಾರಿಸಿತು. ಬಡಪಾಯಿ ನಳ್ಳಿ ನುಚ್ಚು ನೂರಾಯಿತು! ಇತ್ತ ನಂಜನು ಕುಡಿದ ಮತ್ತಿನಲ್ಲಿ ಮೊದಲೇ ತೂರಾಡುತ್ತಿದ್ದವನು ಕೋವಿಯನ್ನು ಬಲವಾಗಿ ಎದೆಗೊತ್ತಿ ಹಿಡಿದಿರಲಿಲ್ಲವಾಗಿ, ಅದು ಈಡು ಹಾರಿಸಿದೊಡನೆ ಹಿಂದಕ್ಕೆ ಒದ್ದುದರಿಂದ ದುಢುಮ್ಮನೆ ಗದ್ದೆಗೆ ಬಿದ್ದನು. ಬತ್ತದ ಸಸಿಗಳೆಲ್ಲ ಬಾಗಿ ಮುರಿದು, ಅವನ ಮೈ ಮುಖ ಎಲ್ಲವೂ ಕೆಸರಾಯಿತು. ದೂರದಲ್ಲಿ ಗದ್ದೆಯ ಕೆಲಸದಲ್ಲಿದ್ದ ಕೆಲವರು ಓಡಿಬಂದು ನೋಡಲು ಸಾಹಸದ ಆದ್ಯಂತವೆಲ್ಲ ಗೊತ್ತಾಗಿ ಚೆನ್ನಾಗಿ ನಕ್ಕುಬಿಟ್ಟರು. ಕೈಯಲ್ಲಿ ಹಿಡಿಯಬಹುದಾಗಿದ್ದ ಬಡಪ್ರಾಣಿಯಾದ ಏಡಿಗೆ ಗುಂಡು ಹೊಡೆದು ಸಂಹರಿಸಿದ ಕಥೆ ಊರೆಲ್ಲ ಹಬ್ಬಿ ನಂಜನು ನಗೆಗೀಡಾದನು. ಗೌಡರು ಮಾತ್ರ ಕೋವಿಗೆ ಬಾಗುಬಂದಿತೆಂದು ಅವನನ್ನು ಚೆನ್ನಾಗಿ ಅಂದರು.

ನಂಜನು ಬೇಗ ಬೇಗ ಗಂಜಿಯೂಟ ಮಾಡಿಕೊಂಡು ಗೌಡರ ಮನೆಗೆ ಹೋದನು. ಚಿನ್ನಯ್ಯ ಆಗಲೆ ಹೊರಡಲು ಸಿದ್ಧವಾಗಿದ್ದನು. ಒಡೆಯನು ತೋಟಾಕೋವಿಯನ್ನೂ ಆಳು ಕೇಪಿನ ಕೋವಿಯನ್ನೂ ಹೆಗಲಮೇಲಿಟ್ಟು ಕೊಂಡು ಬೈಲುಕೆರೆಗೆ ಮೀನು ಹೊಡೆಯಲು ಹೊರಟರು. ಅರ್ಧಗಂಟೆಯಲ್ಲಿ ಕೆರೆಯನ್ನು ಸೇರಿ, ಸರಕಾರಿ ರಸ್ತೆಗೆ ಎದುರು ದಡದಲ್ಲಿದ್ದ ಎರಡು ಮರಗಳ ಮೇಲೆ ಇಬ್ಬರೂ ಹತ್ತಿ ಬಂದೂಕು ಹಿಡಿದು ಕುಳಿತರು.

ಗಂಟೆ ಒಂಬತ್ತಾಗಿದ್ದರೂ ಬೇಸಗೆಯ ಬಿಸಿಲು ಬಿರುಸಾಗಿದ್ದರೂ ಆ ಕಾಡಿನ ಹಸುರಿನಲ್ಲಿ ಎಲ್ಲವೂ ತಂಪಾಗಿತ್ತು. ಮರಗಳಿಂದ ತೂರಿ ಬರುತ್ತಿದ್ದ ಬಿಸಿಲಿನ ಕೋಲುಗಳು ನಿಸ್ತರಂಗವಾಗಿ ಕನ್ನಡಿಯಂತೆ ನೀಲಾಕಾಶವನ್ನೂ ಬೆಳ್ಮುಗಿಲು ಗಳನ್ನೂ ಪ್ರತಿಬಿಂಬಿಸುತ್ತಿದ್ದ ಕೆರೆಯ ಸಲಿಲವಕ್ಷದಲ್ಲಿ ನಲಿದಾಡುತ್ತಿದ್ದುವು. ಕೆರೆಯ ತುಂಬಾ ಪಾಚಿ ಬೆಳೆದಿತ್ತು. ಆದರೆ ಆಳವಾಗಿದ್ದ ಕೆಲವು ಭಾಗಗಳಲ್ಲಿ ಪಾಚಿ ತಲೆಯೆತ್ತಿ ಕಾಣುತ್ತಿರಲಿಲ್ಲವಾದ್ದರಿಂದ ನಿರ್ಮಲವಾಗಿದ್ದಂತೆ ತೋರುತ್ತಿತ್ತು. ಮೂಲೆ ಮೂಲೆಗಳಲ್ಲಿ ಕೆಸು ಜೊಂಡು ಆವಲ ಮೊದಲಾದ ಜಲಸಸ್ಯಗಳು ಬೆಳೆದು ಅರಣ್ಯವಾಗಿತ್ತು. ಅವುಗಳ ಮಧ್ಯೆ ಹುಂಡು ಕೋಳಿಗಳು ಬೆಚ್ಚಿ ಬೆದರಿ ಚಲಿಸುತ್ತಿದ್ದುವು. ಕೆಲವು ಕಪ್ಪೆಗಳು ಆಗಾಗ ವಟಗುಟ್ಟಿ ಹಾರಾಡುತ್ತಿದ್ದುವು. ಗೊದಮಟ್ಟೆಗಳ ಕರಿ ಹಿಂಡುಗಳೂ ಅಲ್ಲಲ್ಲಿ ಮುಲುಗುಟ್ಟುತ್ತಿದ್ದುವು. ಕೆರೆಯ ಮಧ್ಯೆ ಆಗಾಗ ಮೀನುಗಳು ನೀರು ಕಚ್ಚಿದಾಗ ನಿಶ್ಚಲವಾದ ಜಲವು ಕಂಪಿಸಿ ಅಲೆಯಲೆಯಾಗುತ್ತಿತ್ತು. ಅಂತಹ ಸಮಯಗಳಲ್ಲಿ ಬಿಸಿಲು ತಳತಳಿಸಿ ಕುಣಿಯು ತ್ತಿತ್ತು. ಒಂದೊಂದು ಸಲ ಮೀನುಗಳು ನೀರಿನ ಮೇಲೆ ತೇಲುತ್ತಿದ್ದ ಯಾವು ದಾದರೂ ಆಹಾರಪದಾರ್ಥಗಳಿಗೆ ಎರಗುತ್ತಿದ್ದುದರಿಂದ 'ಟುಮ್ ಟುಮುಕ್'

ಎಂದು ಸದ್ದಾಗುತ್ತಿತ್ತು. ಪಕ್ಷಿಗಾನದಿಂದ ಮಾತ್ರವೇ ಭಗ್ನವಾಗಿದ್ದ ಕಾಂತಾರ ಮೌನದಲ್ಲಿ ಆ ಸದ್ದು ಶಾಂತಿಗೆ ಚಕ್ಕುಳಗುಳಿ ಇಡುವಂತೆ ಕೇಳಿಸುತ್ತಿತ್ತು.

ಚಿನ್ನಯ್ಯನು ಕೂತಿದ್ದ ಕೊಂಬೆ ಕೆರೆಗೆ ಚೆನ್ನಾಗಿ ಬಾಗಿದ್ದುದರಿಂದ ತಾನು ಕೂತಿದ್ದ ಮರ, ತಾನು, ಬಂದೂಕು, ಆಸನಕ್ಕೆ ಮೆತ್ತೆಗಾಗಿ ಹಾಕಿಕೊಂಡಿದ್ದ ಕರಿಯ ಕಂಬಳಿ ಎಲ್ಲವೂ ಖಚಿತ ಚಿತ್ರದಂತೆ ಸ್ಪಷ್ಟವಾಗಿ ನೀರಿನಲ್ಲಿ ಪ್ರತಿಬಿಂಬಿತವಾಗಿದ್ದುವು. ತಾನು ಕೂತಿದ್ದ ಮರದಲ್ಲಿ ಒಂದು ಕೊಂಬೆಯಿಂದ ಮತ್ತೊಂದು ಕೊಂಬೆಗೆ ಚಕ್ರಾಕಾರವಾಗಿ ಬಲೆಯನ್ನು ಬೀಸಿ ಕಟ್ಟಿ, ಅದರ ಕೇಂದ್ರದಲ್ಲಿ ನಿಶ್ಚಲವಾಗಿ ಮಂಡಿಸಿದ್ದ ಬಣ್ಣಬಣ್ಣದ ದೊಡ್ಡ ಸಾಲಗವೊಂದು, ಪ್ರತಿಬಿಂಬದಲ್ಲಿ ಆಕಾಶದ ನೀಲಕ್ಕೆದುರಾಗಿ ಕಾಣುತ್ತಿತ್ತು. ಚಿನ್ನಯ್ಯನು ಕೋವಿಯನ್ನು ಕೈಯಲ್ಲಿ ಹಿಡಿದು ಕೆರೆಯ ಕಡೆಗೇ ಹುಡುಕುನೋಟದಿಂದ ನೋಡುತ್ತ ಕಾದನು.

ಸುಮಾರು ಒಂದು ಗಂಟೆಯ ಹೊತ್ತು ಕಳೆಯಿತು. ಕೆರೆಯ ನೀರಿನ ಮೇಲೆ ಪ್ರಾತಃಸೂರ್ಯಾತಪದಲ್ಲಿ ನೀಳವಾಗಿ ಒರಗಿದ್ದ ಮರದ ನೆಳಲೊಂದು ಕ್ರಮೇಣ ಸಂಕುಚಿತವಾಗುತ್ತ ಮರದ ಬುಡದ ಕಡೆಗೆ ಸರಿಯತೊಡಗಿತು. ಕೆರೆಯ ನಡೂಮಧ್ಯೆ ಮೀನುಗಳು ಆಗಾಗ ಕಾಣಿಸುತ್ತಿದ್ದರೂ ಚಿನ್ನಯ್ಯನು ಕುಳಿತಲ್ಲಿ ಅವುಗಳ ಸುಳಿವೂ ಕೂಡ ಇರಲಿಲ್ಲ. ನೀರು ಆಳವಾಗಿರುವ ಸ್ಥಳದಲ್ಲಿ ಒಂದು ವೇಳೆ ಈಡು ಹೊಡೆದರೂ ಮೀನನ್ನು ಹೊರಗೆ ತೆಗೆಯಲು ಅಸಾಧ್ಯವಾದುದರಿಂದ ಅವನು ಆ ಸಾಹಸಕ್ಕೆ ಕೈಹಾಕಲಿಲ್ಲ. ಒಮ್ಮೆ ಸ್ವಲ್ಪ ದೂರದಲ್ಲಿಯೆ ಮತ್ತೊಂದು ಮರದಮೇಲೆ ಕೂತಿದ್ದ ನಂಜನನ್ನು ಕರೆದು "ಏನೋ, ಮೀನು ಕಾಣಿಸುತ್ತವೇನೋ?" ಎಂದು ಕೇಳಿದನು.

"ದೂರದಾಗೇನೋ ಆಡ್ತಾವೆ. ಬದೀಗೆ ಮಾತ್ರ ಒಂದೂ ಬರ್ಲಿಲ್ಲ, ಅವರ ಹೊಟ್ಟೆ ಹಾಳಾಗಾಕೆ! ನಾ ಹೇಳ್ಲಿಲ್ಲೇನು ಆಗಲೇ! ತೂಬಿನ ಕೆರೆಗೆ ಹೋಗಿದ್ರೆ ಇಷ್ಟು ಹೊತ್ತಿಗೆ ಒಂದೆರಡನ್ನಾದ್ರೂ ಬಡಿಚಿಕೊಳ್ಳಬೈದಿತ್ತು."

ಮತ್ತೆ ಇಬ್ಬರೂ ಸುಮ್ಮನಾದರು. ಚಿನ್ನಯ್ಯನಿಗೆ ಕೆಳಗೆ ನೋಡಿ ನೋಡಿ ಬೇಜಾರಾಗಿ ಮೇಲೆ ನೋಡತೊಡಗಿದನು. ಬಲೆಯ ಮಧ್ಯೆ ಗಗನಕ್ಕೆದುರಾಗಿ ಕುಳಿತಿದ್ದ ಕಾಡುಜೇಡನು ನಿಶ್ಚಲವಾಗಿದ್ದುದು ಕಣ್ಣಿಗೆ ಬಿತ್ತು. ಪಕ್ಕದಲ್ಲಿದ್ದ ಒಂದು ಸಣ್ಣ ಚಿಗುರೆಲೆಯನ್ನು ಕಿತ್ತು ಮುದ್ದೆ ಮಾಡಿ ಆ ಜೇಡನ ಕಡೆಗೆ ಎಸೆದನು. ಗುರಿ ಜೇಡನಿಗೆ ಬೀಳಲಿಲ್ಲ. ಅಂತೂ ಎಲೆಯ ಮುದ್ದೆ ಸಾಲಗನ ಬಲೆಗೆ ತಗುಲಿ ಸಿಕ್ಕಿಕೊಂಡು ಜೋಲಾಡಿತು. ಆ ಹುಲಿಯ ಬಣ್ಣದ ಜೇಡನು ಬಾಣದಂತೆ ಹಾರಿ ಬಂದು ಎಲೆಯ ಮುದ್ದೆಗೆ ಎರಗಿತು. ಮತ್ತೆ ನಿರಾಶೆಯಿಂದ ಹಿಂದಕೆ ಓಡಿಹೋಗಿ ಮೊದಲಿನಂತೆಯೆ ಕುಳಿತುಕೊಂಡಿತು. ಆ ಪ್ರಾಣಿಯ ಉದ್ದವಾದ-

ಕಾಲುಗಳನ್ನೂ ವಿಕಟಾಕೃತಿಯನ್ನೂ ಭೈರವ ವರ್ಣಗಳನ್ನೂ ನೋಡಿ ಚಿನ್ನಯ್ಯನಿಗೆ ಬೀಭತ್ಸದಿಂದ ಮೈನಡುಗಿತು. ತರುವಾಯ ಬಂದೂಕನ್ನು ತೊಡೆಗಳ ಮೇಲೆ ಭದ್ರವಾಗಿ ಮಲಗಿಸಿಟ್ಟುಕೊಂಡು, ಕೋಟಿನ ಒಳಜೇಬಿನಿಂದ ಸಿಗರೇಟು ಪೊಟ್ಟಣವನ್ನು ತೆಗೆದು, ಒಂದು ಸಿಗರೇಟನ್ನು ಬಾಯಲ್ಲಿಟ್ಟನು. ತುಟಿಗಳು ಅದನ್ನು ಬೀಳದಂತೆ ಮೆತ್ತಗೆ ಹಿಡಿದುಕೊಂಡುವು. ಸಿಗರೇಟು ಪೊಟ್ಟಣವನ್ನು ಜೇಬಿಗೆ ಹಾಕಿ, ಬೆಂಕಿಪೊಟ್ಟಣವನ್ನು ತೆಗೆದು, ಒಂದು ಕಡ್ಡಿ ಗೀಚಿದನು. ಸುರ್ರೆಂಬ ಸದ್ದಿನೊಡನೆ ಅಗ್ನಿದೇವನು ಪ್ರತ್ಯಕ್ಷವಾಗಲು ಕಡ್ಡಿಯನ್ನು ಸಿಗರೇಟಿನ ತುದಿಗೆ ಆನಿಸಿದನು. ತಕ್ಷಣವೆ ತುಟಿಯಸಂದುಗಳಿಂದ ಧೂಮ ಮೇಘಗಳು ಹೊರಡು ತ್ತಿರಲು ಸಿಗರೇಟಿನ ತುದಿ ದೇದೀಪ್ಯಮಾನವಾಯಿತು. ಕಡ್ಡಿಯನ್ನು ತೆಗೆದು ಪುನಃ ಜೇಡನ ಬಲೆಗೆ ಎಸೆದನು. ಎಸೆದೊಡನೆಯೆ ಬೆಂಕಿಯಾರಿದ ಆ ಕಡ್ಡಿ ಬಲೆಗೆ ತಾಗಿದರೂ ಸಿಕ್ಕಿಕೊಳ್ಳದೆ ಕೆಳಗೆ ನೀರಿಗೆ ಬಿದ್ದಿತು. ಚಿನ್ನಯ್ಯನ ದೃಷ್ಟಿ ಕಡ್ಡಿಯನ್ನೇ ಅನುಸರಿಸುತ್ತಿತ್ತು. ಕಡ್ಡಿ ನೀರಿಗೆ ಬಿದ್ದಕೂಡಲೆ ಸಣ್ಣ ಪುಟ್ಟ ಹುಡಿಮೀನುಗಳು ಚೊಳಚೊಳನೆ ಸದ್ದು ಮಾಡುತ್ತ ಅದಕ್ಕೆ ಎರಗಿದುವು. ಅದು ತಿನ್ನುವ ವಸ್ತುವಲ್ಲವಾದ್ದರಿಂದ ಮತ್ತೆ ಹಿಂತಿರುಗಿ ಹೋಗಿ ಅದರ ಸುತ್ತಲೂ ಆಶ್ಚರ್ಯ ದಿಂದಲೋ ಎಂಬಂತೆ ಆಡತೊಡಗಿದುವು. ಅರೆಕಪ್ಪು ಅರೆಬೆಳ್ಳಗಿದ್ದ ಆ ಬೆಂಕಿಕಡ್ಡಿ ನೀರಿನಮೇಲೆ ತೇಲುತ್ತಿತ್ತು. ಚಿನ್ನಯ್ಯನು ಪುನಃ ತಲೆಯೆತ್ತಿ ಹಾಯಾಗಿ ಧೂಮಪಾನ ಮಾಡುತ್ತ ಕುಳಿತನು. ಹಳದಿ ಬಣ್ಣದ ಹಕ್ಕಿಯೊಂದು ವೇಗವಾಗಿ ಹಾರಿಬಂದು ಚಿನ್ನಯ್ಯ ಕೂತಿದ್ದ ಮರದ ಮೇಲೆ ಅನತಿದೂರದಲ್ಲಿಯೆ ಕೂತು ಕೊಂಡು, ಎರಡು ಮೂರುಸಾರಿ ಸಿಳ್ಳುಹಾಕಿ, ಒಡನೆಯೆ ಚಿನ್ನಯ್ಯನನ್ನು ಕಂಡು ಬೆಚ್ಚಿ ಪಟಪಟ ಎಂದು ರೆಕ್ಕೆಯ ಸದ್ದು ಮಾಡುತ್ತ ಹಾರಿಹೋಯಿತು.

ಚಿನ್ನಯ್ಯನು ಕೆಳಗೆ ನೋಡಿದನು. ತೊಡೆಯ ಮೇಲಿದ್ದ ಬಂದೂಕನ್ನು ಥಕ್ಕನೆ ತೆಗೆದುಕೊಂಡನು. ಸಿಗರೇಟು ಬಾಯಲ್ಲಿ ಹಾಗೆಯೆ ಹೊಗೆಯಾಡು ತ್ತಿತ್ತು. ತಾನು ಕೂತಿದ್ದ ಸ್ಥಳಕ್ಕೆ ಸ್ವಲ್ಪ ಸಮೀಪದಲ್ಲಿ ನೀರು ಮುಲುಗುಟ್ಟು ತ್ತಿದ್ದುದು ಅವನ ಕಣ್ಣಿಗೆ ಬಿತ್ತು. ಅವಲು ಮೀನಿನ ಮರಿಗಳೆಂಬುದೇನೊ ಅವನಿಗೆ ತಕ್ಷಣವೆ ಗೊತ್ತಾಯಿತು. ನೂರಾರು ಬಹು ಸಣ್ಣ ಮರಿಗಳು ಮೇಲಕ್ಕೆ ಬರುತ್ತಲೂ ಕೆಳಕ್ಕೆ ಹೋಗುತ್ತಲೂ ಕೆರೆಯ ನೀರಿಗೆ ರೋಮಾಂಚ ವನ್ನುಂಟುಮಾಡುತ್ತಿದ್ದುವು. ಮರಿಯಾಡಿಸುತ್ತಿದ್ದ ದೊಡ್ಡ ಮೀನುಗಳು ಮಾತ್ರ ಕಾಣಿಸುತ್ತಿರಲಿಲ್ಲ. ಮರಿಗಳ ಚಲನೆಯಿಂದ ದೊಡ್ಡ ಮೀನುಗಳು ತನಗೆ ಸಮೀಪವರ್ತಿಯಾಗುತ್ತಿವೆ ಎಂದು ತಿಳಿದು, ಮುಂದೆ ಏನಾಗುತ್ತದೆಯೋ ಎಂಬ ಅನಿಶ್ಚಯತೆ ಆಶಂಕೆಗಳಿಂದ ಅವನು ಸ್ವಲ್ಪ ಉದ್ವಿಗ್ನನಾಗಿ ನೀರಿನ ಕಡೆಗೆ

ಹೆಚ್ಚು ಎಚ್ಚರಿಕೆಯಿಂದಲೂ ತೀಕ್ಷ್ಣತೆಯಿಂದಲೂ ನಿರೀಕ್ಷಿಸತೊಡಗಿದನು. ಮರಿಗಳ ಗುಂಪು ಇನ್ನೂ ಬಳಿ ಸಾರಿತು. ಬೇಟೆಗಾರನು ತನ್ನ ನರ ನಾಡಿಗಳೆಲ್ಲ ಬಿಗಿಯುವಂತೆ ಸಮಸ್ತ ಶಕ್ತಿಯನ್ನೂ ದೃಷ್ಟಿಯೊಂದಕ್ಕೇ ನಿವೇದಿಸಿದನು. ಆಗ ಅವನಿಗೆ ಮೀನುಮರಿಗಳಿದ್ದ ಆ ಕೆರೆಯ ಭಾಗವೇ ಸಮಸ್ತ ಜಗತ್ತೂ ಆಗಿ ಹೋಗಿತ್ತು. ಏಕಾಗ್ರತೆಯಿಂದ ಸುತ್ತಣ ಪ್ರಪಂಚದ ಪ್ರಜ್ಞೆಯೇ ಅವನಿಗಿರಲಿಲ್ಲ. ಹಾಗೆ ತನ್ಮಯನಾಗಿ ನೋಡುತ್ತಿರೆಯಿರೆ ನೀರಿನಲ್ಲಿ ಒಂದು ಅಡಿ ಕೆಳಗೆ ಏನೋ ಕಗ್ಗೆ ಉದ್ದವಾಗಿ ಕಂಡಂತಾಯಿತು. ಚಿನ್ನಯ್ಯನ ಕೈಗಳು ಕೋವಿಯನ್ನು ದೃಢಮುಷ್ಟಿಯಿಂದ ಹಿಡಿದು ಸನ್ನಾಹಗೊಳಿಸುವಷ್ಟರಲ್ಲಿ ತಾಯಿಮೀನು ಮೇಲಕ್ಕೆ ಬಂದು, ಅಲ್ಲಿ ಬಿದ್ದಿದ್ದ ಬಿಸಿಲಿನಲ್ಲಿ ಸ್ಪಷ್ಟವಾಗಿ ಕಾಣಿಸಿಕೊಂಡಿತು. ಆದರೆ ಅದು ಇನ್ನೂ ನೀರಿನಲ್ಲಿ ಅರ್ಧ ಅಡಿಯಷ್ಟು ಕೆಳಗೆ ಇದ್ದುದರಿಂದ ಈಡು ವ್ಯರ್ಥ ವಾಗುವುದೆಂದು ಅನುಭವದಿಂದ ತಿಳಿದಿದ್ದ ಚಿನ್ನಯ್ಯನು ಮೀನು ನೀರು ಕಚ್ಚುವ ಸಮಯವನ್ನೇ ಕಾದನು. ಕೈ ಮಾತ್ರ ಕೋವಿಯನ್ನಾಗಲೇ ಗುರಿಯಿಟ್ಟುಕೊಂಡು ಸಿದ್ಧವಾಗಿತ್ತು.

ಸೂರ್ಯಾತಪದಿಂದ ಪ್ರಕಾಶಿತವಾಗಿದ್ದ ಆ ವನಪುಷ್ಕರಿಣಿಯ ವಾರಿಯಲ್ಲಿ ಒಂದೂವರೆ ಮೊಳದುದ್ದದ ಅವಲು ಮೀನು ಆಡುತ್ತಿತ್ತು. ಇದ್ದಲಿನಂತೆ ಕಗ್ಗೆ ಕಾಣಿಸುತ್ತಿದ್ದ ಅದರ ದೇಹದ ಶಿರೋಭಾಗದಲ್ಲಿ ಕಣ್ಣುಗಳೆರಡು ಗುಲು ಗುಂಜಿಗಳಂತೆ ಕೆಂಪಗೆ ತೋರುತ್ತಿದ್ದುವು. ಅದರ ಕಿವಿಗಳ ಪಕ್ಕದಲ್ಲಿಯೂ ಬಾಲದಲ್ಲಿಯೂ ಬೆನ್ನಿನ ಮೇಲೆಯೂ ಇದ್ದ ರೆಕ್ಕೆ ಗರಿಗಳು ಅತ್ತ ಇತ್ತ ಆಡುತ್ತ ಕ್ರೀಡೋನ್ಮತ್ತವಾಗಿದ್ದುವು. |ಅದರ ಲೀಲೆಯಲ್ಲಿ ಒಂದು ವಿಧವಾದ ಧೀರ ಗಾಂಭೀರ್ಯವೂ ಸಾವಧಾನವೂ ಜಾಗರೂಕತೆಯೂ ಸಂಶಯಾಶಂಕೆಗಳೂ ಮಿಳಿತವಾಗಿದ್ದುವು. ಚಿನ್ನಯ್ಯನು ನೋಡುತ್ತಿದ್ದ ಹಾಗೆಯೆ |ಮತ್ತೊಂದು ಮೀನೂ ಕಾಣಿಸಿಕೊಂಡಿತು. ಅವನ ಮನಸ್ಸಿನಲ್ಲಿ ಉದ್ವೇಗದೊಡನೆ ಅತ್ಯಾ ಸೆಯೂ ಉತ್ಪನ್ನವಾಗಿ ಎರಡನ್ನೂ ಒಂದೇ ಈಡಿಗೆ ಸುಡುತ್ತೇನೆಂದು ಹಿಗ್ಗಿದನು. ಆ ಮತ್ಸ್ಯ ದಂಪತಿ ತಮ್ಮ ಶತಸಂತಾನದ ಸಂಸಾರದೊಡನೆ, ಮರದ ಮೇಲೆ ಪ್ರಾಣಹರಣಕ್ಕೆಂದು ತವಕಪಡುತ್ತ ದೃಷ್ಟಿಮಾತ್ರನಾಗಿ ಕುಳಿತಿದ್ದ ಚಿನ್ನಯ್ಯನ ರುದ್ರಸಾಮೀಪ್ಯವನ್ನು ತಿಲಮಾತ್ರವೂ ಅರಿಯದೆ ವಿಹಾರಾಸಕ್ತವಾಗಿದ್ದುವು. ಇದ್ದಕ್ಕಿದ್ದ ಹಾಗೆ ಒಂದು ಮೀನು ನೀರು ಕಚ್ಚಲೆಂದು ಮೇಲೆ ಮೇಲಕ್ಕೇರಿತು. ಚಿನ್ನಯ್ಯನಿಗೆ ಆ ಒಂದೊಂದು ಕ್ಷಣವೂ ಒಂದೊಂದು ವರ್ಷದಂತಾಗಿ ಮತ್ಸ್ಯ ಗಮನ ಅತ್ಯತಿ ಸಾವಧಾನವಾಗಿ ಕಂಡಿತು. ಅವಲು ಮೀನಿನ ಕಣ್ಣುಗಳನ್ನು ಸುತ್ತಿದ್ದ ಕೆಂಪು ಬಣ್ಣದ ಉಂಗುರಗಳು ಪ್ರಸ್ಫುಟವಾಗಿ ಗೋಚರವಾದುವು. ಪಕ್ಕದ

ಮತ್ತು ಪುಕ್ಕದ ರೆಕ್ಕೆಗಳು ಹಿಂದಕ್ಕೂ ಮುಂದಕ್ಕೂ ಒಯ್ಯೊಯ್ಯನೆ ಆಡಿದುವು. ಮೀನಿನ ತಲೆ ಮೇಲಾಗಿ ದೇಹವು ಇಳಿಯಾಗಿದ್ದುದುದರಿಂದ ಅದು ಮೊದಲಿದ್ದು ದಕ್ಕಿಂತಲೂ ಸ್ವಲ್ಪ ಗಿಡ್ಡವಾಗಿ ತೋರಿತು. ತೆರೆತೆರೆದು ಮುಚ್ಚುವಂತಿದ್ದ ಅದರ ಬಾಯಿಯ ಬಿಳಿಯ ಗೆರೆ ಕಾಣಿಸಿಕೊಂಡಿತು. ಚಿನ್ನಯ್ಯನು ದೇಹದ ನರಗಳನ್ನೆಲ್ಲ ಬಿಗಿದು, ಉಸಿರು ಕಟ್ಟಿ, ರೆಪ್ಪೆ ಹಾಕದೆ, ಕೋವಿಯ ಕುದುರೆಯನ್ನೇರಿಸಿ, ಬಿಲ್ಲಿಗೆ ಕೈಹಾಕಿಕೊಂಡು, ಗುರಿಯಿಟ್ಟು ಅನುವಾದನು. ಮೀನು ನೀರು ಕಚ್ಚಿತು! ಚಿನ್ನಯ್ಯ ಬಿಲ್ಲು ಎಳೆದನು! ನೀರು ಈಡಿನ ಆಘಾತದಿಂದ ನಾಲ್ದೆಸೆಗಳಿಗೂ ಸಿಡಿಯಿತು. ಈಡಿನ ಢಂಕಾರವು ಮೌನವನ್ನು ಮರ್ದಿಸಿ ಗುಡ್ಡ ಬೆಟ್ಟಗಳಿಂದ ಅನುರಣಿತವಾಯಿತು. ಪೆಟ್ಟುಬಿದ್ದ ಮೀನು ನೀರಿನ ಮೇಲೂ ಕೆಳಗೂ ಹಾರಿ ನೆಗೆದು ಸದ್ದುಮಾಡಿ ನೀರು ಸೇರಿತು.

"ನಂಜಾ! ನಂಜಾ! ಓಡಿಬಾರೋ, ಓಡಿಬಾರೋ! ಬೇಗ ಬಾರೋ!" ಎಂದು ಚಿನ್ನಯ್ಯ ಒಂದೇ ಉಸಿರಿನಲ್ಲಿ ಕೂಗಿದನು.

ನಂಜನು ಕೋವಿಯನ್ನು ಮರದ ಮೇಲೆಯೆ ಇಟ್ಟು, ಆದಷ್ಟು ವೇಗದಿಂದಲೂ ಎಚ್ಚರಿಕೆಯಿಂದಲೂ ಮರವನ್ನಿಳಿದು ಧುಮುಕಿ ಧಾವಿಸಿದನು. ಓಡುವಾಗ ಕೆನೆಗಟ್ಟಿದ್ದ ಕೆಸರಿನ ಮೇಲೆ ದಟ್ಟವಾಗಿ ಪಸರಿಸಿ ಬಿದ್ದಿದ್ದ ತರಗೆಲೆಗಳ ಮೇಲೆ ರಭಸವಾಗಿ ಕಾಲಿಟ್ಟು ಜಾರಿ ಬಿದ್ದು ಕೈ ಮೈಯೆಲ್ಲಾ ಕೊಚ್ಚೆಯಾಗಿ ಸ್ವಲ್ಪ ಪೆಟ್ಟಾದರೂ ಲೆಕ್ಕಿಸದೆ ಮೀನು ಒದ್ದಾಡಿಕೊಂಡಿದ್ದ ಜಾಗಕ್ಕೆ ನುಗ್ಗಿದನು. ಮೀನು ಅಷ್ಟರಲ್ಲಿಯೆ ಮುಳುಗಿ ಕಣ್ಮರೆಯಾಗಿತ್ತು. ನಂಜನು ಮೊಳಕಾಲಿನವರೆಗೂ ನೀರಿನಲ್ಲಿ ಹಾದು "ಎಲ್ಲಿ ಹೊಡೆದಿದ್ದು?" ಎಂದನು.

"ಸ್ವಲ್ಪ ಮುಂದೆ" ಎಂದು ಮರದ ಮೇಲಿಂದ ಉತ್ತರ ಬಂದಿತು.

ನಂಜನು ಸೊಂಟದವರೆಗೂ ಹಾದನು.

"ನಿನ್ನ ಬಲಕ್ಕೆ ಹುಡುಕು."

ನಂಜನು ನೀರಿನಲ್ಲಿ ಬಾಗಿ ನೆಲದವರೆಗೂ ಕೈಹಾಕಿ ಹಿಂದೆ ಮುಂದೆ ಹುಡುಕಾಡಿದನು. ಕಳಕೆದ್ದು ನೀರೆಲ್ಲ ಬಗ್ಗಡವಾಯಿತು. ನಂಜನ ಸೊಂಟದ ಪಂಚೆಯೆಲ್ಲ ಒದ್ದೆಯಾಯಿತು. ತೋಳು ಭುಜದವರೆಗೂ ಮುಳುಗಿ, ನೀರು ಎದೆಗೆ ಮುಟ್ಟುತ್ತಿತ್ತು. ಅವನು ಹೆಜ್ಜೆಯೆತ್ತಿ ಇಟ್ಟಂತೆಲ್ಲ ಕೆಸರುಗಾಳಿಯಗುಳ್ಳೆಗಳು ಮಾಲೆಗಟ್ಟಿಕೊಂಡು ಮೇಲೆ ಬರುತ್ತಿದ್ದುವು.

ಸ್ವಲ್ಪ ಹೊತ್ತು ತಡವಿ ತಡವಿ ಹುಡುಕಿ ಉಸ್ಸೆಂದು ಎದ್ದು ನಿಂತು "ಹಾಂಗಾದ್ರೆ ಎಲ್ಲಿ ಹೋಯ್ತಪ್ಪಾ, ಅದರ ಹೊಟ್ಟೆ ಹಾಳಾಗಾಕೆ?" ಎಂದನು.

"ಛೇ! ಹುಡುಕಿ ನೋಡೋ! ಸರಿಯಾಗಿ ಏಟು ಬಿದ್ದಿದೆ. ಅಲ್ಲೇ ಎಲ್ಲೋ

ಸತ್ತು ಬಿದ್ದಿರಬೇಕು. ಇನ್ನೊಂದು ಸ್ವಲ್ಪ ಮುಂದೆ ಮುಂದೆ ಹೋಗಿ ಹುಡುಕು."

"ಎಂಥಾ ಮುಂದ್ಹೋಗೋದಪ್ಪಾ! ಗುಂಡೀನೋ ಏನೋ! ಹಾಳಾದ್ದು! ಅಲ್ಲಾ, ಅದ್ರ ಹೊಟ್ಟೆ ಹಾಳಾಗಾಕೆ, ಆ ರೀತಿ ಒದ್ಕೊಂಡಿದ್ದು ಯತ್ತ ಮಖ ಹೋಯ್ತಪ್ಪ?"

"ಯತ್ತಮಖಾನೂ ಹೋಗ್ಲಿಲ್ಲ! ಅಲ್ಲೇ ಬಿದ್ದಿರಬೇಕು. ಸರಿಯಾಗಿ ಹುಡುಕಿ ನೋಡು" ಎಂದು ಚಿನ್ನಯ್ಯನು ರೇಗಿ ಕಟುವಾಗಿ ನುಡಿದನು.

ನಂಜನು ದಡಕ್ಕೆ ಬಂದು ಪಂಚೆಗಿಂಚೆಯನ್ನೆಲ್ಲ ಬಿಚ್ಚಿಟ್ಟು ಕೌಪೀನಧಾರಿಯಾಗಿ ಮತ್ತೆ ಕೆರೆಗಿಳಿದನು. ನೀರು ಸೊಂಟದ ಮೇಲಕ್ಕೆ ಬಂದಿತು.

"ಇನ್ನೊಂದು ಹೆಜ್ಜೆ ಮುಂದೆ" ಎಂದು ಮರದಿಂದ ಅಪ್ಪಣೆಯಾಯಿತು.

ನಂಜನು ಮುಂದುವರಿದನು. ನೀರು ಎದೆಗೆ ಬಂದಿತು.

"ಹೂಂ, ಸಾಕು. ಈಗ ಹುಡುಕು."

ನಂಜನು ನಿಂತಹಾಗೆಯೆ ಕಾಲಿನಿಂದಲೆ ತಡವಿ ಹುಡುಕತೊಡಗಿದನು. ನೀರಿನ ಶೈತ್ಯದಿಂದ ಅವನ ಮೈ ರುಮ್ಮೆಂದಿತು. ಐದು ನಿಮಿಷವಾಯಿತು. ಚಿನ್ನಯ್ಯನಿಗೆ ಆಗಲೇ ಆಶಾಭಂಗವಾಗತೊಡಗಿ "ಏನೋ? ಸಿಕ್ಕಲಿಲ್ಲವೇನೋ?" ಎಂದು ಕೇಳಿದನು.

"ಅದ್ರ ಹೊಟ್ಟೆ ಹಾಳಾಗಕ್ಕೆ! ಎಲ್ಲಿ ಹೋಯ್ತಪ್ಪಾ" ಎನ್ನುತ್ತ ನಂಜನು ಹೆಜ್ಜೆಯನ್ನೇ ಎತ್ತಿ ಎತ್ತಿ ಇಟ್ಟು ಇಟ್ಟು ಹುಡುಕಿದನು.

"ನಾನೇ ಬರ್ಲೇನೋ!"

"ತಡೀರಿ, ಇಲ್ಲೇನೋ ಸಿಕ್ಕದ್ಹಂಗಾಗ್ತದೆ!.... ಹೋ ಇಲ್ಲಿ ಬಿದ್ದವಳೆ ಲೌಡಿ!" ಎನ್ನುತ್ತ ನಂಜನು ನೀರಿನಲ್ಲಿ ಮುಳುಗಿ ಕಣ್ಮರೆಯಾದನು. ಚಿನ್ನಯ್ಯನು ಸಂತೋಷದಿಂದ ಕಣ್ಣರಳಿಸಿ, ನಂಜನು ಮೇಲೇಳುವುದನ್ನೇ ನೋಡುತ್ತಿದ್ದನು. ಕೆರೆಯ ನೀರು ಅಲ್ಲೋಲಕಲ್ಲೋಲವಾಗುವಂತೆ ನಂಜನು ತೊಪ್ಪನೆ ತೊಯ್ದು ಎದ್ದು ನಿಂತನು. ಕೈಯಲ್ಲಿ ಮೀನು! ಅದರ ಹೊಟ್ಟೆ ಬೆಳ್ಳಗೆ ಕಾಣಿಸಿತು. "ತಲೆ ಹೊಟ್ಟೆ ಹಾರಿಹೋಗ್ಯದೆ" ಎನ್ನುತ್ತ ಅಲ್ಲಿಂದಲೆ ಅದನ್ನು ದಡಕ್ಕೆ ಎಸೆದು ನಂಜನು ಮೇಲಕ್ಕೆ ಬಂದನು.

"ಇನ್ನೊಂದು ಸ್ವಲ್ಪ ಹೊತ್ತು ನೋಡೋಣೇನೋ? ಇದೊಂದು ಎಲ್ಲಿ ಸಾಕಾಗ್ತದೆ? ಅದೂ ಅಲ್ಲದೆ ಕಾನೂರಿನ ಗಾಡಿ ಇನ್ನೂ ಬರಲಿಲ್ಲ" ಎಂದನು ಚಿನ್ನಯ್ಯ.

ನಂಜನು ಹುಂಕಾರದಿಂದ ಸಮ್ಮತಿಸಿ, ಮೀನನ್ನು ಒಂದು ಕೈಯಲ್ಲಿಯೂ, ಪಂಚೆಯನ್ನು ಮತ್ತೊಂದು ಕೈಯಲ್ಲಿಯೂ ಹಿಡಿದುಕೊಂಡು, ತನ್ನ ಗೊತ್ತಿಗೆ

ಹೋದನು. ಆಗಲೆ ಹೊತ್ತು ನೆತ್ತಿಗೇರಿತ್ತು. ಆದರೆ ಆಶೆಗೆ ಮಿತಿಯೆಲ್ಲಿ? ಇಬ್ಬರೂ ಮತ್ತೆ ಕಾಯುತ್ತ ಕುಳಿತರು.

ದೂರದಲ್ಲಿ ಗಂಟೆಯ ಸದ್ದಿನೊಡನೆ ಗಾಡಿಯ ಸದ್ದೂ ಕೇಳಿಸಿತು. ಚಿನ್ನಯ್ಯನು ರಸ್ತೆಯ ಕಡೆಗೆ ನೋಡುತ್ತಿದ್ದನು. ಮುಕ್ಕಾಲು ಪಾಲು ಕಾನೂರಿನ ಗಾಡಿಯೇ ಇರಬೇಕೆಂದು ಊಹಿಸಿದನು. ಅಷ್ಟರಲ್ಲಿ ರಸ್ತೆಯ ತಿರುವಿನಲ್ಲಿ ವೇಗವಾಗಿ ಬರುತ್ತಿದ್ದ ಗಾಡಿ ಕಾಣಿಸಿತು. ಅದು ಕೆರೆಯ ಏರಿಯ ಮಧ್ಯಕ್ಕೆ ಬಂದಾಗ ಕೂಗಿ ನಿಲ್ಲಿಸಬೇಕೆಂದು ಆಲೋಚಿಸಿ ಸುಮ್ಮನೆ ಕುಳಿತನು. ತನ್ನ ಮಿತ್ರರಿಗೆ ತನ್ನಿಂದೊದಗುವ ವಿಸ್ಮಯವನ್ನು ಕಲ್ಪಿಸಿಕೊಂಡು ಹಿಗ್ಗಿದನು. ಅವನು ನೋಡುತ್ತಿದ್ದ ಹಾಗೆಯೆ ಎತ್ತುಗಳು ಚರಂಡಿಯ ಕಡೆಗೆ ಧಾವಿಸಿದುವು; ಕೂಗು ಕೇಳಿಸಿತು; ಗಾಡಿ ಉರುಳಿತು!

ಇಬ್ಬರೂ ಆದಷ್ಟು ಶೀಘ್ರವಾಗಿ ಮರಗಳಿಂದ ಕೆಳಗೆ ಧುಮುಕಿ ಇಡುಕುರುಗಳಲ್ಲಿ ನುಗ್ಗಿ ಐದು ನಿಮಿಷದಲ್ಲಿ ಗಾಡಿ ಬಿದ್ದಲ್ಲಿಗೆ ಓಡಿದರು.

ಆರು ಜನರೂ ಸೇರಿ ಶ್ರಮದಿಂದ ಗಾಡಿಯನ್ನು ರಸ್ತೆಗೆ ಎಳೆದು, ನೆಲದ ಮೇಲೆ ಮಲಗಿದ್ದ ಹೂವಯ್ಯನನ್ನು ಗಾಡಿಯಲ್ಲಿ ಮಲಗಿಸಿದರು. ರಾಮಯ್ಯನು ಕ್ರಾಪು ಬಾಚಲೆಂದು ಟ್ರಂಕಿನಲ್ಲಿ ಇಟ್ಟಿದ್ದ ತೈಲದಿಂದ ಹೂವಯ್ಯನ ಬೆನ್ನನ್ನು ತಿಕ್ಕಿದರು. ಹೂವಯ್ಯನಿಗಾಗಿದ್ದ ಪೆಟ್ಟು ಅವರು ಊಹಿಸಿದುದಕ್ಕಿಂತಲೂ ಬಲವಾದುದಾಗಿತ್ತು. ಅವನು ಯಾತನೆಯಿಂದ ನರಳತೊಡಗಿದ್ದನು.

ನಿಂಗನು ಬಾರುಕೋಲಿನ ದಿಂಡಿನಿಂದ ಎತ್ತುಗಳ ಮೇಲೆ ತನಗಾಗಿದ್ದ ಸಿಟ್ಟನ್ನೆಲ್ಲ ತೀರಿಸಿಕೊಳ್ಳುತ್ತ ಗಾಡಿ ಕಟ್ಟಿದನು. ಚಿನ್ನಯ್ಯನು ತನ್ನ ಬಂದೂಕನ್ನು ಪುಟ್ಟಣ್ಣನ ಕೈಯಲ್ಲಿ ಕೊಟ್ಟು, ಅವನ ಜಾಗಕ್ಕೆ ತಾನೇ ಕೂತನು. ನಂಜ ಪುಟ್ಟಣ್ಣ ಇಬ್ಬರೂ ಗಾಡಿಯ ಹಿಂದೆ ಕಾಲು ನಡಿಗೆಯಲ್ಲಿಯೆ ಹೊರಟರು.

ಗಡಿಬಿಡಿಯಲ್ಲಿ, ಆ ದಿನ ಚಿನ್ನಯ್ಯನು ತನ್ನ ಮಿತ್ರ ಬಂಧುಗಳಿಗಾಗಿ ಹೊಡೆದಿದ್ದ ಮೀನು, ತನ್ನ ಪುತ್ರ ಮಿತ್ರ ಬಂಧುಗಳಿಂದ ಚಿರವಿಯೋಗಹೊಂದಿ ಕೆರೆಯಾಚೆಯ ದಡದಲ್ಲಿ ಕ್ರಿಮಿಕೀಟಗಳಿಗೆ ಆಹಾರವಾಗಿ ಉಳಿದು ಹೋಯಿತು. ಸ್ವಲ್ಪ ದೂರ ಹೋದ ಮೇಲೆ ನಂಜನಿಗೆ ಅದರ ನೆನಪಾಯಿತು. ಆದರೆ ಹೂವಯ್ಯನ ನರಳುವಿಕೆಯನ್ನು ಆಲಿಸಿಯೂ ಉಳಿದವರ ದುಃಖಾಕ್ರಾಂತವಾದ ಮೌನವನ್ನು ನೋಡಿಯೂ ಮರಳಿ ಹಿಂದಕ್ಕೆ ಹೋಗಿ ಅದನ್ನು ತರುವುದು ತನಗೆ ಹೀನವೆಂದು ಭಾವಿಸಿ ಸುಮ್ಮನಾದನು.

೪

## ಸೀತೆ

ಬೆಳಿಗ್ಗೆ ಚಿನ್ನಯ್ಯನು ಕುಂಬಾರ ನಂಜನಿಗೆ ಮೀನು ಬೇಟೆಗೆ ಬರಲು ಹೇಳಿ ಬಂದು ಮನೆಯ ಹೆಬ್ಬಾಗಿಲನ್ನು ಪ್ರವೇಶಿಸುತ್ತಿದ್ದಾಗ ಯಾರೋ ತನ್ನ ಹೆಸರನ್ನು ಕೂಗಿ ಕರೆದಂತಾಗಿ ತಿರುಗಿ ನೋಡಿದನು. ಅವನ ತಾಯಿ ಗೌರಮ್ಮನವರು ದನದ ಕೊಟ್ಟಿಗೆಯಿಂದ ಹಾಲು ತುಂಬಿದ್ದ ಹಿತ್ತಾಳೆಯ ತಂಬಿಗೆಯೊಂದನ್ನು ಕೈಯಲ್ಲಿ ಹಿಡಿದುಕೊಂಡು ಬರುತ್ತಿದ್ದರು. ಅವರ ಅಂಗಾಲು ಮೇಗಾಲು ಬೆರಳ ಸಂದುಗಳಲ್ಲಿ ಹಸಿಹಸಿಯಾದ ಹಸುರುಮಿಶ್ರವಾದ ಕರಿ ಬಣ್ಣದ ಸೆಗಣಿ ಮೆತ್ತಿಕೊಂಡಿತ್ತು. ಸೀರೆಯನ್ನು ಸ್ವಲ್ಪ ಮೇಲೆತ್ತಿ ಕಟ್ಟಿಕೊಂಡಿದ್ದುದರಿಂದ ದಂತದ ಬಣ್ಣದ ಕಾಲುಗಳ ಕೆಳಭಾಗವು ಸೆಗಣಿಯ ಬಣ್ಣಕ್ಕೆ ತಾರತಮ್ಯವಾಗಿತ್ತು. ಹೆಜ್ಜೆ ಇಟ್ಟಂತೆಲ್ಲ ಅವರ ಕೈಗಳ ಕಡಗ ಮತ್ತು ಬಳೆಗಳಿಂದ ಹೊರಹೊಮ್ಮುತ್ತಿದ್ದ ಝಣತ್ಕಾರವು ಚಿನ್ನಯ್ಯನ ಮನಸ್ಸಿಗೆ ತಾಯಿಯ ಪ್ರೀತಿಯ ಮಹಿಮೆಯನ್ನು ಸಾರುವ ಡಿಂಡಿಮದಂತಿತ್ತು. ಗೌರಮ್ಮನವರೇನೋ ನೋಡುವುದಕ್ಕೆ ಲಕ್ಷಣವಾಗಿದ್ದರು. ಆದರೆ ಚಿನ್ನಯ್ಯನ ದೃಷ್ಟಿಗೆ ಬಿದ್ದುದು ತಾಯಿಯ ಪವಿತ್ರತೆ, ಸೌಂದರ್ಯವಲ್ಲ. ಗೌರಮ್ಮನವರಲ್ಲಿ ತರಳೆಯ ವೈಯಾರವು ಪರಿಪಕ್ವವಾಗಿ ಗರತಿಯ ಗಾಂಭೀರ್ಯಕ್ಕೆ ತಿರುಗಿದ್ದಿತು. ಅವರ ಅಂಗಭಂಗಿಯಲ್ಲಿ ಚಂಚಲತೆ ಮಾದುಹೋಗಿ ಸ್ಥಿರಭಾವ ಅಭಿವ್ಯಕ್ತವಾಗಿತ್ತು. ತಾರುಣ್ಯದ ರಾಗವೇಗಗಳೆಲ್ಲ ಮಾಯವಾಗಿ ತುಂಬುಯೌವನದ ಪಾವನ ಸ್ನೇಹ, ನಿಃಸ್ವಾರ್ಥತೆ, ಸಹಿಷ್ಣುತೆ, ಸಂಯಮಗಳು ಮೈದೋರಿದ್ದುವು. ಅವರನ್ನು ನೋಡಿದರೆ ವಸಂತಪ್ರಭಾತದ ತಂಬೆಲರಿನಲ್ಲಿ ಬಳುಕುವ ಬಳ್ಳಿಯ ನೆನಪಾಗುತ್ತಿರಲಿಲ್ಲ; ಚೆನ್ನಾಗಿ ಚೊಕ್ಕಟವಾಗಿ ಬೆಳೆದು, ಬುಡದಲ್ಲಿ ಸಣ್ಣ ದೊಡ್ಡ ಸಸಿಗಳನ್ನು ಹೆತ್ತು, ಗೊನೆಯಿಂದ ನಸುಬಾಗಿ ನಿಂತ ಕದಲಿಯ ಜ್ಞಾಪಕವಾಗುತ್ತಿತ್ತು. ಆ ಮಾತೃದೇವಿ ಚಿನ್ನಯ್ಯನ ಬಳಿಗೆ ಬಂದು ನಿಲ್ಲಲು ಅವನಿಗೊಂದು ಅನಿರ್ವಚನೀಯವಾದ ಆಹ್ಲಾದವಾಯಿತು. ತಾನು ಮತ್ತೆ ಶಿಶುವಾಗಿ ಆ ಮಾತೆಯ ತೊಡೆಯ ಮೇಲೆ ಕುಳಿತು, ಆಕೆಯ ದಿವ್ಯವಕ್ಷದ ಮೇಲೆ ನಲಿದಾಡಿ, ತಲೆಯ ಕೂದಲಿನಲ್ಲಿಯೂ ಮುಖದ ಮೇಲೆಯೂ ಕೈಯಾಡಿ, ಆಕೆ ಕೊಡುವ ಮುತ್ತುಗಳಿಂದ ತಣಿಯಬೇಕು ಎನ್ನಿಸಿತು. ಗೌರಮ್ಮನವರು ಹಿಡಿದಿದ್ದ ಚಿನ್ನದಂತಿದ್ದ ಹಿತ್ತಾಳೆಯ ತಂಬಿಗೆ ಎಳಬಿಸಿಲಿನ ರಶ್ಮಿಯಲ್ಲಿ ತಳತಳಿಸಿ ಚಿನ್ನಯ್ಯನ ಕಣ್ಣು ಕುಕ್ಕುತ್ತಿತ್ತು. ಅವರು ಮುಂಗೈ ಮೇಲೆ ಕುಚ್ಚಿಸಿ

ಕೊಂಡಿದ್ದ ಲತಾಕಾರದ ಹಚ್ಚೆಯ ನಸುಹಸುರು ಬಣ್ಣವು ಅವರ ಗೌರವರ್ಣ ಕ್ಕೊಂದು ಆಭರಣವಾಗಿ ತೋರುತ್ತಿತ್ತು. ಚಿನ್ನಯ್ಯನು ನವೀನನಾದುದರಿಂದ ಹಚ್ಚೆ ಕುಚ್ಚಿಸಿಕೊಳ್ಳುವುದು ಅನಾಗರಿಕ ಪದ್ಧತಿಯೆಂದು ಭಾವಿಸಿ, ತನ್ನ ತಂಗಿ ಮೊದಲಾದವರಿಗೆ ಅದನ್ನು ತಪ್ಪಿಸಿದ್ದರೂ ತನ್ನ ತಾಯಿಯ ಕೈಯಲ್ಲಿದ್ದ ಹಚ್ಚೆ ಆತನಿಗೆ ಸಂತೋಷಪ್ರದವಾಗಿತ್ತು. ಏಕೆಂದರೆ, ಆ ಹಚ್ಚೆ ಕುಚ್ಚಿದ್ದ ಕೈ ಅವನನ್ನು ಎತ್ತಿ ಆಡಿಸಿ ಸಲಹಿ ದೊಡ್ಡವನನ್ನಾಗಿ ಮಾಡಿತ್ತು. ನಿತ್ಯ ಪರಿಚಯದಿಂದ ಅದು ಎಷ್ಟು ಸ್ವಾಭಾವಿಕವಾಗಿತ್ತೆಂದರೆ ಅದಿಲ್ಲದ ತಾಯಿಯ ಕೈ ಆತನಿಗೆ ಪರಕೀಯವಾಗಿ ಕಾಣಿಸುತ್ತಿದ್ದಿತೋ ಏನೋ! ಹಾಲು ತುಂಬಿದ್ದ ಆ ತಂಬಿಗೆಯ ಕಂಠದಲ್ಲಿ ಬೆಳ್ನೊರೆ ಬಿಳಿಯುಣ್ಣೆಯ ಮುಗಿಲ ಮುದ್ದೆಯಂತೆ ಮೃದುವಾಗಿ, ಮನೋಹರವಾಗಿ, ಮಾತೃವಾತ್ಸಲ್ಯದಂತೆ ಆಪ್ಯಾಯಮಾನವಾಗಿತ್ತು. ಆ ನೊರೆಯ ಮುದ್ದೆಯ ಮೇಲು ಭಾಗದಲ್ಲಿದ್ದ ಒಂದೆರಡು ಗುಳ್ಳೆಗಳು ಬೆಚ್ಚಗಿದ್ದ ಬೆಳಗಿನ ಸೂರ್ಯನ ಹೊಂಬೆಳಕಿನಲ್ಲಿ ಕಾಮನ ಬಿಲ್ಲಿನ ಕಿರುತತ್ತಿಗಳಂತೆ ಬಣ್ಣ ಬಣ್ಣವಾಗಿದ್ದುವು. ತಾಯಿ ಮಕ್ಕಳಿಬ್ಬರ ಛಾಯೆಗಳೂ ನೆಲದ ಮೇಲೆ ನೀಳವಾಗಿ ಬಿದ್ದು, ಬಳಿಯಿದ್ದ ಸುಣ್ಣ ಬಳಿದ ಬಿಳಿಯ ಗೋಡೆಯ ಮೇಲೆ ಎದ್ದುನಿಂತಿದ್ದುವು. ಚಿನ್ನಯ್ಯನೊಡನೆ ಮನೆಯನ್ನು ಸೇರಿದ್ದ ನಾಯಿಗಳಲ್ಲಿ ಕೆಲವು ಒಳ ಅಂಗಳಕ್ಕೆ ದಾಟಿದ್ದುವು. ಕೆಲವು ಹೊರಗೆ ಬಿಸಿಲಿನಲ್ಲಿ ಹಾಯಾಗಿ ಮಲಗಿ ತಮ್ಮನ್ನು ಪೀಡಿಸುತ್ತಿದ್ದ ನೊಣಗಳನ್ನು ಚಿಮ್ಮಿ ಚಿಮ್ಮಿ ಹಾರಿ ಹಾರಿ ಬಾಯಿ ಹಾಕಿ ಅಟ್ಟಿ ಕೊಳ್ಳುತ್ತಿದ್ದುವು. ರೂಬಿ ಮುಂಗಾಲೂರಿ ಹಿಂಗಾಲ ಮೇಲೆ ಕುಳಿತು ತಾಯಿ ಮಕ್ಕಳ ಮುಖದ ಕಡೆಗೇ ಕುತೂಹಲನಯನವಾಗಿ ನೋಡುತ್ತ, ಅವರಾಡುತ್ತಿದ್ದ ಮಾತುಗಳನ್ನು ತಿಳಿದುಕೊಳ್ಳಲು ಪ್ರಯತ್ನಿಸುವಂತಿತ್ತು. ನೆಳಲಿನಲ್ಲಿ ಅದರ ಲಾಂಗೂಲದ ಹರ್ಷಪ್ರದರ್ಶನ ಚಲನೆ ಲಿಖಿತವಾಗಿತ್ತು. ಬಹುಶಃ ಗೌರಮ್ಮ ನವರ ಕೈಲಿದ್ದ ಹಾಲಿನ ಪಾತ್ರೆಗಾಗಿರಬೇಕು.

"ತಮ್ಮಾ"—ಗೌರಮ್ಮನವರು ಮಗನನ್ನು ಕರೆಯುತ್ತಿದ್ದುದು ಹಾಗೆ— "ಒಂದು ಕೆಲ್ಸ ಮಾಡಿಕೊಡ್ಬೇಕಲ್ಲ." ತಾಯಿಯ ಮುಖದಲ್ಲಿ ಅಹೇತುಕ ಹರ್ಷದ ಕಿರುನಗೆಯೊಂದು ಸುಳಿದಾಡಿ, ತಾಂಬೂಲದಿಂದ ದಾಡಿಮ ಬೀಜ ಗಳಂತೆ ಕೆಂಪಾಗಿದ್ದ ಅವರ ದಂತಪಂಕ್ತಿಯ ಸ್ವಲ್ಪ ಭಾಗ ಗೋಚರವಾಯಿತು.

"ಏನು ಹೇಳಬಾರದೆ?"

"ನೀನು ಮಾಡಿಕೊಡ್ತೇನೆ ಅಂದ್ರೆ, ಹೇಳ್ತೀನಪ್ಪಾ."

"ಹೇಳು ಅಂದ್ರೆ!"

ತಾಯಿಮಕ್ಕಳಿಬ್ಬರೂ ಸಂಭಾಷಣೆಯನ್ನು ಸವಿಯುತ್ತಿದ್ದರು. ಆ ಸವಿ

ತೋರುತ್ತಿತ್ತು. ಗೌರಮ್ಮ ಗೋಸ್ಕರವೇ ಅದು ಪ್ರಾರಂಭವಾಗಿದ್ದಂತೆಯೂ ನವರ ವಿಳಂಬವೇನೋ ಅದಕ್ಕೆ ಪ್ರಬಲವಾದ ಸಾಕ್ಷಿಯಾಗಿತ್ತು.

"ಕಾಳಗೆ ಹೇಳಿ ಹಿತ್ತಲಿಂದ ಸ್ವಲ್ಪ ಹರುವೆಸೊಪ್ಪು ತರಿಸಿ ಕೊಡ್ತೀಯಾ?"

"ನೀನೇ ಹೇಳವ್ವಾ ತರ‍್ತಾನೆ."

"ನಾ ಹೇಳಿದರೆ ಎಲ್ಲಿ ಕೇಳ್ತಾನೋ."

"ಕೇಳದೇ ಏನು, ಒಲ್ಲೆ ಅಂತಾನೆ?"

ಚಿನ್ನಯ್ಯನಿಗೆ ಮಾತಿನ ಮರ್ಮ ಗೊತ್ತಾಗಲಿಲ್ಲ. ಮಾತಿಗಾಗಿಯೇ ತಾಯಿಗೆ ಆ ಹರುವೆ ಸೊಪ್ಪು ಬೇಕಾಗಿತ್ತೆಂಬುದು ಅವನಿಗೆ ಹೊಳೆಯದೆ ಹೋಯಿತು. ವಿಷಯವು ಕ್ಷುದ್ರವೆಂದು ಪರಿಗಣಿಸಿ ಬೇರೆ ಮಾತು ಎತ್ತಿದನು.

"ಅದಿರಲಿ, ಮಧ್ಯಾಹ್ನ ಹೂವಯ್ಯ ರಾಮಯ್ಯ ಮೈಸೂರಿಂದ ಬರ‍್ತಾರೆ." ಚಿನ್ನಯ್ಯನ ಅರ್ಥವು ಊಟದಲ್ಲಿ ಏನಾದರೂ ವಿಶೇಷವಾಗಲಿ ಎಂಬುದಾಗಿತ್ತು. ತಾಯಿಗೂ ಅದು ಗೊತ್ತಾಯಿತು.

"ಯಾರು ಹೇಳಿದರು ನಿನಗೆ?" ಎಂದು ಗೌರಮ್ಮ ಸ್ವಲ್ಪ ಉತ್ಸಾಹ ದಿಂದಲೆ ಕೇಳಿದರು.

"ಯಾರೂ ಹೇಳಲಿಲ್ಲ; ಕಾನೂರಿನ ಗಾಡಿ ರಸ್ತೇಲಿ ಹೋಗ್ತಿತ್ತು. ಕೇಳಿ ತಿಳಿದೆ...ನಾನೀಗ ಬೈಲುಕೆರೆಗೆ ಮೀನು ಹೊಡೆಯಲು ಹೋಗ್ತೀನಿ. ಬೇಗ ಕಾಫಿ ತಿಂಡಿ ಕೊಡು."

"ಕಾಫಿ ತಿಂಡಿ ಆಗಲೇ ಆಗಿದೆ. ನೀನೇ ಬರಲಿಲ್ಲ."

ಅಷ್ಟರಲ್ಲಿ ಪಕ್ಕದಲ್ಲಿ ತೋಟದ ಬೇಲಿಯಲ್ಲಿದ್ದ ಗುಲಾಬಿ ಗಿಡಗಳ ಪೊದೆಯಿಂದ "ಅಣ್ಣಯ್ಯ ಇಲ್ಲಿ ಸ್ವಲ್ಪ ಬಾ" ಎಂಬ ಇಂಪಾದ ಕರೆ ಕೇಳಿಸಿತು. ತಾಯಿ ಮಕ್ಕಳಿಬ್ಬರೂ ತಿರುಗಿ ನೋಡಿದರು. ಸೀತೆ ಗುಲಾಬಿಯ ಪೊದೆಯ ಬಳಿ ಕೈಯಲ್ಲಿ ಒಂದೆರಡು ಹೂವುಗಳನ್ನು ಹಿಡಿದು ನಗುತ್ತ ನಿಂತಿದ್ದಳು. ಪಕ್ಕದಲ್ಲಿ ಅವಳ ಪುಟ್ಟ ತಂಗಿ ಲಕ್ಷ್ಮಿ ಅಕ್ಕನ ಸೀರೆಯ ನಿರಿಗಳನ್ನು ಭದ್ರವಾಗಿ ಹಿಡಿದು ನಿಂತಿದ್ದಳು.

ಗೌರಮ್ಮನವರು "ಅಯ್ಯೋ, ಇವಳ ದೆಸೆಯಿಂದ ಆಗೋದಿಲ್ಲ. ಅವಳ ನ್ಯಾಕೇ ಅಲ್ಲಿಗೆ ಕರಕೊಂಡು ಹೋಗಿದ್ದು? ಹಾವು ಗೀವು ಇರ‍್ತಾವೆ ಅಂದರೆ ಕೇಳೋದಿಲ್ಲ. ನಾನೇನು ಸಾಯಲಿ? ತಮ್ಮಾ, ಅವಳನ್ನು ಎತ್ತಿಕೊಂಡು ಬಾರೊ" ಎಂದು ಮಗನಿಗೆ ಬೆಸಸಿ ಹೆಬ್ಬಾಗಿಲನ್ನು ದಾಟಿ ಒಳಗೆ ಹೋದರು. ಚಿನ್ನಯ್ಯನು ತಂಗಿಯ ಬಳಿಗೆ ಹೋದನು. ಲಕ್ಷ್ಮಿ ಅಣ್ಣಯ್ಯ ಬಂದುದನ್ನು ಕಂಡು, ತಾನು ಮನೆಯಿಂದ ಅಷ್ಟು ದೂರ ಹೋಗಿದ್ದು ಸಾಹಸಕ್ಕಾಗಿಯೋ

ಎಂಬಂತೆ ನಗುತ್ತ ಅವನಲ್ಲಿಗೆ ಓಡಿ ಬರುವ ಸಂಭ್ರಮದಲ್ಲಿ ಲಂಗಕ್ಕೆ ಕಾಲು ಸಿಕ್ಕಿಸಿಕೊಂಡು ಹಸುರು ಹುಲ್ಲಿನ ಮೇಲೆ ಬಿದ್ದು ಅಳತೊಡಗಿದಳು. ಚಿನ್ನಯ್ಯ ಓಡಿಹೋಗಿ ಅವಳನ್ನು ಎತ್ತಿಕೊಂಡು ಸಮಾಧಾನಪಡಿಸಿದನು. ಅಲ್ಲಿಂದ ಸೀತೆಯ ಬಳಿಗೆ ಹೋಗುತ್ತ "ಯಾಕೇ? ಕರೆದಿದ್ದು?" ಎಂದನು.

"ಆ ಗುಲಾಬಿ ಹೂವು ಕುಯ್ಕೊಡೋ" ಎಂದು ಕೈ ತೋರಿಸಿದಳು.

ಚಿನ್ನಯ್ಯ ಲಕ್ಷ್ಮಿಯನ್ನು ಮೆಲ್ಲನೆ ಮತ್ತೆ ಪೃಥ್ವಿಯಲ್ಲಿ ಸಂಸ್ಥಾಪನೆಮಾಡಿ ಸೀತೆಗೆ ಹೂ ಕುಯ್ದು ಕೊಟ್ಟು "ಹೂಂ, ಸಾಕು. ಇನ್ನು ಬನ್ನಿ ಹೋಗೋಣ" ಎಂದನು.

ಸೀತೆ "ಇಲ್ಲ ಅಣ್ಣಯ್ಯ, ನಾನಿನ್ನೂ ಒಂದು ಸ್ವಲ್ಪ ಹೂ ಕುಯ್ದುಕೊಂಡು ಬರ್ತೀನಿ" ಎಂದಳು.

"ಅವ್ವ ಕರೆದಿದ್ದು ಕೇಳ್ಲಿಲ್ಲೇನು. ಸಿಟ್ಟು ಮಾಡ್ತದೆ!"

"ಲಕ್ಷ್ಮೀನ ಕರಕೊಂಡು ಹೋಗು, ನಾ ಬರ್ತೀನಿ ಆಮೇಲೆ."

"ಯಾರಿಗೇ ಅಷ್ಟೊಂದು ಹೂವು! ನಿನಗೇನು ಮದುವೆ ಗಿದುವೆಯೋ?" ಎಂದು ಚಿನ್ನಯ್ಯನು ನಕ್ಕನು.

ಸೀತೆ ಮುನಿಸಿನಿಂದ ಕೆನ್ನೆ ಊದಿಸಿಕೊಂಡು ತುಟಿ ಚಾಚಿಕೊಂಡು "ಹುಂ, ನನಗಲ್ಲ. ನನ್ನ ಅತ್ತಿಗೆಗೆ!" ಎಂದಳು.

ಚಿನ್ನಯ್ಯನು ಅವಳ ಕೈಯನ್ನು ಹಿಡಿದು ಬಹು ಮೃದುವಾಗಿ ಹೂವನ್ನು ಗುದ್ದುವಂತೆ ಗುದ್ದಿದನು.

ಸೀತೆ "ಮತ್ತ್ಯಾಕೆ ನೀನು ಹಾಂಗೆ ಹೇಳಿದ್ದು?" ಎಂದು ಕೊಂಕುನಗೆ ನಕ್ಕಳು.

"ಯಾಕೆ ಹೇಳಿದ್ದೇ? ಇವತ್ತು ಯಾರು ಬರ್ತಾರೆ ಗೊತ್ತೇನು?"

ಸೀತೆ ಗೌರಮ್ಮ ಚಿನ್ನಯ್ಯರು ಆಡುತ್ತಿದ್ದ ಮಾತುಗಳಿಂದ ಎಲ್ಲವನ್ನೂ ತಿಳಿದಿದ್ದಳು. ಆದರೂ ಏನೂ ತಿಳಿಯದವಳಂತೆ "ಯಾರು ಬರ್ತಾರೆ!" ಎಂದಳು. ಅವಳ ಮುಖದ ಭಂಗಿಯೇ ಬದಲಾಯಿಸಿತ್ತು.

"ಯಾರು? ನಿನ್ನ ಭಾವಂದಿರು, ಮೈಸೂರಿಂದ."

"ಯಾರು? ರಾಮಯ್ಯ ಭಾವನೇ?"

"ಇದೇನು! ಗೊತ್ತಿಲ್ಲದೆ ಇದ್ದವರ ಹಾಗೆ ಆಡ್ತೀಯಲ್ಲಾ! ರಾಮಯ್ಯ ಭಾವ ಒಬ್ಬರೇ ಏನು ಮೈಸೂರಿಗೆ ಹೋಗಿದ್ದವರು?"

ಸೀತೆ ತಲೆಬಾಗಿ ಸುಮ್ಮನಾದಳು.

"ಏನಪ್ಪಾ, ಮದುವೆ ಆಗಬೇಕಾದ್ರೇನೆ ಹೆಸರು ಹೇಳೋಕೆ ಇಷ್ಟೊಂದು ನಾಚಿಗೇನೆ?"

ಸೀತೆ "ಅಣ್ಣಯ್ಯ, ನೀನು ಸುಮ್ಮನಿರೋ" ಎಂದು ಮುನಿದಳು.

"ಅಲ್ಲಾ ಮತ್ತೆ; ಮದುವೆಯಾಗೋಕೆ ಮುಂಚೇನೆ ಹೆಸರು ಹೇಳೋಕೆ ನಾಚ್ಕೀಯಲ್ಲಾ!"

ಸೀತೆಗೆ ಮಾನಭಂಗವಾದಂತಾಗಿ, ಅದನ್ನು ಧೈರ್ಯ ಪ್ರದರ್ಶನದಿಂದ ಪರಿಹರಿಸಿಕೊಳ್ಳಬೇಕೆಂದು ನಿರ್ಣಯಿಸಿ, ಕತ್ತೆತ್ತಿ ಅಣ್ಣನ ಕಡೆಗೆ ನೋಡಿ, "ಯಾರೋ? ಹೂವಯ್ಯ ಭಾವನೂ ಬರ್ತಾರೆ! ಅಷ್ಟೇನೆ?" ಎಂದಳು. ಅವಳ ಕೆನ್ನೆಗೆ ರಕ್ತವೇರಿ ಮುಖ ಕೆಂಪಾಯಿತು.

ಚಿನ್ನಯ್ಯ "ಅಯ್ಯೋ ಗಂಡುಬೀರಿ! ಗಂಡನಾಗುವವನ ಮೇಲೆ ಗೌರವವೇ ಇಲ್ಲವಲ್ಲೇ! ಅವರು ಬರಲಿ ಹೇಳ್ತೀನಿ!" ಎಂದು ನಕ್ಕನು. ಲಕ್ಷ್ಮಿ ಹುಲ್ಲಿನಲ್ಲಿ ತನ್ನ ಪುಟ್ಟ ಕೈಗಳಿಂದ ಏನನ್ನೋ ಹುಡುಕುತ್ತಿದ್ದಳು.

ಸೀತೆಗೆ ಕತ್ತರಿಯ ನಡುವೆ ಸಿಕ್ಕಂತಾಯಿತು. ಕಣ್ಣುಗಳಿಂದ ನೀರು ಹೊಮ್ಮಿ ಕೆನ್ನೆಗಳ ಮೇಲೆ ಹರಿದುವು. ಚಿನ್ನಯ್ಯನು ತೃಪ್ತನಾದಂತಾಗಿ "ಲಕ್ಷ್ಮೀ ಬಾರೇ ಮನೆಗೆ ಹೋಗೋಣ" ಎಂದು ಹೇಳುತ್ತ ಅವಳನ್ನು ಎತ್ತಿಕೊಳ್ಳಲು ಹೋದನು. ಲಕ್ಷ್ಮಿ "ನಾನೊಲ್ಲೆ!" ಎಂದು ಅಳತೊಡಗಿದಳು. ಆದರೂ ಚಿನ್ನಯ್ಯ ಬಲಾತ್ಕಾರದಿಂದ ಅವಳನ್ನು ಎತ್ತಿಕೊಂಡು ಮನೆಗೆ ಹೋದನು. ಸೀತೆ ತಲೆಬಾಗಿ ಕಂಬನಿಗರೆಯುತ್ತಲೇ ನಿಂತಿದ್ದಳು.

ಸೀತೆಯ ಕಂಬನಿಗಳಿಗೆ ನಿಜವಾದ ಕಾರಣ ದುಃಖವಾಗಿರಲಿಲ್ಲ. ಯಾರಾದರೂ ಆ ಕಂಬನಿಗಳನ್ನೇ ಪ್ರಶ್ನಿಸಿದ್ದರೆ ಅವು ಹೇಳುವ ಕಥೆ ಬೇರೆಯಾಗಿರುತ್ತಿತ್ತು. ಪ್ರಾಯಶಃ ಒಂದು ಕಂಬನಿ "ನಾನು ನಾಚಿಕೆಯಿಂದ ಬಂದೆ" ಎನ್ನುತ್ತಿತ್ತು. ಇನ್ನೊಂದು "ನಾನು ಅಭಿಮಾನ ಭಂಗವಾದುದರಿಂದ ಬಂದೆ" ಎನ್ನುತ್ತಿತ್ತು; ಮತ್ತೊಂದು "ನಾನು ಬಿಂಕದ ಪರಿಣಾಮ" ಎನ್ನುತ್ತಿತ್ತು; ಮಗುದೊಂದು "ನಾನು ಹರ್ಷಾಶ್ರು" ಎನ್ನುತ್ತಿತ್ತು. ಅಂತೂ ಚಿನ್ನಯ್ಯನು ಹೋದ ತುಸು ಹೊತ್ತಿನಲ್ಲಿಯೆ ನಾಚಿಕೆ ಅಭಿಮಾನ ಬಿಂಕಗಳೆಲ್ಲವೂ ವೈಶಾಖ ಮಧ್ಯಾಹ್ನದ ಕಡುನೀಲಿ ಬಾನಿನಲ್ಲಿ ತುಂಡುಮೋಡವು ಮೆಲ್ಲಗೆ ಕರಗಿ ಲೀನವಾಗುವಂತೆ ಮಾಯವಾಗಿ ಹರ್ಷನೀಲವೊಂದೇ ಸರ್ವವ್ಯಾಪಿಯಾಗಿ ಸ್ಥಿರವಾಯಿತು. ಪೃಥ್ವೀ ಸುಂದರಿಯ ದಿಗಂತಾಧರದಲ್ಲಿ ಉಷಃಕಾಲದ ಮಂದಹಾಸವು ಮೈದೋರು ವಂತೆ ಸೀತೆಯ ಗುಲಾಬಿ ಚೆಂದುಟಿಗಳಲ್ಲಿ ಕಿರುನಗೆ ಮೂಡಿ, ಕೆನ್ನೆಗಳಮೇಲೆ ತೆರೆತೆರೆಯಾಗಿ ಪ್ರವಹಿಸಿ, ಮುಖಮಂಡಲವನ್ನು ಪ್ರಸನ್ನವಾಗಿ ಮಾಡಿತು. ಮುಖಪ್ರಸನ್ನತೆಗೆ ಮನಃಪ್ರಸನ್ನತೆ ಕಾರಣವಾಗಿತ್ತು. ಆಕೆಯ ಮನದಲ್ಲಿ ಹೂವಯ್ಯನ ಸುಂದರಮೂರ್ತಿ ಆವಿರ್ಭವಿಸಿತ್ತು. ಅವನ ವಿಚಾರವಾಗಿ ಅನೇಕ

ಭಾವಗಳೂ ದೃಶ್ಯ ಸಂಕುಲಗಳೂ ಅನುಭವಗಳೂ ಚಿತ್ತಭಿತ್ತಿಯಲ್ಲಿ ಚಿತ್ರಿತವಾಗಿ ಬಾಹ್ಯ ಪ್ರಜ್ಞಾಶೂನ್ಯಳಾದ ಆಕೆ ನೆನಪಿನ ನಂದನವನದಲ್ಲಿ ಅಪ್ಸರಿಯಾಗಿ ಸಂಚರಿಸ ತೊಡಗಿದಳು.

ಸೀತೆಗೆ ಹೂವಯ್ಯನು ಚಿಕ್ಕಂದಿನಿಂದಲೂ ಚಿರಪರಿಚಿತ ಸ್ನೇಹಮೂರ್ತಿ. ಗೌರಮ್ಮನವರು ಕಡೆಯ ಪಕ್ಷ ವರ್ಷಕ್ಕೆ ಒಂದು ಸಾರಿಯಾದರೂ ಕಾನೂರಿಗೆ ನೆಂಟರಾಗಿ ಹೋಗಿ ಒಂದೆರಡು ವಾರಗಳಿಗಿಂತಲೂ ಹೆಚ್ಚಾಗಿಯೆ ಅಲ್ಲಿದ್ದು ಬರುತ್ತಿದ್ದುದು ವಾಡಿಕೆಯಾಗಿತ್ತು. ಹೂವಯ್ಯನು ಸೀತೆಗಿಂತಲೂ ಐದಾರು ವರ್ಷ ಹೆಚ್ಚು ವಯಸ್ಸಿನವನಾಗಿದ್ದರೂ ಸೀತೆಗೆ ತನ್ನ ಓರಗೆಯವರಿಗಿಂತಲೂ ಅವನಲ್ಲಿಯೇ ಹೆಚ್ಚು ಮೈತ್ರಿ, ಪ್ರೀತಿ, ಸಲುಗೆ. ತಾನು ಊಟಕ್ಕೆ ಕೂರುವುದು ಹೂವಯ್ಯನ ಪಕ್ಕದಲ್ಲಿ; ಆಟವಾಡುವುದು ಹೂವಯ್ಯನ ಜೊತೆಯಲ್ಲಿ; ಓದು ವಾಗ ಹೂವಯ್ಯನೇ ಪಾಠ ಹೇಳಿಕೊಡಬೇಕು. 'ಹೂವಯ್ಯ ಭಾವ' ಎಂದರೆ ಸೀತೆಗೆ ಪಂಚಪ್ರಾಣ. ಒಂದು ಸಾರಿ ಮಕ್ಕಳೆಲ್ಲರೂ ಸೇರಿ ಸಂಸಾರದ ಆಟ ಆಡುತ್ತಿದ್ದಾಗ ಹೂವಯ್ಯನಿಗೆ ಸೀತೆಯನ್ನು ಕೊಟ್ಟು ವಿವಾಹವಾಗಬೇಕೆಂದು ನಿಶ್ಚಯವಾಯಿತು. ಧಾರೆ ಎರೆಯುವ ಅನುಕರಣವೂ ನಡೆದುಹೋಗಿ ಹೂವಯ್ಯ ಸೀತೆಗೆ ತಾಳಿ ಕಟ್ಟಿದ್ದನು. ದಂಪತಿಗಳಿಗೆ ಒಂದು ಬಟ್ಟೆಗೊಂಬೆಯ ಕೂಸೂ ಹುಟ್ಟಿತು! ಅಲ್ಲಿಂದ ಗಂಡಹೆಂಡಿರು ತೀರ್ಥಹಳ್ಳಿಯ ಎಳ್ಳಮಾಸೆಗೆ ಹೋದುದನ್ನೂ ಅಭಿನಯಿಸಿದರು. ಮೇಳಿಗೆ ತೇರಿಗೆ ಹೋಗಿ ಮಿಠಾಯಿ, ಮಂಡಕ್ಕಿ, ಕಡಲೆ, ಖರ್ಜೂರ, ಬತ್ತಾಸು, ಪೀಪಿ ಮೊದಲಾದ ಪದಾರ್ಥಗಳನ್ನು ವಿಕ್ರಯಮಾಡಿದ್ದನ್ನೂ ನಟಿಸಿದರು. ಒಂದು ಸಾರಿ ಗಂಡಹೆಂಡಿರ ಕಲಹವನ್ನು ಅಭಿನಯಿಸಿ ಹೂವಯ್ಯನು ಸೀತೆಯನ್ನು ಹೊಡೆಯುವಂತೆ ಮಾಡಿದನು. ಆಗ ಆಟದ ಭೂಮಿಕೆಯಲ್ಲಿ ಸೀತೆಯ ಅಣ್ಣನಾಗಿದ್ದ ರಾಮಯ್ಯನು ಅವಳನ್ನು ಬಿಡಿಸಿದನು. ಆ ದಿನವೆಲ್ಲಾ ಸೀತೆ ಹೂವಯ್ಯರು ನಿಜವಾಗಿಯೂ ಮದುವೆ ಯಾದವರಿಗಿಂತಲೂ ಹೆಚ್ಚಾಗಿ ಮೆರೆದು ನಲಿದರು. ಒಬ್ಬರನ್ನೊಬ್ಬರು ಅಗಲಲೇ ಇಲ್ಲ. ರಾತ್ರಿ ಮಲಗುವಾಗಲೂ ಕೂಡ ಸೀತೆ ಹೂವಯ್ಯನೊಡನೆಯೇ ಮಲಗುವೆನೆಂದು ಹಠಮಾಡಿದ್ದಳು. ಆಗ ಗೌರಮ್ಮನವರು ಎರಡು ಗುದ್ದು ಗುದ್ದಿ, ಒಳಗೆ ಎಳೆದುಕೊಂಡು ಹೋಗಿದ್ದರು. ಈ ವಿನೋದ ವಿವಾಹದ ಸುದ್ದಿ ಎಲ್ಲರ ಕಿವಿಗೂ ಬಿದ್ದು, ವಿನೋದಕ್ಕಾಗಿ ಎಲ್ಲರೂ ಅವರಿಬ್ಬರನ್ನೂ ದಂಪತಿಗಳೆಂದೇ ಕರೆಯತೊಡಗಿದ್ದರು. ಇನ್ನೊಂದು ಸಾರಿ ಭಾಗವತರಾಟದಲ್ಲಿ ನೋಡಿದ್ದ ಸ್ವಯಂವರಾನುಕರಣೆಯ ಲೀಲೆಯಲ್ಲಿ ಸೀತೆ ಹೂವಯ್ಯನಿಗೆ ತಾನೇ ತಯಾರು ಮಾಡಿದ ಹೂವಿನ ಮಾಲೆಯನ್ನು ಹಾಕಿ, ಅವನನ್ನು ಪತಿಯನ್ನಾಗಿ ವರಿಸಿದ್ದಳು.

ಮತ್ತೊಂದು ಸಾರಿ, ಆಗ ಸೀತೆಗೆ ಆರೇಳು ವಯಸ್ಸಿರಬಹುದು, ಹೂವಯ್ಯನಿಗೆ ಹನ್ನೊಂದು ಹನ್ನೆರಡಿರಬಹುದು, ಕಾನೂರಿಗೆ ಔತಣಕ್ಕೆ ಬಂದಿದ್ದ ಸೀತೆಮನೆ ಸಿಂಗಪ್ಪಗೌಡರು ಜೈಮಿನಿ ಭಾರತವನ್ನು ಓದಿ ಅರ್ಥ ಹೇಳುತ್ತಿದ್ದಾಗ ಹುಡುಗ ರೆಲ್ಲ ಅವರನ್ನು ಮುತ್ತಿದ್ದರು. ಸೀತೆ ಹೂವಯ್ಯನ ಹೆಗಲ ಮೇಲೆ ಕೈಯಿಟ್ಟು ಅವನನ್ನು ಅಪ್ಪಿಕೊಂಡಂತೆ ಕುಳಿತಿದ್ದಳು. ಕಥೆಯಲ್ಲಿ ದಂಪತಿಗಳ ಅನುರಾಗ ಪ್ರಸಂಗ ಬಂದಾಗ ಸಿಂಗಪ್ಪಗೌಡರು ಕುಳಿತವರಿಗೆಲ್ಲ ಸೀತೆ ಹೂವಯ್ಯರನ್ನು ತೋರಿಸಿ ಏನೇನೊ ಹಾಸ್ಯದ ಮಾತುಗಳನ್ನು ಹೇಳಲು, ಬಾಲಕ ಬಾಲಕಿ ಯರಿಬ್ಬರೂ ಅವಮಾನವಾದುದರಿಂದ ಅಳುತ್ತ ಒಬ್ಬರನ್ನೊಬ್ಬರು ಅಗಲಿ ದೂರ ದೂರ ಸರಿದು ಕುಳಿತಿದ್ದರು. ಗುಲಾಬಿ ಪೊದೆಯ ಬಳಿಯಲ್ಲಿ ನಿಂತಿದ್ದ ಸೀತೆಯ ಮನಸ್ಸಿನಲ್ಲಿ ಇಂತಹ ನೂರಾರು ಚಿತ್ರಗಳು ಸುಳಿದು ಅವಳಿಗೆ ಹರ್ಷ ವಾಯಿತು. ಅವುಗಳಲ್ಲಿ ಮತ್ತೆ ಕೆಲವು ಸನ್ನಿವೇಶಗಳನ್ನು ನೆನೆದು ತನ್ನೊಳಗೆ ತಾನೆ ನಾಚಿಕೊಂಡು ಮುಗುಳುನಗೆ ನಕ್ಕಳು. ಅವಳು ಅಲ್ಲಿದ್ದುದನ್ನು ಅರಿಯದೆ ಹಾರಿಬಂದು ಸಮೀಪದ ಒಂದು ಕೊಂಬೆಯಲ್ಲಿ ಕುಳಿತು ಉಲ್ಲಾಸದಿಂದ ಗಾನ ಲೋಲವಾಗಿದ್ದ ಒಂದು ಪಿಕಳಾರ ಹಕ್ಕಿಯೂ ಅದರ ದನಿಯೂ ಅವಳ ಕಣ್ಣಿಗಾಗಲಿ ಕಿವಿಗಾಗಲಿ ಬೀಳಲೇ ಇಲ್ಲ.

ಬಾಲ್ಯವು ಕಳೆದು ತಾರುಣ್ಯವು ಪ್ರಾಪ್ತವಾದಮೇಲೆ ಸೀತೆ ಹೂವಯ್ಯರ ಸಂಬಂಧವು ಲೋಕದ ದೃಷ್ಟಿಗೆ ದೂರ ದೂರವಾದಂತೆ ಕಾಣುತ್ತಿತ್ತು. ಆದರೆ ಅಂತರಂಗದಲ್ಲಿ ಅವರು ಹೆಚ್ಚು ಹೆಚ್ಚು ಸಮೀಪವಾಗುತ್ತಿದ್ದರು. ಆದರೂ ಅವರ ಸಂಬಂಧವು ಇನ್ನೂ ಯುವಕ ಯುವತಿಯರ 'ಬೇಟ' ವಾಗಿರಲಿಲ್ಲ; ಬಾಲಕ ಬಾಲಕಿಯರಲ್ಲಿರುವ ಮುಗ್ಧವಾದ 'ಬಾಲ್ಯ ಪ್ರಣಯ' ಮಾತ್ರವಾಗಿತ್ತು. ಈಗ ಅವರು ಒಬ್ಬರನ್ನೊಬ್ಬರು ಅಗಲಿದ್ದುದರಿಂದ ವಿರಹಯಾತನೆಯೂ ಇರಲಿಲ್ಲ; ಒಬ್ಬರನ್ನೊಬ್ಬರು ಅನವತರವೂ ನೆನೆಯುತ್ತಲೂ ಇರಲಿಲ್ಲ. ನಿನ್ನೆ ಸೀತೆಗೆ ಹೂವಯ್ಯನ ಆಲೋಚನೆಯೇ ಇರಲಿಲ್ಲ. ಈವೊತ್ತು ಚಿನ್ನಯ್ಯನಿಂದ ಸುದ್ದಿ ತಿಳಿದಮೇಲೆಯೇ ಆಕೆಯಲ್ಲಿ ಪೂರ್ವಸ್ಮೃತಿ ಎಚ್ಚತ್ತು, ಇಷ್ಟು ದಿನವೂ ಸುಪ್ತವಾಗಿದ್ದ ಸ್ನೇಹವು ಮತ್ತೆ ಪ್ರಬುದ್ಧವಾಗಿತ್ತು. ಹೂವಯ್ಯನ ಮನದಲ್ಲಿ ಅದೂ ಕೂಡ ಆಗಿರಲಿಲ್ಲ.

ಹಠಾತ್ತಾಗಿ ಸೀತೆ ಕಾಣುತ್ತಿದ್ದ ಹೊಂಗನಸಿನ ಬಣ್ಣದ ಗುಳ್ಳೆ ಬಿರಿದಂತಾಗಿ ಎಚ್ಚತ್ತು ನೋಡುತ್ತಾಳೆ: ಬಳಿಯಲ್ಲಿದ್ದ ಎತ್ತರವಾದ ಒಂದು ಅಡಕೆಯ ಮರದಿಂದ ಹಾಳೆಯೊಂದು ಕೆಳಗೆ ಬೀಳುತ್ತಿತ್ತು. ನೀಳವಾಗಿದ್ದ ಅದರ ಕಂದು ಬಣ್ಣದ ಸೋಗೆಯ ಗರಿಗಳು ಗಾಳಿಯಲ್ಲಿ ಥರಥರ ನಡುಗುತ್ತಿದ್ದುವು. ಅದು

ಕ್ಷಣಾರ್ಧದಲ್ಲಿಯೆ ಕೆಳಗಿದ್ದ ಒಂದು ಬಾಳೆಯ ಸಸಿಯ ಹೆಡಲಿಗೆ ತಾಗಿ, ಅದರ ಅಖಂಡ ಸ್ನಿಗ್ಧ ಕೋಮಲ ಶ್ಯಾಮಲವಾಗಿದ್ದ ಎಲೆಯನ್ನು ಸೀಳಿ, ನೆಲದ ಮೇಲಿದ್ದ ಮೇಲುಸೊಪ್ಪಿನ ಜಿಗ್ಗಿನ ಮೇಲೆ ದಢಾರ್ ಎಂದು ಶಬ್ದಮಾಡಿಕೊಂಡು ಬಿದ್ದಿತು. ಬಾಳೆಯ ಹೆಡಲು ಆಘಾತಕ್ಕೆ ತತ್ತರಿಸಿ ಮೇಲಕ್ಕೂ ಕೆಳಕ್ಕೂ ಉಯ್ಯಾಲೆಯಂತೆ ತೂಗಿತು. ಮಾಸು ಬಣ್ಣದ ಕಠಿನ ದೇಹ, ಮೇಘ ಚುಂಬಿತವಾದ ಉನ್ನತ ಶಿರ, ಶಿರದಲ್ಲಿ ಪೌರುಷಯುಕ್ತವಾಗಿ ಬೆಳೆದು ನಾಲ್ದೆಸೆಗೂ ಧನುಸ್ಸಿನಂತೆ ಕೆಳಗೆ ಬಾಗಿದ್ದ ಕಪ್ಪುಹಸುರಿನ ಹೆಡಲುಗಳು, ಆ ಹೆಡಲುಗಳ ಕೇಂದ್ರದಲ್ಲಿ ಹಸುರು ಈಟಿಯಂತೆ ಚೂಪಾಗಿ ನೆಟ್ಟನೆ ಗಗನಕ್ಕೆದುರಾಗಿ ನಿಂತಿದ್ದ ಅದರ ಸುಳಿ, ಹೆಡಲುಗಳ ಬುಡದಲ್ಲಿದ್ದ ಕಡುಹಸುರು ದಿಂಡಿಗೆದುರಾಗಿ ತಾಯಿಯ ಒಲ್ಮೆ ಹಸುಳೆಯ ಹೃದಯವನ್ನು ಆವರಿಸುವಂತೆ ಒಳಗಿದ್ದ ಮೃದುವಾದ ಹಿಂಗಾರವನ್ನು ಅಪ್ಪಿದ್ದ ಬಿಳಿ ಹಳದಿ ಬಣ್ಣದ ಹೊಂಬಾಳೆ — ಇವುಗಳಿಂದ ಅಲಂಕೃತವಾಗಿ ಧೀರವಾಗಿ ನಿಂತು ಹೂವಯ್ಯನನ್ನು ಸ್ಮರಣೆಗೆ ತರುತ್ತಿದ್ದ ಆ ಅಡಕೆಯ ಮರದ ಬುಡದಲ್ಲಿ ಬಾಳೆಯ ಸಸಿ ಸೀತೆಗೆ ತನ್ನನ್ನೆ ಜ್ಞಾಪಕಕ್ಕೆ ತರುವಂತಿತ್ತು. ಬಾಳೆಯ ಕಂದಿನ ಹೆಡಲು ತೂಗಿ ತೂಗಿ ಕ್ರಮೇಣ ನಿಶ್ಚಲವಾಯಿತು. ಅಣ್ಣನಿಗೆ ಹೇಳಿದ್ದಂತೆ ಸೀತೆ ಹೂ ಕುಯ್ಯಲಿಲ್ಲ. ವಸಂತದ ಮಂದಪವನನು ಉದ್ಯಾನದ ಕುಸುಮ ಕುಂಜಗಳಲ್ಲಿ ಲಲಿತ ಗಮನದಿಂದ ಸಂಚರಿಸುವಂತೆ ಅವಳು ಸ್ವಲ್ಪ ಉತ್ಕಂಠಿತ ಭಾವದಿಂದ ಬಣ್ಣದ ಸೀರೆಯ ನಿರಿ ಸದ್ದುಮಾಡಿ ಬಳುಕುವಂತೆ ತೇಲಿ ನಡೆದು ಮನೆಯ ಹೆಬ್ಬಾಗಿಲನ್ನು ಪ್ರವೇಶಿಸುತ್ತಿದ್ದಾಗ ಕೊಟ್ಟಿಗೆಯೆಡೆ ತಾಯಿದನ ಮೈ ನೆಕ್ಕುತ್ತಿದ್ದ ಎಳಗರುವೊಂದು ಸೀತೆಯನ್ನೆ ಎವೆಯಿಕ್ಕದೆ ನೋಡುತ್ತಿತ್ತು.

ಸೀತೆ ಕಾಲು ತೊಳೆದುಕೊಂಡು, ಹೂಗಳನ್ನು ತನ್ನ ಕೊಟ್ಟಡಿಯಲ್ಲಿಟ್ಟು ಅಡುಗೆಮನೆಗೆ ಹೋದಾಗ ಗೌರಮ್ಮನವರು ಹೋಳಿಗೆ ಮಾಡುವ ಸನ್ನಾಹ ದಲ್ಲಿದ್ದರು. ಚಿನ್ನಯ್ಯನು ತಿಂಡಿ ಪೂರೈಸಿ ಕಾಫಿ ಕುಡಿಯುತ್ತಿದ್ದವನು "ಹೂ ಕುಯ್ದಾಯ್ತೆ?" ಎಂದು ತಂಗಿಯ ಕಡೆಗೆ ವ್ಯಂಗ್ಯವಾಗಿ ನೋಡಿ ನಕ್ಕನು. ಸೀತೆ ಹುಬ್ಬು ಗಂಟುಹಾಕಿ ಮಾತಾಡದೆ ತಾಯಿಗೆ ಕೆಲಸದಲ್ಲಿ ನೆರವಾದಳು.

೫

## ಕಾನೂರು ಚಂದ್ರಯ್ಯಗೌಡರ ಮೂರನೆಯ ಹೆಂಡತಿ

ಕಾನೂರು ಚಂದ್ರಯ್ಯಗೌಡರ ಮಂಗಳೂರು ಹೆಂಚಿನ ದೊಡ್ಡಮನೆ ಕಾಡು ಕಿಕ್ಕಿರಿದ ಬೆಟ್ಟಗುಡ್ಡಗಳ ತಪ್ಪಲಿನಲ್ಲಿ, ಮಹಾ ವಟವೃಕ್ಷದ ಬುಡದಲ್ಲಿ ಎದ್ದಿರುವ ಹುತ್ತದ ನೆನಪು ತರುವಂತೆ ಏಕಾಂತವಾಗಿತ್ತು. ಮನೆಯ ಪೂರ್ವೋತ್ತರ ದಿಕ್ಕುಗಳಲ್ಲಂತೂ ಕಾಡುಬೆಟ್ಟಗಳ ಹೆಗ್ಗೋಡೆ ಭಯಂಕರ ಸಮೀಪವಾಗಿ ಮೇಲೆದ್ದಿತ್ತು. ಪಶ್ಚಿಮ ದಕ್ಷಿಣ ದಿಕ್ಕುಗಳಲ್ಲಿ ಅವರ ಗದ್ದೆ ತೋಟಗಳೂ, ಒಕ್ಕಲು ಮತ್ತು ಆಳುಗಳ ಹುಲ್ಲುಮನೆ ಮತ್ತು ಬಿಡಾರಗಳೂ, ಕಣ, ಕೊಟ್ಟಿಗೆ ಹಟ್ಟಿಗಳೂ ಇದ್ದುವು.

ಮನೆ ಹಳೆಯ ಕಾಲದ್ದು. ರಚನೆಯಲ್ಲಿ ಎಲ್ಲೆಲ್ಲಿ ನೋಡಿದರೂ ಭೀಮತೆ ಪ್ರಧಾನವಾಗಿತ್ತು. ಗೋಡೆ ಕಂಭಗಳಿಂದ ಹಿಡಿದು ತೊಲೆ ಪಕಾಸಿ ರೀಪುಗಳ ವರೆಗೂ ಸ್ಥೂಲತೆ ತೋರುತ್ತಿತ್ತು. ಮನೆಗೆ ಹೊದಿಸಿದ್ದ ಮಂಗಳೂರು ಹೆಂಚು ಗಳು ಮಳೆ ಬಿಸಿಲುಗಳಲ್ಲಿ ಹಾವಸೆ ಹಬ್ಬಿ, ಒಣಗಿ, ತಮಗೆ ಸಹಜವಾಗಿದ್ದ ಮಣ್ಣಿನ ಕೆಂಬಣ್ಣವನ್ನು ತೊರೆದು ಕಪ್ಪಾಗಿದ್ದುವು. ಅಲ್ಲಲ್ಲಿ, ಮುಂಗಾರು ಗಳಲ್ಲಿ ಬಿದ್ದ ದೊಡ್ಡ ದೊಡ್ಡ ಆಲಿಕಲ್ಲುಗಳಿಂದ ಬಿರುಕು ಬಿಟ್ಟು, ಸೋರುತ್ತಿದ್ದ ಹೆಂಚುಗಳನ್ನು ತೆಗೆದು ಹೊಸ ಹೆಂಚುಗಳನ್ನು ಹಾಕಿದ್ದುದರಿಂದ ಸರ್ವ ಸಾಮಾನ್ಯವಾದ ಪ್ರಾಚೀನತೆಯ ನಡುವೆ ಅಪೂರ್ವವೂ ವಿರಳವೂ ಆಗಿರುವ ನವೀನತೆ ತಲೆಹಾಕಿದಂತಿತ್ತು. ಮನೆಗೆ ಉಪಯೋಗಿಸಿದ್ದ ಮರಮುಟ್ಟುಗಳೆಲ್ಲ ಅನೇಕ ವರ್ಷಗಳಿಂದ ಹೊಗೆ ಹಿಡಿದು ತಾರೆಣ್ಣೆ ಬಳಿದಂತೆ ಕರ್ರಗಾಗಿದ್ದುವು. ಗೋಡೆಗಳಲ್ಲಿ ಒಂದೆರಡು ಎಡೆ ಹುತ್ತಗಳು ದೊಡ್ಡದಾಗಿ ಬೆಳೆದಿದ್ದುವು. ಆ ಹುತ್ತ ಗಳಿಗೆ ಪೂಜಾ ಸಮಯದಲ್ಲಿ ಬಳಿದಿದ್ದ ಕೆಂಪು ಬಿಳಿ ನಾಮಗಳು ಚಿತ್ರವಿಚಿತ್ರ ವಾಗಿದ್ದುವು. ಪ್ರಾಕಾರದ ನಡುವೆ ಇದ್ದ ಅಂಗಳದಲ್ಲಿ ಕಗ್ಗಲ್ಲಿನಿಂದ ವಿರಚಿಸಿದ್ದ ಒಂದು ದೊಡ್ಡ ತುಲಸೀ ಪೀಠವು ಶಿರದಲ್ಲಿ ಪುಷ್ಟವಾಗಿ ಬೆಳೆದಿದ್ದ ಒಂದು ತುಲಸಿಯ ಗಿಡವನ್ನು ಹೊತ್ತು 'ಅಂಗಳದ ದೇವರಾಗಿ' ಕುಳಿತಿತ್ತು. ಅಂಗ ಳದ ಮೂಲೆಯಲ್ಲಿ ಅಡಕೆ ಒಲೆ; ಪಕ್ಕದಲ್ಲಿ ಮಣ್ಣಾದ ನೇಗಿಲು. ಜಗಲಿಯ ಮೇಲೆ ಒಂದು ಹೆಗ್ಗಡಿಯಾರದ ಸುತ್ತಲೂ ಕೆಲವು ತಿರುಪತಿಯ ಬಣ್ಣದ ಚಿತ್ರ ಗಳಿದ್ದುವು. ಜೊತೆಗೆ ರವಿವರ್ಮನ ಬಣ್ಣದ ದೇವತೆಗಳೂ ಕುಳಿತಿದ್ದರು. ಒಬ್ಬಿಬ್ಬರು ದೇಶಭಕ್ತರ ಪಟಗಳೂ ಭಾರತಾಂಬೆಯ ಚಿತ್ರಪಟವೂ ಅಲ್ಲಿದ್ದುದು,

ಸರ್ವವ್ಯಾಪಿಯಾಗುತ್ತಿದ್ದ ರಾಷ್ಟ್ರೀಯ ಮಹಾಸಭೆಯ ಪ್ರಭಾವವು ತನ್ನ ಕ್ಷೇಮಕರವಾದ ಆಶೀರ್ವಾದ ಹಸ್ತವನ್ನು ಆ ಮಲೆನಾಡಿನ ಮೂಲೆಗೂ ಚಾಚಿತ್ತು ಎಂಬುದಕ್ಕೆ ಸ್ಪಷ್ಟವಾದ ಸಾಕ್ಷಿಯಾಗಿ, ಆ ಮನೆಯಲ್ಲಿ ಪ್ರಾಚೀನ ನವೀನಗಳ ಸ್ನೇಹವೋ ಸಮರವೋ ನಡೆಯತೊಡಗಿದ್ದಂತೆ ತೋರುತ್ತಿತ್ತು. ಇದು ಆ ಮನೆಯ ಸನ್ನಿವೇಶ ಮತ್ತು ರೂಪಲಕ್ಷಣಗಳ ಸ್ಥಾವರ ಸ್ಥಿತಿಯ ಸ್ಥೂಲರೇಖಾ ಚಿತ್ರ.

ಅದರ ಜಂಗಮಸ್ಥಿತಿಯೂ ಸಾಧಾರಣವಾಗಿ ಕುತೂಹಲಕಾರಿಯಾಗಿಯೇ ಇರುತ್ತಿತ್ತು. ಏಳೆಂಟು ನಾಯಿಗಳು. ಕೆಲವು ಚೀನಿ, ಕೆಲವು ಕಂತ್ರಿ. ಕೆಲವು ಬಿಳಿ, ಕೆಲವು ಕಪ್ಪು, ಕೆಲವು ಬಣ್ಣಬಣ್ಣ. ಕೆಲವು ಮಲಗಿದ್ದರೆ, ಕೆಲವು ಒಳಗೆ ಹೊರಗೆ ಸುತ್ತುವುದು. ಆಗಾಗ ಗೌಡರ ಹತ್ತಿರಕ್ಕೆ ಕಾರ್ಯಾರ್ಥವಾಗಿ, ಬಿಳಿ ಬಟ್ಟೆಯವರೂ ಆಳುಕಾಳುಗಳೂ ಬಂದು ಹೋಗುತ್ತಿರುವುದು. ಹಿತ್ತಲು ಕಡೆಯ ತಮ್ಮ ಪ್ರಪಂಚವನ್ನು ಅತಿಕ್ರಮಿಸಿ ಬಂದ ಕೋಳಿಗಳು — ಹುಂಜ, ಹೇಂಟೆ, ಮರಿ ಇತ್ಯಾದಿ — ಅಲ್ಲಲ್ಲಿ ಸುತ್ತಿ ಮೇಯುತ್ತಿದ್ದು, ಅನಿವಾರ್ಯವಾಗಿ ಅಸಹ್ಯಮಾಡಿ, ಯಾರಾದರೂ ಮನುಷ್ಯರಾಗಲಿ ನಾಯಿಗಳಾಗಲಿ ಅಟ್ಟಿದಾಗ ಮಾತ್ರವೇ ಕುಕ್ಕುಟನಾದದೊಡನೆ ಹೊರಗೆ ಧಾವಿಸುವುದು. ಮನೆಗೆ ಹತ್ತಿಕೊಂಡೇ ಇದ್ದ ಕರೆಯುವ ಕೊಟ್ಟಿಗೆಯಿಂದ ವಿಶ್ರಂಖಲವಾದ ದನಕರುಗಳು ಒಮ್ಮೊಮ್ಮೆ, ಸ್ಪಷ್ಟವಾದ ತಮ್ಮ ಖುರಪುಟ ಧ್ವನಿಗಳಿಂದ ಅಲ್ಲಿದ್ದವರಿಗೆ ತಮ್ಮನ್ನು ಅಟ್ಟುವಂತೆ ಎಚ್ಚರಿಕೆ ಹೇಳುತ್ತ ಬರುವುದು; ಬತ್ತ ಮಿದಿದು ಸದ್ದು ಮಾಡುವುದು. ಇತ್ಯಾದಿ, ಇತ್ಯಾದಿ, ಇತ್ಯಾದಿ.

ಇಷ್ಟೆಲ್ಲವೂ ಆ ಮನೆಯ 'ಮುಂಚೆಕಡೆ'ಯ ಚಿತ್ರ. 'ಹಿತ್ತಲುಕಡೆ'ಯ ಚಿತ್ರವೇ ಬೇರೆ. ಅಲ್ಲಿ, ಸಂದರ್ಭ ಸಿಕ್ಕಿದಾಗಲೆಲ್ಲ ಕ್ರಮಾಕ್ರಮಗಳನ್ನು ಒಂದಿನಿತೂ ಗಣನೆಗೆ ತಾರದೆ ತಮ್ಮ ಉದರ ಪೋಷಣೆ ಮಾಡಿಕೊಳ್ಳುತ್ತ, ಡೊಳ್ಳೇರಿ ಕಾಲು ಚಾಚಿಕೊಂಡು ಬಿದ್ದಿರುವ ಕುನ್ನಿ ಮರಿಗಳು! ತನ್ನ ಹೂ ಮರಿಗಳೊಡನೆ ನೆಲವನ್ನು ಕೆದರಿ ಗಲೀಜು ಮಾಡುತ್ತಿರುವ ಹೇಂಟೆ. ಮೂಲೆಯಲ್ಲಿ ಸಿಕ್ಕದ ಮೇಲೆ ದೊಡ್ಡ ಬುಟ್ಟಿಯಲ್ಲಿ ನೆಲ್ಲುಹುಲ್ಲಿನ ಮೇಲಿರುವ ಮೊಟ್ಟೆಗಳನ್ನು ರೆಕ್ಕೆಗಳಲ್ಲಿ ಅಪ್ಪಿಕೊಂಡು ಕಾವು ಕೂತಿರುವ ಕುಕ್ಕುಟ ಗರ್ಭಿಣಿ! ಒಂದೆಡೆ ದೊಡ್ಡದಾದ ಮುರುವಿನ ಒಲೆ. ಅಲ್ಲಿಯೇ ಮೇಲುಗಡೆ ನೇತಾಡುತ್ತಿರುವ ತಟ್ಟೆಯಲ್ಲಿ ಸಂಡಿಗೆ ಮಾಡಲು ಒಣಗಲಿಟ್ಟಿರುವ ಮಾಂಸದ ದೊಡ್ಡದೊಡ್ಡ ತುಂಡುಗಳು. ಅಟ್ಟದ ಮೇಲೆ ಕರಿಹಿಡಿದ ಪೊರಕೆಗಳ ದೊಡ್ಡ ಕಟ್ಟು. ಒಂದು ಕಡೆ ಗೋಡೆಗೆ ಆನಿಸಿ ನಿಲ್ಲಿಸಿರುವ ಒಂದೆರಡು ಒನಕೆಗಳು. ಬಳಿಯಲ್ಲಿ ಕಲ್ಲಿನ ಒರಳು ಮತ್ತು

ಕಡೆಗುಂಡು. ಒಂದು ಬೀಸುವ ಕಲ್ಲು; ಮೆಟ್ಟುಗತ್ತಿ; ನೀರು ತುಂಬಿದ ತಾಮ್ರದ ಹಂಡೆ. ಸಂದುಗೊಂದುಗಳಲ್ಲಿ ಕಿಕ್ಕಿರಿದಿರುವ ಜೇಡರ ಬಲೆಗಳ ತುಮುಲ ಜಟಿಲ ವಿನ್ಯಾಸ! ಮುಡಿದು ಬಿಸಾಡಿರುವ ಒಣಗಿದ ಹೂಮಾಲೆ. ತಲೆ ಬಾಚಿ ಎಸೆದಿರುವ ಕೂದಲಿನ ಕರಿಯ ಮುದ್ದೆ. ತಾಂಬೂಲದ ಕೆಂಪಾದ ಉಗುಳು. ಇವುಗಳಿಗೆಲ್ಲ ಮಕುಟಪ್ರಾಯವಾಗಿ ಮೂತ್ರದ ವಾಸನೆ, ಇತ್ಯಾದಿ ಇತ್ಯಾದಿ, ಇತ್ಯಾದಿ!

ಆ ಮನೆಯಲ್ಲಿ ಮೂವತ್ತು ನಾಲ್ವತ್ತು ಮಂದಿ ನಿರಾತಂಕವಾಗಿ ವಾಸಮಾಡ ಬಹುದಾಗಿತ್ತು. ಈ ಕಥೆಯ ಕಾಲಕ್ಕೆ ಪೂರ್ವದಲ್ಲಿ ಗಂಡಸರು, ಹೆಂಗಸರು, ಮಕ್ಕಳು ಎಲ್ಲಾ ಇಪ್ಪತ್ತೈದು ಮೂವತ್ತು ಮಂದಿ ಮನೆಯವರೂ ಹತ್ತು ಹದಿನೈದು ಜನ ಸೇವಕರೂ ಒಟ್ಟು ನಾಲ್ವತ್ತು ನಾಲ್ವತ್ತೈದು ಜನಗಳ ಮಟ್ಟಿಗೆ ಮನೆಯನ್ನೆಲ್ಲ ತುಂಬಿರುತ್ತಿದ್ದರಂತೆ: ಒಟ್ಟು ಕುಟುಂಬವಾಗಿದ್ದುದರಿಂದ ಹಾಗಿದ್ದುದರಲ್ಲೇನೂ ಆಶ್ಚರ್ಯವಿಲ್ಲ. ಆದರೆ ಕೆಲವು ವರ್ಷಗಳ ಹಿಂದೆ ಮನೆಗೆ ಮಾರಿಯಮ್ಮನು — ಸಿಡುಬು ರೋಗ — ಕಾಲಿಟ್ಟು ಅನೇಕರನ್ನು ಆಹುತಿ ತೆಗೆದುಕೊಂಡಿದ್ದರಿಂದ ಈಗ ಆ ಕುಟುಂಬದಲ್ಲಿ ಏಳು ಜನರು ಮಾತ್ರ ಇದ್ದರು. ಅದರಲ್ಲಿಯೂ ಹೂವಯ್ಯ ರಾಮಯ್ಯರು ಓದಲು ಹೋಗಿದ್ದು ದರಿಂದ ತತ್ಕಾಲದಲ್ಲಿ, ಆಳುಗಳನ್ನು ಬಿಟ್ಟರೆ, ಮನೆಯವರಾಗಿದ್ದವರು ಐದೇ ಮಂದಿ. ಯಜಮಾನರಾಗಿದ್ದ ಚಂದ್ರಯ್ಯಗೌಡರು; ಅವರ ಮೂರನೆಯ ಹೆಂಡತಿ ಸುಬ್ಬಮ್ಮ; ಅವರ ಎರಡನೆಯ ಹೆಂಡತಿಯ ಮಕ್ಕಳಾದ ಪುಟ್ಟಮ್ಮ, ವಾಸು; ಚಂದ್ರಯ್ಯಗೌಡರ ಗತಿಸಿದ ಅಣ್ಣನ ಸಹಧರ್ಮಿಣಿಯೂ ಹೂವಯ್ಯನ ಮಾತೃವೂ ಆದ ನಾಗಮ್ಮನವರು.

ಚಂದ್ರಯ್ಯಗೌಡರಿಗೆ ಮೊದಲು ಅವರ ಅಣ್ಣ ಸುಬ್ಬಯ್ಯಗೌಡರು ಮನೆಗೆ ಯಜಮಾನರಾಗಿದ್ದರು. ಸುಬ್ಬಯ್ಯಗೌಡರು ಸಾಯುವಾಗ ಅವರಿಗೂ ಚಂದ್ರಯ್ಯಗೌಡರಿಗೂ ಮನಸ್ಸು ಸರಿಯಿರಲಿಲ್ಲ. ನಾಗಮ್ಮನವರು ತಮ್ಮ ಗಂಡನ ಸಾವಿಗೆ ಚಂದ್ರಯ್ಯಗೌಡರೇ ಕಾರಣವೆಂದು ಎಲ್ಲರೊಂದಿಗೂ ಸಾರು ತ್ತಿದ್ದರು. ತನ್ನ ಗಂಡನ ಮೇಲೆ 'ದೆಯ್ಯಮಾಡಿ' ಕೊಂದರೆಂದು ಆಕೆ ನಂಬಿ ಬಿಟ್ಟಿದ್ದರು. ವಾಸ್ತವಾಂಶ, ಅವರು ರೇಷ್ಮೆ ಕಾಯಿಲೆಯಿಂದ ಮೃತರಾಗಿದ್ದರು. ಚಂದ್ರಯ್ಯಗೌಡರೂ ನಾಗಮ್ಮನವರ ಮಾತಿನಲ್ಲಿ ಇತರರಿಗೆ ನಂಬುಗೆಯಾಗುವಂತೆ ವರ್ತಿಸುತ್ತಿದ್ದರು. ಆಕೆಯ ವಿಷಯದಲ್ಲಿ ದ್ವೇಷದಿಂದಲ್ಲದಿದ್ದರೂ ಅನಾದರ ದಿಂದ ಇರುತ್ತಿದ್ದರು. ನೊಂದೆದೆಯ ನಾಗಮ್ಮನವರಿಗೆ ಅವರ ಒಂದೊಂದು ಅನಾದರಣೆಯೂ ಭಯಂಕರ ವೈರದಂತೆ ತೋರುತ್ತಿತ್ತು. ಹೂವಯ್ಯನಿಗೆ

ಇದೆಲ್ಲ ಗೊತ್ತಿದ್ದರೂ ಆತನು ಭಾವಜೀವಿಯಾಗಿದ್ದುದರಿಂದಲೂ, ಆತನ ಗಮನ ವೆಲ್ಲ ವಿದ್ಯಾರ್ಜನೆಯ ಕಡೆಗಿದ್ದುದರಿಂದಲೂ, ರಾಮಯ್ಯನ ವಿಶ್ವಾಸದ ಪ್ರಭಾವ ದಿಂದಲೂ, ಯಾವ ಇತ್ಯರ್ಥದ ಕಾರ್ಯಕ್ಕೂ ಕೈಹಾಕದೆ ಸುಮ್ಮನಿದ್ದನು.

ರಾಮಯ್ಯನ ತಾಯಿ — ಚಂದ್ರಯ್ಯಗೌಡರ ಪ್ರಥಮ ಪತ್ನಿ—ತೀರಿಕೊಂಡಾಗ ಅವರು ದುಃಖಾತಿರೇಕದಿಂದ ಆತ್ಮಹತ್ಯ ಮಾಡಿಕೊಳ್ಳಲೋಸುಗ ಬಂದೂಕನ್ನು ಕೈಗೆ ತೆಗೆದುಕೊಂಡಿದ್ದರೂ ಒಂದು ವರ್ಷದ ಒಳಗಾಗಿಯೆ ಅವರಿಗೆ ಎರಡನೆ ವಿವಾಹ ನಡೆದುಹೋಗಿತ್ತು. ಎರಡನೆ ಹೆಂಡತಿ ಪುಟ್ಟಮ್ಮ ವಾಸು ಇಬ್ಬರನ್ನು ಹೆತ್ತು, ಮೂರನೆಯ ಹೆರಿಗೆಯಲ್ಲಿ ಶಿಶು ಸಮೇತ ದಿವಂಗತರಾದರು. ಅವರು ತೀರಿಕೊಂಡು ಇನ್ನೂ ಒಂದು ವರ್ಷ ಕಳೆಯುವುದರೊಳಗೆ ಚಂದ್ರಯ್ಯಗೌಡರಿಗೆ ಮೂರನೆಯ ಮದುವೆಯ ಆವಶ್ಯಕತೆಯೂ ತೋರಿ ಎಲ್ಲರನ್ನೂ ಆಶ್ಚರ್ಯ ಗೊಳಿಸಿದರು. ಅವರು ವಿಧುರರಾದ ಕೆಲವು ತಿಂಗಳೊಳಗೆ ಅವರ ಮೇಲೆ ಅಪವಾದ ಹುಟ್ಟಿತ್ತು. ಅವರ ಸೇರೆಗಾರರಾಗಿದ್ದ ರಂಗಪ್ಪಸೆಟ್ಟರ ಕೈಕೆಳಗೆ ಕೆಲಸ ಮಾಡುತ್ತಿದ್ದ ಒಬ್ಬ ದಕ್ಷಿಣ ಕನ್ನಡ ಜಿಲ್ಲೆಯ ಹೆಂಗಸಿನ ಪರವಾಗಿ ಅವರು ಪ್ರದರ್ಶಿಸಿದ ಅನನ್ಯ ಸಾಧಾರಣವಾದ ಅನುರಾಗವೆ ಅಪವಾದಕ್ಕೆ ಕಾರಣ ವಾಗಿತ್ತು. ಚಂದ್ರಯ್ಯಗೌಡರು ದೃಢಕಾಯರಾಗಿ ಶ್ರೀಮಂತರಾಗಿದ್ದರೂ ನಡುವಯಸ್ಸು ಮೀರಿದ್ದುದರಿಂದಲೂ ಮೂರು ಮಕ್ಕಳ ತಂದೆಯಾಗಿದ್ದುದ ರಿಂದಲೂ, ಸುಸಂಸ್ಕೃತರಾದ ಶ್ರೀಮಂತರೆಲ್ಲರೂ ಅವರಿಗೆ ಹೆಣ್ಣು ಕೊಡಲು ಹಿಂಜರಿದರು. ಗೌಡರು ಅಪ್ರತಿಭರಾಗದೆ ನೆಲ್ಲುಹಳ್ಳಿಗೆ ಹೋಗಿ ಹೆಣ್ಣು ಕೇಳಿದರು. ಅಸಂಸ್ಕೃತರೂ ಒರಟು ಜೀವಿಗಳೂ ಬಡವರೂ ಆಗಿದ್ದ ನೆಲ್ಲುಹಳ್ಳಿ ಯವರು ಹಿಗ್ಗಿ ಮರುಮಾತಾಡದೆ ಹೆಣ್ಣು ಕೊಡಲು ಒಪ್ಪಿದರು. ಆ ವಿಚಾರ ತಿಳಿದ ಕೂಡಲೆ ಮುತ್ತಳ್ಳಿ ಶಾಮಯ್ಯಗೌಡರೇ ಮೊದಲಾದ ಹಿತಚಿಂತಕರೂ ಬಂಧುಗಳೂ ಚಂದ್ರಯ್ಯಗೌಡರನ್ನು ಆ ಸಾಹಸದಿಂದ ಪರಾಙ್ಮುಖಗೊಳಿಸಲು ಪ್ರಯತ್ನಿಸಿದರು. ಆ ಹೆಣ್ಣನ್ನು ತರುವುದು ನಿಮಗೆ ಯೋಗ್ಯವಲ್ಲ ಎಂದರು. ಪುಟ್ಟಮ್ಮ, ವಾಸು ಇಬ್ಬರೂ ತಮ್ಮ ದೊಡ್ಡಮ್ಮನಿಂದ ಎಲ್ಲ ವಿಷಯಗಳನ್ನೂ ಅರಿತು ಕಣ್ಣೀರು ಕರೆದರು. ಗೌಡರಮೇಲೆ ದ್ವೇಷವಿದ್ದ ನಾಗಮ್ಮನವರಿಗೂ ಕನಿಕರವುಂಟಾಯಿತು. ಏನೆಂದರೂ ಗೌಡರ ನವದಾಂಪತ್ಯ ಪ್ರೇಮವು ಮಾತ್ರ ಒಂದಿನಿತೂ ಕುಗ್ಗಲಿಲ್ಲ. ವಿವಾಹವೂ ನಿಶ್ಚಯವಾಯಿತು. ಮೈಸೂರಿನಲ್ಲಿದ್ದ ಹೂವಯ್ಯ ರಾಮಯ್ಯರಿಗೆ ವಿಷಯವೇನೂ ಗೊತ್ತಾಗಲಿಲ್ಲ. ಗೌಡರ ಇಷ್ಟದ ಪ್ರಕಾರ ವಿವಾಹ ಮಹೋತ್ಸವಕ್ಕೆ ಅವರಿಬ್ಬರನ್ನು ಆಹ್ವಾನಿಸಲೂ ಇಲ್ಲ. ಆದಕಾರಣ ಗೌಡರ ತೃತೀಯ ವಿವಾಹದ ವಿಚಾರದಲ್ಲಿ ಅವರಲ್ಲಿ ಸಂಪೂರ್ಣ ಅಂಧಕಾರವಿತ್ತು.

ಅಂತೂ ಸುಬ್ಬಮ್ಮನು ಚಂದ್ರಯ್ಯಗೌಡರ ಧರ್ಮಪತ್ನಿಯಾಗಿ ಕಾನೂರಿಗೆ ಬಂದಳು.

ಸುಬ್ಬಮ್ಮ ಹಿಂದೆ ಒಂದೆರಡು ಸಾರಿ ವಿವಾಹ ಮಹೋತ್ಸವಗಳಿಗೆ ಹೋಗಿದ್ದಾಗ ನೆರೆದಿದ್ದ ಗೃಹಸ್ಥರ ಸಭೆಯಲ್ಲಿ ಹೂವಯ್ಯನ ತೇಜೋಮೂರ್ತಿಯನ್ನು ನೋಡಿದ್ದಳು. ನೆರೆದಿದ್ದ ಸ್ತ್ರೀಯರು ಅವನ ವಿಚಾರವಾಗಿ ಆಡಿಕೊಳ್ಳುತ್ತಿದ್ದ ಪ್ರಶಂಸಾತ್ಮಕವಾದ ಮಾತುಗಳನ್ನೂ ಕೇಳಿದ್ದಳು. ಹುಡುಗಿಯರು ಚೆಲುವರಾದ ಹುಡುಗರನ್ನು ಕಂಡಾಗ ಏನೇನು ಭಾವಿಸುತ್ತಾರೊ, ಊಹಿಸುತ್ತಾರೊ ಅಥವಾ ಆಶಿಸುತ್ತಾರೊ ಅದನ್ನೆಲ್ಲವನ್ನೂ ಭಾವಿಸಿದ್ದಳು; ಊಹಿಸಿದ್ದಳು; ಆಶಿಸುತ್ತಿದ್ದಳು. ಆದರೆ ತನ್ನ ಭಾವನೆ ಊಹನೆ ಆಸೆಗಳೆಲ್ಲ ಬರಿಯ ಹಗಲುಗನಸುಗಳೆಂಬುದೂ ಆಕೆಗೆ ಚೆನ್ನಾಗಿ ತಿಳಿದಿತ್ತು. ನೈಶಾಕಾಶದ ಬಹುದೂರ ಪ್ರಾಂತದಲ್ಲಿ ಶಾಶ್ವತ ಜ್ಯೋತಿಯಿಂದ ತಳತಳಿಸುವ ತಾರೆಗೆ ಅಳುಪುವ ಮಣ್ಣಿನ ಹಣತೆಯಾಗಿದ್ದಳವಳು. ಉರಿಯುವ ಸೊಡರಿಲ್ಲದ ಮಣ್ಣಿನ ಹಣತೆ ಆ ದೂರದ ತಾರಗೆಯೇ ತನ್ನೆದೆಯಲ್ಲುರಿವ ಸೊಡರಾಗಬೇಕೆಂದು ಬಯಸಿದರೆ ಅದು ಅಪ್ರಾಪ್ಯವೇ ಹೊರತು ಅಪರಾಧವಲ್ಲ. ಕಾನೂರಿನ ಚಂದ್ರಯ್ಯಗೌಡರು ತಮ್ಮ ಮನೆಗೆ ಹೆಣ್ಣು ಕೇಳಲು ಬಂದಿದ್ದಾರೆ ಎಂಬ ಸುದ್ದಿ ಆಕೆಯ ಕಿವಿಗೆ ಬಿದ್ದ ಕೂಡಲೆ ಅಘಟನ ಘಟನವಾದಂತೆ ಆಕೆಗೆ ದಿಗ್ಭ್ರಮೆಯಾದರೂ, ನಿಲುಕದ ನಕ್ಷತ್ರವು ಹಸ್ತಗತ ವಾಗುತ್ತದೆಂದು ಆನಂದ ಸಂಭ್ರಮ ಸ್ರೋತವಾಗಿದ್ದಳು. ಆದರೆ ನಿಜವಾದ ಸಂಗತಿ ತಿಳಿದ ಮೇಲೆ ಆಕೆ ಹತಾಶೆಯಾದರೂ ಹೆಚ್ಚೇನೂ ವ್ಯಸನಪಡಲಿಲ್ಲ. ಸಾಧಾರಣ ಜೀವನಕ್ರಮದಂತೆ ಆಕೆ ಯಾವನಾದರೊಬ್ಬ ಬಡ ರೈತನ ಕೈಹಿಡಿದು ದುಡಿಮೆಯಿಂದ ಜೀವನಯಾಪನೆ ಮಾಡಬೇಕಾಗಿತ್ತು. ಕಾನೂರಿನಂತಹ ಒಂದು ದೊಡ್ಡಮನೆಗೆ ಯಾಜಮಾನರಾಗಿ ಗಣ್ಯರಾಗಿದ್ದ ಚಂದ್ರಯ್ಯಗೌಡರ ಕೈಹಿಡಿಯುವುದೂ ಹೆಗ್ಗಡಿತಿಯಾಗುವುದೂ ಒಂದು ಮಹಾ ಸುಕೃತವೆಂದೇ ಭಾವಿಸಿ ಸಂತುಷ್ಟಳಾದಳು. ಕುಶಲಹೃದಯರಾದ ತರಳೆಯರಿಗಾದರೆ ತಾವು ಒಲಿದವನನ್ನುಳಿದು ಬೇರೆಯವನನ್ನು ಮದುವೆಯಾಗುವುದೂ ವಿಧುರ ವಿವಾಹವೂ ಎದೆಬಿರಿಯುವ ಮಹಾಸಂಕಟಗಳಾಗುತ್ತವೆ. ಆದರೆ ಸುಬ್ಬಮ್ಮನ ಬಾಳಿನಲ್ಲಿ ಅಂತಹ ಕುಶಲತೆಗೆ ಅವಕಾಶವಾಗಲಿ ತಾವಾಗಲಿ ಸ್ವಲ್ಪವೂ ಇರಲಿಲ್ಲ. ಆದ್ದರಿಂದ ಆಕೆ ಸಂಭ್ರಮದಿಂದಲೆ ಚಂದ್ರಯ್ಯಗೌಡರ ತೃತೀಯ ವಧುವಾಗಿ ಕಾನೂರಿಗೆ ಬಂದಿದ್ದಳು.

ದಾರಿದ್ರ್ಯದಲ್ಲಿ ಹುಟ್ಟಿ ಬೆಳೆದು, ಅಸಂಸ್ಕೃತರಿಂದ ಪೋಷಿತವಾಗಿ, ಅವರ ನಡೆ ನುಡಿ ಆಚಾರ ವ್ಯವಹಾರ ಶೀಲಗಳನ್ನು ಕಲಿತ ಸುಬ್ಬಮ್ಮನಲ್ಲಿ ಸುಸಂಸ್ಕೃತ ಸ್ತ್ರೀ

ಸಹಜವಾದ ಔದಾರ್ಯ ಗಾಂಭೀರ್ಯ ನಯವಿನಯ ಸಂಯಮ ಸಂಚಲನಗಳು ಒಂದಿನಿತೂ ಇರಲಿಲ್ಲ. ಆದಕಾರಣ ಅದುವರೆಗೂ ಅವಕಾಶ ಸಿಕ್ಕದೆ ಸುಪ್ತವಾಗಿದ್ದ ಅಹಂಕಾರ, ಛಲ, ದರ್ಪ, ಸ್ವಾರ್ಥಪರತೆ, ದುರಭಿಮಾನ ಮೊದಲಾದ ಕಾಡುಭಾವಗಳು ಆಕೆ ಯಜಮಾನರ ಪತ್ನಿಯಾಗಿ ಕಾನೂರಿಗೆ ಹೆಗ್ಗಡಿತಿಯಾದ ಕೂಡಲೆ ಭಯಾನಕವಾಗಿ ಹೆಡೆಯೆತ್ತಿ ನಿಂತುವು. ಆಕೆ ಎಲ್ಲದರಲ್ಲಿಯೂ ಎಲ್ಲರ ಮೇಲೆಯೂ ನಿರ್ದಾಕ್ಷಿಣ್ಯವಾಗಿ ಹುಕುಂ ಚಲಾಯಿಸತೊಡಗಿದಳು. ಪ್ರತಿಯೊಂದರಲ್ಲಿಯೂ ಸಣ್ಣ ಬುದ್ಧಿಯೇ ಪ್ರಕಾಶಿತವಾಯಿತು. ಅದು ಎಷ್ಟು ಅಧೋಗತಿಗೆ ಇಳಿಯಿತೆಂದರೆ, ಹುಟ್ಟಿದಂದಿನಿಂದಲೂ ಸಾಬೂನಿನ ಹೆಸರನ್ನೇ ಕೇಳದೆ ಇದ್ದ ಆಕೆ, ಒಂದು ಸಾರಿ ನಾಗಮ್ಮನವರು ವಾಸುವಿನ ಮೈಗೆ ತನ್ನ ಸಾಬೂನನ್ನು ಹಚ್ಚಿದರೆಂದು ಕೇಳಿ, ಬಾಯಿಗೆ ಬಂದಂತೆ ಬಯ್ದುಬಿಟ್ಟಳಂತೆ! ನಾಗಮ್ಮನವರಿಗೆ ಆ ಹೊಸ ಕಾಡು ರಾಣಿಯ ಆಳ್ವಿಕೆ ಸರಿಬೀಳಲಿಲ್ಲ. ಪುಟ್ಟಮ್ಮನಿಗಂತೂ ಸುಬ್ಬಮ್ಮನ ನೆರಳು ಕಂಡರೂ ಆಗದಂತಾಯಿತು. ತುಪ್ಪ ಬೆಣ್ಣೆ ಮೊದಲಾದ ಪದಾರ್ಥಗಳಿಗಂತೂ ಆ ಹೆಗ್ಗಡಿತಿ ಬೀಗಮುದ್ರೆ ಮಾಡಿಬಿಟ್ಟಳು. ಹೀಗಾಗಿ ಮನೆಯಲ್ಲಿ ಮೂರು ಹೊತ್ತೂ ಕದನವಾಗಿ ನೆಮ್ಮದಿ ತಪ್ಪಿಹೋಗಿತ್ತು.

ಚಂದ್ರಯ್ಯಗೌಡರು ಸ್ವಭಾವತಃ ದರ್ಪಶೀಲರಾಗಿದ್ದರೂ ತಮ್ಮ ನವವಧುವಿನ ಮಾಧುರ್ಯಸಾರ ಶೋಷಣಾಸಕ್ತರಾಗಿ ಅಂತರಂಗದಲ್ಲಿ ಆಕೆಯ ಸೂತ್ರಗೊಂಬೆಯಂತಾದರು. ಚಿಕ್ಕವಯಸ್ಸಿನಲ್ಲಾಗಿದ್ದರೆ ಸುಬ್ಬಮ್ಮ ಅವರ ಕಣ್ಣಿಗೆ ಸುಂದರಿಯಾಗಿರುವುದಂತೂ ಇರಲಿ, ಕುರೂಪಿಯಾಗಿ ಕಾಣುತ್ತಿದ್ದಳು. ಆದರೆ ಈಗ ಅವರಿಗೆ ಆಕೆ ರತಿಯಾಗಿದ್ದಳು. ಹಳೆಯದಕ್ಕೆ ಹೊಸದಾದುದೆಲ್ಲವೂ ಸೌಂದರ್ಯವೇ! ಅವರು ಸುಬ್ಬಮ್ಮನನ್ನು ತಿದ್ದುವುದಕ್ಕೆ ಬದಲಾಗಿ ಆಕೆಯ ಚಾಡಿಯ ಮಾತುಗಳಿಗೆ ಕಿವಿಗೊಟ್ಟು ನಾಗಮ್ಮನವರ ಮೇಲೆಯೂ ತಮ್ಮ ಸ್ವಂತ ಮಕ್ಕಳಿಬ್ಬರ ಮೇಲೆಯೂ ಕಠೋರರಾದರು. ಇದರಿಂದ ಸುಬ್ಬಮ್ಮನಿಗೆ ಮತ್ತಷ್ಟು ಕೋಡು ಬಂದಂತಾಗಿ ಎಲ್ಲರನ್ನೂ ಹಾಯತೊಡಗಿದಳು.

ಚಂದ್ರಯ್ಯಗೌಡರು ತಮ್ಮ ಹದಿನೆಂಟು ವರ್ಷದ ಪುಟ್ಟ ಹೆಂಡತಿಗೆ ಶರಣಾದುದರಲ್ಲಿ ಒಂದು ರಹಸ್ಯವಿತ್ತು. ಹೆಚ್ಚು ವಯಸ್ಸಾಗಿದ್ದುದರಿಂದ ಚಿಕ್ಕ ವಯಸ್ಸಿನ ಹುಡುಗಿಗೆ ತಾನು ತಕ್ಕ ವರನಲ್ಲ ಎಂಬುದು ಅವರಿಗೆ ತಿಳಿಯದೆ ಇರಲಿಲ್ಲ. ಸೌಂದರ್ಯ ಯೌವನ ಸರಸ ಇವುಗಳಿಂದ ತರುಣಿಯನ್ನು ವಶಮಾಡಿಕೊಳ್ಳುವ ಸುಯೋಗವು ತಮ್ಮದಾಗಿರಲಿಲ್ಲವಾದುದರಿಂದ ಚಾಡಿಯ ಮಾತು ಕೇಳುವುದು, ಅವಳನ್ನು ಅನಾಗರಿಕವಾಗಿ ವರ್ತಿಸಲು ಬಿಡುವುದು, ವಸನ ಭೂಷಣಗಳನ್ನು ಮೇಲ್ವಾಯ್ದು ತಂದುಕೊಡುವುದು, ಇವೇ ಮೊದಲಾದ ಹೀನೋಪಾಯಗಳಿಂದ

ತಮ್ಮ ಪತ್ನಿಯ ಮನಸ್ಸನ್ನು ತಮ್ಮ ಕಡೆಗೆ ಒಲಿಸಿಕೊಳ್ಳಲು ಸಾಹಸ ಮಾಡು ತ್ತಿದ್ದರು. ಅದೂ ಅಲ್ಲದೆ ಆಕೆಯ ಹೃದಯವು ಅನ್ಯಾಕ್ರಾಂತವಾದೀತು ಎಂಬ ಭೀತಿಯೂ ಅವರನ್ನು ಒಳಗೊಳಗೇ ಪೀಡಿಸುತ್ತಿತ್ತು. ಆ ಆಶಂಕೆಗೆ ಆಧಾರ ವಾಗಿದ್ದವರು ಅವರ ಮನೆಯಲ್ಲಿ ಆಳು ಕೆಲಸಮಾಡಿಸುತ್ತಿದ್ದ ಸೇರೆಗಾರ ರಂಗಪ್ಪ ಸೆಟ್ಟರು.

ಅಂತೂ ನೆಲ್ಲುಹಳ್ಳಿಯ ಜನರಿಂದ 'ಸುಬ್ಬಿ' ಎಂದು ಕರೆಯಿಸಿಕೊಳ್ಳುತ್ತಿದ್ದವಳು ಚಂದ್ರಯ್ಯಗೌಡರ ಕೃಪೆಯಿಂದ ಕಾನೂರು ಸುಬ್ಬಮ್ಮ ಹೆಗ್ಗಡಿತಿಯಾಗಿದ್ದಳು.

## ೬

## ಸೇರೆಗಾರರ ಕೇಪಿನ ಕೋವಿ

ತರಂಗಿತ ಸಹ್ಯಾದ್ರಿ ಶ್ರೇಣಿಗಳಿಂದ ರಚಿತವಾದ ಬಹುದೂರದ ಪ್ರಾಚೀ ದಿಗಂತ ರೇಖೆಯ ದೀರ್ಘ ಸರ್ಪವಿನ್ಯಾಸವು ಸದ್ಯಃಪ್ರಫುಲ್ಲಿತವಾದ ಉಷಃಕಾಂತಿ ಯಿಂದ ತಕ್ಕಮಟ್ಟಿಗೆ ಸ್ಪಷ್ಟವಾಗಿದ್ದರೂ ಬೇಗಬೇಗನೆ ಪ್ರಸ್ಫುಟವಾಗುತ್ತಿದ್ದರೂ ಕಾನೂರು ಬೆಟ್ಟದ ಕಾನನಾಂತರದಲ್ಲಿ ಮಾತ್ರ ಕತ್ತಲೆ ಇನ್ನೂ ದಟ್ಟವಾಗಿ ಮೆತ್ತಿ ಕೊಂಡಂತಿತ್ತು. ಗಿರಿಶಿರದಲ್ಲಿ ಪರ್ಣಸಮಾಕೀರ್ಣವಾಗಿದ್ದ ಮಹಾ ತರುವೊಂದ ರಲ್ಲಿ ಎಲೆಗಳ ಮರೆಯ ಕತ್ತಲೆಯ ಗಬ್ಬದಲ್ಲಿ 'ಗೊತ್ತು ಕೂತು' ಹುದುಗಿ ಕೊಂಡಿದ್ದ ಕಾಡುಕೋಳಿಯ ಹುಂಜನೊಂದು ಪೂರ್ವದಿಕ್ಕಿನ ಕಡೆಗೊಮ್ಮೆಯೂ ಕಾಡಿನ ಕತ್ತಲೆಯ ಕಡೆಗೊಮ್ಮೆಯೂ ನೋಡಿ ನೋಡಿ ಇಮ್ಮನಸ್ಸು ಮಾಡಿ ಕೊಂಡಿತ್ತು. ಮೂಡಲನ್ನು ನೋಡಿದರೆ ಪ್ರಭಾತ ಪರ್ಯಟನಕ್ಕೆ ಹೊರಡು ಎಂದು ಕರೆಯುವಂತೆ ಮನಮೋಹಿಸಿತ್ತು. ಕಾಡಿನ ಕತ್ತಲೆಯಾದರೋ ಸ್ವಲ್ಪ ತಾಳು ಎನ್ನುವಂತಿತ್ತು. ಮರಗಳ ದಟ್ಟೈಸುವಿಕೆಯಿಂದ ತಂಗಾಳಿಯ ತೀಟಕ್ಕೆ ಅಡಚಣೆಯಾಗಿದ್ದರೂ ಅದರ ಕುಳಿರ್ಪು ಎಲ್ಲ ಕಡೆಯೂ ಹಸರಿಸಿತ್ತು. ಹುಂಜನ ಬೆಚ್ಚನೆಯ ತಿಪ್ಪುಳದ ಒಳಗೂ ನುಗ್ಗಿಹೋಗಿತ್ತು. ಅದೂ ಸಾಹಸ ಪ್ರೇರಕ ವಾಗಿದ್ದಿತೇ ಹೊರತು ಸಾಹಸ ನಿವಾರಕವಾಗಿರಲಿಲ್ಲ. ಹುಂಜ ಕಿವಿಗೊಟ್ಟು ಆಲಿಸಿತು. ಅನಂತಾರಣ್ಯವು ನಿಃಶಬ್ದವಾಗಿ ಘನಿಭೂತ ಮೌನದಂತಿತ್ತು. ಆದರೆ ತುಸು ಹೊತ್ತಿನಲ್ಲಿಯೆ ಕಾಡಿನ ಕತ್ತಲೆಯ ಸೈನ್ಯದಲ್ಲಿ ಬಿರುಕು ತೋರಿ ಅರುಣೋದಯದ ಕಿರಣವಿಹೀನ ರಕ್ತರಾಗವು ಅಲ್ಲಲ್ಲಿ ದಾಳಿಯಿಟ್ಟು ವನಪ್ರಾಂತ ವನ್ನು ಆಕ್ರಮಿಸಲಾರಂಭಿಸಿತು. ದೂರದ ಕಣಿವೆಯಲ್ಲಿ ಸಿಳ್ಳು ಹಾಕಲು ತೊಡ

ಗಿದ್ದ ಮಡಿವಾಳ ಹಕ್ಕಿಯ ಗಾನವು ಹುಂಜನಿಗೆ ಕೇಳಿಸಿ ತಾನು ಕುಳಿತಿದ್ದ ಕೊಂಬೆಯು ದಪ್ಪ ದಿಂಡಿನಮೇಲೆ ನಿಮಿರಿ ನಿಂತು, ನೀಳವಾಗಿ ಮೈಮುರಿದು, ದೀರ್ಘ ಸ್ವರದಿಂದ ವನಮೌನವು ಎಚ್ಚರುವಂತೆ ಕೂಗಿ, ಪಟಪಟನೆ ರೆಕ್ಕೆಗಳನ್ನು ಬಡಿಯುತ್ತಾ, ಕೆಳಗೆ ಹಾರಿತು. ಸುತ್ತಲಿದ್ದ ಮರದ ಎಲೆಗಳು ಬರಬರನೆ ಸದ್ದು ಮಾಡಿದುವು. ಹುಂಜದ ರೆಕ್ಕೆ ಪುಕ್ಕ ತಿಪ್ಪುಳಗಳಲ್ಲಿ ಪ್ರಾತಃ ಶೀತಲ ವಾಯು ಸ್ವಲ್ಪ ವೇಗವಾಗಿ ಪ್ರವೇಶಿಸಿದ್ದರಿಂದ ಅದು ಮೊದಲಿಗಿಂತಲೂ ಹೆಚ್ಚು ತಂಪಾಗಿರುವಂತೆ ತೋರಿತು. ನೆಲವನ್ನು ಮುಟ್ಟಿದೊಡನೆ ಕತ್ತೆತ್ತಿ, ಎದೆಯುಬ್ಬಿಸಿ, ಕೊರಲನ್ನು ಕೊಂಕುಗೈದು, ಪುಕ್ಕದ ಗರಿಗಳನ್ನು ನಿಮಿರಿಸಿ 'ಕೊಕ್ಕೊ ಕೋ' ಎಂದು ಗಟ್ಟಿಯಾಗಿ ಕೂಗಿ, ಮತ್ತೆ ರೆಕ್ಕೆ ಬಡಿದು, ತನ್ನ ಕೆಲಸಕ್ಕೆ ಕೊಕ್ಕು ಹಾಕಿತು. ಒಡನೆಯೆ ಕಾಡಿನಲ್ಲಿ ಅಲ್ಲಲ್ಲಿ ಕಾಡುಕೋಳಿಗಳ ಕೂಗೂ ಪಟಪಟನೆ ರೆಕ್ಕೆ ಬಡಿಯುವ ಸದ್ದೂ ಕೇಳಿಸಿತು.

ಹುಂಜವು ತರಗೆಲೆಯಡಿಯ ಮಣ್ಣನ್ನು ಕೆದರಿ ಕೆದರಿ, ಹುಳು ಹಪ್ಪಟೆಗಳನ್ನು ಭುಂಜಿಸಿತು. ನಡುನಡುವೆ ಒಂದೊಂದು ಸಾರಿ ಹೆಣ್ಣು ಕೋಳಿಗಳನ್ನು ಕರೆದು ಕೂಗಿತು. ಹೊಟ್ಟೆ ತುಂಬದೆ ಯಾವ ಹೇಂಟೆ ತಾನೆ ಪ್ರಣಯ ಸುಖಕ್ಕೆ ಅಭಿಲಾಷೆ ಪಟ್ಟೀತು ! ವನಕುಕ್ಕುಟರಾಜನ ಬಳಿಗೆ ಯಾವ ರಾಣಿಯೂ ಬರಲಿಲ್ಲ. ಹುಂಜವು ಮತ್ತೆ ಒಂದೇ ಸಮನೆ ನೆಲ ಕೆದರುವ ಕೆಲಸಕ್ಕೆ ಕಾಲು ಹಾಕಿತು. ಸುಮಾರು ಒಂದು ಗಂಟೆಯ ಮೇಲೆ, ಹೊಟ್ಟೆ ಪಟ್ಟಾಗಿ ತುಂಬಿದ ಮೇಲೆ ಹುಂಜಕ್ಕೆ ಮತ್ತೆ ಹೇಂಟೆಯ ನೆನಪಾಗಿ ಕೂಗಿತು. ಆ ಕೂಗಿನಲ್ಲಿ 'ಇನ್ನು ಮುಂದೆ ಏಕಾಂತ ವನ್ನು ಸಹಿಸಲಾರೆ' ಎಂಬ ವಿರಹ ವ್ಯಥೆಯೂ 'ಬಾ ಪ್ರಿಯೆ, ಬೇಗ ಬಾ' ಎಂಬ ಪ್ರೇಮಾಹ್ವಾನದ ಮಾಧುರ್ಯವೂ ಕೂಡಿದ್ದುವು. ಹುಂಜವು ಬಿಂಕದಿಂದ ಸಲ ಸಲವೂ ಕೂಗಿ ಕರೆಯಲು ಒಂದು ಹೇಂಟೆಯೂ ಅದರ ದೊಡ್ಡ ಮರಿಗಳೂ ಸದ್ದುಮಾಡಿಕೊಂಡು ಓಡಿಯೋಡಿ ಬಳಿಗೆ ಬಂದುವು. ಹುಂಜವು ಒಡನೆಯೆ ಹೇಂಟೆಯ ಬಳಿಗೆ ಹೋಗಿ ಪ್ರಣಯ ಪ್ರದರ್ಶನ ಮಾಡಿತು. ಆದರೆ ಹೇಂಟೆ ಪಕ್ಕಕ್ಕೆ ಸರಿದು ಭೋಗಾಸಕ್ತಿಗಿಂತಲೂ ಭೋಜನಾಸಕ್ತಿಯನ್ನೆ ಹೆಚ್ಚಾಗಿ ತೋರಿತು. ವಿಷಯವನ್ನು ತಿಳಿದ ಹುಂಜವು ಪುನಃ ನೆಲ ಕೆದರಿ, ಹೇಂಟೆಯನ್ನು ಲೊಚಗುಟ್ಟಿ ಬಳಿಗೆ ಕರೆದು, ಹುಳುಗಳನ್ನು ತಿನ್ನಿಸತೊಡಗಿತು. ಔತಣಕ್ಕೆ ಅನಾಹೂತರಾಗಿದ್ದರೂ ಮರಿಗಳೂ ತಾಯಿಯ ಉಣಿಸಿನಲ್ಲಿ ಪಾಲುಕೊಂಡುವು.

ಸೂರ್ಯೋದಯವಾಗಿ ಹೊಂಬಿಸಿಲು ದೀರ್ಘತರುಚ್ಛಾಯೆಗಳ ಮಧ್ಯೆ ತೂರಿ ಬಂದು ಕುರುಚಲು ಗಿಡಗಳ ಮೇಲೆಯೂ ಪಿಣಿಲಾಗಿ ಹೆಣೆದು ಕೊಂಡಿದ್ದ ಬಳ್ಳಿ ಹೊದರುಗಳ ಮೇಲೆಯೂ ಶುಷ್ಕಪರ್ಣಾವೃತವಾಗಿದ್ದ

ನೆಲದ ಮೇಲೆಯೂ ಬಿದ್ದಿತು. ಇತರ ವನ್ಯಪಕ್ಷಿಗಳೂ ತಮ್ಮ ತಮ್ಮ ಧ್ವನಿ ಪ್ರದರ್ಶನದಲ್ಲಿ ತೊಡಗಿದುವು. ಒಂದು ಕಡೆ ಕಾಜಾಣವು ತನ್ನ ಸ್ವರ್ಗೀಯ ಸುಮಧುರವಾದ ಗಾನಧಾರೆಯಿಂದ ಅರಣ್ಯ ಪರ್ವತಗಳನ್ನು ಸಂಗೀತ ಸ್ರೋತ ದಲ್ಲಿ ತೇಲಿಸುತ್ತಿತ್ತು. ಒಂದು ಕಡೆ ಗಿಳಿವಿಂಡುಗಳ ಚಕಿತ ವಾಣಿ ಮನೋಹರ ವಾಗಿತ್ತು. ಒಂದು ಕಡೆ ಕಾಮಳ್ಳಿಯ ಲಲನಾಕಂಠವು ಬಿಸಿಲು ಬಿದ್ದಿದ್ದ ಮರದ ಬರಲು ನೆತ್ತಿಯಿಂದ ದನಿಜೇನು ಸೂಸುತ್ತಿತ್ತು. ಒಂದೆಡೆ ಮಂಗಟ್ಟೆ ಹಕ್ಕಿಗಳ ವಿಕಟ ನಾದವು ಕಾಡನ್ನು ಭಯಗೊಳಿಸುವಂತಿತ್ತು. ಹೂ ತುಂಬಿದ ಮರಗಳಲ್ಲಿ ಲಕ್ಷಾಂತರ ಜೇನು ಹುಳುಗಳು ಓಂಕಾರದಂತೆ ಝೇಂಕರಿಸುತ್ತಿದ್ದುವು. ಸಂತೋಷದ ಸಂಭ್ರಮದಲ್ಲಿ ಹುಂಜವು ಮತ್ತೆ ಕೇಕೆ ಹಾಕಿ ಕೂಗತೊಡಗಿತು. ಈ ಸಲದ ಕೂಗು ಹೆಣ್ಣುಕೋಳಿಯನ್ನು ಕರೆಯಲೋಸುಗವಾಗಿರಲಿಲ್ಲ; ತಾನು ಗಂಡು ಎಂಬುದನ್ನು ಹೆಮ್ಮೆಯಿಂದ ಕಾಡಿಗೆಲ್ಲ ಸಾರುವ ಕೂಗಾಗಿತ್ತು. ಆದರೂ ಸ್ವಲ್ಪ ಹೊತ್ತಿನಲ್ಲಿಯೆ ಹೇಂಟೆಯೊಂದು ದೂರದಲ್ಲಿ 'ತೆಕೋ ತೆಕ್ ತೆಕ್ ತೆಕ್' 'ತೆಕೋ ತೆಕ್ ತೆಕ್ ತೆಕ್' ಎಂದು ಬೇಟದ ಧ್ವನಿ ಮಾಡತೊಡಗಿತು. ಹುಂಜವು ತಲೆಯನ್ನು ಸ್ವಲ್ಪ ಒಲೆದು, ಒಕ್ಕಣ್ಣಿನಿಂದಲೆ ಬಹುದೂರ ನೋಡುವಂತೆ ಒಂಟಿಗಾಲಿನಲ್ಲಿ ನಿಂತು ಕುತೂಹಲಾವಿಷ್ಟವಾಗಿ ನಿಷ್ಪಂದವಾಗಿ ಆಲಿಸಿತು. ಜೊತೆಯಲ್ಲಿ ಹೇಂಟೆ ಯಿದ್ದರೂ ಕೂಡ ಅದರ ಮನಸ್ಸು ಚಂಚಲವಾಗಿ ಮತ್ತೊಂದು ಹೇಂಟೆಗೆ ಮಾರುಹೋಯಿತು. ಹುಂಜವು ಇದನ್ನು ತ್ಯಜಿಸಲೆಂದಲ್ಲ, ಅದನ್ನೂ ಬಳಿಗೆ ಕರೆಯಲೆಂದು, ಸ್ವಲ್ಪ ದೂರ ಓಡಿಹೋಗಿ ನಿಂತು ಕೇಕೆ ಹಾಕಿತು! ಆ ಕೂಗು ಮರುದನಿಯಾಯಿತು. ಆದರೆ ಆ ಹೇಂಟೆ ಬಳಿಗೆ ಬಾರದೆ ಮೊದಲಿದ್ದ ಜಾಗದಿಂದಲೆ 'ತೆಕೋ ತೆಕ್ ತೆಕ್ ತೆಕ್' ಎಂದು ಕರೆಯುತೊಡಗಿತು. ಹುಂಜದ ಮನಸ್ಸು ಕಾಣದ ಹೆಣ್ಣಿಗೆ ಆಳುಪಿತು. ಮತ್ತೂ ಸ್ವಲ್ಪದೂರ ಓಡಿಹೋಗಿ, ಸಂಶಯದಿಂದ ನಿಂತು, ತಾನು ಹಿಂದೆ ಬಿಟ್ಟು ಬಂದಿದ್ದ ಹೇಂಟೆಮರಿಗಳ ಕಡೆಗೆ ಮುಂದೆ ಹೋಗಲೋ ಬೇಡವೋ ಎಂದು ಪ್ರಶ್ನೆ ಕೇಳುವಂತೆ ನೋಡಿತು. ಹೇಂಟೆ ಮತ್ತು ಮರಿಗಳು ನೆಲವನ್ನು ಕೆದರುವುದರಲ್ಲಿಯೂ ಮೂತಿಯಿಂದ ಕುಟುಕುವುದರಲ್ಲಿಯೂ ತಲ್ಲೀನವಾಗಿದ್ದು ಹುಂಜದ ಕಡೆಗೆ ಗಮನವಿಟ್ಟಂತೆ ತೋರಲಿಲ್ಲ. ಪುನಃ 'ತೆಕೋ ತೆಕ್ ತೆಕ್ ತೆಕ್!' ಹುಂಜವು ಬೆಚ್ಚಿ ಎರಡು ಹೆಜ್ಜೆ ಹಿಂದೆ ಸರಿದು ನಿಂತಿತು. ಅದರ ನಿಲುವಿನ ಭಂಗಿ ನೋಟಕ್ಕಿಂತಲೂ ಹೆಚ್ಚಾಗಿ ಆಲೋಚನೆಯನ್ನೇ ಸೂಚಿಸುವಂತಿತ್ತು. ಏಕೆಂದರೆ ಆ ಹೇಂಟೆಯ ಕರೆಯಲ್ಲಿ ಏನೋ ಅಪಸ್ವರ ಕೇಳಿಸಿದ ಹಾಗಾಯಿತಲ್ಲವೇ? ಪುನಃ 'ತೆಕೋ ತೆಕ್ ತೆಕ್ ತೆಕ್!' ಚಿಃ! ಅಪಸ್ವರವೆಲ್ಲಿ ಬಂತು! ಅದು ಕುಕ್ಕುಟ ಲಲನೆಯ

ಇನಿದಾದ ಸುಸ್ವರ ಮೇಳವಲ್ಲದೆ ಮತ್ತೇನು? ಎಂದು ಯೋಚಿಸುತ್ತಿರುವಷ್ಟರಲ್ಲಿ—ಮತ್ತೆ! 'ತೆಕೋ ತೆಕ್ ತೆಕ್ ತೆಕ್! ತೆಕೋ ತೆಕ್ ತೆಕ್!' ಹುಂಜವು ಪ್ರಣಯಾವೇಶದಿಂದ ಮುಂದೆ ನುಗ್ಗಿ, ಇಳಿಜಾರಿನಿಂದ ಉಬ್ಬಿನ ಕಡೆಗೆ ಧಾವಿಸಿತು. ಸ್ವಲ್ಪ ದೂರ ಹೋಗಿ ನೋಡುತ್ತದೆ: ಪೊದೆಗಳ ನಡುವೆ ಅಡಗಿ ನಿಂತಂತಿದೆ ಒಂದು ಮನುಷ್ಯಾಕಾರ! ಅಲ್ಲಿಂದಲೆ ಕೇಳಿಬರುತ್ತಿದ್ದುದು ಆ ಮಾಯಾ ಹೇಂಟೆಯ ಕರೆ! ಹುಂಜವು ಬೆದರಿ ಹಿಂತಿರುಗುವುದರಲ್ಲಿತ್ತು. ಅಷ್ಟರಲ್ಲಿ ಏನೋ ದೇಹಕ್ಕೆ ತಗುಲಿದಂತಾಗಿ ಮಹಾ ಶಬ್ದವಾಯಿತು; ಹುಂಜವು ಮೂರ್ಛೆ ಹೋಗಿ ನೆಲಕ್ಕುರುಳಿತು! ಆ ಕೋವಿಯಿಡಿನ ಸದ್ದಿಗೆ ಬೆದರಿ, ಹಿಂದೆ ತುಸು ದೂರದಲ್ಲಿ ಮೇವಾರಿಸುತ್ತಿದ್ದ ಹೇಂಟೆ ತನ್ನ ಮರಿಗಳೊಡನೆ ರೆಕ್ಕೆಗೆ ಬುದ್ಧಿ ಹೇಳಿತು.

ಇನ್ನೂ ಬಿಸಿಯಾಗಿದ್ದ ನಳಿಗೆಯ ತುದಿಯಿಂದ ಹೊಗೆಯಾಡುತ್ತಿದ್ದ ಕೇಪಿನ ಕೋವಿಯನ್ನು ಕೈಯಲ್ಲಿ ಹಿಡಿದು, ಕಾನೂರು ಸೇರೆಗಾರ ರಂಗಪ್ಪ ಸೆಟ್ಟರು ತಾವು ಅಡಗಿ ನಿಂತಿದ್ದ ಹೊದರಿನಿಂದ ಹೊರಗೆ ನೆಗೆದು, ಹುಂಜವಿದ್ದ ಜಾಗಕ್ಕೆ ಕಾತರದಿಂದ ನುಗ್ಗಿದರು. ಹುಂಜವು ನಿಶ್ಚಲವಾಗಿ ಬಿದ್ದಿತ್ತು. ಅದರ ಮೈಯಿಂದ ಚಿಮ್ಮಿದ ನೆತ್ತರು ನೆಲದ ಮೇಲೆಯೂ ತರಗೆಲೆ ಕಸಕಡ್ಡಿಗಳ ಮೇಲೆಯೂ ಕೆಂಪಗಿತ್ತು. ತೊಂಡೆಯ ಹಣ್ಣನ್ನು ನಗುವಂತೆ ಕೆಂಪು ದಾಸ ವಾಳವನ್ನೂ ಮೀರಿ ಆರಕ್ತವಾಗಿದ್ದ ಅದರ ಚೊಟ್ಟಿ ನೆತ್ತಿಯನ್ನು ಕೋಮಲ ರಮಣೀಯವಾಗಿ ಅಲಂಕರಿಸಿತ್ತು. ಅದರ ಕತ್ತಿನ ಮೇಲಿದ್ದ ಪೀತವರ್ಣದ ತುಪ್ಪುಳ್ಗರಿಗಳು ನವಿಲಿನ ಕಂಠಶ್ರೀಯನ್ನು ನೆನಪಿಗೆ ತರುವಂತೆ ಕೋಲ್ಬಿಸಿಲಿನಲ್ಲಿ ನುಣ್ಣಗೆ ಮಿರುಗುತ್ತಿದ್ದುವು. ಅದರ ರೆಕ್ಕೆಯ ಮತ್ತು ಪುಕ್ಕದ ಗರಿಗಳು ತರತರದ ಬಣ್ಣಗಳಿಂದ ಶೋಭಿಸಿದ್ದುವು. ಮೂರು ಕವಲಾಗಿದ್ದ ಅದರ ಪಾದಗಳೆರಡೂ ಮಣ್ಣಿಡಿದು ಮಾಸಿದ್ದುವು. ಪಾದಗಳ ಮೇಲೆ ನಸುಗೆಂಪು ಬಣ್ಣವಾಗಿದ್ದ ಅದರ ಮುಂಗಾಲುಗಳ ಹಿಂಭಾಗದಲ್ಲಿ ಕಠಿನ ಕಂಟಕಗಳಂತೆ ನಖಗಳೆರಡು ಅರ್ಧ ಅಂಗುಲದಷ್ಟು ಉದ್ದವಾಗಿ ಆಯುಧಗಳಂತಿದ್ದುವು. ಪುಕ್ಕದಲ್ಲಿದ್ದ ನೀಳವಾದ ಕರ್‍ರನೆ ಗರಿಗಳೆರಡು ಗರ್ವಿತ ವಿನ್ಯಾಸದಿಂದ ಕೊಂಕಿ ನೆಲದ ಮೇಲೊರಗಿ ಮಿರುಗುತ್ತಿದ್ದುವು. ಮೇಲ್ಮೊಗವಾಗಿದ್ದ ಅದರ ಕಣ್ಣು ರೆಪ್ಪೆ ಮುಚ್ಚಿ ಜೀವನದ ಮೇಲೆ ಮರಣದ ಪರದೆ ಬಿದ್ದಂತಿತ್ತು. ಸೇರೆಗಾರರು ಸೌಂದರ್ಯಪುಂಜದಂತೆ ಭೂಗತವಾಗಿದ್ದ ಆ ಹುಂಜವನ್ನು ತೃಪ್ತಿಯಿಂದಲೂ ಆತ್ಮ ಪ್ರಶಂಸೆಯಿಂದಲೂ ನೋಡಿ ಬಗ್ಗಿ, ಎಡಗೈಯಿಂದ ಅದರ ಕುತ್ತಿಗೆಯನ್ನು ಹಿಡಿದೆತ್ತಿ, ಪುಕ್ಕದ ನೀಳವಾದ ಗರಿಗಳು ನೆಲವನ್ನು ಗುಡಿಸುತ್ತಿರಲು, ತಾವು

ಮೊದಲಿದ್ದ ಜಾಗಕ್ಕೆ ಎತ್ತಿಕೊಂಡು ಹೋದರು. ಅಲ್ಲಿ ಅವರ ಕರಿಯ ಕಂಬಳಿ ಬಿದ್ದಿತ್ತು. ಅದರ ಪಕ್ಕದಲ್ಲಿ ಕೋಳಿಯನ್ನು ಎಸೆದು, ಕೋವಿಗೆ ಈಡು ತುಂಬಲು ಅನುವಾದರು.

ಸೇರೆಗಾರ ರಂಗಪ್ಪಸೆಟ್ಟರು ಸುಮಾರು ಮೂವತ್ತೈದು ವಯಸ್ಸಿನ ಸಾಧಾರಣ ವಾದ ಆಳು. ಪುಷ್ಟವಾಗಿದ್ದ ಅವರ ಆಕಾರದಲ್ಲಿ ಆಕರ್ಷಣೀಯವಾದ ವಿಶೇಷತೆ ಯೇನೂ ಇರಲಿಲ್ಲ. ಬಣ್ಣ ಎಣ್ಣೆಗೆಂಪು. ಮುಖ ಚಪ್ಪಟೆ. ಕಣ್ಣು ಹುಬ್ಬು ತುಟಿಗಳೆಲ್ಲ ಕುಟಿಲ. ತುಟಿಗಳು ಯಾವಾಗಲೂ ತೆರೆದು ಕೊಂಡಿರುತ್ತಿದ್ದುದರಿಂದ ದಂತಪಂಕ್ತಿ ತೋರಿ ನಗುತ್ತಿರುವಂತೆ ಭಾಸವಾಗುತ್ತಿತ್ತು. ಅವರು ನಕ್ಕಾಗ ಹುಳು ಹಿಡಿದು ಕಪ್ಪಾಗಿದ್ದ ಹಲ್ಲುಗಳೂ ತೋರುತ್ತಿದ್ದುವು. ಕಿವಿಗಳಲ್ಲಿದ್ದ ಹರಳು ಕೆತ್ತಿದ್ದ ಒಂಟಿಗಳು ಅವರ ರಸಿಕತೆಗೆ ಸಾಕ್ಷಿಯಾಗಿದ್ದುವು. ಕೆನ್ನೆಯಲ್ಲಿ ಅಗಲವಾಗಿದ್ದ ಕಪ್ಪು ಮಚ್ಚೆಯೊಂದು ಪ್ರಮುಖವಾಗಿತ್ತು. ಅವರು ನಶ್ಯದ ಬಣ್ಣದ ಬನೀನು ಹಾಕಿ, ಮೊಳಕಾಲಿನವರೆಗೆ ಕಚ್ಚೆಪಂಚೆಯುಟ್ಟಿದ್ದರು. ಬನೀನಿನ ಬಿಳಿಯ ಗುಂಡಿ ಗಳು ಬಹು ದೂರದವರೆಗೂ ಕಾಣುತ್ತಿದ್ದುವು. ಬತ್ತಲಾಗಿದ್ದ ಅವರ ಮೊಳ ಕಾಲುಗಳ ಕೆಳಭಾಗವು ರೋಮಮಯ. ಎಡಗಾಲಿನಲ್ಲಿ ಒಂದು ದೇವರ ಸರಿಗೆಯಂ ಬಳೆಯಿತ್ತು. ಅಡಿಗಳಲ್ಲಿ ಒರಟು ಒರಟಾಗಿ ದಪ್ಪವಾಗಿರುವ ಮಲೆನಾಡಿನ ಮೆಟ್ಟು ಗಳಿದ್ದುವು.

ರಂಗಪ್ಪಸೆಟ್ಟರು ಗಟ್ಟದ ಕೆಳಗಿನವರು. ಕೂಲಿಯಾಳುಗಳನ್ನು ಗಟ್ಟದ ಮೇಲಕ್ಕೆ ತಂದು ಮೇಸ್ತ್ರಿಯಾಗಿ ಕೆಲಸ ಮಾಡಿಸುತ್ತಿದ್ದರು. ದಕ್ಷಿಣ ಕನ್ನಡ ಜಿಲ್ಲೆಯಿಂದ ಬರುವ ಮೇಸ್ತ್ರಿಗಳನ್ನು ಸೇರೆಗಾರರೆಂದು ಕರೆಯುತ್ತಾರೆ.

ಸೆಟ್ಟರು ಕಾನೂರಿನಲ್ಲಿ ಐದು ವರ್ಷಗಳಿಂದಲೂ ಆಳಿಟ್ಟುಕೊಂಡು ಬಹಳ ನಂಬಿಕೆಯಿಂದ ಇದ್ದರು. ಬೇಟೆಯಲ್ಲಿಯೂ ಅವರ ಕೂಲಿಯಾಳೊಬ್ಬಳ ಬೇಟದಲ್ಲಿಯೂ ಅವರಿಗೆ ಆಸಕ್ತಿ. ತಮ್ಮ ನಿಜವಾದ ಸಂಸಾರವು ಊರಿನಲ್ಲಿದ್ದು ದರಿಂದ ಗಟ್ಟದ ಮೇಲೊಂದು ತಾತ್ಕಾಲಿಕ ಸಂಸಾರವನ್ನಿಟ್ಟುಕೊಳ್ಳುವುದು ಅಷ್ಟೇನೂ ಮಹಾ ಪಾಪವೆಂದು ಅವರು ಭಾವಿಸಿರಲಿಲ್ಲ. ತಮ್ಮ ಬೇಟದ ಹೆಣ್ಣಿನ ಸಹಾಯದಿಂದಲೆ ಅವರು ಚಂದ್ರಯ್ಯಗೌಡರನ್ನು ಒಳಗೆ ಹಾಕಿಕೊಂಡಿ ದ್ದಾರೆಂದು ವದಂತಿಯಿತ್ತು.

ಷಿಕಾರಿಯಾದ ಸಂತೋಷದಲ್ಲಿ ಸೆಟ್ಟರು ಕೋವಿಗೆ ವಿರಾಮವಾಗಿ ಈಡು ತುಂಬುತ್ತ ನಿಂತಿದ್ದರು. ಮಸಿಯನ್ನು ಹಾಕಿ, ಅದರ ಮೇಲೆ ಕತ್ತವನ್ನು ಗಜ ದಲ್ಲಿ ಇಡಿಯುತ್ತಿದ್ದಾಗ ಅದುವರೆಗೂ ಕಂಬಳಿಯ ಪಕ್ಕದಲ್ಲಿ ನಿಷ್ಪಂದವಾಗಿ ಬಿದ್ದಿದ್ದ ಹುಂಜವು ಲಿಬಿಲಿಬಿ ಒದ್ದಾಡಿಕೊಂಡಿತು. ಸತ್ತಿದೆ ಎಂದು ಭಾವಿಸಿದ್ದ

ಸೆಟ್ಟರಿಗೆ ಸ್ವಲ್ಪ ಆಶ್ಚರ್ಯವಾಗಿ ಕೆಳಗೆ ನೋಡಿದರು. ಹುಂಜವು ಮತ್ತೆ ನಿಶ್ಚಲವಾಯಿತು. ಎಲ್ಲಿಯೋ ತುಸು ಪ್ರಾಣವಿತ್ತು, ಅದೂ ಹೋಯಿತು, ಎಂದು ಜೇಬಿನಿಂದ ಚೆರೆಯನ್ನು ತೆಗೆದು ಅಂಗೈಯಮೇಲೆ ಅದರ ಪ್ರಮಾಣ ನಿರ್ಣಯ ಮಾಡುತ್ತಿದ್ದಾಗ ಕೋಳಿ ಬಡಬಡನೆ ಒದ್ದಾಡಿಕೊಂಡು ಎದ್ದುನಿಂತು ತೂರಾಡುತ್ತ ಓಡತೊಡಗಿತು. ಸೆಟ್ಟರು ಚೆರೆಯನ್ನು ಫಕ್ಕಫಕ್ಕನೆ ನಳಿಗೆಗೆ ಸುರಿದು ಎಡಗೈಯಲ್ಲಿ ಕೋವಿ ಹಿಡಿದು, ಬಲಗೈಯಿಂದ ಆ ಪ್ರಾಣಿಯನ್ನು ಹಿಡಿದುಕೊಳ್ಳಲು ಹೋದರು. ಅದು ತಪ್ಪಿಸಿಕೊಂಡು ಹೋಗುತ್ತದೆಂದು ಅವರು ಕನಸಿನಲ್ಲಿಯೂ ಭಾವಿಸಿರಲಿಲ್ಲ. ಆದರೆ ಕೋಳಿ ವಕ್ರ ವಕ್ರವಾಗಿ ತೂರಾಡಿ ಕೊಂಡು ಪೊದೆಪೊದೆಗಳಲ್ಲಿ ನುಸುಳತೊಡಗಿತು. ಒಂದು ಮಾರು, ಎರಡು ಮಾರು, ಹತ್ತು ಮಾರಾಯಿತು. ಸೆಟ್ಟರಿಗೆ ದಿಗಿಲಾಗಿ ಕೋವಿಯನ್ನು ಕೆಳಗಿಟ್ಟು, ಕೈಗಳೆರಡನ್ನೂ ಮುಂದಕ್ಕೆ ಚಾಚಿ, ಹುಂಜವನ್ನು ಹಿಡಿಯಲು ಸರ್ವಪ್ರಯತ್ನ ವನ್ನೂ ಮಾಡಿದರು. ಕೋಳಿ ಅಲ್ಲಿ ನುಗ್ಗಿ, ಇಲ್ಲಿ ನುಸುಳಿ, ಕಡೆಗೆ ಒಂದು ನುಗ್ಗಲಾಗದಿದ್ದ ಪೊದೆಗಳ ಹಿಂಡಿನಲ್ಲಿ ಕಣ್ಮರೆಯಾಯಿತು. ಸೆಟ್ಟರು ಹತಾಶರಾಗಿ ದುಃಖಿತರಾಗಿ ಕುಪಿತರಾಗಿ ಪ್ರಾಣಿ ಹೋಗುತ್ತಿದ್ದ ಸದ್ದನ್ನೇ ಆಲಿಸುತ್ತ ನಿಸ್ಸಹಾಯ ರಾಗಿ ನಿಂತುಬಿಟ್ಟರು. ಸದ್ದು ದೂರವಾಗುತ್ತ ಬಂದು ಸ್ವಲ್ಪ ಹೊತ್ತಿನಲ್ಲಿಯೆ ಎಲ್ಲ ನೀರವವಾಯಿತು. ಸೆಟ್ಟರು ಖಿನ್ನಮುಖರಾಗಿ ನಿಟ್ಟುಸಿರು ಬಿಡುತ್ತ ಹಿಂದಕ್ಕೆ ಬರುವಾಗ ದಾರಿಯಲ್ಲಿ ಹಾಕಿದ್ದ ಕೋವಿಯನ್ನೆತ್ತಿಕೊಂಡು ಕಂಬಳಿಯಿದ್ದ ಜಾಗಕ್ಕೆ ಹೋದರು. ಕಂಬಳಿ ಕರ್‍ರಗೆ ಹಾಸ್ಯಮಾಡುವಂತೆ ಬಿದ್ದಿತ್ತು!

ಭಗ್ನಮನೋರಥರಾದ ಸೆಟ್ಟರು ಏನಾದರೂ ಬೇಟೆ ಮಾಡಲೇಬೇಕೆಂದು ದ್ವಿಗುಣಿತ ಸಾಹಸದಿಂದ ಹೊಂಚುಹಾಕುತ್ತ ಕಾಡಿನಲ್ಲಿ ಸಂಚರಿಸತೊಡಗಿದರು. ತಿರುಗುತ್ತಿದ್ದಾಗ ಒಂದೆಡೆ ಬಳ್ಳಿ ಹಬ್ಬಿ ಸ್ವಲ್ಪ ಅಪೂರ್ವವಾಗಿ ಸಮತಟ್ಟಾಗಿದ್ದ ಜಾಗವೊಂದು ಅವರ ಕಣ್ಣಿಗೆ ಬಿತ್ತು. ಸೆಟ್ಟರ ಕುತೂಹಲವು ಕೆರಳಿ ಅಲ್ಲಿಗೆ ಹೋದರು. ಅದರ ಮೇಲೆ ನಿಂತಾಗ ಸ್ಥಳವು ಮಂಚದಷ್ಟು ಸಮತಟ್ಟಾಗಿ ದ್ದಂತೆ ಅಡಿಗಳಿಗೆ ಅನುಭವವಾಗಲು ಹಬ್ಬಿದ್ದ ಬಳ್ಳಿಗಳನ್ನು ಕಿತ್ತೆಳೆದರು. ನೋಡುತ್ತಾರೆ: ಯಾರೋ ನಾಟಾ ಕೂಡಿಟ್ಟು ಇತರರಿಗೆ ಕಾಣಬಾರದೆಂದು ಬಳ್ಳಿ ಹಬ್ಬಿಸಿದ್ದಾರೆ! ನುಣುಪಾಗಿ ಕೊಯ್ದ ತೊಲೆಗಳು, ಹಲಗೆಗಳು, ರೀಪು ಪಕಾಸಿಗಳು ರಾಶಿರಾಶಿಯಾಗಿ ಸುವ್ಯವಸ್ಥಿತವಾಗಿ ಬಿದ್ದಿವೆ! ಯಾರೋ ಲೈಸೆನ್ಸ್ ಇಲ್ಲದೆ ನಾಟಾ ಕಡಿಸಿದ್ದಾರೆ ಎಂಬುದೇನೋ ಕೂಡಲೆ ಗೊತ್ತಾಗಿ, ನಿಧಿಯನ್ನು ಕಂಡವರಂತೆ ಹರ್ಷಿತರಾದರು. ಮಾಡಿದವರು ಮನೆಗೆ ಹೊರುವ ಮುನ್ನ ನೋಡಿದವರೇ ಮನೆಗೆ ಹೊತ್ತರೆ! ಚಂದ್ರಯ್ಯಗೌಡರಿಗೂ ಕೂಡ ಖರ್ಚಿಲ್ಲದೆ

ಬಿಟ್ಟಿಯ ನಾಟಾ ಸಿಕ್ಕಂತಾಗುತ್ತದೆ. ತಮಗೂ ಪಾಲು ದೊರೆಯುತ್ತದೆ. ಸೆಟ್ಟರ ಮನಸ್ಸಿನಲ್ಲಿ ಬೇಟೆಯ ವಿಚಾರವಳಿದು ನಾಟಾಗಳನ್ನು ಸಾಗಿಸುವ ಉಪಾಯವೊಂದೇ ಉಳಿಯಿತು. ಆ ದಿನ ಬೆಳಿಗ್ಗೆ ಕೋವಿ ತೆಗೆದುಕೊಂಡು ಹೊರಟಿದ್ದು ಸಾರ್ಥಕವಾಯಿತೆಂದು ಹಿಗ್ಗಿದರು. ಕೋಳಿ ಹೋದರೇನು? ನಾಟಾ ಸಿಕ್ಕಿತಲ್ಲಾ!

ಅಷ್ಟರಲ್ಲಿ ಸಮೀಪದಲ್ಲಿ ಮರ ಕುಯ್ಯುವ ಸದ್ದು ಕೇಳಿಸಿದಂತಾಗಿ, ಸೆಟ್ಟರು ಕಳ್ಳರನ್ನು ಹಿಡಿಯಲು ಹೋಗುವ ಪೋಲೀಸಿನವರಂತೆ ಮೆಲ್ಲನೆ ಮುಂಬರಿದರು. ನೋಡುತ್ತಾರೆ: ತಮಗೆ ಗುರುತಿದ್ದ ಬಡಗಿಗಳೆ! ಹೆಮ್ಮರದ ದಿಂಡುಗಳನ್ನು ದಡಿಯಕ್ಕೆ ಹಾಕಿ, ಉದ್ದವಾದ ಗರಗಸಗಳಿಂದ ಕೊಯ್ಯುತ್ತಿದ್ದಾರೆ! ಬಣ್ಣ ಬಣ್ಣದ ಮರದ ಹುಡಿ ರಾಶಿರಾಶಿಯಾಗಿ ಬಿದ್ದಿದ್ದು 'ಬಹಳ ದಿನಗಳಿಂದಲೂ ಈ ಕೆಲಸ ನಡೆಯುತ್ತಿದೆ' ಎಂದು ಸಾರುವಂತಿತ್ತು. ಬಡಗಿಗಳು ಸೆಟ್ಟರನ್ನು ಕಂಡು ಸ್ವಲ್ಪ ಅಪ್ರತಿಭರಾದರೂ ಅವರನ್ನು ಹತ್ತಿರಕ್ಕೆ ಕರೆದು, ಎಲೆಯಡಕೆ ಕೊಟ್ಟು, ಮಾತುಕತೆಯಾಡಿ ಉಪಚರಿಸಿದರು. ಸಂಭಾಷಣೆಯಿಂದ ಸೀತೆಮನೆ ಸಿಂಗಪ್ಪಗೌಡರು ಬಹಳ ದಿನಗಳಿಂದಲೂ ಕಳ್ಳನಾಟಾ ಕೊಯ್ಯಿಸುತ್ತಿದ್ದಾರೆ ಎಂಬ ಸಂಗತಿ ಸೆಟ್ಟರಿಗೆ ಗೊತ್ತಾಯಿತು. ಚಂದ್ರಯ್ಯಗೌಡರಿಗೆ ಮುಯ್ಯಿ ತೀರಿಸಿಕೊಳ್ಳಲು ಒಳ್ಳೆಯ ಅವಕಾಶ ಕಂಡುಹಿಡಿದೆನೆಂದು ಹಿಗ್ಗಿ, ಕಾನೂರಿನ ಕಡೆಗೆ ಹೊರಟರು. ಗರಗಸದ ಸದ್ದು ಬರುಬರುತ್ತ ದೂರವಾಗಿ ಕಿವಿಮರೆ ಯಾಯಿತು.

ಸೆಟ್ಟರು ತಾವು ಕಂಡ ದೃಶ್ಯದ ವಿಚಾರವಾಗಿ ಆಲೋಚಿಸುತ್ತ, ದಟ್ಟವಾದ ಕಾಡಿನ ಹಳುವಿನಲ್ಲಿ, ಎತ್ತುಬೀಳು ಕಾಲು ಕೀಸುತ್ತಿರಲು, ಬಳ್ಳಿತುರುಚಿ ಬತ್ತಲಾಗಿದ್ದ ಕಾಲಿಗೆ ಬಡಿದು ಪೀಡಿಸುತ್ತಿರಲು, ಒಮ್ಮೆ ಬೇಗ ಬೇಗ, ಒಮ್ಮೆ ಮೆಲ್ಲಮೆಲ್ಲನೆ ನಡೆದರು. ಹಠಾತ್ತಾಗಿ ಹಳುವಿನಲ್ಲಿ ಒಂದು ದಾರಿಯ ಜಾಡು ಕಾಣಲು ಅದನ್ನೆ ಹಿಡಿದು ನಡೆದರು. ಆ ಕಾಡಿನಲ್ಲಿ ಅಂತಹ ದಾರಿಯ ಜಾಡು ಹೇಗಾಯಿತೆಂಬುದು ಅವರಿಗೆ ಗೊತ್ತಾಗಲಿಲ್ಲ. ಆ ಕಾಲುದಾರಿ ನೆಟ್ಟಗೆ ಒಂದು ದೊಡ್ಡ ಬಗನಿಯ ಮರದ ಬುಡಕ್ಕೆ ಹೋಗಿದ್ದುದನ್ನು ಕಂಡಾಗ ಸೇರೆಗಾರರಿಗೆ ಅರ್ಥವಾಯಿತು. ಯಾರೋ ಲೈಸೆನ್ಸ್ ಇಲ್ಲದೆ ಕಳ್ಳಬಗನಿ ಕಟ್ಟಿದ್ದರು.

ಎತ್ತರವಾಗಿ ಬೆಳೆದಿದ್ದ ಆ ಬಗನಿ ಮರದ ನೆತ್ತಿಯಲ್ಲಿ ಅದರ ಹೂವಿಗೆ ಕಟ್ಟಿದ್ದ ಕಳ್ಳಿನ ಮಡಕೆಯ ಕರಿಯ ಗೋಳವು ನೇತಾಡುತ್ತಿತ್ತು. ಮರಕ್ಕೆ ಆನಿಸಿ ಬಳ್ಳಿಗಳಿಂದ ಬಲವಾಗಿ ಕಟ್ಟಿದ್ದ ಒಂದು ಬಿದಿರಿನ ಏಣಿಯ ಕಾಲುಗಳು ಸವೆದಿದ್ದರಿಂದಲೂ, ಅವುಗಳಿಗೆ ಹೊಸ ಮಣ್ಣು ಮೆತ್ತಿಕೊಂಡಿದ್ದರಿಂದಲೂ,

ಅಲ್ಲಿಯೆ ಪಕ್ಕದಲ್ಲಿ ಉಗುಳಿದ್ದ ತಂಬಾಕಿನ ಕೆಂಪು ಇನ್ನೂ ಹಸಿಯಾಗಿದ್ದುದರಿಂದಲೂ, ಸ್ವಲ್ಪ ಹೊತ್ತಿಗೆ ಮುಂಚೆ ಯಾರೋ ಅಲ್ಲಿಗೆ ಬಂದಿದ್ದರೆಂಬುದು ನಿರ್ವಿವಾದವಾಗಿತ್ತು. ಸೆಟ್ಟರಿಗೆ ಕಳ್ಳಿನ ಮಡಕೆಯನ್ನು ಕಂಡು ಬಾಯಲ್ಲಿ ನೀರೂರಿದರೂ ಏಣಿ ಹತ್ತುವ ಸಾಹಸಕ್ಕೆ ಹೋಗದೆ ತಮ್ಮ ದಾರಿ ಹಿಡಿಯುತ್ತಿದ್ದರು. ಆದರೆ ಪೊದೆಗಳಲ್ಲಿ ಏನೋ ಸದ್ದು ಕೇಳಿಸಿ ನಿಂತು ಪರೀಕ್ಷಿಸಿದರು ದೂರದ ಹಳುವಿನಲ್ಲಿ ಏನೋ ಅಲ್ಲಾಡಿದಂತಾಗಲು ಬಗ್ಗಿ ಚೆನ್ನಾಗಿ ನೋಡಿದರು. ಯಾವುದೋ ಪ್ರಾಣಿ ನಿಂತುದು ಅವರಿಗೆ ಕಾಣಿಸಿತು. ಆ ಹೊದರಿನಲ್ಲಿ ಅದು ಇಂತಹ ಪ್ರಾಣಿಯೇ ಎಂದು ನಿರ್ಧರಿಸಲಾಗಲಿಲ್ಲ. ತಡಮಾಡಿದರೆ ಓಡಿಹೋದೀತೆಂದು ಗುರಿಯಿಟ್ಟು ಈಡು ಹೊಡೆದರು.

"ಯಾರ್ರೋ ಅದು ಈಡು ಹೊಡ್ದೋರು?" ಎಂಬ ಮನುಷ್ಯವಾಣಿಯೊಂದು ಪ್ರಾಣಿ ನಿಂತಂತಿದ್ದ ಸ್ಥಳದಿಂದ ಕೇಳಿಸಿತು.

ಸೆಟ್ಟರಿಗೆ ಎದೆ ಹಾರಿ, ಮೈಮೇಲೆ ಕುದಿ ನೀರು ಚೆಲ್ಲಿದಂತಾಗಿ, ನಡುಗಿ, ಬೆವರಿ, ನಿಡುಸುಯ್ದು, ನಿಲ್ಲಲಾರದೆ ನೆಲದ ಮೇಲೆ ಕುಸಿದುಬಿಟ್ಟರು: ಪ್ರಾಣಿಯೆಂದು ಬಗೆದು ಯಾರನ್ನೋ ಕೊಂದುಬಿಟ್ಟೆನೆಂದು!

"ಯಾರ್ರೋ ಅದು ಈಡು ಹೊಡ್ದೋರು?" ಎಂದು ಮತ್ತೆ ಕೇಳುತ್ತ ಕಾನೂರು ಚಂದ್ರಯ್ಯಗೌಡರ ಬೇಲರ ಜಾತಿಯ ಜೀತದಾಳು ಬೈರನು ಹೊದರಿನಿಂದ ಹೊರಗೆ ಬಂದು ಕಾಣಿಸಿಕೊಂಡನು. ಸೆಟ್ಟರು ಅವನ ಕಣ್ಣಿಗೆ ಬಿದ್ದ ಕೂಡಲೆ "ನೀವೇನ್ರಯ್ಯಾ ಈಡು ಹೊಡ್ದಿದ್ದು?" ಎಂದು ಬಳಿಗೆ ಬಂದನು.

ಸೆಟ್ಟರು ಅವನನ್ನು ಮೂಕವಾಗಿ ಭಯಚಕಿತರಾಗಿ ದೃಷ್ಟಿಸಿದರು. ಅವನ ಕೊಳಕಾಗಿದ್ದ ಕರಿಯ ದೇಹದಲ್ಲಿ ಮೊಳಕಾಲಿನವರೆಗಿದ್ದ ಸೊಂಟದ ಪಂಚೆಯೊಂದಲ್ಲದೆ ಬೇರೆ ನೂಲು ಎಂಬ ಪದಾರ್ಥವೆ ಇರಲಿಲ್ಲ. ಮುಂದಲೆಯಲ್ಲಿ ಕೂದಲು ಹುಟ್ಟಿದ್ದರೂ ಲಾಳದಾಕಾರವಾಗಿ ಕೆತ್ತಿದ್ದ ಚೌರದ ಗುರುತು ಕಾಣುತಿತ್ತು. ಅವನ ಜುಟ್ಟು ಕಟ್ಟಿದ್ದರೂ ಕಾಲಾಂತರದಿಂದ ಎಣ್ಣೆ ಕಾಣದೆ ಒರಟಾಗಿ ಸಿಕ್ಕು ಸಿಕ್ಕಾಗಿ ಕೆದರಿಕೊಂಡಿತ್ತು. ಗಡ್ಡ ಮೀಸೆಗಳು ಅಂಗುಲ ಅಂಗುಲ ಬೆಳೆದಿದ್ದುವು. ಕಿವಿಯಲ್ಲಿ ಒಂಟಿಗಳೂ, ತೋಳಿನಲ್ಲಿ ಕರಿಯ ದಾರದಿಂದ ಬಿಗಿದು ಕಟ್ಟಿದ್ದ ತಾಮ್ರದ ತಾತಿಯೂ ಇದ್ದುವು. ಮಲೇರಿಯದ ಪ್ರಭಾವ ಹೊಟ್ಟೆಯ ಗಾತ್ರದಲ್ಲಿ ಮೈದೋರಿದ್ದರೂ ಅವನು ಆಳುತನದಲ್ಲೇನೂ ಕಡಮೆಯಾಗಿರಲಿಲ್ಲ. ಅವನ ಮೈಮೇಲಿದ್ದ ಸುಟ್ಟಗಾಯದ ಕಲೆಗಳು ಹಳ್ಳಿಯ ವೈದ್ಯದ ರಾಕ್ಷಸೀಭಾವಕ್ಕೆ ಪ್ರಮಾಣವಾಗಿದ್ದುವು. ಬತ್ತಲೆಯಾಗಿದ್ದ ಅವನ ಮುಖ ಕೈ ಮೈ ಕಾಲುಗಳಲ್ಲಿ ಗಾಯವಾಗಲಿ ರಕ್ತವಾಗಲಿ ತೋರದಿದ್ದುದನ್ನೂ, ಅವನ ವಾಣಿಯ ನಿರುದ್ವಿಗ್ನತೆ

ಯನ್ನೂ ಕಂಡು ಸೆಟ್ಟರಿಗೆ ಜೀವ ಬಂದಂತಾಗಿ ನಿಟ್ಟುಸಿರುಬಿಡುತ್ತ "ಹೌದು, ಮಾರಾಯ! ನಾನೇ ಹೊಡ್ಡಿದ್ದು!" ಎಂದರು.

ಸೆಟ್ಟರ ಸ್ಥಿತಿಯನ್ನು ನೋಡಿ ಬೈರನು "ಇದ್ಯಾಕ್ರಯ್ಯಾ ಹಿಂಗೆ ಮಾಡ್ತೀರಿ?" ಎಂದು ಕೇಳಿದನು.

"ನಿನಗೇನೂ ಆಗಲಿಲ್ಲವೇನೋ?"

"ಏನೂ ಆಗ್ಲಿಲ್ಲ!... ಯಾಕೆ?"

"ಯಾಕೂ ಇಲ್ಲ. ದೇವರೇ ಕಾಪಾಡಿದನಪ್ಪಾ" ಎಂದು ಸೆಟ್ಟರು ಕೋವಿಗೆ ನಮಸ್ಕಾರ ಮಾಡಿದರು.

"ಎಂತದಕ್ಕೆ ಹೊಡ್ಡಿದ್ದು?"

"ನಿನಗೇ"

"ನನಗೆ?"

"ಅದ್ಯಾಕೆ ಹಾಗೆ ಅಡಗಿಕೊಂಡು ಕೂತಿದ್ದೆ, ಮಾರಾಯ? ಕೊಂದೇಹಾಕಿದ್ದೆ ನಲ್ಲಾ ನಿನ್ನ!" ಎಂದು ಸೆಟ್ಟರು ನಡೆದುದನ್ನು ವಿವರಿಸಿದರು.

"ನಾನು ಹೆಡಗೆ ಬಳ್ಳಿಗಾಗಿ ಬಂದವನು ಅಲ್ಲಿ ಕೂತಿದ್ದೆ."

ಸೆಟ್ಟರಿಗೆ ತಾನು ಹೊಡೆದಿದ್ದ ಈಡಿನ ಗುರಿ ಹೇಗೆ ತಪ್ಪಿತೆಂದು ಅರ್ಥವಾಗಲಿಲ್ಲ. ಇಬ್ಬರೂ ಸೇರಿ ಈಡಿನ ಜಾಡು ನೋಡಿದರು. ಯಾವ ಮರಕ್ಕಾಗಲಿ ಗಿಡಕ್ಕಾಗಲಿ ಎಲೆಗಾಗಲಿ ಎಷ್ಟು ಹುಡುಕಿದರೂ ಚರೆ ತಗುಲಿದುದು ಕಾಣಿಸಲಿಲ್ಲ.

"ಬೈರಾ, ನನಗೂ ಗ್ರಹಚಾರ ನೆಟ್ಟಗಿತ್ತು; ನಿನಗೂ ಆಯುಸ್ಸು ಗಟ್ಟಿಯಾಗಿತ್ತು. ಇಲ್ಲದಿದ್ದರೆ ಅಷ್ಟು ಚೆನ್ನಾಗಿ ಗುರಿಯಿಟ್ಟ ಈಡು ತಪ್ಪುವುದೆಂದರೇನು? ಚರೆ ಬಿದ್ದ ಗುರುತೇ ಕಾಣದೆ ಮಂಗಳಮಾಯವಾಗುವುದೆಂದರೇನು?.... ಈ ಸಾರಿ ಭೂತರಾಯನಿಗೆ ಒಂದು ಕೋಳಿ ಹೆಚ್ಚಾಗಿ ಕೊಡುತ್ತೇನಪ್ಪಾ!"

ಸೆಟ್ಟರು ಈಡಿನ ಜಾಡು ನೋಡುತ್ತ ನೋಡುತ್ತ ಬೈರನು ಅಡಗಿ ಕೂತಿದ್ದ ಜಾಗಕ್ಕೆ ಸಮೀಪವಾದರು.

ಬೈರನು ಗಾಬರಿಯಾಗಿ "ಹಾಳಾಗಿ ಹೋಗಲಿ, ಹಿಂದಕ್ಕೆ ಬನ್ನಿ, ಮತ್ಯಾಕೆ ಮುಂದೆ ಹೋಗ್ತೀರಿ" ಎಂದು ಅವರನ್ನು ಹಿಂದಕ್ಕೆ ಕರೆದನು.

ಆದರೆ ಸೆಟ್ಟರ ಮೂಗಿಗೆ ಬೈರನ ಗುಟ್ಟು ಆಗಲೇ ಬಿದ್ದು ಹೋಗಿತ್ತು. ಬೈರನು ಅಡಗಿದ್ದ ಜಾಗದಲ್ಲಿ ಒಂದು ಕಂಬಳಿ, ಒಂದು ಮಡಕೆ, ಒಂದು ಬಗನಿಯ ಕತ್ತಿ ಇದ್ದುವು. ನೋಡುತ್ತಾರೆ: ಮಡಕೆಯ ತುಂಬಾ ಆಗತಾನೆ ಮರದಿಂದ ಇಳಿಸಿದ್ದ ನೊರೆ ನೊರೆ ಕಳ್ಳು! ಘಮ್ಮೆಂದು ವಾಸನೆ ಬರುತ್ತಿದೆ!

"ಏನೋ ಇದು, ಬೈರಾ!.. ನೀನೆ ಏನೋ ಆ ಬಗನಿ ಕಟ್ಟಿದವನು?"

ಬೈರನ ಮುಖ ಸಣ್ಣಗಾಯಿತು. ಸೆಟ್ಟರು ಹೊಡೆದ ಈಡು ತಗುಲಿದ್ದರೂ ಅವನಿಗಷ್ಟು ನೋವಾಗುತ್ತಿರಲಿಲ್ಲ. ತನ್ನ ಗುಟ್ಟು ರಟ್ಟಾಯಿತೆಂದು ಬೆದರಿದನು. ಸೆಟ್ಟರ ಬಳಿಗೆ ಬಂದು ಕಾಲಿಗೆ ಬಿದ್ದು "ನಿಮ್ಮ ದಮ್ಮಯ್ಯಾ ಅಂತೀನಿ! ಯಾರಿಗೂ ಹೇಳಬೇಡಿ" ಎಂದನು.

"ಅಲ್ಲವೋ, ನಿನ್ನ ಕಳ್ಳ ಬಗನಿಯ ದೆಸೆಯಿಂದ ನನ್ನ ಕುತ್ತಿಗೆಗೆ ನೇಣಾ ಗುತ್ತಿತ್ತಲ್ಲೋ! ನಿನ್ನ ಮನೆ ಹಾಳಾಗಲಿ! ಅಲ್ಲಿ ಯಾಕೆ ಕೂತುಕೊಂಡಿದ್ದೆಯೋ!"

"ಏನೋ ಸ್ವಾಮಿ, ದೇವ್ರು ನಿಮ್ಮ ಕಾಪಾಡ್ದ! ನನ್ನ ನೀವು ಕಾಪಾಡ್ಬೇಕು ...ನೀವು ಬರೋ ಸಬ್ದಾ ಕೇಳಿ ಅಡಗಿದ್ದೆ!"

"ಹೋಗಲಿ ಬಿಡು. ಆಗಿದ್ದು ಆಗಿ ಹೋಯ್ತು...ಕಳ್ಳು ಚೆನ್ನಾಗಿದೆಯೇನೋ?.."

ಬೈರನು ಬೇಲರವನು; ಅಸ್ಪೃಶ್ಯನು. ಆದರೂ ಯಾರೂ ಕಾಣದ ಕಾಡಿನಲ್ಲಿ ಸೆಟ್ಟರು ಬಗನಿಯ ಹಾಳೆಯಲ್ಲಿ ಅವನು ಬೊಗ್ಗಿಸಿಕೊಟ್ಟ ನೊರೆಗಳ್ಳನ್ನು ಚೆನ್ನಾಗಿ ಹೀರಿದರು. ಆಗಲೇ ಮಧ್ಯಾಹ್ನದ ಸಮಯವಾಗಿತ್ತು. ಇಬ್ಬರೂ ಒಬ್ಬರ ಗುಟ್ಟನ್ನೊಬ್ಬರು ಮನಸ್ಸಿನಲ್ಲಿಟ್ಟುಕೊಂಡು ಕಾನೂರಿನ ಕಡೆಗೆ ಇಳಿದರು.

ಬೈರನಿಗೆ ಗುಂಡು ತಾಗದಿದ್ದುದಕ್ಕೆ ಕಾರಣ ಸೆಟ್ಟರ ಮನಸ್ಸಿಗೆ ದಾರಿಯಲ್ಲಿ ತಟಕ್ಕನೆ ಗೊತ್ತಾಯಿತು. ಅವರು ಕೋವಿಗೆ ತುಂಬಲು ಚರೆಯನ್ನು ಕೈಯಲ್ಲಿ ಹಿಡಿದಿದ್ದಾಗ ಹುಂಜ ಎದ್ದು ಓಡತೊಡಗಿತಷ್ಟೆ? ಅವಸರದಲ್ಲಿ ಚರೆಯನ್ನು ನಳಿಗೆಗೆ ಸುರಿದು ಪ್ರಾಣಿಯನ್ನು ಹಿಂಬಾಲಿಸಿದ್ದರು. ಆಮೇಲೆ ನಿರಾಶರಾಗಿ ಹಿಂತಿರುಗಿದವರಿಗೆ, ಚರೆ ಕೆಳಗೆ ಉರುಳಿ ಬಿದ್ದುಹೋಗದಂತೆ ನಳಿಗೆಗೆ ಕತ್ತವನ್ನು ಹಾಕಿ ಇಡಿಯಲು ಮರೆತುಹೋಯಿತು. ಕೋವಿಯ ಕಿವಿಗೆ ಕೇಪನ್ನು ಮಾತ್ರ ಹಾಕಿಕೊಂಡು ಮುಂದಿನ ಬೇಟೆಗೆ ಹೊರಟಿದ್ದರು. ದಾರಿಯಲ್ಲಿ ಕೋವಿಯನ್ನು ಕೆಳಗೂ ಮೇಲೂ ಅಲ್ಲಾಡಿಸುತ್ತ ಸಾಗಿದಾಗ ಎಲ್ಲಿಯೋ ಚರೆಯೆಲ್ಲ ನೆಲಕ್ಕುರುಳಿ ಹೋಗಿದ್ದುವು. ಆದ್ದರಿಂದಲೇ ಅವರು ಈಡು ಹೊಡೆದಾಗ ಬರಿಯ ಸದ್ದು ಮಾತ್ರವಾಗಿ ಬೈರನು ಬದುಕಿಕೊಂಡದ್ದು!

ಸೆಟ್ಟರು ಹುಂಜನಿಗೆ ಮನಸ್ಸಿನಲ್ಲಿಯೆ ವಂದಿಸಿದರು.

೭

## ಕಡೆಗೋಲು ಕಂಬದ ಸಾಕ್ಷಿಯಲ್ಲಿ

ಅಡುಗೆ ಮನೆಯ ಒಲೆಯಲ್ಲಿ ಅಗ್ನಿ ತನ್ನ ಲೀಲಾಮಯ ಜಿಹ್ವೆಗಳಿಂದ ಒಲೆಯ ಮೇಲಿಟ್ಟಿದ್ದ ಕಲ್ಲುಗಡಿಗೆಯ ಮಷೀಮಯವಾಗಿದ್ದ ಬೆನ್ನನ್ನು ನೆಕ್ಕುತ್ತಿದ್ದನು. ಧರ್ಮರಾಯ, ಜನಮೇಜಯರಾಯ ಮೊದಲಾದ ಪುರಾಣಪುರುಷರ ಪುಣ್ಯ ಯಾಗಗಳಲ್ಲಿ ಪೂತ ಹವಿಸ್ಸನ್ನು ಆಸ್ವಾದಿಸಿದ್ದ ಪಾವನ ಪವನಸಖನು, ಕಲಿಯುಗದ ಮಹಿಮೆಯಿಂದಲೊ ಎಂಬಂತೆ, ಕಾನೂರು ಸುಬ್ಬಮ್ಮನ ಕೈಗೆ ಬಿದ್ದು, ಕಲ್ಲು ಗಡಿಗೆಯ ಬೆನ್ನು ನೆಕ್ಕುವ ಪತಿತ ಕರ್ತವ್ಯದಲ್ಲಿ ತನ್ಮಯನಾಗಿದ್ದನು. ಸುಬ್ಬಮ್ಮ ಕೈಲಿ ಸೌಟು ಹಿಡಿದು ಒಲೆಯ ಬುಡದಲ್ಲಿ ನಿಂತಿದ್ದಳು, ಅಗ್ನಿಗೆ ಅಂಕುಶವಾಗಿ! ಗಡಿಗೆಯಲ್ಲಿ ಬೇಯುತ್ತಿದ್ದ ಮೇಲೋಗರವು ಗೊಜಗೊಜನೆ ತಕಪಕಗುಟ್ಟುತ್ತ ಆವಿಯ ಬೆಳ್ಳುಸಿರು ಬಿಡುತ್ತಿತ್ತು.

ಸುತ್ತಣ ಜಗತ್ತಿಗೆಲ್ಲ ಬೆಳಗಾಗಿದ್ದರೂ ಅಡುಗೆ ಮನೆಗೆ ಇನ್ನೂ ಮಬ್ಬು ತಪ್ಪಿರಲಿಲ್ಲ. ಏಕೆಂದರೆ ಅದಕ್ಕಿದ್ದುದು ಒಲೆಯ ಮೇಲುಗಡೆ ಒಂದೇ ಕಿಟಕಿ. ಆದರೂ ಪಾಕಶಾಲೆಯ ರೂಪುರೇಖೆ ತಕ್ಕಮಟ್ಟಿಗೆ ಪ್ರದರ್ಶಿತವಾಗಿತ್ತು. ಬಾಗು ಮರಿಗೆ, ಉಪ್ಪಿನಮರಿಗೆ, ಕೈಯದ್ದುವ ಹಿತ್ತಾಳೆಯ ತಂಬಾಳೆ, ಸಿಕ್ಕದ ಮೇಲೆ ಮೆಣಸಿನಕಾಯಿಯ ಬುಟ್ಟಿ, ಮೊಸರು ಗಡಿಗೆ, ಮಜ್ಜಿಗೆ ಚರಿಗೆ, ಕಡೆಗೋಲು ಕಂಬ, ತುಪ್ಪ ಬೆಣ್ಣೆ ಮೊದಲಾದವುಗಳನ್ನು ಇಟ್ಟು ಬೀಗ ಹಾಕಿದ ಒಂದು ಕಲಬಿ, ಮಣೆಯ ರಾಶಿ, ಅಡುಗೆ ಮನೆಯ ಒಂದು ಅನಿವಾರ್ಯವಾದ ಅಂಗವಾಗಿ ಒಲೆಯ ಪಕ್ಕದ ಬೆಚ್ಚನೆಯ ಮೂಲೆಯಲ್ಲಿ ತನ್ನೆರಡು ಮರಿಗಳೊಡನೆ ಪವಡಿಸಿದ್ದ ಬೆಕ್ಕು, ಅಲ್ಲಲ್ಲಿ ಹಾರಿ ಹಾರಿ ಕೂರುತ್ತಿದ್ದ ಮನೆ ನೊಣಗಳು, ಇತ್ಯಾದಿ. ಯಾರಾದರೂ ಪ್ರಾಕ್ತನ ವಿಮರ್ಶನ ವಿಚಕ್ಷಣರು ಆ ಅಡುಗೆಮನೆಯನ್ನು ಪ್ರವೇಶಿಸಿದ್ದರೆ ಪುರಾಣ ಪ್ರಸಿದ್ಧವಾದ ಗವಿಯನ್ನೊ ಅಥವಾ ಪಾಳುಬಿದ್ದ ದೇವಾಲಯವನ್ನೊ ಮನಸ್ಸಿಗೆ ತರುತ್ತಿತ್ತು. ಅದರ ವಾತಾವರಣ ಅಷ್ಟೊಂದು ಪೂರ್ವಿಕತೆಯಿಂದ ತುಂಬಿಕೊಂಡಿತ್ತು!

ಅಲ್ಲಿ ಅನೇಕ ತಲೆಮಾರುಗಳು ತಿಂದುಂಡುಹೋಗಿದ್ದುವು. ಆ ಮೂರಡಿಯ ಎತ್ತರದ ಕಡೆಗೋಲು ಕಂಬವು ಶತಮಾನಗಳಿಗೆ ಸಾಕ್ಷಿಯಾಗಿ ನಿಂತಿತ್ತು. ಎಷ್ಟು ಜನ ಹೆಣ್ಣುಗಳು ಅದರ ಮುಂದೆ ಕುಳಿತು ಪ್ರಾತಃಕಾಲದಲ್ಲಿ ಮೊಸರು ಕಡೆದಿದ್ದಾರೆ! ಅದಕ್ಕೆ ಎಷ್ಟು ಕೋಮಲ ಕರಗಳ ಸ್ಪರ್ಶವಾಗಿದೆ! ಎಷ್ಟು

ಕಂಠಗಳು, ಎಷ್ಟು ರೂಪಗಳು, ಎಷ್ಟು ವಿಧವಾದ ಸಂಭಾಷಣೆಗಳು, ಎಷ್ಟು ಕ್ಷುದ್ರ ಕಲಹಗಳು ಅದಕ್ಕೆ ತಿಳಿದಿವೆ! ವಾಸುವಿನ ತಾಯಿ, ಚಂದ್ರಯ್ಯಗೌಡರ ತಾಯಿ, ಅವರ ಅಜ್ಜನ ತಾಯಿ, ಅವರ ಅಜ್ಜನಜ್ಜನಜ್ಜನ ತಾಯಿ — ಎಲ್ಲರೂ ಪರಿಚಿತರು ಆ ಕಡೆಗೋಲು ಕಂಬಕ್ಕೆ! ಆ ಕಡೆಗೋಲು ಕಂಬಕ್ಕೆ ಎಲ್ಲಿಯಾದರೂ ಮಾತಾಡುವ ಶಕ್ತಿ ಬಂದರೆ ಎಷ್ಟು ಗುಟ್ಟುಗಳು ರಟ್ಟಾಗಿಹೋಗುತ್ತವೆ! ಎಷ್ಟು ಸ್ನೇಹ ಪ್ರೇಮಗಳು ನುಚ್ಚುನೂರಾಗಿ ಮಣ್ಣುಗೂಡುತ್ತವೆ! ಎಷ್ಟು ದ್ವೇಷ ಮಾತ್ಸರ್ಯಗಳು ಹಾಳಾಗಿ, ಮತ್ತೆ ಸ್ನೇಹ ಶಾಂತಿಗಳು ಮೂಡುತ್ತವೆ! ಅದಕ್ಕೆಲ್ಲಿಯಾದರೂ ಬಾಯಿ ಬಂದರೆ ದೇವರೇ ಗತಿ! ರಾಮಾಯಣ ಮಹಾಭಾರತಗಳಿಗಿಂತಲೂ ದೊಡ್ಡ ಪುರಾಣವಾಗಿ ಹೋಗುತ್ತದೆ! "ಅಯ್ಯೋ ನಾವು ರಾಮ, ಸೀತೆ, ಹನುಮಂತ, ರಾವಣ, ಪಂಚಪಾಂಡವರು, ಕೃಷ್ಣ, ಕೌರವ, ದ್ರೌಪದಿ ಇವರುಗಳ ಕಥೆಯೇ ಹೆಚ್ಚೆಂದು ತಿಳಿದಿದ್ದೆವಲ್ಲಾ!" ಎಂದು ವಾಲ್ಮೀಕಿ ವ್ಯಾಸಾದಿ ಕವಿವರ್ಯರೂ ನಾಚಿ ತಲೆಬಾಗಬೇಕಾಗುತ್ತದೆ. ಸದ್ಯಕ್ಕೆ ಅದಕ್ಕೆ ಬಾಯಿಲ್ಲ; ಅಥವಾ ಇದ್ದರೂ ಇಲ್ಲದವರಂತೆ ನಟಿಸುತ್ತಿದೆ. ಆದ್ದರಿಂದ ಅವರೆಲ್ಲರೂ ಬದುಕಿಕೊಂಡಿದ್ದಾರೆ!

"ವಾಸೂ, ನಿನ್ನೆ ನೀನು ಬೆಣ್ಣೆ ಕದ್ದಿದ್ದು ಹೇಳಲೇನು?"

ಕೆಮ್ಮಣ್ಣು ಬಳಿದಿದ್ದ ಗೋಡೆಗೆ ಒರಗಿ ಮಣೆಯ ಮೇಲೆ ಕೂತು, ನೆಲದ ಮೇಲೆ ಬಾಳೆಯ ಎಲೆಯಲ್ಲಿದ್ದ ಉಪ್ಪಿಟ್ಟನ್ನು ಅನನ್ಯ ಮನಸ್ಕನಾಗಿ ಮುಕ್ಕುತ್ತಿದ್ದ ವಾಸು ಬೆಚ್ಚಿ ತಲೆಯೆತ್ತಿ ನೋಡಿದನು. ಕಡೆಗೋಲು ಕಂಬವು ಅವನನ್ನೇ ದುರುದುರು ನೋಡಿ ಮುಗುಳುನಗುವಂತಿತ್ತು! ವಾಸುವಿಗೆ ದಿಗಿಲಾಯಿತು, ಯಾರು ನೋಡಿದ್ದರು ತಾನು ಬೆಣ್ಣೆ ಕದ್ದುದನ್ನು ಎಂದು! ತನಗೆ ಕೇಳಿಸಿದ್ದ ಧ್ವನಿ ತೀರಿಕೊಂಡ ಅಜ್ಜಮ್ಮನ ಧ್ವನಿಯಂತಿತ್ತು. ಅಜ್ಜಮ್ಮನೇ ಕಡೆಗೋಲು ಕಂಬದಲ್ಲಿ ಅಡಗಿಕೊಂಡು ಮಾತಾಡಿದರೆಂದು ಭಾವಿಸಿ ಮನಸ್ಸಿನಲ್ಲಿಯೆ "ಅಜ್ಜಮ್ಮ, ನಿನ್ನ ದಮ್ಮಯ್ಯಾ! ಹೇಳಬೇಡ! ಚಿಕ್ಕಮ್ಮ ಇಲ್ಲೇ ನಿಂತಿದೆ!" ಎಂದು ಮತ್ತೆ ಉಪ್ಪಿಟ್ಟು ಮುಕ್ಕಲು ತೊಡಗಿದನು. ಉಪ್ಪಿಟ್ಟು ಕೆನ್ನೆ ಗಲ್ಲ ಮೂಗು ಎಲ್ಲವನ್ನೂ ಆವರಿಸಿತ್ತು.

ಸ್ವಲ್ಪ ದೂರದಲ್ಲಿ ತರಕಾರಿ ಹೆಚ್ಚುತ್ತ ಕುಳಿತಿದ್ದ ನಾಗಮ್ಮನವರು ತಾವು ಮೆಲ್ಲಗೆ ಕೇಳಿದ ಪ್ರಶ್ನೆಗೆ ವಾಸು ಬೆಚ್ಚಿದುದನ್ನು ಕಂಡು, ಮುಗುಳುನಕ್ಕು, ಕನಿಕರದಿಂದ ಸುಮ್ಮನಾದರು. ಅಣ್ಣಂದಿರಂತೆಯೆ ಕ್ರಾಪು ಬಿಡುತ್ತೇನೆಂದು ಅವನ ತಲೆಯಲ್ಲಿ ಕೂದಲು ಜುಟ್ಟಿಗೂ ಕ್ರಾಪಿಗೂ ಮಧ್ಯಸ್ಥವಾಗಿ ಕ್ರಾಂತಿಯಾದಂತಿತ್ತು. ಆ ಕೇಶಪಾಶಗಳಲ್ಲಿ ಒಂದು ಪಟಾಲಂ ಅವನ ಎಡಗಡೆಯ ನುಣ್ಣಗೆದಪು

ಮತ್ತು ಕಿವಿಗಳನ್ನು, ಜೇನುಹುಟ್ಟಿಯನ್ನು ಹೆಜ್ಜೇನು ಹುಳುಗಳು ಮುತ್ತು ವಂತೆ ಮುತ್ತಿದ್ದುವು. ಗುಂಡಿಗಳೆಲ್ಲಾ ಗಡಿಪಾರಾಗಿದ್ದ ಅವನ ಷರಟು 'ಆ' ಎಂದು ಬಾಯ್ದೆರೆದುಕೊಂಡು ಬೀದಿಯ ಹುಚ್ಚನಂತೆ ಅಸ್ತವ್ಯಸ್ತವಾಗಿತ್ತು. ಅದರ ಮೇಲಿದ್ದ ಕೊಳೆಯ ಭಾರವು ಒಂದು ಘಟ್ಟಿ ಸಾಬೂನಿಗೆ ಬೆವರು ಕೀಳಿ ಸುವಂತಿತ್ತು. ಅವನುಟ್ಟಿದ್ದ ಅಡ್ಡಪಂಚೆಯೂ ಷರಟಿನ ಸಂಗಾತಿಯಾಗುವು ದಕ್ಕೆ ಯೋಗ್ಯವಾಗಿಯೆ ಇತ್ತು. ನಾಗಮ್ಮನವರಿಗೆ ಅವನನ್ನು ಕಂಡು ಮುದ್ದು ಸೂಸಿತು. ತರಕಾರಿಯನ್ನು ಕೈಯಲ್ಲಿಯೆ ಹಿಡಿದು ಅವನನ್ನೇ ನೋಡತೊಡಗಿ ದರು.

ವಾಸು ಎಲೆಯ ಮೇಲಿದ್ದ ಉಪ್ಪಿಟ್ಟನ್ನು ಪೂರೈಸಿ "ಚಿಕ್ಕಮ್ಮಾ, ಮತ್ತಿಷ್ಟು ಉಪ್ಪಿಟ್ಟು!" ಎಂದನು.

ಸುಬ್ಬಮ್ಮ ಸಿಡುಕಿನಿಂದ "ಏನು ಹೊಟ್ಟೇನೋ ನಿನ್ದು? ಉಪ್ಪಿಟ್ಟಿಲ್ಲ!" ಎಂದು ಸೌಟಿನಿಂದ ಗಡಿಗೆಯಲ್ಲಿ ಬೇಯುತ್ತಿದ್ದ ಪದಾರ್ಥವನ್ನು ತಿವಿದು ತಿರುವ ತೊಡಗಿದಳು.

ವಾಸು ಹತಾಶನಾಗಿ ಹನಿಗಣ್ಣಾಗಿ ತನ್ನೆದುರು ನೆಲದ ಕಡೆಗೆ ನೋಡಿದನು. ಆಗತಾನೆ ಬಿಸಿಲು ಕಿಟಕಿಯ ಸರಳುಗಳನ್ನು ದಾಟಿ ಬಂದು ಪಟ್ಟೆಪಟ್ಟೆಯಾಗಿ ಬಿದ್ದಿತ್ತು. ಹಾಗೆಯೆ ಕಿಟಕಿಯ ಕಡೆಗೆ ನೋಡಿದನು. ಹೊರಗಡೆ ಹೊಂಬಿಸಿಲು ಹಲಸಿನ ಮರದ ತಳಿರಿನ ಮೇಲೆ ನಲಿದಾಡುತ್ತಿತ್ತು. ದೂರದ ಕಾಡುಮರಗಳ ಹಸುರು ಅವನನ್ನು ಕರೆಯುವಂತೆ ತೋರಿತು. ಅಷ್ಟರಲ್ಲಿ ಕಾಡಿನಿಂದ ಒಂದು ಈಡಿನ ಸದ್ದೂ ಕೇಳಿಸಿತು. ಅಂದು ಅವನು ಮಾಡಬೇಕಾಗಿದ್ದ ಸಾಹಸ ಕರ್ತವ್ಯ ಗಳೆಲ್ಲ ನೆನಪಿಗೆ ಬಂದುವು: ಹೂವಣ್ಣಯ್ಯ ರಾಮಣ್ಣಯ್ಯ ಬರುತ್ತಾರೆ; ಅವರಿಗೆ ಕಲ್ಲುಸಂಪಗೆ ಹಣ್ಣು, ಬೆಮ್ಮಾರಲ ಹಣ್ಣು ತರಬೇಕು. ತಾನು ಹಿಂದಿನ ದಿನ ಒಡ್ಡಿದ್ದ ಉರುಳಿನಲ್ಲಿ ಹಕ್ಕಿ ಸಿಕ್ಕಿಬಿದ್ದಿದೆಯೋ ಏನೋ ನೋಡಬೇಕು. ಆ ಹುಳಿಚೊಪ್ಪಿನ ಮಟ್ಟಿನಲ್ಲಿ ಪಿಕಳಾರನ ಹಕ್ಕಿಯ ಮೊಟ್ಟೆಗಳು ಏನಾಗಿವೆಯೋ ನೋಡಬೇಕು. ಬೈರನ ಮಗ ಗಂಗ ಹುಡುಗನ ಹತ್ತಿರ ಕೊಳಲು ಮಾಡಲು ಹೇಳಿದುದು ಎಲ್ಲಿಯವರೆಗೆ ಸಾಗಿದೆಯೊ ವಿಚಾರಿಸಬೇಕು. ನಿನ್ನೆ ರಬ್ಬರು ಬಿಲ್ಲಿ ನಿಂದ ಹೊಡೆದ ಹಕ್ಕಿಯೊಂದು ಪೊದೆಗೆ ಬಿದ್ದು, ಎಷ್ಟು ಅರಸಿದರೂ ಸಿಕ್ಕಲಿಲ್ಲ ವಾದ್ದರಿಂದ, ಅದನ್ನೂ ಪತ್ತೆ ಮಾಡಬೇಕು. ಯೋಚಿಸಿದಂತೆಲ್ಲ ಪಟ್ಟಿ ಉದ್ದ ವಾಗುತ್ತ ಹೋಯಿತು. ಹಟಮಾಡಿ ಉಪ್ಪಿಟ್ಟು ಈಸಿಕೊಳ್ಳಲು ಹೊತ್ತಿರಲಿಲ್ಲ. ಕಣ್ಣೀರುದುರುತ್ತಿರಲು ಸಿಟ್ಟಿನಿಂದ ಲೋಟದಲ್ಲಿದ್ದ ಕಾಫಿಯನ್ನು ಒಂದೇ ಗುಟುಕಿಗೆ ಕುಡಿದು, ಲೋಟವು ಸದ್ದಾಗುವಂತೆ ನೆಲಕ್ಕೆ ಬಡಿದು "ಇದ್ರಪ್ಪನ್ಮನೇ

ಗಂಟು! ಹಡ್ಬೇಮುಂಡೆ!..." ಎಂದು ನಾನಾವಿಧವಾಗಿ ಗೊಣಗುಟ್ಟಿ ಬಯ್ಯುತ್ತ, ಅಡುಗೆಮನೆಗೆ ಬರುತ್ತಿದ್ದ ಅವನ ಪುಟ್ಟಕ್ಕಯ್ಯನು ಏನಾಯಿತೆಂದು ಕೇಳಿದರೂ ನಿಲ್ಲದೆ, ಉತ್ತರ ಹೇಳದೆ, ರಭಸದಿಂದ ಹೊರಗೆ ನುಗ್ಗಿದನು.

ಇದನ್ನೆಲ್ಲ ನೋಡುತ್ತ ಕುಳಿತಿದ್ದ ನಾಗಮ್ಮನವರ ಮೈ ಬೆಂಕಿಯಾಗಿತ್ತು. ಪುಟ್ಟಮ್ಮ ಒಳಗೆ ಬರಲು ಅವಳೊಡನೆ ನಡೆದುದನ್ನೆಲ್ಲ ಖಾರವಾಗಿ ಸ್ವಲ್ಪ ಗಟ್ಟಿಯಾಗಿಯೆ ಹೇಳಿದರು.

ವಾಸು ಬೈದುದು ಸುಬ್ಬಮ್ಮನಿಗೆ ಕೇಳಿಸಿ, ಆಕೆಯ ಮನಸ್ಸಾಗಲೆ ಅಗ್ನಿಪರ್ವತವಾಗಿತ್ತು. ನಾಗಮ್ಮನವರು ಹೇಳಿ ಮುಗಿಸಿದ ಕೂಡಲೆ ಮಾತಿನ ಮಳೆ ಸುರಿಯತೊಡಗಿತು. ನಡು ನಡುವೆ ಬೈಗಳದ ಆಲಿಕಲ್ಲುಗಳೂ ಗುಂಡುಗಳಂತೆ ಸಿಡಿಯುತ್ತಿದ್ದುವು:

"ಗಂಡನ್ನ ಕಳಕೊಂಡ ಮುಂಡೇರ ಹಣೇಬರವೇ ಹಿಂಗೆ...ಅವರ ಕಣ್ಣು ಇಂಗೇಹೋಗಲಿ...ಸುಳ್ಳುಸುಳ್ಳು ಹೇಳಾದು, ಚಾಡಿ ಹೇಳಾದು...ಅವರ ನಾಲಗೆ ಬಿದ್ದೇಹೋಗಲಿ...ನಾನೀ ಹಾಳುಮನೆಗೆ ಯಾಕೆ ಬಂದೆನೋ, ದೇವರ ಕಣ್ಣಿಗೆ ಒರಲೆ ಹಿಡಿದು ಹೋಗಾಕೆ! ಗಂಜಿ ಕುಡ್ಕೊಂಡಿರ್ತಿದ್ದೆ...ಅವರ ಬಾಯಿಗೆಲ್ಲ ಹುಳ ಬಿದ್ದು ಹೋಗಾಕೆ... ಏನು ಉರಿಸ್ತಾರೊ ...ಏನು ಉರೀತಾರೊ...ಇಬ್ಬರನ್ನು ತಿಂದ ಮಾರಿ ಮೂರ್ನೇಯವಳನ್ನೂ ತಿನ್ನಾಕೆ ನೋಡ್ತದೆ...ಮಖಕ್ಕೆ ಬೆಂಕಿ ಹಾಕ... ಹುಡುಗರು ಮಕ್ಕಳ್ನೆಲ್ಲಾ ನನ್ನ ಮೇಲೆ ಎತ್ತಿಕಟ್ಟಿ ಬಾಯಿಗೆ ಬಂದ್ಹಂಗೆ ಬಯ್ಸೋದೆ!..."

"ಯಾರೇ ಎತ್ತಿಕಟ್ಟಿದ್ದು? ಯಾವಾಗ್ಲೆ?"

"ಅವನ ಕಡೆಗೆ ಕಣ್ಣು ಮಿಸುಗಿದ್ದು ನನಗೆ ಕಾಣಲಿಲ್ಲೇನೋ?"

"ಬಾಯಿಗೆ ಬಂದ್ಹಂಗೆ ಬಯ್ತಿಯಾ? ದಿಂಡೆ ಬಸವಿ!"

"ಯಾರೇ ದಿಂಡೆ ಬಸವಿ? ಹಾದರಗಿತ್ತಿ!"

ನಾಗಮ್ಮನವರಿಗೆ ಸಹಿಸಲಸಾಧ್ಯವಾಯಿತು. ಸುಬ್ಬಮ್ಮ ಆ ರೀತಿ ಮೇರೆ ಮೀರಿ ಎಂದೂ ಬೈದಿರಲಿಲ್ಲ. ಮುಂದೇನು ಮಾಡುತ್ತಿದ್ದರೋ ಏನೋ? ಅಷ್ಟರಲ್ಲಿ ಎಲ್ಲವನ್ನೂ ಆಲಿಸುತ್ತಿದ್ದ ಪುಟ್ಟಮ್ಮ "ದೊಡ್ಡಮ್ಮ, ಸುಮ್ಮನಿರೆ! ಆ ನಾಯಿ ಕೈಲಿ ಏನು ಮಾತು?" ಎಂದಳು.

"ಯಾರೇ ನಾಯಿ? ಬಜಾರಿ!" ಎಂದು ಸುಬ್ಬಮ್ಮ ಸೌಟಿನೊಡನೆ ಮುಂದೆ ಬಂದಳು.

ಪುಟ್ಟಮ್ಮ "ಬಾ! ನೋಡಾನ!" ಎಂದು ಎದ್ದು ನಿಂತಳು.

ಚಿಕ್ಕಂದಿನಿಂದಲೂ ಕಷ್ಟಮಾಡಿ ಬೆಳೆದಿದ್ದ ಸುಬ್ಬಮ್ಮ ಪುಟ್ಟಮ್ಮನಿಗಿಂತಲೂ

ಬಲಿಷ್ಠೆಯಾಗಿದ್ದರೂ ಶ್ರೀಮಂತ ಕನ್ಯೆಯ ವ್ಯಕ್ತಿತ್ವಕ್ಕೆ ಅಳುಕಿ ಗೊಣಗುತ್ತ ಹಿಂದಕ್ಕೆ ಹೋದಳು.

ಅಷ್ಟರಲ್ಲಿ ಕಲ್ಲುಗಡಿಗೆಯಲ್ಲಿದ್ದ ಪಲ್ಯ ಹೊತ್ತಿಹೋಗಿತ್ತು. ಸುಬ್ಬಮ್ಮ ಆ ಕೋಪದಲ್ಲಿ ಗಡಿಗೆಯನ್ನು ಒಲೆಯ ಮೇಲಿಂದೆತ್ತಿ ನೆಲದ ಮೇಲೆ ಸ್ವಲ್ಪ ಜೋರಾಗಿಯೆ ಇಟ್ಟಳು. ಅನೇಕ ವರ್ಷಗಳಿಂದ ಬಾಳಿಕೊಂಡು ಬಂದಿದ್ದ ಆ ಕಲ್ಲುಗಡಿಗೆ ಕಾನೂರು ಸಂಸಾರದ ಭವಿಷ್ಯತ್ತನ್ನು ಸೂಚಿಸುವಂತೆ ಬಿರುಕುಬಿಟ್ಟು ಪಲ್ಯದ ಗಸಿ ಕೆಂಪಾಗಿ ನೆಲದ ಮೇಲೆ ಹರಿಯತೊಡಗಿತು. ಸುಬ್ಬಮ್ಮನ ಕೋಪ ಭಯಾನುತಾಪಗಳಿಗೆ ತಿರುಗಿ, ಮೇಲೋಗರವನ್ನು ಬೇಗಬೇಗನೆ ಬೇರೆಯ ಪಾತ್ರೆಗೆ ಸುರಿಯತೊಡಗಿದಳು.

ಇನ್ನೂ ತರಕಾರಿ ಹೆಚ್ಚುತ್ತಲೆ ಇದ್ದ ನಾಗಮ್ಮನವರಿಗೆ ಪುಟ್ಟಮ್ಮ "ಅಯ್ಯೋ, ಹೋಯ್ತಲ್ಲೇ, ದೊಡ್ಡಮ್ಮ! ಮುತ್ತಿನಂಥ ಗಡಿಗೆ!" ಎಂದಳು.

"ಹೋದರೆ ಹೋಯ್ತು, ಬಿಡು. ಎಲ್ಲ ಹಾಳಾಗಿ ಹೋಗ್ಲಿ. ನಿನಗೇನು? ನೀನೇನು ಈ ಮನೆಯಲ್ಲಿ ಸಾಸ್ವಿತವೇ?" ಎಂದು ನಾಗಮ್ಮ ತಿರುಗಿ ನೋಡದೆ ತಮ್ಮ ಕೆಲಸಕ್ಕೆ ಕೈಹಾಕಿದರು.

ಪುಟ್ಟಮ್ಮ ಸುಮ್ಮನಿರಲಾರದೆ "ಅದರ ಓಡಿನಲ್ಲೇ ತಲೇ ಕೆರೀಬೇಕು ಹಿಡ್ಕೊಂಡು" ಎಂದು ಹಲ್ಲು ಕಡಿದಳು.

"ನಿನ್ನಜ್ಜ ಬರ್‍ಬೇಕು" ಎಂದಳು ಸುಬ್ಬಮ್ಮ.

"ನನ್ನಜ್ಜ ಹೇತು ಬಂದಲ್ಲಿ ನಿಂಗೆ ಕೂತು ಬರಾಕೆ ಯೋಗ್ಯತೆಯಿಲ್ಲೇ!... ತಡೀ...ಅಪ್ಪಯ್ಯನಿಗೆ ಹೇಳಿ ಮಾಡಿಸ್ತೀನಿ."

"ಅಪ್ಪಗಾರೂ ಹೇಳು! ಅಜ್ಜಗಾರೂ ಹೇಳು" ಎಂದುಬಿಟ್ಟಳು ಸುಬ್ಬಮ್ಮ.

"ಹೇಸಿಗೆಗೆ ಕಲ್ಲುಹಾಕಿದ್ಹಾಂಗೆ ಮಾಡ್ತೀಯಲ್ಲಾ! ಸುಮ್ಮನಿರ್ತೀಯೆ ಇಲ್ವೆ?" ಎಂದರು ನಾಗಮ್ಮ, ಪುಟ್ಟಮ್ಮನನ್ನು ನಿರ್ದೇಶಿಸಿ.

"ಬಾಯಾಗೆ ಯಾವಾಗ್ಲೂ ಹೇಸಿಗೆಯೇ" ಎಂದಳು ಸುಬ್ಬಮ್ಮ.

ಮುಂದೆ ಯಾರೂ ಮಾತಾಡಲಿಲ್ಲ. ಅವರವರ ಕೆಲಸದಲ್ಲಿ ತೊಡಗಿದರು. ಕಡೆಗೋಲು ಕಂಬವು ಅಕ್ಷರಶಃ ಸಾಕ್ಷೀಭೂತವಾಗಿ ನಿಂತಿತ್ತು. ಕಿಟಕಿಯಿಂದ ಬಂದು ನೆಲದ ಮೇಲೆ ಬಿದ್ದಿದ್ದ ಪಟ್ಟೆಬಿಸಿಲಿನಲ್ಲಿ ನೊಣಗಳು ನಾದಮಾಡಿ ಹಾರಿ ಹಾರಿ ಬಿಸಿಲು ಕಾಯಿಸುತ್ತಿದ್ದುವು. ಬೆಕ್ಕು ಮೂಲೆಯಲ್ಲಿ ಎದ್ದು ಕುಳಿತು ಮೈನೆಕ್ಕಿಕೊಳ್ಳುತ್ತಿತ್ತು. ಅದರ ಎರಡು ಮರಿಗಳು ವಾಸು ತಿಂದು ಚೆಲ್ಲಿದ್ದ ಉಪ್ಪಿಟ್ಟಿನ ಚೂರುಗಳನ್ನು ನೆಕ್ಕುತ್ತಿದ್ದುವು. ಅದರಲ್ಲೊಂದು ಮರಿ ಸ್ನೇಹಪೂರ್ವಕವಾಗಿ ಬಾಲವನ್ನು ನೆಗಹಿ ಮಿಯಾವ್ ಎನ್ನುತ್ತ ಸುಬ್ಬಮ್ಮನ ಬಳಿಗೆ

ಹೋಗಲು, ಕೋಪದಿಂದಿದ್ದ ಅವಳು ಝಾಡಿಸಿ ಒದ್ದ ಏಟಿಗೆ ಘುಡ್ಡ್ ಎಂಬ ಶಬ್ದದೊಡನೆ ಒಲೆಯ ಮೂಲೆಗೆ ಹಾರಿ ಹೋಗಿ ಗೋಡೆಗೆ ತಗುಲಿ ಬಿದ್ದಿತು.

ಅಷ್ಟರಲ್ಲಿ ಹಿತ್ತಲು ಕಡೆಯ ಬಾಗಿಲಲ್ಲಿ ಯಾರೊ "ಅಮ್ಮಾ! ಅಮ್ಮಾ!" ಎಂದು ಕರೆದರು.

ಯಾರೂ ಉತ್ತರ ಕೊಡಲಿಲ್ಲ. ಕರೆದವಳು ಬೇಲರ ಬೈರನ ಹೆಂಡತಿ ಸೇಸಿ ಎಂದೇನೋ ಎಲ್ಲರಿಗೂ ಗೊತ್ತಾಯಿತು.

ಸೇಸಿ ಮತ್ತೆ ಗಟ್ಟಿಯಾಗಿ "ಅಮ್ಮಾ! ಅಮ್ಮಾ! ಯಾರ್ರೋ ಒಳಗೆ?" ಎಂದು ಕೂಗಿದಳು. ಉತ್ತರ ಬರದಿರಲು ಕಿಟಕಿಯ ಬಳಿ ಬಂದು ಕೂಗಿದಳು.

ಒಲೆಯ ಬಳಿ ಇದ್ದ ಸುಬ್ಬಮ್ಮ "ಯಾರೇ ಅದು?" ಎಂದು ಸಿಡುಕಿದಳು.

"ನಾನ್ರೋ, ಸೇಸಿ. ಅಕ್ಕಿ ಬೀಸಾಕೆ ಹೇಳಿ ಕಳ್ಸಿದ್ರಿ."

"ಯಾರೂ ಸಾಯ್ಲಿಲ್ಲ ಇಲ್ಲಿ, ಕಡುಬು ನುರಿಯಾಕೆ!" ಎಂದಳು ಸುಬ್ಬಮ್ಮ.

ಸೇಸಿಗೆ ಅರ್ಥವಾಗಲಿಲ್ಲ. "ತಂಗಳು ಹಾಕ್ತೀನಿ ಅಂದಿದ್ರು" ಎಂದಳು ಮೆಲ್ಲಗೆ.

"ಯಾರೇ ಹೇಳಿದ್ದು?"

"ನಾಗಮ್ಮೋರು."

ಹೂವಯ್ಯ ರಾಮಯ್ಯ ಬರುತ್ತಾರೆಂದು ಕೇಳಿ, ನಾಗಮ್ಮನವರು ರೊಟ್ಟಿ ಮಾಡಲೋಸುಗ ಹಿಟ್ಟು ಬೀಸಿಕೊಡಲು ಸೇಸಿಗೆ ಹೇಳಿಕಳುಹಿಸಿದ್ದರು.

"ನಂಗೊತ್ತಿಲ್ಲ! ಯಾರು ಏನಾದ್ರೂ ಸಾಯ್ಲಿ! ಅನ್ನಾನೂ ಇಲ್ಲ; ಗಿನ್ನಾನೂ ಇಲ್ಲ!"

ಪುಟ್ಟಮ್ಮ ರಭಸದಿಂದ "ಸೇಸೀ" ಎಂದು ಕೂಗಿದಳು.

"ಆ್ಞ" ಎಂದಳು ಕಿಟಕಿಯ ಹೊರಗೆ ಸೇಸಿ.

"ಅನ್ನ ಕೊಡ್ತೀನಿ ನಿಲ್ಲು!"

"ಹೂನ್ರವ್ವಾ!"

ಒಲೆಯ ಬಳಿ ಒಂದು ಬೋಗುಣಿಯಲ್ಲಿ ಕಳೆದ ರಾತ್ರಿ ಉಳಿದಿದ್ದ ಅನ್ನವನ್ನು ನಾಯಿಗಳಿಗಾಗುತ್ತದೆ ಎಂದು ಸುಬ್ಬಮ್ಮ ಇಟ್ಟಿದ್ದಳು. ಆ ಲೆಕ್ಕದ ಮೇಲೆಯೆ ಆವೊತ್ತು ಎಸರಿಗೆ ಕಡಿಮೆ ಅಕ್ಕಿ ಹಾಕಿದ್ದಳು. ಪುಟ್ಟಮ್ಮ ಸರಸರನೆ ಹೋಗಿ ಆ ಬೋಗುಣಿಯನ್ನು ಎತ್ತಿಕೊಂಡು ಹಿತ್ತಲು ಕಡೆಗೆ ಹೊರಟಳು. ಸಮಾಧಾನದ ಸಮಯವಾಗಿದ್ದರೆ ಸುಬ್ಬಮ್ಮ ಅನ್ನವನ್ನು ನಾಯಿಗಾಗಿಟ್ಟಿದೆ ಎಂದು ಹೇಳು ತ್ತಿದ್ದಳು. ಪುಟ್ಟಮ್ಮ ಅದನ್ನು ಸೇಸಿಗೆ ಕೊಡಲು ಹಟಮಾಡುತ್ತಲೂ ಇರಲಿಲ್ಲ. ಸೇಸಿಗೆ ಅನ್ನವಿಲ್ಲವೆಂದು ಹೇಳಿಕಳುಹಿಸಬಹುದಾಗಿತ್ತು. ಆದರೆ ಈಗಿನ ಸ್ಥಿತಿಯೇ ಬೇರೆಯಾಗಿತ್ತು. ಸುಬ್ಬಮ್ಮ ದಡದಡನೆ ಓಡಿಬಂದು, ಕಸಿದುಕೊಳ್ಳಲು

ಬೋಗುಣಿಗೆ ಕೈಹಾಕಿದಳು. ಪುಟ್ಟಮ್ಮ ಕಸುವಿನಿಂದ ಎಳೆದು ಜಗ್ಗಿದಳು. ಬೋಗುಣಿ ದಡಾರನೆ ಕೆಳಗೆ ಬಿದ್ದು, ಸೆಗಣಿ ಬಳಿದಿದ್ದ ಕರಿಯ ನೆಲದ ಮೇಲೆ ತಾಮ್ರವರ್ಣದ ಕೇಸಕ್ಕಿಯನ್ನದ ರಾಶಿ ಕೆದರಿಬಿದ್ದಿತು. ಪುನಃ ಬೈದಾಟವಾಗಿ ಸುಬ್ಬಮ್ಮ ಹಿಂದಕ್ಕೆ ಹೋದಳು. ಪುಟ್ಟಮ್ಮ ಬಿದ್ದ ಅನ್ನವನ್ನೆಲ್ಲ ಮತ್ತೆ ಬೋಗುಣಿಗೆ ಹಾಕಿಕೊಂಡು, ಹಿತ್ತಲಕಡೆ ಬಾಗಿಲಲ್ಲಿ ಕಾಯುತ್ತಿದ್ದ ಸೇಸಿಯ ಬಳಿ ಇಟ್ಟು, ಸಿಟ್ಟಿನಲ್ಲಿ ಮಾತಾಡದೆ ಹಿಂದಕ್ಕೆ ಬಂದಳು. ಸೇಸಿಗೆ ಪಾಕಶಾಲೆಯಲ್ಲಾದ ಘೋರಯುದ್ಧ ಸದ್ದು ಶಾಪಗಳಿಂದ ಗೊತ್ತಾಗಿತ್ತು. ಜಗಳದ ಕೂಳನ್ನು ತೆಗೆದುಕೊಳ್ಳಲು ಬೆದರಿ, ಅದನ್ನಲ್ಲಿಯೆ ಬಿಟ್ಟು, ತನ್ನ ಬಿಡಾರಕ್ಕೆ ಸೋಜಿಗಪಡುತ್ತ ಹೋದಳು. ಯಜಮಾನರ ಅಡುಗೆ ಮನೆಯಲ್ಲಿ ಅಷ್ಟೊಂದು ಕಾವು ಏರಿತ್ತೆಂದು ಆಕೆ ಊಹಿಸಿರಲಿಲ್ಲ.

ಹಿತ್ತಲುಕಡೆ ಅಂಗಳದಲ್ಲಿ ಡೊಳ್ಳೇರಿ ಬಿದ್ದಿದ್ದ ನಾಯಿಮರಿಗಳು ಪುಟ್ಟಮ್ಮ ಬೋಗುಣಿ ಹೊತ್ತುಕೊಂಡು ಹೋಗುತ್ತಿದ್ದುದನ್ನು ಕಂಡು ಆಕೆಯ ಹಿಂದೆ ಬಾಲವಲ್ಲಾಡಿಸುತ್ತ ಹೋಗಿ ಅನ್ನಕ್ಕೆ ದೂರವಾಗಿ ನಿಂತಿದ್ದುವು; ಅಥವಾ ಕುಣಿಯುತ್ತಿದ್ದುವು. ಸೇಸಿ ಕಣ್ಮರೆಯಾಗುವುದರಲ್ಲಿಯೆ ಆ ಮರಿಗಳು ಬೋಗುಣಿಗೆ ಬಾಯಿ ಹಾಕಿದುವು. ಅವುಗಳು ಕೂಳು ಮುಕ್ಕುತ್ತಿದ್ದುದನ್ನು ಕಂಡಿದ್ದರೆ ಬಕಾಸುರನೂ ನಾಚುತ್ತಿದ್ದನು. ಕಾಲ ವಿಳಂಬವಾದರೆ ಅನ್ನ ಮಾಯವಾಗುತ್ತದೆ ಎಂದು ಕಾಲವನ್ನೇ ವಂಚಿಸುವ ರೀತಿಯಲ್ಲಿ ಅವು ಕೂಳುಣ್ಣುವುದರಲ್ಲಿ ತನ್ಮಯವಾಗಿದ್ದುವು. ಬಾಲಗಳು ಆನಂದದಿಂದ ಕುಣಿಯುತ್ತಿರಲು, ಹೊಟ್ಟೆಗಳು ಮುಂಗಾರು ಮಳೆಯಲ್ಲಿ ಹೊಳೆಗಳು ನೆರೆಯೇರುವಂತೆ ಕ್ಷಣಕ್ಷಣಕ್ಕೂ ಉಬ್ಬುತ್ತಿದ್ದುವು. ಪಕ್ಕದಲ್ಲಿದ್ದ ಕೊಚ್ಚೆಯಲ್ಲಿ ಮೇಯುತ್ತಿದ್ದ ಕೆಲವು ಕೋಳಿಗಳೂ ನಾಯಿಮರಿಗಳನ್ನು ಲೆಕ್ಕಿಸದೆ ಬಂದು, ಬೋಗುಣಿಯಿಂದ ಅನ್ನಾಪಹಾರ ಮಾಡತೊಡಗಿದುವು. ನಾಯಿಮರಿಗಳಿಗೆ ಹೊರಗಿನ ಪ್ರಜ್ಞೆಯೆ ಇದ್ದಂತೆ ತೋರಲಿಲ್ಲ. ತಾನು ಕೋಳಿಯನ್ನು ಅಟ್ಟುವಷ್ಟರಲ್ಲಿಯೆ ಮತ್ತೊಂದು ಮರಿ ಅನ್ನವನ್ನು ಮುಗಿಸಿಬಿಟ್ಟರೆ, ಎಂದು ಭಾವಿಸಿ ಪ್ರತಿಯೊಂದು ಮರಿಯೂ ಸ್ಪರ್ಧೆ ಹೂಡಿತ್ತು! ಆ ನಾಯಿಮರಿ ಮತ್ತು ಕೋಳಿಗಳ ಗಲಭೆ ಸ್ವಲ್ಪ ದೂರದಲ್ಲಿದ್ದ ಟೈಗರಿಗೆ ಕೇಳಿಸಿ, ಕುತೂಹಲ ಪರಿಹಾರಾರ್ಥವಾಗಿ ಎದ್ದು ಬಂದಿತು. ನೋಡುತ್ತದೆ: ಅನ್ನ ಸ್ವರ್ಗದ ಹೆಬ್ಬಾಗಿಲು ತೆರೆದುಬಿದ್ದಿದೆ! ಬೀಗವಿಲ್ಲ, ಕಾವಲಿಲ್ಲ! ಸರಿ, ಒಂದೇ ಏಟಿಗೆ ಹಾರಿಬಂದು ಕೋಳಿಗಳನ್ನು ಅಟ್ಟಿ, ನಾಯಿಮರಿಗಳನ್ನು ಗುರ‍್ರೆಂದು ದೂರ ತಳ್ಳಿ, ಬೋಗುಣಿಗೆ ಬಾಯಿ ಹಾಕಿತು. ಆದರೆ ನಾಯಿಮರಿಗಳು ಬಿಡಬೇಕಲ್ಲಾ! ಮತ್ತೆ ಮತ್ತೆ ಮೇಲ್ವಾಯ್ದು ಬಂದು ಬೋಗುಣಿಗೆ ಬಾಯಿ

ಹಾಕಿದುವು. ಟೈಗರಿಗೆ ರೇಗಿ ಚೆನ್ನಾಗಿ ಕಚ್ಚಿ ಓಡಿಸಿತು. ಮರಿಗಳ ಆರ್ತನಾದ ವನ್ನು ಕೇಳಿ ರೂಬಿ, ಡೈಮಂಡು, ರೋಜಿ, ಟಾಪ್ಸಿ, ಕೊತ್ವಾಲ ಎಲ್ಲವೂ ಬಂದು, ನೋಡಿ, ಬೋಗುಣಿಗೆ ನುಗ್ಗಿದುವು. ದೊಂಬಿಗಾರಂಭವಾಯಿತು. ಬೋಗುಣಿ ತಲೆಕೆಳಗಾಗಿ ಉರುಳಿ ಅನ್ನ ಊರೆಲ್ಲ ಹಬ್ಬಿತು. ನಾಯಿಗಳಿಗಿಂತಲೂ ಕೋಳಿ ಗಳಿಗೆ ಅನುಕೂಲ ಹೆಚ್ಚಾಗಿ ಅವೂ ನುಗ್ಗಿದುವು. ಟೈಗರಿಗೂ ಡೈಮಂಡಿಗೂ ರೋಜಿಯ ಪ್ರಣಯ ವಿಚಾರವಾಗಿ ಮೊದಲೆ ವೈಮನಸ್ಸಿದ್ದುದರಿಂದ ಎರಡಕ್ಕೂ ಪ್ರಬಲವಾದ ದ್ವಂದ್ವ ಯುದ್ಧ ಪ್ರಾರಂಭವಾಗಿ, ಗಲಾಟೆ ಮನೆಯ ಮೂಲೆ ಮೂಲೆಗೂ ಕೇಳಿಸಿತು. ನಾಯಿಮರಿಯೊಂದು ಕದನವಾಡುತ್ತಿದ್ದ ದೊಡ್ಡ ನಾಯಿಗಳ ಕಾಲು ತುಳಿತಕ್ಕೆ ಸಿಕ್ಕಿ ಕೊಚ್ಚೆಗೆ ಧೊಪ್ಪೆಂದು ಬಿದ್ದಿತು. ಕರಿಯ ಬಣ್ಣದ ಕೆಸರು ಅದರ ಮೈ, ಮುಖ, ಕಣ್ಣು, ಕಿವಿ ಎಲ್ಲದಕ್ಕೂ ಮೆತ್ತಿಕೊಂಡಿತು. ಅದೇ ಸಮಯದಲ್ಲಿ ಕೊಚ್ಚೆಗೆ ಬಿದ್ದಿದ್ದ ಅನ್ನವನ್ನು ಆಯುತ್ತಿದ್ದ ಹುಂಜನೊಂದು, ತಸ್ಮಾತ್ತಾಗಿಯೋ ಆಕಸ್ಮಾತ್ತಾಗಿಯೋ ಮರಿಯ ಕಣ್ಣನ್ನು ಬಲವಾಗಿ ಕುಟುಕಿತು. ಮರಿ ಅತಿದಾರುಣವಾದ ನೋವಿಂದ ಎಡೆಬಿಡದೆ ಅರಚಿಕೊಳ್ಳತೊಡಗಿತು.

## ೮

## ಬೇಲರ ಬೈರನ ಮಗ ಗಂಗಹುಡುಗನೊಡನೆ

ಚಿಕ್ಕಮ್ಮ ಹೆಚ್ಚಿಗೆ ಉಪ್ಪಿಟ್ಟು ಕೊಡದಿದ್ದ ಸಿಟ್ಟಿನಲ್ಲಿ ಅಡುಗೆಮನೆಯಿಂದ ಹೊರನುಗ್ಗಿದ ವಾಸು ಜಗಲಿಗೆ ಬಂದನು. ಬಾಗಿಲು ತೆರೆದ ಬೀರುವಿನ ಪಕ್ಕ ದಲ್ಲಿ ಕೆದರಿ ಬಿದ್ದಿದ್ದ ಲೆಕ್ಕಪತ್ರದ ಪುಸ್ತಕಗಳ ಮಧ್ಯೆ ಅವನ ತಂದೆ ಕೆಲವು ಜನ ಗಳೊಡನೆ ಮಾತನಾಡುತ್ತ ಕುಳಿತಿದ್ದರು. ವಾಸುವಿಗೆ ಅವರು ಯಾರು ಯಾರು ಎಂದು ನೋಡಲೂ ಪುರಸತ್ತಿರಲಿಲ್ಲ. ತಂದೆಯ ಗಮನವು ತನ್ನ ಮೇಲೆ ಬೀಳದಂತೆ ಸದ್ದುಗೈಯದೆ ಹೋಗಿ, ಮುಂಡಿಗೆಯ ಅಗ್ರಭಾಗಕ್ಕೆ ಮೊಳೆ ಹೊಡೆದು ಜೋಡಿಸಿದ್ದ ಮುಖ ಕಟ್ಟಿದ ದೊಡ್ಡಿನ — ಕಾಡುಕೋಣಗಳಿಗೆ 'ದೊಡ್ಡು' ಎಂದು ಹೆಸರು — ಕೋಡಿಗೆ ಕೈಹಾಕಿದನು. ಕೈಗೆ ಬಂದ ತನ್ನ ಅಂಗಿಯನ್ನು ತೆಗೆದುಕೊಂಡು ಕಿರುಜಗಲಿಯ ಒಂದು ಮೂಲೆಗೆ ನಡೆದು, ಮುದ್ದೆಯಾಗಿ ಬಿದ್ದಿದ್ದ ಒಂದು ಕಂಬಳಿಯ ಬಳಿ ನಿಂತು "ಪುಟ್ಟಾ! ಪುಟ್ಟಾ! ಏ ಪುಟ್ಟಾ!" ಎಂದು ಕರೆದನು. ಗಾಡಿಯಾಳು ನಿಂಗನ ಮಗ ಪುಟ್ಟನು ಕಂಬಳಿಯೊಳಗಿನಿಂದಲೆ "ಆ್ಞ" ಎಂದನು.

"ನಿನ್ನೆ ಹೇಳಿದ್ದ ಕೆಲ್ಸಕ್ಕೆ ಬರ್ತೀಯೇನೋ?"

"ನಿನ್ನೆ ಮುಳ್ಳು ಚುಚ್ಚಿದ್ದು ಬಾಳ ನೋವಾಗದೆ. ನಾ ಬರಾದಿಲ್ಲ. ನೀವೇ ಹೋಗಿ."

"ಕಲ್ಲಿನ ಚೀಲ ಎಲ್ಲಿದೆಯೋ?"

ಪುಟ್ಟನು ತಲೆಗೆದರಿ, ಜೊಲ್ಲು ಸುರಿದು, ಕಣ್ಣಿನಲ್ಲಿ ಹಿಕ್ಕುಕಟ್ಟಿ ವಿಕಾರವಾಗಿದ್ದ ತನ್ನ ಮುಖವನ್ನು ಕಂಬಳಿಯಿಂದ ಹೊರಗೆ ಹಾಕಿ ವಾಸುವನ್ನು ನೋಡಿ "ಆ ಹೆಬ್ಬಾಗಲ ಸಂದೀಲಿ ಹಾರೆ ಪಿಕಾಸಿ ಎಲ್ಲಾ ಇಡ್ತಾರಲ್ಲಾ..."

"ಹ್ಞೂ."

ಬಳಿಯಲ್ಲಿ ಡೂಲಿ ಬಾಲ ಅಲ್ಲಾಡಿಸುತ್ತ ನಿಂತಿತ್ತು. ಅದು ಮರಿಹಾಕಿದ್ದ ರಿಂದ ವಾಸು ಅದಕ್ಕೆ ತಿಂಡಿಕೊಟ್ಟು ಸಲಿಗೆಯಾಗಿತ್ತು.

"ಅಲ್ಲೊಂದು ಕೆಮ್ಮಣ್ಣು ಬುಟ್ಟಿ ಇಟ್ಟಾರಲ್ಲಾ..."

"ಹ್ಞೂ." ವಾಸುವಿಗಾಗಲೆ ಬೇಸರವಾಗತೊಡಗಿತ್ತು.

"ಅದ್ರ ಹತ್ರ ಒಂದು ಕೂಣಿ ಅದೆ..."

"ಹ್ಞೂನೋ..." ವಾಸುವಿನ ಧ್ವನಿ ಕುಪಿತವಾಯಿತು.

"ದೊಡ್ಡ ಕೂಣಿ ಅಲ್ಲ, ಸಣ್ಣದು..."

"ಹೇಳೋ ಅಂದ್ರೆ..."

"ಬೈರ ಮಾಡಿದ್ದಲ್ಲ, ಸಿದ್ದ ಮಾಡಿದ್ದು..."

ವಾಸು ಮುಖ ಕೆರಳಿಸಿಕೊಂಡು ಅಲ್ಲಿಂದ ದಡಕ್ಕನೆ ಹೊರಟು ಹೋಗಿ ಹೆಬ್ಬಾಗಿಲ ಸಂದಿಯಲ್ಲಿ ಅರಸಿದನು. ಹಾರೆ, ಪಿಕಾಸಿ, ಗುದ್ದಲಿ, ಕೂಣಿ!— ಸಣ್ಣ ಕೂಣಿಗೆ ಕೈಹಾಕಲು ಮೀನು ಚೂರುಗಳನ್ನು ತಿನ್ನುತ್ತಿದ್ದ ಇಲಿಯೊಂದು ಕೈಮೇಲೆಯೆ ಹತ್ತಿ ನೆಗೆದು ಪಕ್ಕದಲ್ಲಿದ್ದ ಡೊಗರಿನೊಳಗೆ ನುಗ್ಗಿತು. ವಾಸು ಸರಕ್ಕನೆ ಎದ್ದು ನಿಂತು ನಿಟ್ಟುಸಿರೆಳೆದನು. ಪುಟ್ಟನ ಮೇಲೆ ಸುಮ್ಮಸುಮ್ಮನೆ ರೇಗಿದನು; ಮತ್ತೆ ಹುಡುಕಿದನು. ಕಲ್ಲಿನ ಚೀಲ ಎಲ್ಲಿಯೂ ಕಾಣಲಿಲ್ಲ. ಹಲ್ಲು ಮಟ್ಟೆ ಕಡಿಯುತ್ತ ಮತ್ತೆ ಪುಟ್ಟ ಮಲಗಿದ್ದಲ್ಲಿಗೆ ಹೋದನು. ಅವನು ಮೊದಲಿನಂತೆಯೆ ಕಂಬಳಿ ಮುದ್ದೆಯಾಗಿ ಬಿದ್ದಿದ್ದನು.

"ಏ ಪುಟ್ಟಾ!"

ಪುಟ್ಟ ಮತ್ತೆ ತಲೆಯನ್ನು ಹೊರಗೆ ಹಾಕಿದನು.

"ಎಲ್ಲಿಟ್ಟೆಯೋ, ಸಿಕ್ಲಿಲ್ಲಲ್ಲೊ!" ಎಂದು ಸಿಡುಕಿದನು ವಾಸು.

"ನಾನು ಹೇಳಬೇಕಾದ್ರೆ ಹೋಗಿಬಿಟ್ರಿ...ಆ ಹುಣ್ಸೇಮರ್ದ ಬೇರಿನ ಸಂದೀಲಿಟ್ಟೀನಿ!"

ವಾಸು ಹೋಗಿ ಹುಡುಕಲು ಸಣ್ಣ ಕಲ್ಲುಹರಳುಗಳನ್ನು ತುಂಬಿದ್ದ ಚೀಲ ಸಿಕ್ಕಿತು. ಸ್ಲೇಟು ಪುಸ್ತಕಗಳನ್ನು ಹಾಕಿಕೊಂಡು ಸ್ಕೂಲಿಗೆ ಹೋಗಲೋಸ್ಕರ ಹೊಲಿಸಿಕೊಟ್ಟಿದ್ದ ಚೀಲಕ್ಕೆ ರಬ್ಬರ್ ಬಿಲ್ಲಿಗಾಗಿ ಕಲ್ಲು ಹೊರುವ ಚಾಕರಿ ಸಿಕ್ಕಿತ್ತು. ರಜಾ ಕಾಲದಲ್ಲಿ ಅದಕ್ಕೇಕೆ ನಿರುದ್ಯೋಗವಾಗಬೇಕು?

ವಾಸು ಅದುವರೆಗೂ ಕೈಯಲ್ಲಿಯೆ ಹಿಡಿದುಕೊಂಡಿದ್ದ ಅಂಗಿಯನ್ನು ತೊಟ್ಟು ಕೊಳ್ಳಲು ತೊಡಗಿದನು. ಹಿಂದಿನ ದಿನ ಅದನ್ನು ಮೈಯಿಂದ ಸುಲಿದಿಡುವ ಗಡಿಬಿಡಿಯಲ್ಲಿ ತೋಳುಗಳಲ್ಲಿ ಒಂದು ಅಡಿಮೇಲಾಗಿದ್ದುದರಿಂದ ಸ್ವಲ್ಪ ತೊಂದರೆ ಕೊಟ್ಟಿತು. ಅಂತೂ ಯುಕ್ತಿಗಿಂತಲೂ ಹೆಚ್ಚಾಗಿ ಬಲಪ್ರದರ್ಶನದಿಂದ ಅಂಗಿ ತೊಟ್ಟನು. ಜೇಬಿಗೆ ಕೈ ಹಾಕಿ ನೋಡುತ್ತಾನೆ: ರಬ್ಬರ್ ಬಿಲ್ಲು ಮಾಯ ವಾಗಿದೆ! ಉಪನ್ಯಾಸ ಮಾಡಲು ವೇದಿಕೆಯ ಮೇಲೆ ನಿಂತ ವಾಗ್ಮಿಗೆ ತನ್ನ ಮಸ್ತಕವೇ ಗೈರುಹಾಜರೆಂದು ತಿಳಿದು ಬಂದರೆ ಹೇಗಾಗಬಹುದೊ ಹಾಗಾಯಿತು ವಾಸುಗೆ! ಗಾಬರಿಯಾಗಿ ಜೇಬುಗಳನ್ನೆಲ್ಲ ಜಡ್ತಿ ಮಾಡಿದನು. ಸರ್ವವಸ್ತು ಸಂಗ್ರಹಶಾಲೆಗಳಂತಿದ್ದ ಆ ಜಿಗಟಾದ ಜೇಬುಗಳಿಂದ ಹೊರಬಿದ್ದು ಒಂದೊಂದೇ ಪದಾರ್ಥಗಳು ಬೆಳಕು ಕಂಡುವು: ಮುರಿದು ಮುರಿದು ಹೋಗಿದ್ದ ಒಂದು ಸಣ್ಣ ಸರಸ್ವತಿಯ ಬಣ್ಣದ ಚಿತ್ರ; ಜಜ್ಜಿ ಹೋಗಿದ್ದ ಒಂದು ತವರದ ಪೀಪಿ; ಯಾವ ಕಾಲದ್ದೋ ಏನೋ ಒಂದು ರೊಟ್ಟಿಯ ಚೂರು; ಎರಡು ಮೂರು ಬಳಪದ ಚೂರು; ಸಿಂಡು ಮುಸುಡಿಯ ಒಂದು ಸೀಸದ ಕಡ್ಡಿಯ ವಾಮನಾವ ತಾರ; ಏಳೆಂಟು ಕೋವಿಯ ಚರೆ; ಒಂದು ಬಣ್ಣದ ಬಿಂಗ; ಅರ್ಧ ತಿಂದಿದ್ದ ಒಂದು ಉತ್ತುತ್ತೆಯ ಹಣ್ಣು; ಒಂದೆರಡು ದುಂಡನೆಯ ಕಲ್ಲು ಹರಳುಗಳು; ಅಜಿಬಿಜಿಯಾಗಿದ್ದ ಬೆಮ್ಮಾರಲ ಹಣ್ಣುಗಳು; ಒಂದು ಧೂಪದ ಕಾಯಿ; ರಬ್ಬರ್ ಚೂರುಗಳು; ಹಗ್ಗ; ಅಷ್ಟಾವಕ್ರವಾಗಿದ್ದ ಒಂದು ಹಿಡಿಹೋದ ಸಣ್ಣ ಚೂರಿ; ಒಂದು ಬಣ್ಣಬಣ್ಣವಾಗಿದ್ದ ಹಕ್ಕಿಯ ಪುಕ್ಕ; ಒಂದು ಸೇಫ್ಟಿ ಪಿನ್; ಒಂದು ಮಧ್ಯೆ ತೂತಾಗಿದ್ದ ಮೂರು ಕಾಸು... ಹಾಳು ಸಾಮಾನುಗಳು! ತೆಗೆದಷ್ಟೂ ಇವೆ! ಅಕ್ಷಯ ಪಾತ್ರೆಯೋ ದ್ರೌಪದಿಯ ಸೀರೆಯೋ ಆ ಜೇಬು! ರಬ್ಬರ್ ಬಿಲ್ಲು ಮಾತ್ರ ಗೋಚರವಾಗಲಿಲ್ಲ. ಮೊದಲು ಯಾರೋ ಕದ್ದಿರಬೇಕೆಂದು ಶಂಕೆ ಪಟ್ಟನು; ಆಮೇಲೆ ಪುಟ್ಟನೇ ಕದ್ದಿರಬೇಕೆಂದು ಸಿದ್ಧಾಂತ ಮಾಡಿ ನೆಲದ ಮೇಲೆ ಹರಡಿದ್ದ ಸಾಮಾನುಗಳಲ್ಲಿ ಒಂದನ್ನೂ ಬಿಡದೆ ಜೇಬುಗಳಿಗೆ ತುಂಬಿದನು. ತುಂಬುವ ಗಲಿಬಿಲಿಯಲ್ಲಿ ಸ್ವಲ್ಪ ಮಣ್ಣೂ ಪ್ರವೇಶಮಾಡಿತು.

ಪುಟ್ಟನಿಂದ ರಬ್ಬರ್ ಬಿಲ್ಲನ್ನು ಕಕ್ಕಿಸಿಬಿಡಲು ಹಿಂದಕ್ಕೆ ಹೊರಟನು. ಅದಕ್ಕಾಗಿಯೆ ಆ ಕಳ್ಳನು ಕಾಲುನೋವಿನ ನೆವದಿಂದ ತನ್ನ ಜೊತೆಗೆ ಬರಲಿಲ್ಲ

ಎಂಬುದೂ ವಾಸುವಿಗೆ ನಿರ್ವಿವಾದವಾಯಿತು !

ಆದರೆ ದಾರಿಯಲ್ಲಿಯೆ ರಬ್ಬರ್ ಬಿಲ್ಲು ಬಿದ್ದಿತ್ತು !

ಅವಸರದಲ್ಲಿ ಅದು ಜೇಬಿನಿಂದ ಬಿದ್ದುದೆ ಅವನಿಗೆ ಗೊತ್ತಾಗಿರಲಿಲ್ಲ. ತಪ್ಪಿಸಿಕೊಂಡು ಹೋಗಿ ನಿದ್ದೆ ಮಾಡುತ್ತಿರುವ ಕಳ್ಳನನ್ನು ಪೋಲೀಸಿನವನು ಹಿಡಿಯುವಂತೆ ವಾಸು ಬಿಲ್ಲನ್ನು ತುಡುಕಿ ಹಿಡಿದು, ಮತ್ತೆ ಹುಣಿಸೆಯ ಮರದ ಬುಡಕ್ಕೆ ಹೋಗಿ ಕಲ್ಲಿನ ಚೀಲದ ದಾರವನ್ನು ಬಗಲಿಗೆ ಜನಿವಾರದ ರೀತಿಯಲ್ಲಿ ತಗುಲಿ ಹಾಕಿಕೊಂಡು ಹೊರಟನು.

ಗಟ್ಟದಾಳುಗಳು ಕಟ್ಟಣೆಯ ಕಲ್ಲುಗಳ ಮೇಲೆ ಕತ್ತಿ ಮಸೆಯುತ್ತಿದ್ದರು. ಕೆಲವು ಹೆಣ್ಣಾಳುಗಳು ಬಿಸಿಲು ಕಾಯಿಸುತ್ತ ಕುಳಿತು ಗಳಪುತ್ತಿದ್ದರು. ಅವರ ನಡುವೆ ಗಂಗೆಯೂ ಸಾಲಂಕೃತಳಾಗಿ ಕುಳಿತು ಹರಟುತ್ತಿದ್ದಳು. ಸೇರೆಗಾರರ ಮತ್ತು ಚಂದ್ರಯ್ಯಗೌಡರ ವಿಶ್ವಾಸಕ್ಕೆ ಪಾತ್ರಳಾಗಿದ್ದ ಅವಳು ಉಳಿದವರೆಲ್ಲರಿಗೂ ತನಗಿರುವ ಬಾಧ್ಯತೆಯನ್ನು ಪ್ರದರ್ಶಿಸಲೆಂಬಂತೆ ವಾಸುವನ್ನು ಕರೆದಳು. ಆದರೆ ವಾಸು ಹಿಂತಿರುಗದೆ ನಡೆದನು.

ಹೋಗುವಾಗ ವಾಡಿಕೆಯಂತೆ ಬತ್ತದ ಹೊಟ್ಟು ರಾಶಿರಾಶಿಯಾಗಿ ಬಿದ್ದಿದ್ದ 'ಉಮ್ಮಿಗುಡ್ಡೆ'ಯ ಕಡೆಗೆ ಇಣಿಕಿ ನೋಡಿದನು. ಔದಾಸೀನ್ಯದ ನೋಟವು ಇದ್ದಕ್ಕಿದ್ದಂತೆ ಕುತೂಹಲ ದೃಷ್ಟಿಯಾಗಿ ನಿಂತನು. ಏಳೆಂಟು ಹೊರಸಲಕ್ಕಿಗಳು ಅಲ್ಲಿ ಮೇಯುತ್ತಿದ್ದುವು. ಕೂಡಲೆ ಚೀಲದಿಂದ ಒಂದು ಕಲ್ಲನ್ನು ತೆಗೆದು, ರಬ್ಬರ್ ಬಿಲ್ಲಿಗೆ ಹೂಡಿ ಹೆದೆಯೇರಿಸಿ ಎಳೆದು, ಗುರಿ ನೋಡುತ್ತಿದ್ದನು. ಅಷ್ಟರಲ್ಲಿ ಅವನು ಗುರಿಯಿಟ್ಟಿದ್ದ ಹಕ್ಕಿ ಕುಪ್ಪಳಿಸಿ ಹಾರಿ ಮತ್ತೊಂದು ಕಡೆ ಕೂತಿತು. ವಾಸು ಹಕ್ಕಿಯನ್ನೇ ನೋಡಿ ಗುರಿಯಿಡುತ್ತ ಸ್ವಲ್ಪ ಮುಂದು ವರಿದನು. ಅವನ ಬಲಗಾಲು ಒಂದು ಸೆಗಣಿ ಗುಪ್ಪೆಯನ್ನು ಮೆಟ್ಟಿ ತಣ್ಣಗಾಯಿತು. ಬೆರಳು ಸಂದಿಗಳಲ್ಲಿ ಸೆಗಣಿ ಪಿಚಪಿಚನೆ ಮೇಲೆ ಬಂದಿತು. ವಾಸುವಿಗೆ ಅಸಹ್ಯವಾಗಿ ಕಾಲು ಕೊಡಹಬೇಕೆಂದು ಮನಸ್ಸಾಯಿತು. ಆದರೂ ನಿಶ್ಚಲವಾಗಿ ನಿಂತು ಹಕ್ಕಿಗೆ ಗುರಿಯಿಟ್ಟನು. ಅವನನ್ನೇ ಹಿಂಬಾಲಿಸಿ ಬರುತ್ತಿದ್ದ ಡೂಲಿ ಒಡೆಯನ ಬೇಟೆಗೆ ಸಹಾಯಮಾಡಲೆಂದು ಹಕ್ಕಿಗಳ ಕಡೆ ವೇಗದಿಂದ ನುಗ್ಗಿತು. ಅವುಗಳೆಲ್ಲ ಪಟಪಟನೆ ಹಾರಿ ಮರಗಳಲ್ಲಿ ಮರೆಯಾದುವು. ವಾಸುಗೆ ಸಿಟ್ಟು ಬಂದು ಹಕ್ಕಿಗಿಟ್ಟಿದ್ದ ಗುರಿಯನ್ನು ನಾಯಿಗೇ ತಿರುಗಿಸಿಬಿಟ್ಟನು. ಡೂಲಿ ನೋವುದನಿಗೈಯುತ್ತ ಓಡಿತು. ಕಾಲಿಗೆ ಹಿಡಿದಿದ್ದ ಸೆಗಣಿಯನ್ನು ಹಲಸಿನ ಮರದ ಬೇರಿಗೆ ತಿಕ್ಕಿ ಒರಸಿ ಗಂಗನನ್ನು ಕರೆಯಲೆಂದು ಬೈರನ ಬಿಡಾರಕ್ಕೆ ಹೋದನು.

ಬಿಡಾರದಲ್ಲಿ ಬೈರನೂ ಇರಲಿಲ್ಲ; ಅವನ ಹೆಂಡತಿ ಸೇಸಿಯೂ ಇರಲಿಲ್ಲ. ಬೈರನು ದೂರ ಕಾಡಿನಲ್ಲಿದ್ದ ಬಗನಿ ಮರಕ್ಕೆ ಹೋಗಬೇಕಾದ್ದರಿಂದ ದನಗಳನ್ನು ಬೇಗನೆ ಮೇವಿಗೆ ಬಿಡಲು ಹಟ್ಟಿಗೆ ಹೋಗಿದ್ದನು. ಸೇಸಿ ನಾಗಮ್ಮನವರು ಹಿಟ್ಟು ಬೀಸಲು ಹೇಳಿಕಳುಹಿಸಿದ್ದರಿಂದ 'ಮನೆಗೆ' ಹೋಗಿದ್ದಳು. ಬೆಳಗ್ಗೆ ಸಂಚಾರ ಹೋಗಿ ಹಿಂತಿರುಗಿದ್ದ ಗಂಗ ಹುಡುಗನು ಬಿಡಾರದ ಬಾಗಿಲಲ್ಲಿ ಕುಳಿತು ಏನೋ ಮಾಡುತ್ತಿದ್ದನು. ಅವನ ಎದುರು ಒಂದು ಕರಿಯ ಕಂತ್ರಿ ನಾಯಿ ಅವನ ಕೈಕಡೆ ನೋಡುತ್ತ ಅಮಾವಾಸ್ಯೆಯಂತೆ ಕರ್ರಗೆ ಕುಳಿತಿತ್ತು. ಅಲ್ಲಿಯೆ ಪಕ್ಕದಲ್ಲಿ ಮಲ್ಲಿಗೆ ಬಳ್ಳಿ ಹಬ್ಬಿದ್ದ ಒಂದು ಹಾಲಿವಾಣದ ಮರದ ಬುಡದಲ್ಲಿದ್ದ ಗಲೀಜಿನಲ್ಲಿ ಹೇಂಟೆಯೊಂದು ಮರಿಗಳೊಡನೆ ಕೆದರುವ ಕೆಲಸದಲ್ಲಿತ್ತು.

ನಾಯಿ ಇದ್ದಕ್ಕಿದ್ದ ಹಾಗೆ ದೂರ ನೋಡಿ ಬಗುಳಿತು. ಗಂಗ ತಿರುಗಿ ನೋಡಿದನು. ವಾಸು ಬರುತ್ತಿದ್ದನು. ಗಂಗನು ಗಾಬರಿಯಿಂದ ತನ್ನ ಕೈಲಿದ್ದುದನ್ನೂ ನೆಲದ ಮೇಲೆ ಬಿದ್ದುದನ್ನೂ ಬಿಡಾರದೊಳಗಣ ಕತ್ತಲೆಗೆ ಎಸೆದನು. ಅಷ್ಟರಲ್ಲಿ ವಾಸು "ಓ ಗಂಗಾ" ಎಂದು ಕೂಗಿದನು. ಗಂಗನು "ಓ" ಎನ್ನುತ್ತ ವಾಸುವಿಗೆ ಅಭಿಮುಖನಾಗಿ ಹೋದನು. ವಾಸು ಬಿಡಾರದ ಅಂಗಳಕ್ಕೆ ಬರುತ್ತಿದ್ದುದನ್ನು ಕಂಡು "ನೀವ್ಯಾಕೆ ಬರ್ತೀರಯ್ಯಾ? ನಾನೇ ಬರ್ತೀನಿ, ನಿಲ್ಲಿ" ಎಂದನು. ಅವನ ನಡೆ ನುಡಿಗಳಲ್ಲಿ ಆಶಂಕೆ ಭಯಗಳಿದ್ದುದು ವಾಸುಗೆ ಗೊತ್ತಾಗಲಿಲ್ಲ. ಅವನು ನೇರವಾಗಿ ಹೊಲೆಯರ ಅಂಗಳಕ್ಕೇ ಹೋಗಿ ನಿಂತನು.

ಮಲಿನ ಕೌಪೀನ ವಿನಾ ದಿಗಂಬರನಾಗಿ, ಚರ್ಮಕ್ಕೆ ತುಕ್ಕು ಹಿಡಿದಂತೆ ಕಾಣಿಸುತ್ತಿದ್ದ ಅವನನ್ನು ನೋಡಿ "ಕೊಳಲು ಆಯ್ತೇನೋ?" ಎಂದು ಪ್ರಶ್ನೆ ಮಾಡಿದನು.

"ಇಲ್ರಯ್ಯಾ, ಇನ್ನೂ ಆಗಿಲ್ಲ" ಎಂದು ಗಂಗನು ನಾಯಿ ಮೂಸಿನೋಡುತ್ತಿದ್ದ ತಿಪ್ಪುಳು ಗರಿಗಳ ಕಡೆ ಕಳ್ಳ ನೋಟ ನೋಡಿದನು.

"ಎಲ್ಲಿ? ಎಷ್ಟಾಗಿದೆ? ನೋಡೋಣ, ತಗೊಂಡು ಬಾ."

"ಅಪ್ಪ ಎಲ್ಲೋ ಇಟ್ಟು ಹೋಗ್ಯಾನೆ..." ವಾಸ್ತವಾಂಶವೇನೆಂದರೆ ಅವನು ಕೊಳಲನ್ನು ಮಾಡುವ ತಂಟೆಗೇ ಹೋಗಿರಲಿಲ್ಲ.

"ಹೋಗಲಿ ಬಾ. ನಿನ್ನೆ ಹೊಡೆದ ಹಕ್ಕಿ ಹುಡುಕೋಣ"

ಗಂಗ ಮತ್ತೆ ಬಾಗಿಲ ಬಳಿ ಇದ್ದ ತಿಪ್ಪುಳದ ಕಡೆ ಕಳ್ಳನೋಟ ನೋಡಿ "ಬಿತ್ತೊ ಬೀಳ್ಲಿಲ್ಲೋ! ಅದೆಲ್ಲಿ ಸಿಗ್ತದ್ರಾ ಈಗ?" ಎಂದನು.

"ಛೇ, ಸರಿಯಾಗಿ ಕೆಳಗೆ ಬಿದ್ದದೆ. ನಾ ನೋಡೀನಿ."

"ಬಿದ್ದಿದ್ರೂ ರಾತ್ರಿ ನರೀಗಿರೀ ಕಚ್ಕೊಂಡು ಹೋಗಿರಾಕೆ ಸಾಕು."

"ನೀ ಬರ್‍ತೀಯೋ ಇಲ್ಲೋ?... ಅದೊಂದ್ಕೇ ಅಲ್ಲ ... ಸೆಬೆ ಒಡ್ಡಿದ್ದನ್ನೂ ನೋಡ್ಕೊಂಡು ಬರಬೇಕು... ಆ ಪಿಕಳಾರದ ಮರೀಗೆ ಹಣ್ಣು ಕೊಡ್ಬೇಕು... ಆಮೇಲೆ ಇವತ್ತು ಮಜ್ಜಾನ ಹೂವಣ್ಣಯ್ಯ ರಾಮಣ್ಣಯ್ಯ ಬರ್‍ತಾರೆ ಮೈಸೂರಿಂದ... ಅವರಿಗೆ ಬೆಮ್ಮಾರಲ ಹಣ್ಣೂ ಕಲ್ಸಂಪಗೆ ಹಣ್ಣೂ ತರಬೇಕು..."

"ಬಿಡಾರದಾಗೆ ಯಾರೂ ಇಲ್ಲಲ್ರೋ! ಏನ್ಮಾಡಾದು? ಅವ್ವ ಮನೀಗೆ ಹೋಗ್ಯಾದೆ."

ವಾಸು ತಾನೊಬ್ಬನೆ ಹೋಗಲು ಮನಸ್ಸು ಮಾಡಿ ಹಿಂತಿರುಗಿ ಎರಡು ಹೆಜ್ಜೆ ನಡೆದಿದ್ದನು. ಸೇಸಿ ಮನೆಯಲ್ಲಿ ನಡೆದಿದ್ದ ಘಟನೆಯನ್ನೇ ಯೋಚಿಸುತ್ತ ಜೋಲು ಮುಖ ಹಾಕಿಕೊಂಡು ಬರುತ್ತಿದ್ದುದು ಕಣ್ಣಿಗೆ ಬಿದ್ದು "ಗಂಗಾ, ಸೇಸಿ ಓ ಅಲ್ಲಿ ಬರ್‍ತಾ ಇದೆ. ನೀನು ಬಾ" ಎಂದನು.

"ಬರ್‍ತೀನಿ ತಡೀರಿ" ಎಂದು ಗಂಗನು ಬಿಡಾರದ ಒಳಗೆ ಹೋಗಿ, ಸ್ವಲ್ಪ ಹೊತ್ತು ಮಾಡಿಕೊಂಡು ಕೈಯಲ್ಲೊಂದು ಕತ್ತಿ ಹಿಡಿದು ವಾಸುವಿನ ಬಳಿಗೆ ಬಂದು ಮೆಲ್ಲಗೆ "ಅವ್ವಗೆ ಹೇಳಿ ನೀವೆ" ಎಂದನು.

ಅಂಗಳಕ್ಕೆ ಬಂದಿದ್ದ ಸೇಸಿಗೆ ವಾಸು "ಸೇಸೀ, ಗಂಗನ್ನ ಕರಕೊಂಡು ಹೋಗ್ತೀನೇ, ಸ್ವಲ್ಪ ಕೆಲ್ಸಾ ಇದೆ" ಎಂದನು. ಸೇಸಿ "ಅಯ್ತಯ್ಯಾ" ಎಂದು ಬಿಡಾರದ ಒಳಗೆ ಹೋದಳು. ಹುಡುಗರಿಬ್ಬರೂ ಹೊರಟರು.

ಕೆಲವು ದಿನಗಳ ಹಿಂದೆ ವಾಸು, ಗಂಗ, ಪುಟ್ಟ ಮೂವರೂ ಸೇರಿ ಹಕ್ಕಿಯ ಗೂಡುಗಳಿಗಾಗಿ ಪೊದೆಗಳನ್ನು ಅಜಮಾಯಿಸಿ ಮಾಡುತ್ತಿದ್ದಾಗ ಒಂದು ಪಿಕಳಾರ ಹಕ್ಕಿಯ ಗೂಡು ಕಣ್ಣಿಗೆ ಬಿದ್ದಿತ್ತು. ಆ ಗೂಡಿನಲ್ಲಿ ಕೆಂಪುನೀಲಿ ಬಣ್ಣವಾಗಿ ಚುಕ್ಕಿ ಚುಕ್ಕಿಯಾಗಿದ್ದ ಮೂರು ಪುಟ್ಟ ಮೊಟ್ಟೆಗಳಿದ್ದುವು. ಮೊಟ್ಟೆಗಳನ್ನು ಯಾರೂ ತೆಗೆಯಕೂಡದೆಂದೂ, ಮರಿಗಳಾದ ಮೇಲೆ ತಾಯಿ ಮತ್ತು ಮರಿಗಳನ್ನು ಒಟ್ಟಿಗೆ ಹಿಡಿದು ಸಾಕಬೇಕೆಂದೂ, ವಾಸು ಕಟ್ಟಪ್ಪಣೆ ಮಾಡಿದ್ದನು. ಅವನು ದಿನಕ್ಕೆ ಕಡೆಯ ಪಕ್ಷ ಎರಡು ಸಾರಿಯಾದರೂ ಹೋಗಿ ಮೊಟ್ಟೆಗಳನ್ನು ನೋಡಿಕೊಂಡು ಬರುತ್ತಿದ್ದನು. ಹೋದಾಗ ಪ್ರತಿ ಸಲವೂ ಕಾವು ಕೂತಿರುತ್ತಿದ್ದ ಹಕ್ಕಿ ಹಾರಿಹೋಗುತ್ತಿತ್ತು. ಒಂದು ದಿನ ಹೋಗಿ ನೋಡುತ್ತಾನೆ: ಮೊಟ್ಟೆಗಳೊಡೆದು ಮರಿಯಾಗಿದ್ದುವು. ಮರಿಗಳು ನೋಡುವುದಕ್ಕೆ ಹೇಸಿಗೆಯಾಗಿದ್ದುವು. ತಿಪ್ಪಳಿಲ್ಲದ ಮೈ, ಬೋಡು ಮಂಡೆ, ದೇಹದ ಗಾತ್ರಕ್ಕೆ ಅತಿ ಎಂದು ಕಾಣುವ ಕೊಕ್ಕು, ಎಲ್ಲವೂ ಜುಗುಪ್ಸೆ ಹುಟ್ಟಿಸುವಂತಿತ್ತು. ವಾಸು ನೋಡಿದಾಗಲೆಲ್ಲ ಅವು ತಮ್ಮ ಕೆಂಪು ಪೊರೆಯ ಬಾಯಿಗಳನ್ನು, ಜಗತ್ತನ್ನೇ ನುಂಗುತ್ತೇವೆಂಬಂತೆ ಅಗಲವಾಗಿ ತೆರೆದು ಗೋಗರೆಯುತ್ತಿದ್ದುದರಿಂದ, ಅವನು

ಪಕ್ಕದಲ್ಲಿಯೆ ಯಥೇಚ್ಛವಾಗಿ ಬೆಳೆದಿರುತ್ತಿದ್ದ ಲಾಂಟಾನದ ಹಣ್ಣುಗಳನ್ನು ಕೊಯ್ದು ಬಾಯಿ ಮುಚ್ಚುವತನಕ ಸುರಿಯುತ್ತಿದ್ದನು. ಹೀಗೆ ತಾಯಿ ಕೊಡು ತ್ತಿದ್ದ ಬಾಯಿತುತ್ತುಗಳೊಂದಿಗೆ 'ಮಲತಾಯಿ' ಯಾದ ವಾಸು ಕೊಡುತ್ತಿದ್ದ ಕೈತುತ್ತುಗಳೂ ಸೇರಿ ಆ ಮರಿಗಳು ಅಜೀರ್ಣದಿಂದ ಹೇಗೆ ಸಾಯಲಿಲ್ಲವೋ ದೇವರೇ ಬಲ್ಲ! (ಪುಟ್ಟ, ರಂಗ ಅವರು ಬೇರೆ ಕೊಡುತ್ತಿದ್ದರೋ ಏನೋ?) ಕಡೆಗೆ ಮರಿಗಳಿಗೆ ಗರಿ ಮೂಡಲಾರಂಭಿಸಿತು. ವಾಸು ಇನ್ನು ಸುಮ್ಮನೆ ಬಿಟ್ಟರೆ ಹಕ್ಕಿಗಳು ಮರಿಗಳನ್ನು ಹಾರಿಸಿಕೊಂಡು ಹೋಗಿಬಿಟ್ಟಾವು ಎಂದು ಅವುಗಳನ್ನು ಹಿಡಿಯಲು ಪುಟ್ಟ ಗಂಗರೊಡನೆ ಮಂತ್ರಾಲೋಚನೆ ಮಾಡಿ, ಗಂಗನ ಯಂತ್ರಜ್ಞತೆಯಿಂದಲೂ ಪುಟ್ಟನ ಶ್ರಮದಿಂದಲೂ ತನ್ನ ನೇತೃತ್ವದಿಂದಲೂ ಆ ಪೊದೆಗೆ ಸಮಿಪದಲ್ಲಿಯೆ ಒಂದು 'ಸೆಬೆ' ಯೊಡ್ಡಿದ್ದನು. ಅದನ್ನೇ ನೋಡಿಕೊಂಡು ಬರಲು ಅವನು ಆ ದಿನ ಪ್ರಾತಃಕಾಲ ಗಂಗದ್ವಿತೀಯನಾಗಿ ಹೊರಟಿದ್ದುದು.

ಹೋಗಿ ನೋಡುತ್ತಾರೆ: 'ಸೆಬೆ'ಗೆ ಹಕ್ಕಿ ಸಿಕ್ಕಿಬಿದ್ದಿದೆ. ಹೆದೆಯೇರಿದ ಧನುಸ್ಸಿನಂತೆ ನೆಲದಿಂದ ಮೇಲೆದ್ದು ಬಾಗಿದ್ದ ಸಿಡಿಗೋಲಿನ ತುದಿಯಿಂದ, ನೆಲಕ್ಕೆ ಬಿಮ್ಮನೆ ನೇರವಾಗಿ ಇಳಿದಿದ್ದ ಸೂತ್ರದ ಮಧ್ಯೆ, ಉರುಳುಗಣ್ಣಿನಲ್ಲಿ ಒಂದು ಕಾಲು ಸಿಕ್ಕಿ ತಲೆಕೆಳಗಾಗಿ ನೇತಾಡುತ್ತಿದೆ ಪಿಕಳಾರ ಹಕ್ಕಿ! ಬಹಳ ಒದ್ದಾಡಿ ಬಳಲಿದ್ದುದರಿಂದ ಅದು ನಿಶ್ಚಲವಾಗಿತ್ತು. ಅದರ ಎದೆಯ ಬಿಳುಪೂ ಅಡ್ಡಿಕೆಯಂತೆ ಕುತ್ತಿಗೆಯನ್ನು ಸುತ್ತಿದ್ದ ಕೆಂಪೂ ಬಿಸಿಲಿನಲ್ಲಿ ರಾರಾಜಿಸುತ್ತಿದ್ದುವು. ಹಕ್ಕಿಯ ಬಳಿಯಲ್ಲಿ ಆಕರ್ಷಣೆಗಾಗಿ ಕೋಲಿಗೆ ಸಿಕ್ಕಿಸಿಟ್ಟಿದ್ದ ತೇನೆಹಣ್ಣು ರಕ್ತ ವರ್ಣದ ಮುಸುಕಿನ ಜೋಳದಂತೆ ರಂಜಿಸಿತ್ತು.

ಹುಡುಗರಿಬ್ಬರೂ ಕೇಕೆ ಹಾಕುತ್ತ ಅಟ್ಟಹಾಸದಿಂದ ನುಗ್ಗಿದರು. ಬಗಲಿ ನಲ್ಲಿದ್ದ ಕಲ್ಲುಚೀಲವು ತೂಗಾಡಿ ಪಕ್ಕಕ್ಕೆ ಬಡಿಯುತ್ತಿದ್ದರೂ ವಾಸುಗೆ ಲಕ್ಷ್ಯ ವಿರಲಿಲ್ಲ. ರಾಕ್ಷಸಗಾತ್ರಗಳೆರಡು ತನ್ನ ಬಳಿಗೆ ರಭಸದಿಂದ ಬಂದುದನ್ನು ಕಂಡು, ಮೊದಲೇ ಬಳಲಿ ತಣ್ಣಗಾಗಿದ್ದ ಆ ಬಡ ಪಕ್ಷಿ ಮತ್ತೆ ರೆಕ್ಕೆಗಳನ್ನು ಪಟಪಟನೆ ಬಡಿದು ಕೊಂಡು ಬಂಧವಿಮುಕ್ತವಾಗಲು ಪ್ರಯತ್ನಿಸಿತು. ಆದರೆ ವಾಸುವಿನ ಕೈ ಅದನ್ನು ಹಿಡಿದುಕೊಂಡಿತು. ಭೀತಿಯಿಂದಲೂ ಆಯಾಸದಿಂದಲೂ ದ್ವಿಗುಣಿತವಾಗಿ ಏದುತ್ತಿದ್ದ ಹಕ್ಕಿಯ ಕಾಲನ್ನು ಉರುಳಿನಿಂದ ಬಿಡಿಸಿದರು.

ವಾಸು ಅದರ ನುಣ್ಗರಿಗಳನ್ನು ಸವರಿ ಮುತ್ತುಕೊಡುತ್ತ "ಗಂಗಾ, ತಾಯಿ ಹಕ್ಕಿ ಸಿಕ್ಕಿತು. ಇದರ ಜೊತೆಗೆ ಮರಿಗಳನ್ನೂ ತೆಗೆದುಕೊಂಡು ಹೋಗಿ ಪಂಜರದಾಗೆ ಇಡೋಣ" ಎಂದು ಪರಮಾಹ್ಲಾದದಿಂದ ನುಡಿದನು.

ಗಂಗನು ಹಕ್ಕಿಯನ್ನು ಅಭೀಷ್ಟಕ ನಯನಗಳಿಂದ ನೋಡುತ್ತ, "ಮತ್ತೆ ಸೆಬೆ ಒಡ್ಡಾನ. ಗಂಡ್ಹಕ್ಕಿ ಸಿಕ್ಕಿದ್ರೂ ಸಿಕ್ಕಬೈದು" ಎಂದನು.

ವಾಸು ಎಡಗೈಯಲ್ಲಿ ಹಕ್ಕಿ ಹಿಡಿದುಕೊಂಡು, ಬಲಗೈಯಿಂದ ಸಿಡಿಗೋಲನ್ನು ಬಾಗಿಸಿ, ಸೂತ್ರವು ಸಡಿಲವಾಗುವಂತೆ ಮಾಡಿದನು. ಗಂಗ ಸೆಬೆಯೊಡ್ಡ ತೊಡಗಿದನು. ಸೆಬೆಯೊಡ್ಡಿ ಪೂರೈಸಿತೆಂದು ತಿಳಿದು ವಾಸು ಕೈಬಿಟ್ಟ ಕೂಡಲೆ ಆಕಸ್ಮಾತ್ತಾಗಿ ಕಣೆಯ ಕಡ್ಡಿ ಸಿಡಿಯಿತು. ಸಿಡಿಗೋಲು ರಭಸದಿಂದ ಹಿಂದಕ್ಕೆ ಚಿಮ್ಮಿ ಅವನ ಎಡಗೈಗೆ ಬಲವಾಗಿ ತಗುಲಿತು. ಹಕ್ಕಿ ಕೈತಪ್ಪಿತು! ಹಾರಿ ಹೋಗಿ ಒಂದು ಪೊದೆಯ ಕಡ್ಡಿಯ ಮೇಲೆ ಕುಳಿತಿತು. ವಾಸು ನಿಷ್ಕಾರಣವಾಗಿ ಗಂಗನನ್ನು ಶಪಿಸುತ್ತ ಹಕ್ಕಿಯನ್ನು ಹಿಡಿದುಕೊಳ್ಳಲು ಓಡಿದನು. ಅದು ಹಾರಿ ಮತ್ತೊಂದು ಕಡೆ ಕೂತಿತು. ಅದಕ್ಕೆ ದೂರ ಹಾರಿಹೋಗುವ ತ್ರಾಣವಿರಲಿಲ್ಲ. ಕೆಲವು ಕ್ಷಣಗಳ ಹಿಂದೆ ಅದನ್ನು ಮುತ್ತಿಟ್ಟು ಮುದ್ದಿಸಿದ್ದ ವಾಸು ಅದರಮೇಲೆ ಸಿಟ್ಟಾಗಿ, ಬಿಲ್ಲಿಗೆ ಕಲ್ಲುಹೂಡಿ ಸೆಳೆದು ಹೊಡೆದನು. ಒಂದು ಕಲ್ಲು ತಪ್ಪಿತು. ಮತ್ತೊಂದು ಸರಿಯಾಗಿ ಹಕ್ಕಿಯ ತಲೆಗೆ ಬಿದ್ದು ಅದನ್ನು ನೆಲಕ್ಕುರುಳಿಸಿತು. ವಾಸು ಓಡಿಹೋಗಿ ಹಿಡಿದುಕೊಂಡನು. ಆದರೆ ಅದಕ್ಕೆ ಜೀವವಿರಲಿಲ್ಲ. ಅವನಿಗೆ ಆಸೆಯಿದ್ದುದು ಜೀವದ ಹಕ್ಕಿಯ ಮೇಲೆ. ಹನಿಗಣ್ಣಾಗಿ ಗಂಗನನ್ನು ಬೈಯುತ್ತ ಮರಿಗಳಿದ್ದ ಗೂಡಿಗೆ ಹೋಗಿ ನೋಡುತ್ತಾನೆ: ಮರಿಗಳಿಲ್ಲ! ಬರಿಯ ಗೂಡು ಪಾಳುಬಿದ್ದ ಮನೆಯಂತೆ 'ಬೆಕೋ' ಎನ್ನುತ್ತಿದೆ. ಗಂಡು ಹೆಣ್ಣು ಹಕ್ಕಿಗಳೆರಡೂ ವ್ಯಸನ ಸೂಚಕವಾಗಿ ಕೂಗುತ್ತ ಸುತ್ತಲೂ ಹಾರಾಡುತ್ತಿವೆ! (ಉರುಳಿಗೆ ಸಿಕ್ಕಿದ್ದು ಯಾವುದೋ ಬೇರೆ ಹಕ್ಕಿ.)

"ಏ ಗಂಗಾ, ಮರಿಗಳಿಲ್ಲಲ್ಲೋ!" ವಾಸುವಿನ ವಾಣಿ ರೋದನವಾಗಿತ್ತು.

ಗಂಗನೂ ಓಡಿಬಂದು ತಾನೂ ಗೂಡನ್ನು ನೋಡಿ "ಅಯ್ಯಯ್ಯೋ ಏನಾದುವ್ರೋ?" ಎಂದನು.

"ಯಾರೋ ಬಡ್ಡೀಮಕ್ಳು ಕದ್ದುಕೊಂಡು ಹೋಗಿದಾರೆ!"

"ಹಾರಿಹೋದ್ವೊ ಏನೋ?"

"ಹಾರಿಹೋಗಿದ್ರೆ ತಾಯಿಹಕ್ಕಿ ಹೀಂಗೆ ಬಡುಕೊಳ್ಳುತ್ತಿದ್ದುವೇನು?" ಎಂದು ವಿಹಂಗ ದಂಪತಿಯ ಕಡೆಗೆ ಮೊಗದೋರಿದನು.

"ಹಾಂಗಾದ್ರೆ, ಯಾರ್‍ರೋ ಕದ್ಕೊಂಡುಹೋದ್ರು? ಅವರ ಎದೆಗೆ ರಣ ಹೊಡಿಯ!"

"ನೀ ತೆಗೆದುಕೊಳ್ಳಲಿಲ್ಲವೇನೋ?" ವಾಸು ಕೋಪಾರುಣನೇತ್ರನಾಗಿ

ನೋಡಿದನು. ಅವನ ಶೋಕಕೋಪಾಗ್ನಿಗಳಿಗೆ ದಹಿಸಲು ಯಾವುದಾದರೂ ಒಂದು ವಸ್ತು ಬೇಕಿತ್ತು. ಸದ್ಯಕ್ಕೆ ಹತ್ತಿರದಲ್ಲಿದ್ದವನು ಗಂಗ!

ಆದರೆ ಗಂಗನು ಅಸ್ಪೃಶ್ಯನಾದ ತನ್ನನ್ನು ವಾಸು ಮುಟ್ಟುವುದಿಲ್ಲವೆಂಬ ಕೆಚ್ಚಿನಿಂದ ಸ್ವಲ್ಪವೂ ಅಪ್ರತಿಭನಾಗದೆ "ನಾ ಈ ಕಡೆಗೇ ಬರಲಿಲ್ಲ. ದೇವ್ರಾಣೆ! ಪುಟ್ಟಯ್ಯ ಏನಾದ್ರೂ ಬಂದಿದ್ರೋ ಏನೋ...." ಎಂದು ವಾಸುವಿನ ಕೋಪಾಗ್ನಿಯ ಪ್ರವಾಹವನ್ನು ಬೇರೆಯ ದಿಕ್ಕಿಗೆ ತಿರುಗಿಸಲು ಉಪಾಯ ಹೂಡಿದನು.

"ಅವನು ಕಾಲಿಗೆ ಮುಳ್ಳು ಚುಚ್ಚಿಕೊಂಡು ಬಿದ್ದಾನೆ!"

ವಾಸುವಿಗೆ ಯಾವುದೂ ಬಗೆಹರಿಯಲಿಲ್ಲ. ಕಳ್ಳನನ್ನು ಬಾಯಿಗೆ ಬಂದಂತೆ ಶಪಿಸುತ್ತ, ಗಂಗನನ್ನೂ ಕರೆದುಕೊಂಡು ಹಿಂದಿನ ದಿನ ಸಂಜೆಯಲ್ಲಿ ಪೊದೆಗೆ ಬಿದ್ದು ಸಿಕ್ಕದಿದ್ದ ಹಕ್ಕಿಯನ್ನು ಅರಸಲು ಹೋದನು. ಎಷ್ಟು ಹುಡುಕಿದರೂ ಅದೂ ಸಿಕ್ಕಲಿಲ್ಲ.

ಆಮೇಲೆ ಬಾಲಕರಿಬ್ಬರೂ ಹಣ್ಣುಗಳಿಗಾಗಿ ಅಲೆದೂ ಅಲೆದೂ ಸುಮಾರು ಹನ್ನೊಂದು ಗಂಟೆಯ ಹೊತ್ತಿಗೆ ಬೈರನ ಬಿಡಾರಕ್ಕೆ ಬಂದರು. ಬೈರನು ಬಿಡಾರಕ್ಕೆ ಬಂದಿದ್ದರೆ ಕೊಳಲನ್ನು ನೋಡಬಹುದೆಂದು ಆಸೆಪಟ್ಟು ವಾಸು ನೆಟ್ಟಗೆ ಮನೆಗೆ ಹೋಗದೆ, ಗಂಗನೊಡನೆ ಹೋಗಿದ್ದನು.

ಬಿಡಾರದೊಳಗಣ ಕಗ್ಗವಿಯಲ್ಲಿ ಪಾಕಕಾರ್ಯದಲ್ಲಿ ತೊಡಗಿದ್ದ ಸೇಸಿ ಮಗನು ಬಂದುದನ್ನು ಧ್ವನಿಯಿಂದ ತಿಳಿದು, "ಗಂಗಾ" ಎಂದು ಕೂಗಿದಳು.

ಹೊರಗಡೆ ವಾಸುವಿನೊಡನೆ ಕೊಳಲಿನ ವಿಚಾರವಾಗಿ ಮಾತಾಡುತ್ತಿದ್ದ ಗಂಗ "ಓ" ಎಂದನು.

ಸೇಸಿ ಒಳಗಿನಿಂದ "ಈ ಹಕ್ಕಿ ತಿಪ್ಪುಳಿಸಿ ಸುಟ್ಟುಕೊಡೋ" ಎಂದಳು. ಅದನ್ನು ಕೇಳಿ ಗಂಗನ ಮೈಗೆ ಕುದಿನೀರು ಹೊಯ್ದಹಾಗಾಯಿತು. ಕಣ್ಣು ಬೆರಗಾಗಿ ಮುಖ ಬೆಪ್ಪಾಯಿತು.

ವಾಸು ಸಂಶಯದಿಂದ "ಎಲ್ಲಿತ್ತೋ ಹಕ್ಕಿ?" ಎಂದನು.

"ನಾ...ನಾ...ನು,...ಬೆ-ಳಿ-ಗ್ಗೆ-..." ಎಂದು ಗಂಗ ತೊದಲುತ್ತಿದ್ದಂತೆಯೆ, ಸೇಸಿ ಹೊರಗೆ ಬಂದು, ಒಂದು ಹಕ್ಕಿಯನ್ನೂ ಎರಡು ಮರಿಗಳನ್ನೂ ಗಂಗನ ಕಾಲುಬುಡಕ್ಕೆ ಎಸೆದು ಒಳಗೆ ಹೋದಳು.

ವಾಸು ನೋಡುತ್ತಾನೆ: ಹಕ್ಕಿ ಗಿಜಗಾರ್ಲು ಹಕ್ಕಿ; ತಾನು ಹಿಂದಿನ ದಿನ ಸಂಜೆಯಲ್ಲಿ ಹೊಡೆದಿದ್ದು! ಮರಿಗಳು ಪಿಕಳಾರದ ಮರಿಗಳು; ಆ ಗೂಡಿನಲ್ಲಿದ್ದವು! ಗಂಗನ ಮೋಸಕ್ಕೆ ಮೂಕಸಾಕ್ಷಿಗಳಾಗಿ ಪಕ್ಷಿಶಿಶುಶವಗಳು ನೆಲದ ಮೇಲೆ ನಿಶ್ಚಲವಾಗಿ ಬಿದ್ದಿವೆ!

ಗಂಗ ನಡುಗುತ್ತ ನಿಂತಿದ್ದನು. ವಾಸುವಿನ ಮನಸ್ಸಿಗೆ ವಿಷಯವೆಲ್ಲ ವಿಶದವಾಗಿ, ಅವನ ಕೋಪ ಮೇರೆ ಮೀರಿತು. ಬೇಲರವನನ್ನು ಮುಟ್ಟಬಾರದೆಂದು ಗೊತ್ತಿದ್ದರೂ ಒನಕೆಯಿಂದ ಹಿಟ್ಟು ಕುಟ್ಟುವಂತೆ ಗಂಗನ ಮೈಗೆ ಗುದ್ದಿ, ತನ್ನ ಜೇಬಿನಲ್ಲಿದ್ದ ಹಕ್ಕಿಯನ್ನೂ ತೆಗೆದು ಅವನ ಹೊಟ್ಟೆಗೆ ರಪ್ಪೆಂದು ಹೊಡೆದು ಮನೆಯ ಕಡೆಗೆ ಅಳುತ್ತಾ ಹೋದನು.

ದಾರಿಯಲ್ಲಿ ಬೇಲರವನನ್ನು ಮುಟ್ಟಿದ್ದಕ್ಕೆ ಪ್ರಾಯಶ್ಚಿತ್ತರೂಪವಾಗಿ ಹಟ್ಟಿಗೆ ಹೋಗಿ ಸೆಗಣಿಯನ್ನು ಮೆಟ್ಟಿ, ಹಿತ್ತಲುಕಡೆಯ ಬಾಗಿಲಿನಿಂದ ಮನೆಯನ್ನು ಪ್ರವೇಶಿಸಿದನು. ಅಡುಗೆ ಮನೆಯಲ್ಲಿ ತಂದೆಯ ಕ್ರೋಧಧ್ವನಿಯೂ ಗುದ್ದುಗಳ ಸದ್ದೂ ಚಿಕ್ಕಮ್ಮನ ಆರ್ತನಾದವೂ ಕೇಳಿಸಿದುವು.

## ೯

## ಚಂದ್ರಯ್ಯಗೌಡರ ದರ್ಬಾರು

ವಾಸು ಬೆಳಗ್ಗೆ ಅಡುಗೆ ಮನೆಯಿಂದ ಜಗಲಿಗೆ ನುಗ್ಗಿ ಬಂದವನು ಸ್ವಲ್ಪ ಸಾವಧಾನವಾಗಿ ನೋಡಿದ್ದರೆ, ತನ್ನ ತಂದೆಯೊಡನೆ ಮಾತಾಡುತ್ತಿದ್ದವರು ಅಗ್ರಹಾರದ ಜೋಯಿಸರು ವೆಂಕಪ್ಪಯ್ಯನವರು, ಕೆಳಕಾನೂರು ಅಣ್ಣಯ್ಯಗೌಡರು, ಹಳೆಪೈಕದ ತಿಮ್ಮ ಎಂಬುದು ಗೊತ್ತಾಗುತ್ತಿತ್ತು. ಅವರವರು ಅವರವರ ಮಾನಕ್ಕೆ ತಗುವ ಸ್ಥಾನಗಳಲ್ಲಿ ಕುಳಿತಿದ್ದರು. ಪ್ರತಿಯೊಬ್ಬರ ವೇಷವೂ ಅವರವರ ಸಂಸ್ಕೃತಿ ಸಂಪತ್ತುಗಳಿಗೆ ಸಾಕ್ಷಿಯಾಗಿತ್ತು.

ತೆಳ್ಳಗೆ ಉದ್ದವಾಗಿದ್ದು, ಎಡಗಣ್ಣು ಹೂಕೂತು ಕುರುಡಾಗಿದ್ದ ವೆಂಕಪ್ಪಯ್ಯನವರು ಗೋಡೆಯ ಪಕ್ಕದಲ್ಲಿಟ್ಟಿದ್ದ ಅಗಲವಾದ ಒಂದು ಮಣೆಯ ಮೇಲೆ ಪದ್ಮಾಸನ ಹಾಕಿ ಕುಳಿತಿದ್ದರು. ಏಕೆಂದರೆ, ಶೂದ್ರರ ಮನೆಯ ಜಮಖಾನ ಮೊದಲಾದ ವಸ್ತ್ರಾದಿಗಳನ್ನು ಮುಟ್ಟುವುದು ಸಂಪ್ರದಾಯ ಬ್ರಾಹ್ಮಣರಾಗಿದ್ದ ಅವರ ಮಡಿಗೆ ಮೈಲಿಗೆ ಎಂದು ಅವರ ಮತವಾಗಿತ್ತು. ಅವರು ಅಂಗಿ ಮೊದಲಾದ ನವೀನ ವಸನಗಳನ್ನು ತೊಟ್ಟಿರಲಿಲ್ಲ; ಆರ್ಷೇಯವಾಗಿ ಬಂದಿದ್ದ ಮೈಚರ್ಮವೇ ಅವರಿಗೆ ವಸನವಾಗಿತ್ತು. ಆದರೆ ಗೌರವಾರ್ಥವಾಗಿ ಒಂದು ಬಿಳಿಯ ಬಟ್ಟೆಯನ್ನು ಹೊದೆದಿದ್ದರು; ಮೊಳಕಾಲಿನವರೆಗೆ ಕಚ್ಚೆ ಹಾಕಿದ್ದರು. ಅವರ ಉಡುಗೆಯೆಲ್ಲವೂ ಶುಭ್ರವಲ್ಲದಿದ್ದರೂ ಧೌತವಾಗಿತ್ತು. ಸ್ವಲ್ಪ ಚೆನ್ನಾಗಿ ನೋಡಿದ್ದರೆ ಸೊಂಟದಲ್ಲಿ ನಶ್ಯದ ಡಬ್ಬಿಯನ್ನು ಸಿಕ್ಕಿಸಿದ್ದಾರೆ ಎಂಬುದೂ

ಗೊತ್ತಾಗುತ್ತಿತ್ತು. ಅವರ ಉದ್ಯೋಗಗಳಲ್ಲಿ ಮುಖ್ಯವಾದುವೆಂದರೆ ದೇವರ ಪೂಜೆ, ನಿಮಿತ್ತ ನೋಡುವುದು, ಭವಿಷ್ಯತ್ತು ಹೇಳುವುದು, ಜಾತಕ ಬರೆಯು ವುದು ಮತ್ತು ನೋಡುವುದು, ಲಗ್ನಕ್ಕೆ ಮುಹೂರ್ತ ಇಟ್ಟುಕೊಡುವುದು, ಶೂದ್ರರ ಭೂತಾದಿಗಳಿಗೆ ರಕ್ತದ ಬಲಿ ಕೊಡುವ ಮೊದಲು ಹಣ್ಣು ಕಾಯಿ ಮಾಡುವುದು, ಮಂತ್ರದಿಂದ ದೆವ್ವಗಳನ್ನು ಬಿಡಿಸುವುದು ಮತ್ತು ಹಿಡಿಸುವುದು, ಇತ್ಯಾದಿ. ಆದಕಾರಣ ಹಳ್ಳಿಯವರಿಗೆಲ್ಲ ಅವರನ್ನು ಕಂಡರೆ ಭಯ, ಭಕ್ತಿ.

ಜಗಲಿಯ ತೆಣೆಯಲ್ಲಿ ಹಾಸಿದ್ದ ಮಲಿನವಾದ ಜಮಖಾನದ ಮೇಲೆ ಚಂದ್ರಯ್ಯ ಗೌಡರಿಗೆ ಅಭಿಮುಖವಾಗಿ ಕುಳಿತಿದ್ದ ವ್ಯಕ್ತಿ ಕೆಳಕಾನೂರು ಅಣ್ಣಯ್ಯಗೌಡರು. ಅವರು ತಮ್ಮ ವಯಸ್ಸಿಗಿಂತಲೂ ಹೆಚ್ಚಾಗಿ ಮುದುಕರಾಗಿದ್ದರು. ಒಂದು ಅಂಗಿ ಹಾಕಿ, ಮೊಳಕಾಲಿನವರೆಗೆ ಅಡ್ಡಪಂಚೆ ಸುತ್ತಿದ್ದರು. ಬಟ್ಟೆಯೊಗೆಯದೆ ಎಷ್ಟು ವರ್ಷಗಳಾಗಿದ್ದುವೋ ಏನೋ! ಅಂಗಿಗೆ ಮೇಲಿನ ಗುಂಡಿಗಳಿರಲಿಲ್ಲ; ಇದ್ದ ಕೆಳಗಣವುಗಳನ್ನೂ ಹಾಕಿರಲಿಲ್ಲ. ಷರ್ಟು ಅವರ ಭಾಗಕ್ಕೆ ಮೊಲದ ಕೊಂಬಾಗಿತ್ತು. ಆದ್ದರಿಂದ ಬಿಳಿಯ ಕೂದಲು ತುಂಬಿದ್ದ ಅವರ ಎದೆಯೂ ಸುಕ್ಕುಸುಕ್ಕಾಗಿದ್ದ ಹೊಟ್ಟೆಯೂ ಕನಿಕರ ಹುಟ್ಟಿಸುವಂತೆ ಕಾಣಿಸುತ್ತಿದ್ದುವು. ಒಂದೆರಡು ದಿನಗಳ ಹಿಂದೆ ಕ್ಷೌರ ಮಾಡಿಸಿಕೊಂಡಿದ್ದ ಅವರ ಮುಖದ ಮೇಲೆ ಮುದಿತನದ ತೆರೆಗಳು ಒಂದರ ಮೇಲೊಂದಾಗಿ, ಒಂದರ ಹಿಂದೊಂದಾಗಿ ಅಪ್ಪಳಿಸಿದ್ದುವು. ಹಲ್ಲಿಲ್ಲದ ಬೋಡುಬಾಯಿಯ ದೆಸೆಯಿಂದ ಕೆನ್ನೆಗಳು ಕಣಿವೆ ಯಾಗಿದ್ದುವು. ಅರುವತ್ತು ಎಪ್ಪತ್ತು ಬೇಸಗೆಗಳ ಬಿಸಿಲಿನಲ್ಲಿ ಸುಟ್ಟು ಸುಟ್ಟು ಕಪ್ಪಾಗಿದ್ದ ಅವರ ಮುಖಚರ್ಮದ ಹಿಂದೆ ಗಲ್ಲ ಕೆನ್ನೆ ಮತ್ತು ತಲೆಯ ಎಲುಬು ಗಳೂ ನರಗಳೂ ಚಾಚಿಕೊಂಡಿದ್ದುವು. ನುಣ್ಣಗೆ ಬೋಡಾಗಿದ್ದು, ಮಧ್ಯೆ ಬಿಳಿಯ ಕೂದಲು ವಿರಳವಾಗಿ ಬೆಳೆದಿದ್ದ ತಲೆಗೆ ಒಂದು ಕೆಂಪು ವಸ್ತ್ರ ಸುತ್ತಿದ್ದರು. ಅವರು ಮಾತಾಡಿದರೆ ಹಸುಳೆಯ ತೊದಲೂ ಧ್ವನಿಯಲ್ಲಿ ಇಕಾರ ಪ್ರಾಧಾನ್ಯವೂ ಕಂಡು ಬರುತ್ತಿತ್ತು.

ಅಣ್ಣಯ್ಯಗೌಡರು ಕಾನೂರಿಗೆ ಹೆಚ್ಚುಕಡಿಮೆ ಒಂದು ಮೈಲಿ ದೂರವಿದ್ದ ಕೆಳಕಾನೂರಿನಲ್ಲಿ ಚಂದ್ರಯ್ಯಗೌಡರ ಗದ್ದೆ ತೋಟಗಳನ್ನು ಗಡಿಗುತ್ತಿಗೆಗೆ ಮಾಡಿ ಕೊಂಡು ಒಕ್ಕಲಾಗಿದ್ದರು. ಅವರಿಗೆ ಚಂದ್ರಯ್ಯಗೌಡರ ತಂದೆ ತಾತ ಎಲ್ಲರೂ ಪರಿಚಿತರಾಗಿದ್ದರು. ಒಕ್ಕಲುತನದಲ್ಲಿ ಮೊದಲು ನೆಮ್ಮದಿಯಾಗಿದ್ದವರು ಹೆಣ್ಣುಗಳಿಗಾಗಿ ತೆರವನ್ನು ತೆತ್ತೂ ತೆತ್ತೂ ಈಚೆಗೆ ಬಹಳ ದರಿದ್ರಾವಸ್ಥೆಗೆ ಇಳಿದಿದ್ದರು. ಅವರ ಗ್ರಹಚಾರಕ್ಕೆ ತಕ್ಕಂತೆ ಮೂವರು ಹೆಂಡಿರೂ ಸತ್ತು ನಾಲ್ಕನೇ ಹೆಂಡತಿಯೂ ರೋಗದಿಂದ ನರಳುತ್ತಿದ್ದಳು. ಅವರ ದ್ವಿತೀಯ

ಪತ್ನಿಯಲ್ಲಿ ಹುಟ್ಟಿದ್ದ ಓಬಯ್ಯನೆಂಬ ಮಗನಿಗೆ ಇಪ್ಪತ್ತೈದು ವರ್ಷವಾಗಿತ್ತು. ತೃತೀಯ ಪತ್ನಿಗೆ ಏಳೆಂಟು ವರುಷದ ಹುಡುಗಿಯೊಬ್ಬಳಿದ್ದಳು.

ಓಬಯ್ಯನಿಗೆ ವಯಸ್ಸು ಇಪ್ಪತ್ತೈದಾಗಿದ್ದರೂ ಇನ್ನೂ ವಿವಾಹವಾಗಿರಲಿಲ್ಲ. ಅದುಕಾರಣವಾಗಿ ತಂದೆಮಕ್ಕಳಿಗೆ ಇತರ ವ್ಯಾಜಾಂತರಗಳಿಂದ ಮನಸ್ತಾಪ ವುಂಟಾಗಿ ಓಬಯ್ಯನು ತಾನು ಬೇರೆ ಸಂಸಾರ ಹೂಡುತ್ತೇನೆಂದು ಹೆದರಿಸುತ್ತಿದ್ದನು. ವಿವಾಹವಾಗದಿದ್ದುದಕ್ಕೆ ಕಾರಣ, ತೆರ ಕೊಡಲು ಹಣವಿರಲಿಲ್ಲ. ಚಂದ್ರಯ್ಯ ಗೌಡರಲ್ಲಿ ಆಗಲೇ ಸಾವಿರ ರೂಪಾಯಿ ಸಾಲವಿದ್ದುದರಿಂದ ಅವರು ಇನ್ನು ಮುಂದೆ ಒಂದು ಕಾಸನ್ನೂ ಕೊಡುವುದಿಲ್ಲವೆಂದು ಹಟ ಹೂಡಿದ್ದರು. ಅದ ಕ್ಕಾಗಿಯೇ ಅಣ್ಣಯ್ಯಗೌಡರು ಆ ದಿನ ಬೆಳಿಗ್ಗೆ ಕಾನೂರಿಗೆ ಬಂದಿದ್ದರು. ಆ ಮುದುಕನಿಗೆ ಜೀವನವೆಲ್ಲ ನರಕಯಾತನೆಯಂತೆ ಇದ್ದಿತು ಎಂಬುದನ್ನು ಆತನನ್ನು ಕಂಡೊಡನೆ ಹೇಳಬಹುದಾಗಿತ್ತು.

ಕೆಳಗೆ ದೂರದಲ್ಲಿ ಕಿರುಜಗಲಿಯ ಕೆಸರುಹಲಗೆಯ ಮೇಲೆ, ತನ್ನ ಕಂಬಳಿ ಹಾಕಿಕೊಂಡು ಅದರ ಮೇಲೆ ಕೂತಿದ್ದ ಮೂರನೆಯವನು ಹಳೆಪೈಕದ ತಿಮ್ಮ. ಅವನೂ ಚಂದ್ರಯ್ಯಗೌಡರ ಒಕ್ಕಲು. ಆದರೆ ಕುಲಕಸಬು ಬಗನಿಕಟ್ಟಿ ಕಳ್ಳು ಇಳಿಸುವುದು. ಕಳ್ಳಿನ ಮಹಿಮೆಯಿಂದಲೆ ಚಂದ್ರಯ್ಯಗೌಡರಿಗೆ ಅಚ್ಚು ಮೆಚ್ಚಾ ಗಿದ್ದನು. ಅವನ ಜೀವನವು ಸರಾಗವಾಗಿತ್ತೆಂಬುದು ಅವನ ಮೈ ಕಟ್ಟಿನಿಂದ ಸ್ಪಷ್ಟವಾಗುತ್ತಿತ್ತು. ಹತ್ತಾರು ತೇಪೆ ಹಾಕಿದ್ದ ಹರಕು ಅಂಗಿಯೊಂದನ್ನು ತೊಟ್ಟು ಕಸೆ ಕಟ್ಟಿದ್ದನು. ಹರಿದು ಕಿಟಕಿಯಾಗಿದ್ದ ಅವನ ಅಂಗಿಯಬಲತೋಳಿ ನಲ್ಲಿ ಕರಿಯ ಹಗ್ಗದಿಂದ ಸುತ್ತಿದ್ದ ಒಂದು ತಾಯಿತಿ ಕಾಣುತ್ತಿತ್ತು. ಕೆದರಿ ಕೊಂಡಿದ್ದ ಅವನ ಮುಡಿಯಲ್ಲಿ ಒಂದು ಹೊಸ ಮಲ್ಲಿಗೆ ಹೂವಿನ ಗೊಂಡೆಯಿತ್ತು! ಅವನು ಸುತ್ತಿಕೊಂಡಿದ್ದ ಕೊಳೆ ಪಂಚೆ ಎಷ್ಟು ಮೋಟಾಗಿತ್ತೆಂದರೆ ಕೌಪೀನ ಪ್ರಪಂಚವೂ ಗೊತ್ತಾಗುತ್ತಿತ್ತು. ಹಿಂದೆ ಒಂದು ಸಾರಿ ಬಗನಿಯ ಮರದಿಂದ ಕೆಳಗೆ ಬಿದ್ದು ಅವನ ಮೇಲುತುಟಿ ಹರಿದುಹೋಗಿದ್ದುದು ಅಲ್ಲಿದ್ದ ಕಲೆಯಿಂದ ಗೊತ್ತಾಗುತ್ತಿತ್ತು. ಅಡಕೆ ಚಪ್ಪರದ ಕಂಡಿಗಳಲ್ಲಿ ತೂರಿಬರುತ್ತಿದ್ದ ಬಿಸಿಲು ಕೋಲುಗಳು ಅವನ ಮೈಮೇಲೂ ಸುತ್ತಲೂ ಬಲೆ ಬಲೆಯಾಗಿ ಬಿದ್ದಿದ್ದುವು. 'ಕೊತ್ವಾಲ'ನು ಕಾಲಬುಡದಲ್ಲಿ ಮಲಗಿ, ಅವನು ತನ್ನ ತಲೆ ನೀವಿದಂತೆಲ್ಲ ಒಂದು ಅಂಗುಲ ಉದ್ದದ ತನ್ನ ಬಾಲದಿಂದ ಹರ್ಷಪ್ರದರ್ಶನ ಮಾಡುತ್ತಿತ್ತು.

ಚಂದ್ರಯ್ಯಗೌಡರು ತಮ್ಮ ಬೀರುವಿನ ಪಕ್ಕದಲ್ಲಿ ಲೆಕ್ಕಪತ್ರಗಳ ನಡುವೆ ಮಂಡಿಸಿ ಎಲ್ಲರೊಡನೆಯೂ ಸಂಭಾಷಣೆ ನಡಸುತ್ತಿದ್ದರು. ಎಲ್ಲರೂ ಗಟ್ಟಿ ಯಾಗಿ ಮಾತಾಡುತ್ತಿದ್ದರು. ಅದಕ್ಕೆ ಕಾರಣ ಸಾಹುಕಾರರ ಎರಡು ಕಿವಿ

ಗಳಲ್ಲಿಯೂ ಕಾಣುತ್ತಿದ್ದ ಹತ್ತಿಯ ಮುದ್ದೆಗಳು ! ಅವರ ಕಿವಿಗಳೆರಡೂ ಸೋರಿ ಸೋರಿ ಮಂದವಾಗಿದ್ದುವು. ಆದ್ದರಿಂದ ಸದಾ ಮದ್ದಿನೆಣ್ಣೆ ಹಾಕಿ, ಹತ್ತಿ ಇಡು ತ್ತಿದ್ದುದು ಅವರ ದೈನಂದಿನ ಕಾರ್ಯಕ್ರಮವಾಗಿ ಹೋಗಿತ್ತು.

ತಲೆಬಾಗಿ ಲೆಕ್ಕದ ಪುಸ್ತಕದ ಕಡೆಗೇ ನೋಡುತ್ತಿದ್ದ ಚಂದ್ರಯ್ಯಗೌಡರು ತಲೆ ಯೆತ್ತಿ ಅಣ್ಣಯ್ಯಗೌಡರನ್ನು ಕುರಿತು ತಾವು ಹಿಂದೆಯೇ ಹೇಳಿದ್ದುದನ್ನು ಮತ್ತೆ ಸಮರ್ಥಿಸುವ ಧ್ವನಿಯಿಂದ "ಇಲ್ಲಿ ನೋಡು, ಬಡ್ಡಿ ಕೂಡಿ ಸಾವಿರದ ಇನ್ನೂರು ಮುಕ್ಕಾಲು ಮೂರು ವೀಸ ಬೇಳೆ ಆರು ಪೈ ಆಗ್ತದೆ ಬಾಕಿ" ಎಂದು ಪುಸ್ತಕವನ್ನು ಅವಲೋಕನಕ್ಕಾಗಿ ಸ್ವಲ್ಪ ಮುಂದೆ ಚಾಚಿದರು.

ಅಣ್ಣಯ್ಯಗೌಡರು ಲೆಕ್ಕವನ್ನು ಅವಲೋಕಿಸಲು ಸ್ವಲ್ಪವೂ ಕುತೂಹಲ ತೋರದೆ, ತಾಂಬೂಲ ತುಂಬಿದ್ದ ಬಾಯನ್ನು ಎತ್ತಿ "ಹೌದು, ಣಾಣೇಣು ಅಳ್ಳ ಅಂಟೀಣೆ ?" ಎಂದರು.

ಸಾಹುಕಾರರು ಪುಸ್ತಕವನ್ನು ಇನ್ನೂ ಸ್ವಲ್ಪ ಮುಂದಕ್ಕೆ ಸರಿಸಿ "ನೋಡು, ನೀನೇ ನೋಡು !" ಎಂದರು.

ಅಣ್ಣಯ್ಯಗೌಡರಿಗೆ ಓದುಬರಹ ಲೇಶಮಾತ್ರವೂ ಬರುತ್ತಿರಲಿಲ್ಲ. ಆದರೂ ಅರ್ಥವಿಲ್ಲದೆ ಅನೇಕ ಇತರ ಕರ್ಮಕ್ರಿಯೆಗಳನ್ನು ಮಾಡುವಂತೆ, ಮುಂದೆ ಬಾಗಿ ಪುಸ್ತಕವನ್ನು ನೋಡಿ, ಮೊದಲು ಹೇಳಿದುದನ್ನೇ ಮತ್ತೆ ಉಚ್ಚರಿಸಿದರು.

"ನನ್ನಿಂದ ಇನ್ನೊಂದು ಕಾಸೂ ಕೊಡೋಕೆ ಆಗೋದಿಲ್ಲ. ಕೊಟ್ಟ ಬಾಕೀನೇ ತೀರಿಸಿದರೆ ಸಾಕಾಗಿದೆ" ಎಂದರು ಸಾಹುಕಾರರು.

"ಏಣು ಮಾಡೋಡು ಹೇಳಿ. ಅವಣೆಗೊಂಡು ಲಗ್ನ ಮಾಡ್ಬೇಕೋ ಬೇಡೋ . . . ಣಮ್ಮ ಸಾಳ ಣಾಣೇಣೂ ಣುಂಗಾದಿಳ್ಳ. . . ಣಾಣೊಂಡು ಯಾಳೇ ಸಟ್ರೂ ಅವಣೆಡ್ಡಾಣಲ್ಲ ಟೀರ್ಸ್ಲೋಕೆ . . ." ಎಂದು ಅಣ್ಣಯ್ಯಗೌಡರು ಎದ್ದು ಹೋಗಿ ಅಂಗಳದ ಒಂದು ಮೂಲೆಯಲ್ಲಿ ಬತ್ತದ ಹೊಟ್ಟು ತುಂಬಿಟ್ಟಿದ್ದ ಒಂದು ಡಬ್ಬಕ್ಕೆ ಬಾಯಿತುಂಬಿದ್ದ ತಾಂಬೂಲವನ್ನು ಉಗುಳಿ ಹಿಂದಕ್ಕೆ ಬಂದು ಕೂತರು.

"ನೀ ಲಗ್ನ ಮಾಡೋದು ಬ್ಯಾಡ ಅಂತ ಹೇಳಿದೆನೇ ನಾನು ? ನನ್ನಿಂದ ಒಂದು ಕಾಸೂ ಕೇಳಬೇಡ. ಈ ವರ್ಷದ ಗುತ್ತಿಗೇನೂ ಪೂರಾ ಕೊಟ್ಟಿಲ್ಲ ನೀನು" ಎಂದು ಕಠಿನವಾಗಿ ನುಡಿದ ಸಾಹುಕಾರರು ವೆಂಕಪ್ಪಯ್ಯನವರ ಕಡೆಗೆ ತಿರುಗಿ "ನೀವೇ ಹೇಳಿ ಜೋಯಿಸರೆ, ಯಾರ್ಮನೆ ಹಾಳಾಗ್ಬೇಕು, ಹೀಂಗೆ ಸಾಲ ಕೊಡ್ತಾ ಹೋದರೆ ?" ಎಂದರು.

ಜೋಯಿಸರು ಅಣ್ಣಯ್ಯಗೌಡರನ್ನು ಕುರಿತು "ಹೌದು ಕಣೋ, ಅಣ್ಣಯ್ಯ, ನಿನಗಿಷ್ಟು ವಯಸ್ಸಾಗಿದೆ, ಇನ್ನೂ ಗೊತ್ತಾಗುವುದಿಲ್ಲವೇನೊ ? ಸಾಲ

ಮಾಡುತ್ತಲೇ ಇದ್ದುಬಿಟ್ಟರೆ ಬೆಳೆಯುತ್ತಲೇ ಹೋಗುತ್ತದೆ. ಅದನ್ನು, ಯಾವಾಗ ತೀರಿಸುವುದು? ಋಣ ಎಂಬುದು ಕುತ್ತಿಗೆಗೆ ಕಲ್ಲುಗುಂಡು ಕಟ್ಟಿ ಕೊಂಡ ಹಾಗೆ. 'ಸಾಲವನು ಕೊಂಬಾಗ ಹಾಲೋಗರುಂಡಂತೆ, ಸಾಲಿಗನು ಬಂದು ಎಳೆವಾಗ ಕಿಬ್ಬದಿಯ ಕೀಲು ಮುರಿದಂತೆ ಸರ್ವಜ್ಞ'" ಎಂದು ಮೊದ ಲಾಗಿ ಸಣ್ಣ ಉಪನ್ಯಾಸ ಮಾಡಿದರು. ಜೋಯಿಸರಿಗೂ ಸಾಹುಕಾರರಲ್ಲಿ ಐನೂರರ ಮೇಲೆಯೇ ಸಾಲವಾಗಿತ್ತು.

"ಹೌದು ಸ್ವಾಮಿ, ನೀವೇನೋ ಹೇಳ್ತೀರಿ. ಈಗ ಕಲ್ಲುಗುಂಡು ಕಟ್ಟಿ ಕೊಂಡಾಗಿದೆಯಲ್ಲ, ಏನು ಮಾಡೋದು? ಹುಡುಗನಿಗೂ ನನಗೂ ದಿನಾನೂ ಜಟಾಪಟಿ. ವಯಸ್ಸು ಇಪ್ಪತ್ತೈದಾಗಿ ಹೋಯ್ತು. ಮದುವೆ ಮಾಡದಿದ್ರೆ ಮನೆ ಬಿಟ್ಟು ಹೋಗ್ತೀನಿ ಅಂತಾನೆ. ಮನ್ನೆ ಸೀತೆಮನೆ ಸಿಂಗಪ್ಪಗೌಡ್ರ ಹತ್ರ ಹೋಗಿ, ನಂಗೊತ್ತೇ ಇಲ್ಲ, ಸಾಲಕೇಳಿದನಂತೆ. ಅವರು ನಿಮ್ಮ ಗೌಡರಿಗೂ ನನಗೂ ಮೊದಲೇ ಸರಿಯಿಲ್ಲ. ನನ್ನ ಹತ್ರಕ್ಕೆ ಬರ್ಬೇಡ ಅಂದ್ರಂತೆ . . ." ಎಂದು ಅಣ್ಣಯ್ಯಗೌಡರು ಜೋಯಿಸರಿಗೆ ಹೇಳಿ ಮುಗಿಸುವಷ್ಟರಲ್ಲಿಯೇ ಚಂದ್ರಯ್ಯ ಗೌಡರು ರೇಗಿ:

"ಹೋಗೂ, ಅವನಿಗೆ ಹೇಳು. ಸಿಂಗಪ್ಪಗೌಡ್ರ ಹತ್ರಾನೆ ಸಾಲ ಕೇಳೂ ಅಂತ. ನನ್ನಿಂದ ಒಂದು ಕಾಸೂ ಹುಟ್ಟೋದಿಲ್ಲ" ಎಂದು ಜೋಯಿಸರ ಕಡೆ ತಿರುಗಿ, ಸಮಾಧಾನದ ಧ್ವನಿಯಿಂದ "ನೀವೇನು ಬಂದಿದ್ದು, ಜೋಯಿಸರೆ?" ಎಂದರು.

"ಚಂದ್ರಮೌಳೀಶ್ವರನ ಪ್ರಸಾದ ಕೊಟ್ಟು ಹೋಗೋಣ ಎಂದು ಬಂದೆ" ಎಂದು ಹೇಳುತ್ತ ಜೋಯಿಸರು ಪಕ್ಕದಲ್ಲಿಟ್ಟುಕೊಂಡಿದ್ದ ಒಂದು ಗಂಟಿನಿಂದ ಹೂವು ಕುಂಕುಮ ತುಂಬಿದ್ದ ತೆಂಗಿನಕಾಯಿಯ ಹೋಳನ್ನು ತೆಗೆದು ಸಾಹು ಕಾರರ ಮುಂದಿಟ್ಟರು. ಚಂದ್ರಯ್ಯಗೌಡರು ಅದನ್ನು ಭಕ್ತಿಯಿಂದ ಸ್ವೀಕರಿಸಿ ಕುಂಕುಮವನ್ನು ಹಣೆಗಿಟ್ಟು, ಹೂವನ್ನು ಹಣೆಗೆ ಮುಟ್ಟಿಸಿಕೊಂಡು ಕಿವಿಯ ಮೇಲೆ ಸಂದಿಯಲ್ಲಿ ಸಿಕ್ಕಿಸಿದರು.

ಅಣ್ಣಯ್ಯಗೌಡರು ಚಿಂತಾಕ್ರಾಂತರಾಗಿ ಅಂಗಳದ ಮಧ್ಯೆಯಿದ್ದ ತುಳಸಿಯ ಕಲ್ಲನ್ನೇ ನೋಡುತ್ತಿದ್ದರು. ಮನೆಯಲ್ಲಿ ರೋಗಗ್ರಸ್ತಳಾಗಿ ಬಿದ್ದುಕೊಂಡಿದ್ದ ಹೆಂಡತಿಯ ಚಿತ್ರವೂ ಮನೆಬಿಟ್ಟು ಹೋಗುತ್ತೇನೆಂದು ಕ್ರೂರನಾಗಿದ್ದ ಮಗನ ಚಿತ್ರವೂ ಏನೂ ಅರಿಯದ ಮಗಳ ಚಿತ್ರವೂ ಮನಸ್ಸಿಗೆ ಬಂದು, ಮುದುಕನಿಗೆ ತನ್ನ ಮೇಲೆ ತನಗೇ ಕನಿಕರ ಹುಟ್ಟಿ, ಕಣ್ಣುಗಳಿಂದ ನೀರು ಹರಿದು ಸುಕ್ಕುಗೆನ್ನೆಗಳ ಮೇಲೆ ಉರುಳಿದುವು. ಆದರೆ ಅಂಗಳದಲ್ಲಿದ್ದ ಕಲ್ಲು ದೇವರು ಮಾತ್ರ ಚಂದ್ರಯ್ಯ ಗೌಡರಿಗಿಂತಲೂ ಕಲ್ಲಾಗಿ ಕುಳಿತಿತ್ತು!

ಇಷ್ಟರಲ್ಲಿ ಅಡುಗೆಮನೆಯೊಳಗೆ ಆಗುತ್ತಿದ್ದ ವಾಗ್ಯುದ್ಧದ ಸದ್ದು ಜಗಲಿಗೆ ಕೇಳಿಸಿತು. ಮನಸ್ಸಿನಲ್ಲಿ ರೇಗಿದರೂ ಗೌಡರು ಜೋಯಿಸರ ಮುಂದೆಯೂ ಇತರರ ಎದುರೂ ತಮ್ಮ ಗೃಹಕೃತ್ಯದ ಕೋಟಲೆಗಳನ್ನು ಪ್ರದರ್ಶಿಸಲು ಇಷ್ಟ ಪಡದೆ ಸುಮ್ಮನೆ ಕುಳಿತರು.

"ಚಂದ್ರಯ್ಯ, ಆ ಸತ್ಯನಾರಾಯಣ ವ್ರತಕ್ಕೆ ಇಪ್ಪತ್ತು ರೂಪಾಯಿ ಖರ್ಚಾಗಿದೆ. ಅದನ್ನು ಕೊಟ್ಟಿದ್ದರೆ ಆಗುತ್ತಿತ್ತು." ಜೋಯಿಸರ ವಾಣಿ ಯಾವುದೋ ಒಂದು ಮಹಾಬುದ್ಧಿವಾದವನ್ನು ಬೋಧಿಸುವಂತಿತ್ತು. ರೂಪಾಯಿ ಕೊಡುವುದರಿಂದ ಸಾಹುಕಾರರಿಗೆ ಅಪಾರ ಶ್ರೇಯಸ್ಸು ಲಭಿಸುತ್ತದೆ ಎನ್ನುವಂತಿತ್ತು.

ಗೌಡರು ಒಂದು ಸಾರಿ ಕೆಮ್ಮಿ, ಗಂಟಲು ಸರಿಮಾಡಿಕೊಂಡು "ಅವತ್ತು ಮೂವತ್ತು ಕೊಟ್ಟಿದ್ದೆನಲ್ಲಾ, ಅದರಲ್ಲೇ ಮುರುಕೊಂಡುಬಿಡಿ. ನಿಮ್ಮ ಲೆಖ್ಖಕ್ಕೆ ಹತ್ತು ರೂಪಾಯಿ ಮಾತ್ರ ಖರ್ಚು ಬರೆದುಕೊಳ್ತೀನಿ" ಎಂದು ಜೋಯಿಸರ ಕಡೆ ಪ್ರಶ್ನಪೂರ್ವಕವಾಗಿ ನೋಡಿದರು.

ಜೋಯಿಸರು ಬಹಳ ಗಾಂಭೀರ್ಯದಿಂದಲೂ ಧಾರ್ಮಿಕತೆಯಿಂದಲೂ "ದೇವರ ಲೆಖ್ಖವನ್ನು ನನ್ನ ಲೆಖ್ಖಕ್ಕೆ ಯಾಕೆ ಸೇರಿಸುವುದು? ಹಾಗೆ ಮಾಡು ವುದರಲ್ಲಿ ನಿನಗೂ ಅನಿಷ್ಟವಿದೆ. ಖಾತೆ ಬೇರೆ ಬೇರೆಯಾಗಿದ್ದರೆ ವಾಸಿ . . ." ಎಂದು ಕಣ್ಣುಮುಚ್ಚಿ ತೆರೆದರು.

ಗೌಡರು ಜೋಯಿಸರಿಗಿಂತಲೂ ಹದಿನೈದು ಇಪ್ಪತ್ತು ವರ್ಷಗಳು ಹೆಚ್ಚು ವಯಸ್ಸಿನವರಾಗಿದ್ದರೂ, ಬ್ರಾಹ್ಮಣನು ಶೂದ್ರನನ್ನು ಬಹುವಚನದಲ್ಲಿ ಮಾತನಾಡಿಸುವುದು ಶಾಪಕ್ಕೆ ಸಮಾನವೆಂದೂ, ಏಕವಚನದಲ್ಲಿ ಮಾತಾಡಿಸುವುದು ಅನುಗ್ರಹಕ್ಕೆ ಸಮಾನವೆಂದೂ ಭಾವಿಸಿ ವೇದಮೂರ್ತಿಗಳೆಲ್ಲ ಮ|| ರಾ|| ಶ್ರೀಗಳನ್ನು 'ಅವನು' 'ನೀನು' ಎಂದೇ ಸಂಬೋಧಿಸುತ್ತಿದ್ದುದು ಆ ನಾಡಿನ ವಾಡಿಕೆಯಾಗಿತ್ತು.

ಅಷ್ಟರಲ್ಲಿ, ತಿಮ್ಮನ ಕಾಲಬಳಿ ಮಲಗಿಸುತ್ತಿದ್ದ ಕೊತ್ವಾಲನು ಹಿತ್ತಲು ಕಡೆಯ ಬಾಗಿಲಲ್ಲಾದ ಸ್ವಜಾತಿ ಸ್ವರವನ್ನು ಆಲಿಸಿ ಅಲ್ಲಿಗೆ ನುಗ್ಗಿತು. ಗೌಡರು ಸ್ವಲ್ಪ ಆಲೋಚಿಸಿ, ಬೀರುವಿನಿಂದ ಇಪ್ಪತ್ತು ರೂಪಾಯಿಗಳನ್ನು ಎಣಿಸಿ ತೆಗೆದು, ಜೋಯಿಸರ ಮುಂದಿಟ್ಟರು. ಜೋಯಿಸರು ಅದನ್ನು ಎತ್ತಿ ಸೆರಗಿನ ತುದಿ ಯಲ್ಲಿ ಕಟ್ಟುತ್ತಿದ್ದಾಗ ಹಿತ್ತಲುಕಡೆ ಶುನಕಸಮರದ ಕೋಲಾಹಲವು ಭಯಂಕರ ವಾಗಿ ಕೇಳಿಸಿತು.

ಗೌಡರು ತಿಮ್ಮನ ಕಡೆಗೆ ತಿರುಗಿ "ತಿಮ್ಮ, ತಿಮ್ಮಾ! ಅಲ್ನೋಡೋ"

ಎಂದರು. ತಿಮ್ಮನು ಮನೆಯ ಹೊರಗಡೆಯಿಂದ ಹಿತ್ತಲು ಕಡೆಗೆ, ಒಡ್ಯಾಣದಲ್ಲಿದ್ದ ಬಗನಿ ಕತ್ತಿ ಗಣೆ ಗಣೆ ಸದ್ದು ಮಾಡುವಂತೆ ಓಡಿದನು.

ಜೋಯಿಸರು ಹೋಗಲೋಸುಗ ಮೇಲೆದ್ದರು. ಗೌಡರೂ ಅವರನ್ನು ಬೀಳ್ಕೊಳ್ಳಲು ಎದ್ದುನಿಂತು ಕಿರುಜಗಲಿಗೆ ಇಳಿದರು. ಎದ್ದು ನಿಂತೊಡನೆಯೆ ಅವರು ಹೊದ್ದುಕೊಂಡಿದ್ದ ಕೆಂಪು ಬಣ್ಣದ ಶಾಲು ಕಳಚಿ ಕೆಳಗೆ ಬಿದ್ದು, ದೃಢಕಾಯವಾಗಿ ಕೂದಲು ತುಂಬಿದ್ದ ಅವರ ಎದೆ ಗೋಚರಿಸಿತು. ಒಡನೆಯೆ ಮತ್ತೆ ಶಾಲನ್ನೆತ್ತಿ ಹೊದ್ದುಕೊಂಡರು.

ಬಾಗಿಲು ದಾಟುವುದರೊಳಗೆ ಜೋಯಿಸರು "ನಿಮ್ಮ ಹುಡುಗನಿಗೆ ಒಂದು ತಾಯಿತಿ ಬೇಕೆಂದು ಹೇಳಿದ್ದಿರಿ" ಎಂದರು.

"ಹೌದು ಬೇಕಿತ್ತು" ಎಂದು ಗೌಡರು ಜೋಯಿಸರೊಡನೆ ಹೆಬ್ಬಾಗಿಲ ಕಡೆಗೆ ಹೊರಟರು.

"ಹೋದ ವರ್ಷ ಒಂದು ಕಟ್ಟಿದ್ದೆ..."

"ಏನು ಮಾಡೋದು ಹೇಳಿ. ನಮ್ಮ ಹೂವಯ್ಯ ಹೋದ ರಜಾದಲ್ಲಿ ಬಂದವನು ಏನೇನೋ ಬೋಧಿಸಿ ಹೋಗಿದ್ದ. ಅವನ ಮಾತು ಕೇಳಿ ತಾಯಿತಿ ಕಿತ್ತು, ಬಿಸಾಡಿಬಿಟ್ಟಿದಾನೆ."

"ನಾನು ಹೇಳಿದ್ದೆ ನಿನಗೆ ಮೊದಲೇ, ಈಗಿನ ವಿದ್ಯಾಭ್ಯಾಸ ಹುಡುಗರನ್ನು ಹಾಳುಮಾಡಿಬಿಡುತ್ತದೆ ಎಂದು! ದೇವರು ದಿಂಡರು ಭಕ್ತಿ ಗಿಕ್ತಿ ಎಲ್ಲ ನಿರ್ನಾಮ! ಜೊತೆಗೆ ನೂರಾರು ಹವ್ಯಾಸಗಳನ್ನು ಬೇರೆ ಕಲಿತುಬಿಡುತ್ತಾರೆ. ನಿನ್ನ ಮನೆ ಜಮೀನು ಉಳಿಯಬೇಕಾದರೆ ಅವರ ಓದು ನಿಲ್ಲಿಸಿ, ಮದುವೆ ಗಿದುವೆ ಮಾಡಿ ಕೆಲಸಕ್ಕೆ ಹಚ್ಚು. ಸಂಸಾರ ತಲೆಗೆ ತಾಗಿದರೆ ಆಗ ಬುದ್ಧಿ ಬರುತ್ತದೆ."

"ಹಾಂಗೆ ಮಾಡೋದೆ ಸೈ ಅಂತ ಕಾಣ್ತದೆ — ಈಗ ನೋಡಿ; ಆ ಹೂವಯ್ಯ, ಅವನ ದೆಸೆಯಿಂದ ರಾಮಯ್ಯ, ಇಬ್ಬರೂ ಸೇರಿ ದೆಯ್ಯ ದ್ಯಾವರು ಭೂತ ಗೀತ ಜಕಣಿ ಗಿಕಣಿ ಒಂದೂ ಬ್ಯಾಡ ಅಂತ ಬೋದ್ನೋಕೆ ಸುರುಮಾಡಿದ್ದಾರೆ. ಆ ಹೂವಯ್ಯನಂತೂ ಅದೇಂತಂತದೊ–ಬಗವದ್ಗೀತೆಯಂತೆ ಉಪ್ನಿಷತ್ತಂತೆ — ಓದಿ ತಲೆ ಕೆಡಿಸಿಕೊಳ್ಳುತ್ತಿದ್ದಾನೆ.... ಮನೆಗೆ ಬಂದವನು ಒಂದು ಆಳು ಕಾಳಿನ ಕೆಲಸ ಕೂಡ ನೋಡೋದಿಲ್ಲ. ಉಪ್ಪರಿಗೆ ಮೇಲೆ ಓದುತ್ತ ಕುಳಿತುಬಿಡ್ತಾನೆ."

"ಹೌದೂ, ದುಡಿದು ಹಾಕುವವರು ಒಬ್ಬರಿದ್ದರೆ ಮತ್ತೇನು ಮಾಡುತ್ತಾನೆ? ಅವನ ಪಾಲು ಅವನಿಗೆ ಕೊಟ್ಟು ಬೇರೆ ಹಾಕು! ಆಗೆಲ್ಲ ಸರಿಹೋಗುತ್ತದೆ. ಈ ಶೂದ್ರ ಮಕ್ಕಳಿಗೆಲ್ಲ ಉಪನಿಷತ್ತು ಭಗವದ್ಗೀತೆ ಗಂಥವಾದರೂ ಗೊತ್ತಾಗುತ್ತದೆಯೆ? ನಮಗೇ ಗೊತ್ತಾಗುವುದಿಲ್ಲ..."

ಗೌಡರು ನಗುತ್ತ "ನಿಮಗೆ ಗೊತ್ತಾಗದೆ ಏನು?" ಎಂದರು.

"ಹಾಗಲ್ಲ, ಚಂದ್ರಯ್ಯ, ನಿನಗೆ ಗೊತ್ತಿಲ್ಲ. ಎಂತೆಂಥ ಆಚಾರ್ಯರೇ ಅವುಗಳಿಗೆ ವ್ಯಾಖ್ಯಾನ ಬರೆಯಲು ತಿಣಿಕಿಬಿಟ್ಟಿದ್ದಾರೆ. ಅವರಲ್ಲಿಯೇ ಏಕಮತವಿಲ್ಲ ... ಈ ಶೂದ್ರಮಕ್ಕಳಿಗೆಲ್ಲ ಗೊತ್ತಾಗುತ್ತದೆಯೇ ... ಅದನ್ನೆಲ್ಲ ಓದಿ ಮನೆ ಹಾಳುಮಾಡಿಕೊಳ್ಳುತ್ತಾರೆ; ಅಷ್ಟೆ! ..."

"ನಾನೂ ಅವರನ್ನು ಈ ಸಾರಿ ಓದು ಬಿಡಿಸಿ ಮನೇ ಕೆಲಸಕ್ಕೆ ಹಾಕಬೇಕಂಥ ಮಾಡಿದ್ದೇನೆ" ಎಂದು ಗೌಡರು ನಿಶ್ಚಿತವಾಣಿಯಿಂದ ಸ್ವಲ್ಪ ರಾಗವಾಗಿ ಹೇಳಿದರು.

"ಹಾಗೆ ಮಾಡಿದರೆ ನಿನ್ನ ಮನೆ ಉಳಿಯುತ್ತದೆ ನೋಡು. ದೇವರ ಕೋಪಕ್ಕಾದರೂ ಪಾತ್ರರಾಗಬಹುದು — ಏಕೆಂದರೆ, ಅವನು ದಯಾಸಾಗರ, ಕರುಣಾಶಾಲಿ. ಆದರೆ ಈ ಭೂತ ದೆವ್ವಗಳ ಸಿಟ್ಟಿಗೆ ಬಿದ್ದರೆ ಉಳಿಗತಿಯಿಲ್ಲ ... ತಿಳಿದವನಿಗೆ ನಿನಗೆ ನಾನೇನು ಹೇಳುವುದು?"

"ಅಯ್ಯೋ, ಉಂಟೆ ಸ್ವಾಮಿ? ನೀವಲ್ಲದೆ ಮತ್ಯಾರು ಹೇಳೋರು ನಮಗೆ."

ಜೋಯಿಸರು ಸೆರಗಿನಲ್ಲಿ ಕಟ್ಟಿಕೊಂಡಿದ್ದ ರೂಪಾಯಿಗಂಟನ್ನು ಕೈಯಲ್ಲಿ ಭದ್ರವಾಗಿ ಹಿಡಿದು, ಮೆಟ್ಟಿನ ಸದ್ದು ಮಾಡುತ್ತ, ಕೊಡೆ ಸೂಡಿಕೊಂಡು ಹೊರಟುಹೋದರು. ಗೌಡರು ಹಿಂತಿರುಗಿ ಜಗಲಿಗೆ ಬಂದರು. ತಿಮ್ಮನು ಕೊಚ್ಚೆ ಹಿಡಿದು ಅಸಹ್ಯವಾಗಿದ್ದ ನಾಯಿಮರಿಯೊಂದನ್ನು ಅದರ ಕುತ್ತಿಗೆಯ ಚರ್ಮವನ್ನು ಬೆರಳು ತುದಿಯಿಂದೊತ್ತಿ ಎತ್ತಿ, ಹಿಡಿದು ನಿಂತಿದ್ದನು. ಆ ಮರಿಯ ತಾಯಿ ರೂಬಿ ಅವನ ಬಳಿ ನಿಂತು ತನ್ನ ಕಂದನನ್ನೇ ಎವೆಯಿಕ್ಕದೆ ನೋಡುತ್ತಿತ್ತು.

ಗೌಡರು "ಥೂ, ಅದನ್ನೇಕೆ ಇಲ್ಲಿಗೆ ತಂದ್ಯೋ ... ಅತ್ತಲಾಗಿ ತಗೊಂಡು ಹೋಗಿ ಬಿಸಾಡು" ಎಂದರು.

"ಹಾಳು ಕೋಳಿ, ಕಣ್ಣು ಕುಕ್ಕಿ ತೆಗೆದೇಬಿಟ್ಟದೆ" ಎಂದು ತಿಮ್ಮನು ನೆತ್ತರು ಸೋರುತ್ತಿದ್ದ ಮರಿಯ ಕಣ್ಣನ್ನು ಪರೀಕ್ಷಿಸಿದನು.

ಗೌಡರು ಮತ್ತೆ "ಹಾಳಾಗಿ ಹೋಗಲಿ. ಅತ್ತಲಾಗಿ ಬಿಸಾಡೋ ಅಂದರೆ!" ಎಂದು ಗದರಿಸಿದರು.

"ನಾನಾರೂ ತಗೊಂಡ್ಹೋಗಿ ಸಾಕ್ಕೋಳ್ತೀನ್ರಯ್ಯಾ."

"ಏನಾದ್ರೂ ಸಾಯು!"

ತಿಮ್ಮನು ನಾಯಿಮರಿಯೊಡನೆ ಹೆಬ್ಬಾಗಿಲು ದಾಟಿ ಹೋದನು. ರೂಬಿಯೂ ಅವನ ಹಿಂದೆಯೆ ಹೋಯಿತು.

ಕಾಲುನೋವಿನಿಂದ ಏಳಲಾರದೆ ಕಂಬಳಿ ಸುತ್ತಿಕೊಂಡು ಮಲಗಿದ್ದ ಪುಟ್ಟನು ಎಲ್ಲವನ್ನೂ ಆಲಿಸುತ್ತಿದ್ದನು. ನಾಯಿಮರಿಗಾಗಿದ್ದ ದುಃಸ್ಥಿತಿಯನ್ನೂ ಅದನ್ನು ತಿಮ್ಮನು ಕೊಂಡೊಯ್ಯುತ್ತಿದ್ದುದನ್ನೂ ಅವನು ಸಹಿಸಲಾರದೆ ಮೆಲ್ಲನೆ ಎದ್ದು ಕುಂಟುತ್ತ ಹೆಬ್ಬಾಗಿಲನ್ನು ದಾಟಿ ತಿಮ್ಮನನ್ನು ಕೂಗಿದನು:

"ವಾಸಯ್ಯ ಬಯ್ತಾರೋ! ಅವರದ್ದು ಆ ಮರಿ."

"ಗೌಡ್ರು ಹೇಳಿದ್ರು, ಅದಕ್ಕೇ ತೊಗೊಂಡ್ಹೋಗ್ತಿದ್ದೀನಿ" ಎಂದು ಹೇಳಿದ ತಿಮ್ಮನು ಮರಿಯನ್ನು ಕೆಳಕ್ಕೆ ಬಿಟ್ಟನು. ಏಕೆಂದರೆ ವಾಸು ಸುಮ್ಮನೆ ಬಿಡುವವ ನಲ್ಲವೆಂದು ಅವನಿಗೆ ಗೊತ್ತಿತ್ತು. ರೂಬಿ ಮರಿಯನ್ನು ನೆಕ್ಕತೊಡಗಿತು.

ಪುಟ್ಟ ಕುಂಟುತ್ತಿದ್ದುದನ್ನು ಕಂಡು ತಿಮ್ಮ "ಅದೇನ್ರೋ ನಿಮ್ಮ ಕಾಲು?" ಎಂದನು.

"ಮುಳ್ಳು ಚುಚ್ತು" ಎಂದು ಪುಟ್ಟನು ಅಂಗಾಲು ತೋರಿಸಿದನು. ಕಾಲು ಕೀತುಕೊಂಡು ನಡುವೆ ಮುಳ್ಳು ಕರ್ರಗೆ ಕಾಣುತ್ತಿತ್ತು. ತಿಮ್ಮನು ಒಂದು ದೊಡಲಿಗಿಡದ ಮುಳ್ಳು ತಂದು, ಕಾಲಿನಲ್ಲಿದ್ದ ಮುಳ್ಳನ್ನು ಬಿಡಿಸಿ ತೆಗೆದನು. ಮುಳ್ಳಿನೊಡನೆ ಸ್ವಲ್ಪ ಕೀವು ಬಂದು ಪುಟ್ಟನಿಗೆ ಆಹ್ಲಾದವಾಯಿತು. ತಿಮ್ಮ ಹೊರಟುಹೋದ ಮೇಲೆ ಪುಟ್ಟನು ನಾಯಿಮರಿಯನ್ನು ತೊಳೆದು ಮದ್ದು ಮಾಡಲು ಬಾವಿಯಕಟ್ಟೆಗೆ ಎತ್ತಿಕೊಂಡು ಹೋದನು.

ಗೌಡರು ಜೋಯಿಸರನ್ನು ಬೀಳುಕೊಟ್ಟು ಬಂದಾಗ ಅಣ್ಣಯ್ಯಗೌಡರು ತಲೆಯಮೇಲೆ ಕೈ ಹೊತ್ತುಕೊಂಡು ಚಿಂತಿಸುತ್ತ ಕುಳಿತಿದ್ದರು. ಅವರ ಎದೆ ಯಲ್ಲಿ ದುಃಖ ಕಡಲಾಡುತ್ತಿತ್ತು. ಬಾಳಿನ ಬೆಂಕಿಯಲ್ಲಿ ಬೆಂದು ಬೆಂದು ಅವರ ಜೀವ ಕಂದಿಹೋಗಿತ್ತು. ಅವರಿಗೆ ಮುಂದೇನು ಮಾಡಬೇಕೆಂಬುದೇ ಹೊಳೆಯ ಲಿಲ್ಲ. ಸಮಸ್ಯೆ ಅತಿ ಜಟಿಲವಾಗಿ ಕಂಡುಬಂದಾಗ 'ದೇವರೇ, ನಾಟಕ ಪೂರೈಸಲಿ; ಜೀವನದ ಮೇಲೆ ಮರಣದ ಕೊನೆ ಪರದೆ ಬೀಳಲಿ' ಎಂದು ಪ್ರಾರ್ಥಿಸುವುದು ಸ್ವಾಭಾವಿಕ. ಆ ಮುದುಕನ ಸ್ಥಿತಿಯೂ ಹಾಗಿತ್ತು.

ಗೌಡರ ಮನಸ್ಸನ್ನೂ ಹೊಕ್ಕು ನೋಡಿದ್ದರೆ ಅವರ ನಡತೆಯೂ ಅಷ್ಟೇನು ಕ್ರೂರವಾಗಿ ಕಾಣುತ್ತಿರಲಿಲ್ಲ. ಅವರು ಸ್ವಲ್ಪ ಇಕ್ಕಟ್ಟಿನಲ್ಲಿ ಸಿಕ್ಕಿಕೊಂಡಿದ್ದರು. ತಮ್ಮ ತಂದೆ ತಾತಂದಿರ ಕಾಲದಿಂದಲೂ ನಂಬಿಕೆಯಾಗಿ ಒಕ್ಕಲುತನ ಮಾಡಿ ಕೊಂಡು ಬಂದಿದ್ದವನಿಗೆ, ಚಿಕ್ಕಂದಿನಿಂದಲೂ ತಮಗೆ ಚಿರಪರಿಚಿತನಾಗಿದ್ದವನಿಗೆ, ಕಷ್ಟದಲ್ಲಿ ಬಿದ್ದಿದ್ದ ಮುದುಕನಿಗೆ ದುಡ್ಡಿದ್ದವರು ದುಡ್ಡು ಕೊಡಲಾಗುವುದಿಲ್ಲ ಎಂದು ಹೇಳಿದುದು ಕ್ರೂರವಾಗಿಯೆ ಕಾಣುತ್ತದೆ. ಆದರೆ ಗೌಡರು ಹೀಗೆ ಸಾಲ ಕೊಟ್ಟು ಅನೇಕ ಸಾವಿರ ರೂಪಾಯಿಗಳನ್ನು ಕಳೆದುಕೊಂಡಿದ್ದರು. ಅಣ್ಣಯ್ಯ

ಗೌಡರಿಂದ ಬಡ್ಡಿಯ ಹಣ ಬರುವ ಮಾರ್ಗವೂ ಅವರಿಗೆ ತೋರದಿದ್ದುದರಿಂದ ಇನ್ನೂ ಹೆಚ್ಚು ಸಾಲ ಕೊಡಲು ಹಿಂಜರಿದರು. ಗೌಡರ ಮನಸ್ಸಿನಲ್ಲಿ ಅಣ್ಣಯ್ಯ ಗೌಡರ ದುಃಸ್ಥಿತಿಗೆ ಅವರೇ ಕಾರಣರಲ್ಲದೆ ತಾವು ಕಾರಣರಲ್ಲವೆಂದು ಸ್ಪಷ್ಟ ವಾಗಿತ್ತು. ಅಣ್ಣಯ್ಯಗೌಡರು ನಾಲ್ಕು ಮದುವೆಗಳನ್ನೇಕೆ ಮಾಡಿಕೊಳ್ಳ ಬೇಕಾಗಿತ್ತು? ಒಂದೊಂದು ಹೆಣ್ಣಿಗೂ ಅಷ್ಟೊಂದು ಹಣವನ್ನೇಕೆ ತೆರ ಕೊಡಬೇಕಾಗಿತ್ತು? ಯೌವನದಲ್ಲಿ ಪಟ್ಟ ಅತಿಸುಖಕ್ಕೆ ವೃದ್ಧಾಪ್ಯದಲ್ಲಿ ಪ್ರಾಯಶ್ಚಿತ್ತವಾಗಿ ಕಷ್ಟಪಡಬೇಕಾದುದು ಅವರ ಕರ್ಮ! ಜೊತೆಗೆ ಸೀತೆಮನೆ ಸಿಂಗಪ್ಪಗೌಡರಲ್ಲಿಗೆ ಓಬಯ್ಯನು ಹೋಗಿದ್ದನೆಂಬುದನ್ನು ಅಣ್ಣಯ್ಯಗೌಡರ ಬಾಯಿಂದ ಕೇಳಿದ ಮೇಲಂತೂ ಅವರಿಗೆ ಮನಸ್ಸು ಮುರಿದು ಹೋಗಿತ್ತು.

"ಹಾಂಗಾದ್ರೆ ನಾನೇನು ಮಾಡ್ಲಿ? ಕುತ್ತಿಗೆಗೆ ನೇಣುಹಾಕಿಕೊಳ್ಲೀ?" ಎಂದರು ಅಣ್ಣಯ್ಯಗೌಡರು.

"ಏನಾದರೂ ಮಾಡು! ಸಾಲ ಕೊಡೋಕೆ ನನ್ನಿಂದ ಸಾಧ್ಯವಿಲ್ಲ."

"ಹಾಂಗಾದ್ರೆ, ಬರ್ತೀನಿ" ಎಂದು ಮುದುಕನು ಕೈಮುಗಿದು, ಮೇಲೆದ್ದು, ಗೋಡೆಗೆ ಒರಗಿಸಿಟ್ಟಿದ್ದ ಬೆತ್ತದ ದೊಣ್ಣೆಯನ್ನು ಊರಿಕೊಂಡು, ನಸುಬಾಗಿ ನಡೆಯುತ್ತ ಹೆಬ್ಬಾಗಿಲು ದಾಟಿದನು. ಗೌಡರು ಚೆನ್ನಾಗಿ ಒಂದು ಸಾರಿ ನಶ್ಯ ಹಾಕಿಕೊಂಡು ತಮ್ಮ ಲೆಕ್ಕಪತ್ರಗಳಲ್ಲಿ ಮಗ್ನರಾದರು.

ಬಿಸಿಲು ತುಸುಮಟ್ಟಿಗೆ ಬಿರುಸಾಗಿಯೆ ಇತ್ತು. ದೊಣ್ಣೆಯೂರಿ ಹೋಗು ತ್ತಿದ್ದ ಮುದುಕನ ಮೇಲೆ ನಿಷ್ಕರುಣೆಯಿಂದ ವರ್ತಿಸುವಂತಿತ್ತು. ಸುಮಾರು ಐದೂವರೆ ಐದೂಮುಕ್ಕಾಲು ಅಡಿ ಎತ್ತರವಾಗಿದ್ದ ಮುದುಕನ ನೆರಳು ಒಂದು ಒಂದೂಕಾಲು ಅಡಿಯಾಗಿ, ಅದು ಅವನಾತ್ಮದ ಶೋಚನೀಯಾವಸ್ಥೆಯ ಪ್ರತಿಬಿಂಬವೆಂಬಂತೆ, ಪದತಲದಲ್ಲಿ ನೆಲದ ಮೇಲೆ ಹೊರಳಿ ಹುಡಿಯಲ್ಲಿ ಮೆಲ್ಲಗೆ ಮುಂಬರಿಯುತ್ತಿತ್ತು.

ಮುದುಕನು ಒಂದು ಸಾರಿ ತಲೆಯೆತ್ತಿ ನೋಡಿದನು. ಮರದ ಮೇಲೆ ಕಾಗೆಯೊಂದು ಕಾ! ಕಾ! ಎಂದು ಕರೆಯುತ್ತಿತ್ತು. ಮುದುಕನು ನಿಡು ಸುಯ್ದು ಮತ್ತೆ ತಲೆಬಾಗಿ ಮುಂದೆ ಸಾಗಿದನು. ಒಂದು ಓತಿಕ್ಯಾತ ಬೇಲಿಯ ಮೇಲೆ ಕುಳಿತು "ಹಾಗಾಗಬೇಕು! ಹಾಗಾಗಬೇಕು!" ಎಂದು ತಲೆಯಲ್ಲಾ ಡಿಸಿ ಹಂಗಿಸುವಂತಿತ್ತು.

## ೧೦

## ಬಿಂಕದ ಸಿಂಗಾರಿ

ಮುತ್ತಳ್ಳಿ ಶ್ಯಾಮಯ್ಯಗೌಡರು ಸ್ನಾನ ಮುಗಿಸಿ ಬಚ್ಚಲು ಮನೆಯಿಂದ ಜಗಲಿಗೆ ಬಂದು, ಗೋಡೆಯ ಮೇಲಿದ್ದ ದೊಡ್ಡ ಗಡಿಯಾರದ ಕಡೆಗೆ ನೋಡಿದರು. ಗಂಟೆ ಹತ್ತೂವರೆಯಾಗಿ ಹತ್ತು ನಿಮಿಷವಾಗಿತ್ತು. ನಾಗಂದಿಗೆಯಿಂದ ನಾಮದ ಪೆಟ್ಟಿಗೆಯನ್ನು ತೆಗೆದು ಮುಂದಿಟ್ಟುಕೊಂಡು, ಒಂದು ಅಗಲವಾದ ತೆಳ್ಳನೆಯ ಮಣೆಯ ಮೇಲೆ ಪದ್ಮಾಸನ ಹಾಕಿ ಕೂತರು. ಅವರ ಎದುರಿಗೆ ನೇರವಾಗಿ ಅಂಗಳದಲ್ಲಿ ತುಲಸಿಯ ಪೀಠವು ಕೆಂಪು ಬಿಳಿ ನಾಮಗಳಿಂದಲೂ ವಿವಿಧ ವರ್ಣದ ಪುಷ್ಪಗಳಿಂದಲೂ ಅಲಂಕೃತವಾಗಿತ್ತು. ಆ ಕಲೆಯಲ್ಲಿ ತಮ್ಮ ಮಗಳು ಸೀತೆಯ ಕುಶಲತೆಯನ್ನು ಕಂಡು, ಗೌಡರ ಹೃದಯದಲ್ಲಿ ದೇವರ ಭಕ್ತಿಯೊಂದಿಗೆ, ಅದಕ್ಕಿಂತಲೂ ಹೆಚ್ಚಾಗಿ ಮಗಳ ಮೇಲಣ ವಾತ್ಸಲ್ಯವೂ ಸೇರಿ ನಲಿದಾಡಿತು.

ಗೌಡರ ದೇಹಕ್ಕೆ ಬೊಜ್ಜು ಬಂದಿದ್ದರೂ ಹೊಟ್ಟೆ ಡೊಳ್ಳಾಗಿದ್ದರೂ ನೋಡುವುದಕ್ಕೆ ಲಕ್ಷಣವಾಗಿಯೆ ಇದ್ದು, ಯೌವನ ಕಾಲದಲ್ಲಿ ಸ್ಫುರದ್ರೂಪಿಯಾಗಿದ್ದರೆಂಬುದನ್ನು ಸ್ಪಷ್ಟಗೊಳಿಸುತ್ತಿತ್ತು. ಭಕ್ತಿ, ಈಶ್ವರಾರಾಧನೆ ಮೊದಲಾದ ಧಾರ್ಮಿಕ ಭಾವಸಾಧನೆಗಳಿಂದಲೇ ಮಾತ್ರ ಸಾಧ್ಯವಾಗಬಹುದಾದ ಒಂದು ಓಜಸ್ಸು ಅವರ ವ್ಯಕ್ತಿತ್ವದಲ್ಲಿ ಕಾಣಿಸುತ್ತಿತ್ತು. ಸೊಂಟಕ್ಕೆ ಮೊಳಕಾಲು ಮುಚ್ಚುವ ಹಾಗೆ ಒಂದು ಪಾಣಿ ಪಂಚೆಯನ್ನು ಮಾತ್ರ ಉಟ್ಟಿದ್ದ ಅವರ ನಗ್ನ ವಿಗ್ರಹವು ಗಂಭೀರ ಪ್ರಕೃತಿಯವರಲ್ಲಿ ಗೌರವವನ್ನೂ, ಲಘು ಪ್ರಕೃತಿಯವರಲ್ಲಿ ವಿನೋದವನ್ನೂ ಉದ್ರೇಕಿಸುತ್ತಿತ್ತು. ಹೊಟ್ಟೆ ಎದೆ ಭುಜ ಹಣೆಗಳ ಮೇಲೆ ನಾಮಗಳನ್ನು ಹಾಕಿ ಹಾಕಿ, ಬೆಳಕು ಕಾಣದ ಚರ್ಮಭಾಗಗಳು ಬೆಳ್ಳಗಾಗಿ ಸ್ವಾಭಾವಿಕವಾದ ನಾಮಗಳೋ ಎಂಬಂತಿದ್ದುವು. ಹೊಟ್ಟೆ ಹಣೆಗಳಲ್ಲಿ ಚರ್ಮವು ಮಡಿಕೆ ಮಡಿಕೆಯಾಗಿ ಅವರ ವಯಸ್ಸಿಗೂ, ಅವರು ಪಡುತ್ತಿದ್ದ ಸುಖಜೀವನಕ್ಕೂ ಸಾಕ್ಷಿಯಾಗಿತ್ತು. ಅಂತೂ ಒಟ್ಟಿನಲ್ಲಿ ಅವರೆಲ್ಲಿಯಾದರೂ ಬ್ರಾಹ್ಮಣರಾಗಿದ್ದರೆ 'ಗೊಡ್ಡು ವೈದಿಕ'ರೆಂಬ ಹೆಸರಿಗೆ ಪಾತ್ರರಾಗುತ್ತಿದ್ದರೆಂದು ಹೇಳಬಹುದಾಗಿತ್ತು.

ಗೌಡರು ಬೆತ್ತಹೆಣೆದು ಮಾಡಿದ್ದ ನಾಮದ ಪೆಟ್ಟಿಗೆಯ ಮುಚ್ಚಳವನ್ನು ತೆರೆದರು. ನಾಮದ ಪೆಟ್ಟಿಗೆಯೂ ತುಲಸಿಯ ಪೀಠದಂತೆಯೇ ಅವರಿಗೆ ಪವಿತ್ರ

ವಸ್ತುವಾಗಿತ್ತು. ಅದು ಬಹಳ ಪುರಾತನವಾದುದೆಂದು ಅದರ ಬಣ್ಣ ಹೇಳು ತ್ತಿತ್ತು. ನವೀನ ವಿಚಾರವಾದಿಗಳು ಆ ಪೆಟ್ಟಿಗೆಯಲ್ಲಿ ಇಣಿಕಿ ನೋಡಿದ್ದರೆ ಮೃದುಹಾಸ್ಯಹಸಿತರಾಗಿ ತಿರಸ್ಕಾರದಿಂದ ಅದನ್ನು 'ಮತಭ್ರಾಂತಿಯ ಮದ್ದಿನ ಮನೆ!' ಎಂದು ಕರೆಯುತ್ತಿದ್ದರು. ಪ್ರಾಚೀನ ಸಂಪ್ರದಾಯ ಪ್ರೇಮಿಗಳು ನೋಡಿದ್ದರೆ ಭಕ್ತಿಪೂರ್ವಕ ಬುದ್ಧಿಯಿಂದ ಅದನ್ನು 'ಶಾಂತಿಯ ಎಲೆವನೆ!' ಎಂದು ಕರೆಯುತ್ತಿದ್ದರು. ಆದರೆ ನಾಮದ ಪೆಟ್ಟಿಗೆ ಮಾತ್ರ ಮೌನಿಯಾಗಿರುತ್ತಿತ್ತು.

ಅದರ ಕತ್ತಲುಗವಿಯಲ್ಲಿ ಅನೇಕ ವಸ್ತುಗಳು ಬಹಳ ಕಾಲದಿಂದಲೂ ತಪಸ್ಸು ಮಾಡುತ್ತಿದ್ದುವು: ಕೆಂಪು ನಾಮದ ಕರಡಿಗೆ; ಬಿಳಿ ನಾಮದ ಉಂಡೆಗಳು; ತುಳಸೀಮಣಿಗಳ ಮಾಲೆ; ಒಣಗಿದ ತುಲಸಿಯ ಎಲೆಗಳು; ಎರಡು ಅಂಗುಲ ಚದರವುಳ್ಳ ಒಡಕಲು ಕನ್ನಡಿ; ಕೆಂಪು ಮತ್ತು ಬಿಳಿಯ ನಾಮದ ಕಡ್ಡಿಗಳು; ವಿಭೂತಿಯ ಹುಡಿ: ನಾಲ್ಕೈದು ಜರಠವಾದ ಮೂರುಕಾಸು, ಆರುಕಾಸುಗಳು; ಒಂದು ಬೆಳ್ಳಿಯ ಸಣ್ಣ ತ್ರಿಶೂಲ, ಇತ್ಯಾದಿ. ಪೆಟ್ಟಿಗೆಯ ಸಂದುಗಳಲ್ಲಿ ಆಸ್ತಿಕರ ಸಮಾಜದಲ್ಲಿ ನಾಸ್ತಿಕರೂ ತಮ್ಮ ಅಭಿಪ್ರಾಯಗಳನ್ನು ಗೋಪ್ಯವಾಗಿಟ್ಟುಕೊಂಡು ಜೀವನಯಾಪನೆ ಮಾಡುವಂತೆ, ಕೆಲವು ಸಣ್ಣ ತಣಸಿನ ಹುಳುಗಳೂ ಗೌಡರ ಕಣ್ಣಿಗೆ ಬೀಳದಂತೆ ವಾಸಮಾಡಿಕೊಂಡಿದ್ದುವು.

ಗೌಡರು ಸಾವಧಾನದಿಂದಲೂ ಭಕ್ತಿಯಿಂದಲೂ ತೃಪ್ತಿಯಿಂದಲೂ ತಮ್ಮ ವಿಶಾಲ ಶರೀರಪ್ರಾಂತದ ನಿರ್ದಿಷ್ಟ ಸ್ಥಾನಗಳಲ್ಲಿ ಕೆಂಪು ಬಿಳಿಯ ನಾಮದ ಪತಾಕೆಗಳನ್ನು ಸಂಸ್ಥಾಪಿಸಿ, ಬಾಯಲ್ಲಿ ದೇವರ ನಾಮಗಳನ್ನು ಉಚ್ಚರಿಸುತ್ತ ಮೇಲೆದ್ದು, ಪಕ್ಕದಲ್ಲಿದ್ದ ಬೆಳ್ಳಿಯ ತಂಬಿಗೆಯನ್ನು ತೆಗೆದುಕೊಂಡು ತುಲಸೀ ಪೀಠದ ಬಳಿಗೆ ಹೋದರು. ಅಡಕೆ ಚಪ್ಪರದ ಕಂಡಿಗಳಿಂದ ತೂರಿಬರುತ್ತಿದ್ದ ಬಿಸಿಲುಕೋಲುಗಳಿಂದ ಅಂಗಣದ ತುಂಬ ಪಟ್ಟೆಪಟ್ಟೆಯಾಗಿ ಗುಂಡುಗುಂಡಾಗಿ ಚಿತ್ರವಿಚಿತ್ರವಾಗಿ ಬೆಳಕು ನೆಳಲುಗಳ ರಂಗೋಲಿ ಹಾಕಿದಂತೆ ಮನೋಹರ ವಾಗಿತ್ತು. ಗೌಡರ ಮಹಾಕಾಯದ ಮೇಲೆಯೂ ಆ ರಂಗೋಲಿ ಬಿದ್ದು, ಬಿಳಿ ಕೆಂಪು ನಾಮಗಳೊಡನೆ ಪಂದ್ಯ ಹೂಡಿತ್ತು. ಬಣ್ಣದ ಚಿಟ್ಟೆಯೊಂದು ಅಂಗಳದಲ್ಲಿ ಹಾರಾಡುತ್ತ ದೃಶ್ಯಕ್ಕೆ ಮತ್ತಿನಿತು ರಮಣೀಯತೆಯನ್ನು ದಯ ಪಾಲಿಸುತ್ತಿತ್ತು. ನಾಯಿಗಳು ದೂರದ ಮೂಲೆಗಳನ್ನು ಹಿಡಿದು ಮಲಗಿದ್ದುವು. ಗೌಡರ ದೇವಾರಾಧನೆಯೆಂದರೆ ಆ ದುಷ್ಟ ದಾನವರಿಗೆ ಅಷ್ಟೊಂದು ಭೀತಿ!

ಗೌಡರು ಪೀಠದ ಮೇಲೆ ಹರಿವಾಣದಲ್ಲಿದ್ದ ಹೂವುಗಳನ್ನು ದೇವರಿಗೆ ಮತ್ತಷ್ಟು ಮುಡಿಸುತ್ತ "ಸೀತಾ" ಎಂದು ಕರೆದರು. ಹಾಗೆ ಕರೆಯುವುದು ಅವರಿಗೆ ಪದ್ಧತಿಯಾಗಿತ್ತು.

ಸೀತೆ ತಳತಳನೆ ಹೊಳೆಯುತ್ತಿದ್ದ ಬೆಳ್ಳಿಯ ಪಂಚಪಾತ್ರೆಯಲ್ಲಿ ಅದಕ್ಕಿಂತಲೂ ಬೆಳ್ಳಗಿದ್ದ ಹಾಲನ್ನು ತುಂಬಿಕೊಂಡು, ಅವುಗಳೆರಡನ್ನೂ ಮೀರಿದ ಮುಖ ಪ್ರಸನ್ನತೆಯಿಂದ, ಸೀರೆಯ ನಿರಿ ಮರ್ಮರಗೈಯುತ್ತಿರಲು ಬಳ್ಳಿಯಂತೆ ಬಳುಕಿ ನಡೆದು ತಂದೆಯ ಬಳಿಗೆ ಬಂದಳು. ಹಾಗೆ ಬರುವುದೂ ಆಕೆಗೆ ಪದ್ಧತಿಯಾಗಿತ್ತು. ಆಕೆಯನ್ನು ನೋಡಿ ಗೌಡರಿಗೆ ಮುಖಸ್ತುತಿಯೂ ಆತ್ಮಶ್ಲಾಘನೆಯೂ ಎರಡೂ ಒಟ್ಟಿಗೆ ಬಂದಂತಾಯಿತು. ಆಗತಾನೆ ಸ್ನಾನಮಾಡಿ ಧೌತಾಂಬರವನ್ನುಟ್ಟಿದ್ದ ಆಕೆ ಹೊಸ ಮಳೆಯಲ್ಲಿ ಮಿಂದ ತಾವರೆಯ ಹೊಸ ಮೊಗ್ಗೆಯಂತೆ ಮುದ್ದಾಗಿಯೂ ಮನೋಹರವಾಗಿಯೂ ಇದ್ದಳು. ಆಕೆ ಇನ್ನೂ ಯಾವ ಒಡವೆಗಳನ್ನೂ ಧರಿಸಿರಲಿಲ್ಲ; ತಲೆಯನ್ನೂ ಬಾಚಿಕೊಂಡಿರಲಿಲ್ಲ. ಕತ್ತಲ್ಲೂಗ್ಗಿದಲು ಗೊಂಚಲು ಗೊಂಚಲಾಗಿಯೂ ತೆರೆತೆರೆಯಾಗಿಯೂ ನಿತಂಬದಾಚೆಯವರೆಗೂ ಸ್ವಚ್ಛಂದವಾಗಿ ಪ್ರವಹಿಸಿದ್ದುದು ಆಕೆ ತಂದೆಗೆ ಪೂಜೆಯಲ್ಲಿ ಸಹಾಯವಾಗಿ ಅತ್ತ ಇತ್ತ ತಿರುಗುತ್ತಿದ್ದಾಗ ಕಾಣುತ್ತಿತ್ತು. ತರುಣಿಯ ಮುಖಬಿಂಬದಲ್ಲಿಯೂ ತೇಜಸ್ವಿಗಳಾಗಿದ್ದ ಕಣ್ಣುಗಳಲ್ಲಿಯೂ ಆ ದಿನ ಏನೋ ಒಂದು ವಿಧವಾದ ತೃಪ್ತಿ ಸಂತೋಷಗಳ ಹೊಸ ಕಳೆ ಮೊಳೆದೋರಿತ್ತು.

"ಚಿನ್ನಯ್ಯ ಎಲ್ಲಿ ಹೋದನೇ? ಇವತ್ತು ಬೆಳಗಿನಿಂದ ನೋಡಲಿಲ್ಲ" ಎಂದು ಮೊದಲಾಗಿ ಗೌಡರು ಪೂಜೆಯ ಮಧ್ಯೆ ಮಧ್ಯೆ ಮಾತಾಡತೊಡಗಿದರು. ಮನಸ್ಸು ಕೈಕಾಲುಬಾಯಿಗಳಿಗೆ ಪೂಜಾವಿಧಾನವನ್ನು ಎಷ್ಟೋ ವರ್ಷಗಳ ಹಿಂದೆಯೇ ಚೆನ್ನಾಗಿ ಕಲಿಸಿಬಿಟ್ಟಿದ್ದರಿಂದ, ಈಗ ಅದು ಪೂಜೆಗೆ ಭಂಗತಾರದೆ ಬೇರೆಯೆಡೆ ಸಂಚರಿಸಬಹುದಾಗಿತ್ತು.

"ಬೆಳಿಗ್ಗೆ ಕೋವಿ ತಗೊಂಡು ಮೀನು ಹೊಡೆಯೋಕೆ ಹೋದ. ಇವತ್ತು ಕಾನೂರು ರಾಮಯ್ಯ ಬಾವೋರು ಬರ್ತಾರಂತೆ" ಎಂದಳು ಸೀತೆ. ಸೀತೆಗೆ ತಂದೆಯಲ್ಲಿ ಹೆಚ್ಚು ಸಲಿಗೆ.

"ಯಾವಾಗ ಬರ್ತಾರಂತೆ?"

"ಇಷ್ಟು ಹೊತ್ತಿಗೇ ಬರಬೇಕಾಗಿತ್ತಪ್ಪಾ!"

ಗಡಿಯಾರದಲ್ಲಿ ಗಂಟೆ ಹೊಡೆಯಿತು. ಗೌಡರು ಹನ್ನೊಂದು ಇರಬಹುದೆಂದು ಯೋಚಿಸಿ ನೋಡುತ್ತಾರೆ, ಹನ್ನೆರಡು! ಹನ್ನೊಂದು ಹೊಡೆದಿದ್ದು ಅವರ ಗಮನಕ್ಕೆ ಬಂದಿರಲಿಲ್ಲ. ಅಡುಗೆ ಮನೆಯಿಂದ ರುಚಿರುಚಿಯಾದ, ಭಕ್ಷ್ಯಭೋಜ್ಯಗಳ ಕಂಪನ್ನು ಹೊತ್ತುಕೊಂಡು ಬಂದ ಗಾಳಿ ದೇವರ ಪೂಜೆ ಮಾಡುತ್ತಿದ್ದವರ ಮೂಗನ್ನೂ ಪ್ರವೇಶಿಸಿತು.

ದೇವರ ಪೂಜೆ ಶೀಘ್ರದಲ್ಲಿಯೆ ಮುಕ್ತಾಯವಾಯಿತು. ಮಗಳು ತಂದೆ ಕೊಟ್ಟ ಪ್ರಸಾದವನ್ನೂ ತೀರ್ಥವನ್ನೂ ಸ್ವೀಕರಿಸಿ, ತಂದೆಯಂತೆಯೆ ಪ್ರದಕ್ಷಿಣೆ ನಮಸ್ಕಾರಗಳನ್ನೂ ಮಾಡಿ, ತಲೆ ಬಾಚಿಕೊಳ್ಳುವುದೇ ಮೊದಲಾಗಿ ಅಲಂಕಾರ ಮಾಡಿಕೊಳ್ಳುವುದಕ್ಕಾಗಿ ತನ್ನ ಕೊಟಡಿಗೆ ಹೋದಳು. ಗೌಡರು ಸ್ವಲ್ಪ ಹೊತ್ತು ಕಾದು, ಚಿನ್ನಯ್ಯನಾಗಲಿ ಕಾನೂರು ಗಾಡಿಯಾಗಲಿ ಬಾರದಿದ್ದುದನ್ನು ಕಂಡು, ಅಡುಗೆ ಮನೆಗೆ ಹೋಗಿ ಭೋಜನವನ್ನು ಪೂರೈಸಿ ಬಂದರು. ಕಾಳನು ಅವರಿಗಾಗಿ ಜಗಲಿಯ ಮೇಲೆ ಜಮಖಾನ ದಿಂಬುಗಳನ್ನು ಹಾಸಿ, ಹರಿವಾಣ ದಲ್ಲಿ ಎಲೆಯಡಕೆ ಇಟ್ಟಿದ್ದನು.

ಗೌರಮ್ಮನವರು ಊಟಮಾಡು ಎಂದು ಹೇಳಿದರೂ ಕೇಳದೆ, ತಾಯಿ ಯೊಡನೆಯೇ ಉಣ್ಣುತ್ತೇನೆಂದು ಸೀತೆ ಹಟಮಾಡಿ, ತನ್ನ ಕೊಟಡಿಗೆ ಹೋಗಿ ಬಾಗಿಲು ಹಾಕಿಕೊಂಡು ಚಾಪೆಯ ಮೇಲೆ ಕುಳಿತು ಅಲಂಕಾರದಲ್ಲಿ ಉದ್ಯುಕ್ತೆ ಯಾದಳು. ಎಣ್ಣೆ, ಕನ್ನಡಿ, ಬಾಚಣಿಗೆ, ಹೂಮಾಲೆ ಮೊದಲಾದ ಸಲಕರಣೆಗಳು ಸುತ್ತಲೂ ಬಿದ್ದಿದ್ದುವು. ಸೀತೆ ಕನ್ನಡಿಯಲ್ಲಿ ಆಗಾಗ ಮುಖ ನೋಡಿಕೊಂಡು ತನ್ನನ್ನು ತಾನೆ ಮೋಹಿಸುತ್ತಿದ್ದಂತೆ ತೋರಿದಳು. ಒಂದೆರಡು ಸಾರಿ ಬೆಚ್ಚಿ ಬಾಗಿಲ ಕಡೆ ನೋಡಿದಳು. ಬಾಗಿಲಿಗೆ ತಾಳ ಹಾಕಿದ್ದೇನೆಂದು ಧೈರ್ಯಗೊಂಡು ಮತ್ತೆ ನಿರ್ಲಕ್ಷವಾಗಿ ತನ್ನ ಕಾರ್ಯದಲ್ಲಿ ತೊಡಗಿದಳು. ಕೂದಲು ಮುಟ್ಟಿ ನೋಡಿಕೊಂಡಳು. ಇನ್ನೂ ತೇವವಾಗಿಯೆ ಇತ್ತು. ಬೇರೆಯ ದಿನಗಳ ಲ್ಲಾಗಿದ್ದರೆ 'ಅಪ್ಪ ಬಯ್ತಾರೆ' ಎಂದು ಅವಳು ಎಂದಿಗೂ ಹಸಿ ಕೂದಲಿಗೆ ಎಣ್ಣೆ ಸವರುವ ಸಾಹಸಕ್ಕೆ ಕೈಹಾಕುತ್ತಿರಲಿಲ್ಲ. ಆದರೆ ಇಂದು ಸೀತೆಗೆ ಸಾಹಸ ಬಂದಿತ್ತು. ಹುಲುಸಾಗಿ ಬೆಳೆದಿದ್ದ ಲಾವಣ್ಯಸ್ನಿಗ್ಧವಾದ ಆ ಕೇಶರಾಶಿಯನ್ನು ಪಾಶ ಪಾಶಗಳನ್ನಾಗಿ ತುಡುಕಿ, ಮುಂಗಡೆಗೆ ಸೆಳೆದುಕೊಂಡು, ತೈಲಲೇಪನ ಮಾಡಿದಳು. ನಡುನಡುವೆ ದರ್ಪಣ ದರ್ಶನಮಾಡುತ್ತ, ಕಣ್ಣು ಮೂಗು ತುಟಿ ಕೆನ್ನೆ ಗಲ್ಲಗಳನ್ನೂ ಪ್ರಶಂಸನೀಯ ದೃಷ್ಟಿಯಿಂದ ನೋಡಿಕೊಳ್ಳುತ್ತಿದ್ದಳು. ಒಂದು ಸಾರಿ ಕನ್ನಡಿಯನ್ನು ನೋಡಿಕೊಳ್ಳುತ್ತಿದ್ದಾಗ ಯಾರೊ ಬಾಗಿಲು ತಟ್ಟಿದಂತಾಗಿ ಆಲಿಸಿದಳು.

"ಅಕ್ಕಯ್ಯಾ! ಅಕ್ಕಯ್ಯಾ!" ಎಂದು ಲಕ್ಷ್ಮಿ ಕೀಚುದನಿಯಿಂದ ಬಾಗಿ ಲನ್ನು ಗುದ್ದುತ್ತಲೂ ಬೆಕ್ಕು ಪರಚಿದಂತೆ ಉಗುರುಗಳಿಂದ ಪರಚುತ್ತಲೂ ಇದ್ದುದು ಸೀತೆಗೆ ಗೊತ್ತಾಯಿತು.

ಸೀತೆ ಸಿಟ್ಟಿನಿಂದಲೂ ತಿರಸ್ಕಾರದಿಂದಲೂ ಹಲ್ಲು ಕಚ್ಚಿದವಳು, ಬಾಗಿಲು ತೆರೆಯಬಾರದೆಂದು ದೃಢನಿಶ್ಚಯ ಮಾಡಿಕೊಂಡು, ಮತ್ತೆ ಕೂದಲಿಗೆ ಎಣ್ಣೆ

ಹಚ್ಚುವ ಕೆಲಸಕ್ಕೆ ತೊಡಗಿದಳು. ಆದರೆ ಲಕ್ಷ್ಮಿಯ ಕರೆಯೂ ತಾಡನವೂ ಪರಚುವಿಕೆಯೂ ಬರ ಬರುತ್ತ ಪ್ರಬಲವಾದುವು. ಒಂದು ಸಾರಿ ಕೋಪದಿಂದ "ಅಲ್ಲಿರೇ ಬರ್ತೀನಿ!" ಎಂದು ಗದರಿಸಿದಳು. ಆದರೆ ಲಕ್ಷ್ಮಿ ಮೊದಲಿಗಿಂತಲೂ ಹೆಚ್ಚಾಗಿ 'ಸತ್ಯಾಗ್ರಹ' ಮಾಡತೊಡಗಿದಳು. ಸೀತೆ ರೇಗಿ, ಬೈದು, ಬಾಗಿಲು ತೆರೆಯುವುದೇ ಇಲ್ಲವೆಂದು ಕಠಿನವಾಗಿ ಹೇಳಿದಳು. ಲಕ್ಷ್ಮಿ ಒಳಗೆ ಬಂದರೆ ಅಲಂಕಾರಕ್ಕೂ ಅದಕ್ಕೆ ಬೇಕಾಗುವ ಏಕಾಗ್ರತೆಗೂ ಭಂಗಬರುತ್ತದೆ ಎಂದು ಸೀತೆಯ ಮನಸ್ಸು. ಜೊತೆಗೆ ಲಕ್ಷ್ಮಿ ಏನೂ ಅರಿಯದ ಹುಡುಗಿಯಾಗಿದ್ದರೂ ಅವಳೆದುರು ಪದೇ ಪದೇ ಕನ್ನಡಿ ನೋಡಿಕೊಳ್ಳುವುದೆಂದರೆ ಸೀತೆಗೆ ಸಂಕೋಚ.

ಸೀತೆ .ಹೆದರಿಸಿದ ಕೂಡಲೆ ಬಾಗಿಲಾಚೆ ಕ್ರಾಂತಿಗಾರಂಭವಾಯಿತು. ಲಕ್ಷ್ಮಿ ಗಟ್ಟಿಯಾಗಿ ಅಳುತ್ತ ಬಿದ್ದು ಹೊರಳುತ್ತ ಅವ್ವನನ್ನು ಕೂಗತೊಡಗಿದಳು. ಸೀತೆ ಸಿಟ್ಟಿನಿಂದ ನುಗ್ಗಿ ಬಂದು ಬಾಗಿಲು ತೆರೆದಾಗ ಲಕ್ಷ್ಮಿಯ ಪಕ್ಕದಲ್ಲಿ ಗೌರಮ್ಮನೂ ನಿಂತಿದ್ದರು. "ಯಾಕೆ? ಬಾಗಿಲು ಹಾಕ್ಕೊಂಡಿದ್ದೀಯಾ?" ಎಂದು ಗದರಿಸುತ್ತ ಲಕ್ಷ್ಮಿಯನ್ನು ಎತ್ತಿಕೊಂಡು ಕೋಣೆಯೊಳಗೆ ಬಂದರು. ಚಾಪೆಯ ವಾತಾವರಣವನ್ನು ಕಂಡು "ಅಯ್ಯೋ ನಿನ್ನ! ಕೂದಲು ಆರ ಬೇಕಾದರೆ ಸುರುಮಾಡಿಬಿಟ್ಟಿಯೇನೇ?" ಎಂದರು.

"ಕೂದಲು ಆರಿತ್ತು!" ಎಂದು ಸೀತೆ ಹುಬ್ಬುಗಂಟಾದಳು.

"ಏನಾದರೂ ಮಾಡು! ನೀನೇನು ಹೇಳಿದೋರ ಮಾತು ಕೇಳೋದಿಲ್ಲ!" ಎಂದು ಗೌರಮ್ಮನವರು ಲಕ್ಷ್ಮಿಯನ್ನು ಚಾಪೆಯ ಮೇಲೆ ಕೂರಿಸಿ, ಸೀತೆಗೆ "ಇಲ್ಲಿ ಬಾ, ತಲೆ ಬಾಚ್ತೀನಿ" ಎಂದರು.

ಸೀತೆ "ಬೇಡ, ನಾನೇ ಬಾಚಿಕೊಳ್ತೀನಿ" ಎಂದಳು. ಅವಳಿಗೆ ತಾಯಿಯ ಸಹಾಯವೂ ಒಂದು ಅಡಚಣೆಯಾಗಿತ್ತು. ಗೌರಮ್ಮನವರಿಗೂ ಮಗಳ ಮನಸ್ಸು ಗೊತ್ತಾಗಿ "ಏನಾದರೂ ಮಾಡು" ಎಂದು ಹೇಳುತ್ತ ಒಳಗೊಳಗೆ ಮುಗುಳು ನಗುತ್ತ, ಮತ್ತೆ ಅಡುಗೆಮನೆಗೆ ಹೋದರು. ಬಹುಶಃ ಅವರಿಗೆ ತಮ್ಮ ತಾರುಣ್ಯದ ನೆನಪಾಗಿರಬಹುದು.

ತಾಯಿ ಕಣ್ಮರೆಯಾದ ಕೂಡಲೆ ಸೀತೆ, ಚಾಪೆಯ ಮೇಲೆ ಮುಗ್ಧವಾಗಿ ಗೊಂಬೆಯಂತೆ ಕೂತಿದ್ದ ಲಕ್ಷ್ಮಿಯ ಕಡೆ ಕಣ್ಣು ಕೆರಳಿಸಿ ನೋಡಿ "ಏನಾಗಿತ್ತೇ ನಿನಗೆ? ಜೀವಹೋಗ್ತಿತ್ತೇನೇ?" ಎಂದು ಹಲ್ಲುಮಟ್ಟೆ ಕಚ್ಚಿದಳು. ಲಕ್ಷ್ಮಿ ಮತ್ತೆ ಬಾಯನ್ನು ಹಿಂಜಿಸಿ ಅಳಲು ಪ್ರಾರಂಭಮಾಡುತ್ತಿದ್ದಳು. ಸೀತೆ ಮತ್ತೆ ಗೌರಮ್ಮನವರೆಲ್ಲಿ ಬಂದುಬಿಡುತ್ತಾರೆಯೊ ಎಂಬ ಭೀತಿಯಿಂದ, ಫಕ್ಕನೆ ಚಾಪೆಯ ಮೇಲೆ ಕುಳಿತು, ತಂಗಿಯನ್ನು ಎದೆಗವುಚಿಕೊಂಡು, ಅತ್ಯಂತ ಮಧುರವಾಣಿ

ಯಿಂದ "ಅಳಬೇಡೇ! ನನ್ನ ಚಿನ್ನಾ! ನಿನಗೂ ಹೂ ಮುಡಿಸ್ತೀನಿ! ಹೂವಯ್ಯ ಬಾವ ಬರ್‍ತಾರೆ ಕಣೇ!" ಎಂದು ಲಲ್ಲೆಗೈದು ಮುದ್ದಾಡಿ ಮುತ್ತಿಟ್ಟಳು. ಲಕ್ಷ್ಮಿ ಸುಮ್ಮನಾದಳು. ಅವಳಿಗೆ 'ಹೂವಯ್ಯ ಬಾವ ಬರುತ್ತಾರೆ' ಎಂದು ಅಕ್ಕ ಹೇಳಿದುದು, ತಾನು ಅಳಬಾರದುದಕ್ಕೆ ಮಹಾಪ್ರಬಲವಾದ ಕಾರಣವಾಗಿ ತೋರಿತೋ ಏನೋ! ಅಣ್ಣಂದಿರೊಡನೆ ಹೂವಯ್ಯನ ಹೆಸರನ್ನು ಹೇಳಲು ನಾಚುತ್ತಿದ್ದ ಸೀತೆಗೆ ಲಕ್ಷ್ಮಿಯೊಡನೆ ಹೇಳಲು ಸಂಕೋಚವಾಗಲಿಲ್ಲ. ಅಷ್ಟೇ ಅಲ್ಲ; ಹೆಸರನ್ನು ಉಚ್ಚರಿಸಿ ಸವಿಯುತ್ತಿದ್ದಳು.

ಲಕ್ಷ್ಮಿ ಸುಮ್ಮನಾದ ಮೇಲೆಯೂ "ಹೂವಯ್ಯಬಾವ ಬರ್‍ತಾರೆ ಕಣೇ! ಹೂವಯ್ಯ ಬಾವ!" ಎಂದು ಮತ್ತೆಮತ್ತೆ ಒತ್ತಿ ಹೇಳಿದಳು. ಲಕ್ಷ್ಮಿಗೆ ಹೂವಯ್ಯನ ನೆನಪು ಇರಲೂ ಇಲ್ಲ; ಬರಲೂ ಇಲ್ಲ. ಆದರೂ ಅಕ್ಕನ ಪ್ರೀತಿ ಗೌರವಗಳಿಗೆ ಪಾತ್ರನಾದವನು ತನಗೂ ಮಾನ್ಯನೆಂದು ಭಾವಿಸುವಂತೆ ಬೆಪ್ಪಾಗಿ ನೋಡಿದಳು.

ಸೀತೆ ತಲೆಬಾಚಿ, ಬೈತಲೆ ತೆಗೆದು, ಜಡೆ ಹಾಕಿಕೊಂಡಳು. ಆಮೇಲೆ ಮುದ್ದಾದ ಹಣೆಯ ಮೇಲೆ ಕೈಬೆರಳಿನಿಂದ ಕುಂಕುಮವನ್ನು ದುಂಡಾಗಿಡು ತ್ತಿದ್ದಾಗ ಲಕ್ಷ್ಮಿಯ ಚೇಷ್ಟೆಯಿಂದ ಕೈ ಅಲ್ಲಾಡಿ, ಪ್ರಾಚೀನಿತಂಬಿನಿಯ ಲಲಾಟ ದಲ್ಲಿ ಪೂರ್ಣಿಮಾ ಚಂದ್ರಬಿಂಬದಂತೆ ವರ್ತುಲವಾಗಿರಬೇಕಾಗಿದ್ದ ಕುಂಕುಮದ ಬೊಟ್ಟು ಬಾಲಚುಕ್ಕಿಯಂತೆ ದೀರ್ಘವಕ್ರವಾಯಿತು. ತಂಗಿಯನ್ನು ಗದರಿಸಿ, ಕನ್ನಡಿ ನೋಡಿಕೊಳ್ಳುವುದಕ್ಕೆ ಹೆಚ್ಚು ಅವಕಾಶವೂ ಪ್ರಬಲಕಾರಣವೂ ದೊರಕಿ ದುದಕ್ಕಾಗಿ ಹರ್ಷಪಡುತ್ತ, ಬೊಟ್ಟನ್ನು ಸರಿಮಾಡಿಕೊಳ್ಳುವ ನೆವದಲ್ಲಿ ಬಹಳ ಕಾಲ ಪ್ರತಿಬಿಂಬವನ್ನು ಪ್ರಶಂಸೆಮಾಡಿದಳು. ತರುವಾಯ ಕಿವಿ, ಮೂಗು, ಕೈ, ಕಾಲು, ನೆತ್ತಿಗಳಿಗೆ ಎಚ್ಚರಿಕೆಯಿಂದಲೂ ಕುಶಲತೆಯಿಂದಲೂ ಒಡವೆ ಗಳನ್ನಿಟ್ಟುಕೊಂಡಳು. ಕೈಗೆ ಹೊಂಬಳೆಯಿಟ್ಟು, ಅದನ್ನೂ ಕನ್ನಡಿಯಲ್ಲಿಯೇ ನೋಡಿದಳು!

ಈ ಮಧ್ಯೆ ಲಕ್ಷ್ಮಿ ತನ್ನ ಕಾರ್ಯದಲ್ಲಿ ತನ್ಮಯವಾಗಿದ್ದಳು. ಬಾಚಣಿಗೆ, ಹೂವು, ಆಭರಣಗಳನ್ನೆಲ್ಲ ಒಂದೊಂದನ್ನಾಗಿ ಪರೀಕ್ಷೆ ಮಾಡುತ್ತಿದ್ದವಳು ಎಣ್ಣೆಯ ಕುಡಿಕೆಗೂ ಕೈಹಾಕಿದಳು. ಅದು ಅವಳ ಗ್ರಹಚಾರಕ್ಕೆ ಉರುಳಿ ಬಿದ್ದು, ಚಾಪೆಯ ಮೇಲೆ ತೈಲವಾಹಿನಿ ಪ್ರವಹಿಸಿತು. ಅವಳ ಲಂಗದ ಒಂದು ಭಾಗವೂ ತೊಯ್ದು ಹೋಯಿತು. ಇನ್ನೇನು ಪ್ರವಾಹವು ಹೂಮಾಲೆಯಿದ್ದ ಲ್ಲಿಗೆ ನುಗ್ಗಬೇಕು, ಅಷ್ಟರಲ್ಲಿ ಸೀತೆ ಕಂಡು ಚೀರಿದಳು. ಬೇಗಬೇಗನೆ ಹೂ ಮಾಲೆಯನ್ನು ತೆಗೆದು ಬೇರೆ ಕಡೆ ಇಟ್ಟು, ಎಣ್ಣೆಯ ಪಾರುಪತ್ಯಕ್ಕೆ ಬದಲಾಗಿ

ತಂಗಿಯ ಪಾರುಪತ್ಯ ಮಾಡಿದಳು. ಅವಳ ಕೆನ್ನೆಯನ್ನು ಹಿಡಿದು ಚಿವುಟಿ ಮಿಲಿದಳು. ಈ ಸಾರಿ ಲಕ್ಷ್ಮಿ ತನ್ನದೇ ಅಪರಾಧವಾಗಿದ್ದರಿಂದ ಗಟ್ಟಿಯಾಗಿ ಅಳಲಿಲ್ಲ; ಕೆನ್ನೆ ತುಟಿಗಳನ್ನು ಹಿಂಜಿಸಿಕೊಂಡು ನೀರವವಾಗಿ ರೋದಿಸತೊಡಗಿದಳು. ಗಟ್ಟಿಯಾಗಿ ಅತ್ತರೆ ಗೌರಮ್ಮನವರೂ ಬಂದು ಗುದ್ದುತ್ತಾರೆಂದು ಆಕೆಗೆ ಭೀತಿ. ಅಷ್ಟರಲ್ಲಿ ಯಾವುದೋ ಗಾಡಿ ಬಂದ ಸದ್ದಾಗಿ ಸೀತೆ 'ಹೂವಯ್ಯ ಬಾವ ಕಣೇ!' ಎನ್ನುತ್ತ ಕಿಟಕಿಯ ಬಳಿಗೆ ಓಡಿಹೋಗಿ ನೋಡಿದಳು. ಬಿಸಿಲು ಬಿದ್ದಿದ್ದ ಕೆಂಪು ರಸ್ತೆ ನಿರ್ಜನವಾಗಿತ್ತು. ಯಾವ ಗಾಡಿಯ ಚಿಹ್ನೆಯೂ ಇರಲಿಲ್ಲ. ರಸ್ತೆಯ ಚರಂಡಿಯಲ್ಲಿ ಕೆಲವು ಕೋಳಿಗಳು ಮಾತ್ರ ಕೆದುರುತ್ತಿದ್ದುದು ಅವಳ ಕಣ್ಣಿಗೆ ಬಿತ್ತು. ಲಕ್ಷ್ಮಿಯೂ ಅಳುವುದನ್ನು ಸದ್ಯಕ್ಕೆ ನಿಲ್ಲಿಸಿ, ಕಿಟಕಿಯ ಬಳಿಗೆ ಬಂದು ನಿಂತು ನಿಕ್ಕುಳಿಸಿ ನೋಡುತ್ತಿದ್ದಳು. ಅವಳ ಕಣ್ಣಿಗೆ ಕೋಳಿಗಳೂ ಕೂಡ ಕಾಣಿಸಲಿಲ್ಲ. ಆಕಾಶ, ಮೋಡಗಳು, ಮರಗಳ ಹಸುರು ನೆತ್ತಿ, ಅವುಗಳನ್ನು ವಿಭಾಗಿಸುವಂತಿದ್ದ ಕಿಟಕಿಯ ಸರಳುಗಳು, ಇಷ್ಟೆ ಅವಳ ಕಣ್ಣಿಗೆ ಕಂಡದ್ದು!

ಸೀತೆ ಹತಾಶಳಾಗಿ ಹಿಂದಕ್ಕೆ ಬಂದು, ಎಣ್ಣೆಯನ್ನೆಲ್ಲ ಆದಷ್ಟು ಮಟ್ಟಿಗೆ ಬಳಿದು ಕುಡಿಕೆಗೆ ತುಂಬಿದಳು. ಚಾಪೆಯನ್ನೆತ್ತಿ ನೋಡುತ್ತಾಳೆ: ನೆಲ ಎಣ್ಣೆ ಹೀರಿ ಕರ್ರಗಾಗಿತ್ತು. ಅದು ಕಾಣಿಸದಂತೆ ಮತ್ತೆ ಅದರ ಮೇಲೆಯೇ ಚಾಪೆ ಹಾಕಿದಳು. ಲಕ್ಷ್ಮಿ ಸದ್ಯಕ್ಕೆ 'ಸಶೇಷ' ಮಾಡಿದ್ದ ಅಳುವನ್ನು ಮತ್ತೆ ಪ್ರಾರಂಭಿಸಿ, ಎಣ್ಣೆಯಿಂದ ಒದ್ದೆಯಾಗಿದ್ದ ತನ್ನ ಲಂಗದ ಭಾಗದ ಕಡೆಗೇ ನಿಸ್ಸಹಾಯಳಾಗಿ ಜುಗುಪ್ಸೆಯಿಂದ ನೋಡುತ್ತಿದ್ದುದು ಅಕ್ಕನ ಕಣ್ಣಿಗೆ ಬಿತ್ತು. ಸೀತೆ ಬಾಯಲ್ಲಿ ಶಾಪಗಳನ್ನು ಗೊಣಗುತ್ತ ಮುದ್ದು ತಂಗಿಯ ಲಂಗಭಾಗವನ್ನು ತನ್ನ ಕೈಗಾಣಕ್ಕೆ ಕೊಟ್ಟು, ಕುಡಿಕೆಗೇ ಎಣ್ಣೆಯನ್ನೆಲ್ಲ ಮತ್ತೆ ಹಿಂಡಿದಳು!

ಸೀತೆಯಿನ್ನೂ ಹೂವು ಮುಡಿದಿರಲಿಲ್ಲ. ಅದಕ್ಕೆ ಮೊದಲು 'ಕಡೆಯ ಸಾರಿ,' ಕಡೆಯ ನಾಟಕದಂತೆ, ಕನ್ನಡಿ ನೋಡುತ್ತಿದ್ದಳು. ಎತ್ತಿನ ಗಂಟೆ ಸರದ ಸದ್ದೂ ಗಾಡಿ ಚಕ್ರಗಳ ಸದ್ದೂ ಚೆನ್ನಾಗಿ ಕೇಳಿಸಿತು. 'ಹೂವಯ್ಯ ಬಾವ ಬಂದರು ಕಣೇ!' ಎಂದು ಕಿಟಕಿಗೆ ಓಡಿದಳು. ನೋಡುತ್ತಾಳೆ: ಕಮಾನು ಗಾಡಿ, ಕರಿ ಬಿಳಿ ಎತ್ತುಗಳು; ಲಚ್ಚ, ನಂದಿ! ಓಹೋ ನಿಂಗ! ಹಿಂದೆ ಯಾರದು? ಪುಟ್ಟಣ್ಣ, ನಂಜ; ಕೋವಿ ಹೊತ್ತುಕೊಂಡು ಬರುತ್ತಿದ್ದಾರೆ! ಮುಂದುಗಡೆ ಯಾರು ಗಾಡಿಯೊಳಗೆ ಕೂತವರು? ರಾಮಯ್ಯ ಬಾವ! ಹೂವಯ್ಯ ಬಾವ ಎಲ್ಲಿ? ಉನ್ನತ ಗಿರಿಶೃಂಗದಲ್ಲಿ ನಿಂತು, ದೂರದ ದಿಗಂತದಲ್ಲಿ ಚಂದ್ರೋದಯವನ್ನೇ ನಟ್ಟ ನೋಟದಿಂದ ನಿರೀಕ್ಷಿಸುವ ಕಬ್ಬಿಗನಂತೆ, ಸೀತೆ ಉತ್ಕಂಠಿತೆಯಾದಳು. ಜಡೆ, ಹೂವು, ಒಡವೆ, ಮುಖ, ಕಣ್ಣು, ಚೆಲುವು,

ಎಲ್ಲವೂ ಎಲ್ಲಿ? ಸೀತೆ ತನ್ನನ್ನು ತಾನೆ ಮರೆತು ದೃಷ್ಟಿಮಾತ್ರವಾದಳು.

ಹೊರ ಅಂಗಳದಲ್ಲಿ ಗಾಡಿ ನಿಂತಿತು. ಗಾಡಿಯ ಹಿಂದುಗಡೆಯಿಂದ ಚಿನ್ನಯ್ಯ, ಸಿಂಗಪ್ಪಗೌಡರು ಕೆಳಗೆ ಹಾರಿದರು. ನಿಂಗನು ಕೆಳಗೆ ಹಾರಿ ಗಾಡಿ ಬಿಟ್ಟ ಮೇಲೆ ಮುಂದುಗಡೆಯಿಂದ ರಾಮಯ್ಯನೂ ಇಳಿದನು.

ಸೀತೆ ಹೂವಯ್ಯನನ್ನು ಕಾಣದೆ ಸ್ವಲ್ಪ ಚಕಿತೆಯಾದಳು.

ಅಲ್ಲಿದ್ದವರೆಲ್ಲರ ಮುಖದಲ್ಲಿಯೂ ಕಳವಳವಿತ್ತು. ಯಾರೂ ಗಟ್ಟಿಯಾಗಿ ಮಾತಾಡುತ್ತಿರಲಿಲ್ಲ. ಪುಟ್ಟಣ್ಣನು ತನ್ನ ಕೈಲಿದ್ದ ಕೋವಿಯನ್ನು ನಂಜನ ಕೈಗೆ ಕೊಟ್ಟು, ಗಾಡಿಯ ಮುಂದಕ್ಕೆ ಬಂದನು. ಗಾಡಿಯೊಳಗೆ ಯಾರೊಡನೆಯೋ ಮಾತಾಡಿದನು. ಅದೆಲ್ಲವನ್ನೂ ಕಂಡು ಸೀತೆಯ ನೆತ್ತರು ನಾಡಿಗಳಲ್ಲಿ ಬಿಸಿಯಾಗಿ ಹರಿಯತೊಡಗಿತು. ಚಿನ್ನಯ್ಯನು ಗಾಡಿಯೊಳಗೆ ಹೋಗಲು ಅವನನ್ನು ಹಿಡಿದುಕೊಂಡು ಮೆಲ್ಲನೆ ಹೂವಯ್ಯನು ಇಳಿಯತೊಡಗಿದನು. ಸೀತೆ ಗಾಬರಿಯಾದಳು. ಚಿನ್ನಯ್ಯನ ಬಲಗಡೆ ತೋಳು ಹೂವಯ್ಯನ ಬೆನ್ನನ್ನು ಅವಲಂಬನವಾಗಿ ಹಿಡಿದಿತ್ತು.

"ನಡೀತೀಯೋ? ಎತ್ತಿಕೊಂಡು ಹೋಗೋಣೋ?" ಎಂದು ಕೇಳಿದರು ಸಿಂಗಪ್ಪಗೌಡರು.

"ಪರ್ವಾಯಿಲ್ಲ, ನಡೆಯಬಹುದು" ಎಂದನು ಹೂವಯ್ಯ.

ಸೀತೆ ಜಗಲಿಯ ಬಾಗಿಲಿಗೆ ಓಡಿಹೋಗಿ ನಿಂತಳು. ಎಲ್ಲರೂ ಜಗಲಿಗೆ ಬರುತ್ತಿದ್ದರು. ಮಲಗಿದ್ದ ಶಾಮಯ್ಯಗೌಡರು ಎದ್ದು ಗಾಬರಿಯಾಗಿ ಹೂವಯ್ಯನ ಕಡೆಗೆ ಓಡಿದರು.

"ಏನು? ಏನಾಯ್ತು...?"

"ಏನೂ ಇಲ್ಲ; ನೀವು ಗಾಬರಿಯಾಗಬೇಡಿ. ಬೆನ್ನಿಗೆ ಟ್ರಂಕು ತಗಲಿ ಸ್ವಲ್ಪ ಪೆಟ್ಟಾಗಿದೆ!" ಎಂದು ಹೂವಯ್ಯನು ತನ್ನ ನೋವು ಅಷ್ಟೇನೂ ಉದ್ವೇಗಕ್ಕೆ ಕಾರಣವಾದುದಲ್ಲ ಎಂಬುದನ್ನು ಗೌಡರಿಗೆ ಸಮರ್ಥಿಸುವಂತೆ ನಗುಮುಖವಾದನು.

ಉಳಿದವರೂ ಹೂವಯ್ಯ ಹೇಳಿದುದನ್ನೇ ಸಮರ್ಥಿಸಿದರು. ಗಾಡಿ ಉರುಳಿ ಬಿದ್ದುದನ್ನು ಯಾರೊಬ್ಬರೂ ಹೇಳಲಿಲ್ಲ. ಗೌಡರು ಬಾಗಿಲಲ್ಲಿ ನಿಂತಿದ್ದ ಸೀತೆಯನ್ನು ನಿರ್ದೇಶಿಸಿ, ಹಾಸಿಗೆ ಹಾಸುವಂತೆ ಹೇಳಿದರು. ಆದರೆ ಅಷ್ಟರಲ್ಲಿಯೆ ಅಲ್ಲಿಗೆ ಬಂದಿದ್ದ ಕಾಳನೇ ಆ ಕೆಲಸ ಮಾಡಿದನು. ಸೀತೆಯೂ ಅವನಿಗೆ ನೆರವಾದಳು.

ಊಟವಾದ ತರುವಾಯ ಸಿಂಗಪ್ಪಗೌಡರು ಶ್ಯಾಮಯ್ಯಗೌಡರಿಗೆ ನಡೆದುದ

ನ್ನೆಲ್ಲ ಹೇಳಿ "ಇಷ್ಟಾದುದೇ ದೇವರ ಕೃಪೆ!" ಎಂದು ಕೊನೆಗಾಣಿಸಿದರು. ಪುಟ್ಟಣ್ಣನೂ ನಡುನಡುವೆ ಬಾಯಿಹಾಕಿ ವಿವರಿಸುತ್ತಿದ್ದನು. ಅವನ ವಿವರಣೆ ನಡೆದ ಕಥೆಗಿಂತಲೂ ಉದ್ದವಾಗಿತ್ತು. ರಾಮಯ್ಯನು ಅಣ್ಣನ ಬಳಿ ಕುಳಿತು ಬೆನ್ನಿಗೆ ಎಣ್ಣೆ ನಿಂಬೆಯ ಹಣ್ಣಿನ ರಸಗಳನ್ನು ತೀಡುತ್ತಿದ್ದನು. ಚಿನ್ನಯ್ಯನೂ ಅವನಿಗೆ ಸಹಾಯ ಮಾಡುತ್ತ ಮಾತುಕಥೆಯಾಡುತ್ತಿದ್ದನು. ಸೀತೆ ಬೇಕಾದ ಸಲಕರಣೆಗಳನ್ನು ಒದಗಿಸುತ್ತ 'ನರ್ಸಮ್ಮ'ನಾಗಿದ್ದಳು.

ಅಂತೂ ಆ ದಿನ ನಿಜವಾಗಿ 'ಹಬ್ಬದೂಟ' ಉಂಡವರು ಶಾಮಯ್ಯಗೌಡರು, ಲಕ್ಷ್ಮಿ ಇಬ್ಬರೇ.

## ೧೧

## ಅಣ್ಣಯ್ಯಗೌಡರ ಸಂಸಾರ ಶೂಲ

ಬಿಸಿಲು ಬಿರುಸಾಗಿತ್ತು. ಗಾಳಿ ಮೆಲ್ಲಗೆ ಬೀಸುತ್ತಿದ್ದರೂ ಅದರಿಂದ ಬೇಗೆ ಕಡಮೆಯಾಗುತ್ತಿರಲಿಲ್ಲ. ಮರದ ನೆಳಲು ಬುಡದಲ್ಲಿ ಬಳಲಿ ಮಲಗಿ ದಣಿವಾರಿಸಿಕೊಳ್ಳುತ್ತಿತ್ತು. ಆಕಾಶದ ನೀಲದಲ್ಲಿ ಮುಗಿಲು ಮುದ್ದೆ ಮುದ್ದೆಯಾಗಿ ತೇಲುತ್ತಿತ್ತು. ಮಲೆಗಾಡುಗಳು ತೆರೆ ತೆರೆಯಾಗಿ ನಿರ್ಲಕ್ಷಧೀರತೆಯಿಂದ ದಿಗಂತ ವಿಶ್ರಾಂತವಾಗಿದ್ದುವು. ಕಾನೂರಿನಿಂದ ನಿರ್ವಿಣ್ಣ ಮಾನಸರಾಗಿ ಹೊರಟ ಅಣ್ಣಯ್ಯಗೌಡರ ಮುದಿದೇಹ ಆಯಾಸದಿಂದ ನಡೆಯಲಾರದಾಯಿತು. ಕೂತುಕೊಳ್ಳಬೇಕೆಂಬ ಮನಸ್ಸನ್ನು ಎರಡು ಮೂರು ಸಾರಿ ನಿವಾರಿಸಿ, ದೊಣ್ಣೆಯೂರಿಕೊಂಡು ಬಾಗಿ ಬಾಗಿ ನಡೆದರು. ಒಣಗಿ ಬರುತ್ತಿದ್ದ ಗಂಟಲನ್ನು ಎಂಜಲು ನುಂಗಿ ನುಂಗಿ ತೋಯಿಸಿದರು. ಬಹಳ ದಿನಗಳಿಂದಲೂ ರೋಗಗ್ರಸ್ಥೆಯಾಗಿ ಮಲಗಿದ್ದ ತಮ್ಮ ಹೆಂಡತಿಯ ಬಳಿಗೆ ಬೇಗ ಹೋಗಬೇಕೆಂದು ಅವರ ಮನಸ್ಸು ತುಡಿಯುತಿತ್ತು. ಅದರಲ್ಲಿಯೂ ದಾರಿಯಲ್ಲಿ ಕಾಗೆ ಕರೆದುದನ್ನು ಕೇಳಿ ಅವರಿಗೆ ಗಾಬರಿಯಾಗಿತ್ತು. ಆದರೆ ಶರೀರದ ಆಯಾಸ ಆತ್ಮದ ಸಾಹಸೇಚ್ಛೆಗಳಿಗಿಂತಲೂ ಪ್ರಬಲವಾದುದರಿಂದ ಒಂದು ಬಸಿರಿ ಮರದ ಬುಡದಲ್ಲಿ ಕುಳಿತರು. ನಿಟ್ಟುಸಿರುಬಿಟ್ಟರು. ತಲೆಯ ಮೇಲಿದ್ದ ಕೆಂಪುವಸ್ತ್ರವನ್ನು ತೆಗೆದು ಬೆವರನ್ನೊರಸಿ ಬೀಸಿಕೊಂಡರು. ಬೀಸುತ್ತಿದ್ದ ಕೆಂಬಟ್ಟೆಯನ್ನು ಕಂಡು ಮರದ ಎಲೆಗಳಲ್ಲಿ ಕುಳಿತಿದ್ದ ಕೆಲವು ಉರುಳಿ ಹಕ್ಕಿಗಳು ಕಿರುದನಿಗೈಯುತ್ತ ಹಾರಿಹೋದುವು.

ಅಣ್ಣಯ್ಯಗೌಡರ ಮನಸ್ಸಿನಲ್ಲಿ ಅಶಾಂತಿಯ ಕ್ರಾಂತಿ ಪ್ರಾರಂಭವಾಗಿತ್ತು.

ಅವರ ಸ್ಥಿತಿ ಮರುಭೂಮಿಯಲ್ಲಿ ಕಣ್ಣು ಕಟ್ಟಿ ಬಿಟ್ಟವನಂತೆ ಇತ್ತು: ಚಂದ್ರಯ್ಯ ಗೌಡರು ಸಾಲ ಕೊಡುವುದಿಲ್ಲ. ಮುಂದೇನು ಗತಿ? ಮಗನೂ ತನ್ನನ್ನು ಬಿಟ್ಟು ಹೋದರೆ ತನಗಾರು ದಿಕ್ಕು? ರೋಗಿಯಾದ ಹೆಂಡತಿಗೂ ವೃದ್ಧನಾದ ತನಗೂ ದುರ್ಬಲೆಯಾದ ಪುಟ್ಟ ಮಗಳೊಬ್ಬಳೆ ಶುಶ್ರೂಷೆ ಮಾಡಬಲ್ಲಳೆ? ಉಳುವವರಾರು? ಬಿತ್ತುವವರಾರು? ... ಅಯ್ಯೋ ದೇವರೇ, ಕಡೆಗಾಲದಲ್ಲಿ ಎಂತಹ ಕಷ್ಟ ಕೊಟ್ಟೆ! ... ತನ್ನ ಜೀವನದ ಚಿತ್ರಗಳೆಲ್ಲ ಕಣ್ಣುಮುಂದೆ ಸುಳಿದುವು. ಮುದುಕನ ಹೃದಯ ಶೋಕದಿಂದ ವಿದೀರ್ಣವಾಯಿತು. ಪ್ರಕೃತಿ ಪ್ರಪಂಚ ವಲ್ಲದೆ ಬೇರೆ ಯಾರೂ ಅಲ್ಲಿರಲಿಲ್ಲ. ಎಳಮಕ್ಕಳಂತೆ ಬಿಕ್ಕಿಬಿಕ್ಕಿ ಅಳತೊಡಗಿದರು. ... ನಾರಾಯಣಾ ನಿನಗೂ ಕೇಳಿಸದೇ? ಮುದುಕನು ನಿನಗೆ ಎಷ್ಟು ಸಾರಿ ಮುಡಿಪುಕಟ್ಟಿದ್ದಾನೆ? ತಿರುಪತಿ ಧರ್ಮಸ್ಥಳಗಳಿಗೆ ಹೇಳಿಕೊಂಡಿದ್ದಾನೆ... ವೆಂಕಪ್ಪಯ್ಯನವರಿಂದ ಚಂದ್ರಮೌಳೀಶ್ವರನಿಗೆ ಹಣ್ಣು ಕಾಯಿ ಕಾಣಿಕೆಗಳನ್ನು ಅರ್ಪಿಸಿದ್ದಾನೆ! ... ಅವರಿಂದಲೇ ನಿಮಿತ್ತ ಕೇಳಿಸಿ ಚೀಟಿ ವಿಭೂತಿ ತಂದಿದ್ದಾನೆ! ... ದೆವ್ವ, ಭೂತ, ಜಕ್ಕಣಿ, ಪಂಜ್ರೊಳ್ಳಿ ಮೊದಲಾದ ಅಂತರಬೆಂತರಗಳಿಗೆಲ್ಲ ಕೋಳಿಗಳನ್ನು ಬಲಿಕೊಟ್ಟಿದ್ದಾನೆ ... ತನಗೆ ತಿಳಿದಿದ್ದ ಗಿಡಮೂಲಿಕೆ ಕಷಾಯ ಗಳನ್ನೂ ಮಾಡಿದ್ದಾನೆ... ಕೆಲವರೇನೋ ಹೇಳಿದರು: ಆಸ್ಪತ್ರೆಗೆ ಹೋಗಿ ಡಾಕ್ಟರಿಂದ ಔಷಧಿ ತೆಗೆದುಕೊಂಡು ಬಾ ಎಂದು; ಕರೆದುಕೊಂಡು ಹೋಗಿ ಡಾಕ್ಟರಿಗೆ ತೋರಿಸು ಎಂದು... ಮುದುಕನು ಯೋಚಿಸಿದನು: ಆಸ್ಪತ್ರೆ ಡಾಕ್ಟರುಗಳಿಂದೇನಾಗುತ್ತದೆ? ಅಗ್ರಹಾರದ ಜೋಯಿಸರು ವೆಂಕಪ್ಪಯ್ಯ ನವರ ಮಂತ್ರತಂತ್ರಗಳಿಂದಲೂ ತಿರುಪತಿ ಧರ್ಮಸ್ಥಳಗಳ ದೇವರುಗಳಿಂದಲೂ ತನ್ನ ಹಳ್ಳಿಯ ವೈದ್ಯದಿಂದಲೂ (ತಾನು ಎಷ್ಟು ಜನರಿಗೆ ಮದ್ದು ಕೊಟ್ಟಿಲ್ಲ! ಎಷ್ಟು ಜನರು ಬದುಕಿಕೊಂಡಿಲ್ಲ!) ಭೂತ ಜಕ್ಕಣಿಗಳಿಂದಲೂ ಆಗದ ಕಾರ್ಯ ಆಸ್ಪತ್ರೆ ಡಾಕ್ಟರುಗಳಿಂದೇನಾಗುತ್ತದೆ? ಎಷ್ಟೋ ಜನರಿಗೆ ತಾನೇ ಉಪದೇಶ ಮಾಡಿಲ್ಲವೇ ಆಸ್ಪತ್ರೆಗೆ ಹೋಗಬೇಡಿ ಎಂದು? 'ಅಪ್ಪ ಅವ್ವ ಸತ್ರೆ ಆಸ್ಪತ್ರೆ!' ಎಂಬ ಗಾದೆಯಿಲ್ಲವೇ? ವೇದ ಸುಳ್ಳಾದರೂ ಗಾದೆ ಸುಳ್ಳಾಗದು! ... ಎಲ್ಲಾ ಕರ್ಮದ ಫಲ. ಹಿಂದಿನ ಜನ್ಮದಲ್ಲಿ ಬೆನ್ನಿಗೆ ಹತ್ತಿದುದು ಸುಮ್ಮನೆ ಹೋಗುತ್ತದೆಯೆ? ... ಮತ್ತೆ ಮುದುಕನಿಗೆ ತನ್ನ ನಾಲ್ಕು ಮದುವೆಗಳ ನೆನಪಾಯಿತು. ಒಂದು ಸಾರಿ ತಾನು ಮಾಡಿದ್ದು ತಪ್ಪು ಎನ್ನಿಸಿತು... ಆದರೆ ಮತ್ತೆ ಮದುವೆ ಮಾಡಿಕೊಳ್ಳುವುದರಲ್ಲಿ ತಪ್ಪೇನು! ಸಂಸಾರ ಸಾಗುವುದು ಹೇಗೆ? ಎಂದು ತನ್ನನ್ನು ತಾನೇ ಸಮರ್ಥಿಸಿಕೊಂಡನು... ಯೋಚಿಸುತ್ತಿದ್ದ ಹಾಗೆಯೆ ಸಮೀಪದ ಒಂದು ಮರದಲ್ಲಿ ಕಾಗೆ ಮತ್ತೆ 'ಕಾ ಕಾ ಕಾ' ಎಂದು

ಕರೆಯತೊಡಗಿತು. ಮುದುಕನು ಬೆಚ್ಚಿ ಬಿದ್ದು ನೋಡಿದನು. ಹಸುರೆಲೆಗಳ ನಡುವೆ ಒಂದು ಕಂದುಬಣ್ಣದ ದಪ್ಪ ಕೊಂಬೆಯ ಮೇಲೆ ಕಾಗೆ ಕರ್ರಗೆ ಕುಳಿತು ಕೂಗುತ್ತಿತ್ತು. ನೋಡುತ್ತಾನೆ: ಸುಡುಗಾಡಿನ ಕಡೆಗೇ ಮುಖಹಾಕಿ ಕೊಂಡಿದೆ! 'ನಿನ್ನ ಗಂಟಲು ಕಟ್ಟೇಹೋಗ' ಎಂದು ಮುದುಕನು ಶಪಿಸುತ್ತ ಮೇಲೆದ್ದು, ತಲೆಗೆ ಕೆಂಪು ವಸ್ತ್ರವನ್ನು ಸುತ್ತಿಕೊಂಡು, ದೊಣ್ಣೆಯೂರಿ ಬಾಗಿ ಮುಂದುವರಿದನು. ಬಿಸಿಲು ಮತ್ತಷ್ಟು ಪ್ರಖರವಾಗಿದ್ದಂತೆ ತೋರಿತು. ಆ ಮಟಮಟ ಮಧ್ಯಾಹ್ನದ ಜಗತ್ತಿನಲ್ಲಿ ನಿರ್ಜನತೆಯ ಭೀಷಣ ಮೌನ 'ನೀನು ನಿರ್ಗತಿಕ' ಎಂದು ಬೆರಳು ತೋರಿ ಹಾಸ್ಯಮಾಡುವಂತಿತ್ತು.

ಗದ್ದೆ ಕಾಡುಗಳ ಮಧ್ಯೆ ತಮ್ಮ ಕಿರಿದಾದ ಹುಲ್ಲುಮನೆ ಕಂಡುಬರಲು ಅಣ್ಣಯ್ಯಗೌಡರು ಆದಷ್ಟು ಪ್ರಯತ್ನದಿಂದ ಬೇಗಬೇಗನೆ ಕಾಲುಹಾಕಿದರು. ಅರಣ್ಯದಲ್ಲಿ ಬಿದ್ದಿರುವ ಅನಾಥ ಶವದಂತೆ ಆ ಹುಲ್ಲುಮನೆ ನಿಶ್ಚಲ ನೀರವ ವಾಗಿತ್ತು. ಮನುಷ್ಯಜೀವ ಸಂಚಾರದ ಗುರುತು ಕೂಡ ಕಾಣುತ್ತಿರಲಿಲ್ಲ. ತನ್ನ ಗೋರಿಯನ್ನು ಸೇರಿಕೊಳ್ಳಲು ಹೋಗುವ ಹಗಲು ಪಿಶಾಚಿಯಂತೆ ಅಣ್ಣಯ್ಯಗೌಡರು ನಡೆಯುತ್ತಿರಲು ಮನೆಯಿಂದ ರೋದನ ಧ್ವನಿ ಕೇಳಿಸಿತು! ಅವರ ಜಂಘಾಬಲ ಉಡುಗಿದಂತಾಯಿತು. ಮತ್ತೆ ಸ್ವಲ್ಪ ನಡೆದರು. ಗೋಳು ತಮ್ಮ ಮಗಳದೆಂದು ಗೊತ್ತಾಯಿತು. ನೀಳವಾಗಿ ನಿಡುಸುಯ್ದು 'ನಾರಾ ಯಣಾ!' ಎಂದರು. ದೇವರ ನಾಮ ತಮ್ಮ ಕಿವಿಗೂ ಕೇಳಿಸಲಿಲ್ಲ. ಕಣ್ಣೀರು ಬೆವರಿನೊಂದಿಗೆ ಸೇರಿ ಹರಿಯುತ್ತಿತ್ತು. ತಿಪ್ಪೆಯ ರಾಶಿಯಲ್ಲಿ ಕೆದರುತ್ತಿದ್ದ ಕೋಳಿಗಳನ್ನೂ ಹೊರಗೆ ಆ ಮನೆಯ ಸ್ಥಿತಿಸೂಚಕವಾಗಿ ಮೂರ್ಛೆಹೋದಂತೆ ನಿದ್ದೆಮಾಡುತ್ತ ಬಿದ್ದಿದ್ದ ಕರಿಯ ನಾಯಿಯನ್ನೂ ಗಣನೆಗೆ ತಾರದೆ ದಾಟಿ ಒಳಗೆ ನುಗ್ಗಿದರು. ಹೊಸ್ತಿಲು ದಾಟುವಾಗ ಬಹಳ ತಗ್ಗಾಗಿದ್ದ ಬಾಗಿಲಿನ ಮೇಲು ಕಟ್ಟು ತಲೆಗೆ ತಾಗಿತು.

ಆವೊತ್ತು ಬೆಳಿಗ್ಗೆ ಅಣ್ಣಯ್ಯಗೌಡರು ಕಾನೂರಿಗೆ ಹೊರಟಾಗ ಮನೆಯಲ್ಲಿ ಅವರ ಮಗ ಓಬಯ್ಯನಿದ್ದನು. ತಂದೆಮಕ್ಕಳಿಗೆ ಈಚೀಚೆಗೆ ಸರಿಯಾದ ಮಾತು ಕತೆ ಇರಲಿಲ್ಲವಾದ್ದರಿಂದ ಅಣ್ಣಯ್ಯಗೌಡರು ತಮ್ಮ ಮಗಳನ್ನು ಸಂಬೋಧಿಸುವ ನೆವದಿಂದ ತಾನು ಕಾನೂರಿಗೆ ಹೋಗಿ ಬರುತ್ತೇನೆಂದೂ ಮನೆಗೆಲಸವನ್ನೂ ರೋಗಿಯನ್ನೂ ನೋಡಿಕೊಳ್ಳಬೇಕೆಂದೂ ಮಗನಿಗೆ ಕೇಳಿಸುವಂತೆ ಗಟ್ಟಿಯಾಗಿ ಹೇಳಿ ಹೊರಟುಹೋದರು. ಅವರ ಮಗಳು, ಅರಿಯದ ಹುಡುಗಿ, ತನ್ನ ತಾಯಿಯ ಬಳಿ ಕೂತಿದ್ದಳು. ತಾಯಿ ವಾಂತಿ ವಾಕರಿಕೆ ತಲೆನೋವು ಜ್ವರ ಗಳಿಂದ ನರಳುತ್ತಿದ್ದಳು. ಆ ಹುಡುಗಿಯೂ ಕೂಡ ಆರೋಗ್ಯವಾಗಿರಲಿಲ್ಲ.

ಪದೇ ಪದೇ ಚಳಿಜ್ವರ ಬರುತ್ತಿದ್ದು, ಜ್ವರದ ಗಡ್ಡೆ ಬೆಳೆದು, ಸರಿಯಾದ ಆಹಾರವಾಗಲಿ ಗಾಳಿಯಾಗಲಿ ಶುಶ್ರೂಷೆ ಸುಖಗಳಾಗಲಿ ಇಲ್ಲದೆ ಕಲ್ಲಿನ ತಳದಲ್ಲಿ ಬೆಳೆಯುವ ಹುಲ್ಲಿನ ಕಣದಂತೆ ಇದ್ದಳು. ಬಾಲ್ಯ ಸಹಜವಾದ ಆಟ ಕುಣಿತ ಮೆರೆತಗಳನ್ನು ಅವಳು ಹುಟ್ಟಿದಂದಿನಿಂದಲೂ ಕಂಡಿರಲಿಲ್ಲ. ಸಮೀಪದಲ್ಲಿ ಯಾವ ನೆರೆಮನೆಯೂ ಇರದಿದ್ದುದರಿಂದ ಅವಳ ಭಾಗಕ್ಕೆ ಮಕ್ಕಳ ಕೂಟವೂ ಕಥಾವಾರ್ತೆಯಾಗಿತ್ತು. ಹೀಗಾಗಿ ಅವಳ ದೇಹದ ಬೆಳವಣಿಗೆಯಂತೆ ಆತ್ಮದ ಬೆಳವಣಿಗೆಯೂ ಸ್ವಾಭಾವಿಕವಾದ ಸನ್ನಿವೇಶದ ಅಭಾವದಿಂದ ಕುಬ್ಜವಾಗಿತ್ತು. ಅವಳ ತಂದೆ ಬಹಳ ಮುದುಕನಾಗಿದ್ದುದರಿಂದಲೂ ನೂರಾರು ಚಿಂತೆ ತಾಪತ್ರಯಗಳಿಂದ ನೋಯುತ್ತಿದ್ದುದರಿಂದಲೂ ಮಗಳನ್ನಾಡಿಸುವ ಅಥವಾ ಒಡಗೂಡಿ ಆಡುವ ಗೋಜಿಗೆ ಹೋಗಿರಲಿಲ್ಲ. ಕೆಲಸ ಕೈತುಂಬ ಇರುತ್ತಿದ್ದ ಆಕೆಯ ತಾಯಿ ಮೊಲೆಯನ್ನು ಕೂಡ ಅವಸರ ಅವಸರವಾಗಿ ಊಡಿದ್ದಳು. ತಾಯಿಗಾದರೂ ತಾಯಿಯ ಸುಖ ಲಭಿಸಿರಲಿಲ್ಲ; ಮಗಳಿಗೆ ಮಗುವಿನ ನಲ್ಮೆಯೂ ಲಭಿಸಿರಲಿಲ್ಲ. ಅಣ್ಣನಾದ ಓಬಯ್ಯ ತಂದೆ ಮಲತಾಯಿಯರನ್ನು ಕಾಣುತ್ತಿದ್ದಂತೆಯೆ ಮಲತಂಗಿಯನ್ನೂ ಕಾಣುತ್ತಿದ್ದನು. ಹೀಗಾಗಿ ಆ ಬಾಲೆ ತಂದೆತಾಯಿಗಳೊಡನೆ ಒಂದು ರೀತಿಯಲ್ಲಿ 'ಅನಾಥೆ'ಯಾಗಿ ಬೆಳೆಯುತ್ತಿದ್ದಳು.

ತಂದೆ ಹೋದ ಸ್ವಲ್ಪ ಹೊತ್ತಿನಲ್ಲಿ ಓಬಯ್ಯ ತನ್ನ ಮಲತಂಗಿಯನ್ನು ಅಡುಗೆ ಮನೆಗೆ ಕರೆದು ಒಲೆ ಹೊತ್ತಿಸುವಂತೆ ಅಪ್ಪಣೆ ಮಾಡಿದನು. ಆ ಹುಡುಗಿಗೆ ಅಣ್ಣನೆಂದರೆ ಹುಲಿಯನ್ನು ಕಂಡಷ್ಟು ಭಯ. ಎಷ್ಟೋ ಸಾರಿ ಮುಖ ಮೋರೆ ನೋಡದೆ ಹೊಡೆಯುತ್ತಿದ್ದುದರಿಂದ ಅಣ್ಣನ ಮಾತಿಗೆ ಬದಲು ಮಾತಾಡದೆ ಕೆಲಸ ಮಾಡುತ್ತಿದ್ದಳು.

"ನಾನು ಹಟ್ಟಿಗೆ ಹೋಗಿ ದನ ಬಿಟ್ಟು ಬರ್ತೇನೆ. ಗಂಜಿ ಮಾಡಿಡು" ಎಂದು ಕಣ್ಣು ದೊಡ್ಡಗೆ ಮಾಡಿ ಹೇಳಿ, ಓಬಯ್ಯ ಹೊರಟುಹೋದನು.

ಹುಡುಗಿ ಒಲೆ ಹೊತ್ತಿಸುವ ಸಾಹಸಕ್ಕೆ ಕೈ ಹಾಕಿದಳು. ಆದರೆ ಕಟ್ಟಿಗೆಯಿರಲಿಲ್ಲ. ಹೊರಗೆ ಹೋಗಿ 'ಜಿಗ್ಗು' ಕಡ್ಡಿಗಳನ್ನು ಆಯತೊಡಗಿದಳು. ಆಯುತ್ತಿದ್ದಾಗ ತಾಯಿ ವಾಂತಿ ಮಾಡಿಕೊಂಡ ಸದ್ದು ಗಟ್ಟಿಯಾಗಿ ಕೇಳಿಸಿತು. ಓಡಿಹೋಗಿ ನೋಡುತ್ತಾಳೆ: ತಾಯಿ ಹಾಸಿಗೆಯ ಮೇಲೆ ಕೂತಿದ್ದಾಳೆ. ಬಟ್ಟೆಯೆಲ್ಲ ವಾಂತಿಮಯವಾಗಿದೆ. ದುರ್ಗಂಧ ಆ ಮನೆಯ ಒಳಗಿದ್ದ ಕತ್ತಲೆಯನ್ನೂ ಹೊರಗಟ್ಟುವಂತಿದೆ! ಮಗಳಿಗೆ ಅಸಹ್ಯವಾಗಲಿ ಜುಗುಪ್ಸೆಯಾಗಲಿ ಉಂಟಾಗಲಿಲ್ಲ. ಅಭ್ಯಾಸದಿಂದ ಅವಳಿಗೆ ಎಲ್ಲದರಲ್ಲಿಯೂ ಸಹಿಷ್ಣುತೆಯುಂಟಾಗಿತ್ತು. ತಾಯಿಯ ಕೆದರಿದ ತಲೆ, ಬತ್ತಿದ ಕೆನ್ನೆ, ನಿಸ್ತೇಜವಾಗಿದ್ದ ಕಣ್ಣುಗಳು, ಜೀರ್ಣ

ಶೀರ್ಣವಾಗಿದ್ದ ದೇಹ ಇವುಗಳನ್ನು ನೋಡಿ ಅವಳಿಗೆ ಕನಿಕರ ಹೆದರಿಕೆ ಒಂದೇ ತಡವೆ ಉಂಟಾದುವು. ತುಟಿ ಕಂಪಿಸಿದುವು; ಕಂಬನಿ ಸುರಿದುವು. ತಾಯಿಗೆ ಮಾತಾಡುವ ಬಲವೂ ಇರಲಿಲ್ಲ. ಕರುಣಾಪೂರ್ಣ ದೃಷ್ಟಿಯಿಂದ ಮಗಳ ಮುಖವನ್ನೇ ದುರುದುರು ನೋಡಿದಳು. ಆಕೆಯ ದೃಷ್ಟಿ ಅಲೌಕಿಕವಾಗಿತ್ತು. ಬಿಸಿಯಾದ ಕಂಬನಿ ಬಳ ಬಳನೆ ಹರಿದು ಜ್ವರತಪ್ತ ಕಪೋಲಗಳನ್ನು ತೋಯಿಸಿದುವು. ಏನಾದರೂ ಕುಡಿಯುವುದಕ್ಕೆ ಬೇಕೆಂದು ಕೈಸನ್ನೆಯಿಂದ ಸೂಚಿಸಿದಳು. ಹುಡುಗಿ ಓಡಿಹೋಗಿ ಒಂದು ಸಣ್ಣ ಮಡಕೆಯಲ್ಲಿ ನೀರು ತಂದಳು. ಬಲ್ಲವರಾಗಿದ್ದರೆ ಅಂತಹ ರೋಗದ ವಿಷಮಾವಸ್ಥೆಯಲ್ಲಿ ತಣ್ಣೀರನ್ನು ಎಂದಿಗೂ ಕುಡಿಯಲು ಕೊಡುತ್ತಿರಲಿಲ್ಲ. ನೀರು ಕೂಡ ನಿರ್ಮಲವಾದುದಾಗಿರಲಿಲ್ಲ; ಅವರು ಬಾವಿಯಾಗಿ ಉಪಯೋಗಿಸುತ್ತಿದ್ದ ಗದ್ದೆಯ ಹೊಂಡದ್ದು. ಆ ಹೊಂಡದಲ್ಲಿ ಬಟ್ಟೆ ಒಗೆಯುವುದರಿಂದ ಮೊದಲುಗೊಂಡು ಎಲ್ಲ ಶೌಚಕಾರ್ಯಗಳೂ ನಡೆಯುತ್ತಿದ್ದುದರಿಂದ ಹಾವಸೆ ಹಬ್ಬಿ ನೀರು ಹಸುರುಗಟ್ಟಿತ್ತು. ಒಮ್ಮೊಮ್ಮೆ ಹಗಲು ಬಿಸಿಲಿನಲ್ಲಿ ಎಮ್ಮೆಗಳೂ ಅದರಲ್ಲಿ ಬಿದ್ದು ಹೊರಳಾಡುತ್ತಿದ್ದುದರಿಂದ ಅದರಲ್ಲಿ ಸೆಗಣಿ ವಾಸನೆಯೂ ತುಂಬಿದ್ದಿತು.

ಅರಿಯದ ಮಗಳು ಕೊಟ್ಟಳು; ಜ್ವರ ಪೀಡಿತಳಾಗಿ ಅರಿವುಗೆಟ್ಟ ತಾಯಿ ಕುಡಿದಳು. ಕುಡಿದವಳು ಹಾಗೆಯೇ ವಾಂತಿಮಯವಾಗಿದ್ದ ಹಾಸಿಗೆಯ ಮೇಲೆ ಮಲಗಿದಳು. ಹುಡುಗಿ ಕೈಲಾದಮಟ್ಟಿಗೆ ವಾಂತಿಯನ್ನೆಲ್ಲಾ ಬಳಿದು, 'ಅವ್ವಾ! ಅವ್ವಾ!' ಎಂದು ಕರೆದಳು. ತಾಯಿ ಅಳುಮೊಗವಾಗಿ ಕಣ್ಣೀರುಗರೆಯುತ್ತ ಮಾತಾಡಲು ಪ್ರಯತ್ನಿಸಿದಳು. ಮಗಳು ಅವಳ ಮೊಗದೆಡೆಗೆ ಕಿವಿಯೊಡ್ಡಿದಳು. ತಾಯಿ ಮಗಳನ್ನು ಶೀರ್ಣವಾದ ತನ್ನ ಕೈಗಳಿಂದ ತಬ್ಬಿ ಬಿಕ್ಕಿ ಬಿಕ್ಕಿ ಅತ್ತಳು. ಆ ನಿರ್ಜನ ನೀರವದಲ್ಲಿ ಹುಡುಗಿಗೆ ಹೆದರಿಕೆಯಾಗಿ 'ಅಣ್ಣಯ್ಯಾ, ಅಣ್ಣಯ್ಯಾ' ಎಂದು ಕೂಗಿಕೊಂಡಳು. ಓಬಯ್ಯ ಹೊರಗಿನಿಂದ ಓಡಿಬಂದು ನೋಡಿದಾಗ ಮಲತಾಯಿ ಎಂದಿನಂತೆಯೆ ಪವಡಿಸಿದ್ದಳು. ಸುಮ್ಮನೆ ಗಲಭೆಮಾಡಿದುದಕ್ಕಾಗಿ ತಂಗಿಯನ್ನು ಗದರಿಸಿ, ಚಂದ್ರಮೌಳೀಶ್ವರನಿಗೆ ಮುಡಿಪು ಕಟ್ಟಲೆಂದು ಅವಳ ಕೈಯಲ್ಲಿದ್ದ ಒಂದು ಬೆಳ್ಳಿಯ ಕಡಗವನ್ನು ಕೇಳಿದನು. ಹುಡುಗಿ ಕೊಟ್ಟಳು. ಅದನ್ನು ಒಂದುಸಾರಿ ರೋಗಿಗೆ ಪ್ರದಕ್ಷಿಣೆ ಬರಿಸಿ, ಅಗ್ರಹಾರಕ್ಕೆ ಹೋಗಿ ವೆಂಕಪ್ಪಯ್ಯನವರಿಂದ ಪೂಜೆ ಮಾಡಿಸುತ್ತೇನೆಂದು ಹೇಳಿ, ಜೇಬಿಗೆ ಹಾಕಿಕೊಂಡನು.

ಓಬಯ್ಯ ತಂಗಿಯ ಕೈಲಿ ಬೆಂಕಿ ಹೊತ್ತಿಸುವಂತೆ ಹೇಳಿ ತಾನು ಗಂಜಿಮಾಡಲು ಸನ್ನಾಹಮಾಡುತ್ತಿದ್ದನು. ಹುಡುಗಿ ಒಲೆಯನ್ನು ಊದಿ ಊದಿ ಸೋತುಹೋದಳು. ಹೊಗೆಯೆದ್ದು ಕಣ್ಣು ಮೂಗನ್ನೆಲ್ಲ ತುಂಬಿತು. ಕಣ್ಣು ಕೆಂಪಾಗಿ

ನೀರು ಧಾರಾಕಾರವಾಗಿ ಸುರಿಯ ತೊಡಗಿತು. ಮೂಗಿನಿಂದ ಸಿಂಬಳದ ನೀರು ಹರಿಯತೊಡಗಿತು. ಹುಡುಗಿ ಸಿಂಬಳ ಸುರಿಯುತ್ತ, ನೆಲಕ್ಕೂ ಒಲೆತೋಳಿಗೂ ತನ್ನ ಕೊಳಕು ಚಿಂದಿ ಸೀರೆಗೂ ಒರಸಿಕೊಳ್ಳುತ್ತ ಮತ್ತೆ ಮತ್ತೆ ಊದಿದಳು. ಆದರೆ ಅಗ್ನಿದೇವನಿಗೆ ಬದಲಾಗಿ ಧೂಮಪಿಶಾಚಿಯೆ ಆವಿರ್ಭವಿಸುತ್ತಿತ್ತು! ಹುಡುಗಿ ಒಂದು ಸಾರಿ ಸಿಟ್ಟಿನಿಂದ ಒಲೆಗೆ ಉಗುಳಿದಳು. ಕಡೆಗೆ ಮೆಲ್ಲಗೆ ಅಳತೊಡಗಿದಳು. ಓಬಯ್ಯ ಅವಳಿಗೆ, ಹೊಗೆ ಹಾಕಿದ್ದಕ್ಕಾಗಿ, ಧಕ್ಕನೆ ಒಂದು ಗುದ್ದು ಗುದ್ದಿ, ದೂರ ತಳ್ಳಿ, ತಾನೆ ಬೆಂಕಿಮಾಡಿ ಗಂಜಿಗೆ ಎಸರು ಇಟ್ಟನು. ಹುಡುಗಿ ಮೂಲೆಯಲ್ಲಿ ಬಿಕ್ಕಿ ಬಿಕ್ಕಿ ಅಳುತ್ತಿದ್ದಳು.

ಓಬಯ್ಯ ತಾನೇ ಬಡಿಸಿಕೊಂಡು ಗಂಜಿಯುಂಡಮೇಲೆ ತಂಗಿಗೆ "ನಿನ್ನವ್ವ ಗಷ್ಟು ಹಾಕು! ನೀನುಂಡು, ಅಪ್ಪಯ್ಯಗಿಷ್ಟಿಡು" ಎಂದು ಹೇಳಿ ಮನೆಯಿಂದ ಹೊರಟು ಹೋದನು.

ಹುಡುಗಿ ತಾಯಿಯ ಬಳಿ ಸ್ವಲ್ಪ ಗಂಜಿಯನ್ನು ತೆಗೆದುಕೊಂಡು ಹೋದಳು. ತಾಯಿ ಕಣ್ಣು ಮುಚ್ಚಿ ನಿದ್ರೆ ಮಾಡುತ್ತಿದ್ದಳು. ಹುಡುಗಿಗೆ ಭಯವಾಗಿ ಹಿಂದಕ್ಕೆ ಬಂದು, ಒಂದು ಎಲೆಗೆ ಗಂಜಿ ಸುರಿದು ಉಣತೊಡಗಿದಳು. ಕರಿಯ ನಾಯಿಯೂ ಬಂದು ಎಲೆಯಮುಂದೆ ಜೊಲ್ಲು ಸುರಿಸುತ್ತ ಕೂತುಕೊಂಡಿತು. ಹುಡುಗಿ ಅದಕ್ಕೂ ನೆಲದಮೇಲೆ ಸ್ವಲ್ಪ ಗಂಜಿ ಹಾಕಿದಳು. ಪ್ರಾಣಿ ನಾಲಗೆ ನೀಡಿ ನೀಡಿ ಲೊಚಗುಡುತ್ತ ಗಂಜಿಯನ್ನೆಲ್ಲ ನೆಕ್ಕಿತು. ಹುಡುಗಿಗೆ ನಾಯಿಗಿಂತ ಹೆಚ್ಚಿನ ಸಂಗಾತಿ ಇರಲಿಲ್ಲ. ಓಬಯ್ಯನ ಸಂಗಕ್ಕಿಂತಲೂ ನಾಯಿಯ ಸಂಗವೆ ಎಷ್ಟೋ ಸುಖಕರವೂ ಧೈರ್ಯಕರವೂ ಆಗಿತ್ತು.

ಹುಡುಗಿ ಹೊರ ಅಂಗಳಕ್ಕೆ ಬಂದು ಎಲೆಯನ್ನು ಬಿಸಾಡಿದಳು. ಕೆಲವು ಕೋಳಿಗಳು ಅಲ್ಲಿಗೆ ನುಗ್ಗಿ ಅನ್ನದ ಅಗುಳುಗಳನ್ನು ಕುಕ್ಕಿ ಕುಕ್ಕಿ ತಿನ್ನ ತೊಡಗಿದವು. ಗದ್ದೆಯಲ್ಲಿ ಕುಳಿತಿದ್ದ ಕೆಲವು ಹೊರಸಲು ಹಕ್ಕಿಗಳು ಹಾರಿದುವು. ಅಲ್ಲಲ್ಲಿ ಕೆಲವು ಕಾಲ್ನಡೆಗಳು ಮೇಯುತ್ತಿದ್ದುವು. ಆಕಾಶ, ಅರಣ್ಯ, ಪರ್ವತ, ಗದ್ದೆ, ಬಯಲು, ಸಮಸ್ತ ಜಗತ್ತೂ ನಿಶ್ಚಿಂತೋದಾಸವಾಗಿತ್ತು. ಹುಡುಗಿ ಬಹಳ ಹೊತ್ತು ನಿಂತು ನೋಡಿದಳು. ಗಾಳಿ ಬೆಳಕು ಜೀವಗಳಿಂದ ಹೊರಗಡೆ ಜಗತ್ತು ಮನೋಹರವಾಗಿತ್ತು. ಮತ್ತೂ ನಿಂತು ನೋಡಿದಳು: ತಂದೆಯ ಆಗಮನದ ಸುಳಿವು ಎಲ್ಲಿಯೂ ಗೋಚರಿಸಲಿಲ್ಲ. ಕಡೆಗೆ ಗದ್ದೆಯಲ್ಲಿದ್ದ ಹೊಂಡದ ಬಾವಿಗೆ ಹೋಗಿ ಕೈ ಬಾಯಿ ತೊಳೆದುಕೊಂಡು ಹಿಂತಿರುಗಿ ಬಂದು ತಾಯಿಯ ಬಳಿಗೆ ಹೋಗಿ 'ಅವ್ವಾ! ಅವ್ವಾ!' ಎಂದು ಕೂಗಿದಳು. ಆ ನೀರವತೆಯಲ್ಲಿ ಅವಳ ಧ್ವನಿ ಅವಳಿಗೇ ಭಯಂಕರವಾಗಿತ್ತು. ಮತ್ತೆ ಧೈರ್ಯಮಾಡಿ ತಾಯಿ

ಯನ್ನು ಮುಟ್ಟಿ ಅಲ್ಲಾಡಿಸಿ 'ಅವ್ವಾ! ಅವ್ವಾ!' ಎಂದು ಕರೆದಳು. ಹಿಂದೆ ಯಾವ ಮಾತೆಯ ಸ್ಪರ್ಶವು ಪರಮ ಹರ್ಷಕರವಾಗಿತ್ತೋ ಅದು ಇಂದು ಮಗಳಿಗೆ ಭಯಾನಕವಾಗಿತ್ತು. ತಾಯಿ ಮೆಲ್ಲನೆ ಎವೆದೆರೆದಳು. ಆ ಕಣ್ಣುಗಳ ಬಿಳುಪನ್ನು ಕಂಡು ಹುಡುಗಿ ಹೆದರಿ ಚೀರಿದಳು. ಅವಳಿಗೆ ಜೀವ ಸೂಚನೆಯೂ ಮೃತ್ಯುವಿನಂತೆಯೇ ಭೀಕರವಾಗಿತ್ತು. ತಾಯಿ ಮತ್ತೆ ಕಣ್ಣು ಮುಚ್ಚಿದಳು. ಹುಡುಗಿ ಶೋಕಕ್ಕಿಂತಲೂ ಅತಿಶಯವಾಗಿ ಭಯದಿಂದ ರೋದಿಸತೊಡಗಿದಳು. ಸ್ವಲ್ಪಕಾಲ ಅತ್ತು, ಮತ್ತೆ ಸುಮ್ಮನಾದಳು. ಒಂದೆರಡು ಸಾರಿ ಬಾಗಿಲಿಗೆ ಬಂದು ಹೊರಗೆ ನೋಡಿದಳು. ತಂದೆಯ ಸುಳಿವು ಎಲ್ಲಿಯೂ ಕಾಣಿಸಲಿಲ್ಲ. ಮತ್ತೆ ಒಳಗೆ ಹೋಗಿ ತನ್ನ ಸಾಮರ್ಥ್ಯವನ್ನೆಲ್ಲ ವೆಚ್ಚಮಾಡಿ ಕ್ರಂದಿಸಲಾರಂಭಿಸಿದಳು. ರೋದನ ಧ್ವನಿ ಮೌನಕ್ಕಿಂತಲೂ ಹಿತಕರವಾಗಿತ್ತು; ಹೆಚ್ಚು ಧೈರ್ಯಕೊಡುವಂತಿತ್ತು.

ಅಣ್ಣಯ್ಯಗೌಡರು ಪ್ರವೇಶಿಸಲು ಹುಡುಗಿ ಮತ್ತೂ ಜೋರಾಗಿ ಅಳತೊಡಗಿದಳು. ಮುದುಕನಿಗೆ ಎದೆ ಹಾರಿ ರೋಗಿಯ ಬಳಿಗೆ ಹೋದನು. ಅಣ್ಣಯ್ಯಗೌಡರು ಹಳ್ಳಿಯ ವೈದ್ಯರಾಗಿದ್ದು, ಅನೇಕ ಸಾರಿ ರೋಗಿಗಳ ಮರಣಶಯ್ಯೆಯ ಬಳಿ ನಿಂತಿದ್ದರು. ಅಂತಹ ಸಮಯಗಳಲ್ಲಿ ಇತರರಿಗೆ ಧೈರ್ಯ ಹೇಳುತ್ತಿದ್ದರು. ಆದರೆ ಇಂದು ಹಾಗಿರಲಿಲ್ಲ. ಮುದುಕನ ಹೃದಯವು ಸಂಸಾರದ ಅಸಂಖ್ಯ ನಿಷ್ಕರುಣ ಆಘಾತ ಘರ್ಷಣೆಗಳಿಂದ ತರಗೆಲೆಯಂತೆ ಝುರ್ಝುರಿತವಾಗಿತ್ತು: ಜಳ್ಳಾಗಿತ್ತು. ಮುದುಕನೂ ಅಳತೊಡಗಿದನು. ರೋಗಿ ಮೆಲ್ಲನೆ ಕಣ್ದೆರೆದು ನೋಡಿದಳು. ಜೀವವಿದೆಯೆಂದು ತಿಳಿದಕೂಡಲೆ ಅಣ್ಣಯ್ಯಗೌಡರು ಅಳುವುದನ್ನುಳಿದು ಕಾರ್ಯಸಾಧನೆಗೆ ಕೈಹಾಕಿದರು. ತಣ್ಣಗಾಗುತ್ತಿದ್ದ ಕೈ ಕಾಲುಗಳಿಗೆ ಬಿಸಿಬೂದಿಯುಜ್ಜಿದರು. ರೋಗಿಯ ಬಾಯ್ತೆರೆದು ಮದ್ದು ಹಿಂಡಿದರು. ಮಗಳಿಗೆ ಹಾಲು ತರಲು ಹೇಳಿದರು. ಆದರೆ ಆ ದಿನ ಅವರಿಗಿದ್ದ ಒಂದೇ ಹಸುವಿನ ಹಾಲನ್ನೂ ಕರೆದಿರಲಿಲ್ಲ. ಓಬಯ್ಯನು ದನಗಳನ್ನೆಲ್ಲ ಮೇಯಲು ಕಾಡಿಗೆ ಅಟ್ಟಿಬಿಟ್ಟಿದ್ದನು. ಕಡೆಗೆ ಗಂಜಿಯ ನೀರನ್ನೇ ಸ್ವಲ್ಪ ಸ್ವಲ್ಪವಾಗಿ ಬಾಯಿಗೆ ಬಿಟ್ಟರು. ರೋಗಿ ಕುಡಿದಳು. ಈಗಲೋ ಆಗಲೋ ಪ್ರಾಣ ಹೋಗುತ್ತದೆ ಎಂಬುದೇನೋ ಮುದುಕನಿಗೆ ಗೊತ್ತಾಯಿತು. ಮಗನೆಲ್ಲಿ? ಎಂದು ಕೇಳಲು ಹುಡುಗಿ ಎಲ್ಲವನ್ನೂ ಹೇಳಿ ತನ್ನ ಕಡಗವಿಲ್ಲದ ಬರಿಗೈಯನ್ನು ತೋರಿದಳು. ಮುದುಕನು ನಿಡುಸುಯ್ದು ತಲೆಯ ಮೇಲೆ ಕೈ ಹೊತ್ತುಕೊಂಡು ಕುಳಿತುಬಿಟ್ಟನು.

* * * *

ಅಣ್ಣಯ್ಯಗೌಡರು ತಮ್ಮನ್ನು ಬೀಳ್ಕೊಂಡಮೇಲೆ ಕಾನೂರು ಚಂದ್ರಯ್ಯ ಗೌಡರು ಸ್ವಲ್ಪ ಹೊತ್ತು ಲೆಕ್ಕಪತ್ರ ನೋಡುತ್ತಿದ್ದು, ಆ ಮೇಲೆ ಬಚ್ಚಲು ಮನೆಗೆ ಹೋಗಿ ಮಿಂದು ಬಂದರು. ಅವರ ಮನಸ್ಸು ಸ್ವಲ್ಪ ಕಲಕಿಹೋಗಿತ್ತು. ಮುದು ಕನ ಗೋಳನ್ನು ಕಂಡು ಅವರಿಗೆ ಎದೆಯಲ್ಲಿ ಕನಿಕರವುಂಟಾಗಿತ್ತು. ಆದರೆ ಅದನ್ನು ಪ್ರಯತ್ನಪೂರ್ವಕವಾಗಿ ದಮನಮಾಡಿದ್ದರು. ಅದೊಂದು ಕಡೆ ಅವರ ಒಳ ಮನಸ್ಸಿನಲ್ಲಿ ಕುದಿಯುತ್ತಿತ್ತು. ವೆಂಕಪ್ಪಯ್ಯಜೋಯಿಸರೊಡನೆ ತಾವು ಮಾತಾಡುತ್ತಿದ್ದಾಗ ಅಡುಗೆ ಮನೆಯಲ್ಲಿ ನಡೆದಿದ್ದ ಕದನದ ಕೋಲಾ ಹಲವು ಮತ್ತೊಂದು ಕಡೆ ಪೀಡಿಸುತ್ತಿತ್ತು. ಹೆಂಡತಿಯ ಚಾಡಿಯನ್ನು ಪ್ರತಿ ರಾತ್ರಿಯೂ ಕೇಳಿ ಕೇಳಿ, ಅವರ ದೃಷ್ಟಿಗೆ ನಾಗಮ್ಮನವರು ವಿಷಸರ್ಪಿಣಿಯಂತೆ ತೋರುತ್ತಿದ್ದರು. ಆದರೆ ಹೂವಯ್ಯನ ಮೇಲೆ ಗೌಡರಿಗಿದ್ದ ಒಂದು ವಿಧವಾದ ಭಯ ಗೌರವದಿಂದಲೂ, ನಾಗಮ್ಮನವರು ಅಣ್ಣನ ಹೆಂಡತಿ ಎಂಬ ದಾಕ್ಷಿಣ್ಯ ದಿಂದಲೂ, ಲೋಕಾಪವಾದದ ಭೀತಿಯಿಂದಲೂ, ಏನನ್ನೂ ಮಾಡಲಾರದೆಯೂ ಮಾಡಲೊಲ್ಲದೆಯೂ ಸುಮ್ಮನಿದ್ದರು.

ಇಂತಹ ಮನಸ್ಸಿನಲ್ಲಿ ಅವರು ಮಣೆಯ ಮೇಲೆ ಕುಳಿತು ನಾಮಧಾರಣೆ ಮಾಡುತ್ತಿದ್ದಾಗ ಪುಟ್ಟಮ್ಮ ಜಗಲಿಗೆ ಬಂದು ಬೆಳಿಗ್ಗೆ ನಡೆದುದೆಲ್ಲವನ್ನೂ ಚಿಕ್ಕಮ್ಮನಿಗೆ ವಿರೋಧವಾಗುವ ರೀತಿಯಲ್ಲಿ ವರ್ಣಿಸಿ ಹೇಳಿದಳು. ಗೌಡರಿಗೆ ಅಡುಗೆ ಮನೆಯ ಜಗಳಗಳೇನೂ ಅಪೂರ್ವವಾದುವಾಗಿರಲಿಲ್ಲ. ಆದರೆ ಇಂದು ಅಗ್ರಹಾರದ ಜೋಯಿಸರು ವೆಂಕಪ್ಪಯ್ಯನವರ ಮುಂದೆ ತಮಗೆ ಅವಮಾನವಾಯಿತಲ್ಲಾ ಎಂದು ಆಗಲೇ ಕಾವು ಏರಿದ್ದ ಎದೆ ಕಿಡಿಕಿಡಿಯಾಯಿತು. ಸದ್ಯಕ್ಕೆ ಹತ್ತಿರವಿದ್ದ ಪುಟ್ಟಮ್ಮನನ್ನೇ ನಿರ್ದೇಶಿಸಿ ಎಲ್ಲರಿಗೂ ತಗಲುವಂತೆ ಗಟ್ಟಿಯಾಗಿ ಬೈದರು. ಪುಟ್ಟಮ್ಮ ಕಣ್ಣೀರು ಸುರಿಸುತ್ತ ದೊಡ್ಡಮ್ಮನ ಬಳಿಗೆ ಹೋದಳು.

ಗೌಡರು ಅಡುಗೆ ಮನೆಗೆ ಹೋಗಿ ಊಟಕ್ಕೆ ಕುಳಿತುಕೊಳ್ಳುವಾಗಲೆ ಒಲೆಯ ಬಳಿ ಒದ್ದೆಯಾಗಿದ್ದ ಕೆಸರೆದ್ದಿದ್ದ ನೆಲವು ಅವರ ಕಣ್ಣಿಗೆ ಬಿತ್ತು. ಮದುವೆ ಯಾದಂದಿನಿಂದ ಹೊಸ ಹೆಂಡತಿಯ ಮೇಲೆ ಕ್ರೂರವಾಗಿ ವರ್ತಿಸಿರಲಿಲ್ಲ. ಆದರೆ ಎಷ್ಟಾದರೂ ದೊಡ್ಡವರ ಮನೆಯಲ್ಲಿಯೆ ಹುಟ್ಟಿ ಬೆಳೆದಿದ್ದ ಅವರಿಗೆ, ಹಿಂದೆ ಎರಡು ಸಾರಿಯೂ ದೊಡ್ಡ ಮನೆತನದ ಹೆಣ್ಣುಗಳನ್ನೇ ತಂದು ಮದುವೆ ಯಾಗಿ ಅವರ ಶೀಲ ಆಚಾರಗಳ ಮೇಲ್ಮೆಯನ್ನು ಅನುಭವಿಸಿದ್ದ ಅವರಿಗೆ, ಸುಬ್ಬಮ್ಮನ ವರ್ತನೆ ಅನೇಕ ಸಾರಿ ಸರಿಬಿದ್ದಿರಲಿಲ್ಲ. ಆ ಸಿಟ್ಟಿನ ಪುಡಿಗಳೆಲ್ಲಾ ಸೇರಿ ತಾಳ್ಮೆಯ ಪೊಟ್ಟಣದಲ್ಲಿ ಮೆಲ್ಲಗೆ ಸಿಡಿಮದ್ದಾಗಿತ್ತು.

ಊಟಮಾಡಲು ಪ್ರಾರಂಭಿಸಿದಾಗಲೆ ಅವರ ಮುಖ ಕ್ರೂರವಾಗಿತ್ತು. ಮೇಲೋಗರ ಸೀದುಹೋಗಿದ್ದುದು ಗೊತ್ತಾದಮೇಲಂತೂ ಕರ್ಕಶವಾಯಿತು. ಬಡಿಸುತ್ತಿದ್ದ ಹೆಂಡತಿಯನ್ನು ನೋಡಿ "ಏ! ಯಾಕೆ? ಮೇಲೋಗರ ಹೊತ್ತಿ ಹೋಗಿದೆಯಲ್ಲಾ?" ಎಂದು ಭಯಂಕರವಾಗಿ ಕೂಗಿದರು. ಆ ಪ್ರಶ್ನೆ ಮುಂದಿನ ಕಾರ್ಯಕ್ಕೆ ನೆವಮಾತ್ರವಾಗಿತ್ತು. ಸುಬ್ಬಮ್ಮ ಇನ್ನೂ ಉತ್ತರ ಹೇಳಲು ಪ್ರಾರಂಭಿಸಿರಲಿಲ್ಲ. ಚಂದ್ರಯ್ಯಗೌಡರು ಮೇಲೆದ್ದು ನಾಗಂದಿಗೆಯ ಸಂದಿಯಲ್ಲಿ ಬೆಕ್ಕನ್ನು ಹೆದರಿಸಿ ಓಡಿಸಲೆಂದು ಇಟ್ಟಿದ್ದ ಒಂದು ದಪ್ಪನೆಯ ನೆಕ್ಕಿಯ ಕೋಲನ್ನು ಎಂಜಲು ಕೈಯಿಂದಲೆ ಸೆಳೆದುಕೊಂಡು ಹೆಂಡತಿಗೆ ರಪ್ಪ ರಪ್ಪನೆ ರಕ್ಕಸವಾಗಿ ಹೊಡೆಯತೊಡಗಿದರು. ಸುಬ್ಬಮ್ಮ 'ದಮ್ಮಯ್ಯ!' ಎಂದು ಚೀರಿದಳು. ಅವಳು ಚೀರಿದಷ್ಟೂ ಹೆಚ್ಚಾಗಿಯೇ ದೆಬ್ಬೆಗಳು ಬೀಳತೊಡಗಿದುವು. ಒಂದು ನಿಮಿಷದಲ್ಲಿ ಆ ನೆಕ್ಕಿಯ ಕೋಲೂ ಕೆಲವು ಕೈ ಬಳೆಗಳೂ ಹುಡಿಯಾದುವು. ಎಡಗೈಯಿಂದ ಹೆಂಡತಿಯ ತುರುಬು ಹಿಡಿದುಕೊಂಡು ಬಲಗೈಯಿಂದ ಗುದ್ದತೊಡಗಿದರು. ನಾಗಮ್ಮ ಪುಟ್ಟಮ್ಮ ಇಬ್ಬರಿಗೂ ಸುಬ್ಬಮ್ಮನ ಸಹಾಯಕ್ಕೆ ಬರಲು ಮನಸ್ಸಾಗಿದ್ದರೂ ಗೌಡರ ಭೀಷಣ ಕ್ರೋಧಕ್ಕೆ ಹೆದರಿ, ದೂರ ಬೆಪ್ಪಾಗಿ ನಿಂತಿದ್ದರು. ಅಷ್ಟರಲ್ಲಿ ಕಾಡಿನಿಂದ ಹಿಂತಿರುಗಿ ಬಂದಿದ್ದ ಸೇರೆಗಾರ ರಂಗಪ್ಪಸೆಟ್ಟರು ಅಡುಗೆ ಮನೆಯಲ್ಲಾಗುತ್ತಿದ್ದ ಸದ್ದನ್ನು ಕೇಳಿ ಒಳಗೆ ನುಗ್ಗಿ ಬಂದು, ಗೌಡರಿಗೆ ಕೈಮುಗಿದು 'ಬೇಡ ನನ್ನೊಡೆಯ!' ಎಂದು ಬೇಡತೊಡಗಿದರು. ಹಿತ್ತಲುಕಡೆಯಿಂದ ಆಗತಾನೆ ಒಳಗೆ ಬಂದ ವಾಸುವೂ ತನ್ನ ದೊಡ್ಡಮ್ಮ ಅಕ್ಕಯ್ಯರೊಡನೆ ನಿಂತು, ಏಕೋ ಏನೋ ಅಳ ತೊಡಗಿದನು. ಪುಟ್ಟಮ್ಮನೂ ಅಳುತ್ತಿದ್ದಳು. ವಾಸು ಒಂದೇ ಒಂದು ಕ್ಷಣ ನಿಂತಿದ್ದನೋ ಏನೋ! ತಂದೆಯ ಬಳಿಗೆ ಓಡಿ "ಬೇಡ ಅಪ್ಪಯ್ಯಾ! ಬೇಡ ಅಪ್ಪಯ್ಯಾ!" ಎಂದು ಅಳತೊಡಗಿದನು. ಸುಬ್ಬಮ್ಮನಿಗಂತೂ ಒರಲುವ ಶಕ್ತಿಯೂ ಉಡುಗಿಹೋಗಿತ್ತು.

ಪರಕೀಯರಾದ ಸೇರೆಗಾರರು ಬಂದುದರಿಂದಲೂ, ಪ್ರೀತಿಯ ಮಗನ ಆರ್ತನಾದದಿಂದಲೂ, ಕೈಸೋತುದರಿಂದಲೂ ಗೌಡರು ಹಿಂದಕ್ಕೆ ಸರಿದು, ಏದುತ್ತ ನಿಂತರು. ಅವರ ತುಟಿ ನಡುಗುತ್ತಿದ್ದುವು; ಎದೆ ಉಬ್ಬಿಯುಬ್ಬಿ ಬೀಳುತ್ತಿತ್ತು; ಕಣ್ಣುಗಳರಳಿ ಕೆಂಪಾಗಿದ್ದುವು. ಗಂಡನು ತುರುಬು ಕೆದರಿದ್ದ ತಲೆಗೂದಲನ್ನು ಬಿಟ್ಟೊಡನೆ ಸುಬ್ಬಮ್ಮ ನೆಲಕ್ಕುರುಳಿದಳು!

## ೧೨

## ಕಳ್ಳಂಗಡಿ

ಓಬಯ್ಯ ಜನ್ಮವೆತ್ತಿದಾಗ ಅಣ್ಣಯ್ಯಗೌಡರು ನೆಮ್ಮದಿಯಾಗಿ ಬಾಳುವ ಸಂಸಾರಿಯಾಗಿದ್ದರು. ಕೊಟ್ಟಿಗೆಯಲ್ಲಿ ದನಕರು, ಕಣಜದಲ್ಲಿ ಬತ್ತ, ಪೆಟ್ಟಿಗೆಯಲ್ಲಿ ಒಡವೆ ವಸ್ತು, ದೇಹದಲ್ಲಿ ಬಲ, ಹೃದಯದಲ್ಲಿ ಹರುಷ, ಹಳ್ಳಿಯವರ ಗೌರವ ಸ್ನೇಹ — ಎಲ್ಲವೂ ಅವರಿಗಿದ್ದುವು. ಓಬಯ್ಯ ಸಾಧಾರಣ ಶ್ರೀಮಂತರ ಮಕ್ಕಳಂತೆಯೆ ಬೆಳೆದನು. ತನ್ನ ತಾಯಿ ಸಾಯುವಾಗ ಅವನು ತಕ್ಕಮಟ್ಟಿಗೆ ಮನೆಯ ಕೆಲಸಗಳನ್ನೆಲ್ಲ ಚೆನ್ನಾಗಿ ನೋಡಿಕೊಳ್ಳುತ್ತ ತಂದೆಗೆ ಅಚ್ಚುಮೆಚ್ಚಾಗಿದ್ದನು. ಗದ್ದೆ ತೋಟಗಳು ಅವನ ಗೆಯ್ಮೆಯಿಂದಲೆ ಊರ್ಜಿತವಾಗಿದ್ದುವೆಂದು ಎಲ್ಲರೂ ಹೇಳುತ್ತಿದ್ದರು. ಎಂದು ಅಣ್ಣಯ್ಯಗೌಡರು ಎಂಟುನೂರು ರೂಪಾಯಿ ತೆರ ತೆತ್ತು ಮೂರನೆ ಮದುವೆ ಮಾಡಿಕೊಂಡರೋ ಅಂದಿನಿಂದ ಓಬಯ್ಯನ ಮನಸ್ಸು ಮುರಿಯತೊಡಗಿತು. ತಂದೆ ಮತ್ತೆ ಮದುವೆ ಮಾಡಿಕೊಳ್ಳುವುದರಲ್ಲಿ ಅವನಿಗೆ ಸಹನೆಯಿರಲಿಲ್ಲ. ಅದರಲ್ಲಿಯೂ ಎಂಟುನೂರು ರೂಪಾಯಿ ತೆರ ತೆರುವುದು ಅವನಿಗೆ ಸಂಸಾರ ವಿನಾಶಕರವಾಗಿ ತೋರಿತು. ಮಲತಾಯಿಯೊಬ್ಬಳು ಬರುವುದೂ ಅವನಿಗೆ ಅನಿಷ್ಟವಾಗಿತ್ತು. ಅಡುಗೆಮಾಡಿ ಹಾಕುವುದಕ್ಕೆ ಹೆಣ್ಣು ಬೇಕಾಗಿದ್ದರೆ ತನಗೇ ಏಕೆ ಒಂದು ಮದುವೆ ಮಾಡಬಾರದಾಗಿತ್ತು? ತನಗಾದರೆ ಕಡಮೆ ತೆರಕ್ಕೇ ಹೆಣ್ಣು ದೊರೆಯುತಿತ್ತಲ್ಲ!

ತಂದೆಯ ತೃತೀಯ ವಿವಾಹವಾದ ಕಾಲದಿಂದ ಆತನ ಪರವಾಗಿಯೂ ಮನೆಗೆಲಸದಲ್ಲಿಯೂ ಉದಾಸೀನನಾಗಿದ್ದ ಓಬಯ್ಯ, ಆತನು ಒಂಬೈನೂರು ರೂಪಾಯಿ ತೆರ ತೆತ್ತು ನಾಲ್ಕನೆ ಮದುವೆ ಮಾಡಿಕೊಳ್ಳಲು, ಸಂಪೂರ್ಣ ವಿರೋಧಿಯಾಗಿ ವರ್ತಿಸಲಾರಂಭಿಸಿದನು. ಯುವಕನಾಗಿದ್ದ ತನಗೆ ಸುಲಭವಾಗಿ ಮದುವೆ ಮಾಡುವುದನ್ನು ಬಿಟ್ಟು, ವಯಸ್ಸು ಹೋದ ತಂದೆ ಅಷ್ಟೊಂದು ಹಣವನ್ನು ತೆರವಾಗಿ ತೆತ್ತು ತಾನೇ ಮದುವೆಯಾದುದು ಮಗನ ಈರ್ಷ್ಯಾ ಕೋಪವೈರಗಳಿಗೆ ಕಾರಣವಾಯಿತು. ತಾನು ಕಷ್ಟಪಟ್ಟು ಮುಂದಿನ ಸುಖಕ್ಕೆಂದು ದುಡಿದುದನ್ನೆಲ್ಲ ಅವಿವೇಕಿಯಾದ ತಂದೆ ದುಂದುವೆಚ್ಚ ಮಾಡಿದರೆ ಯಾವ ಮಗನು ತಾನೆ ಸಹಿಸಿಯಾನು? ಅಂದಿನಿಂದ ಅಣ್ಣಯ್ಯಗೌಡರಿಗೆ ಕಾನೂರು ಚಂದ್ರಯ್ಯಗೌಡರಲ್ಲಿ ಸಾಲ ಬೆಳೆಯುತ್ತ ಹೋಯಿತು; ಹುಟ್ಟುವಳಿ ಇಳಿಯುತ್ತ ಹೋಯಿತು. ಯುವಕನಾಗಿದ್ದರೂ ಮದುವೆಯಿಲ್ಲದೆ ತಂದೆಗೆ

ವಿರೋಧಿಯಾಗಿದ್ದ ಮಗನು ನಾನಾವಿಧದಲ್ಲಿ ದುಂದುವೆಚ್ಚ ದುರಾಚಾರಗಳಿಗೆ ಕೈಹಾಕಿದನು. ಅಣ್ಣಯ್ಯಗೌಡರು ಮನೆಯಲ್ಲಿ ಮೊದಲಿನಿಂದಲೂ ಹೆಂಡ ಮಾಡಿಕೊಂಡು ಕುಡಿಯುತ್ತಿದ್ದರು. ಆದರೆ ಹದ್ದು ಮೀರಿ ಹೋಗುತ್ತಿರಲಿಲ್ಲ. ಮನೆಯ ಮಮತೆ ಕೊನೆಗಂಡಮೇಲೆ ಓಬಯ್ಯ ಹೊರಗೆ ಹೋಗಿ ಕಳ್ಳು ಸಾರಾಯಿಗಳನ್ನು ಕುಡಿಯಲು ಮೊದಲು ಮಾಡಿದನು. ಅದರ ವೆಚ್ಚಕ್ಕಾಗಿ ಅಡಕೆ ಬತ್ತ ಮೊದಲಾದ ಪದಾರ್ಥಗಳನ್ನು ಮನೆಯಿಂದ ಗುಟ್ಟಾಗಿ ಸಾಗಿಸು ತ್ತಿದ್ದನು. ಶೇಂದಿ ಅಂಗಡಿಯಲ್ಲಿಯೂ ಹಳೆಪೈಕದ ತಿಮ್ಮನಲ್ಲಿಯೂ ಸಾಲ ವಾಯಿತು. ಅದನ್ನು ತೀರಿಸಲು ಒಡವೆ ವಸ್ತುಗಳನ್ನೂ ಕದ್ದೊಯ್ದನು. ಕಡೆಗೆ ಮದ್ಯಪಾನದ ಜೊತೆಗೆ ಕಾಮಿನೀ ಪ್ರಣಯವೂ ಆಕಸ್ಮಾತ್ತಾಗಿ ಲಭಿಸಿದುದು, ಅಭ್ಯಾಸವಾಗಿ, ಹವ್ಯಾಸವಾಗಿ ಪರಿಣಮಿಸಿತು.

ಅವನು ಒಮ್ಮೆ ಕಾನೂರಿನ ಬಳಿಯ ಕಾಡಿನಲ್ಲಿದ್ದ ಒಂದು ಹಣ್ಣಿನ ಮರಕ್ಕೆ 'ಮರಸು' ಕೂರಲು ಹೋಗಿದ್ದನು. ರಾತ್ರಿ ಎಂಟು ಗಂಟೆಯ ಹೊತ್ತಿಗೆ ಕಾರ್ಮುಗಿಲೆದ್ದು ಆಕಾಶವನ್ನೆಲ್ಲಾ ತುಂಬಿತು. ಬೆಳ್ದಿಂಗಳು ಸಂಪೂರ್ಣವಾಗಿ ಕಣ್ಮರೆಯಾಯಿತು. ಬಿರುಗಾಳಿ ಬೀಸಿತು. ಸಿಡಿಲು ಮಿಂಚು ಜೋರಾಯಿತು. ಮಳೆ ಬರುತ್ತದೆಂದು ಹೆದರಿ ಮರದ ಮೇಲಿದ್ದ ಅಟ್ಟಣೆಯಿಂದ ಕೆಳಗಿಳಿದು ಮನೆಯ ಕಡೆಗೆ ಹೊರಟನು. ಸ್ವಲ್ಪ ದೂರ ನಡೆಯುವುದರೊಳಗೆ ದೊಡ್ಡ ದೊಡ್ಡ ಹನಿಗಳು ಪಟಪಟನೆ ಬೀಳತೊಡಗಿದುವು. ಎರಡು ಫರ್ಲಾಂಗುಗಳ ದೂರದಲ್ಲಿ ಕಾನೂರು ಸೇರೆಗಾರ ರಂಗಪ್ಪಸೆಟ್ಟರ ಗಟ್ಟದಾಳುಗಳ ಬಿಡಾರ ಗಳಿದ್ದುದು ನೆನಪಿಗೆ ಬಂದು, ಆ ಕಡೆಗೆ ವೇಗವಾಗಿ ನಡೆದನು. ಅಷ್ಟರಲ್ಲಿ ಮಳೆ ಉನ್ಮತ್ತ ರಭಸದಿಂದ ಆಲಿಕಲ್ಲುಗಳನ್ನು ಬೀರುತ್ತ ಸುರಿಯತೊಡಗಿತು. ಓಬಯ್ಯ ಕೋವಿಯನ್ನು ಹೆಗಲಮೇಲೆ ಹೊತ್ತುಕೊಂಡು ಓಡಿದನು. ಎಲ್ಲ ಬಿಡಾರಗಳಿಂದಲೂ ಸ್ವಲ್ಪ ದೂರ ಪ್ರತ್ಯೇಕವಾಗಿ, ಪ್ರಶಸ್ತವಾಗಿದ್ದ ಒಂದು ಬಿಡಾರದಲ್ಲಿ ದೀಪ ಉರಿಯುತ್ತಿದ್ದುದು ಅವನ ಕಣ್ಣಿಗೆ ಬಿದ್ದು, ಅದರೊಳಗೆ ನುಗ್ಗಿದನು.

ಅದು ಸೇರೆಗಾರ ರಂಗಪ್ಪಸೆಟ್ಟರ ಪ್ರೇಯಸಿ ಗಂಗೆಯ ಬಿಡಾರವಾಗಿತ್ತು. ಸೇರೆಗಾರರು ಸಾಧಾರಣವಾಗಿ ರಾತ್ರಿಗಳನ್ನೆಲ್ಲ ಆ ಬಿಡಾರದಲ್ಲಿಯೆ ಕಳೆಯ ಬೇಕಾಗಿದ್ದುದರಿಂದ ಗಂಗೆಗೆ ಇತರ ಆಳುಗಳಿಗಿಂತಲೂ ಹೆಚ್ಚಾಗಿ ಎಂದರೆ, ಎರಡು ಅಂಕಣದಷ್ಟು ಅಗಲದ ಬಿಡಾರವನ್ನು ಉಳಿದೆಲ್ಲರ ಬಿಡಾರಗಳಿಗಿಂತಲೂ ಒಂದಿಷ್ಟು ಚೆನ್ನಾಗಿ ಕಟ್ಟಿಸಿಕೊಟ್ಟಿದ್ದರು.

ಸಾಲಂಕೃತಳಾದ ಗಂಗೆ ಸೇರೆಗಾರರಿಗಾಗಿ ಕಾಯುತ್ತಿದ್ದಳು. ಏಕೆಂದರೆ ಅವರ

ಊಟಗೀಟಗಳೆಲ್ಲ ಚಂದ್ರಯ್ಯಗೌಡರ ಮನೆಯಲ್ಲಿಯೆ ನಡೆಯುತ್ತಿತ್ತು. ಅವರ ಮನೆಯೆ ಸೇರೆಗಾರರಿಗೆ ಮುಖ್ಯವಾಸವೂ ಆಗಿತ್ತು. ಗಂಗೆಯ ಬಿಡಾರ ರಾತ್ರಿಯ 'ಉಪಾವಾಸ' ಮಾತ್ರವಾಗಿತ್ತು. ಸೆಟ್ಟರು ರಾತ್ರಿಯೂಟ ಪೂರೈಸಿಕೊಂಡು ಗೌಡರೊಡನೆ ಮಾತುಕತೆಯಾಡಿದ ಮೇಲೆ ಉಳಿದ ಬಿಡಾರಗಳಲ್ಲಿ ಆಳುಗಳೆಲ್ಲರೂ ನಿದ್ದೆಹೋದ ತರುವಾಯ ಸದ್ದಿಲ್ಲದೆ ಗಂಗೆಯ ಬಿಡಾರಕ್ಕೆ ಬರುವುದು ವಾಡಿಕೆಯಾಗಿತ್ತು. ಆ ದಿನವೂ ಗಂಗೆ ತನ್ನೂಟ ಮುಗಿದಮೇಲೆ 'ವಾಸಕಸಜ್ಜಿಕೆ'ಯಾಗಿ ಕಾಯುತ್ತಿದ್ದಳು. ಮೋಡ ಮುತ್ತಿ, ಸಿಡಿಲು ಮಿಂಚು ತೋರಲು ಅವಳಿಗೆ ಗಾಬರಿಯಾಯಿತು, ಪ್ರಿಯನು ಬರತ್ತಾನೋ ಇಲ್ಲವೋ ಎಂದು. ಅಷ್ಟರಲ್ಲಿಯೆ ಮಳೆಯೂ ಭರದಿಂದ ಸುರಿಯತೊಡಗಿತು. ಆಕೆ ಆಸೆಗೆಟ್ಟು ನಿಟ್ಟುಸಿರುಬಿಟ್ಟಳು. ಅಷ್ಟರಲ್ಲಿ ಯಾರೋ ಹೊರಗಡೆ ಬಿಡಾರದ ತಡಿಕೆಯ ಬಾಗಿಲನ್ನು ತಟ್ಟಿದರು. ಉತ್ಕಂಠಿತೆಯಾದ ಗಂಗೆ ಬಾಗಿಲು ತೆರೆದು ನಿಕ್ಕಳಿಸಿ ನೋಡುತ್ತಾಳೆ: ಸೇರೆಗಾರರಲ್ಲ; ಕೆಳಕಾನೂರು ಅಣ್ಣಯ್ಯಗೌಡರ ಮಗ ಓಬಯ್ಯಗೌಡರು!

ಗಂಗೆ ಹಾಕಿದ ಚಾಪೆಯ ಮೇಲೆ ಓಬಯ್ಯ ಕುಳಿತು, ಓಡಿಬಂದ ಆಯಾಸವನ್ನು ಪರಿಹರಿಸಿಕೊಂಡು, ಮುಖದಮೇಲಿದ್ದ ಹನಿಗಳನ್ನು ಒರಸಿಕೊಂಡನು; ಗಂಗೆಯ ಪ್ರಶ್ನೆಗೆ ಉತ್ತರವಾಗಿ ತಾನು ಅಲ್ಲಿಗೆ ಬಂದುದಕ್ಕೆ ಕಾರಣವನ್ನೂ ಹೇಳಿದನು. ಹೊರಗಡೆ ಮಳೆ, ಗಾಳಿ, ಮಿಂಚು, ಸಿಡಿಲು ಭಯಂಕರವಾಗಿತ್ತು. ಗಂಗೆ ಸೆಟ್ಟರ ಆಗಮನದ ಆಸೆಯನ್ನು ಸಂಪೂರ್ಣವಾಗಿ ತೊರೆದುಬಿಟ್ಟಳು. ಓಬಯ್ಯ ಬಂದುದೂ ಆಕೆಗೆ ಸುಕೃತವಾಗಿಯೆ ತೋರಿತು. ಗಂಗೆಯ ಕಣ್ಣಿಗೆ ಯುವಕನು ಅಕ್ಷತವಾದ ರಸಾಲಫಲದಂತೆ ಕಾಣಿಸಿದನು. ಪ್ರಣಯ ವಿದಗ್ಧೆಯಾಗಿದ್ದ ಆಕೆಗೆ ಮುಗ್ಧನಾದೊಬ್ಬ ಯುವಕನನ್ನು ತನ್ನ ಬಲೆಗೆ ಬೀಳುವಂತೆ ಮಾಡುವುದು ಅಷ್ಟೇನೂ ಸಾಹಸವಾಗಿ ಕಾಣಲಿಲ್ಲ. ಓಬಯ್ಯನೂ ಅಷ್ಟೇನೂ ವೈರಾಗ್ಯದ ಸ್ಥಿತಿಯಲ್ಲಿರಲಿಲ್ಲ.

ಗಂಗೆ ಓಬಯ್ಯನು ಕುಳಿತಿದ್ದ ಚಾಪೆಯ ಮೇಲೆಯೆ ಒಂದು ಪಕ್ಕದಲ್ಲಿ ಕುಳಿತು ಮಾತುಕತೆಯಾಡತೊಡಗಿದಳು. ಅವಳ ಕಣ್ಣು ಹುಬ್ಬು ತುಟಿ ಕೆನ್ನೆಯಾಗಿ ಶರೀರವೆಲ್ಲವೂ ಪತಂಗವನ್ನೆ ಮೋಹಿಸುವ ಲೀಲಾಮಯ ಜ್ವಾಲೆಯಂತೆ ಚಂಚಲ ಮೋಹಕವಾಯಿತು. ಆದರೆ ಓಬಯ್ಯನ ಭಾವದಲ್ಲಿ ಮೊದಮೊದಲು ಯಾವ ವಕ್ರತೆಯೂ ಇರಲಿಲ್ಲ. ಮಳೆ ನಿಲ್ಲುವವರೆಗೂ ಮಾತಾಡಬೇಕೆಂದು ಮಾತ್ರ ಮಾತಾಡುತ್ತಿದ್ದನು. ಆದರೆ ಗಂಗೆಯ ಮಾಯೆ ತುಂಬು ಜೌವನದ ಯುವಕನನ್ನು ಬಹಳ ಹೊತ್ತು ಮುಗ್ಧವಾಗಿರಲು ಬಿಡಲಿಲ್ಲ. ಅವಳು ಆ ಮಾತು ಈ ಮಾತು ತೆಗೆದು ಓಬಯ್ಯನ ಮದುವೆಯ ಮಾತು ತೆಗೆದಳು.

ಉದಾಸಭಾವದಿಂದ ಮಾತಾಡುತ್ತಿದ್ದ ಓಬಯ್ಯನು ಭಾವಪೂರ್ವಕವಾಗಿ ಮಾತಾಡ ತೊಡಗಿದನು. ಅವರು ಮಾತಾಡುತ್ತಿದ್ದ ವಿಷಯವು ಸಿಡಿಮದ್ದಿನಂತೆ ಅವರ ಮಧ್ಯೆ ಇತ್ತು. ಗಂಗೆ ಓಬಯ್ಯರು ಬೆಂಕಿಯ ಬತ್ತಿಗಳಂತೆ ಆಚೆಗೂ ಈಚೆಗೂ ಕುಳಿತಿದ್ದರು. ಮಾತಾಡುತ್ತ ಆಡುತ್ತ ಇದ್ದಕ್ಕಿದ್ದ ಹಾಗೆ ಓಬಯ್ಯನ ಮುಖಕ್ಕೆ ನೆತ್ತರೇರಿತು; ಎದೆ ಬೆಚ್ಚಿತು; ಮೈಬೆವರಿತು. ಅವನಿಗೂ ಅದರ ಅರ್ಥ ವಾಯಿತು. ಅದುವರೆಗೂ ಇರದಿದ್ದ ಭಾವವೊಂದು ಅವನ ಮನಸ್ಸಿನಲ್ಲಿ ಮಿಂಚಿತು. ವಿಚಕ್ಷಣಳಾದ ಗಂಗೆಗೂ ಅದು ತಿಳಿಯದೆ ಹೋಗಲಿಲ್ಲ. ಒಂದೆರಡು ಮಾತಾಡಿ, ತಡಿಕೆಯ ಒಳಗೆ ಹೋಗಿ, ಕಾಯಿಸಿ ಹದಮಾಡಿದ್ದ ಸಿಹಿಯಾದ ನೊರೆಗಳ್ಳನ್ನು ತಂದುಕೊಟ್ಟಳು. ಓಬಯ್ಯನಿಗೂ ಮಳೆಯಲ್ಲಿ ತೊಯ್ದು ಚಳಿಯಾಗಿದ್ದುದರಿಂದ, ಚೆನ್ನಾಗಿ ಹೀರಿಬಿಟ್ಟನು. ಆಮೇಲೆ ಎಲೆಯಡಕೆ ನೀಡಿದಳು; ಅದನ್ನೂ ಸ್ವೀಕರಿಸಿದನು. ಮಳೆಯಲ್ಲಿ ಮನೆಗೆ ಹೋಗುವುದು ಸಾಧ್ಯವಿಲ್ಲ, ಅಲ್ಲಿಯೇ ಮಲಗುವುದು ಲೇಸು ಎಂದಳು. ಓಬಯ್ಯ ಅದಕ್ಕೂ ಸಮ್ಮತಿಸಿದನು. ಅವನಿಗಿನ್ನೂ ತನ್ನ ಸಮ್ಮತಿಯ ಅರ್ಥವೂ ಪರಿಣಾಮವೂ ಸಂಪೂರ್ಣವಾಗಿ ಮನಸ್ಸಿಗೆ ಹೊಳೆದಿರಲಿಲ್ಲ.

ಬಿಡಾರದ ತಡಿಕೆಯ ಬಾಗಿಲು ಹಾಕಿತು; ದೀಪವಾರಿತು. ಹೊರಗಡೆ ಮುಂಗಾರು ಮಳೆಯೂ ಗಾಳಿಯೂ ಮಿಂಚು ಸಿಡಿಲುಗಳೂ ಹುಚ್ಚೆದ್ದು ತಾಂಡವಗೈಯುತ್ತಿದ್ದುವು.

ಬೆಳಿಗ್ಗೆ ಮುಂಜಾನೆ ಗಂಗೆಯ ಬಿಡಾರದಿಂದ ಹೊರಬಿದ್ದ ಓಬಯ್ಯ ಹಿಂದಿನ ದಿನದ ಹುಡುಗನಾಗಿರಲಿಲ್ಲ. ಅವನಿಗೆ ನವಾನುಭವದ ಮಧುರ ಪ್ರಪಂಚ ವೊಂದು ಪ್ರತ್ಯಕ್ಷವಾಗಿತ್ತು. ಆಗ ಅವನಿಗೆ ಅರ್ಥವಾಯಿತು, ತನ್ನ ತಂದೆ ಅಪಾರ ಧನ ವ್ಯಯ ಮಾಡಿ ನಾಲ್ಕು ಮದುವೆಗಳಾದುದೇಕೆ ಎಂದು! ಅಂದಿನಿಂದ ಅವನ ವೆಚ್ಚ ಇಮ್ಮಡಿಯಾಯಿತು. ದಿನದಿಂದ ದಿನಕ್ಕೆ ಅಧೋ ಗತಿಗಿಳಿಯುತ್ತ ಹೋದನು.

* * * *

ತಂಗಿಯ ಕೈಕಡಗವನ್ನು ಈಸಿಕೊಂಡು ಮನೆಯಿಂದ ಹೊರಟ ಓಬಯ್ಯ ನೆಟ್ಟಗೆ ಸೀತೆಮನೆಗೆ ಹೋದನು. ತೀರ್ಥಹಳ್ಳಿಗೆ ಹೋಗಿದ್ದ ಸಿಂಗಪ್ಪಗೌಡರು ಇನ್ನೂ ಹಿಂತಿರುಗಲಿಲ್ಲ ಎಂದು ಗೊತ್ತಾಗಿ, ಅಲ್ಲಿಯೇ ಊಟ ಕತ್ತರಿಸಿ, ಹಗಲು ನಿದ್ದೆ ಮಾಡಿಕೊಂಡು, ಅಗ್ರಹಾರಕ್ಕೆ ಹೊರಟನು. ಬಿಸಿಲಿನಲ್ಲಿ ಬಾಯಾರಿಕೆ ಯಾಗಲು ಕಳ್ಳಂಗಡಿಯ ನೆನಪಾಯಿತು. ಅಂಗಡಿಯವನಲ್ಲಿ ಸಾಲವಾಗಿದ್ದು ದರಿಂದಲೂ ಸಾಲ ತೀರಿಸದೆ ಕಳ್ಳು ಕೊಡುವುದಿಲ್ಲವೆಂದು ಹಿಂದೆ ಹೇಳಿದ್ದುದ

ರಿಂದಲೂ ಸಾಲಕ್ಕೆ ತಗಾದೆ ಮಾಡುತ್ತಿದ್ದುದರಿಂದಲೂ ಓಬಯ್ಯನು ಅಲ್ಲಿಗೆ ಹೋಗಲು ಹಿಂಜರಿದನು. ಮತ್ತೆ ಜೇಬಿನಲ್ಲಿದ್ದ ಬೆಳ್ಳಿಯ ಕಡಗದ ನೆನಪು ಬಂದು ಅವನ ಕಣ್ಣು ನವಪ್ರಭೆಯಿಂದ ಮಿಂಚಿತು. ಆದರೆ ದೇವರ ಕಾಣಿಕೆ ಎಂದು ಹೆದರಿ ಹಿಂಜರಿದನು. ಅವನು ಪತಿತನಾಗಿದ್ದನೇ ಹೊರತು ಇನ್ನೂ ಧೂರ್ತನಾಗಿರಲಿಲ್ಲ. ಭೀತಿಯ ಸಹಾಯದಿಂದ ಪ್ರಲೋಭವನ್ನು ಗೆದ್ದು ಅಗ್ರಹಾರಕ್ಕೆ ಹೋದನು.

ಅಗ್ರಹಾರ ತುಂಗಾತೀರದಲ್ಲಿದ್ದು, ನೋಡಲು ಒಂದು ರಮಣೀಯ ಸ್ಥಾನ ವಾಗಿತ್ತು. ಎದುರಿಗೆ ನಿರ್ಮಲವಾಗಿ ಗಗನ ಪ್ರತಿಬಿಂಬಕವಾಗಿದ್ದ ತುಂಗೆಯ ನೀಲಿ ನೀರಿನ ಹೊನಲೂ, ನುಣ್ಣನೆಯ ಬಿಳಿ ಮಳಲರಾಶಿಯೂ, ಹೊಳೆಯ ನಡುವೆ ಅಲ್ಲಲ್ಲಿ ಮೇಲೆದ್ದು ನೀರಿನಲ್ಲಿ ಬಿದ್ದಿರುವ ಆನೆಗಳಂತೆ ತೋರುವ ಹೆಬ್ಬಂಡೆ ಕಿರುಬಂಡೆಗಳೂ, ಹೊಳೆಯ ಅಂಚಿನಿಂದ ಪ್ರಾರಂಭವಾಗಿ ನೀಲಾಕಾಶದ ದಿಗಂತ ದವರೆಗೂ ಹಬ್ಬಿದಂತೆ ತೋರುತ್ತಿದ್ದ ಹಸುರಾದ ಅರಣ್ಯ ಶ್ರೇಣಿಯೂ ಅಗ್ರಹಾರ ವನ್ನು ಮನೋಹರ ದೃಶ್ಯವನ್ನಾಗಿ ಮಾಡಿದ್ದುವು. ಹೊಳೆಯ ದಡದಲ್ಲಿಯೆ ಚಂದ್ರಮೌಳೇಶ್ವರನ ಗುಡಿಯೂ, ಅದಕ್ಕೆ ಸಮೀಪದಲ್ಲಿಯೆ ಕೈಹೆಂಚು ಹೊದ್ದಿಸಿದ್ದ ವೆಂಕಪ್ಪಯ್ಯಜೋಯಿಸರ ಮನೆಯೂ ಇದ್ದುವು. ಮನೆಯ ಹೊರಭಾಗ ಚೊಕ್ಕಟವಾಗಿಯೂ, ರಂಗವಲ್ಲಿಯಿಂದ ಶೋಭಿತವಾಗಿಯೂ, ಬ್ರಾಹ್ಮಣರ ಮನೆ ಎಂದೆನಿಸಿಕೊಳ್ಳುವುದಕ್ಕೆ ಯೋಗ್ಯವಾಗಿಯೂ ಇತ್ತು. ಬೇಲಿಯ ಮೇಲೆ ಕೆಂಪು ಮತ್ತು ಕಪ್ಪು ಬಣ್ಣದ ಸೀರೆಗಳನ್ನೂ ಪಂಚೆಗಳನ್ನೂ ಹರಡಿದ್ದರು.

ಅಂಗಳದಲ್ಲಿ ಆಡುತ್ತಿದ್ದ ಇಬ್ಬರು ಹುಡುಗರು ಓಬಯ್ಯನನ್ನು ಕಂಡೊಡನೆಯೆ ಶೂದ್ರನು ಬಂದನೆಂದು ಆಟವನ್ನು ಬಿಟ್ಟು ದೂರ ಹೋಗಿ ನಿಂತರು. ಓಬಯ್ಯ ಅವರನ್ನು ಮಾತಾಡಿಸಿದನು. ವೆಂಕಪ್ಪಯ್ಯನವರು ಮನೆಗೆ ಬಂದಿಲ್ಲವೆಂದು ಗೊತ್ತಾಯಿತು. ಓಬಯ್ಯನು ನೀರಡಿಕೆಯಾಗುತ್ತದೆ ಎಂದು ಹೇಳಿದ್ದರಿಂದ, ಒಬ್ಬ ಹುಡುಗನು ಚೊಂಬಿನಲ್ಲಿ ತಣ್ಣೀರನ್ನೂ ಒಂದು ಸಣ್ಣ ಬಾಳೆಯ ಕೀತಿನಲ್ಲಿ ಕೆಂಬಣ್ಣದ ಜೋನಿಬೆಲ್ಲವನ್ನೂ ತಂದು ದೂರ ನಿಂತನು. ಓಬಯ್ಯ ಹತ್ತು ಹೆಜ್ಜೆ ಹಿಂದಕ್ಕೆ ಸರಿದು ನಿಲ್ಲಲು, ಹುಡುಗನು ಮುಂದಕ್ಕೆ ಬಂದು ಚೊಂಬನ್ನೂ ಎಲೆಯನ್ನೂ ಅಂಗಳದಲ್ಲಿ ಇಟ್ಟು, ಮತ್ತೆ ಹಿಂದಕ್ಕೆ ಹೋದನು. ಇನ್ನೊಬ್ಬ ಹುಡುಗನು "ಕಚ್ಚಿಕೊಂಡು ಕುಡಿಯಬೇಡೋ, ಎತ್ತಿಕೊಂಡು ಕುಡಿ" ಎಂದನು. ಓಬಯ್ಯ ನಡು ನಡುವೆ ಬೆಲ್ಲವನ್ನು ತಿನ್ನುತ್ತ ಚೊಂಬನ್ನು ಎತ್ತಿಕೊಂಡೇ ನೀರು ಕುಡಿದನು. ಪಾತ್ರೆಯನ್ನು ಎತ್ತಿ ಕುಡಿಯುವ ಅಭ್ಯಾಸವಿಲ್ಲದುದರಿಂದ ನೀರು ಮುಖದ ಮೇಲೆಯೂ ಅಂಗಿಯ ಮೇಲೆಯೂ ಬಿದ್ದು ಹರಿದುಹೋಯಿತು.

ಬ್ರಾಹ್ಮಣ ಬಾಲಕರು ಅದನ್ನು ನೋಡಿ ಜುಗುಪ್ಸೆ ತಾಳಿದರು. ಶೂದ್ರರ ವಿಚಾರದಲ್ಲಿ ಅವರಿಗೆ ಹಿರಿಯರು ಕಲಿಸಿದ್ದ ತಿರಸ್ಕಾರ ಮತ್ತಿನಿತು ಹೆಚ್ಚಾಯಿತು.

ವೆಂಕಪ್ಪಯ್ಯನವರು ಸಿಕ್ಕದಿದ್ದುದರಿಂದ ಚಂದ್ರಮೌಳೇಶ್ವರನಿಗೆ ಕಾಣಿಕೆಯರ್ಪಿಸಿ ಪೂಜೆಮಾಡಿಸಲು ಸಾಧ್ಯವಾಗದೆ ಓಬಯ್ಯನು ದೇವಾಲಯದ ಬಳಿಗೆ ಹೋಗಿ ಹೊರಗಡೆಯಿಂದಲೆ ದೇವರಿಗೆ ಕೈಮುಗಿದನು. ಅಲ್ಲಿಂದ ಸೋಪಾನಗಳನ್ನಿಳಿದು ಹೊಳೆಯ ಬುಡಕ್ಕೆ ಹೋದನು. ಅಲ್ಲಿ ತಿಂಡಿ ಹಾಕಿ ಸಾಕಿದ್ದ ದೊಡ್ಡ ಸಣ್ಣ ಮೀನುಗಳು ನೂರಾರು ಕಾಣಿಸಿಕೊಂಡವು. ಬ್ರಾಹ್ಮಣರು ಮಾತ್ರವೇ ಉಪಯೋಗಿಸುತ್ತಿದ್ದ ಆ ಘಟ್ಟದಲ್ಲಿ ಮೀನುಗಳಿಗೆ ಯಾವ ಅಪಾಯವೂ ಇರದಿದ್ದುದರಿಂದಲೂ, ದೇವರ ಮೀನುಗಳಾಗಿ ಆಗಾಗ ಅಲ್ಲಿಗೆ ಬಂದವರೆಲ್ಲ ಅಕ್ಕಿ, ಬಾಳೆಹಣ್ಣು, ತೆಂಗಿನಕಾಯಿಯ ಚೂರುಗಳು ಮೊದಲಾದ ಪದಾರ್ಥಗಳನ್ನು ಹಾಕುತ್ತಿದ್ದುದರಿಂದಲೂ ಆ ಸ್ಥಳದಲ್ಲಿ ಸಾವಿರಾರು ಮೀನುಗಳು ಬಹಳ ಸಲಿಗೆಯಿಂದ ಇದ್ದುವು. ದೇವರ ಮೀನುಗಳೆಂದು ಶೂದ್ರರಾರೂ ಅವುಗಳ ತಂಟೆಗೇ ಹೋಗುತ್ತಿರಲಿಲ್ಲ. ಅಲ್ಲಿಯ ಮೀನುಗಳನ್ನು ಕೊಯ್ದು ಪಲ್ಯ ಮಾಡಿದರೆ ಸಗಣಿಯಾಗಿ ಬಿಡುತ್ತದೆ ಎಂದು ಅನೇಕರು ಹೇಳಿಕೊಳ್ಳುತ್ತಿದ್ದರು. ಅದು ಓಬಯ್ಯನಿಗೂ ಗೊತ್ತಿತ್ತು. ಅವನು ನೀರಿನ ಬಳಿಗೆ ಹೋಗಲು ಅನೇಕ ಮೀನುಗಳು ಯಾರೋ ತಿಂಡಿ ಹಾಕಲು ಬಂದರೆಂದು ಭಾವಿಸಿ ಓಡಿಬಂದುವು. ಕೆಲವು ಮೀನುಗಳಂತೂ ನಾಲ್ಕೈದು ಅಡಿ ಉದ್ದವಾಗಿ ಒಂದೆರಡು ಅಡಿ ಅಗಲವಾಗಿದ್ದುವು. ಸುತ್ತ ನೋಡಿದಾಗ ಓಬಯ್ಯನ ಕಣ್ಣಿಗೆ ಯಾರೂ ಕಾಣಿಸಲಿಲ್ಲ. ಎಲೆಯಡಕೆಯ ಜೇಬಿನಿಂದ ಹೊಗೆಸೊಪ್ಪನ್ನು ತೆಗೆದು ಸುಣ್ಣದೊಂದಿಗೆ ಸೇರಿಸಿ ತಿಕ್ಕಿ ಒಂದು ಗುಳಿಗೆ ಮಾಡಿ ನೀರಿಗೆ ಎಸೆದನು. ಇಪ್ಪತ್ತು ಮೂವತ್ತು ಮೀನುಗಳು ಯಾವುದೋ ತಿಂಡಿ ಎಂಬ ಭ್ರಾಂತಿಯಿಂದ ಅದಕ್ಕೆ ಎರಗಿದುವು. ಅಗ್ರಹಾರದ ಪ್ರಜೆಗಳಂತೆ ಹೊಟ್ಟೆಬಾಕವಾಗಿದ್ದ ಆ ಮತ್ಸ್ಯಗಳಿಗೆ ಭಕ್ಷ್ಯಾಭಕ್ಷ್ಯ ವಿವೇಕವಿಚಾರ ಪ್ರಾಯಶಃ ಮರೆತುಹೋಗಿದ್ದಿತೋ ಏನೋ! ಓಬಯ್ಯ ಹೊಗೆಸೊಪ್ಪನ್ನು ಎಸೆದ ಒಂದೆರಡು ನಿಮಿಷಗಳಲ್ಲಿ ಒಂದು ಸಾಧಾರಣಗಾತ್ರದ ಮೀನು ಹೊಟ್ಟೆ ಮೇಲಾಗಿ ಬಡಬಡನೆ ಒದ್ದಾಡಿಕೊಂಡು ಚಿಮ್ಮಿ ದಡಕ್ಕೆ ಬಿದ್ದಿತು. ತಲೆವಸ್ತ್ರವನ್ನು ತೆಗೆದು ಬಿಚ್ಚಿ, ಬೇಗಬೇಗನೆ ಆ ಮೀನನ್ನು ಅದರಲ್ಲಿ ಸುತ್ತಿ, ಬಗಲಿಗೆ ಹಾಕಿಕೊಂಡು, ಕಳ್ಳಹಾದಿಯಲ್ಲಿ ಹೊರಟನು. ಬಗಲಲ್ಲಿದ್ದ ಮೀನು ಪ್ರಾಣಸಂಕಟದಿಂದ ಕ್ಷಣ ಕ್ಷಣಕ್ಕೂ ನಿಮಿರುತ್ತಿತ್ತು. ಅದು ನಿಮಿರಿದಂತೆಲ್ಲ ಓಬಯ್ಯನು ಬಲವಾಗಿ ಅದುಮುತ್ತಿದ್ದನು. ಸ್ವಲ್ಪ ದೂರ ನಡೆಯುವುದರೊಳಗೆ ಪ್ರಾಣ ತಟಸ್ಥವಾಯಿತು. ಹೊತ್ತು ಬೈಗಾಗುತ್ತಿತ್ತು.

ಮುತ್ತಳ್ಳಿಗೂ ಕಾನೂರಿಗೂ ಮಧ್ಯೆ ಒಂದು ಕಳ್ಳಂಗಡಿಯಿತ್ತು. ಅಲ್ಲಿಗೆ ಸುಮಾರು ಏಳೆಂಟು ಮೈಲಿಗಳ ದೂರದಿಂದಲೂ ಗಿರಾಕಿಗಳು ಬರುತ್ತಿದ್ದರು. ಸಾಯಂಕಾಲದಿಂದ ಪ್ರಾರಂಭವಾಗಿ ರಾತ್ರಿ ಎಂಟು ಒಂಬತ್ತು ಗಂಟೆಯವರೆಗೂ ಆ 'ಕಾಡುಮಜ್ಜಿಗೆಯ ಹೋಟೆಲಿ'ನಲ್ಲಿ ಜನಸಂದಣಿಯೂ ಗಲಭೆಯೂ ಹರಟೆ ಹೊಡೆದಾಟಗಳೂ ತಪ್ಪುತ್ತಿರಲಿಲ್ಲ. ಆ ಅಂಗಡಿಯವನು ಕಳ್ಳಿಗೆ ಮತ್ತು ಬರುವುದಕ್ಕಾಗಿ ಏನೇನೋ ಗಿಡಮೂಲಿಕೆಗಳನ್ನೂ ಸೇರಿಸುತ್ತಿದ್ದುದರಿಂದ ಅವನ ಕಳ್ಳು ಎಂದರೆ ಜನರು ಬಿದ್ದು ಸಾಯುತ್ತಿದ್ದರು. ಗಿರಾಕಿಗಳಲ್ಲಿ ಮುಖ್ಯರಾದವರೆಂದರೆ ಕಾನೂರು ಚಂದ್ರಯ್ಯಗೌಡರ ಆಳುಗಳು, ಮುತ್ತಳ್ಳಿ ಶ್ಯಾಮಯ್ಯಗೌಡರ ಆಳುಗಳು, ಸೀತೆ ಮನೆ ಸಿಂಗಪ್ಪಗೌಡರ ಆಳುಗಳು. ಒಕ್ಕಲುಗಳಲ್ಲಿಯೂ ಅನೇಕರು ಅಲ್ಲಿಗೆ ಆಗಾಗ ಬಂದು ಹೋಗುವ ಪದ್ಧತಿಯಿತ್ತು. ಆಳುಗಳಂತೂ ತಮ್ಮ ಹೊಟ್ಟೆಗೆ ಅನ್ನವಿಲ್ಲದಿದ್ದರೂ ತಮ್ಮ ಹೆಂಡಿರು ಮಕ್ಕಳಿಗೆ ಕೂಳಿಲ್ಲದಿದ್ದರೂ ಲೆಕ್ಕಿಸದೆ ದಿನಗೂಲಿಯ ಬತ್ತವನ್ನು ಕಳ್ಳಂಗಡಿಗೆ ಸುರಿದು ಉನ್ಮತ್ತರಾಗಿ ಹಿಂದಿರುಗುತ್ತಿದ್ದರು. ಕೆಲವು ಸಾರಿ ಕತ್ತಿ ಹಾರೆ ಗುದ್ದಲಿ ಮೊದಲಾದ ಸಾಮಾನುಗಳನ್ನೂ ಕದ್ದು ತಂದುಕೊಟ್ಟು ಕಳ್ಳು ಹೆಂಡಗಳನ್ನು ಕುಡಿಯುತ್ತಿದ್ದರು.

ಅಗ್ರಹಾರದಿಂದ ದೇವರ ಮೀನನ್ನು ಬಗಲಿಗೆ ಹಾಕಿಕೊಂಡು ಹೊರಟ ಓಬಯ್ಯ ಕಳ್ಳಂಗಡಿಯಿದ್ದ ಹಾದಿಯಿಂದಲೆ ಹೋಗಲು ಮನಸ್ಸು ಮಾಡಿದನು. ಏಕೆಂದರೆ, ಅದು ಸಮೀಪದ ಹಾದಿಯಾಗಿತ್ತು. ಒಂದುವೇಳೆ ಗುರುತಿನವರು ಯಾರಾದರೂ ಅಲ್ಲಿದ್ದರೆ ಏನಾದರೂ ಸ್ವಲ್ಪ ಪ್ರಯೋಜನವಾಗಬಹುದೆಂದು ಆತನಿಗೊಂದು ದೂರದಾಸೆಯೂ ಇತ್ತು. ಅವನು ಕಳ್ಳಂಗಡಿಯ ಬಳಿಗೆ ಬರುವಷ್ಟರಲ್ಲಿ ಬೈಗು ಕಪ್ಪಾಗಿತ್ತು. ಹುಲ್ಲಿನ ಮಾಡು ಬಹಳ ಕೆಳಕ್ಕೆ ಬಾಗಿದ್ದ ಅಂಗಡಿಯ ಒಳಭಾಗದಲ್ಲಿ ದೀಪ ಹೊತ್ತಿಸಿದ್ದುದು ಅಲ್ಲಿದ್ದ ಕೆಂಬೆಳಕಿನಿಂದ ಗೊತ್ತಾಗುತ್ತಿತ್ತು. ಅಂಗಡಿಯ ಒಳಗೂ ಹೊರಗೂ ಹಲವು ಜನರು ನೆರೆದಿದ್ದರು; ಒಳಗೆ ಮೇಲು ಜಾತಿಯವರು, ಹೊರಗೆ ಕೀಳು ಜಾತಿಯವರು. ಅಂಗಡಿಯವನು ತನ್ನ ಮಗನೊಂದಿಗೆ ಮದ್ಯವಿನಿಯೋಗದ ಕಾರ್ಯದಲ್ಲಿ ತೊಡಗಿದ್ದನು. ಅವನ ಹೆಂಡತಿಯೂ ಗಿರಾಕಿಗಳಿಗಾಗಿ ಒಳಗಡೆ ಮಾಂಸ, ಉಪ್ಪುಮೀನು, ಮೊಟ್ಟೆ ಮೊದಲಾದ ವ್ಯಂಜನಗಳನ್ನು ಬೇಯಿಸುತ್ತಿದ್ದಳು ಎಂಬುದು ಕಳ್ಳು ಹೆಂಡಗಳ ವಾಸನೆಯೊಂದಿಗೆ ಸೇರಿಬರುತ್ತಿದ್ದ ಚಾಕಣದ ಕಂಪಿನಿಂದ ತಿಳಿಯುತ್ತಿತ್ತು.

ಅಲ್ಲಿ ಸೇರಿದ್ದವರಿಗೆಲ್ಲರಿಗೂ ಓಬಯ್ಯನ ಗುರುತಿತ್ತು. ಓಬಯ್ಯನಿಗೂ ಅನೇಕರ ಗುರುತು ಸಿಕ್ಕಿತು. ಕೆಲವರು ಅಂಗಳದಲ್ಲಿ ಗುಂಪುಗುಂಪಾಗಿ ಕುಳಿತು ಉಪ್ಪುಮೀನು ಮತ್ತು ಮಾಂಸದ ತುಂಡುಗಳನ್ನು ಕಚ್ಚಿ ಎಳೆದು ಜಗಿಯುತ್ತ,

ನಡುನಡುವೆ ಹೆಂಡ ಕುಡಿದು ಹರಟೆ ಹೊಡೆದು ಕೇಕೆಹಾಕಿ ನಗುತ್ತಿದ್ದರು. ಒಳಗಡೆ ಕೆಲವರು ಕಳ್ಳು ಕುಡಿಯುವುದರಲ್ಲಿಯೂ ಇಸ್ಪೀಟು ಆಡುವುದರಲ್ಲಿಯೂ ತನ್ಮಯರಾಗಿದ್ದರು. ಮುತ್ತಳ್ಳಿಯ ನಂಜನು ತಾನೊಬ್ಬನೆ ಪ್ರತ್ಯೇಕವಾಗಿ ಒಂದು ಕಾಲು ಮಣೆಯ ಮೇಲೆ ಕುಳಿತು ಎಡದ ಕೈಯಲ್ಲಿ ಕರಟದ ಚಿಪ್ಪಿನಲ್ಲಿದ್ದ ಹುರಿಮಾಂಸವನ್ನು ತಿನ್ನುತ್ತ ಎದುರಿಗಿದ್ದ ಹೆಂಡದ ಮೊಗೆಯನ್ನೇ ಎವೆಯಿಕ್ಕದೆ ನಿಟ್ಟಿಸುತ್ತ, ನಡುನಡುವೆ ಹಲ್ಲಿಗೆ ಅಡಚಣೆಯಾದ ಎಲುಬಿನ ಚೂರುಗಳನ್ನು ಬೈಗುಳದೊಂದಿಗೆ ನೆಲಕ್ಕೆ ಉಗುಳುತ್ತಿದ್ದನು. ಅವನು ಕಳ್ಳಿನ ಮೊಗೆಯನ್ನು ನೋಡುತ್ತ ತಿನ್ನುತ್ತಿದ್ದಾಗ ದವಡೆ ಮಾತ್ರ ಚಲಿಸುತ್ತಿತ್ತು. ತನ್ನ ಬಿಡಾರದಲ್ಲಿ ಮಾಡಿಬಂದಿದ್ದ ಅನಾಹುತವನ್ನು ಅವನ ಮನಸ್ಸು ಇನ್ನೂ ಮೆಲುಕು ಹಾಕುತ್ತಿತ್ತು. ಅವನಾಗಲೇ ಎರಡು ಮೊಗೆ ಕುಡಿದು ಮೂರನೆ ಮೊಗೆಗೆ ಸಿದ್ಧನಾಗುತ್ತಿದ್ದನು. ಅವನು ಓಬಯ್ಯನ ಕಡೆ ನೋಡಿದಾಗ ಕಣ್ಣು ತೇಲುಗಣ್ಣಾಗಿ ಕ್ರೂರವಾಗಿದ್ದುವು. ಬತ್ತಲೆಯಾಗಿದ್ದ ಹೊಟ್ಟೆ ಊದಿಕೊಂಡಿತ್ತು. ಓಬಯ್ಯನು ಅವನನ್ನು ಮಾತಾಡಿ ಸಲಿಲ್ಲ; ಅವನೇ ಮೊದಲು ಪ್ರಾರಂಭಿಸಿದನು.

"ಅಲ್ಲಾ ನೀವೇ ಹೇಳ್ರೋ. ನನ್ದೇನ್ ತಪ್ಪು? ನಾ ಮಾಡಿಸಿಕೊಟ್ಟಿದ್ನ ನಾ ಕೇಳಿದ್ರೆ ಅವಳ್ದೇನು ಜೋರು! ಏನ್ರೋ! ಹೇಳ್ರೋ ನೀವೇ! ಚೆನ್ನಾಗಿ ಹಿಡ್ಕೊಂಡು ಗುದ್ದೀ ಗುದ್ದೀ ಗುದ್ದಿಹಾಕ್ದೆ. ಅವಳಕ್ಕನ್ನಾ . . . ಹ! ಹ! ಹ!" ಎಂದವನು ಚಿನ್ನದ ಬುಗುಡಿಯೊಂದನ್ನು ಸೊಂಟದ ಪಂಚೆಯಿಂದ ಎಂಜಲು ಕೈಯಲ್ಲಿ ತೆಗೆದು ತೋರಿಸಿದನು. ನಂಜನ ನೆತ್ತಿಗೆ ಮತ್ತೇರಿ ಬರುತ್ತಿತ್ತು.

ಆ ದಿನ ಬೆಳಗ್ಗೆ ಚಿನ್ನಯ್ಯನೊಡನೆ ಮೀನು ಬೇಟೆಯಾಡಲು ಹೋಗಿ ಕಾನೂರು ಗಾಡಿಯ ಹಿಂದೆ ಅಪರಾಹ್ಣದಲ್ಲಿ ಮನೆಗೆ ಬಂದ ನಂಜನು ಸಾಯಂಕಾಲ ವಾಗಲು ಕಳ್ಳಂಗಡಿಗೆ ಹೊರಟನು. ಕೈಯಲ್ಲಿ ದುಡ್ಡಾಗಲಿ ದವಸವಾಗಲಿ ಇರಲಿಲ್ಲ. ಹೆಂಡತಿಯ ಕಿವಿಯಲ್ಲಿದ್ದ ಬುಗುಡಿಯನ್ನು ಕೇಳಿದನು. ಅವಳು ಕೊಡುವುದಿಲ್ಲ ಎಂದು ಹೇಳಲು ಅವಳನ್ನು ಚೆನ್ನಾಗಿ ಹೊಡೆದು, ಆಭರಣವನ್ನು ಕಿವಿ ಹರಿಯುವಂತೆ ಎಳೆದು ಕಸಿದುಕೊಂಡು ಕಳ್ಳಿನ ಅಂಗಡಿಗೆ ಬಂದಿದ್ದನು. ಅದನ್ನೇ ಕುರಿತು ಅವನು ಓಬಯ್ಯನೊಡನೆ ಹೇಳಿದ್ದು.

ಅಷ್ಟರಲ್ಲಿ ಅಲ್ಲಿಗೆ ಬಂದ ಅಂಗಡಿಯವನು ನಂಜನ ಕೈಯಲ್ಲಿದ್ದ ಬುಗುಡಿಯನ್ನು ತೆಗೆದುಕೊಂಡು ಹೋಗಿ ಪೆಟ್ಟಿಗೆಗೆ ಹಾಕಿದನು. ನಂಜನು ಅದನ್ನು ಗಣನೆಗೆ ತಾರದೆ ಮೊಗೆಯಲ್ಲಿದ್ದ ಮದ್ಯವನ್ನು ಚೆನ್ನಾಗಿ ಹೀರಿ, ತುಟಿಯನ್ನು ಚಪ್ಪರಿಸುತ್ತಾ, ಅಂಗಡಿಯವನನ್ನು ಪ್ರಶಂಸನೀಯ ದೃಷ್ಟಿಯಿಂದ ನೋಡುತ್ತಾ "ತಗೊಳ್ರೋ, ತಗೊಳ್ರೋ. ನಾ ದುಡ್ಡಿದ್ದು. ನಾ ಕುಡ್ಡಿದ್ದು! ಹ ಹ ಹ ಹ!" ಎಂದು

ನಿಧಾನವಾಗಿ ಹೇಳುತ್ತಿದ್ದವನು, ಫಕ್ಕನೆ "ಕೊಡ್ರೊ ಇನ್ನೊಂದ್ ಮೊಗೇನ!" ಎಂದು ಚುರುಕಾಗಿ ರಭಸದಿಂದ ಹೇಳಿದನು. ಅಂಗಡಿಯವನ ಮಗನು ಕಳ್ಳು ಹಾಕಿದ್ದ ಕಲಗಚ್ಚು ನೀರನ್ನು ತಂದು ಹೊಯ್ದನು. ನಂಜನಿಗೆ ಒಳ್ಳೆಯ ಕಳ್ಳಿಗೂ ಕಳ್ಳು ಬೆರಸಿದ ಕಲಗಚ್ಚಿಗೂ ವ್ಯತ್ಯಾಸ ಕಂಡುಹಿಡಿಯುವಷ್ಟು ಪ್ರಜ್ಞೆ ಇರಲಿಲ್ಲ. ಏನನ್ನೋ ಅಸ್ಪಷ್ಟವಾಗಿ ಒರಲುತ್ತ ತಿಂದು ಕುಡಿಯುವ ಕೆಲಸಕ್ಕೆ ಕೈಬಾಯಿ ಹಾಕಿದನು. ಅವನ ಹೊಟ್ಟೆಯ ಮೇಲೆಲ್ಲಾ ಹೆಂಡ ಸೋರಿ ಪಂಚೆ ಒದ್ದೆ ಯಾಗಿತ್ತು.

ಓಬಯ್ಯನನ್ನು ಯಾರೂ ಅತಿಥಿಯಾಗಿ ಸ್ವೀಕರಿಸಲಿಲ್ಲ. ಜೊತೆಗೆ ಅಂಗಡಿ ಯವನೂ ಕೊಟ್ಟ ಸಾಲವನ್ನು ತೀರಿಸದೆ ಒಂದು ಹನಿಯನ್ನೂ ಕೊಡುವುದಿಲ್ಲ ವೆಂದು ಹೇಳಿಬಿಟ್ಟನು. ಓಬಯ್ಯನಿಗೆ ಕಳ್ಳು ಮಾಂಸಗಳ ಕಂಪು ಕಮನೀಯ ವಾಗಿತ್ತು. ಆ ಗಾಳಿಯನ್ನು ಆದಷ್ಟು ಪ್ರಾಣಾಯಾಮ ಮಾಡಿದನು. ತೃಷ್ಣೆ ಬರಬರುತ್ತ ಅತಿಯಾಯಿತು. ಮೆಲ್ಲಗೆ ಕಂಕುಳಲ್ಲಿ ಸುತ್ತಿಟ್ಟುಕೊಂಡಿದ್ದ ಮೀನನ್ನು ತೆಗೆದು ಅಂಗಡಿಯವನಿಗೆ ಕೊಟ್ಟು, ಅದಕ್ಕೆ ಬದಲಾಗಿ ಕಳ್ಳು ಕೊಡು ವಂತೆ ಅಂಗಲಾಚಿದನು. ಅದು ಅಗ್ರಹಾರದ ದೇವರ ಮೀನು ಎಂಬ ಸಂಗತಿ ಯನ್ನು ಮಾತ್ರ ತಿಳಿಸಲಿಲ್ಲ. ಅಂಗಡಿಯವನು ಮೀನನ್ನು ಸ್ವೀಕರಿಸಿ, ಸ್ವಲ್ಪ ಕಳ್ಳನ್ನು ಬದಲಾಗಿ ಕೊಡಿಸಿದನು. ಅದನ್ನು ಕುಡಿದ ಮೇಲಂತೂ ಓಬಯ್ಯನಿಗೆ ಮತ್ತಷ್ಟು ಕುಡಿಯಬೇಕೆಂಬ ಹುಚ್ಚು ಮೇರೆ ಮೀರಿ, ಜೇಬಿನಲ್ಲಿದ್ದ ದೇವರ ಕಾಣಿಕೆಯ ಬೆಳ್ಳಿಯ ಕಡಗವನ್ನೂ ಬಯಲಿಗೆಳೆದನು. ಅದನ್ನು ಅಡವಾಗಿ ತೆಗೆದುಕೊಂಡು ಕಳ್ಳು ಕೊಡಬೇಕೆಂದೂ, ಹಿಂದಿನಿಂದ ಹಣಕೊಟ್ಟು ಬಿಡಿಸಿ ಕೊಳ್ಳುತ್ತೇನೆಂದೂ ಅಂಗಡಿಯವನಿಗೆ ತಿಳಿಸಿದನು. ಅಂಗಡಿಯವನು ಸಂತೋಷ ದಿಂದ ತೆಗೆದುಕೊಂಡನು. ಹಣ ಕೊಟ್ಟು ಬಿಡಿಸಿಕೊಳ್ಳುತ್ತೇನೆ ಎಂಬುದು ಬರಿಯ ಮಾತೆಂದು ಅವನಿಗೂ ಅನುಭವದಿಂದ ಚೆನ್ನಾಗಿ ಗೊತ್ತಾಗಿತ್ತು.

ವಾಙ್ಮಯಮಾತ್ರವಾಗಿದ್ದ ಅಂಗಡಿಯ ವಾತಾವರಣ ಬರಬರುತ್ತ ಶಬ್ದ ಮಯವಾಗುತ್ತ ಬಂದಿತು. ಇತ್ತ ಕಳ್ಳು ಹೆಂಡಗಳು ಖಾಲಿಯಾದಂತೆಲ್ಲ ಅತ್ತ ಮಾನವರು ಮೃಗಗಳಾಗುತ್ತ ಹೋದರು. ಅಶ್ಲೀಲವಾದ ಮಾತುಗಳೂ ಬೈಗುಳಗಳೂ ಕಾರ್ಯಗಳೂ ಸ್ವಚ್ಛಂದವಾಗಿ ಉಪಕ್ರಮವಾದುವು. ಓಬಯ್ಯನೂ ಚೆನ್ನಾಗಿ ಕುಡಿದು ಹಣ್ಣಾದನು. ನಂಜನು ಉಟ್ಟ ಪಂಚೆಯನ್ನು ಬಿಚ್ಚಿ ತಲೆಗೆ ಸುತ್ತಿಕೊಂಡು ವಿಕಾರವಾಗಿ ಕೇಕೆ ಹಾಕುತ್ತ, ಅಸಹ್ಯವಾದ ಹಾಡುಗಳನ್ನು ಒರಲುತ್ತ, ಹೊರಬಿದ್ದನು. ಅಂಗಳದಲ್ಲಿ ಹೊಡೆದಾಟವೂ ಆರಂಭವಾಯಿತು. ಆಗ ರಾತ್ರಿ ಎಂಟು ಗಂಟೆಯಾಗಿತ್ತು. ಹಗಲಿನಲ್ಲಿ ಮುನಿಯಂತೆ ಮೌನವಾಗಿದ್ದ

ಕಳ್ಳಿನ ಅಂಗಡಿ ಆ ರಾತ್ರಿ ನಿಶಾಚರನಂತೆ ಭಯಾನಕ ಬೀಭತ್ಸರಸಗಳಿಂದ ತುಂಬಿ ಹೋಯಿತು.

ಅಷ್ಟರಲ್ಲಿ ಹೊರಗಡೆಯಿಂದ ಯಾರೋ ಇನ್ನಿಬ್ಬರು ಅಸ್ಪೃಶ್ಯರು ಬಂದು ಹೆಂಡ ಕೇಳಿದರು.

ಅಂಗಡಿಯವನು "ಏನೋ ಬೈರಾ, ಇಷ್ಟು ಹೊತ್ತಿನಾಗೆ?" ಎಂದನು. ಬಂದಿದ್ದವರು ಕಾನೂರು ಚಂದ್ರಯ್ಯಗೌಡರ ಆಳುಗಳು: ಬೇಲರ ಬೈರ ಮತ್ತು ಸಿದ್ದ.

"ಇವತ್ತು ಹೊತ್ತಾಗಿಹೋಯ್ತು ಕಣ್ರಾ. ಕೆಳಕಾನೂರು ಅಣ್ಣೇಗೌಡ್ರ ಹೆಡ್ತಿಗೆ ಸೂಡು ಕಡ್ದು ಮೈ ನೋವಾಗಿತ್ತು. ಒಂದೊಂದ್ರುಪಾಯಿ ಕೊಟ್ರು; ಹಾಂಗೆ ಬಂದ್ಯು ಇಲ್ಲಿಗೆ" ಎಂದನು ಸಿದ್ದ.

"ಏನಾಗಿತ್ತೋ ಅವರಿಗೆ?" ಎಂದು ಕೇಳಿದನು ಅಂಗಡಿಯವನು.

"ಏನೋ ಆಗಿತ್ತಂತೆ...ಕಳ್ಳು ಕೊಡ್ರಾ" ಎಂದನು ಬೈರ. ಅವನಿಗೆ ಹೆಂಡ ಮುಖ್ಯವಾಗಿತ್ತೆ ಹೊರತು ಮರಣಕ್ಕೆ ಕಾರಣಗೀರಣಗಳು ಮುಖ್ಯ ವಾಗಿರಲಿಲ್ಲ.

"ಓಬೇಗೌಡ್ರೇ ಕೇಳಿದರೇನ್ರೋ?" ಎಂದು ಅಂಗಡಿಯವನು ಹೊಸ ಗಿರಾಕಿಗಳಿಗೆ ಸರಬರಾಯಿ ಮಾಡಲು ತೊಡಗಿದನು.

ಓಬಯ್ಯನಿಗೆ ಸಿದ್ದನ ಮಾತೇನೋ ಕೇಳಿಸಿತು; ಆದರೆ ಆದರ ಸಂಪೂರ್ಣ ಪ್ರಭಾವವನ್ನು ಗ್ರಹಿಸುವ ಪ್ರಜ್ಞೆ ಅವನಲ್ಲಿರಲಿಲ್ಲ. "ಅಯ್ಯೋ ಹೊಯ್ತೇನೊ!" ಎಂದು ಗಟ್ಟಿಯಾಗಿ ಅಳತೊಡಗಿದನು. ಆ ಅಳುವಿನಲ್ಲಿ ಉನ್ಮಾದವಿತ್ತೇ ಹೊರತು ಶೋಕವಿರಲಿಲ್ಲ. ಮದ್ಯದಿಂದ ಉತ್ಪನ್ನವಾಗಿದ್ದ ಉನ್ಮಾದ ಹೊರ ಹೊಮ್ಮಲು ದಾರಿ ಹುಡುಕುತ್ತಿತ್ತು. ಅದಕ್ಕೊಂದು ಕಾಲುವೆ ಲಭಿಸಿದಂತಾ ಯಿತಷ್ಟೆ!

ಓಬಯ್ಯ ಮತ್ತಿನಿಂದ ತತ್ತರಿಸುತ್ತ ಮೇಲೆದ್ದನು. ಅಂಗಳಕ್ಕೆ ಇಳಿಯುವಾಗ ಉರುಳಿಬಿದ್ದನು. ಮತ್ತೆ ತೂರಾಡುತ್ತ ಎದ್ದು ನಿಂತು, ರೋದನಗೈಯುತ್ತಲೆ ನಡೆದು ಕತ್ತಲೆಯ ಕರ್ಬಸಿರಿನಲ್ಲಿ ಕರಗಿ ಕಣ್ಮರೆಯಾದನು. ಅಲ್ಲಿದ್ದವರಿಗೆ ತಲೆ ನೆಟ್ಟಗಿದ್ದಿದ್ದರೆ ಅವನನ್ನು ಆ ಸ್ಥಿತಿಯಲ್ಲಿ ಮನೆಗೆ ಹೋಗಗೊಡುತ್ತಿರಲಿಲ್ಲ. ಆದರೆ ಕಳ್ಳಂಗಡಿಯಲ್ಲಿ ಕುಡಿತ ಕುಣಿತ ಗಲಭೆ ಹೋರಾಟಗಳ ಹೊಳೆ ನೆರೆಯೇರಿತ್ತು.

## ೧೩

# ಕಾನುಬೈಲಿನ ಕಳ್ಳುಗೊತ್ತು

ಜಗತ್ತು ರಾತ್ರಿಯ ನೀರವ ನಿದ್ದೆಗೆ ಸನ್ನಾಹಗೊಳಿಸುತ್ತಿತ್ತು. ಸೂರ್ಯನಾಗಲೆ ಮುಳುಗಿ, ಪಶ್ಚಿಮದಿಕ್ಕಿನ ಪರ್ವತ ವಿರಚಿತ ದಿಗಂತದಲ್ಲಿ ಅಪರಾಸ್ತದ ಕೆನ್ನೀಲಿಯ ಬೈಗುಬಣ್ಣವು ತೆಳುಮುಗಿಲುಗಳ ಹೃದಯಮಧ್ಯೆ ಅಂತರ್ಯಾಮಿಯಾಗಿತ್ತು. ಅರಣ್ಯಾವೃತವಾದ ಗಂಭೀರ ಸಹ್ಯಾದ್ರಿ ಶ್ರೇಣಿಗಳ ಗಿರಿಕಂದರಗಳ ಮೇಲೆ ಇರುಳದೇವಿ ತನ್ನುಡೆಯ ಕರಿಸೆರಗನ್ನು ಮೆಲ್ಲನೆ ಹೊದಿಸುತ್ತಿದ್ದಳು. ಗೂಡಿಗೆ ಹೋಗುವ ಹಕ್ಕಿಯ ಹಾಡು ಮುಗಿದಿತ್ತು. ಹಟ್ಟಿಗೆ ಹೋಗುವ ದನದ ಕೂಗು ನಿಂತಿತ್ತು. ಅವುಗಳಿಗೆ ಬದಲಾಗಿ, ಮಲೆನಾಡಿನಲ್ಲಿ ಬೈಗುಹೊತ್ತಿನಲ್ಲಿ ಕೇಳಿ ಬರುವ, ಓಂಕಾರದಂತೆ ನಾಡನ್ನೆಲ್ಲ ತುಂಬಿ ತುಳುಕುವ ಸಾವಿರಾರು ದುಂಬಿ ಜೇನುಹುಳುಗಳ ಝೇಂಕಾರದ ನಿರಂತರ ನಾದವಾಹಿನಿ ಅಥವಾ ವಾರಿಧಿ ಮೊರೆಯತೊಡಗಿತ್ತು. ಮರಗಿಡಗಳ ಸ್ಪಷ್ಟಾಕೃತಿಗಳು ಮಾದು ಅಸ್ಫುಟಾಕಾರವು ಮಸಿ ಮಸಿ ಮಾಸಲು ಮಾಸಲಾಗಿ ತೋರುತ್ತಿತ್ತು.

ಕಾನೂರು ಚಂದ್ರಯ್ಯಗೌಡರ ಮನೆಗೆ ತೆಂಕಣ ದೆಸೆಯಲ್ಲಿದ್ದ ಒಂದು ಗುಡ್ಡಗಾಡಿನ ನೆತ್ತಿಯಲ್ಲಿ ಸಣ್ಣ ಬೆಂಕಿಯೊಂದು ಉರಿಯುತ್ತಿತ್ತು. ಸುತ್ತಲೂ ಮರಗಳು ದಟ್ಟವಾಗಿ ಬೆಳೆದು ಕಾಡಾಗಿದ್ದರೂ, ಆ ಸ್ಥಳದಲ್ಲಿ ಕೆಲವು ಹೆಬ್ಬಂಡೆ ಹಾಸುಬಂಡೆಗಳಿದ್ದು ಬಯಲು ಬಯಲಾಗಿತ್ತು. ಹಗಲು ಅಲ್ಲಿ ನಿಂತು ನೋಡಿದರೆ ಸುತ್ತಮುತ್ತ ಬಹುದೂರದವರೆಗೂ ಕಾಣಿಸುವಂತಿತ್ತು. ಸೀತೆಮನೆ ಮುತ್ತಳ್ಳಿ ಮೊದಲಾದ ಅನೇಕ ಮನೆಮಾರುಗಳನ್ನು, ಹಬ್ಬಿದ ಕಾಡುಗಳ ನಡುವೆ ಮೇಲೇಳುವ ಹೊಗೆಯಿಂದಲೂ ಅಡಕೆ ತೋಟಗಳಿಂದಲೂ ಗದ್ದೆ ಬಯಲುಗಳಿಂದಲೂ ಗುರುತಿಸಬಹುದಾಗಿತ್ತು. ಆಗುಂಬೆಘಾಟಿ, ಕುಂದದ ಗುಡ್ಡ, ಕುದುರೆಮುಖ, ಮೇರುತಿ ಪರ್ವತ ಮೊದಲಾದ ಸಹ್ಯಾದ್ರಿಯ ಭಾಗಗಳು ಕೆಲವುಸಾರಿ, ಪ್ರಾತಃಕಾಲದಲ್ಲಿ ನಿಂತು ನೋಡಿದರೆ, ನೀಲ ವಾಯುಮಂಡಲದಲ್ಲಿ ಪಶ್ಚಿಮ ನೀಲಾಕಾಶಕ್ಕೆದುರಾಗಿ ಮೈಲುತುತ್ತಿನ ಮಹಾರಾಶಿಗಳಂತೆ ದಿಗಂತ ಖಚಿತವಾಗಿ ರಂಜಿಸುತ್ತಿದ್ದುವು. ಸೂರ್ಯೋದಯ ಸೂರ್ಯಾಸ್ತ ಚಂದ್ರೋದಯಗಳು ದ್ವಿಗುಣಿತ ರಮಣೀಯವಾಗಿ ಶೋಭಿಸುತ್ತಿದ್ದುವು. ರಜಾಕಾಲಗಳಲ್ಲಿ ಊರಿಗೆ ಬಂದಾಗ ಹೂವಯ್ಯ ರಾಮಯ್ಯರಿಗೆ ಅದೊಂದು ನಿತ್ಯ ಸಂದರ್ಶನದ ಸೌಂದರ್ಯ ಸ್ಥಾನವಾಗಿತ್ತು. ಹಳ್ಳಿಗರು ಆ ಸ್ಥಳಕ್ಕೆ 'ಕಾನುಬೈಲು' ಎಂದು ನಾಮಕರಣ ಮಾಡಿದ್ದರು.

ಅಂದು ಆ ಬೈಗುಗಪ್ಪಿನಲ್ಲಿ ಆ 'ಕಾನುಬೈಲಿ'ನಲ್ಲಿ ಉರಿಯುತ್ತಿದ್ದ ಕಿರುಬೆಂಕಿ ಒಮ್ಮೊಮ್ಮೆ ಸಣ್ಣದಾಗಿ ಆರಿಹೋದಂತಾಗುತಿತ್ತು; ಒಮ್ಮೊಮ್ಮೆ ಪ್ರಕಾಶ ಮಾನವಾಗಿ ಪ್ರಜ್ವಲಿಸುತ್ತಿತ್ತು. ಮೂಢಗ್ರಾಮ್ಯರಾರಾದರೂ ದೂರದಿಂದ ನೋಡಿದ್ದರೆ ಅದನ್ನು ಕೊಳ್ಳಿದೆವ್ವವೆಂದು ತಿಳಿಯುತ್ತಿದ್ದರು. ತಿಳಿದವರು 'ದೊಂದಿ' (ಅಡಕೆ ಅಥವಾ ಬಿದಿರು ದೆಬ್ಬೆಗಳಿಂದ ಮಾಡಿದ ಪೊಂಜು) ಎಂದು ಹೇಳುತ್ತಿದ್ದರು. ಆದರೆ ಯಾರಾದರೂ ಧೀರ ಕೌತೂಹಲಿಗಳು ಅಲ್ಲಿಗೆ ಹೋಗಿ ನೋಡಿದ್ದರೆ ವಾಸ್ತವಾಂಶ ಬೇರೆಯಾಗಿರುತ್ತಿತ್ತು.

ಬೆಂಕಿಯ ಬಳಿ, ಅದಕ್ಕೆ ಕಾರಣವಾದ ಒಂದು ಮನುಷ್ಯಾಕೃತಿ ಗೋಚರವಾಗು ತ್ತಿತ್ತು. ಇನ್ನೂ ಸ್ವಲ್ಪ ಮುಂದುವರಿದಿದ್ದರೆ ಕಳ್ಳಿನ ವಾಸನೆ ಗೊತ್ತಾಗುತ್ತಿತ್ತು. ಹತ್ತಿರ ಹೋಗಿದ್ದರೆ, ಕಾನೂರಿನಲ್ಲಿ ನಾವು ಬೆಳಿಗ್ಗೆ ಕಂಡ ಹಳೆಪೈಕದ ತಿಮ್ಮನು ಒಂದು ಮಣ್ಣಿನ ಮೊಗೆಯಲ್ಲಿ ಕಳ್ಳು ಕಾಯಿಸುತ್ತಿದ್ದನೆಂಬುದು ಪ್ರತ್ಯಕ್ಷವಾಗು ತ್ತಿತ್ತು!

ತಿಮ್ಮನು ಬಗ್ಗಿ ಬೆಂಕಿ ಊದುವುದು, ಎದ್ದುನಿಂತು ಕಾನೂರಿನ ಕಡೆಗೆ ನಿರೀಕ್ಷಿತ ನಯನನಾಗಿ ನೋಡುವುದು, ಮತ್ತೆ ಯಾರನ್ನೂ ಕಾಣದೆ ಹತಾಶನಾಗಿ ಕೂತುಕೊಳ್ಳುವುದು, ಒಮ್ಮೊಮ್ಮೆ ಕೆಮ್ಮಿ ಗಂಟಲು ಸರಿಮಾಡಿಕೊಳ್ಳುವುದು, ಅಭ್ಯಾಸದಿಂದಲೋ ಎಂಬಂತೆ ತೊಡೆ ಹೊಟ್ಟೆ ಬೆನ್ನು ಕಾಲುಗಳನ್ನು ಕೆರೆದು ಕೊಳ್ಳುವುದು, ಒಮ್ಮೊಮ್ಮೆ ನಿರ್ಜನತೆ ನೀರವತೆಗಳ ಭಾರವನ್ನು ಹಗುರಮಾಡಿ ಕೊಳ್ಳಲೋಸುಗ ಸದ್ದುಮಾಡುವುದು, ಹೀಗೆ ವರ್ತಿಸುತ್ತಿದ್ದನು. ನಡು ನಡುವೆ ಏನನ್ನೋ ಆಲೋಚಿಸಿ "ಬಡ್ಡೀಮಕ್ಳು ಯಾರಿರಬೇಕು? ಕಾಡೆಲ್ಲ ದಾರಿ ಮಾಡ್ತ ಇದಾರಲ್ಲಾ!" ಎಂದು ತನಗೆ ತಾನೆ ಹೇಳಿಕೊಳ್ಳುವನು. "ಮಾಡ್ಲಿ, ಇನ್ನೊಂದು ಸಾರಿ 'ಮಾರ್ಕ' ಬಂದಾಗ ಮಾಡಿಸ್ತೀನಿ" ಎಂದವನು ಮತ್ತೆ ಆರಿಹೋದ ಬೆಂಕಿಯನ್ನು ಊದಿದನು. ಬೂದಿ ಹಾರಿತು. ಸುತ್ತಲಿದ್ದ ಕಸಕಡ್ಡಿ ಹುಲ್ಲುಗಳನ್ನು ಹಾಕಿ ಮತ್ತೆ ಊದಿದನು. ಹೊಗೆ ಮುದ್ದೆಮುದ್ದೆಯಾಗಿ ಮೇಲೆದ್ದು ಮತ್ತೆ ಭುಗ್ಗೆಂದು ಬೆಂಕಿ ಹೊತ್ತಿಕೊಂಡಿತು.

ಪಕ್ಕದ ಕಾಡುಗಳಲ್ಲಿ 'ಬಗನಿ ಕಟ್ಟಿ' ಕಳ್ಳು ಇಳಿಸುವುದು ತಿಮ್ಮನ ಕುಲ ಕಸಬಾಗಿತ್ತು. ಅವನು ಅದನ್ನು ಹೊರಗಡೆ ಮಾರಾಟಮಾಡುತ್ತಿರಲಿಲ್ಲ. ಎಂದಾದರೂ ಒಂದೊಂದು ಸಾರಿ ಕಳ್ಳು ಹೆಚ್ಚಾಗಿ ಉಳಿದರೆ ಕಳ್ಳಂಗಡಿಗೆ ಕದ್ದು ಮಾರುತ್ತಿದ್ದನು. ಸಾಧಾರಣವಾಗಿ ಅವನು ಇಳಿಸುತ್ತಿದ್ದ ಕಳ್ಳೆಲ್ಲ ಕಾನೂರಿನ ವರಿಗೇ ಸಾಲುತ್ತಿರಲಿಲ್ಲ. ಅದರಲ್ಲಿಯೂ ಚಂದ್ರಯ್ಯಗೌಡರಿಗೆ ಪ್ರತಿದಿನವೂ 'ಕಾನುಬೈಲಿ'ನಲ್ಲಿ ಕಳ್ಳು ಕಾಯಿಸಿಕೊಡುವುದು ಮಾಮೂಲಾಗಿತ್ತು. ಅವನು

ಅವರ ಒಕ್ಕಲಾಗಿದ್ದುದರಿಂದ ಒಡೆಯರಿಗೆ ಆದಷ್ಟುಮಟ್ಟಿಗೆ ಸಿಹಿಸಿಹಿ ಮಾಡು ವುದು ಅವನ ಶ್ರೇಯಸ್ಸಾಗಿತ್ತು. ಗೌಡರೂ ಅವನನ್ನು ಇತರ ಒಕ್ಕಲು ಗಳಂತಲ್ಲದೆ ಹೆಚ್ಚು ಆದರದಿಂದ ಕಾಣುತ್ತಿದ್ದರು. ಅವನಿಗೆ ಕೇಳಿದಹಾಗೆ ಸಾಲ; ಕೇಳಿದ ಗದ್ದೆ ಸಾಗುವಳಿಗೆ; ಕೇಳಿದ ಎತ್ತು ಉಳುಮೆಗೆ! ಕೆಲವು ಸಾರಿ ತಿಮ್ಮನ ಕೆಲಸಕ್ಕೆ ತಮ್ಮ ಮನೆಯ ಗಾಡಿ ಎತ್ತು ಆಳುಗಳನ್ನೂ ಕೊಡುತ್ತಿದ್ದರು: ಏಕೆಂದರೆ, ಇತರರು ಮಾಡುವ ಕೆಲಸವನ್ನು ಮಾಡಲು ಅನೇಕರಿದ್ದರು. ಆದರೆ ತಿಮ್ಮನಂತೆ ಯಾರಿಗೂ ಬಗನಿ ಕಟ್ಟಿ ಕಳ್ಳು ಇಳಿಸಲು ತಿಳಿದಿರಲಿಲ್ಲ. ಅದು ಅವನ ಜಾತಿಯ ಗುಟ್ಟಾಗಿತ್ತು. ಬೇಲರು, ಕುಂಬಾರರು, ಮರಾಟಿಗರು, ಸೆಟ್ಟರು, ಒಕ್ಕಲಿಗರು ಇವರು ಯಾರಿಗೂ ಜಾತಿಪದ್ಧತಿಯಂತೆ ಬಗನಿ ಕಟ್ಟುವ ಹಕ್ಕಿಲ್ಲ. ಆ ಹಕ್ಕು ಹಳೆಪೈಕರದು. ಆದ್ದರಿಂದಲೆ ಕಾನೂರಿನಲ್ಲಿ ಹಳೆಪೈಕದ ತಿಮ್ಮನೊಬ್ಬನೇ ಬಗನಿ ಮರಗಳ ಆಡಳಿತಕ್ಕೆ ಸರ್ವಾಧಿಕಾರಿಯಾಗಿದ್ದನು. ಬೇರೆ ಯಾರಾದರೂ ಆ ಕೆಲಸಕ್ಕೆ ಕೈಹಾಕಿದ್ದರೆ ಕೂಡಲೆ ಜಾತಿಬಾಹಿರರಾಗಿ ಬಹಿಷ್ಕೃತ ರಾಗುತ್ತಿದ್ದರು. ಆ ದಿನ ಮಧ್ಯಾಹ್ನ ಬೇಲರ ಬೈರನು ರಂಗಪ್ಪಸೆಟ್ಟರ ಕಾಲಿಗೆ ಬಿದ್ದದ್ದು ಲೈಸನ್ಸ್ ಇಲ್ಲದೆ ಬಗನಿಕಟ್ಟಿದ ರಾಜಕೀಯ ಭಯದಿಂದ ಮಾತ್ರವೇ ಅಲ್ಲ; ಅದರೊಂದಿಗೆ ಜಾತಿ ಕೆಟ್ಟುಹೋಗುತ್ತದೆ ಎಂಬ ಸಾಮಾಜಿಕ ಭೀತಿಯೂ ಸೇರಿತ್ತು!

ಪ್ರತಿಸ್ಪರ್ಧಿಗಳಾರೂ ಇಲ್ಲದೆ, ನಿರಾತಂಕವಾಗಿ, ಲೈಸನ್ಸ್ ಪಡೆದು ಕೊಂಡಿದ್ದಕ್ಕಿಂತಲೂ ಎರಡು ಮೂರು ಪಾಲು ಹೆಚ್ಚಾಗಿ ಬಗನಿ ಕಟ್ಟಿಕೊಂಡಿರು ತ್ತಿದ್ದ ತಿಮ್ಮನ ಕಣ್ಣಿಗೆ ಕೆಲ ದಿನಗಳಿಂದ ಕಾಡಿನಲ್ಲಿ ಕಾಲುದಾರಿಗಳಾಗುತ್ತಿರುವುದು ತಿಳಿದುಬಂದು, ಒಂದೆಡೆ ಹೋಗಿ ನೋಡುತ್ತಾನೆ: ಯಾರೋ ಒಂದು ಮರಕ್ಕೆ ಬಗನಿ ಕಟ್ಟಿದ್ದಾರೆ! ಯಾರೆಂಬುದು ಅವನ ಊಹೆಗೂ ಹೊಳೆಯಲಿಲ್ಲ. ಬೇಲರ ಬೈರನು ಆ ಕೆಲಸಕ್ಕೆ ಹೋಗುತ್ತಾನೆಂದು ಅವನು ಸ್ವಪ್ನದಲ್ಲಿಯೂ ಭಾವಿಸುವಂತಿರಲಿಲ್ಲ. ಏಕೆಂದರೆ, ಬಗನಿ ಕಟ್ಟುವ ಕ್ರಮ, ಹದ, ರೀತಿ, ವಿಚಾರ — ಇವೆಲ್ಲ ಆ ಮಡ್ಡ ಹೊಲೆಯನಿಗೆ ಹೇಗೆ ತಿಳಿಯಬೇಕು? ಅವನಲ್ಲ, ಅವನ ಇಪ್ಪತ್ತೊಂದು ಪಿತೃಗಳ ತಲೆಗಳೆಲ್ಲ ಸೇರಿದರೂ ಆ ಕೆಲಸ ಅಸಾಧ್ಯ ಎಂದು ತಿಮ್ಮನ ಹೆಮ್ಮೆಯಾಗಿತ್ತು; ಆದ್ದರಿಂದ ತಿಮ್ಮನು ತಾನು ಕಳ್ಳಬಗನಿ ಕಂಡಿದ್ದನ್ನೂ, ಆ ಕಳ್ಳನನ್ನು ಹಿಡಿಯಲು ಪ್ರಯತ್ನಿಸಬೇಕೆಂಬುದನ್ನೂ ಬೈರನಿಗೇ ಹೇಳಿದನು. ಬೈರನೂ ಕಳ್ಳನನ್ನು ಹಿಡಿಯುವ ಕೆಲಸದಲ್ಲಿ ಸಹಾಯಕನಾದನು. ಬೈರ ತಿಮ್ಮರು ಸರದಿಯಮೇಲೆ ಕಾದರೂ ಕಳ್ಳನೂ ಸಿಗಲಿಲ್ಲ; ಆಗಾಗ ಕಳ್ಳೂ ಕಳುವಾಗುತ್ತಿತ್ತು! ಕಳ್ಳನೇ ಪೋಲೀಸಿನವನಾಗಿದ್ದಾನೆ ಎಂಬುದು ತಿಮ್ಮನಿಗೆ ಗೊತ್ತಾಗಲಿಲ್ಲ. ಕಡೆಗೆ

ಸಿಟ್ಟುಬಂದು ಆ ಮರದ ಕೈಯನ್ನೇ (ಕಳ್ಳು ಕೊಡುವ ಬಗನಿಯ ಮರದ ಹೂ) ಕಡಿದುಹಾಕಿದನು.

: ಕೆಲವು ದಿನಗಳಲ್ಲಿ ಬೈರನು ಮತ್ತೆ ಮತ್ತೊಂದು ಬಗನಿ ಮರಕ್ಕೆ ಮಡಕೆ ಕಟ್ಟಿದನು! ಆ ಮರದಡಿಯಲ್ಲಿಯೇ ಅವನಿಗೆ ರಂಗಪ್ಪಸೆಟ್ಟರು ಕೋವಿಪೂಜೆ ಮಾಡುವುದರಲ್ಲಿದ್ದದ್ದು! ಆ ಮರ ಸ್ವಲ್ಪ ಗುಟ್ಟಾಗಿ, ಸಾಧಾರಣವಾಗಿ ಯಾರ ಕಣ್ಣಿಗೂ ಬೀಳದ ಸ್ಥಳದಲ್ಲಿತ್ತು. ಆದರೆ ತಿಮ್ಮನು ಆ ದಿನ ಸಂಜೆಯಲ್ಲಿ ತಾನು ಕಟ್ಟಿದ್ದ ಬಗನಿಯ ಮರಗಳನ್ನು ನೋಡಿ ಕಳ್ಳು ಇಳಿಸಿಕೊಂಡು ಬರಲು ಕಾಡಿಗೆ ಹೋಗಿ, ಹಾಗೆಯೇ ಬೇಲಿ ಬಿಗಿಯಲು ಬಗನಿಯ ಚಾರೆಯನ್ನು ಹುಡುಕುತ್ತಿದ್ದಾಗ ಅವನ ಕಣ್ಣಿಗೆ ಬೈರನ ಹೊಸಹಾದಿಯೂ ಬಿತ್ತು. ಅದರಲ್ಲಿ ಹೋಗಿ ನೋಡುತ್ತಾನೆ: ಮತ್ತೆ ಕಳ್ಳಬಗನಿ ಕಟ್ಟಿದ್ದಾರೆ! ಹುದುಗಿಸಿಟ್ಟ ಬಾಂಬು ಫಕ್ಕನೆ ಕಣ್ಣಿಗೆ ಬಿದ್ದಿದ್ದರೂ ಸಿ.ಐ.ಡಿ. ಗಳಿಗೆ ಅಷ್ಟು ಆಶ್ಚರ್ಯ ಆನಂದ ಕ್ರೋಧಗಳಾಗುತ್ತಿರಲಿಲ್ಲ! ತಿಮ್ಮನಿಗೆ ಆಯಿತು! ಆ ಬಗನಿ ಕಟ್ಟಿದ್ದ ರೀತಿಯಿಂದ ಹಿಂದೆ ಕಳ್ಳಬಗನಿ ಕಟ್ಟಿದ್ದವನೇ ಅದನ್ನು ಕಟ್ಟಿರಬೇಕೆಂದು ಊಹಿಸಿ, ಈ ಸಾರಿ ಅವನನ್ನು ಹೇಗಾದರೂ ಹಿಡಿಯಬೇಕೆಂದು ನಿರ್ಧರಿಸಿದನು.

ಸಾಯಂಕಾಲ 'ಕಾನುಬೈಲಿ'ನಲ್ಲಿ ಚಂದ್ರಯ್ಯಗೌಡರಿಗಾಗಿ ಕಳ್ಳು ಕಾಯಿಸುತ್ತಿದ್ದ ತಿಮ್ಮನು ತಾನು ಕಂಡ ಕಳ್ಳಬಗನಿಯ ವಿಚಾರವಾಗಿಯೇ ಆಲೋಚಿಸುತ್ತ "ಬಡ್ಡೀಮಕ್ಳು. ಯಾರಿರ್ಬೇಕು? ಕಾಡೆಲ್ಲ ದಾರಿಮಾಡ್ತಾ ಇದ್ದಾರಲ್ಲಾ!" ಎಂದೂ, ನಡುನಡುವೆ "ಇನ್ನೊಂದು ಸಾರಿ 'ಮಾರ್ಕ' ಬಂದಾಗ ಮಾಡ್ತೀನಿ" ಎಂದೂ ಹೇಳಿಕೊಳ್ಳುತ್ತಿದ್ದನು. ತಿಮ್ಮನು ನಿರೀಕ್ಷಿಸುತ್ತಿದ್ದ ಹಾಗೆಯೆ ಕತ್ತಲೆ ಕಪ್ಪಗೆ ಕವಿಯಿತು. ದಿಗಂತದಲ್ಲಿ ಮಾತ್ರವೆ ಭೂಮಿ ಆಕಾಶಗಳಿಗೆ ವ್ಯತ್ಯಾಸ ಕಾಣುತ್ತಿತ್ತು. ಚುಕ್ಕಿಗಳಂತೂ ಬಾನಿನ ಮೈಯಲ್ಲಿ ಎದ್ದ ಬೆಳ್ಳಿಯ ತುರಿಗಜ್ಜಿಗಳಂತೆ ಲಕ್ಷೋಪಲಕ್ಷವಾಗಿದ್ದುವು; ಆಕಾಶಗಂಗೆ ಅಥವಾ ಅಮೃತಪಥವು ಚೆನ್ನಾಗಿ ತುರಿಸಿಕೊಂಡರೆ ಮೈಮೇಲೆ ಕಾಣುವ ಬೂದಿಬೂದಿಗೆರೆಯಂತೆಯೂ ತಿಮ್ಮನಿಗೆ ತೋರುತ್ತಿತ್ತು, ಅವನು ಅತ್ತಕಡೆ ದೃಷ್ಟಿ ಇಟ್ಟಿದ್ದರೆ. ಮತ್ತೊಮ್ಮೆ ಚೆನ್ನಾಗಿ ಹಲ್ಲು ಕಿರಿಯುವವರೆಗೂ ತುರಿಸಿಕೊಂಡು, ಕಳ್ಳಿನ ಮೊಗೆಯನ್ನು ಕಲ್ಲೊಲೆಯಿಂದ ಕೆಳಗಿಟ್ಟು, ಒಂದು ಮುತ್ತುಗದೆಲೆಯಿಂದ ಅದರ ಬಾಯಿ ಮುಚ್ಚಿ, ಕಲ್ಲು ಹೇರಿ, ಅತ್ತಯಿತ್ತ ತಾಳ್ಮೆಮೀರಿ ತಿರುಗಾಡತೊಡಗಿದನು. ಜೇಬಿನಲ್ಲಿ ಎಲೆಯಡಕೆಯಿದ್ದರೂ ಕಳ್ಳು ಕುಡಿದು ತಾಂಬೂಲ ಸವಿಯಬೇಕು; ಮೊದಲೇ ಎಲೆ ಹಾಕಿಕೊಂಡರೆ ಕಳ್ಳಿನ ರುಚಿ ಸಿಕ್ಕುವುದಿಲ್ಲ ಎಂದು ಸುಮ್ಮನಿದ್ದನು. ಕಳ್ಳು ಕುಡಿಯೋಣವೆಂದರೆ ಗೌಡರಿನ್ನೂ ಬಂದಿಲ್ಲ. ಅವರಿಗೆಲ್ಲಿಯಾದರೂ

ಕಡಮೆಯಾದರೆ! ಗುದ್ದುತ್ತಾರೆ! ಅದೂ ಅಲ್ಲದೆ ಒಮ್ಮೊಮ್ಮೆ ಜೊತೆಗೆ ಯಾರನ್ನಾದರೂ ಕರೆದು ತರುತ್ತಿದ್ದುದೂ ಉಂಟು.

ಇದ್ದಕ್ಕಿದ್ದಹಾಗೆ ತಿಮ್ಮನು ಕುತೂಹಲದಿಂದ ನಿಂತು ಎವೆಯಿಕ್ಕದೆ ನೋಡ ತೊಡಗಿದನು. 'ಕಾನುಬೈಲಿ'ಗೆ ನೈಋತ್ಯ ದಿಕ್ಕಿನಲ್ಲಿ ಸುಮಾರು ಒಂದು ಒಂದೂವರೆ ಮೈಲಿ ದೂರದ ಕಣಿವೆಯ ತಪ್ಪಲಿನಲ್ಲಿ ಒಂದು ಬೆಂಕಿ ಗೋಚರಿಸಿತು. ಸುತ್ತಲೂ ಮುತ್ತಿದ್ದ ಕತ್ತಲೆಯಲ್ಲಿ ಅದರ ತಪ್ತಸುವರ್ಣಕಾಂತಿ ದೇದೀಪ್ಯಮಾನ ವಾಗಿ ಮನೋಹರವಾಗಿತ್ತು. ತಿಮ್ಮನು ನೋಡುತ್ತಿದ್ದ ಹಾಗೆಯೇ ಬೆಂಕಿ ಹಿರಿದಾಯಿತು. ಅದರ ಮನೋಹರತೆ ಮಾದು ರುದ್ರತೆಯಾಗತೊಡಗಿತು. ಮೊದಲು ಸ್ಥಿರವಾಗಿ ತೋರುತ್ತಿದ್ದು ಆಮೇಲೆ ಚಂಚಲ ಭೀಮಜ್ವಾಲಾಮಯ ವಾಗಿ ಬೆಂಕಿಯ ಮರುಳ್ಗಳಂತೆ ವಿಕಟ ನೃತ್ಯಮಾಡಲಾರಂಭಿಸಿತು. ಗುಡ್ಡದ ನೆತ್ತಿಯಲ್ಲಿ ನಿಂತು ನೋಡುತ್ತಿದ್ದ ತಿಮ್ಮನು ಏನಿರಬಹುದೆಂದು ಶಂಕಿಸಿದನು. ಏನೇನನ್ನೋ ಊಹಿಸಿದನು. ಯಾವುದಾದರೂ ಗುಡಿಸಲಿಗೆ ಬೆಂಕಿ ಬಿದ್ದಿರ ಬಹುದೆ? ಅಥವಾ ಹುಲ್ಲು ಬಣಬೆಗೆ? ಅಥವಾ ಕರಿಗುಡ್ಡೆಗೆ? ಅಥವಾ ಬಿದಿರುಮೆಳೆಗೆ? ಅಲ್ಲಿ ಯಾವ ಗುಡಿಸಲೂ ಇಲ್ಲ! ಹುಲ್ಲು ಬಣಬೆಗೆ ಬೆಂಕಿ ಬಿದ್ದಿದ್ದರೆ ಬೆಂಕಿ ತಗುಲಿದ ಹುಲ್ಲಿನ ಮುದ್ದೆಗಳು ಹಾರಾಡಬೇಕಿತ್ತು! ಬಿದಿರು ಮೆಳೆಗೆ ಬೆಂಕಿ ಬಿದ್ದಿದ್ದರೆ ಗೆಣ್ಣುಗಳು ಒಡೆದು ಸಿಡಿಯುವ ಸದ್ದು ಕೇಳಿಸಬೇಕಿತ್ತು! ಕರಿಗುಡ್ಡೆಯ ಬೆಂಕಿ ಹೀಗೆ ಒಂದೇ ಸಮನೆ ದೇದೀಪ್ಯಮಾನವಾಗಿ ಉರಿಯುವುದಿಲ್ಲ! ಆಲೋಚಿಸುತ್ತಿದ್ದಂತೆ ತಿಮ್ಮನು ಬೆಚ್ಚಿದನು. ಅವನ ಮನಸ್ಸಿಗೆ ಮತ್ತೊಂದು ಸತ್ಯ ಹೊಳೆಯಿತು. ಬೆಂಕಿ ಉರಿಯುತ್ತಿದ್ದುದು ಕಾನೂರಿನ ಶ್ಮಶಾನದಲ್ಲಿ ಯಲ್ಲವೇ? ಕೆಳಕಾನೂರು ಅಣ್ಣಯ್ಯಗೌಡರ ಹೆಂಡತಿಗೆ ಕಾಯಿಲೆ ಜೋರಾ ಗಿತ್ತು! ಚಂದ್ರಯ್ಯಗೌಡರು ಕಳ್ಳುಗೊತ್ತಿಗೆ ಹೊತ್ತಿಗೆ ಸರಿಯಾಗಿ ಬರದೆ ಇದ್ದುದಕ್ಕೂ ಅದೇ ಕಾರಣವಿರಬಹುದು! ತಿಮ್ಮನು ಮತ್ತೆ ಬೆಂಕಿಯ ಕಡೆಗೆ ನೋಡಿದನು. ಈ ಸಾರಿ ಅವನ ಆಲೋಚನೆ ಊಹೆಗಳೆಲ್ಲವೂ ದೃಷ್ಟಿಯಲ್ಲಿ ಪ್ರತ್ಯಕ್ಷವಾಗಿದ್ದುವು: ಆ ಬೆಂಕಿ ಹಾಗೇಕೆ ವಿಕಟಾಕಾರವಾಗಿ ಕುಣಿಯುತ್ತಿದೆ? ಅದು ನಿಜವಾಗಿಯೂ ಹೆಣ ಬೆಂಕಿ! ಅದರಲ್ಲಿ ದೆವ್ವಗಳಿವೆ! ಅದೋ ಆ ಜ್ವಾಲೆಯ ವಿಕಾರಾಕೃತಿ! ಆ ಬೆಂಕಿಯ ಬೆಳಕಿನಲ್ಲಿ ಯಾರೋ ಸುಳಿದಾಡು ತ್ತಿದ್ದಾರಲ್ಲವೆ? ತಿಮ್ಮನ ಒಳಗಣ್ಣಿಗೆ ಸೂಡಿನ ಮೇಲಿದ್ದ ಹೆಣವು ಹಲ್ಲುಕಿರಿದು ಮೈಮುರಿದು ಹಾಸ್ಯಮಾಡುತ್ತಿದ್ದಂತೆ ತೋರಿತು! ತಾನು ಕೇಳಿದ್ದ ಕೆಲವು ಭಯಾನಕ ಕಥೆಗಳೂ ನೆನಪಿಗೆ ಬಂದುವು. ಮನುಷ್ಯರು ಮನೆಗೆ ಹೋದಮೇಲೆ, ಪಿಶಾಚಿಗಳು ಬಂದು, ಸೂಡಿನ ಮೇಲೆ ಅರೆಬೆಂದಿದ್ದ ಹೆಣವನ್ನು ಕೆಳಗಿಳಿಸಿಕೊಂಡು,

ಪಾಲು ಹಂಚಿಕೊಂಡು ತಿನ್ನುತ್ತ ಕುಣಿಯುತ್ತವಂತೆ! ಆ ಸಮಯದಲ್ಲಿ ಜೀವ ವಿದ್ದರೂ ಸಹ ಕಣ್ಣಿಗೆ ಬಿದ್ದವರನ್ನು ಸೀಳಿ ತಿನ್ನುತ್ತವಂತೆ! ತಿಮ್ಮನಿಗೆ ಕಾಡು ಮತ್ತು ಕಾಡಿನ ಮೃಗಗಳಲ್ಲಿ ಅಂಜಿಕೆಯಿರಲಿಲ್ಲ; ಆದರೆ ಪಿಶಾಚಿ ಎಂದರೆ ಅವನಿಗೆ ನೆತ್ತರು ತಣ್ಣಗಾಗುತ್ತಿತ್ತು. ಕತ್ತಲಲ್ಲಿ ಕಾಡುಗುಡ್ಡದ ನೆತ್ತಿಯಲ್ಲಿ ನಿಂತು ತಪ್ಪಲಿನ ಸುಡುಗಾಡಿನಲ್ಲಿ ಧಗಧಗಿಸುತ್ತಿದ್ದ ಸೂಡುಬೆಂಕಿಯನ್ನು ಕಂಡ ಅವನಿಗೆ ತನ್ನ ಸುತ್ತಲೂ ದೆವ್ವಗಳು ನಿಂತು ತನ್ನನ್ನೇ ಅಳಿಯಾಸೆಯಿಂದ ನೋಡುತ್ತಿದ್ದಂತೆ ಭಾಸವಾಯಿತು. ಕತ್ತಲೆಯೆಲ್ಲಾ ಪಿಶಾಚಿಗಳ ಕಣ್ಣುಗಳಿಂದ ಕಿಕ್ಕಿರಿದಂತಾಯಿತು. ಅಷ್ಟರಲ್ಲಿ ಅವನ ಸಮೀಪದಲ್ಲಿ ಏನೋ ಪಟಪಟನೆ ಸದ್ದಾಗಿ ವಿಕಾರವಾಗಿ ಕೂಗಿಕೊಂಡಿತು. ತಿಮ್ಮನಿಗೆ ತನ್ನ ನಾಡಿಗಳಲ್ಲಿ ನೆತ್ತರಿಗೆ ಬದಲಾಗಿ ಕತ್ತಲೆಯೆ ಪ್ರವಹಿಸಿದಂತಾಯಿತು. ಅವನು ಅನುದ್ವಿಗ್ನನಾಗಿದ್ದರೆ ಅದೊಂದು ಕುರುಡು ಗಪ್ಪಟೆ ಹಕ್ಕಿ ಎಂದು ಗೊತ್ತಾಗುತ್ತಿತ್ತು. ಆದರೆ ಬೆಚ್ಚಿದ ಮನಸ್ಸಿಗೆ ವಿಕೃತಿಯಲ್ಲದೆ ಪ್ರಕೃತಿ ಗೋಚರಿಸುವುದು ದುರ್ಲಭ. ತಿಮ್ಮನು ಬೆದರಿ ನೋಡುತ್ತಾನೆ: ಮರಗಳ ಸಂದಿಯಲ್ಲಿ ಏನೋ ಬೆಳ್ಳಗೆ ನಿಂತಹಾಗಿದೆ! ಅದು ದೂರದ ಆಕಾಶ ಮಾತ್ರವೆಂದು ಅವನ ಕದಡಿದ ಬಗೆಗೆ ಗೊತ್ತಾಗಲಿಲ್ಲ. ತಿಮ್ಮನು ಒಂದೇ ಸಮನೆ ಕಳ್ಳನ್ನೂ ಮೊಗೆಯನ್ನೂ ಅಲ್ಲಿಯೆ ಬಿಟ್ಟು ಮನೆಯ ಕಡೆಗೆ ಧಾವಿಸ ತೊಡಗಿದನು.

ಸ್ವಲ್ಪ ದೂರ ಹೋಗುವಷ್ಟರಲ್ಲಿ ಯಾರೋ ಕೂಗಿದಂತಾಯಿತು. ತಿಮ್ಮನಿಗೆ ಮತ್ತೂ ಗಾಬರಿಯಾಗಿ ಮೆಲ್ಲಗೆ ಓಡತೊಡಗಿದನು. ಮತ್ತೆ ಗಟ್ಟಿಯಾಗಿ ಕೂಗಿದಂತಾಯಿತು. ಚಂದ್ರಯ್ಯಗೌಡರ ಧ್ವನಿಯ ಗುರುತು ಸಿಕ್ಕಿ ನಿಂತನು. ಸೇರೆಗಾರ ರಂಗಪ್ಪಸೆಟ್ಟರೊಡಗೂಡಿ ಚಂದ್ರಯ್ಯಗೌಡರು ಹತ್ತಿರಕ್ಕೆ ಬಂದು ಮಾತಾಡಿಸಿದ ಮೇಲೆಯೇ ತಿಮ್ಮನಿಗೆ ಎದೆ ಗಟ್ಟಿಯಾದುದು!

"ಎಲ್ಲಿಗೆ ಹೋಗ್ತಿದ್ದೀಯೋ?" ಎಂದರು ಗೌಡರು.

"ನೀವು ಬರ್ತೀರೋ ಇಲ್ಲೋ ಅಂತಾ ಮನೆಗೆ ಹೋಗ್ತಿದ್ದೆ" ಎಂದನು ತಿಮ್ಮ.

ಮತ್ತೆ ಮೂವರೂ 'ಕಾನುಬೈಲಿಗೆ' ಹಿಂತಿರುಗಿದರು. ತಿಮ್ಮನಿಗೆ ಸೂಡಿನ ಬೆಂಕಿಯಾಗಲಿ, ಕುರುಡುಗಪ್ಪಟೆ ಹಕ್ಕಿಯ ಕೂಗಾಗಲಿ, ಮರದ ಸಂದಿಯ ಆಕಾಶವಾಗಲಿ, ಈಗ ಭಯಂಕರವಾಗಿ ಕಾಣಲಿಲ್ಲ. ಅಣ್ಣಯ್ಯಗೌಡರ ಹೆಂಡತಿ ತೀರಿಕೊಂಡಿದ್ದೂ, ಚಂದ್ರಯ್ಯಗೌಡರು ತಮ್ಮ ಆಳುಗಳನ್ನು ಕರೆದುಕೊಂಡು ಹೋಗಿ ದಹನಕಾರ್ಯದಲ್ಲಿ ಅವರಿಗೆ ಸಹಾಯಮಾಡಿದ್ದೂ, ಆದ್ದರಿಂದಲೆ ಹೊತ್ತಾದುದರಿಂದ ಸೇರೆಗಾರರನ್ನೂ ಜೊತೆಗೆ ಕರೆದುಕೊಂಡು ಬಂದದ್ದೂ ಎಲ್ಲಾ ತಿಮ್ಮನಿಗೆ ಗೊತ್ತಾಯಿತು. ತಿಮ್ಮನು ಬಿಸಿ ಬಿಸಿ ಕಳ್ಳನ್ನು ಕರಟಗಳಲ್ಲಿ

ಬೊಗ್ಗಿಸಿಕೊಟ್ಟನು. ಗೌಡರೂ ಸೇರೆಗಾರರೂ ಚೆನ್ನಾಗಿ ಹೀರಿದರು. ನಡುವೆ ಮಾತಾಡುತ್ತಲೆ ಇದ್ದರು.

"ನೀವು ಕಂಡಿದ್ದೆಲ್ಲಿ?" ಎಂದು ಗೌಡರು ಕೇಳಿದರು.

"ಕಾಣಿ, ಆ ಉಬ್ಬಿನಾಚೆ" ಎಂದು ಸೆಟ್ಟರು, ಆ ಕಾಡು ಬೆಟ್ಟಗಳಲ್ಲಿ ಒಂದು ದಿಕ್ಕಿನ ಕಡೆಗೆ ಕೈತೋರಿದರು.

"ನಾಟಾ ಕಡಿಸಿದವರು ಸಿಂಗಪ್ಪಗೌಡ್ರೇ ಅಂತಾ ನಿಮಗೆ ಗೊತ್ತಾಗಿದ್ದು ಹೇಗೆ?"

"ಆ ಬಡಗಿಯುವರೆಲ್ಲ ನಮ್ಮೂರಿನವರೇ ಅಲ್ದಾ? ಎಲ್ಲ ಹೇಳಿಬಿಟ್ಟರು ನನಗೆ!"

"ಹಾಂಗಾದರೆ ಒಂದು ಕೆಲಸಮಾಡಿ. ನಾಳೆ ಬೆಳಿಗ್ಗೆ ಆಳು ಕರಕೊಂಡು ಹೋಗಿ, ಆದಷ್ಟು ನಾಟಾ ಹೊರಿಸಿಕೊಂಡು ಬಂದುಬಿಡಿ. ಆಮೇಲೆ ಏನಾಗ್ತದೆ ನೋಡಿಕೊಳ್ತೀನಿ ನಾನು."

"ಅಲ್ಲಾ ಅಯ್ಯಾ, ಯಾರೋ ಕಾಡು ತುಂಬಾ ಕಳ್ಳಬಗನಿ ಕಟ್ಟಿದ್ದಾರಲ್ಲಾ! ಮನ್ನೆ ಮನ್ನೆ ಒಂದು ಕೈ ಕಡ್ದು ಹಾಕ್ದೆ! ಇವತ್ತು ನೋಡ್ತೀನಿ, ಮತ್ತೊಂದು!" ಎಂದು ತಿಮ್ಮನು ನಡುವೆ ತನ್ನ ದೂರನ್ನು ಹೇಳಿಕೊಂಡನು.

"ಯಾರು? ನಿನಗೆ ಗೊತ್ತೇನೋ?"

"ಯಾರಂತಾ ಹೇಳ್ಲಿ?"

ಸೇರೆಗಾರರು ಸುಮ್ಮನಿದ್ದರು. ಅವರಿಗೆ ಒಮ್ಮೆ ಬೈರನ ಹೆಸರನ್ನು ಹೇಳಿ, ಆ ದಿನ ತಮಗಾದ ಅನುಭವವನ್ನು ಹೇಳಿಬಿಡಬೇಕೆಂದು ಚಪಲತೆಯಾಯಿತು. ಸತ್ಯಬುದ್ಧಿಯಿಂದಲ್ಲ, ಸಾಹಸದ ಬುದ್ಧಿಯಿಂದ! ಆದರೆ, ಬೈರನು ಕಾಲಿಗೆ ಬೀಳುವುದರಿಂದಲೂ, ಕಳ್ಳು ಕೊಡುವುದರಿಂದಲೂ ಸೆಟ್ಟರ ನಾಲಗೆಗೆ ಬೀಗ ಮುದ್ರೆ ಹಾಕಿದ್ದನು.

"ಇನ್ನೊಂದು ಸಾರಿ 'ಮಾರ್ಕ' ಬಂದಾಗ ಆ ಮರ ತೋರಿಸು. ಅವನೇ ಹಿಡೀಲಿ ಕಳ್ಳನ್ನ" ಎಂದರು ಗೌಡರು.

"ಹೌದೂ, ನಾನೂ ಒಂದೆರಡು ಮರ ಲೆಸನ್ ಇಲ್ದೇ ಕಟ್ಟೀನಲ್ಲಾ! ಅವನ್ನ ಕಾಡಿಗೆ ಕರಕೊಂಡುಹೋದ್ರೆ, ಅವನ್ನೂ ನೋಡಿಬಿಡ್ತಾನೋ ಏನೋ!" ಎಂದನು ತಿಮ್ಮ ದೀನವಾಣಿಯಿಂದ.

"ಪರ್ವಾ ಇಲ್ಲೋ! ಅದಕ್ಕೇನು? ನಾನು ಹೇಳ್ತೀನಿ. ಕೈ ಬೆಚ್ಚಗೆ ಮಾಡಿದ್ರಾಯ್ತು! ಅವನಪ್ಪನ ಗಂಟೇನು ಹೋಗ್ತದೆ! ಮರ ಕಾಡಿನ್ದು; ಕಟ್ಟ್ಯಾಂವ ನೀನು!"

ದೂರದ ಕಣಿವೆಯಲ್ಲಿದ್ದ ಸೂಡಿನ ಬೆಂಕಿಯನ್ನೇ ನೋಡುತ್ತಿದ್ದ ಸೇರೆಗಾರರು ಬೆಚ್ಚಿಬಿದ್ದರು. ಕೈಲಿದ್ದ ಕರಟವು ಕಳ್ಳಿನೊಡನೆ ಕೆಳಗೆ ಬಿತ್ತು. ಅವರಿಗೆ ತಾವು ನೋಡಿದ್ದ ಹೆಣದ ವಿಕಟ ಚಿತ್ರವು ನೆನಪಿಗೆ ಬಂದು ಭೀತಿಯಾಗಿತ್ತು. ಗಟ್ಟದ ಕೆಳಗಿನವರು ಜೀವಂತವಾಗಿರುವಾಗಲೇ ಮೋಸಗಾರರೆಂದೂ, ಗಟ್ಟದ ಮೇಲಿನವರನ್ನು ಸತ್ತಮೇಲೆ ನಂಬಬಾರದೆಂದೂ ಅವರ ನಂಬುಗೆಯಾಗಿತ್ತು. ಗಟ್ಟದ ಮೇಲಿನ 'ದೆಯ್ಯ' ಎಂದರೆ ಗಟ್ಟದ ಕೆಳಗಿನವರಿಗೆ ಬಹಳ ಭೀತಿ. ಆದ್ದರಿಂದಲೇ ಸರ್ಕಾರದ ಕರಾರುಗಳೂ ಪೋಲೀಸಿನವರೂ ಜೈಲೂ ಬಗ್ಗಿಸಲಾರದ ಅವರನ್ನು ಮಲೆನಾಡಿನವರು 'ದೆಯ್ಯ'ಗಳಿಂದ ನ್ಯಾಯವಾಗಿ ವರ್ತಿಸುವಂತೆ ಮಾಡುತ್ತಿದ್ದರು.

ಸೆಟ್ಟರ ಸ್ಥಿತಿಯನ್ನು ನೋಡಿ ಚಂದ್ರಯ್ಯಗೌಡರಿಗೂ ಸ್ವಲ್ಪ ಭೀತಿಯಾಗಿ "ಏನಾಯ್ತು?" ಎಂದರು.

ಸೆಟ್ಟರು "ಏನೂ ಇಲ್ಲ" ಎಂದು ಮೇಲೆದ್ದವರು ಆಕಾಶದ ಕಡೆಗೂ ಕತ್ತಲೆಯ ಕಡೆಗೂ ನೋಡಿ, "ಇವತ್ತು ಅಮಾವಾಸ್ಯೆ ಅಲ್ಲವೇ? ಹೊತ್ತಾಗುತ್ತದೆ. ಮನೆಗೆ ಹೋಗುವ" ಎಂದರು.

ಅವರ ಸ್ವರ ಮತ್ತು ಮಾತುಗಳ ಅರ್ಥ ಎಲ್ಲರಿಗೂ ಆಯಿತು. ಅದನ್ನು ಮಾತ್ರ ಕುರಿತು ಮಾತಾಡದೆ ಬೇರೆ ವಿಷಯ ಮಾತಾಡುತ್ತ ಎಲ್ಲರೂ ಮನೆಯ ಕಡೆಗೆ ಹೊರಟರು. ಅಷ್ಟರಲ್ಲಿ ಗಾಡಿ ಎತ್ತುಗಳ ಗಂಟೆಯ ಸ್ವರ ಕತ್ತಲೆಯ ಮೌನದಲ್ಲಿ ಮೃದು ಮಧುರವಾಗಿ ಮಾಲೆ ಮಾಲೆಯಾಗಿ ಹನಿ ಹನಿಯಾಗಿ ತೆರೆ ತೆರೆಯಾಗಿ ಕೇಳಿಬಂದಿತು. ಆದರೆ ಅದನ್ನು ಆಲಿಸಿದ ಚಂದ್ರಯ್ಯಗೌಡರಲ್ಲಿ ಹರ್ಷಕ್ಕಿಂತಲೂ ಹೆಚ್ಚಾಗಿ ಕ್ರೋಧ ಉಂಟಾಯಿತು. ಮಧ್ಯಾಹ್ನವೇ ಬರಬೇಕಾಗಿದ್ದ ಗಾಡಿ ರಾತ್ರಿಯವರೆಗೆ ಬಾರದಿದ್ದುದು ಅವರ ಕೋಪಕ್ಕೆ ಕಾರಣ. ಅದೂ ಅಲ್ಲದೆ ಆ ದಿನ ಪ್ರಾತಃಕಾಲದಿಂದ ನಡೆದ ಒಂದೊಂದು ಘಟನೆಯೂ—ಜೋಯಿಸರಿದ್ದಾಗಲೇ ಅಡುಗೆ ಮನೆಯಲ್ಲಿ ಕೂಗಾಟವಾದದ್ದು, ಅಣ್ಣಯ್ಯಗೌಡರಿಗೆ ಹಣಕೊಡದೆ ಕಳುಹಿಸಬೇಕಾಗಿ ಬಂದದ್ದು, ಆಮೇಲೆ ಪುಟ್ಟಮ್ಮ ದೂರು ಹೇಳಿದ್ದು, ತಾವು ಹೆಂಡತಿಯನ್ನು ಹೊಡೆದದ್ದು, ತೀರ್ಥಹಳ್ಳಿಗೆ ಹೋದ ಗಾಡಿ ಸಕಾಲಕ್ಕೆ ಬಾರದಿದ್ದುದು, ಸಿಂಗಪ್ಪಗೌಡರು ಕಳ್ಳನಾಟಾ ಕಡಿಸುತ್ತಿದ್ದಾರೆಂದು ಸೆಟ್ಟರಿಂದ ತಿಳಿದದ್ದು, ಅಣ್ಣಯ್ಯಗೌಡರ ಹೆಂಡತಿ ತೀರಿಕೊಂಡದ್ದರಿಂದ ಅಲ್ಲಿಗೆ ಆಳುಗಳೊಡನೆ ಹೋಗಿ ದಣಿಯಬೇಕಾಗಿ ಬಂದದ್ದು—ಗೌಡರ ಮನಸ್ಸನ್ನು ಕಲಕುತ್ತಲೇ ಬಂದಿದ್ದುದರಿಂದ ಅವರಿಗೆ ಸಮಾಧಾನವಿರಲಿಲ್ಲ. ಕತ್ತಲೆಯಲ್ಲಿ ಕಲ್ಲುಮುಳ್ಳಿನ ಹಾದಿಯಲ್ಲಿ ನಿಮಿಷಕ್ಕೊಂದು ಹೆಜ್ಜೆಯಿಡುತ್ತ ತಡವಿ ಎಡವಿ

ನಡೆಯುತ್ತ ಮುಂದುವರಿದರು. ಮನೆಯ ಸಮೀಪಕ್ಕೆ ಬರಲು ನಾಯಿಗಳ ಕೂಗಾಟದೊಂದಿಗೆ ಮನುಷ್ಯ ಕಂಠದ ರೋದನದ ಬೊಬ್ಬೆಯೂ ಕೇಳಿಸಿ ಗೌಡರಿಗೆ ಗಾಬರಿಯಾಯಿತು.

"ಯಾರ್ರೀ ಅದು ಅಳೋದು?" ಎಂದು ಹಿಂದೆ ಬರುತ್ತಿದ್ದ ಸೇರೆಗಾರರನ್ನು ಕೇಳಿದರು.

ಸೇರೆಗಾರರು ಸ್ವಲ್ಪ ನಿಂತು ಆಲಿಸಿ "ಹಾಳು ನಾಯಿ! ಏನು ಬೊಬ್ಬೆ ಹಾಕ್ತವೆ?" ಎಂದರು.

ತಿಮ್ಮನು "ನಾಗಮ್ಮನೋರ ದನಿ ಕೇಳ್ದಂಗೆ ಆಗ್ತದೆ" ಎಂದನು.

ಮೂವರೂ ಮತ್ತೆ ಮುಂದುವರಿದರು. ಹೆಬ್ಬಾಗಿಲ ಬಳಿಗೆ ಬರಲು ಒಳಗಿನಿಂದ "ಅಯ್ಯೋ ದೇವರೆ, ನಿನ್ನ ಗುಡಿ ಹಾಳಾಗ!...ನಿನ್ನ ಕಣ್ಣಿಂಗಿ ಹೋಗ! ...ನಾನೇನು ಮಾಡಿದ್ದೇನೋ ನಿನಗೆ?...ಅವರನ್ನು ತಿಂದು ಕೊಂಡಿದ್ದೂ ಸಾಲದೆ, ಇದ್ದೊಬ್ಬ ಮಗನ ಬೆನ್ನು ಮುರಿದೇನೋ!...ನಿನ್ನ ಗುಡಿ ಹಾಳಾಗ!" ಎಂದು ಮೊದಲಾಗಿ ಬೈಗುಳವೂ ಆರ್ತನಾದವೂ ಭಯಂಕರವಾಗಿ ಕೇಳಿಸಿತು. ಗೌಡರು ಮನೆಯೊಳಗೆ ಹೋಗಿ ನೋಡುತ್ತಾರೆ: ಜಗಲಿಯ ದೀಪದ ಮಂದ ಕಾಂತಿಯಲ್ಲಿ ಅಂಗಳದ ನಡುವೆ ತುಳಸಿಯ ಕಲ್ಲುಪೀಠದ ಬಳಿ ನಾಗಮ್ಮನವರು ನಿಂತು ಶಪಿಸುತ್ತ ಅಳುತ್ತ ಆಗಾಗ ತಮ್ಮ ತಲೆಯನ್ನು ಕಲ್ಲಿನ ಪೀಠಕ್ಕೆ ರಭಸದಿಂದ ಬಡಿಯುತ್ತ, ತಲೆ ಎದೆಗಳನ್ನು ಎರಡು ಕೈಯಿಂದಲೂ ಹೊಡೆದುಕೊಳ್ಳುತ್ತ, ಶೋಕದ ಮೂರ್ತಿಯಾಗಿ ನಿಂತಿದ್ದಾರೆ! ಪಕ್ಕದಲ್ಲಿ ಪುಟ್ಟಮ್ಮ ವಾಸು ಇಬ್ಬರೂ ಅಳುತ್ತ ಸಮಾಧಾನಪಡಿಸುತ್ತ ನಿಂತಿದ್ದಾರೆ! ಸ್ವಲ್ಪ ದೂರದಲ್ಲಿ ನಿಂತು ಪುಟ್ಟಣ್ಣನೂ ಸಂತೈಕೆಯ ಮಾತುಗಳನ್ನು ಹೇಳುತ್ತಿದ್ದಾನೆ!

## ೧೪

## ಹಳತು ಹೊಸತು ಸೇರಿದರೆ

ಮುತ್ತಳ್ಳಿಯಿಂದ ಕಾನೂರಿನ ಗಾಡಿ ಅಪರಾಹ್ಣದಲ್ಲಿ ಹೊರಡಬೇಕೆಂದು ನಿರ್ಣಯವಾಗಿತ್ತು. ಹೂವಯ್ಯನು ಬೆನ್ನುನೋವು ಗುಣವಾಗುವವರೆಗೂ ಮುತ್ತಳ್ಳಿಯಲ್ಲಿ ಇರಬೇಕೆಂದೂ, ರಾಮಯ್ಯನೂ ಒಂದೆರಡು ದಿನಗಳ ಮಟ್ಟಿಗೆ ಅಣ್ಣನೊಡನೆ ಇರಬೇಕೆಂದೂ, ಸಿಂಗಪ್ಪಗೌಡರು ಆ ದಿನವಾದರೂ ಉಳಿಯಬೇಕೆಂದೂ ಇತ್ಯರ್ಥವಾಯಿತು. ಚಿನ್ನಯ್ಯನಿಗೆ ಮಿತ್ರರು ಹೆಚ್ಚುಕಾಲ ತಮ್ಮ

ಮನೆಯಲ್ಲಿ ನಿಲ್ಲಬೇಕಾದ ಸುಯೋಗ ಲಭಿಸಿತೆಂದು ಬಹಳ ಸಂತೋಷವಾಯಿತು. ನಿಂಗನೂ ಪುಟ್ಟಣ್ಣನೂ ಇನ್ನೇನು ಗಾಡಿಕಟ್ಟಿ ಹೊರಡಬೇಕು, ಅಷ್ಟರಲ್ಲಿ ಕಾಳನು ಓಡಿಬಂದು ಅಗ್ರಹಾರದ ಜೋಯಿಸರು ವೆಂಕಪ್ಪಯ್ಯನವರೂ ಬರುತ್ತಾರಂತೆ, ಸ್ವಲ್ಪ ನಿಲ್ಲಬೇಕಂತೆ ಎಂದು ಹೇಳಿದನು.

ಕಾನೂರಿನಿಂದ ಹೊರಟ ಜೋಯಿಸರು ಅಗ್ರಹಾರಕ್ಕೆ ಹೋಗಿ ಊಟ ಪೂರೈಸಿಕೊಂಡು ನೇರವಾಗಿ ಮುತ್ತಳ್ಳಿಗೆ ಹೋಗಿದ್ದರು. ಶಾಮಯ್ಯಗೌಡ ರಿಂದಲೂ ಸ್ವಲ್ಪ ದುಡ್ಡು ಬರಮಾಡಿಕೊಳ್ಳುವುದೇ ಆ ಪ್ರಯಾಣದ ಮುಖ್ಯ ಉದ್ದೇಶವಾಗಿತ್ತು. ಜೊತೆಗೆ ದೇವರ ಪ್ರಸಾದವನ್ನೂ ತೆಗೆದುಕೊಂಡು ಹೋಗಿದ್ದರು. ಜೋಯಿಸರಿಗೆ ಜಗಲಿಯ ಮೇಲೆ ಮಲಗಿದ್ದ ಹೂವಯ್ಯನನ್ನು ನೋಡಿದ ಕೂಡಲೆ ಒಂದು ವಿಧವಾದ ಜುಗುಪ್ಸೆಯಾಯಿತು. ಏಕೆಂದರೆ, ಅವನು ತಮ್ಮ ವ್ಯಾಪಾರಕ್ಕೆ ಮೂಲಧನದಂತಿದ್ದ ಹಳ್ಳಿಗರ ಮೌಢ್ಯವನ್ನು ನಿವಾರಿಸಲು ಮಾಡುತ್ತಿದ್ದ ಪ್ರಯತ್ನವು ಜೋಯಿಸರ ಭಾಗಕ್ಕೆ ಅಸಹನೀಯ ವಾಗಿತ್ತು. ಅದೂ ಅಲ್ಲದೆ ಬ್ರಾಹ್ಮಣರಾದ ತಮಗಿಂತಲೂ ಶೂದ್ರನಾದ ಅವನಿಗೇ ಉಪನಿಷತ್ತು ಭಗವದ್ಗೀತೆ ಮೊದಲಾದುವುಗಳ ಪರಿಚಯವೂ ಜ್ಞಾನವೂ ಹೆಚ್ಚಾಗಿದೆ ಎಂಬುದು, ಇತರರಿಗೆ ತಿಳಿಯಲು ಸಾಮರ್ಥ್ಯವಿಲ್ಲದಿದ್ದರೂ, ಜೋಯಿಸರಿಗೆ ಚೆನ್ನಾಗಿ ತಿಳಿದಿತ್ತು. ಆದ್ದರಿಂದ ಅವನ ವಿಷಯದಲ್ಲಿ ಒಂದು ತೆರನಾದ ಭಯವೂ ಇತ್ತು. ಅಂತೂ ಹೆಚ್ಚಿಗೆ ಮಾತಾಡದೆ ತಮ್ಮ ಪ್ರಸಾದ ವಿನಿಯೋಗ ಮಾಡಿದರು. ಹೂವಯ್ಯನೂ ನಮ್ರಭಾವದಿಂದ ಅದನ್ನು ಸ್ವೀಕರಿಸಿದನು. ಹೂವಯ್ಯನ ಸ್ಥಿತಿಯನ್ನರಿತು ಧೈರ್ಯಗೊಂಡ ಜೋಯಿಸರು ಬೆನ್ನು ನೋವು ಹೋಗುವಂತೆ ಮಂತ್ರ ಮಾಡುವುದಾಗಿಯೂ, ತಾಯಿತಿ ಕಟ್ಟುವುದಾಗಿಯೂ, ಪೂಜೆ ಮಾಡಿಸುವುದಾಗಿಯೂ, ಗ್ರಹಗತಿಯನ್ನು ಸರಿ ಮಾಡುವುದಾಗಿಯೂ ಶಾಮಯ್ಯಗೌಡರೊಡನೆ ಹೇಳಿದರು. ಗೌಡರು ಮರುಮಾತಾಡದೆ ಸಮ್ಮತಿಸಿ ಹೂವಯ್ಯನಿಗೆ ಜೋಯಿಸರ ಅನುಗ್ರಹದ ವಿಚಾರವಾಗಿ ಹೇಳಿದರು. ಹೂವಯ್ಯನು ನಕ್ಕು ಹಾಸ್ಯಮಾಡಿಬಿಟ್ಟನು. ಜೋಯಿಸರಿಗೂ ಅವನಿಗೂ ಬಿಸಿಬಿಸಿಯಾಗಿ ನಾಲ್ಕು ಮಾತಾಯಿತು. ಜೋಯಿಸ ರಿಗೆ ಮುಖಭಂಗವಾಯಿತು. ಸಿಂಗಪ್ಪಗೌಡರೂ ಶಾಮಯ್ಯಗೌಡರೂ ಜೋಯಿಸರ ಪರವಾಗಿಯೂ, ಚಿನ್ನಯ್ಯ ರಾಮಯ್ಯರು ಹೂವಯ್ಯನ ಪರ ವಾಗಿಯೂ ಮಾತಾಡತೊಡಗಿದರು. ಮೊದಲು ವಿನೋದವಾಗಿ ನಡೆಯುತ್ತಿದ್ದ ಚರ್ಚೆ ಕಡೆ ಕಡೆಗೆ ವಿಷಾದವಾಗಲಾರಂಭಿಸಿತು.

ಜೋಯಿಸರು ಸಿಟ್ಟಾಗಿ "ಹೂವಯ್ಯಾ, ನಿನಗೆ ಈ ಬುದ್ಧಿ ಒಳ್ಳೆಯದಲ್ಲ.

ಹಿಂದಿನಿಂದ ನಡೆದುಬಂದ ಆಚಾರ, ದೇವರು, ವೇದ, ಶಾಸ್ತ್ರಗಳನ್ನೆಲ್ಲ ಅಲ್ಲಗಳೆಯುವ ನಿನಗೆ ಕೇಡು ತಪ್ಪಿದ್ದಲ್ಲ" ಎಂದರು.

ಹೂವಯ್ಯನೂ "ನೀವು ತಿಳಿದವರೆಂದುಕೊಂಡು ಹಳ್ಳಿಯವರಿಗೆ ಮೌಢ್ಯವನ್ನೇ ಉಪದೇಶಮಾಡಿ, ನಿಮಿತ್ತ ಹೇಳುವುದು, ವಿಭೂತಿ ಕೊಡುವುದು, ಸತ್ಯನಾರಾಯಣವ್ರತ ಮಾಡಿಸುವುದು, ದೆವ್ವ ಪಿಶಾಚಿಗಳಿಗೆ ಬಲಿಕೊಡಿಸುವುದು, ಇದರಿಂದ ಹೊಟ್ಟೆ ಹೊರೆದುಕೊಳ್ಳುತ್ತಿದ್ದೀರಿ. ಟ್ರಂಕು ತಗುಲಿ ಬೆನ್ನು ನೋವಾಗಿದ್ದರೆ ಔಷಧಿ ಮಾಡಿ ಎಂದು ಹೇಳುವ ಬದಲು ಬೂದಿ ಕುಂಕುಮ ಹಚ್ಚಿ, ಮಂತ್ರ ಹಾಕಿಸಿ ಎಂದು ಹೇಳುತ್ತಿದ್ದೀರಲ್ಲಾ! ಇದು ಯಾವ ತತ್ತ್ವಶಾಸ್ತ್ರದಲ್ಲಿ ಹೇಳಿದೆ? ಹಾಗೆ ಹೇಳಿರುವ ಗ್ರಂಥಗಳಿದ್ದರೆ ಅವು ಮನ್ನಣೆಗೆ ಯೋಗ್ಯವಾದುವೆ? ನಿಮ್ಮ ಬೋಧನೆಯಿಂದ ಎಷ್ಟು ಜನರು ರೋಗಕ್ಕೆ ಸರಿಯಾಗಿ ಮದ್ದುಮಾಡದೆ, ಬರಿಯ ಬೂದಿ ವಿಭೂತಿಗಳನ್ನೇ ಹಚ್ಚಿಕೊಂಡು ಪ್ರಾಣ ಕಳೆದುಕೊಳ್ಳುತ್ತಿದ್ದಾರೆ..." ಎಂದು ಮೊದಲಾಗಿ ರಭಸದಿಂದ ಹೇಳಿಬಿಟ್ಟನು.

"ಏನಯ್ಯಾ, ನಿನ್ನ ತಂದೆ ಎಷ್ಟು ಗೌರವದಿಂದ ನಡೆದುಕೊಳ್ಳುತ್ತಿದ್ದನು? ಅವನಿಗೆ ದೇವರಲ್ಲಿ ಎಷ್ಟು ಭಯ, ಭಕ್ತಿ! ನೀನು ಚಿಕ್ಕವನಾಗಿದ್ದಾಗ ನಾನೇ ಎಷ್ಟು ಸಾರಿ ಚೀಟಿ ವಿಭೂತಿ ಕೊಟ್ಟಿದ್ದೇನೆ!..." ಎಂದು ಜೋಯಿಸರು ಹಳೆಯ ಕಥೆಗಳನ್ನೆಲ್ಲ ಹೇಳಿದರು.

ಹೂವಯ್ಯನು ತಂದೆಯ ನೆನಪಾಗಿ ಮೃದುವಾದನು. ನಮ್ರವಾಣಿಯಿಂದ ಮತ್ತೆ ಹೇಳಿದನು.

"ಜೋಯಿಸರೇ, ದಯವಿಟ್ಟು ಕ್ಷಮಿಸಿ. ನಾನು ಮಾತಾಡಿದ್ದು ನಿಮ್ಮ ಮೇಲೆ ಅಗೌರವದಿಂದಲ್ಲ. ನಿಮ್ಮ ತತ್ತ್ವಗಳಿಂದ ಜನರಿಗೆ ಎಷ್ಟು ಹಾನಿಯಾಗುತ್ತದೆ ಎಂದು ಹೇಳಿದೆನಷ್ಟೆ! ನಿಮ್ಮ ಮನಸ್ಸಿನಲ್ಲಿ ಕೃತ್ರಿಮತೆ ಇಲ್ಲದ ಮಾತ್ರಕ್ಕೇ ನೀವು ಹೇಳುವುದೆಲ್ಲ ಸತ್ಯವಾಗಲಾರದು...ನಮ್ಮ ತಂದೆ ಶ್ಲೇಷ್ಮಜ್ವರದಿಂದ ನರಳುತ್ತಿದ್ದಾಗ ನಿಮ್ಮ ಪೂಜೆ, ಮಂತ್ರ, ತಂತ್ರಗಳಿಗೋಸ್ಕರವಾಗಿಯಲ್ಲವೇ ಅವರು ಅಂಗಳಕ್ಕಿಳಿದು ಬಂದು ತುಲಸೀಪೀಠದ ಮುಂದೆ ಕುಳಿತು, ತಣ್ಣೀರು ತಂಗಾಳಿಗಳ ಸೋಂಕಾಗಿ, ರೋಗ ಮತ್ತೂ ವಿಷಮವಾಗಿ, ಕಡೆಗೆ ತೀರಿಕೊಂಡಿದ್ದು! ಆಸ್ಪತ್ರೆಯಲ್ಲಿ ಅಂತಹ ರೋಗಿಯನ್ನು ಅಲುಗಾಡುವುದಕ್ಕೆ ಬಿಡುತ್ತಾರೆಯೇ? ನೀವೇನೋ ಸದುದ್ದೇಶದಿಂದಲೇ ಆ ಕೆಲಸ ಮಾಡಿದಿರಿ... ಆದರೆ, ಸದುದ್ದೇಶ ಅಜ್ಞಾನವನ್ನು ಸುಜ್ಞಾನವನ್ನಾಗಿ ಮಾಡಲಾರದು. ... ನಾನೀಗ ಮಾತಾಡಲಾರೆ... ದಯವಿಟ್ಟು ಕ್ಷಮಿಸಿ... ನನಗೆ ನಿಮ್ಮಲ್ಲಿ ಅಗೌರವ

ಎಂದು ಮಾತ್ರ ತಿಳಿಯಬೇಡಿ. . . ನಮ್ಮ ತಂದೆ ಗೌರವಿಸಿದ ನಿಮ್ಮನ್ನು ನಾನೂ ಗೌರವಿಸುತ್ತೇನೆ . . ."

ಸೀತೆ ಬಿಸಿನೀರು ತಂದಳು. ಚಿನ್ನಯ್ಯ ರಾಮಯ್ಯರು ಬೆನ್ನಿಗೆ ಸೆಕೆಕೊಡಲು ಪ್ರಾರಂಭಿಸಿದರು. ಸಿಂಗಪ್ಪಗೌಡರೂ ಶಾಮಯ್ಯಗೌಡರೂ ಜೋಯಿಸರೂ ಯಾವುದೊ ಬೇರೆ ವಿಷಯ ಮಾತಾಡತೊಡಗಿದ್ದರು.

ಅಷ್ಟರಲ್ಲಿ ಹೊರಗಡೆ ಯಾರೋ ಬೊಬ್ಬೆಹಾಕಿ ರೋದಿಸುವುದು ಕೇಳಿಸಿತು. ಎಲ್ಲರೂ ಗಾಬರಿಯಾಗಿ, ಏನು ? ಏನು ? ಎನ್ನುವಷ್ಟರಲ್ಲಿ ಕುಂಬಾರ ನಂಜನ ಹೆಂಡತಿ ಗಟ್ಟಿಯಾಗಿ ಅಳುತ್ತ ಅಂಗಳಕ್ಕೆ ಬಂದಳು. ಅವಳ ಕಿವಿ ಹರಿದು ಸೀರೆಯ ಮೇಲೆ ನೆತ್ತರು ಸೋರುತ್ತಿತ್ತು. ಕೆನ್ನೆ, ಕೈ ಎಲ್ಲಾ ರಕ್ತಮಯವಾಗಿತ್ತು. ವಿಚಾರಿಸಲಾಗಿ ಅವಳ ಗಂಡನು ಅವಳನ್ನು ಹೊಡೆದು, ಕಿವಿಯ ಬುಗುಡಿಯನ್ನು ಹರಿದು ಕಿತ್ತುಕೊಂಡು ಕಳ್ಳಂಗಡಿಗೆ ಹೋದನೆಂದು ಗೊತ್ತಾಯಿತು. ಶಾಮಯ್ಯ ಗೌಡರು ಕ್ರುದ್ಧರಾಗಿ ನಂಜನನ್ನು ಎಳೆದು ತರಲು ಕಾಳನನ್ನೂ ಪುಟ್ಟನನ್ನೂ ಅಟ್ಟಿದರು. ಆದರೆ ನಂಜ ಸಿಕ್ಕಲಿಲ್ಲ. "ಅವನು ಮನೆಗೆ ಬರಲಿ, ಮೈ ಮುರಿಯು ತ್ತೇನೆ" ಎಂದು ಹೇಳಿ ಅವಳ ಕಿವಿಗೆ ಬಳಿದುಕೊಳ್ಳಲು ಸ್ವಲ್ಪ ತೆಂಗಿನೆಣ್ಣೆಯನ್ನು ಕೊಡಿಸಿ ಸಮಾಧಾನಮಾಡಿ ಕಳಿಸಿದರು.

ಈ ಗಲಭೆಗಳೆಲ್ಲ ಮುಗಿಯುವ ವೇಳೆಗೆ ಕತ್ತಲಾಯಿತು. ಜೋಯಿಸರು ಗಾಡಿ ಹೊಡೆಯುತ್ತಿದ್ದವನು ಹೊಲೆಯನಲ್ಲವೆಂದು ತಿಳಿದ ಮೇಲೆ ಗಾಡಿ ಹತ್ತಿ ದರು. ಪುಟ್ಟಣ್ಣ ಗಾಡಿಯ ಹಿಂಭಾಗದಲ್ಲಿ ಜೋಯಿಸರಿಗೆ ದೂರವಾಗಿ ಕುಳಿತನು. ಗಾಡಿ ಕಾನೂರಿಗೆ ಹೊರಟಿತು.

ಗಾಡಿ ಕಳ್ಳಂಗಡಿಯ ಸಮೀಪಕ್ಕೆ ಬರುತ್ತಿದ್ದಾಗ ರಸ್ತೆಯ ಪಕ್ಕದ ಕಾಡುಗತ್ತಲೆ ಯಲ್ಲಿ ಬೆಳ್ಳಗಿದ್ದ ಒಂದು ಮೈಲಿಕಲ್ಲಿನ ಬಳಿ ವ್ಯಕ್ತಿಯೊಬ್ಬನು ನಿಂತು ಕಂಡಾ ಬಟ್ಟೆಯಾಗಿ ಬಯ್ಯುತ್ತ, ಉಗುಳುತ್ತ, ಮೈಲಿಕಲ್ಲಿಗೆ ಗುದ್ದಿ ಗುದ್ದಿ ಒದೆಯುತ್ತಿದ್ದನು. ಗಾಡಿ ಹತ್ತಿರಕ್ಕೆ ಬರಲು, ಅದಕ್ಕೆ ಕಟ್ಟಿದ್ದ ಲಾಟೀನಿನ ಬೆಳಕಿನಲ್ಲಿ ಆ ವ್ಯಕ್ತಿ ನಂಜ ನೆಂದು ಗೊತ್ತಾಯಿತು. ಅವನಿಗೆ ಇತ್ತಣ ಧ್ಯಾಸವಿರಲಿಲ್ಲ. ಕುಡಿದು ಹಣ್ಣು ಹಣ್ಣಾಗಿದ್ದನು. ಆ ಮೈಲಿಕಲ್ಲನ್ನು ತನ್ನ ಹೆಂಡತಿಯೆಂದೋ ಅಥವಾ ಇನ್ನಾವ ಶತ್ರುವೆಂದೋ ಭಾವಿಸಿ ಒದ್ದು ಒದ್ದು ಗುದ್ದುತ್ತಿದ್ದನು. ನಿಂಗ ಗಾಡಿ ನಿಲ್ಲಿಸ ಬೇಕೆಂದಿದ್ದನು. ಆದರೆ ಜೋಯಿಸರು ಹೆದರಿ, ಒಂದೇ ಉಸಿರಿನಲ್ಲಿ 'ಮುಂದಕ್ಕೆ ಹೊಡಿ, ನಿಲ್ಲಿಸಬೇಡ' ಎಂದರು. ಸ್ವಲ್ಪ ದೂರ ಹೋದ ಮೇಲೆ ಅವರು ಗಾಡಿಯಿಂದಿಳಿದು ಪ್ರೇತ ಪಿಶಾಚಿಗಳಿಗೆ ಕೇಳಿಸುವಂತೆ ದೇವರನಾಮವನ್ನು ಗಟ್ಟಿಯಾಗಿ ಜಪಿಸುತ್ತ ಅಗ್ರಹಾರಕ್ಕೆ ಅಗಲುವ ದಾರಿಯಲ್ಲಿ ಹೋದರು.

ಹೋಗುವಾಗ ನಾಳೆ ಕಳುಹಿಸುತ್ತೇನೆ ಎಂದು ಗಾಡಿಯ ಲಾಟೀನನ್ನೂ ತೆಗೆದುಕೊಂಡರು. ಕತ್ತಲೆಯಲ್ಲಿ ಕಾಡಿನ ಕಾಲುದಾರಿಯಲ್ಲಿ ಹೋಗಬೇಕಾಗಿದ್ದುದರಿಂದ ಅವರಿಗೆ ಬೆಳಕಿನ ಆವಶ್ಯಕತೆ ನಿಜವಾಗಿತ್ತು.

ಜೋಯಿಸರನ್ನು ಬೀಳ್ಕೊಂಡು ಗಾಡಿ ಮುಂಬರಿಯಿತು. ಕತ್ತಲೆಯಾಗಿದ್ದರೂ ಎತ್ತುಗಳಿಗೆ ರಸ್ತೆಯ ಜಾಡು ಚೆನ್ನಾಗಿ ಕಾಣುತ್ತಿದ್ದುದರಿಂದ ಚುರುಕಾಗಿ ನಡೆಯತೊಡಗಿದುವು. ಅದೂ ಅಲ್ಲದೆ ಅವುಗಳಿಗೆ ಹುರುಳಿಯ ನೆನಪು ಚಾಟಿಯ ಏಟಿಗಿಂತಲೂ ಬಲವಾಗಿತ್ತು. ಮನೆಯಲ್ಲಿ ಬೆಂದು ಬಿಸಿಬಿಸಿಯಾಗಿರುವ ಹುರುಳಿ ತಮಗಾಗಿ ಸಿದ್ಧವಾಗಿರುತ್ತದೆ ಎಂಬುದು ಅವಕ್ಕೆ ಅಭ್ಯಾಸ ಮಹಿಮೆಯಿಂದ ತಿಳಿದುಹೋಗಿತ್ತು.

ಗಾಡಿ ಕಳ್ಳಂಗಡಿಯಿದ್ದ ಜಾಗವನ್ನು ದಾಟಿ ಸ್ವಲ್ಪ ದೂರ ಹೋಗಿತ್ತು. ಕಾಡು ಸ್ವಲ್ಪ ದಟ್ಟವಾಗಿ ಬೆಳೆದಿದ್ದುದರಿಂದ ಮನುಷ್ಯರ ಕಣ್ಣಿಗಂತೂ ರಸ್ತೆ ಕಾಣುತ್ತಲೇ ಇರಲಿಲ್ಲ. ಇದ್ದಕ್ಕಿದ್ದ ಹಾಗೆ ರಾತ್ರಿಯ ಮೌನವನ್ನೆಲ್ಲ ಮಧುರವಾಗಿ ಮಥಿಸುತ್ತಿದ್ದ ಎತ್ತುಗಳ ಕೊರಳ ಗಂಟೆಗಳ ಲೌಹರವಮಾಲೆ ಸ್ತಬ್ಧವಾಯಿತು. ಎತ್ತು ನಿಂತು, ಗಾಡಿ ನಿಂತಿದ್ದಿತು! ಎತ್ತು ಉಸಿರಾಡುವುದು ಮಾತ್ರ ಕೇಳಿಸುತ್ತಿತ್ತು. ಅನ್ಯಮನಸ್ಕನಾಗಿ ಗಾಡಿಯೊಳಗೆ ಕೂತಿದ್ದ ನಿಂಗ ಎಚ್ಚತ್ತು ಎತ್ತುಗಳನ್ನು ಚಪ್ಪರಿಸಿದನು. ಅವು ಕದಲಲಿಲ್ಲ. ಬೆಚ್ಚಿ ಉಸಿರಾಡುತ್ತಿದ್ದುವು. ಬಾರು ಕೋಲಿನಿಂದ ಹೊಡೆದನು. ಎತ್ತು ಕುಣಿದಾಡಿ ಗಂಟೆಗಳ ಸದ್ದಾಯಿತೇ ಹೊರತು, ನಿಂತ ಹೆಜ್ಜೆ ಕೀಳಲಿಲ್ಲ. ನಿಂಗ ಪುಟ್ಟಣ್ಣರಿಗೆ ಆಶ್ಚರ್ಯವಾಯಿತು. ಎಲ್ಲಿಯಾದರೂ ದಾರಿಯ ಪಕ್ಕದಲ್ಲಿ ಹುಲಿ ಕೂತಿರಬಹುದೆಂದು ಊಹಿಸಿದರು. ನಿಂಗನಂತೂ ಕೆಳಗಿಳಿಯಲೇ ಇಲ್ಲ. ಪುಟ್ಟಣ್ಣ ಕೆಳಗಿಳಿದು ಗಾಡಿಯ ಮುಂದೆ ಹೋದನು. ರಸ್ತೆಯ ಮಧ್ಯೆ ಅವನ ಕಾಲಿಗೆ ಏನೋ ಬೆಚ್ಚಗೆ ಸೋಂಕಿದಂತಾಯಿತು. ಬಾಗಿ ನೋಡುತ್ತಾನೆ: ಮನುಷ್ಯದೇಹ; ರಸ್ತೆಗೆ ಅಡ್ಡಲಾಗಿ ಬಿದ್ದಿದೆ! ಅದಕ್ಕಾಗಿಯೇ ಎತ್ತು ಮುಂದೆ ಹೋಗದೆ ನಿಂತಿದ್ದುದು! ನಿಂಗನಿಂದ ಬೆಂಕಿ ಪೆಟ್ಟಿಗೆ ಈಸಿಕೊಂಡು ಒಂದು ಕಡ್ಡಿ ಗೀಚಿ ನೋಡುತ್ತಾನೆ: ಕೆಳಕಾನೂರು ಅಣ್ಣಯ್ಯಗೌಡರ ಮಗ ಓಬಯ್ಯ! ಮದ್ಯಪಾನದಿಂದ ಮೂರ್ಛೆಹೋಗಿ ಬಿದ್ದಿದ್ದಾನೆ! ಇಬ್ಬರೂ ಸೇರಿ ಅವನನ್ನು ಎತ್ತಿ ಗಾಡಿಗೆ ಹಾಕಿಕೊಂಡರು.

ಗಾಡಿ ಕಾನೂರಿಗೆ ಬರುತ್ತಿದ್ದಾಗ ದೂರದಿಂದಲೆ ಗಂಟೆಯ ಸದ್ದನ್ನು ಕೇಳಿ ವಾಸು, ಪುಟ್ಟ ಇಬ್ಬರೂ ಹೆಬ್ಬಾಗಿಲಿಗೆ ಬಂದಿದ್ದರು. ವಾಸುವಿಗೆ ಹೂವಣ್ಣಯ್ಯ ರಾಮಣ್ಣಯ್ಯರನ್ನು ಎದುರುಗೊಳ್ಳಲು ಎದೆ ಹಿಡಿಸದಷ್ಟು ಉತ್ಸಾಹ, ಉಲ್ಲಾಸವಿತ್ತು. ಆದರೆ ಪುಟ್ಟಣ್ಣನಿಂದ ವಿಷಯವೆಲ್ಲ ಗೊತ್ತಾದ ಮೇಲೆ ಅವನ ಮುಖ

ಖಿನ್ನವಾಯಿತು. ಹೇರಾಸೆ ಗುಳ್ಳೆಯಂತೆ ಒಡೆದುಹೋಯಿತು. ಒಳಗೆ ಓಡಿ ಹೋಗಿ ದೊಡ್ಡಮ್ಮ ಅಕ್ಕಯ್ಯರಿಗೆ ಪುಟ್ಟಣ್ಣ ಹೇಳಿದ್ದನ್ನೆಲ್ಲ ಉದ್ವೇಗದಿಂದ ಹೇಳಿಬಿಟ್ಟನು. ಹುಡುಗನಾದುದರಿಂದ ಮಾತಾಡುವುದರಲ್ಲಿ ಎಚ್ಚರಿಕೆ ಸಾಲದೆ "ಗಾಡಿ ಬಿದ್ದು ಹೂವಣ್ಣಯ್ಯನ ಬೆನ್ನು ಮುರಿದಿದೆಯಂತೆ. ರಾಮಣ್ಣಯ್ಯನೂ ಅವನೊಡನೆ ಮುತ್ತಳ್ಳಿಯಲ್ಲಿ ಇದ್ದಾನಂತೆ" ಎಂದು ನಡೆದುದನ್ನಾದರೂ ಸ್ವಲ್ಪ ಅತ್ಯುಕ್ತಿಯಿಂದ ಹೇಳಿದನು. ಒಡನೆಯೆ ನಾಗಮ್ಮನವರು ಗಟ್ಟಿಯಾಗಿ ರೋದಿಸುತ್ತ ಎದೆ ಬಡಿದುಕೊಳ್ಳುತ್ತ ದೇವರನ್ನೂ ಚಂದ್ರಯ್ಯಗೌಡರನ್ನೂ ಸುಬ್ಬಮ್ಮನನ್ನೂ ಬಾಯಿಗೆ ಬಂದಂತೆ ಶಪಿಸುತ್ತ ಅಂಗಳಕ್ಕೆ ನುಗ್ಗಿ ತುಲಸಿಯ ಕಲ್ಲಿಗೆ ತಲೆ ಚಚ್ಚಿಕೊಳ್ಳತೊಡಗಿದರು. ಅಷ್ಟು ಹೊತ್ತಿಗೆ ಸರಿಯಾಗಿ ಕಾನುಬೈಲಿನಲ್ಲಿ ಕಳ್ಳು ಕುಡಿದು ಪೂರೈಸಿ ಚಂದ್ರಯ್ಯಗೌಡರೂ ಸೆಟ್ಟರೂ ತಿಮ್ಮನೊಡನೆ ನಾಗಮ್ಮನವರ ಬೈಗುಳವನ್ನೆಲ್ಲ ಆಲಿಸುತ್ತ ಮನೆಯೊಳಗೆ ಪ್ರವೇಶಮಾಡಿದರು.

## ೧೫

## ಹಲ್ಲಿಯ ಕೃಪೆ

ಅಮಾವಾಸ್ಯೆಯ ಕಗ್ಗತ್ತಲು ಕವಿದು ನಾಡು ಕಾಡುಗಳೆಲ್ಲ ಮಸಿಯ ಮುದ್ದೆಯಾಗಿತ್ತು. ಮೇಘರಿಕ್ತ ಗಗನತಲದಲ್ಲಿ ಅಸಂಖ್ಯ ತಾರೆಗಳು ಉಜ್ವಲ ಪ್ರಭೆಯಿಂದ ಮಿಣುಕುತ್ತಿದ್ದುವು. ಮುತ್ತಳ್ಳಿಯ ಶ್ಯಾಮಯ್ಯಗೌಡರ ಮನೆಯ ಜಗಲಿಯಲ್ಲಿ ಪ್ರಕಾಶಮಾನವಾಗಿ ಉರಿಯುತ್ತಿದ್ದ ಲ್ಯಾಂಪಿನ ಬೆಳಕಿಗೆ ಮೋಹಿತವಾಗಿ ನಾಲ್ಕಾರು ದೀಪದ ಹುಳುಗಳು ಹಾರಾಡುತ್ತಿದ್ದುವು. ಜಗಲಿಯ ಮೇಲೆ ಶ್ಯಾಮಯ್ಯಗೌಡರು, ಸಿಂಗಪ್ಪಗೌಡರು, ರಾಮಯ್ಯ ಮಾತಾಡುತ್ತಾ ಕುಳಿತಿದ್ದರು. ಮಾತಿನ ವಿಸ್ತೀರ್ಣ ಮೈಸೂರಿನಿಂದ ಬೈಲುಕೆರೆಯವರೆಗೂ ಹಬ್ಬಿತ್ತು.

ಲಕ್ಷ್ಮಿ ಒಳಗಿನಿಂದ ಓಡಿಬಂದು ತಂದೆಯ ಬಳಿಗೆ ಹೋಗುತ್ತಿದ್ದಳು. ಮಧ್ಯೆ ಸಿಂಗಪ್ಪಗೌಡರು ಅವಳನ್ನು ಹಿಡಿದುಕೊಂಡು ತೊಡೆಯಮೇಲೆ ಕೂರಿಸಿಕೊಂಡರು. ಅವಳು ಮೊದಲು ಸಂಕೋಚಭಾವವನ್ನು ಪ್ರದರ್ಶಿಸಿದರೂ, ತುಸು ಹೊತ್ತಿನಲ್ಲಿಯೆ 'ಸೀತೆಮನೆ ಸಿಂಗಪ್ಪ ಮಾವ' ನೊಡನೆ ಸಲಿಗೆಯಿಂದ ಮಾತಾಡತೊಡಗಿದಳು. ಮಾತುಗಳೋ ವಿಧವಿಧವಾಗಿ ವಿಚಿತ್ರವಾಗಿದ್ದುವು. ಮಕ್ಕಳೊಡನೆ ವಿನೋದ ಮಾಡುವುದೆಂದರೆ ಸಿಂಗಪ್ಪಗೌಡರಿಗೆ ಬಹಳ ಆಸೆ. ಸಿಂಗಪ್ಪಗೌಡರೂ ಭಾರತ ರಾಮಾಯಣಗಳ ಕಥೆಗಳನ್ನು ಸ್ವಾರಸ್ಯವಾಗಿ ಹೇಳುತ್ತಿದ್ದು

ದರಿಂದ ಮಕ್ಕಳಿಗೆಲ್ಲರಿಗೂ ಅವರೆಂದರೆ ಕುತೂಹಲ. ಲಕ್ಷ್ಮಿ ಮತ್ತು ಸಿಂಗಪ್ಪ ಗೌಡರ ವಿನೋದ ಸಂಭಾಷಣೆಯಲ್ಲಿ ನಡುನಡುವೆ ಭಾಗಿಗಳಾಗಿ ಉಳಿದವರೂ ನಗುತ್ತಿದ್ದರು.

ಸಿಂಗಪ್ಪಗೌಡರು "ಲಕ್ಷ್ಮೀ, ನೀನು ನಿನ್ನವ್ವನ ಮಗಳೋ? ನಿನ್ನಪ್ಪಯ್ಯನ ಮಗಳೋ?" ಎಂದು ಕೇಳಿದರು.

ಲಕ್ಷ್ಮಿ "ನನ್ನವ್ವನ ಮಗಳು" ಎಂದಳು.

"ಯಾರು ಹೇಳಿದವರು ನಿನಗೆ? ನನ್ನ ಕಣ್ಣೆದುರು ನಿನ್ನ ಅಪ್ಪಯ್ಯ ಒಂದು ಮಣ ಅಡಕೆ ಕೊಟ್ಟು ನಿನ್ನ ಕೊಂಡುಕೊಂಡಿದ್ದಾರೆ, ಕಂದಾರೆಯವರ ಕೈಯಿಂದ! ಅವ್ವನ ಮಗಳಲ್ಲ ನೀನು; ಅಪ್ಪಯ್ಯನ ಮಗಳು."

ಲಕ್ಷ್ಮಿ ಹುಬ್ಬು ಗಂಟುಹಾಕಿ "ಉ್ಹೂಹ್ಹೂ! ನಾನು ನನ್ನವ್ವನ ಮಗಳು!" ಎಂದಳು.

"ಹೋಗಲಿ ಬಿಡು. ನಿನ್ನಪ್ಪಯ್ಯ ನಿನ್ನವ್ವಗೆ ಏನಾಗಬೇಕು? ಹೇಳು."

"ಅಪ್ಪಯ್ಯಾಗಬೇಕು" ಎಂದಳು ಲಕ್ಷ್ಮಿ. ಅವಳ ಭಾಗಕ್ಕೆ ತಾನು ಕೊಟ್ಟ ಉತ್ತರ ಸಂಪೂರ್ಣವಾಗಿ ಸತ್ಯವಾಗಿತ್ತು. ಆದರೆ, ಎಲ್ಲರೂ ಗೊಳ್ಳೆಂದು ನಗಲು, ಮುಖ ಪೆಚ್ಚಾಯಿತು.

"ಹೋಗಲಿ! ನಿನ್ನವ್ವ ನಿನ್ನಪ್ಪಯ್ಯಗೆ ಏನಾಗಬೇಕು? ಅದನ್ನಾದ್ರೂ ಸರಿಯಾಗಿ ಹೇಳು."

ಲಕ್ಷ್ಮಿ ಉತ್ತರ ಕೊಡಲು ಹಿಂದೆಗೆಯಲು ಸಿಂಗಪ್ಪಗೌಡರು "ಅವ್ವಾಗ ಬೇಕಲ್ಲವೇನೇ?" ಎಂದರು.

ಅದನ್ನೇ ಹೇಳಬೇಕೆಂದಿದ್ದ ಲಕ್ಷ್ಮಿ 'ಉ್ಹೂ' ಎಂದಳು.

"ಹಾಗಾದರೆ ನಿನ್ನವ್ವ ನಿನಗೂ ನಿನ್ನಪ್ಪಯ್ಯಗೂ ಇಬ್ಬರಿಗೂ ಅವ್ವ?"

"ಹ್ಹೂ" ಎಂದಳು ಲಕ್ಷ್ಮಿ. ಎಲ್ಲರೂ ನಕ್ಕರು.

ಲಕ್ಷ್ಮಿ ಹೇಗಾದರೂ ಮಾಡಿ ಸಿಂಗಪ್ಪಗೌಡರ ಮನಸ್ಸನ್ನು ಬೇರೆಯ ಕಡೆಗೆ ತಿರುಗಿಸಬೇಕೆಂದು ಮನಸ್ಸುಮಾಡಿ, ಅವರು ಹೊದ್ದುಕೊಂಡಿದ್ದ ಶಾಲನ್ನು ಹಿಡಿದು "ಇದು ಅಪ್ಪಯ್ಯನ ಶಾಲೂ!" ಎಂದು ರಾಗ ಎಳೆದಳು.

"ಒಳ್ಳೆ ಹುಡುಗಿ ನೀನು? ನಾನಿವತ್ತು ತೀರ್ಥಹಳ್ಳಿಯಿಂದ ತಂದೀನಿ."

"ಹ್ಹೂ, ನಂಗೊತ್ತು. ಇದಪ್ಪಯ್ಯನ ಶಾಲು!"

"ಅದು ಹ್ಯಾಗೆ ಗೊತ್ತು? ಏನು ಹೆಸರು ಬರೆದಿದೆಯೇನು?"

ಲಕ್ಷ್ಮಿ ಶಾಲನ್ನು ತನ್ನ ಮೂಗಿನ ಹತ್ತಿರಕ್ಕೆ ಹಿಡಿದುಕೊಂಡು "ಅಪ್ಪಯ್ಯನ ವಾಸನೆ ಇದೆ, ನೋಡಿ!" ಎಂದಳು.

ಎಲ್ಲರೂ ಗೊಳ್ಳೆಂದು ನಗತೊಡಗಿದರು. ಲಕ್ಷ್ಮಿ ಮೊದಲು ಅಪ್ರತಿಭಳಾದರೂ ಕಡೆಗೆ ತಾನೂ ಗಹಗಹಿಸಿ ನಕ್ಕಳು.

ಚಿನ್ನಯ್ಯನು ಒಳಗಿನಿಂದ ಬಂದು ರಾಮಯ್ಯನನ್ನು ಕರೆದನು. ಇಬ್ಬರೂ ಹೂವಯ್ಯ ಮಲಗಿದ್ದ ಕೊಟ್ಟಡಿಗೆ ಹೋದರು. ಜಗಲಿಯಲ್ಲಿ ಗದ್ದಲವೆಂದು ಅವನನ್ನು ಸಾಯಂಕಾಲ ಒಳಗೆ, ಸೀತೆಯ ಅಲಂಕಾರದ ಕೊಟ್ಟಡಿಗೆ ಸಾಗಿಸಿದ್ದರು. ಸೀತೆಯೂ ಬಹಳ ಸಂಭ್ರಮದಿಂದ ಶುಶ್ರೂಷೆಗೆ ಸಹಾಯಕಳಾಗಿದ್ದಳು.

ಚಿನ್ನಯ್ಯ ರಾಮಯ್ಯರಿಬ್ಬರೂ ಸೇರಿ ಹೂವಯ್ಯನ ಬೆನ್ನಿಗೆ ಬಿಸಿನೀರಿನ ಶಾಖ ಕೊಟ್ಟರು. ಮದ್ದಿನೆಣ್ಣೆಯನ್ನೂ ಚೆನ್ನಾಗಿ ನೀವಿ ಬಳಿದರು. ಮಧ್ಯೆ ಮಧ್ಯೆ ಹೂವಯ್ಯನು ನೋವಿನಿಂದ 'ಅಯ್ಯೋ' ಎನ್ನುತ್ತಿದ್ದನು. ಸಮೀಪದಲ್ಲಿ ನಿಂತಿದ್ದ ಸೀತೆಗಂತೂ ನೋವು ತನಗೇ ಆಗುತ್ತಿದ್ದಂತೆ ಅನುಭವವಾಗುತ್ತಿತ್ತು. ಅವಳು ಮನಸ್ಸಿನಲ್ಲಿಯೆ "ಇವರೇಕೆ ಅವರಿಗೆ ನೋವು ಮಾಡುತ್ತಾರೆ? ನಾನಾಗಿದ್ದರೆ ನೋವಾಗದಂತೆ ಎಣ್ಣೆ ಉಜ್ಜುತ್ತಿದ್ದೆ" ಎಂದುಕೊಳ್ಳುತ್ತಿದ್ದಳು. ನಡು ನಡುವೆ ಪಿಸುಮಾತಿನಲ್ಲಿ ತನ್ನಣ್ಣಗೆ ಏನೇನೊ ಸಲಹೆ ಕೊಡುತ್ತಿದ್ದಳು. ಅವನೂ ಮುಗುಳ್ನಗೆ ನಗುತ್ತ ಅವಳು ಹೇಳಿದಂತೆ ಮಾಡುತ್ತಿದ್ದನು. ಸೀತೆ ಪದೇ ಪದೇ ಸಲಹೆ ಕೊಡಲು ಅವನಿಗೆ ಬೇಜಾರಾಗಿ ಒಂದು ಸಾರಿ "ಸಾಕು, ಸುಮ್ಮನಿರೇ! ನೀನು ಮಹಾವೈದ್ಯಗಿತ್ತಿ!" ಎಂದುಬಿಟ್ಟನು. ಆಕೆಗೆ ಮುಖಭಂಗವಾದಂತಾಗಿ ಖಿನ್ನಗೆ ನಿಂತಳು. ರಾಮಯ್ಯನೂ ತಿರುಗಿ, ಅವಳನ್ನು ನೋಡಿದನು. ಅವಳು ನಾಚಿಕೆಯಿಂದ ತಲೆಬಾಗಿದಳು. ಬಹಳ ದಿನಗಳಮೇಲೆ ಅವಳ ಚೆಲುವನ್ನು ನೋಡಿದ ರಾಮಯ್ಯನ ಮನದಲ್ಲಿ ಏನೋ ಒಂದು ತೆರನಾದ ಕಳವಳವಾದಂತಾಗಿ, ಮತ್ತೆ ಹೂವಯ್ಯನ ಕಡೆ ತಿರುಗಿ ತನ್ನ ಕಾರ್ಯದಲ್ಲಿ ತೊಡಗಿದನು. ಅವನ ಹೃದಯದಲ್ಲಿ ದೂರದಾಸೆಯೊಂದು ಅಂಕುರಿಸದಿರಲಿಲ್ಲ.

ಶುಶ್ರೂಷೆಯ ಕಾರ್ಯ ಮುಗಿದಮೇಲೆ ಅವರೆಲ್ಲರೂ ಸೇರಿ ಸ್ವಲ್ಪ ಹೊತ್ತು ಮಾತಾಡುತ್ತಿದ್ದರು. ಚಿನ್ನಯ್ಯನು ಗಾಡಿ ಉರುಳಿದಾಗ ಬೈಲುಕೆರೆಗೆ ತಾನು ಹೇಗೆ ಬಂದನೆಂಬುದನ್ನು ತಿಳಿಸಿದನು. ನಡುನಡುವೆ ವಿನೋದವೂ ಸಾಗುತ್ತಿತ್ತು. ಗೌರಮ್ಮನವರು ಬಂದು ಹೂವಯ್ಯನನ್ನು ನೋವಿನ ವಿಚಾರವಾಗಿ ಮಾತಾಡಿಸಿ, ತರುವಾಯ ಸೀತೆಯ ಕಿವಿಯಲ್ಲಿ ಏನನ್ನೊ ಉಸುರಿದರು. ತಾಯಿ ಮಗಳಿಬ್ಬರೂ ಹೊರಟುಹೋಗಿ, ತುಸು ಹೊತ್ತಿನಲ್ಲಿಯೆ ಹೂವಯ್ಯನ ಭೋಜನಕ್ಕೆ ಸಲಕರಣೆಗಳನ್ನು ಸಿದ್ಧಮಾಡಿಕೊಂಡು ಬಂದರು. ಜೊತೆಯಲ್ಲಿ ಕಾಳನೂ ಕೆಲವು ಪಾತ್ರೆಗಳಲ್ಲಿ ಊಟದ ಪದಾರ್ಥಗಳನ್ನು ಇಟ್ಟುಕೊಂಡು ಕಿಂಕರನಾಗಿ ಬಂದಿದ್ದನು. ಅಷ್ಟರಲ್ಲಿ ಸಿಂಗಪ್ಪಗೌಡರು ತಮ್ಮ ನಚ್ಚಿನ ಕಾವ್ಯವಾಗಿದ್ದ ಜೈಮಿನಿ ಭಾರತವನ್ನು

ಓದಲು ಪ್ರಾರಂಭಿಸಿದ್ದುದು ಕೇಳಿಬಂದು, ಚಿನ್ನಯ್ಯ ರಾಮಯ್ಯರಿಬ್ಬರೂ ಹೂವಯ್ಯನ ಅಪ್ಪಣೆ ಪಡೆದು ಜಗಲಿಗೆ ಹೋದರು. ಗೌರಮ್ಮನವರು ಸೀತೆಯ ಸಹಾಯದಿಂದ ಹೂವಯ್ಯನನ್ನು ದಿಂಬಿಗೆ ಒರಗಿ ಕೂರುವಂತೆ ಮಾಡಿ, ಒಂದು ಕಾಲುಮಣೆಯ ಮೇಲೆ ಹಿತ್ತಾಳೆಯ ತಟ್ಟೆಯುಮೇಲಿಟ್ಟು ಬಾಳೆಯ ಎಲೆಯಲ್ಲಿ ಊಟವನ್ನು ಬಡಿಸಿದರು. ಹೂವಯ್ಯ ಅತ್ತೆಯವರೊಡನೆ ಮಾತಾಡುತ್ತ, ಆಗಾಗ ಸೀತೆಯ ನಗುಮುಖವನ್ನು ನಗುಮುಖನಾಗಿ ನೋಡುತ್ತ ಉಣ ತೊಡಗಿದನು. ಅವರಿಬ್ಬರ ದೃಷ್ಟಿಸಂಗಮದ ಕ್ಷೇತ್ರಕ್ಕೆ ಪ್ರೇಮದೊಡನೆ ಸಂಕೋಚವೂ ಯಾತ್ರೆ ಬಂದಿತ್ತು.

ಇತ್ತ ಜಗಲಿಯ ಮೇಲೆ ಲಕ್ಷ್ಮಿ ತುಸುಹೊತ್ತಿನಲ್ಲಿಯೆ ಭಾರತವನ್ನು ಕೇಳಿ ಸಾಕಾಗಿ ಕಿರುಕುಳ ಕೊಡಲಾರಂಭಿಸಿದಳು. ಶ್ಯಾಮಯ್ಯಗೌಡರು ಕಾಳನನ್ನು ಕೂಗಿ ಕರೆದು, ಅವಳನ್ನು ಒಳಗೊಯ್ಯುವಂತೆ ಹೇಳಿದರು. ಅವಳು ಹೋಗು ವುದಿಲ್ಲವೆಂದು ರಂಪಮಾಡಿದಳು. ಆದರೆ ಕಾಳನು ಅಳುತ್ತ ಪ್ರತಿಭಟಿಸುತ್ತಿದ್ದ ಅವಳನ್ನು ಬಲಾತ್ಕಾರದಿಂದಲೆ ಎತ್ತಿಕೊಂಡು ಗೌರಮ್ಮನ ಬಳಿಗೆ ತಂದನು. ಸೀತೆ ತಂಗಿಯನ್ನು ಸಮಾಧಾನಪಡಿಸಲು ಪ್ರಯತ್ನಿಸಿದಳು. ಹೂವಯ್ಯನೂ ಒಂದೆರಡು ಲಲ್ಲೆಯ ಮಾತು ನುಡಿದನು. ಆದರೆ ಲಕ್ಷ್ಮಿ ಅಳುವನ್ನು ನಿಲ್ಲಿಸಲಿಲ್ಲ. ಕಡೆಗೆ ಗೌರಮ್ಮನವರು ನಸುಮುನಿದು ಲಕ್ಷ್ಮಿಯನ್ನೆತ್ತಿಕೊಂಡು ಅಡುಗೆಯ ಮನೆಗೆ ಹೋದರು. ಸೀತೆ ಕಾಳನನ್ನು ಕುರಿತು ಮೆಲ್ಲಗೆ "ನಾನಿಲ್ಲಿ ನೋಡಿ ಕೊಳ್ತೇನೊ, ನೀನು ಹೋಗು; ಬಳ್ಳೆ ಹಾಕೋಕೆ ಹೊತ್ತಾಯ್ತು. ಬೇಕಾದರೆ ಕರೀತೀನಿ" ಎಂದಳು. ಕಾಳನೂ ಕೆಲವು ಪಾತ್ರೆಗಳನ್ನೆತ್ತಿಕೊಂಡು ಅಡುಗೆಯ ಮನೆಗೆ ಹೋದನು.

ಅಡುಗೆಯ ಮನೆಯಲ್ಲಿ ಲಕ್ಷ್ಮಿ ಇನ್ನೂ ಅಳುತ್ತಲೇ ಇದ್ದಳು. ಗೌರಮ್ಮ ನವರು ಹೋಳಿಗೆ ಕೊಟ್ಟು ಮಗಳನ್ನು ಸಂತೈಸಲು ಪ್ರಯತ್ನಿಸುತ್ತಿದ್ದರು. ಲಕ್ಷ್ಮಿ ಹೋಳಿಗೆಯನ್ನು ದೂರ ನೂಕಿ ಚೆಲ್ಲಾಡಿದಳು. ತಾಯಿಗೆ ಸಿಟ್ಟುಬಂದು ಒಂದು ಗುದ್ದು ಗುದ್ದಿದರು. ಮಗಳು ಗಟ್ಟಿಯಾಗಿ ರೋದಿಸುತ್ತ ದೂರ ಹೋಗಿ ಒಂದು ಕಂಬದ ಮೂಲೆಯಲ್ಲಿ ಮುದ್ದೆಯಾಗಿ ಕೂತಳು. ತಾಯಿ ಮನಸ್ಸು ಕರಗಿ ಮುದ್ದು ಮಾತಿನಿಂದ ಅವಳನ್ನು ಎಷ್ಟೆಷ್ಟು ಬಗೆಯಾಗಿ ಕರೆದರೂ ಅವಳು ಬರಲೂ ಇಲ್ಲ; ಅಳುವನ್ನು ಕಡಮೆಮಾಡಲೂ ಇಲ್ಲ. ಗೌರಮ್ಮ ಕಾಳನೊಡನೆ ಗಂಡಸರಿಗೆ ಎಲೆ ಹಾಕುವ ಕಾರ್ಯದಲ್ಲಿ ತೊಡಗಿದರು. ಲಕ್ಷ್ಮಿಗೆ ಅತ್ತು ಅತ್ತು ಬೇಸರವಾಗಿ ಸುಮ್ಮನಾದಳು. ಮತ್ತೆ ತಾಯಿ ಕರೆಯಲಿ ಎಂದು ಹಾರೈಸಿದಳು. ಆದರೆ ತಾಯಿ ಕರೆಯಲಿಲ್ಲ. ಅಭಿಮಾನಭಂಗವಾಗಿ ಮತ್ತೆ ಅತ್ತಳು. ಆ

ರೋದನದಲ್ಲಿ ಧ್ವನಿ ಮಾತ್ರವಿದ್ದಿತೇ ಹೊರತು ಶೋಕಭಾವವಿನಿತೂ ಇರಲಿಲ್ಲ. ಬಹಳ ಹೊತ್ತಾದರೂ ತಾಯಿ ಕರೆಯದಿರಲು ಅವಳು ಧ್ವನಿಯಿಂದ ಮಾತ್ರವೇ ರೋದಿಸುತ್ತಾ "ಮತ್ತೆ ಕರೆದರೆ ಬತ್ತೀನಿ! ಮತ್ತೆ ಕರೆದರೆ ಬತ್ತೀನೀ!" ಎಂದು ಸೂಚನೆ ಕೊಡತೊಡಗಿದಳು. ತಾಯಿ ಕರೆಯದೆ ತಾನು ಹೋಗುವುದು ಅವಮಾನಕರವೆಂದು ಭಾವಿಸಿದಳೇ ಹೊರತು "ಮತ್ತೆ ಕರೆದರೆ ಬತ್ತೀನಿ!" ಎಂದು ಗೋಗರೆಯುವುದು ಮತ್ತೂ ಹೆಚ್ಚಿನ ನಾಚಿಕೆಗೇಡೆಂದು ಅವಳಿಗೆ ಗೊತ್ತಾಗುವಂತಿರಲಿಲ್ಲ. ಗೌರಮ್ಮನವರು ಮನಸ್ಸಿನಲ್ಲಿ ಮುಗುಳುನಗೆ ನಗುತ್ತ ಮಗಳನ್ನು ಎತ್ತಿಕೊಂಡು ಮುದ್ದಿಟ್ಟು, ಹೋಳಿಗೆಯನ್ನು ನೈವೇದ್ಯ ಮಾಡಿದರು. ಕಾಳನಿಗೆ ಮಾತ್ರ ನಗುವನ್ನು ತಡೆಯಲಾಗಲಿಲ್ಲ. ಗೌರಮ್ಮನವರು, ಮತ್ತೆ ಎಲ್ಲಿ ಮಗಳಿಗೆ ಮುಖಭಂಗವಾಗಿ ರಂಪಮಾಡುತ್ತಾಳೆಯೊ ಎಂದು ಶಂಕಿಸಿ ಕಾಳನಿಗೆ ಕಣ್ಣುಸನ್ನೆಮಾಡಿ, ಅವನನ್ನು ಚೆನ್ನಾಗಿ ಬೈಯುವಂತೆ ನಟಿಸಿದರು. ಲಕ್ಷ್ಮಿಗೆ ತೃಪ್ತಿಯಾಗಿ, ಹೋಳಿಗೆಯನ್ನು ತನ್ಮಯತೆಯಿಂದ ತಿನ್ನಲಾರಂಭಿಸಿದಳು.

ಹಿಂದಿದ್ದ ಸಲಿಗೆಯಿಂದ ಹೂವಯ್ಯನೊಡನೆ ಮಾತಾಡಲು ಅನುಕೂಲ ವಾಗುತ್ತದೆ ಎಂಬ ಅಭಿಸಂಧಿಯಿಂದ ಸೀತೆ ಕಾಳನನ್ನು ಉಪಾಯಮಾಡಿ ಕೊಟ್ಟಡಿಯಿಂದಾಚೆ ಕಳುಹಿಸಿದ್ದಳು. ಆದರೆ, ಕಾಳನು ಹೊರಟುಹೋದ ಮೇಲೆ, ಆಕೆಯ ಹೃದಯದಲ್ಲಿ ಕಳವಳಕ್ಕಾರಂಭವಾಯಿತು. ಮನಸ್ಸಿನಲ್ಲಿ ತಾನು ಹಿಂದೆ ಎಂದೂ ಅನುಭವಿಸಿ ಅರಿಯದ ಲಜ್ಜೆ ಮೂಡಿತು. ಕಾಲಗತಿ ತನ್ನ ಜೀವನದಲ್ಲಿ ಒಂದು ನೂತನತೆಯನ್ನು ತಂದುಬಿಟ್ಟಿದೆ ಎಂದು ಆಕೆಗೆ ಆ ಮೊದಲು ಗೊತ್ತಾಗಿರಲಿಲ್ಲ. ಹೂವಯ್ಯನೊಡನೆ ಹಿಂದೆ ಎಷ್ಟು ನೇರವಾಗಿ ಧೀರವಾಗಿ ವರ್ತಿಸಿದ್ದಳು! ಆದರೆ ಇಂದು ಆಕೆಗೆ ಹಾಗೆ ವರ್ತಿಸುವುದಂತೂ ಇರಲಿ, ಮಾತಾಡಲೂ ಕೂಡ ಸಾಧ್ಯವಾಗದಷ್ಟು ಸಂಕೋಚವಾಯಿತು. ಮಾತಾಡ ಬೇಕೆಂದು ಎದೆ ಹಾತೊರೆಯುತ್ತಿತ್ತು. ಎರಡು ಮೂರು ಸಾರಿ ಪ್ರಯತ್ನಿಸಿದಳು. ಪ್ರಯತ್ನವು ಉದ್ವೇಗಜನ್ಯವಾದ ಮೌನದಲ್ಲಿ ಕೊನೆಗೊಂಡಿತು. ಆಕೆಯ ಮುಖ ನಸುಗೆಂಪೇರಿ ಬೆವರಿದಂತಾಯಿತು. ಊಟ ಮಾಡುತ್ತಿದ್ದ ಹೂವಯ್ಯನನ್ನು ನೋಡಿದಳು. ಹಿಂದಿದ್ದ ಬಾವನಾಗಿ ಕಾಣಲಿಲ್ಲ. ಸೌಂದರ್ಯ ಪೌರುಷಗಳು ಮೊದಲಿದ್ದುದಕ್ಕಿಂತಲೂ ಅತಿಶಯವಾಗಿ ತೋರಿ, ಆತನು ಅಲೌಕಿಕವಾಗಿದ್ದಂತೆ ತೋರಿತು. ಸೀತೆಗೆ ಆತನಲ್ಲಿ ಅನುರಾಗ ಮೊದಲಿಗಿಂತಲೂ ಹೆಚ್ಚಿತು. ಆದರೆ ಅನುರಾಗದೊಂದಿಗೆ ಭಯಮಿಶ್ರಿತ ಗೌರವವೂ ಸೇರಿ, ಆಕೆ ಹಿಂದಣ ಸಲಿಗೆಯಿಂದ ಮಾತಾಡಿಸಲಾರದೆ ಹೋದಳು. ಹೂವಯ್ಯ ಬೆನ್ನುನೋವಿನಿಂದ ಶುಶ್ರೂಷಾರ್ಹನಾಗಿರದಿದ್ದ ಪಕ್ಷದಲ್ಲಿ ಸೀತೆ ಅಲ್ಲಿ ಅವನೊಡನೆ ಒಬ್ಬಳೇ ಇರಲಾರದೆ

ಹೊರಟುಹೋಗುತ್ತಿದ್ದಳೋ ಏನೋ! ಆದರೆ ಈಗ ಊಟಮಾಡುತ್ತಿದ್ದ ರೋಗಿಯನ್ನು ಬಿಟ್ಟುಹೋಗುವುದು ಆಕೆಗೆ ಉಚಿತವಾಗಿ ತೋರದೆ ಸುಮ್ಮನೆ ನಿಂತಳು. ಅದೂ ಅಲ್ಲದೆ ಆ ಉದ್ವೇಗ ಅಥವಾ ಉತ್ಕಂಠತೆಯಲ್ಲಿಯೂ ಕೂಡ ಆಕೆಗೆ ಹರ್ಷವಾಗದಿರಲಿಲ್ಲ. ಒಂದು ಸಾರಿ ಕಾಳನನ್ನು ಕರೆಯಬೇಕೆಂದು ಎಣಿಸಿದವಳು — ಮತ್ತೆ ಸುಮ್ಮನಾದಳು. ಸಂಕೋಚ ಸನ್ನಿವೇಶ ಹೇಗೋ ಪರಿಹಾರವಾಗಿ, ತನ್ನಿಷ್ಟ ಕೈಗೂಡುವುದೆಂದು ಆಕೆಗೊಂದು ದೂರದಾಸೆಯೂ ಇತ್ತು. ತಾನೇ ಮೊದಲು ಬಾವನೊಡನೆ ಮಾತನಾಡಲಾಗದಿದ್ದರೂ ಬಾವನವರಾದರೂ ಮಾತು ಪ್ರಾರಂಭಿಸಿದರೆ ಆಗ ವಿಧಿಯಿಲ್ಲದೆ ಮಾತಾಡಬೇಕಾಗುತ್ತದೆ ಎಂದು ಅವಳು ಹಾರೈಸಿದಳು. ಜಗಲಿಯಿಂದ ಭಾರತಪಠನ ಮಾಡುತ್ತಿದ್ದ ಸಿಂಗಪ್ಪ ಗೌಡರ ರಾಗದ ಧ್ವನಿಯನ್ನು ಆಲೈಸುವಳೋ ಎಂಬಂತೆ ಗೋಡೆಗೆ ಒರಗಿಕೊಂಡು ಸ್ವಲ್ಪ ದೂರವಾಗಿ ನಿಂತಿದ್ದಳು.

ಹೂವಯ್ಯ ಊಟಮಾಡುತ್ತಿದ್ದರೂ ಅವನ ದೃಷ್ಟಿ ಸರ್ವವ್ಯಾಪಿಯಾಗಿತ್ತು. ಸೀತೆ ಕಾಳನನ್ನು ಹೊರಗೆ ಕಳುಹಿದುದು ಅವನಿಗೂ ಅರ್ಥಗರ್ಭಿತವಾಗಿಯೆ ತೋರಿತು. ಅವನಿಗೂ ಸೀತೆಯೊಡನೆ ಮಾತಾಡಬೇಕೆಂಬ ಆಕಾಂಕ್ಷೆಯಿತ್ತು. ಆದರೆ ಆ ಆಕಾಂಕ್ಷೆ ಉತ್ಕಂಠಿತವಾಗಿರಲಿಲ್ಲ. ಬಾಲ್ಯದಿಂದಲೂ ತನ್ನೊಡನೆ ಒಡನಾಡಿದವಳಲ್ಲಿ ಮಾತಾಡಲು ಸಂಕೋಚವೇನು? ಉತ್ಕಂಠತೆಯೇನು? ಹೀಗೆಂದು ಅವನು ಯೋಚಿಸಿದುದು ಆಮೇಲೆ ಸುಳ್ಳಾಗಿ ತೋರಿತು. ಏಕೆಂದರೆ, ಅವನೂ ಸೀತೆಯಂತೆ ಮಾತಾಡದೆ ಸುಮ್ಮನಾದನು. ಕೊಠಡಿಯಲ್ಲಿ ಇತರರಿದ್ದಾಗ ಅವಳನ್ನು ಋಜುವಾಗಿ ನೋಡುತ್ತಿದ್ದವನಿಗೆ, ಈಗ ಕತ್ತೆತ್ತಿ ನೋಡುವುದಕ್ಕೂ ಸ್ವಲ್ಪ ಸಂಕೋಚವಾಯಿತು. ಕಾಲಗತಿ ಅವನಲ್ಲಿಯೂ ಬದಲಾವಣೆಮಾಡಿತ್ತು.

ಒಮ್ಮೆ ಅವಳನ್ನು ಮಾತಾಡಿಸಲು ತಲೆಯೆತ್ತಿದವನು ಗೋಡೆಯ ಕಡೆ ನೋಡತೊಡಗಿದನು. ಹಿತ್ತಾಳೆಯ ದೀಪದ ಕಂಬದ ಮೇಲೆ ಸಾಧಾರಣ ಪ್ರಕಾಶಮಾನವಾಗಿ ಉರಿಯುತ್ತಿದ್ದ ಹಣತೆಯ ಸೊಡರಿನ ಬೆಳಕಿನಲ್ಲಿ, ಬಿಳಿಯ ಗೋಡೆಯ ಮೇಲೆ, ಹಲ್ಲಿಯೊಂದು ಸಣ್ಣಪುಟ್ಟ ಹುಳುಗಳನ್ನು ಷಿಕಾರಿಮಾಡಲು ಹೊಂಚುಹಾಕಿ ಕುಳಿತಿತ್ತು. ಅದರ ನುಣ್ಣನೆಯ ಕಂದುಬಣ್ಣದ ಮೈ ನಿಶ್ಚಲವಾಗಿತ್ತು. ಬಾಲ ಮಾತ್ರ ಆಗಾಗ ಅತ್ತ ಇತ್ತ ಕೊಂಕಿ ಬಳುಕುತ್ತಿತ್ತು. ಅಂತಹ ಸಮಯಗಳಲ್ಲಿ ಬಾಲದ ನೆರಳು ಗೋಡೆಯ ಮೇಲೆ ಕರ್ರಗೆ ಸಣ್ಣಗೆ ಮೊನಚಾಗಿ ಕುಣಿದಾಡುತ್ತಿತ್ತು. ಅದರ ಕಣ್ಣುಗಳೆರಡು ಬಹು ಸಣ್ಣ ಕರಿಮಣಿಗಳಂತೆ ದೀಪದ ಬೆಳಕಿನಲ್ಲಿ ಮುದ್ದಾಗಿ ಮಿರುಗುತ್ತಿದ್ದುವು. ಹೂವಯ್ಯ ನೋಡುತ್ತಿದ್ದ ಹಾಗೆ ಹಲ್ಲಿ ಸರಸರನೆ ಮುಂಬರಿಯಿತು. ಸಣ್ಣ ಹುಳುವೊಂದು ಅದರ ಗುರಿ

ಯಾಗಿತ್ತು. ಹುಳುವಿನ ಬಳಿ ಸೇರಿ ನಿಂತು ಗುರಿ ನೋಡಿ ಎರಗಿತು. ಹುಳು ಅದರ ಬಾಯಲ್ಲಿ ಕಣ್ಮರೆಯಾಯಿತು. ಅದನ್ನೆಲ್ಲ ಸೂಕ್ಷ್ಮವಾಗಿ ನಿರೀಕ್ಷಿಸುತ್ತಿದ್ದ ಹೂವಯ್ಯನ ಕಣ್ಣಿಗೆ ಇನ್ನೇನೊ ಕಾಣಿಸಿತು. ಹಲ್ಲಿ ಕೂತಿದ್ದ ಜಾಗದಲ್ಲಿಯೆ ಸೀಸದಕಡ್ಡಿಯಿಂದ ಏನನ್ನೊ ಸಣ್ಣಗೆ ಬರೆದಂತಿತ್ತು. ಬರವಣಿಗೆಯ ಅರ್ಧ ಭಾಗವನ್ನು ಹಲ್ಲಿಯ ದೇಹ ಮುಚ್ಚಿಬಿಟ್ಟಿತ್ತು. ಅದನ್ನು ಓದುವ ಕುತೂಹಲ ದಿಂದ ಹೂವಯ್ಯ ಸ್ವಲ್ಪ ತಲೆಬಾಗಿ ಮುಂಬರಿಯಲು ಹಲ್ಲಿ ಹೆದರಿ ಓಡಿತು. ಅದನ್ನೋದಿದ ಕೂಡಲೆ ಅವನ ಮುಖಕ್ಕೆ ನೆತ್ತರೇರಿದಂತಾಯಿತು. "ಹೂವಯ್ಯ ಬಾವನನ್ನೇ ಮದುವೆಯಾಗುತ್ತೇನೆ" ಎಂದಿದ್ದ ಆ ಲಿಪಿಗೆ ಸೀತೆಯೆ ಕರ್ತಳೆಂಬು ದೇನೊ ಅಕ್ಷರದಿಂದ ಅವನಿಗೆ ಗೊತ್ತಾಯಿತು. ದೂರದಲ್ಲಿ ನಿಂತು ನೋಡುತ್ತಿದ್ದ ಸೀತೆಗೆ ಮಾತ್ರ ಇದೆಲ್ಲ ತಿಳಿಯಲಿಲ್ಲ. ಎಂದೋ ತಾನು ಬರೆದಿದ್ದುದು ಆಕೆಗೆ ಅಂದು ಮರೆತುಹೋಗಿತ್ತು. ಅಲ್ಲದೆ ಬಾವ ಹಲ್ಲಿಯನ್ನೇ ನೋಡುತ್ತಿದ್ದಾರೆಂದು ಭಾವಿಸಿದಳು.

ಹೂವಯ್ಯನಿಗಿದ್ದ ಸಂದೇಹ ಸಂಕೋಚಗಳು ತೊಲಗಿಹೋಗಿ ಅವನ ಆಸೆ ಗೊಂದು ಊರೆಗೋಲು ಸಿಕ್ಕಂತಾಯಿತು. ಭಾವಗೋಪನಮಾಡಿ, ಮತ್ತೆ ಎರಡು ತುತ್ತು ಉಂಡು, ಸೀತೆಯ ಕಡೆ ನೋಡಿದನು. ಹಣತೆಯ ಮಂದ ಕಾಂತಿಯಲ್ಲಿ ಅವಳು ಸ್ವಪ್ನಸುಂದರಿಯಂತೆ ನಿಂತಿದ್ದಳು. ಆ ಅಸ್ಪಷ್ಟತೆಯೆ ಅವಳ ಸೌಂದರ್ಯವನ್ನು ದ್ವಿಗುಣಿತ ಮೋಹಕವಾಗಿ ಮಾಡಿತ್ತು—ವಸಂತ ಕಾಲದ ಸಂಧ್ಯಾನಿಶೆಯಲ್ಲಿ ಮರುದಿನ ಅರಳಲಿರುವ ಗುಲಾಬಿಯ ಮುದ್ದು ಮೊಗ್ಗಿನಂತೆ! ಅದರಲ್ಲಿಯೂ ಹಲ್ಲಿಯ ಕೃಪೆಯಿಂದ ಗೋಡೆಯ ಮೇಲೆ ಅವನೋದಿದ ಲಿಪಿ, ಹೃದಯದಲ್ಲಿ ಅದುವರೆಗೂ ಗುಪ್ತವಾಗಿ ಅಸ್ಪಷ್ಟವಾಗಿ ಸುಪ್ತಾವಸ್ಥೆಯಲ್ಲಿದ್ದ ಆಸೆಯೊಂದನ್ನು ವ್ಯಕ್ತ ಸ್ಪಷ್ಟವನ್ನಾಗಿ ಮಾಡಿದ್ದುದರಿಂದ, ಹೂವಯ್ಯನ ಕಣ್ಣಿಗೆ ಸೀತೆ ಕಾಮನಬಿಲ್ಲಿನಂತೆ ಪ್ರೇಮ ಸೌಂದರ್ಯಗಳ ಸುಮ ಧುರ ಮೂರ್ತಿಯಾಗಿ ಕಾಣಿಸಿಕೊಂಡಳು. ಅವನ ಕಣ್ಣಿಗೊಂದು ಹೊಸ ಬೆಳಕು ಬಂದಿತ್ತು. ಅವನ ಎದೆಯಲ್ಲಿ ಒಂದು ಹೊಸ ಆಸೆ ಪ್ರಬಲವಾಗಿ ಮೂಡಿತ್ತು. ಗೋಡೆಯ ಲಿಪಿಯನ್ನು ಓದುವ ಮೊದಲಿದ್ದ ಔದಾಸೀನ್ಯ ಪ್ರಾಯವಾದ ಭಾವ ಮಾದುಹೋಗಿ ಉತ್ಕಂಠಿತೆ ತಲೆದೋರಿತ್ತು. ಹೂವಯ್ಯ ತನ್ನ ಅಂತಃಕರಣದ ನಿಗೂಢಗಹ್ವರದಲ್ಲಿ, ತನಗೆ ತಾನೆ ತಿಳಿಯದಂತೆ, ಸೀತೆ ಯಾವುದೋ ಒಂದು ಅಭೇದ್ಯವಾದ ಬಾಧ್ಯತೆಯಿಂದ ತನ್ನವಳಾಗಿದ್ದಂತೆ ಭಾವಿ ಸಿದನು. ಅವನಿಗೆ ಗೋಡೆಯ ಬರವಣಿಗೆ ಸೀತೆಯದು ಎನ್ನುವುದಕ್ಕಿಂತಲೂ ವಿಧಿಯ ಲಲಾಟ ಲಿಖಿತವೆಂಬಂತೆ ಭಾಸವಾಯಿತು. ಅವನ ಭಾಗ್ಯಕ್ಕೆ

"ಹೂವಯ್ಯ ಬಾವನನ್ನೇ ಮದುವೆಯಾಗುತ್ತೇನೆ" ಎಂಬ ಒರೆಹ ಒಂದು ಮಹಾರಹಸ್ಯವೂ ಶಕ್ತಿಪೂರ್ಣವೂ ಆದ ಪ್ರೇಮಮಂತ್ರವಾಗಿ ಪರಿಣಮಿಸಿತ್ತು. ಅವನ ಕಣ್ಣು ಮತ್ತೆ ಮತ್ತೆ ಗೋಡೆಯ ಕಡೆಗೆ ಹೋಗುತ್ತಿತ್ತು. ಗೋಡೆಯ ಲಿಪಿಯೂ ಸೀತೆಯಷ್ಟೇ ಸಮ್ಮೋಹಕವಾಗಿತ್ತು. ಸ್ವಲ್ಪಹೊತ್ತಿಗೆ ಮುಂಚೆ ಕೇವಲ ಜಡಮಾತ್ರವಾಗಿದ್ದ ಆ ಗೋಡೆ ಈಗ ಘನಚೈತನ್ಯವಾಗಿತ್ತು. ಮೊದಲು ಪ್ರಾಣಿ ಮಾತ್ರವಾಗಿದ್ದ ಆ ಹಲ್ಲಿ ಈಗ ಒಂದು ಮಹಾ ಶುಭಶಕುನದಂತೆ ಪವಿತ್ರವಾಗಿತ್ತು; ಆಶಾಸೂಚಕವಾಗಿತ್ತು; ಪ್ರೀತಿಪಾತ್ರವಾಗಿತ್ತು. ತತ್ಕಾಲದಲ್ಲಿ ಅವನಿಗೆ ತನ್ನ ಬೆನ್ನಿನ ಯಾತನೆಯೂ ಕೂಡ ಮರೆತುಹೋಗಿತ್ತು.

"ಸೀತೆ, ಸ್ವಲ್ಪ ನೀರು ಕೊಡು."

ಹೂವಯ್ಯ ಪ್ರಯಾಸ ಉದ್ವೇಗ ಸಂಭ್ರಮಗಳಿಂದ ನೀರು ಕೇಳಿ, ತಮ್ಮಿಬ್ಬರ ನಡುವೆ ಇದ್ದ ಮೌನಪಾತಾಳಕ್ಕೊಂದು ಸೇತುವೆ ಬೀಸಿದನು. ಅಥವಾ ಅವರಿಬ್ಬರ ಪ್ರೇಮಪ್ರವಾಹಗಳಿಗೆ ಮಧ್ಯೆ ತಡೆಹಾಕಿ ನಿಂತಿದ್ದ ಅಣೆಕಟ್ಟಿನಲ್ಲಿ ಒಂದು ಬಿರುಕು ಮಾಡಿದನು. ಒಂದು ನಿಮಿಷದ ಹಿಂದೆ ದುರ್ಭೇದ್ಯ ಭಯಂಕರವಾಗಿ ನಿಂತಿದ್ದ ಕಲ್ಲುಕಟ್ಟೆ, ಸ್ವಲ್ಪ ಬಿರುಕು ಬಿಡುವುದೆ ತಡ, ಕೊಚ್ಚಿಕೊಚ್ಚಿ ತೇಲಿ ಹೋಯಿತು. ಅದು ಅಲ್ಲಿತ್ತು ಎಂಬುದಕ್ಕೆ ಕುರುಹು ಕೂಡ ಇಲ್ಲದಂತಾಯಿತು. ಕಟ್ಟೆ ದುರ್ಬಲ ವಾಗಿತ್ತು ಎಂದಲ್ಲ; ಪ್ರವಾಹಗಳ ಶಕ್ತಿ, ವೇಗಗಳು ಅಷ್ಟು ಪ್ರಬಲವಾಗಿದ್ದುವು. ಅದನ್ನು ಕಂಡು ಸೀತೆ ಹೂವಯ್ಯರಿಬ್ಬರಿಗೂ ಆಶ್ಚರ್ಯವಾಯಿತು. ಆಗ ಅವರಿಗೆ ಅಂತರವಲೋಕನಶಕ್ತಿ ಇದ್ದಿದ್ದರೆ ಅದು ಅಷ್ಟು ಆಶ್ಚರ್ಯಕರವಾಗಿ ಕಾಣುತ್ತಿರಲಿಲ್ಲ. ಅವರಿಬ್ಬರ ಪ್ರಣಯಲಹರಿಗಳೂ ಕಟ್ಟೆ ಬಿರುಕು ಬಿಡುವುದನ್ನೇ ಕಾಯುತ್ತಿದ್ದುವು. ಬಿರುಕುಬಿಟ್ಟೊಡನೆಯೆ ಕೃತಕ ನಿರ್ಮಿತವಾಗಿದ್ದ ಸಂಕೋಚದ ಕಟ್ಟೆ ಕೊಚ್ಚಿಹೋಗಿ ಲಹರಿಗಳೊಂದಾದುವು. ಸೀತೆಯ ಸ್ಥಿತಿಯೂ 'ಮತ್ತೆ ಕರೆದರೆ ಬತ್ತೀನಿ' ಎಂದು ಅಡುಗೆ ಮನೆಯಲ್ಲಿ ಗೋಗರೆಯುತ್ತಿದ್ದ ಲಕ್ಷ್ಮಿಯ ಸ್ಥಿತಿಯೇ ಆಗಿತ್ತು. ಬಾವನು ನೀರು ಕೇಳಿದೊಡನೆಯೆ ಹಿಂದಿದ್ದ ನಾಚಿಕೆ ಸಂಕೋಚಗಳನ್ನೆಲ್ಲ ವಿಸ್ಮೃತಿಯ ಅತಲ ಜಲದಲ್ಲಿ ಅದ್ದಿ ತೇಲಿಕೊಟ್ಟು, ಸಂಭ್ರಮ ಸಾದರಗಳಿಂದ ಹೂವಯ್ಯನ ಬಳಿಗೆ ಬಂದು, ಅತ್ಯಂತ ವಿನಯಪೂರ್ವಕವಾದ ಅವ್ಯಕ್ತ ಕೋಮಲ ಶೃಂಗಾರಭಾವದಿಂದ ಅವನ ಕಡೆ ನೋಡುತ್ತ "ಕೈ ತೊಳೆ ಯೋಕೇನು" ಎಂದಳು.

"ಅಲ್ಲ, ಕುಡಿಯುವುದಕ್ಕೆ" ಎಂದು ಹೂವಯ್ಯ ಮುಗುಳುನಗೆಮೊಗನಾಗಿ ಆಕೆಯ ಸ್ನಿಗ್ಧ ಮಧುರ ಸಜಲ ನಯನಗಳನ್ನು ನಿಟ್ಟಿಸಿದನು. ಅವಳ ಕಣ್ಣು, ಕುರುಳು, ಕದಪು, ಕೆನ್ನೆ, ಕಿವಿ, ಕೊರಳು, ಕೈ ಒಂದೊಂದೂ ಅವನಿಗೆ ದೈವಿಕ

ಪವಾಡವಾಗಿ ತೋರಿದುವು. ಅಂತೂ ಅವಳು ಹಿಂದಿನ ಸೀತೆ ಆಗಿರಲಿಲ್ಲ. ಹಿಂದೆ ಸಾಧಾರಣವಾಗಿದ್ದುದು ಒಲ್ಮೆಯ ಮೈಮೆಯಿಂದ ಇಂದು ಅಸಾಧಾರಣ ವಾಗಿತ್ತು.

"ನೀರು ಯಾಕೆ ಕುಡೀತೀರಿ? ಹಾಲಿದೆ!"

ಸೀತೆಯ ವಾಣಿ ಕಾಮಳ್ಳಿಯ ಕಂಠದಂತೆ ಮನಮೋಹಕವಾಗಿತ್ತು. ಅವಳು ಬಾವನ ಮಾರುತ್ತರಕ್ಕೆ ಕಾಯಲೇ ಇಲ್ಲ. ಪಕ್ಕದಲ್ಲಿದ್ದ ಒಂದು ಪಾತ್ರೆಯಿಂದ ಲೋಟಕ್ಕೆ ಬೆಳ್ಳಗಿದ್ದ ಬೆಚ್ಚನೆಯ ಹಾಲನ್ನು ಹೊಯ್ದು ಹೂವಯ್ಯನಿಗೆ ನೀಡಿದಳು, ತನ್ನ ಪ್ರೇಮಾಮೃತವನ್ನು ತನ್ನ ಇನಿಯನಿಗೆ ನೀಡುವಂತೆ. ಹೂವಯ್ಯನೂ ಕೈನೀಡಿ ಅದನ್ನು ಕೋಮಲವಾಗಿ ತೆಗೆದುಕೊಂಡು, ಹೊಟ್ಟೆ ತುಂಬಿದ್ದರೂ ಹೂವಿನ ಸೌಂದರ್ಯಕ್ಕಾಗಿಯೇ ಅದರ ಮಕರಂದ ಪಾನಮಾಡುವ ತುಂಬಿ ಯಂತೆ ಕುಡಿಯತೊಡಗಿದನು. ಕುಡಿಯುತ್ತಿದ್ದರೂ ಮೊಗವೆತ್ತದೆ ಕಣ್ಣೆತ್ತಿ ಸೀತೆಯ ಕಡೆ ನೋಡಿದನು. ಅವಳೂ ಅವನನ್ನೇ ನೋಡುತ್ತಿದ್ದಳು. ಇಬ್ಬರ ಕಣ್ಣುಗಳೂ ಸಂಧಿಸಿ, ಬರೆಯಲಾರದ ಹೇಳಲಾರದ ತಿಳಿಯಲಾರದ ಮಧುರ ಘಟನೆಗಳಾದುವು. ಒಲಿದೆರಡು ದೃಷ್ಟಿಗಳ ಸಂಗಮವು ತುಂಗೆಭದ್ರೆಯರ ಗಂಗೆಯಮುನೆಯರ ಸಂಗಮಕ್ಕಿಂತಲೂ ಪವಿತ್ರವಾದುದು, ಗೂಢವಾದುದು, ಮಹತ್ತಾದುದು.

ರಾತ್ರಿ ಮಲಗುವಾಗ ಹೂವಯ್ಯ, ತನ್ನ ಸಮೀಪದಲ್ಲಿ ಮಲಗಲು ಹವ ಣಿಸುತ್ತಿದ್ದ ಚಿನ್ನಯ್ಯನಿಗೆ ಕಾಣದಂತೆ, ಗೋಡೆಯ ಮೇಲಿದ್ದ ಸೀತೆಯ ಬರಹ ವನ್ನು ಕೈ ಬೆರಳಿನಿಂದ ಉಜ್ಜಿ ಅಳಿಸಿದನು. ಅವನ ದೃಷ್ಟಿ ಪದೇ ಪದೇ ಅತ್ತ ಕಡೆಗೇ ಹೋಗುತ್ತಿತ್ತು. ಇತರರು ಯಾರಾದರೂ ಅದನ್ನು ಕಂಡರೆ ಸೀತೆಗೆ ನಾಚಿಕೆಗೇಡಾಗುತ್ತದೆ ಎಂಬ ಆಶಂಕೆಯಿಂದ ಅವನು ಅದನ್ನು ಉಜ್ಜಿಬಿಡಲು ಮನಸ್ಸು ಮಾಡಿದ್ದನು. ಆದರೆ ಮನಸ್ಸು ಕೂಡಲೆ ಒಡಂಬಡಲಿಲ್ಲ. ತನಗೆ ಅತ್ಯಂತ ಪ್ರಿಯವೂ ಆಶಾಸೂಚಕವೂ ಆದುದನ್ನು ಯಾರು ಒಮ್ಮನಸ್ಸಿನಿಂದ ಹಾಳುಮಾಡಿಯಾರು? ಅದನ್ನು ಮತ್ತೆ ಮತ್ತೆ ನೋಡಿ ಓದಬೇಕೆಂದು ಅವನಿಗೆ ಮನಸ್ಸಾಗುತ್ತಿತ್ತು. ಅಂತೂ ಕಡೆಗೆ, ಸೀತೆಗೆ ಅವಮಾನವಾಗಬಾರದು ಎಂದು ದಿಟ್ಟ ಮನಸ್ಸುಮಾಡಿ ಅದನ್ನು ಉಜ್ಜಿ ಅಳಿಸಿಬಿಟ್ಟನು. ಅಳಿಸಿದೊಡ ನೆಯೆ, ಏಕೋ ಏನೋ, ಅವನ ಅಂತಃಕರಣ ತಳಮಳಗೊಂಡಿತು. ಅವನ ಹೃದಯ ಏನೋ ಅಪಶಕುನ ಕಂಡಂತೆ ಭಯಗೊಂಡಿತು. ಮನಸ್ಸು 'ಅಯ್ಯೋ ಅಳಿಸಬಾರದಾಗಿತ್ತು. ಅದನ್ನು ಯಾರು ತಾನೆ ಓದುತ್ತಿದ್ದರು?' ಎಂದು ಕೊಂಡಿತು. ಅದನ್ನು ಮತ್ತೆ ಮೊದಲಿದ್ದಂತೆ ಮಾಡಲು ಅವನೆದೆ ಹಾತೊರೆ

ಯಿತು. ಅವನ ಉದ್ವೇಗ ಎಷ್ಟು ಪ್ರಸ್ಫುಟವಾಗಿತ್ತು ಎಂದರೆ ಚಿನ್ನಯ್ಯ "ಏನು, ಹೂವಯ್ಯ, ಬಹಳ ನೋಯುತ್ತದೇನು! ಬಹಳ ಹೊತ್ತು ಕೂತಿದ್ದರಿಂದ ಅಂತಾ ಕಾಣ್ತದೆ. ಮಲಗಿಬಿಡು" ಎಂದನು.

"ಅಷ್ಟೇನೂ ನೋವಿಲ್ಲ" ಎಂದು ಹೂವಯ್ಯ ಚಿನ್ನಯ್ಯನ ಸಹಾಯದಿಂದ ಮಲಗಿಕೊಂಡನು.

ಚಿನ್ನಯ್ಯ ಉಃಫೆಂದು ಊದಿ ದೀಪ ಆರಿಸಿದನು. ಅಮಾವಾಸ್ಯೆಯ ಕಗ್ಗತ್ತಲು ಹೊರಗಿನಿಂದ ತೆಕ್ಕನೆ ನುಗ್ಗಿಬಂದು ಕೊಟ್ಟಡಿಯನ್ನೆಲ್ಲ ದಟ್ಟೈಸಿ ತುಂಬಿತು. ಆ ಕರ್ಗತ್ತಲೆಯಲ್ಲಿ ಹಣತೆಯ ಬತ್ತಿಯ ತುದಿ ಇನ್ನೂ ಕೆಂಪಗೆ ಕೆಂಡವಾಗಿದ್ದು, ಅದರಿಂದ ಉಗುವ ಎಣ್ಣೆಹೊಗೆಯ ಕನರು ವಾಸನೆ ಅಲ್ಲೆಲ್ಲ ವ್ಯಾಪಿಸಿತ್ತು. ಚಿನ್ನಯ್ಯ ತುಸುಹೊತ್ತು ಮಾತಾಡುತ್ತಿದ್ದು ನಿದ್ದೆಹೋದನು. ಮನೆ ನಿಃಶಬ್ದವಾಗಿತ್ತು. ಹೊರಗೂ ನಿಃಶಬ್ದ. ಆಗಾಗ ಕೊಟ್ಟಿಗೆಯಿಂದ ದನಗಳು ಕಂಬಕ್ಕೆ ಕೋಡು ಬಡಿಯುವ ಸದ್ದೂ, ಹಾಸುಗಲ್ಲುಗಳ ಮೇಲೆ ಗೊರಸಿಟ್ಟ ಸದ್ದೂ, ದೊಂಟೆಗಳ ಸದ್ದೂ ಕೇಳಿಬರುತ್ತಿತ್ತು. ಆದರೆ ಆ ಸದ್ದು ಸಮುದ್ರಕ್ಕೆ ಒಂದು ಹನಿ ಹಾಲು ಹಾಕಿದಂತಾಗುತಿದ್ದಿತೆ ಹೊರತು ನೀರವತೆಯನ್ನು ಒಂದಿನಿತೂ ಅಳುಕಿಸಲು ಸಮರ್ಥವಾಗಿರಲಿಲ್ಲ. ಎಲ್ಲಿ ನೋಡಿದರೂ, ಎತ್ತ ಆಲಿಸಿದರೂ, ಕತ್ತಲೆ ಮತ್ತು ಮೌನಗಳ ಪಿತೂರಿಯೆ ಕಾಣುತ್ತಿತ್ತು; ಕೇಳುತ್ತಿತ್ತು. ಜಗತ್ತು ನಿಃಶಬ್ದ ನಿದ್ರಾಮುದ್ರಿತವಾಗಿತ್ತು.

ಆದರೆ ಹೂವಯ್ಯನಿಗೆ ನಿದ್ರೆ ಬರಲಿಲ್ಲ. ಬೆನ್ನುನೋವಿನ ಜೊತೆಗೆ ಮನಸ್ಸು ಕ್ಷುಭಿತವಾಗಿದ್ದುದರಿಂದ ಆತನು ವಿವಿಧ ಆಲೋಚನೆಗಳ ಅರಣ್ಯದಲ್ಲಿ ತೊಳಲತೊಡಗಿದನು. ಅವನ ಪ್ರಕೃತಿ ಸ್ವಾಭಾವಿಕವಾಗಿಯೆ ತಾತ್ವಿಕವೂ ಕಲ್ಪನಾ ಪ್ರಧಾನವೂ ಭಾವಮಯವೂ ಆಗಿತ್ತು. ಅಂದು ನಡೆದ ಘಟನೆಗಳಲ್ಲಿ ಒಂದೊಂದೂ ಅವನ ಭಾಗಕ್ಕೆ ಅರ್ಥಗರ್ಭಿತವಾಗಿತ್ತು. ಗಾಡಿ ಬೀಳಬೇಕೇಕೆ? ತನಗೆ ಮಾತ್ರ ನೋವಾಗಬೇಕೇಕೆ? ಗೋಡೆಯ ಮೇಲೆ ಹಲ್ಲಿ ಕಾಣಬೇಕೇಕೆ? ಆ ಹಲ್ಲಿ ಸೀತೆ ಬರೆದುದನ್ನು ತೋರುವಂತೆ ಆಚರಿಸಬೇಕೇಕೆ? ಹೂವಯ್ಯನಿಗೆ ವಿಧಿ ತನಗೂ ಸೀತೆಗೂ ಯಾವುದೊ ಒಂದು ಶಾಶ್ವತವಾದ ಸಂಬಂಧದ ಕಲ್ಪನೆ ಮಾಡಬೇಕೆಂದು ಗುಟ್ಟಾಗಿ ವ್ಯೂಹವನ್ನು ರಚಿಸಿದ್ದಂತೆ ತೋರಿತು. ಬೇರೆಯ ಸಮಯದಲ್ಲಾಗಿದ್ದರೆ ಅವನ ತೀಕ್ಷ್ಣಮತಿ ಅವುಗಳನ್ನೆಲ್ಲ ಸಾಮಾನ್ಯವೆಂದು ಲೆಕ್ಕಿಸದೆ ಇರುತ್ತಿತ್ತು. ಆದರೆ ಪ್ರೇಮವಶವಾದ ಹೃದಯಕ್ಕೆ ಎಲ್ಲೆಲ್ಲಿಯೂ ಎಲ್ಲದರಲ್ಲಿಯೂ ಶಕುನಗಳೆ ತೋರುತ್ತವೆ.

ಸೀತೆಯನ್ನು ಕುರಿತು ಆಲೋಚಿಸುತ್ತಿದ್ದಂತೆ ಅವನ ಮನಸ್ಸು ತನ್ನ ವಿದ್ಯಾ

ಭ್ಯಾಸದ ವಿಚಾರವಾಗಿ ನೆನೆಯತೊಡಗಿತ್ತು. ಮಹಾಪುರುಷರ ಜೀವನ ಚರಿತ್ರೆಗಳನ್ನು ಓದಿದ್ದ ಆತನಲ್ಲಿ ತಾನೂ ಮಹತ್ಕಾರ್ಯಗಳನ್ನು ಸಾಧಿಸಿ, ಕೀರ್ತಿವಂತನಾಗಬೇಕೆಂಬ ಮಹಾದಾಕಾಂಕ್ಷೆ ಉದ್ಭವಿಸಿತ್ತು. ಎಂತಹ ಮಹತ್ಕಾರ್ಯ, ಅದನ್ನು ಯಾವ ರೀತಿಯಲ್ಲಿ ಸಾಧಿಸಬೇಕು, ಎಂಬುದೊಂದೂ ಆತನಿಗೆ ಹೊಳೆದಿರಲಿಲ್ಲ. ಆದರೆ ತಂದೆ ತೀರಿದಂದಿನಿಂದ ಚಿಕ್ಕಪ್ಪ ತನ್ನ ವಿದ್ಯಾಭ್ಯಾಸದ ವಿಷಯದಲ್ಲಿ ಉದಾಸೀನನಾಗಿದ್ದನಲ್ಲದೆ ನಿರುತ್ತೇಜಕನಾಗಿಯೂ ವರ್ತಿಸಿದ್ದನು. ಪ್ರತಿವರ್ಷವೂ ವಿದ್ಯಾಭ್ಯಾಸವನ್ನು ನಿಲ್ಲಿಸಬೇಕು ಎಂದು ಹಠ ಹಿಡಿಯುತ್ತಿದ್ದನು. ಅವರಿವರಿಂದ ಹೇಳಿಸಿ, ತಾನೂ ವಾದಿಸಿ, ಹೂವಯ್ಯ ಮುಂದುವರಿದಿದ್ದನು. ಅಲ್ಲದೆ ಚಂದ್ರಯ್ಯಗೌಡರು ತಮ್ಮ ಮಗ ರಾಮಯ್ಯನ ವಿದ್ಯಾಭ್ಯಾಸದ ಸಲುವಾಗಿಯೂ ಅಣ್ಣನ ಮಗನ ಇಷ್ಟವನ್ನು ನೆರವೇರಿಸಬೇಕಾಗಿ ಬಂದಿತ್ತು. ಹೂವಯ್ಯ ತನಗೆ ಆಸ್ತಿ ಮನೆಗಳೊಂದೂ ಬೇಡ, ವಿದ್ಯಾರ್ಜನೆಯಾದರೆ ಸಾಕೆಂದು ಮನಸ್ಸಿನಲ್ಲಿ ಗೊತ್ತುಮಾಡಿದ್ದನು. ಆದರೆ ವಿಧವೆಯಾದ ತನ್ನ ತಾಯಿಯ ಸಲುವಾಗಿ ಅದನ್ನು ಬಾಯಿಬಿಟ್ಟು ಯಾರೊಡನೆಯೂ ಹೇಳಿರಲಿಲ್ಲ. ನಾಗಮ್ಮನವರು ಹಿಂದಿನ ವರ್ಷ ಮಗನು ರಜಾಕ್ಕೆ ಬಂದಾಗಲೆ ತಮಗೆ ಚಂದ್ರಯ್ಯಗೌಡರ ಸಂಸಾರದಲ್ಲಿ ಒಟ್ಟಾಗಿರಲು ಮನಸ್ಸಿಲ್ಲವೆಂದೂ, ತಾವಿಬ್ಬರೂ ತಮಗೆ ಬರಬೇಕಾದ ಆಸ್ತಿಯಲ್ಲಿ ಪಾಲು ತೆಗೆದುಕೊಂಡು ಬೇರೆಯಾಗಿ ಸಂಸಾರ ಹೂಡಬೇಕೆಂದೂ ಮಗನೊಡನೆ ಬಹಳವಾಗಿ ಹೇಳಿದ್ದರು. ಮಗನು ತನ್ನ ವಿದ್ಯಾಭ್ಯಾಸದ ನೆಪವನ್ನು ತಂದೊಡ್ಡಿ ತಾಯಿಯನ್ನು ಸುಮ್ಮನಿರಿಸಿದ್ದನು. ಅದೂ ಅಲ್ಲದೆ ಭಾವಜೀವಿಯಾಗಿದ್ದ ಅವನಿಗೆ ಬೇರೆ ಸಂಸಾರ ಮಾಡುವ ಕೋಟಲೆಯೂ ಭಾರವೂ ಅಸಹ್ಯವಾಗಿತ್ತು. ತನ್ನ ಮಹದಾಶೆ ಕೈಗೂಡಲು ಪ್ರತಿಬಂಧಕವಾದುದು ಯಾವುದನ್ನೂ ಕೈಕೊಳ್ಳಲು ಅವನು ಹಿಂಜರಿಯುತ್ತಿದ್ದನು.

ಆಲೋಚನೆಯ ಮಧ್ಯೆ ಹೂವಯ್ಯನು ಒಂದು ಸಾರಿ ಹಾಸಗೆಯಲ್ಲಿ ಹೊರಳಿ ಬೆನ್ನುನೋವಿನಿಂದ ನರಳಿದನು. ಸ್ವಲ್ಪ ಹೊತ್ತಾದಮೇಲೆ ನೋವು ನಿಂತು, ದೃಷ್ಟಿ ಸ್ಥಿರವಾಗಿ, ಎದುರಿಗಿದ್ದ ಕಿಟಕಿಯ ಕಡೆ ನೋಡಿದನು. ಕತ್ತಲೆ ತುಂಬಿದ್ದ ದೂರದ ಬಾಂದಳದಲ್ಲಿ ಕೆಲವು ನಕ್ಷತ್ರಗಳು ಪ್ರಕಾಶಮಾನವಾಗಿ ಮಿರುಗುತ್ತಿದ್ದುವು. ಭೂಸಂಚಾರಿಯಾಗಿದ್ದ ಅವನ ಮನಸ್ಸು ಮೆಲ್ಲಗೆ ವಿಶ್ವಯಾತ್ರಿಯಾಯಿತು. ಖಗೋಲಶಾಸ್ತ್ರಜ್ಞರು ಹೊಸ ಹೊಸದಾಗಿ ಕಂಡು ಹಿಡಿದಿದ್ದ ಅದ್ಭುತ ವಿಷಯಗಳನ್ನು ಓದಿ ತಿಳಿದಿದ್ದ ಅವನ ಆತ್ಮ ಬೇರೊಂದು ನೂತನ ಭಾವದಿಂದ ಉಜ್ವಲವಾಯಿತು. ಆ ನಕ್ಷತ್ರಗಳು ಎಷ್ಟು ಕೋಟ್ಯಂತರ ಮೈಲಿಗಳ ದೂರದಲ್ಲಿವೆ? ಅದರಲ್ಲಿ ಒಂದೊಂದೂ ಭೂಮಿಗಿಂತಲೂ, ಸೂರ್ಯನಿಗಿಂತಲೂ, ಎಷ್ಟು

ಕೋಟ್ಯಂತರ ಪಾಲು ಹಿರಿದಾಗಿದೆ! ಎಂತಹ ಭಯಂಕರವಾದ ಅಗ್ನಿಪ್ರವಾಹಗಳು ಅಲ್ಲಿ ಸಮುಜ್ಜ್ವಲ ಭೀಷಣತೆಯಿಂದ ನುಗ್ಗಿ ಹರಿದು ತಾಂಡವವಾಡುತ್ತಿವೆ? ಈ ಕಾಲ ದೇಶಗಳು ಎಷ್ಟು ಬಗೆನಿಲುಕದಷ್ಟು ಅನಂತವಾಗಿವೆ? ಈ ಛಂದೋಮಯವಾದ ಮಹಾ ಬ್ರಹ್ಮಾಂಡದ ಗಾನವನ್ನು ರಚಿಸಿರುವ ದಿವ್ಯ ಕವಿಯ ಮಹಿಮೆಯೇನು? ಕ್ಷುದ್ರ ನಕ್ಷತ್ರವಾದ ಸೂರ್ಯನ ಸುತ್ತ ತಿರುಗುವ ಈ ಭೂಮಿ ಈ ವಿಶ್ವದಲ್ಲಿ ಎಂತಹ ಸಣ್ಣ ಹುಡಿ! ನಾಗರಿಕತೆಗಳೂ ಮನುಷ್ಯನೂ ಈ ಬೃಹತ್ತಾದ ವಿಶ್ವದ ವ್ಯಾಪಾರಗಳಲ್ಲಿ ಎಷ್ಟು ಅತಿಸಾಮಾನ್ಯ? ಎಷ್ಟು ಅಜ್ಞಾತ? ಯೋಚಿಸುತ್ತ ಯೋಚಿಸುತ್ತ ಹೂವಯ್ಯನ ದೃಷ್ಟಿ ತಾರೆಗಳಿಗಿಂತಲೂ ಬಹು ದೂರವಾಗಿ ಹೋಯಿತು. ತಾನೂ ತನ್ನ ಜೀವನವೂ ಅಂತಿರಲಿ, ಸಮಸ್ತ ಪ್ರಪಂಚವೂ, ಮಹತ್ವವಾದುವು ಎಂದು ಪರಿಗಣಿತವಾದ ಅದರ ಪ್ರಸಿದ್ಧ ವ್ಯಾಪಾರ, ಚೇಷ್ಟೆ, ಸಾಹಸಗಳೂ ಕ್ಷುದ್ರದಲ್ಲಿ ಕ್ಷುದ್ರತಮವಾಗಿ ದರಿದ್ರವಾಗಿ ತೋರಿದುವು. ಆತನ ದೇಹ ಅವ್ಯಕ್ತಭೀಷಣವಾದ ಮಧುರ ರಸಾವೇಶದಿಂದ ಜುಮ್ಮೆಂದು ವಿಕಂಪಿಸಿತು. ರುದ್ರಾನಂದದಿಂದ ಆತನ ಹೃದಯ ಹಿಗ್ಗಿತು.

ಆ ದಿನ ಹಿಂದೊಂದು ಸಾರಿ ಅವನೆದೆ ಹಾಗೆ ಹಿಗ್ಗಿದ್ದಿತು, ಗೋಡೆಯ ಮೇಲೆ ಸೀತೆಯ ಪ್ರೇಮಶಾಸನವನ್ನು ಓದಿದಾಗ. ಅಂತರಿಕ್ಷದಲ್ಲಿ ಸಂಚರಿಸುತ್ತಿದ್ದ ಅವನ ಮನಸ್ಸು ಮತ್ತೆ ಭೂಮಿಗಿಳಿದು ಮುತ್ತಳ್ಳಿಗೆ ಬಂದಿತು. ಬಗೆಗಣ್ಣಿನಲ್ಲಿ ಸೀತೆಯ ಮೂರ್ತಿ ಮೂಡಿತು. ಆ ರಮಣಿ ಎನಿತು ಸುಂದರವಾಗಿದ್ದಾಳೆ! ನೋಡಿದನಿತೂ ನೋಡಬೇಕೆನ್ನಿಸುತ್ತದೆ! ಆಕೆಯ ಕದಪು ಎಷ್ಟು ನುಣುಪಾಗಿದೆ! ಪ್ರೇಮ ಮಾಧುರ್ಯ ತುಂಬಿದಂತಿದೆ! ಅಲ್ಲಿ ತುಂಬಿದ ಪ್ರೇಮ ಮಾಧುರ್ಯ ಕೆಂದುಟಿಗಳಲ್ಲಿ ಹೊರಸೂಸುವಂತಿದೆ! ಹೂವಯ್ಯ ಮನಸ್ಸಿನಲ್ಲಿ ಆ ಮೂರ್ತಿಯನ್ನು ಆಲಿಂಗಿಸಿ ಚುಂಬಿಸಿದನು! ಕಿಟಕಿಯಲ್ಲಿ ಕಂಡ ನಕ್ಷತ್ರ ಅವನನ್ನು ದೂರದೂರ ದೂರಕ್ಕೆ ಎಳೆದೊಯ್ದು ಈ ಪ್ರಪಂಚವನ್ನೂ ಅದರ ವ್ಯಾಪಾರಗಳನ್ನೂ ಕ್ಷುದ್ರವಾಗಿ ಕಾಣುವಂತೆ ಮಾಡಿಬಿಟ್ಟಿತು. ಹಾಗೆಯೆ ಸೀತೆಯನ್ನು ನೆನೆದ ಹೂವಯ್ಯನ ಮನಸ್ಸಿಗೆ ವಿಶಾಲ ವಿಶ್ವವೇ ಕ್ಷುದ್ರವಾದಂತೆ ತೋರಿತು. ಲಲನೆಯ ಸೌಂದರ್ಯ ಪ್ರೇಮಗಳ ಪ್ರಲಯ ಜಲದಲ್ಲಿ ಕೋಟ್ಯಂತರ ಗ್ರಹ ನಕ್ಷತ್ರ ನೀಹಾರಿಕಾ ಖಚಿತವಾದ ಅನಂತ ಕಾಲದೇಶಗಳ ಮಹಾಬ್ರಹ್ಮಾಂಡ ಸಣ್ಣದೊಂದು ಗುಳ್ಳೆಯಂತೆ ನಿಸ್ಸಹಾಯವಾಗಿ ತೇಲುತ್ತಿತ್ತು! ನಕ್ಷತ್ರಧ್ಯಾನಕ್ಕಿಂತಲೂ ಸೀತೆಯ ಒಲ್ಮೆಯೆ ಸಹಸ್ರಪಾಲು ಮಧುರ ಮಹತ್ತರವಾಗಿ ತೋರಿತು. ಸೀತೆಯ ಪ್ರೇಮಮಹಿಮೆಯಿಂದ, ಮೊದಲು ಕ್ಷುದ್ರವಾಗಿ ಕಂಡಿದ್ದ ತಾನೂ ತನ್ನ ಜೀವನವೂ ಈಗ ವಿಶ್ವವ್ಯೂಹದಲ್ಲಿ ಮಹೋನ್ನತವಾಗಿ ಪ್ರಮುಖವಾಗಿ

ತೋರಿದುವು. ಹೂವಯ್ಯನ ಹೃದಯದಲ್ಲಿ ಆಗಲೆ ಅಂತಃಸಮರಕ್ಕೆ ಅಂಕುರ ಸ್ಥಾಪನೆಯಾಗಿತ್ತು. ಒಮ್ಮೆ ಆಕೆಗಾಗಿ ಸಂಸಾರದ ಭಾರವನ್ನು ಹೊರುವುದು ಅಷ್ಟೇನೂ ಹೀನವಲ್ಲ, ನಷ್ಟಕರವಲ್ಲ ಎಂದು ಆಲೋಚಿಸಿದನು. ಮತ್ತೊಮ್ಮೆ ತನ್ನ ಮಹದಾಕಾಂಕ್ಷೆಯ ಆದರ್ಶ ಅವನನ್ನು ತನ್ನೆಡೆಗೆ ಸೆಳೆಯುತ್ತಿತ್ತು.... ಆಲೋಚನೆಗಳು ಬರಬರುತ್ತ ಮಬ್ಬಾದುವು.... ಹೂವಯ್ಯ ಮೈಸೂರಿನ ಕುಕ್ಕನ ಹಳ್ಳಿಯ ಕೆರೆಯ ಏರಿಯ ಮೇಲೆ ವಾಯುವಿಹಾರಕ್ಕಾಗಿ ನಡೆಯುತ್ತಿದ್ದಾನೆ. ಸಂಧ್ಯಾಕಾಲದ ಪಶ್ಚಿಮ ಗಗನದ ಮೇಘಲೋಕದಲ್ಲಿ ಖೂನಿಯಾದಂತಿದೆ! ರಕ್ತಪಾತವಾದಂತಿದೆ! ಕೆರೆ ನಿಸ್ತರಂಗವಾಗಿದೆ. ಗಿಡಮರಗಳು ನಿಶ್ಚಲವಾಗಿವೆ. ಆ ಸ್ತ್ರೀ ಯಾರು ? ದೂರದಲ್ಲಿ ಬರುತ್ತಿದ್ದಾಳೆ! ಹೂವಯ್ಯ ನೋಡುತ್ತಾನೆ: ತನ್ನ ತಾಯಿ ನಾಗಮ್ಮನವರು! ಇದೇನಾಶ್ಚರ್ಯ! ಇಲ್ಲಿಗೆ ಹೇಗೆ ಬಂದಳು ತಾಯಿ! ಹೂವಯ್ಯ ಕರೆಯುತ್ತ ಮುಂದುವರಿದನು. ನಾಗಮ್ಮನವರು ಸಮೀಪಕ್ಕೆ ಬಂದರು. ಅವರ ಹಣೆಯಲ್ಲಿ ಗಾಯವಾಗಿ ರಕ್ತ ಸೋರುತ್ತಿದೆ! ಮೂರ್ಛೆಯಿಂದ ಕೆಳಗೆ ಬೀಳುತ್ತಿದ್ದಾರೆ! ಹೂವಯ್ಯ ಬಳಿಗೆ ನುಗ್ಗಿದನು. ಆದರೆ ಕಾಲು ಕೀಳಲಾಗಲಿಲ್ಲ! ಅಯ್ಯೋ.... ಹೂವಯ್ಯ ಬೆಚ್ಚಿ ಬಿದ್ದು ಕಣ್ದೆರೆದನು. ಕುಕ್ಕನ ಹಳ್ಳಿಯ ಕೆರೆಯ ಏರಿಯ ಮೇಲೆ ನಡೆಯುತ್ತಿದ್ದಿಲ್ಲ; ಮುತ್ತಳ್ಳಿಯಲ್ಲಿ ಹಾಸಗೆಯ ಮೇಲೆ ಮಲಗಿದ್ದಾನೆ! ಅವನಿಗೆ ಸ್ವಲ್ಪ ಗಾಬರಿ ಯಾದರೂ ವಿಚಿತ್ರ ಸ್ವಪ್ನಕ್ಕಾಗಿ ಮನಸ್ಸಿನಲ್ಲಿಯೆ ನಕ್ಕು, ಮತ್ತೆ ಕಣ್ಮುಚ್ಚಿದನು. ...ಅಗ್ರಹಾರದ ಜೋಯಿಸರು ವೆಂಕಪ್ಪಯ್ಯನವರ ಬಚ್ಚಲು ಮನೆಯಲ್ಲಿ ಮೀಯುತ್ತಿದ್ದಾನೆ! ಬ್ರಾಹ್ಮಣರ ಸ್ನಾನದ ಮನೆಯಲ್ಲಿ ನೀರು ತುಂಬಿದ ಹಂಡೆಯನ್ನು ಮುಟ್ಟಿಬಿಟ್ಟಿದ್ದಾನೆ! ಅಷ್ಟರಲ್ಲಿ ಜೋಯಿಸರು ಅಲ್ಲಿಗೆ ಓಡಿ ಬಂದು ಕ್ರೋಧದಿಂದ ದೊಣ್ಣೆಯೆತ್ತಿದ್ದಾರೆ! ಹೂವಯ್ಯ "ತಡೆಯಿರಿ ತಪ್ಪಾಯ್ತು, ಕ್ಷಮಿಸಿ!" ಎಂದು ಕೂಗಿಕೊಂಡರೂ ಅವರು ಬೆನ್ನಿಗೊಂದು ಪೆಟ್ಟು ಇಳಿಸಿಯೇ ಬಿಟ್ಟರು! ಹೂವಯ್ಯ 'ಅಯ್ಯೋ' ಎಂದು ಕುಮುಟಿ ಬಿದ್ದನು. ಎಚ್ಚರವಾಯ್ತು. ನಿದ್ದೆಯಲ್ಲಿ ಹಾಸಗೆಯ ಮೇಲೆ ಹೊರಳಿದ್ದರಿಂದ ಬೆನ್ನು ನೋಯುತ್ತಿತ್ತು. ಅವನು 'ಅಯ್ಯೋ' ಎಂದುದನ್ನು ಕೇಳಿ ಚಿನ್ನಯ್ಯನಿಗೆ ಎಚ್ಚರವಾಗಿತ್ತು.

'ಹೂವಯ್ಯ, ಹೂವಯ್ಯ' ಎಂದು ಕರೆದನು ಚಿನ್ನಯ್ಯ.

ಹೂವಯ್ಯ "ಏನು ?" ಎಂದನು.

"ನೋವಾಗ್ತದೇನು ? ದೀಪ ಹೊತ್ತಿಸಬೇಕೇನು !"

"ಏನೂ ಇಲ್ಲ. ಬೇಡ."

"ಮತ್ತೆ ಯಾಕೆ ಕೂಗಿದೆ?"

"ಕನವರಿಸಿ ಕೂಗಿದೆ ಅಂತ ಕಾಣ್ತದೆ."

ಮತ್ತೆ ಇಬ್ಬರೂ ಸುಮ್ಮನಾದರು. ಸ್ವಲ್ಪ ಹೊತ್ತಿನಲ್ಲಿ ನಿಶಾ ಮೌನನಿದ್ರೆಗಳ ನಿರಂಕುಶ ಪ್ರಭುತ್ವ ಲೋಕವನ್ನೆಲ್ಲ ಮುಳುಗಿಸಿ ಬಿಟ್ಟಿತು.

## ೧೬

## ನೂರು ರೂಪಾಯಿ ನೋಟು

ಮರುದಿನ ಬೆಳಿಗ್ಗೆ ಮುಂಜಾನೆ ಚಂದ್ರಯ್ಯಗೌಡರು ಮುತ್ತಳ್ಳಿಗೆ ಕಾಲು ನಡಿಗೆಯಲ್ಲಿಯೆ ಹೊರಟರು. ಅವರ ಮನಸ್ಸು ವಿಕ್ಷುಬ್ಧವಾಗಿತ್ತು. ಹಿಂದಿನ ರಾತ್ರಿ ಪುಟ್ಟಣ್ಣನು ನಡೆದ ಸಂಗತಿಯನ್ನೆಲ್ಲ ಹೇಳಲು, ಅವರು ನಿಂಗನನ್ನು ಹೊಡೆಯುವುದಕ್ಕಿಂತಲೂ ಹೆಚ್ಚಾಗಿ ಬೈದಿದ್ದರು. ಅಲ್ಲದೆ ನಾಗಮ್ಮನವರ ಶೋಕಪ್ರೇರಿತವಾದ ನಿಂದೆಯನ್ನು ಕೇಳಿ ಅವರ ಮನಸ್ಸು ಮುರಿದುಹೋಗಿತ್ತು. ದೇವರ ಕಲ್ಲಿಗೆ ತಲೆ ಚಚ್ಚಿಕೊಂಡು, ನಾಗಮ್ಮನವರ ಹಣೆಯಿಂದ ನೆತ್ತರು ಸೋರಿ, ಎಚ್ಚರ ತಪ್ಪಿ, ಮನೆಯವರಿಗೆಲ್ಲ ಗಾಬರಿಯಾಗಿತ್ತು. ತಾವು ಮನೆಯ ಯಜಮಾನರಾಗಿದ್ದುದರಿಂದಲೂ ನಾಗಮ್ಮನವರ ಮನಸ್ತೃಪ್ತಿಯ ಸಲುವಾಗಿಯೂ ನೊಂದವನನ್ನು ವಿಚಾರಿಸಬೇಕೆಂಬ ಧರ್ಮಬುದ್ಧಿಯಿಂದಲೂ ಚಂದ್ರಯ್ಯಗೌಡರು ಹೂವಯ್ಯನನ್ನು ನೋಡಲೆಂದು ಅಷ್ಟು ಮುಂಜಾನೆ ಮುತ್ತಳ್ಳಿಗೆ ಕಾಲುನಡಿಗೆಯಲ್ಲಿಯೆ ಹೊರಟಿದ್ದರು. ಏಕೆಂದರೆ ಗಾಡಿದಾರಿ ಹೆಚ್ಚು ಸುತ್ತಾಗಿತ್ತು. ತಮ್ಮ ಮಗನನ್ನೂ ನೋಡುವ ಕುತೂಹಲ ಅವರಲ್ಲಿ ಇಲ್ಲದಿರಲಿಲ್ಲ. ಒಂದು ಬಗೆಯಾದ ಅಳುಕೂ ಇತ್ತು. ಏಕೆಂದರೆ ಹೂವಯ್ಯ ರಾಮಯ್ಯರಿಗೆ ತಿಳಿಯದಂತೆ ತಾವು ಕುಸಂಸ್ಕೃತ ಕನ್ನೆಯನ್ನು ಮದುವೆಯಾಗಿದ್ದುದು ಅವರ ಅಂತಃಕರಣದಲ್ಲಿ ಇತ್ತೀಚೆಗೆ ಒಂದು ಅಪರಾಧದಂತೆ ಭಾಸವಾಗತೊಡಗಿತ್ತು. ಹುಡುಗರಿಗೆ ತಾವು ಮದುವೆಯಾಗಿದ್ದ ವಿಷಯ ಈಗಾಗಲೆ ತಿಳಿದು ಬಿಟ್ಟಿದ್ದರೆ! ತನ್ನೊಡನೆ ಹೇಗೆ ವರ್ತಿಸುತ್ತಾರೊ ಎಂದು ಮನಸ್ಸು ಕಳವಳಗೊಂಡಿತ್ತು. ಇದೆಲ್ಲದರ ಜೊತೆಗೆ ಆ ದಿನವೇ ಸೀತೆಮನೆ ಸಿಂಗಪ್ಪಗೌಡರು ಕಡಿಸಿದ್ದ ಕಳ್ಳನಾಟಾಗಳನ್ನು ತಮ್ಮ ಮನೆಗೆ ಗುಟ್ಟಾಗಿ ಸಾಗಿಸುವ ಸಾಹಸವೂ ನಡೆಯಬೇಕಾಗಿತ್ತು. ಅದಕ್ಕಾಗಿ ಗೌಡರು ತಾವು ಮನೆಯಲ್ಲಿಯೆ ಇದ್ದುಕೊಂಡು, ಏನಾದರೂ ಅನಾಹುತ ಅಚಾತುರ್ಯ ನಡೆಯದಂತೆ ನೋಡಿಕೊಳ್ಳಬೇಕೆಂದು ಹಿಂದಿನ ದಿನ ನಿರ್ಧರಿಸಿದ್ದರು.

ಆದರೆ ವಿಧಿ ಅವರನ್ನು ಮುತ್ತಳ್ಳಿಗೆ ಕಳುಹಿಸಲು ಒಳಸಂಚು ಹೂಡಿತ್ತು. ಆದ್ದರಿಂದ ಅವರು ಸೇರೆಗಾರರನ್ನೂ ಪುಟ್ಟಣ್ಣನನ್ನೂ ಕರೆದು, ಹೇಳಬೇಕಾದುದನ್ನೆಲ್ಲ ಹೇಳಿ, ಮನೆಯ ಹೆಬ್ಬಾಗಿಲನ್ನು ದಾಟಿದ್ದರು.

ಅಷ್ಟರಲ್ಲಿ ವಾಸು ಓಡಿಬಂದು "ದೊಡ್ಡಮ್ಮ ಮುತ್ತಳ್ಳಿಗೆ ಹೋಗಬೇಕಂತೆ, ಹೂವಣ್ಣಯ್ಯನ್ನ ನೋಡೋಕೆ" ಎಂದು ತಿಳಿಸಿದನು.

ಗೌಡರು ಮುನಿದುಕೊಂಡು "ಯಾಕಂತೆ? ಬೇಡ. ನಾನು ಹೋಗಿ ನೋಡಿಕೊಂಡು ಬರ್ತೀನೆ!" ಎಂದು ಗದರಿಸಿ ಮುಂದುವರಿದರು.

ಹತ್ತು ಹೆಜ್ಜೆ ಹೋದವರು ಮತ್ತೆ ನಿಂತರು. ಮೊದಲೇ ತಮ್ಮ ಮೇಲೆ ಹಬ್ಬುತ್ತಿದ್ದ ನಾಗಮ್ಮನವರ ದೂರಿಗೆ ಮತ್ತಷ್ಟು ಮೊನೆಯಾಗುವುದೆಂದು ಭಾವಿಸಿ ವಾಸುವನ್ನು ಕರೆದು "ಹೋಗಲಿ ಅಂತಾ ಹೇಳೋ. ನಿಂಗನಿಗೆ ಹೇಳೊ, ಕಡೆಗೆ ಗಾಡಿ ಕಟ್ಟಿಕೊಂಡು ಬರಲಿ ಅಂತ" ಎಂದರು.

ವಾಸು "ನಾನೂ ಬರ್ತೀನೆ, ಅಪ್ಪಯ್ಯಾ! ಹೂವಣ್ಣಯ್ನ ನೋಡ್ಬೇಕು" ಎಂದನು.

ಗೌಡರು ಅರ್ಧ ಜುಗುಪ್ಸೆಯಿಂದಲೂ ಅರ್ಧ ಕ್ರೋಧದಿಂದಲೂ "ಏನಾದರೂ ಸಾಯಿ!" ಎಂದು ಮುಂದೆ ನಡೆದರು.

ವಾಸು ಹಿಂದಿನಿಂದ "ಪುಟ್ಟಕ್ಕಯ್ಯನೂ ಬರ್ತದಂತೇ" ಎಂದು ಕೂಗಿದನು. ಗೌಡರು ಮಾತಾಡದೆ ಹಿಂತಿರುಗಿ ನೋಡದೆ ಹೊರಟುಹೋದರು.

ಓಬಯ್ಯನು ಗೌಡರು ಹೋಗುವುದನ್ನೇ ಕಾಯುತ್ತ ಚೌಕಿಯ ಮೂಲೆಯಲ್ಲಿ ಕಂಬಳಿಯನ್ನು ಸುತ್ತಿ ಹೊದೆದುಕೊಂಡು ಅಲುಗಾಡದೆ ಮಲಗಿದ್ದನು. ಹಿಂದಿನ ರಾತ್ರಿ ಪ್ರಜ್ಞೆ ಮರಳಿದಾಗ, ಅವನಿಗೆ ತಾನು ಎಲ್ಲಿದ್ದೇನೆ ಎಂಬುದೇ ತಿಳಿಯಲಿಲ್ಲ. ಅಮಾವಾಸ್ಯೆಯ ಕಗ್ಗತ್ತಲೆಯಲ್ಲಿ ಮನೆಯನ್ನು ಗುರುತಿಸಲೂ ಸಾಧ್ಯವಾಗಲಿಲ್ಲ. ಅಂತೂ ತಾನೆಲ್ಲಿಯೋ ಸುರಕ್ಷಿತವಾಗಿದ್ದೇನೆ ಎಂದು ಅವನಿಗೆ ಗೊತ್ತಾಯಿತು. ತನ್ನನ್ನು ಯಾರು ತಂದರು, ಹೇಗೆ ತಂದರು, ಯಾವುದೂ ಬಗೆಹರಿಯಲಿಲ್ಲ. ಆ ವಿಚಾರದಲ್ಲಿ ಅವನ ಮನಸ್ಸು ಹೊರಗಿದ್ದ ಕಗ್ಗತ್ತಲೆಯನ್ನೇ ಹೋಲಿತ್ತು. ಆದರೆ ಬೆಳಕು ಹರಿದ ಮೇಲೆ ತಾನು ಕಾನೂರಿನಲ್ಲಿ ಇದ್ದೇನೆಂದು ಗೊತ್ತಾಗಿ ಭೀತಿಗೊಂಡನು. ಏಕೆಂದರೆ, ಚಂದ್ರಯ್ಯಗೌಡರು ತನ್ನನ್ನು ಶಿಕ್ಷಿಸದೆ ಸುಮ್ಮನೆ ಬಿಡುವವರಲ್ಲ ಎಂದು. ಆದ್ದರಿಂದ ಅವನು ಸ್ಪರ್ಶಮಾತ್ರದಿಂದಲೇ ಅಪಾಯವನ್ನು ಬಗೆದು ಮೈ ಮುದುಗಿಸಿ ನಿರ್ಜೀವವಾದಂತೆ ಉಂಡೆಯಾಗಿ ಬಿದ್ದುಕೊಳ್ಳುವ ಚಸವನ ಹುಳುವಿನಂತೆ ಚೌಕಿಯ ಮೂಲೆಯಲ್ಲಿ ಅಚಲನಾಗಿದ್ದನು. ಗಟ್ಟಿಯಾಗಿ ನಡೆಯುತ್ತಿದ್ದ ಮಾತುಕತೆಗಳಿಂದ ಗೌಡರು ಮುತ್ತಳ್ಳಿಗೆ ಹೋಗುತ್ತಾರೆಂದು

ತಿಳಿದಮೇಲೆ ಅವನಿಗೆ ಜೀವ ಬಂದಂತಾಯಿತು. ಗೌಡರು ಮನೆಯ ಹೆಬ್ಬಾಗಿಲು ದಾಟಿಹೋದುದೇ ತಡ, ರಾತ್ರಿ ಊಟವಿಲ್ಲದೆ ಬಹಳ ಹಸಿದಿದ್ದ ಅವನು ಬಾವಿಗೆ ಹೋಗಿ, ಹಲ್ಲುಜ್ಜಿ ಮುಖ ತೊಳೆಯುವ ಶಾಸ್ತ್ರವನ್ನು ತ್ವರೆಯಿಂದ ಪೂರೈಸಿ, ಅಡುಗೆ ಮನೆಗೆ ಹೋದನು. ಅಲ್ಲಿ ಸುಬ್ಬಮ್ಮ ಪಾಕಕಾರ್ಯದಲ್ಲಿ ತೊಡಗಿದ್ದಳು.

ನೆಲ್ಲುಹಳ್ಳಿಯ 'ಸುಬ್ಬಿ' ಕಾನೂರು ಚಂದ್ರಯ್ಯಗೌಡರನ್ನು ಮದುವೆಯಾಗಿ 'ಸುಬ್ಬಮ್ಮ'ನಾದ ಮೇಲೆ, ಓಬಯ್ಯ ಯಾವುದೋ ಭೂಗತವಾಗಿದ್ದ ದೂರದ ಸಂಬಂಧವೊಂದನ್ನು ಸಂಶೋಧನೆಯಿಂದ ಕಂಡುಹಿಡಿದು ಅವಳನ್ನು 'ತಂಗಿ' ಎಂದು ಕರೆಯತೊಡಗಿದ್ದನು. ಸುಬ್ಬಮ್ಮನೂ ಅವನನ್ನು 'ಓಬಣ್ಣಯ್ಯ' ಎಂದು ಕರೆಯುತ್ತ ಅವನು ಬಂದಾಗಲೆಲ್ಲ ಕಾಫಿಯನ್ನೋ ತಿಂಡಿಯನ್ನೋ ಅಥವಾ ತಾನು ಗುಟ್ಟಾಗಿ ತರಿಸಿ ಇಟ್ಟುಕೊಂಡಿದ್ದ ಹೆಂಡವನ್ನೋ ಕೊಟ್ಟು ನಂಟರುಪಚಾರ ಮಾಡುತ್ತಿದ್ದಳು. ಕಾರಣವೇನೆಂದರೆ, ಸುಬ್ಬಮ್ಮ ಕಾನೂರಿನಲ್ಲಿ ಏಕಾಕಿನಿಯಂತಿದ್ದಳು. ನಾಗಮ್ಮ, ಪುಟ್ಟಮ್ಮ, ವಾಸು ಮತ್ತು ಅಲ್ಲಿಗೆ ಬರುತ್ತಿದ್ದ ಇತರ ಬಂಧುಗಳು, ಎಲ್ಲರೂ ಸಂಸ್ಕೃತಿಯ ದೃಷ್ಟಿಯಿಂದ ಅವಳಿಗೆ ಬಹುದೂರ ವಾಗಿದ್ದರು; ಪರಕೀಯರಾಗಿದ್ದರು. ಆದ್ದರಿಂದ ಅವರ ಮಟ್ಟಕ್ಕೇರಿ ಮಾತು ಕತೆಯಾಡಲು ಅವಳಿಂದ ಆಗುತ್ತಿರಲಿಲ್ಲ. ಬೈಗುಳದಲ್ಲಿ ಮಾತ್ರವೇ ಅವಳು ಎಲ್ಲರಿಗಿಂತಲೂ ಹೆಚ್ಚು ಜಯಶಾಲಿಯಾಗುತ್ತಿದ್ದಳು. ಸಂಸ್ಕೃತಿಯಲ್ಲಿಯೂ ಬಡತನ ದಲ್ಲಿಯೂ ತನಗೆ ಸರಿಸಮಾನನಾಗಿದ್ದ ಓಬಯ್ಯನನ್ನು ಅಣ್ಣ ಎಂದು ಕರೆಯುವುದು ಅವಳಿಗೆ ಪ್ರಯೋಜನಕಾರಿಯಾಗಿತ್ತು. ಅವನೊಡನೆ ತನ್ನ ಸುಖದುಃಖಗಳನ್ನು ಹೇಳಿಕೊಳ್ಳುವಳು. ಓಬಯ್ಯನೂ ಇತರರು ತಾಳ್ಮೆಯಿಂದ ಆಲಿಸಲೊಲ್ಲದ ಅವಳ ಮಾತುಗಳನ್ನು ಎಷ್ಟು ಹೊತ್ತು ಬೇಕಾದರೂ ಆಲಿಸುತ್ತಿದ್ದನು. ಕಾರಣ ಅವಳಲ್ಲಿದ್ದ ಬಂಧುಪ್ರೇಮವಾಗಿರಲಿಲ್ಲ; ಅವಳಿಂದ ತನಗಾಗುತ್ತಿದ್ದ ಊಟೋಪ ಚಾರ ಮತ್ತು ಅವಳಿಂದ ತಾನು ಬಯಸುತ್ತಿದ್ದ ಉಪಕಾರ.

ಓಬಯ್ಯ ಅಡುಗೆಮನೆಗೆ ಬರಲು ಸುಬ್ಬಮ್ಮ ಆದರದಿಂದ ಅವನಿಗೆ ಮಣೆ ಹಾಕಿ, ಕಾಫಿ ತಿಂಡಿ ಕೊಟ್ಟಳು. ಪುಟ್ಟಮ್ಮ ವಾಸು ಇಬ್ಬರೂ ನಾಗಮ್ಮನವರ ಕೋಣೆಯಲ್ಲಿ ಮುತ್ತಳ್ಳಿಗೆ ಹೋಗಲು ಸನ್ನಾಹ ಮಾಡುವುದರಲ್ಲಿ ಮಗ್ನರಾಗಿ ದ್ದರು. ಆದ್ದರಿಂದ ಸುಬ್ಬಮ್ಮನಿಗೆ ದೀರ್ಘಕಾಲ ಮಾತಾಡಲು ಅವಕಾಶ ಸಿಕ್ಕಿತು. ಸುಬ್ಬಮ್ಮ ತನಗೆ ಆ ಮನೆಯಲ್ಲಿ ಒದಗುತ್ತಿದ್ದ ಕಷ್ಟಗಳನ್ನೆಲ್ಲ ಹೇಳಿ ಕೊಂಡಳು. ಹಿಂದಿನ ದಿನ ನಡೆದುದನ್ನೆಲ್ಲ ಸಾಂಗವಾಗಿ ಹೇಳಿ ಕಂಬನಿಗರೆದಳು. ಓಬಯ್ಯನೂ ತನ್ನ ತಂದೆಯಿಂದ ತನಗೊದಗಿದ್ದ ಕಷ್ಟ ಸಂಕಟಗಳನ್ನೆಲ್ಲ ಹೇಳಿದನು. ಹಿಂದಿನ ದಿನ ಅವನ ಚಿಕ್ಕತಾಯಿ ಸತ್ತುದನ್ನು ಸುಬ್ಬಮ್ಮ ನೆನಪು ಮಾಡಿಕೊಟ್ಟರೂ

ಅವನು ಅದರ ವಿಚಾರವಾಗಿ ಒಂದು ಮಾತನ್ನೂ ಆಡಲಿಲ್ಲ; ಶೋಕಪ್ರದರ್ಶನವನ್ನಂತೂ ಒಂದಿನಿತೂ ಮಾಡಲಿಲ್ಲ. ಅದಕ್ಕೆ ಬದಲಾಗಿ ತನ್ನ ಸಂಕಟಗಳನ್ನೆ ಸರಸವಾಗಿ ಸವಿಸ್ತಾರವಾಗಿ ಹೇಳಿದನು. ಸುಬ್ಬಮ್ಮ ಅದನ್ನೆಲ್ಲ ಕೇಳಿ ಸಹಾನುಭೂತಿಯಿಂದ ಮತ್ತಷ್ಟು ಅತ್ತುಬಿಟ್ಟಳು. ಅವಳೆದೆ ತನಗಾಗಿ ಮರುಗಿದೆ ಎಂದು ತಿಳಿದ ಕೂಡಲೆ ಓಬಯ್ಯನು ದೀನವಾಣಿಯಿಂದ "ನಿನ್ನಿಂದ ಒಂದು ಉಪಕಾರ ಆಗಬೇಕು" ಎಂದನು. ಎಲ್ಲರಿಂದಲೂ ಕಡೆಗಣಿಸಲ್ಪಟ್ಟಿದ್ದರಿಂದ ಸುಬ್ಬಮ್ಮ ಓಬಯ್ಯನು ತನ್ನಿಂದ ಉಪಕಾರ ಬಯಸುವುದು ತನಗೊಂದು ಹೆಮ್ಮೆಯೆಂದು ತಿಳಿದಳು.

"ಅಯ್ಯೋ ಮಾರಾಯ, ನಾನೇನು ಉಪಕಾರ ಮಾಡೇನು?" ಎಂದಳು.

"ನೀನು ಮಾಡಿದರೆ ನಾನು ಬದುಕ್ತೀನಿ. ಇಲ್ದಿದ್ದರೆ ಕುತ್ತಿಗೆಗೆ ನೇಣೆ!" ಎಂದು ಓಬಯ್ಯ ನೇಣಾದಂತೆಯೆ ಅಭಿನಯಿಸಿದನು.

"ಏನಾಗಬೇಕು ಹೇಳಪ್ಪಾ. ನನ್ನಿಂದಾಗಾದಾದ್ರೆ ಮಾಡ್ತೀನಿ."

"ಏನಿಲ್ಲ, ನನಗೆ ಸ್ವಲ್ಪ ದುಡ್ಡು ಬೇಕಾಗಿದೆ ತುರ್ತಾಗಿ. ಇನ್ನೊಂದು ತಿಂಗಳೊಳಗೆ ಕೊಟ್ಟುಬಿಡ್ತೀನಿ!"

"ಅಯ್ಯೋ ಮಾರಾಯ, ದುಡ್ಡು ನಾನೆಲ್ಲಿಂದ ತರ್ಲಿ? ಅದು ಆಗದ ಹೋಗದ ಮಾತು!"

"ಸುಬ್ಬಕ್ಕಾ, ಸಾಹುಕಾರರ ಕೈ ಹಿಡಿದವಳು ನೀನೇ ಹೀಂಗೆ ಹೇಳಿದರೆ!" ಓಬಯ್ಯನ ವಾಣಿ ಅತಿ ದೀನವಾಗಿತ್ತು.

ಸುಬ್ಬಮ್ಮನಿಗೆ ಮುಖಸ್ತುತಿಯೂ ಅಭಿಮಾನಭಂಗವೂ ಒಟ್ಟಿಗೆ ಆದಂತಾಯಿತು. ತಾನು ಸಾಹುಕಾರರ ಪತ್ನಿಯಾದುದರಿಂದ ಹಣ ಕೊಡಲು ಸಮರ್ಥಳಾಗಿರಬೇಕು ಎಂದು ಭಾವಿಸಿದಳು. ಕೊಡದಿದ್ದರೆ ಯೋಗ್ಯತೆಗೆ ಕುಂದು! ಆದರೆ ತನ್ನಲ್ಲಿ ಒಡವೆ ವಸ್ತುಗಳಿದ್ದುವೆ ಹೊರತು ಹಣವಿಲ್ಲ! ತನಗೆ ಹಣವನ್ನು ಕೊಡುವುದು ಗಂಡನ ಕರ್ತವ್ಯವಾಗಿದ್ದಿರಬೇಕು. ಆದರೆ ಕೊಟ್ಟಿಲ್ಲ! ತನಗೆ ಮೋಸ ಮಾಡಿದ್ದಾರೆ! ತಿಳಿಯದ ತನ್ನನ್ನು ಹೀಗೆ ಮೋಸಮಾಡುವುದೆ? ನಿನ್ನೆ ತನ್ನನ್ನು ಹೊಡೆದರಲ್ಲವೆ? ಸುಬ್ಬಮ್ಮನಿಗೆ ಗಂಡನ ಮೇಲೆ ಕೋಪವೂ ಬಂದಿತ್ತು.

ಓಬಯ್ಯನಿಗೆ ಹಣವಿಲ್ಲ ಎಂದು ಹೇಳಿಕಳುಹಿಸಬಹುದಾಗಿತ್ತು. ಆದರೆ, ಆ ಮಂಕುಹೆಣ್ಣು ಹಾಗೆ ಹೇಳುವುದು ತನ್ನ ಮಾನಕ್ಕೆ ಕಡಿಮೆ ಎಂದು ಬಗೆದಳು. ತನ್ನಲ್ಲಿ ಹಣವೂ ಇದೆ ಎಂದು ತೋರಿಸಿಕೊಳ್ಳಬೇಕೆಂಬುದು ಅವಳ ಆಸೆಯಾಗಿತ್ತು. ಓಬಯ್ಯನಿಗೆ ಸ್ವಲ್ಪ ಇರುವಂತೆ ಹೇಳಿ, ಮಲಗುವ ಕೋಣೆಗೆ ಹೋದಳು.

ಕೆಲವು ವರ್ಷಗಳ ಹಿಂದೆ ಚಂದ್ರಯ್ಯಗೌಡರ ಕೈಗೆ ಒಂದು ನೂರು ರೂಪಾಯಿನ ಎರಡು ಅರ್ಧ ನೋಟುಗಳು ಬಂದಿದ್ದುವು. ಆದರೆ ಅವುಗಳ ನಂಬರು ಬೇರೆ ಬೇರೆಯಾಗಿತ್ತು. ಯಾರು ಕೊಟ್ಟರು? ಎಲ್ಲಿಂದ ಬಂದುವು? ಎಂಬುದೊಂದೂ ಅವರಿಗೆ ಗೊತ್ತಾಗಲಿಲ್ಲ. ತಮ್ಮೊಡನೆ ಲೇವಾದೇವಿ ನಡಸಿದ ಯಾರನ್ನು ಕೇಳಿದರೂ 'ತಾವಲ್ಲ' 'ತಾವಲ್ಲ' ಎಂದುಬಿಟ್ಟರು. ಹಳ್ಳಿಗರಾಗಿದ್ದ ಅವರಿಗೆ ಸರಕಾರಕ್ಕೆ ತಿಳಿಸಿ ಹಣ ಪಡೆಯುವಷ್ಟು ಮುಂದಾಳುತನ ಇರಲಿಲ್ಲವೊ? ಅಥವಾ ಆ ತೊಂದರೆ ತೆಗೆದುಕೊಳ್ಳಲು ಅವರು ಇಷ್ಟಪಡಲಿಲ್ಲವೊ? ಅಂತೂ ಆ ಎರಡು ಅರ್ಧ ನೋಟುಗಳನ್ನೂ ಒಂದು ಹಳೆಯ ಅಂಗಿಯ ಜೇಬಿಗೆ ಹಾಕಿ ತಮ್ಮ ಕೋಣೆಯಲ್ಲಿಟ್ಟಿದ್ದರು. ಅದನ್ನು ಸುಬ್ಬಮ್ಮ ತಾನು ಕಾನೂರಿಗೆ ಹೊಸ ಹೆಣ್ಣಾಗಿ ಬಂದಾಗ ಗಂಡನ ಅಂಗಿಯನ್ನು ಪರೀಕ್ಷಿಸುವ ಕಾಲದಲ್ಲಿ ನೋಡಿದ್ದಳು. ಅವಳಿಗೆ ಓದು ಬರೆಹ ಲವಲೇಶವೂ ಬಾರದಿದ್ದುದರಿಂದ, ಪುಟ್ಟಮ್ಮನಿಂದ ಅದು ನೂರು ರೂಪಾಯಿನ ನೋಟು ಎಂದು ತಿಳಿದುಕೊಂಡಿದ್ದಳು. ಅವಳಿಗಾಗಲಿ ಪುಟ್ಟಮ್ಮಗಾಗಲಿ ನಂಬರು ಬೇರೆ ಬೇರೆಯಾಗಿರುವ ವಿಚಾರ ಗೊತ್ತಿರಲಿಲ್ಲ. ನೋಟಾದರೆ ಸರಿ 'ನಡೆಯುತ್ತದೆ!' ಎಂದು ಅವರ ಭಾವವಾಗಿತ್ತು. ಆ ನೋಟನ್ನು ಸುಬ್ಬಮ್ಮ ಎಷ್ಟೋಸಾರಿ ಅಭೀಪ್ಸುಕ ನಯನಗಳಿಂದ ತೆಗೆದೂ ತೆಗೆದೂ ಈಕ್ಷಿಸಿದ್ದಳು. ಗಂಡನಿಗೆ ಅಲ್ಲಿ ನೋಟಿಟ್ಟುದೇ ಮರೆತುಹೋಗಿದೆ ಎಂದೂ ಭಾವಿಸಿದ್ದಳು. ವಿಷಯವನ್ನು ಗಂಡನೊಡನೆ ತಿಳಿಸಿರಲಿಲ್ಲ. 'ಎಂದಾದರೂ ಸಮಯ ಬಿದ್ದಾಗ ಉಪಯೋಗಿಸಿಬಿಟ್ಟರಾಯಿತು' ಎಂಬುದು ಅವಳ ಆಶಯವಾಗಿತ್ತು.

ಸುಬ್ಬಮ್ಮ ಆ ನೂರು ರೂಪಾಯಿ ನೋಟಿನ ಎರಡು ತುಂಡುಗಳನ್ನೂ ತಂದು, ಒಂದು ತಿಂಗಳೊಳಗಾಗಿ ವಾಪಸು ಕೊಡಬೇಕೆಂದು ಹೇಳಿ, ಓಬಯ್ಯನಿಗೆ ನೀಡಿದಳು. ಅವನಿಗೆ ಅತ್ಯಾನಂದವಾಯಿತು. ಅವನೂ ನಿರಕ್ಷರಕುಕ್ಷಿ! ಅಷ್ಟರಲ್ಲಿ ವಾಸು ಮಾವನ ಮನೆಗೆ ಹೋಗಲು ತಕ್ಕ ವೇಷ ಭೂಷಣಗಳನ್ನೆಲ್ಲ ಹಾಕಿಕೊಂಡು, ಉಕ್ಕುತ್ತಿದ್ದ ಹರುಷವನ್ನು ಕೇಕೆಹಾಕಿ ಪ್ರದರ್ಶಿಸುತ್ತ, ಮುಗಿಲು ಕವಿದು ಮಬ್ಬಾದ ಮಳೆಗಾಲದಲ್ಲಿ ಬಿಸಿಲು ಇಣಿಕಿ ಬರುವಂತೆ ಇಮ್ಮಡಿ ಕಾಫಿಗೆ, ಎಂದರೆ ಎರಡನೆಯ ಸಾರಿ ಕಾಫಿ ಕುಡಿಯಲೆಂದು ಅಡುಗೆಮನೆಗೆ ಬಂದನು. ಸುಬ್ಬಮ್ಮ ಓಬಯ್ಯ ಇಬ್ಬರೂ ಬೆಚ್ಚಿ ಜಾಗರೂಕರಾದರು. ಓಬಯ್ಯನು ನೋಟಿನ ತುಂಡುಗಳನ್ನು ಬೇಗ ಬೇಗನೆ ಜೇಬಿಗೆ ಸೇರಿಸಿದನು. ಬಾಲಕನು ಅದೊಂದನ್ನೂ ಅವಲೋಕಿಸದೆ "ಚಿಗಮ್ಮಾ, ಕಾಫೀ!" ಎಂದು ಕೂಗಿ ಹೇಳುತ್ತ ಒಂದು ಮಣೆಯಮೇಲೆ ಕೂತನು. ಹುಡುಗನ ಹೃದಯದಲ್ಲಿ ಹಿಂದಿನ ದಿನದ ಅನಾದರಣೆಯ ಸ್ಮೃತಿ ಸಂಪೂರ್ಣವಾಗಿ ವಿಲುಪ್ತವಾದಂತಿತ್ತು.

ಸುಬ್ಬಮ್ಮನು ತಾನು ಮಾಡಿರುವ ಕಾರ್ಯವನ್ನು ಮುಚ್ಚಲೆಂಬಂತೆ ನಗುಮೊಗದಿಂದ ಕಾಫಿ ಕೊಡಲು ಹವಣಿಸಿದಳು. ಓಬಯ್ಯನೂ "ಓಹೋ ಏನು ವಾಸೂ, ದುರುಸು ಹಾಕಿದ್ದೀಯಾ?" ಎಂದನು. ವಾಸು "ಮುತ್ತಳ್ಳಿಗೆ ಹೋಗ್ತೀವಿ ಕಾಣೋ, ಓಬಣ್ಣಯ್ಯಾ!" ಎಂದು ರಾಗವಾಗಿ ಹೇಳಿದನು.

ವಾಸು ಓಬಯ್ಯನನ್ನು 'ಓಬಣ್ಣಯ್ಯ' ಎಂದೂ, ಅಣ್ಣಯ್ಯಗೌಡರನ್ನು 'ಅಜ್ಜಯ್ಯ' ಎಂದೂ ಕರೆಯುವುದು ವಾಡಿಕೆಯಾಗಿತ್ತು.

ಕಾಫಿ ಕುಡಿದಮೇಲೆ ವಾಸು, "ಓಬಣ್ಣಯ್ಯ, ನಿನ್ನೆ ಯಾರೋ ನಿನ್ನ ಹೊಡೆದು ಹಾಕಿದ್ದರಂತೆ ದಾರೀಲಿ? ನಮ್ಮ ಗಾಡಿ ಬರುವಾಗ ನಿಂಗ ಪುಟ್ಟಣ್ಣ ಎತ್ತಿ ಗಾಡೀಗೆ ಹಾಕ್ಕೊಂಡು ಬಂದ್ರು!" ಎಂದು ಕೇಳಿದನು. ಕುಡಿದುದು ಹೆಚ್ಚಾಗಿ ಬಿದ್ದಿದ್ದನೆಂಬುದು ಅವನಿಗೆ ಗೊತ್ತಾಗಿರಲಿಲ್ಲ.

ಓಬಯ್ಯ ಹೇಳಿದನು: "ಯಾರೂ ಹೊಡೆದುಹಾಕಲಿಲ್ಲಾ. ಅಗ್ರಾರಕ್ಕೆ ಹೋಗಿದ್ದೆ ಕೆಲಸದಮೇಲೆ. ಬರುವಾಗ ಕಪ್ಪಾಯ್ತು. ಕಳ್ಳಂಗಡಿ ದಾಟಿ ಸ್ವಲ್ಪ ದೂರ ಬಂದಿದ್ದೆ, ನೋಡು! ಮರಗತ್ತಲೆ! ದಾರಿ ಮೇಲೆ ಏನೋ ಬೆಳ್ಳಗೆ ಕಂಡಿತು. ನೋಡ್ತೀನಿ, ಭೂಮಿಗೂ ಆಕಾಸಕ್ಕೂ ಒಂದಾಗಿ ನಿಂತುಬಿಟ್ಟದೆ;..."

"ಎಂತದೋ?" ವಾಸುಗೆ ಗಾಬರಿಯಿಂದ ಕಣ್ಣರಳಿ ಮುಖ ಭಯ ಸೂಚಕವಾಗಿತ್ತು.

"ತ್ಥೂ! ಮತ್ತೆಂತದೂ? ನಮ್ಮ ಭೂತರಾಯ!"

ವಾಸು ಮತ್ತೂ ಬೆದರುಗಣ್ಣಾಗಿ ನೋಡತೊಡಗಿ "ಆಮೇಲೆ?" ಎಂದನು.

ಆ ನಾಡಿನ ವಾಡಿಕೆಯಂತೆ ಪ್ರತಿಯೊಂದು ಮನೆಯವರೂ ಹತ್ತಾರು ಅಂತರ ಬೆಂತರ ಭೂತ ಪಿಶಾಚಿಗಳನ್ನು ಪೂಜಿಸುವುದುಂಟು: ಮನೆಯ ಸುತ್ತಣ ಸಮೀಪದ ಕಾಡಿನಲ್ಲಿ ಮರಗಳ ಬುಡದಲ್ಲಿರುವ ಕೆಲವು ಕಲ್ಲುಗಳನ್ನೇ 'ದೆಯ್ಯದ ಬನ' ಎಂದು ಕರೆಯುತ್ತಾರೆ. ಪ್ರತಿ ವರ್ಷವೂ ಆಯಾ ದೆಯ್ಯದ ಯೋಗ್ಯತೆಗೆ ತಕ್ಕಂತೆ ಕೋಳಿ ಕುರಿಗಳನ್ನು ಬಲಿ ಕೊಡುತ್ತಾರೆ. ಜನರಿಗೆ ಕಾಡು ಪ್ರಾಣಿಗಳ ಭಯಕ್ಕಿಂತಲೂ ಈ ದೆಯ್ಯಗಳ ಭಯವೇ ನೂರ್ಮಡಿಯಾಗಿರುತ್ತದೆ. ಅವುಗಳ ಅನುಗ್ರಹ ಶಕ್ತಿಗಿಂತಲೂ ನಿಗ್ರಹ ಶಕ್ತಿಯಲ್ಲಿಯೇ ಎಲ್ಲರಿಗೂ ಹೆಚ್ಚು ನಂಬುಗೆ. ಆದ್ದರಿಂದ ಅವುಗಳಲ್ಲಿ ಭಕ್ತಿಗಿಂತಲೂ ಭಯವೇ ಹೆಚ್ಚು. ಭಯವನ್ನೇ ಭಕ್ತಿ ಎಂದೂ ಕರೆದುಬಿಡುತ್ತಾರೆ. ಪ್ರತಿಯೊಂದು ಮನೆಯಲ್ಲಿಯೂ ಅದರದರ ದೆವ್ವದ ಕಥೆಗಳು ಬೇಕಾದಷ್ಟಿರುತ್ತವೆ. ಹಿರಿಯವರು ಕಿರಿಯವರಿಗೆ ಆ ಕಥೆಗಳನ್ನು ಸ್ವಾರಸ್ಯವಾಗಿ ಹೇಳುತ್ತಾರೆ. ಕೇಳಿ ಕೇಳಿ ವಾಸುವಿಗಂತೂ ಭೂತರಾಯ ಎಂದರೆ ಬಹಳ ಭಯವಾಗುತ್ತಿತ್ತು. ಭೂತರಾಯನನ್ನು ಸಾಕ್ಷಾತ್ತಾಗಿ ಸಂದರ್ಶಿಸಿದ್ದ

ಓಬಯ್ಯ ಅವನ ಕಣ್ಣಿಗೆ ಮಹಾವೀರನಾಗಿ ತೋರಿದನು. ಬೆದರುಗಣ್ಣಾಗಿ "ಆಮೇಲೆ" ಎಂದನು.

"ಆಮೇಲೇನು? ಗೊತ್ತೇ ಇದೆ! ಕೈ ಮುಗಿದುಕೊಂಡು ರಸ್ತೆ ಮೇಲೇ ಉದ್ದುದ್ದ ಅಡ್ಡಬಿದ್ದು 'ಭೂತರಾಯ, ನನ್ನ ತಪ್ಪು ಏನಿದ್ರೂ ಮುಂದಿನ ಹರಕೆಗೆ ಒಂದು ಕೋಳಿ ಕೊಡ್ತೀನಿ!' ಅಂತಾ ಹೇಳಿಕೊಂಡೆ. ಒಂದು ಸಾರಿ ಅದರ ಕೈಲಿದ್ದ ಕಬ್ಬಿಣದ ದೊಣ್ಣೆ ನೆಲಕ್ಕೆ ಕುಟ್ಟಿತೂ! ರಾಮ ರಾಮ! ಸಿಡಿಲು ಬಡದ್ಹಾಂಗಾಯ್ತು. ಧಾತುತಪ್ಪಿ ಬಿದ್ದಿದ್ದೆ! ನಿಂಗ ಪುಟ್ಟಣ್ಣ ಗಾಡಿಗೆ ಹಾಕ್ಕೊಂಡು ಬಂದ್ರು."

ವಾಸುವಂತೂ ಓಬಯ್ಯ ಹೇಳಿದುದನ್ನೆಲ್ಲ ಸಂಪೂರ್ಣವಾಗಿ ನಂಬಿದನು. ಓಬಯ್ಯ ಕೂಡ ಅದರಲ್ಲಿ ಅರ್ಧವನ್ನಾಗಲೆ ನಂಬಿಕೊಂಡುಬಿಟ್ಟಿದ್ದನು; ತಾನು ಹೇಳಿದ್ದು ತನಗೇ ಅಷ್ಟು ಸ್ವಾರಸ್ಯವಾಗಿ ಕಂಡಿತ್ತು; ಸುಬ್ಬಮ್ಮಗಂತೂ ಅದರಲ್ಲಿ ಚಾಚೂ ಸುಳ್ಳಿರಲಿಲ್ಲ!

ಓಬಯ್ಯ ವಾಸುವಿಗೆ ಹೇಳಿದ್ದು ವಿನೋದಕ್ಕಾಗಿರಲಿಲ್ಲ. ಹಿಂದೆ ಕೆಲವು ಸಾರಿ ಅದೇ ಕಥೆಯನ್ನೇ ಉಪಯೋಗಿಸಿ ತಾನು ಮದ್ಯಪಾನದಿಂದ ಮೂರ್ಛೆ ಹೋಗಿದ್ದ ನಿಜವನ್ನೇ ಅಡಗಿಸಿದ್ದನು. ಹಳ್ಳಿಗರಿಗೆಲ್ಲ ಅಂತಹುದರಲ್ಲಿ ಕುತೂಹಲ ಹೆಚ್ಚಾಗಿದ್ದುದರಿಂದ ಅವನ ಹೇಳಿಕೆಯನ್ನು ಸುಮ್ಮನೆ ನಂಬಿದ್ದರು.

ಓಬಯ್ಯ ಸುಬ್ಬಮ್ಮನನ್ನು ಬೀಳ್ಕೊಂಡು ಅಡುಗೆ ಮನೆಯಿಂದ ಹೊರಟವನು ನೇರವಾಗಿ ಹೆಬ್ಬಾಗಿಲು ದಾಟಿದನು. ಜೇಬಿನಲ್ಲಿದ್ದ ನೋಟಿನ ಎರಡು ತುಂಡುಗಳ ಮಹಿಮೆಯಿಂದ ಅವನಿಗೆರಡು ರೆಕ್ಕೆ ಬಂದಂತಾಗಿತ್ತು. ಹೊರ ಅಂಗಳದಲ್ಲಿ ಪುಟ್ಟಣ್ಣ, ಸೇರೆಗಾರರು, ಬೇಲರ ಬೈರ, ಸಿದ್ದ, ಹಳೆಪೈಕದ ತಿಮ್ಮ, ಸೇರೆಗಾರರ ಕಡೆಯ ಗಟ್ಟದಾಳುಗಳು—ಎಲ್ಲರೂ ಸಂಭ್ರಮದಿಂದ ಮಾತಾಡುತ್ತ, ಒಬ್ಬೊಬ್ಬರು ಒಂದೊಂದು ಕಾರ್ಯದಲ್ಲಿ ನಿಯುಕ್ತರಾಗಿದ್ದರು. ನಿಂಗನು ಮುತ್ತಳ್ಳಿಗೆ ಹೊರಡುವುದಕ್ಕಾಗಿ ಗಾಡಿಯ ಎತ್ತುಗಳನ್ನು ಹಿಡಿದುಕೊಂಡು ಗಾಡಿಯ ಬಳಿ ಸಿದ್ಧನಾಗಿ ನಿಂತು, ಹಿಂದಿನ ದಿನದ ಸಾಹಸ ಮತ್ತು ಅನಾಹುತಗಳನ್ನು ಕೆಲವು ಆಳುಗಳಿಗೆ ವರ್ಣಿಸುತ್ತಿದ್ದನು. ಎಳಬಿಸಿಲಿನಲ್ಲಿ ಗಾಡಿ, ಎತ್ತು, ಮನುಷ್ಯರ ನೆಳಲುಗಳೆಲ್ಲ ನೀಳವಾಗಿದ್ದುವು. ಪುಟ್ಟಣ್ಣ ಹೆಗಲಮೇಲೆ ಒಂದು ತೋಟಾಕೋವಿ ಹೇರಿಕೊಂಡು, ಯುದ್ಧಕ್ಕೆ ಹೊರಡುವ ಸೈನ್ಯಾಧಿಪತಿಯ ಹೆಮ್ಮೆ ಠೀವಿಗಳಿಂದ ವರ್ತಿಸುತ್ತಿದ್ದನು. ಅವನ ಸುತ್ತುಮುತ್ತಲೂ ನಾಯಿಗಳು ಹರ್ಷಪ್ರದರ್ಶನ ಮಾಡುತ್ತಿದ್ದುವು. ಅವರು ಹೊರಟಿದ್ದುದು ಷಿಕಾರಿಗಲ್ಲ, ನಾಟಾ ಸಾಗಿಸುವುದಕ್ಕೆ ಎಂದು ಆ ಪ್ರಾಣಿಗಳಿಗೇನು ಗೊತ್ತು?

ಸಾಧಾರಣವಾಗಿ ಆಳುಗಳು ಕೆಲಸಕ್ಕೆ ಹೊರಡುವಾಗ ಜೋಲು ಮುಖ ಹಾಕಿಕೊಂಡು ಹೊರಡುತ್ತಿದ್ದುದು ಪದ್ಧತಿಯಾಗಿದ್ದರೂ ಆ ದಿನದ ಕೆಲಸವು ಕಳ್ಳ ನಾಟಾ ಸಾಗಿಸುವ ಕಳ್ಳಸಾಹಸವಾಗಿದ್ದುದರಿಂದ ಎಲ್ಲರಿಗೂ ಹುಮ್ಮಸ್ಸು ಬಂದಿತ್ತು. ಶಾಂತಿಯ ಸಮಯದಲ್ಲಿ ಮೈಮುರಿದು ದುಡಿಯಲಾರದ ಜನಾಂಗಗಳು ಯುದ್ಧಕಾಲದಲ್ಲಿ ರಕ್ತ ಸೋರಿ ಸಾಯುವುದನ್ನೆ ಅನರ್ಘ್ಯವೆಂದು ಉತ್ಸಾಹಪ್ರದರ್ಶನ ಮಾಡುವುದಿಲ್ಲವೆ? ಅಡಕೆಹಾಳೆಯ ಕುಲಾವಿಗಳನ್ನು ಧರಿಸಿ, ಬತ್ತಲೆಯ ಮೈ ಬಿಟ್ಟುಕೊಂಡು, ಭುಜದಮೇಲೆ ಕಂಬಳಿ ಹಾಕಿಕೊಂಡು, ಸೊಂಟಕ್ಕೆ ಮೊಳಕಾಲುದ್ದದ ಕೊಳಕು ಚಿಂದಿಗಳನ್ನು ಸುತ್ತಿಕೊಂಡು ಶೀರ್ಣ ದೇಹಿಗಳಾಗಿದ್ದ ಆ ಅಂಜುಬುರುಕರಾದ ಗಟ್ಟದಾಳುಗಳಲ್ಲಿ ಅಂದು ಸಮರೋತ್ಸಾಹ ಮೂಡಿತ್ತು. ಆದ್ದರಿಂದಲೆ ಅವರ ಮಾತು ಕತೆಗಳಲ್ಲಿ ಅಷ್ಟೊಂದು ಸಂಭ್ರಮಾಸಕ್ತಿಗಳಿದ್ದದ್ದು.

ಓಬಯ್ಯ ಬಂದ ಕೂಡಲೆ ಎಲ್ಲರ ದೃಷ್ಟಿಯೂ ಅವನ ಮೇಲೆ ಬಿದ್ದಿತು. ಕೆಲವರು ತಮ್ಮ ತಮ್ಮಲ್ಲಿಯೆ ಗುಸು ಗುಸು ಮಾತಾಡಿಕೊಂಡಿದ್ದರಿಂದ ತನ್ನ ಸಂಗತಿ ಅವರೆಲ್ಲರಿಗೂ ತಿಳಿದಿದೆ ಎಂದು ಅವನಿಗೆ ಗೊತ್ತಾಯಿತು. ರಂಗಪ್ಪ ಸೆಟ್ಟರು ಕೇಳಿದ ಪ್ರಶ್ನೆಗೆ ಅವನು ವಾಸುವಿಗೆ ಹೇಳಿದ ಭೂತರಾಯನ ಕಥೆಯನ್ನೆ ಮತ್ತಿನಿತು ಸವಿಸ್ತಾರವಾಗಿ ಬಣ್ಣಿಸಿದನು.

ಪುಟ್ಟಣ್ಣ ನಕ್ಕು "ಹೌದು, ಕಳ್ಳಂಗಡಿ ಭೂತರಾಯನಿರಬೇಕು" ಎಂದನು.

ಕೆಲವರೇನೊ ನಕ್ಕರು. ಆದರೆ ಹಲವರು ಭೂತದ ವಿಚಾರದಲ್ಲಿ ಲಘು ವರ್ತನೆ ಕ್ಷೇಮಕರವಲ್ಲ ಎಂದು ನಗಲಿಲ್ಲ. ಓಬಯ್ಯನಿಗೆ ಪುಟ್ಟಣ್ಣನ ವ್ಯಂಗ್ಯ ಅಭಿಪ್ರಾಯವಾದರೂ ಆಗದವನಂತೆ ನಟಿಸಿ "ತ್ಥೂ! ನಂಗೊತ್ತಿಲ್ಲವೇನೋ? ಕಳ್ಳಂಗಡಿ ಭೂತವಲ್ಲ. ನಮ್ಮ ಭೂತರಾಯನೇ! ಆಕಾಸಕ್ಕೂ ಭೂಮಿಗೂ..." ಎಂದು ಕಥೆಯನ್ನು ಮತ್ತೆ ಪ್ರಾರಂಭಿಸುವುದರಲ್ಲಿದ್ದನು.

ಪುಟ್ಟಣ್ಣ "ಸಾಕು ಬಿಡೋ; ನಿನಗೆ ಎಲ್ಲಾ ಭೂತಗಳೂ ಪರಿಚಯವೇನೋ!" ಎಂದನು.

ಓಬಯ್ಯ ಇನ್ನು ಹೆಚ್ಚು ಮಾತಾಡಿದರೆ ಗುಟ್ಟು ರಟ್ಟಾಗುತ್ತದೆಂದು ಭಾವಿಸಿ ಬೆದರಿ, ಹಳೆಪೈಕದ ತಿಮ್ಮನ ಹತ್ತಿರ ಎಲೆಯಡಕೆ ಕೇಳುವುದರಿಂದ, ಪುಟ್ಟಣ್ಣ ಹೇಳಿದ್ದು ತನಗೆ ಕೇಳಿಸಲಿಲ್ಲ ಎಂಬಂತೆ ನಟಿಸಿದನು.

ಸ್ವಲ್ಪ ಹೊತ್ತಿನಲ್ಲಿ ಸಾಹಸಿಗಳ ದಂಡು ಹಿಂಡಾಗಿ ಪುಟ್ಟಣ್ಣನ ನಾಯಕತ್ವದಲ್ಲಿಯೂ ಸೇರೆಗಾರರ ಮಾರ್ಗದರ್ಶಿತ್ವದಲ್ಲಿಯೂ ಶುನಕ ಪರಿವಾರ ಸಹಿತವಾಗಿ ಕಲಕಲರವದಿಂದ ಕಾಡಿಗೆ ದಾಳಿಯಿಟ್ಟಿತು!

ಆ ದಿನದ ಸಾಹಸಕಾರ್ಯದಲ್ಲಿ ಹೆಣ್ಣಾಳುಗಳಿಗೆ ಸ್ಥಾನವಿರಲಿಲ್ಲ. ಆದ್ದರಿಂದ

ಅವರಾರೂ ಕೆಲಸಕ್ಕೆ ಹೋಗದೆ 'ಕೂತಿದ್ದರು' ಎಂದರೆ ರಜಾ ತೆಗೆದುಕೊಂಡಿದ್ದರು. ಓಬಯ್ಯ ಹೋದಾಗ ಗಂಗೆ ತನ್ನ ಬಿಡಾರದಲ್ಲಿದ್ದಳು. ಅವನು ಅವಳೊಡನೆ ಬಹಳ ಹೊತ್ತು ಸರಸ ಸಲ್ಲಾಪಗಳಲ್ಲಿ ಕಳೆದನು. ಮಾತಿನ ಮಧ್ಯೆ, ಸೇರೆಗಾರರು ಸಿಂಗಪ್ಪಗೌಡರು ಕಡಿಸಿರುವ ಕಳ್ಳನಾಟಾ ಸಾಗಿಸಲೆಂದು ಗಂಡಾಳುಗಳೊಡನೆ ಹೋಗಿದ್ದಾರೆ ಎಂಬುದು ಗೊತ್ತಾಯಿತು. ಗುಟ್ಟನ್ನು ಸೇರೆಗಾರರು ತನ್ನಿನಿಯಳಿಗೆ ಹೇಳಿದ್ದರು. ಗಂಗೆ ತನ್ನಿನಿಯರಲ್ಲಿ ಒಬ್ಬನಾಗಿದ್ದ ಓಬಯ್ಯನಿಗೂ ಹೇಳಿದಳು! ಅದನ್ನು ಹೇಳುವಾಗ ಗುಟ್ಟನ್ನು ರಟ್ಟು ಮಾಡುತ್ತೇನೆ ಎಂಬ ಭಾವವೇ ಅವಳಿಗಿರಲಿಲ್ಲ. ಏನೋ ಮಾತಿನ 'ಮಜಾ'ದಲ್ಲಿ ಅದನ್ನೂ ಹೇಳಿಬಿಟ್ಟಳು.

ಸಿಂಗಪ್ಪಗೌಡರ ಮೆಚ್ಚುಗೆಗೆ ಪಾತ್ರನಾಗಿ, ತಂದೆಯ ಸಾಲದಿಂದಲೂ ಕಾನೂರು ಚಂದ್ರಯ್ಯಗೌಡರ ಪೀಡನೆಯಿಂದಲೂ ಪಾರಾಗಲು ತನಗೊಂದು ಸುಸಮಯ ದೊರಕಿತೆಂದು ಬಗೆದು, ಓಬಯ್ಯ ಗಂಗೆಯ ಬಿಡಾರದಿಂದ ನೇರವಾಗಿ ಸೀತೆಮನೆಗೆ ಹೋದನು.

ಕೆಳಕಾನೂರಿಗೆ ಹೋಗಲಿಲ್ಲ!

## ೧೭

## ಕತ್ತಲೆಗಿರಿಯ ಸರುವಿನಲ್ಲಿ ಕಾಡುಹಂದಿಯ ಬೇಟೆ

ಬಿತ್ತರದ ಜಗತ್ತಿನಲ್ಲಿ ಮಹದ್ವ್ಯಾಪಾರಗಳು ಜರುಗುತ್ತಿರುತ್ತವೆ. ಘೋರ ಸಂಗ್ರಾಮಗಳಾಗಿ ಕಿರೀಟ ಸಿಂಹಾಸನಗಳುರುಳಿ ರಾಜ್ಯಗಳೆದ್ದು ಬಿದ್ದು ಕೌಲುಗಳಾಗಿ ಹೋಗಿ ರಾಷ್ಟ್ರ ರಾಷ್ಟ್ರಗಳ ಜೀವನಗಳಲ್ಲಿ ಮಹಾ ಪರಿವರ್ತನೆಗಳಾಗುತ್ತಿರುತ್ತವೆ. ಸಜೀವ ಜ್ವಾಲಾಮುಖಿಗಳಿಂದ ನಗರಗಳು ಭಸ್ಮವಾಗುತ್ತವೆ. ಅತಿ ಪ್ರವಾಹದಿಂದ ಪ್ರಾಂತಗಳು ಕೊಚ್ಚಿಹೋಗುತ್ತವೆ. ಲಕ್ಷಾಂತರ ಜನರು ಸಾಯುತ್ತಿರುತ್ತಾರೆ. ಮನುಷ್ಯರ ಯಂತ್ರಕೌಶಲದಿಂದ ಮರುಭೂಮಿಗಳು ನಂದನವನಗಳಾಗುತ್ತವೆ. ಕಾವ್ಯ ಕಲೆಗಳು ಅಭಿವೃದ್ಧಿ ಹೊಂದುತ್ತಿರುತ್ತವೆ. ಸತ್ತವರ ಸಂಖ್ಯೆಗಿಂತಲೂ ಹೆಚ್ಚು ಸಂಖ್ಯೆ ಹುಟ್ಟುತ್ತಿರುತ್ತಾರೆ. ಸಮುದ್ರಗಳು ಕೆರಳಿ ದ್ವೀಪಗಳು ಮುಳುಗಿ ದ್ವೀಪಗಳೇಳುತ್ತಿರುತ್ತವೆ. ಸೂರ್ಯ ಚಂದ್ರ ಗ್ರಹಗಳು ಅನಂತಾಕಾಶದಲ್ಲಿ ಯಾವ ಉದ್ದೇಶದಿಂದಲೋ ಏನೋ ಸುತ್ತುತ್ತಾರೆ. ಬರುಗಣ್ಣಿಗೆ ಕಾಣದೆ ಯಂತ್ರದೃಷ್ಟಿಗೆ ಮಾತ್ರ ಗೋಚರವಾಗಿರುವ ತಾರೆ ನೀಹಾರಿಕೆಗಳಲ್ಲಿ ಭಯಂಕರ ಅನಲ ವಿಪ್ಲವಗಳಾಗುತ್ತಿರುತ್ತವೆ. ಆದರೆ ಇವುಗಳು ಯಾವುದ

ರಿಂದಲೂ ವಿಕ್ಷುಬ್ಧನಾಗದೆ ತನ್ನ ಆತ್ಮಶಾಂತಿಯ ಸಾಧನೆಯಲ್ಲಿಯೆ ತನ್ಮಯನಾಗಿರುತ್ತಾನೆ, ಹಿಮಾಲಯದ ಗುಹೆಯಲ್ಲಿ ತಪಸ್ಸುಮಾಡುವ ವೈರಾಗಿ! ಆ ವೈರಾಗಿಯಂತಿರುವ ಕೆಲವು ಸ್ಥಾನಗಳಿವೆ, ಸಹ್ಯಾದ್ರಿಶ್ರೇಣಿಗಳಲ್ಲಿ.

ಆ ಸ್ಥಾನಗಳು ಮಹಾ ಗಿರಿಭಿತ್ತಿಗಳ ಮಧ್ಯೆ ಗಭೀರ ನೀರವ ಕಂದರಗಳಲ್ಲಿ ನಿರಂಕುಶವಾಗಿರುತ್ತವೆ. ಕಾನೂರಿನ ಸಮೀಪದಲ್ಲಿ 'ಕತ್ತಲೆಗಿರಿ' ಅವುಗಳಲ್ಲಿ ಒಂದು. ಅದರ ಹೆಸರೇ ಸ್ಥಿತಿಸೂಚಕವಾಗಿದೆ. ಕತ್ತಲೆಗಿರಿಯ ಮೇಲೆ ಮಟಮಟ ಮಧ್ಯಾಹ್ನದಲ್ಲಿ ಮಾತ್ರ ಬಿಸಿಲು ಬೀಳುತ್ತಿತ್ತು. ಆ ಬಿಸಿಲಿಗೂ ಮರಗಳ ನೆತ್ತಿಯ ಮೇಲಲ್ಲದೆ ಒಳಗೆ ಪ್ರವೇಶಮಾಡಲು ಅವಕಾಶವಿರಲಿಲ್ಲ. ಅಷ್ಟು ನಿಬಿಡವಾಗಿ, ಅಷ್ಟು ಉನ್ನತವಾಗಿ ಬೆಳೆದಿದ್ದುವು ಅಲ್ಲಿಯ ಮರಗಳು. ಆ ಮರಗಳ ಬುಡದಲ್ಲಿ, ಎರಡು ಗಿರಿಪಕ್ಷಗಳ ಸಂಧಿಯಲ್ಲಿ ಯಾವಾಗಲೂ ನೀರು ಸ್ರವಿಸುತ್ತಿದ್ದ ಕಿರುಹಳ್ಳ ಹರಿಯುತ್ತಿತ್ತು. ನಿಜವಾಗಿಯೂ ಅದು ಹರಿಯುತ್ತಿದ್ದುದು ಮಳೆಗಾಲದಲ್ಲಿ ಮಾತ್ರ. ಬೇಸಗೆಯಲ್ಲಿ ಆ ಜಾಗವೆಲ್ಲ ತೇವವಾಗಿ ನೀರು ಸ್ರವಿಸಿ ಕೆಸರುಕೆಸರಾಗಿರುತ್ತಿತ್ತು. ಕೆಲವೆಡೆಗಳಲ್ಲಿ ಉಸುಬು ಕಾಲಿಟ್ಟರೆ ಸೊಂಟದವರೆಗೂ ಮುಳುಗುವಂತಿತ್ತು. ಆ ಸರುವಿನಲ್ಲಿ ಲಕ್ಷೋಪಲಕ್ಷ ಜಾತಿಯ ಜೊಂಡುಹುಲ್ಲೂ, ಮುಂಡಗ, ಕೇದಗೆ, ಬೆತ್ತ, ವಾಟೆ, ಕೆಸು ಮುಂತಾದ ನೂರಾರು ವಿಧವಾದ ಜಲಪ್ರಿಯ ಸಸ್ಯಗಳೂ ಅಸ್ತವ್ಯಸ್ತವಾಗಿ ಕೊಬ್ಬಿ ಬೆಳೆದು ನಿಂತಿದ್ದುವು. ಕೆಲವೆಡೆಗಳಲ್ಲಂತೂ ನಾಯಿ ನುಸಿಯಲೂ ಕೂಡ ಸ್ಥಳವಿರದಷ್ಟು ನಿಬಿಡವಾಗಿತ್ತು. ಅಲ್ಲಿಯ ಇಂಬಳ (ಜಿಗಣೆ) ಗಳಿಗೆ ಚಿರಂಜೀವತ್ವ ಲಭಿಸಿತ್ತು. ಬೆಟ್ಟಬೇಸಗೆಯಲ್ಲಿಯೂ ಕೂಡ, ಇತರ ಸ್ಥಳಗಳಲ್ಲಿ ಇಂಬಳಗಳೆಲ್ಲ ಮೃತಪ್ರಾಯವಾಗಿರುತ್ತಿದ್ದಾಗ, ಅಲ್ಲಿ ಕಾಲಿಡಲು ಸಾಧ್ಯವಿರಲಿಲ್ಲ. ವಾಟೆ ಬೆತ್ತಗಳನ್ನು ಕಡಿದು ತರಲು ಹೋಗುತ್ತಿದ್ದವರು ಉಪ್ಪು ಸುಣ್ಣಗಳನ್ನು ಬಟ್ಟೆಯಲ್ಲಿ ಕಟ್ಟಿಕೊಂಡು ಹೋಗಿ ಒರಸಿ ಒರಸಿ ಅವುಗಳನ್ನು ನಿವಾರಿಸಿಕೊಳ್ಳುತ್ತಿದ್ದರು. ಆಗಲೂ ಕೂಡ ಅವು ನೆತ್ತರು ಹೀರದೆ ಬಿಡುತ್ತಿರಲಿಲ್ಲ. ತಮ್ಮ ಅಮರತೆಯಲ್ಲಿ ಅವುಗಳಿಗೆ ಅಷ್ಟು ನಂಬುಗೆ! ಕೇದಗೆ ಹೂವಿನ ಕಂಪಿಗಾಗಿಯೋ ನೀರು ನೆಳಲುಗಳ ತಂಪಿಗಾಗಿಯೋ ಅಥವಾ ಕಪ್ಪೆ ಮೊದಲಾದ ಕ್ಷುದ್ರಜೀವಿಗಳನ್ನು ನುಂಗುವ ಹೊಟ್ಟೆಯಪಾಡಿಗಾಗಿಯೋ ದಾಸರ, ಕಾಳಿಂಗ, ನಾಗರ, ಕೇರೆ ಮೊದಲಾದ ಹಾವುಗಳೂ ಅಲ್ಲಿರುತ್ತಿದ್ದುವು. ಇನ್ನು ಸೊಳ್ಳೆಗಳಿಗಂತೂ ಅದು ನೆಲೆಬೀಡಾಗಿತ್ತು. ಹಕ್ಕಿಗಳು ಆ ಎಡೆಗೆ ದಾರಿತಪ್ಪಿಯೂ ಕೂಡ ತಲೆಹಾಕುತ್ತಿರಲಿಲ್ಲ. ಬೇಸಗೆಯಲ್ಲಿ ಮಾತ್ರ ಆ ಕಾಡಿನ ಜಂತುಗಳು, ಹುಲಿಯಿಂದ ಹಿಡಿದು ಕಾಡುಕೋಳಿಯವರೆಗೂ, ಅಲ್ಲಿಗೆ ಜಲಪಾನ ಮಾಡಲು ಬರುತ್ತಿದ್ದುವು.

ಕತ್ತಲೆಗಿರಿಯ ಸರುವಿನ ಇರವು ಅದರ ವಾತಾವರಣ ಪ್ರಭಾವದಿಂದಲೆ ಗೊತ್ತಾಗುತ್ತಿತ್ತು. ಬೇಟೆಗಾರರಾದರೂ ಆ ಎಡೆಯನ್ನು ಸಮೀಪಿಸಿದರೆ, ಮೊದಲು ಶೀತವಲಯವನ್ನು ಪ್ರವೇಶಿಸಿದಂತೆ ಕುಳಿರಾಗುತ್ತಿತ್ತು. ಆಮೇಲೆ ಯಾವುದೋ ಒಂದು ಮಹಾಗುಹೆಯನ್ನು ಹೊಗುವಂತೆ ಬೆಳಕು ಕಡಿಮೆಯಾಗಿ ಬನದ ಮಬ್ಬುಗತ್ತಲೆ ದಟ್ಟೈಸುತ್ತಿತ್ತು. ಮೌನವೂ ನಿರ್ಜನತಾಭಾವವೂ ನಿಶ್ಚಲತೆಯೂ ಬರಬರುತ್ತಾ ಅತಿಶಯವಾಗಿ, ಮನಸ್ಸು 'ಬೆಕೋ' ಎನ್ನಲು ತೊಡಗಿ, ಯಾವುದೋ ಒಂದು ಪೈಶಾಚಿಕವಾದ ಅಮರ್ತ್ಯ ಪ್ರಪಂಚಕ್ಕೆ ಹೋದಂತಾಗಿ, ಭೀಕರತೆ ನಾಳನಾಳಗಳಲ್ಲಿಯೂ ಹಸರಿಸಿ, ರಕ್ತದ ಒಂದೊಂದು ಬಿಂದುವಿನಲ್ಲಿಯೂ ಚಳಿಗೆ ಚಳಿ ಹಿಡಿಸುತ್ತಿತ್ತು. ಮೌನವಂತೂ ಶಬ್ದದ ಅಭಾವ ಮಾತ್ರವಾಗಿರದೆ ಕಿವಿಗೆ ಕೇಳಿಸುವಂತೆ ಸಭಾವವಾಗಿರುತ್ತಿತ್ತು. ಬನಗತ್ತಲೆಯ ಮಂದತಮ ಪ್ರಭೆಯ ಮಾಯಾ ಪ್ರಭಾವದಿಂದ ಅಲ್ಲಿದ್ದ ಗಿಡಮರಗಳೆಲ್ಲ ಗಭೀರ ಸ್ವಪ್ನ ಮುದ್ರಿತವಾದಂತೆ ಪ್ರೇತವತ್ತಾಗಿ ತೋರುತ್ತಿದ್ದುವು. ಮಣ್ಣಿನಲ್ಲಿ ಹೂಳಿಟ್ಟ ಹೆಣವು ಕೊಳೆತು ಕರಗಿ ಹುಳುಗಳು ಮಿಜಿಮಿಜಿಯಾಡುವ ಸಮಯ ದಲ್ಲಿ ಜೀವವು ಮರಳಿದರೆ ಅದಕ್ಕೆ ಎಂತಹ ಮುಜಗರದ ಅನುಭವವಾಗಬಹುದೋ ಅಂತಹ ಅನುಭವವಾಗುತ್ತಿತ್ತು, ಅಲ್ಲಿಗೆ ಹೋದ ಬೇಟೆಗಾರನಿಗೆ. ಅಂತೂ ಸಾಧಾರಣವಾಗಿ ಆ ಪಾತಾಳ ನರಕಕ್ಕೆ ಯಾರೂ ಹೋಗುತ್ತಿರಲಿಲ್ಲ.

ರಾತ್ರಿ ಕಾಡಿನಲ್ಲೆಲ್ಲ ತಿರುಗಿ ಹೊಟ್ಟೆತುಂಬಿದ್ದ ಒಂಟಿಗ ಹೋರಿಹಂದಿಯೊಂದು ಆ ದಿನ ಪ್ರಾತಃಕಾಲ ಕತ್ತಲೆಗಿರಿಯ ಸರುವಿಗೆ ಬಿಜಯ ಮಾಡಿ ಮಗ್ಗಲು ಬಿದ್ದಿತ್ತು. ಎಂದರೆ ಬಿಸಿಲ ಬೇಗೆಗೆ ಕೋಣಗಳು ಕೆಸರಿನಲ್ಲಿ ಬಿದ್ದು ಹೊರಳಾಡುವಂತೆ ಹೊರಳಾಡುತ್ತಿತ್ತು. ಮನುಷ್ಯನಿಗೆ ನರಕಸದೃಶವಾಗಿದ್ದ ಆ ಜಾಗ ಮಹಾ ಕಾಯದ ಆ ವನ ವರಾಹನಿಗೆ ಸ್ವರ್ಗದ ನಂದನದ ಜಲಕ್ರೀಡಾಸ್ಥಾನವಾಗಿತ್ತು. ಪ್ರಾಣಿ ಹೊರಳಿ ಹೊರಳಿ, ಅದರ ಮೈತುಂಬ ಬೂದು ಬಣ್ಣದ ಕೆಸರು ಅಂಟಿ, ಕೂದಲೂ ಕಾಣದಷ್ಟು ನುಣುಪಾಗಿತ್ತು. ಮುಸುಡಿಯನ್ನು ಕೆಸರಿಗೆ ಅದ್ದಿ ಅದ್ದಿ ಕಣ್ಣು ಕೋರೆಗಳು ವಿನಾ ಉಳಿದ ತಲೆಯೆಲ್ಲ ಮಣ್ಣಿನಲ್ಲಿ ಮಾಡಿಟ್ಟ ಹಾಗಿತ್ತು. ಅಪಾಯದ ದೃಷ್ಟಿಯಿಂದ ಭಯಂಕರವಾಗಿದ್ದರೂ ನೋಟಕ್ಕೆ ಹಾಸ್ಯಾಸ್ಪದ ವಾಗಿತ್ತು. ಕೆಸರಿನಲ್ಲಿ ಹೊರಳಿ ತೃಪ್ತಿಯಾದಮೇಲೆ ಪ್ರಾಣಿ ಸುಮ್ಮನೆ ಬಿದ್ದು ಕೊಂಡಿತು. ಮೆಲ್ಲಗೆ ಕಣ್ಣು ಮುಚ್ಚಿತು. ಕಪ್ಪೆಗಳು ಹಾರಿ ಸದ್ದುಮಾಡಿದಾಗ ಕಣ್ದೆರೆದು ನೋಡುತ್ತ ಮರಳಿ ಎವೆ ಮುಚ್ಚುತ್ತಿತ್ತು. ಸ್ವಲ್ಪಹೊತ್ತು ನಿದ್ದೆ ಮಾಡಿತು. ಇದ್ದಕ್ಕಿದ್ದಂತೆ ದೂರದಲ್ಲಿ ಜನರು ಮಾತಾಡುವ ಸದ್ದು ಕೇಳಿಸಿತು. ಹಂದಿ ಜಾಗರೂಕವಾಗಿ ಆಲಿಸಿತು. ಮತ್ತೆ ಯಾವ ಅಪಾಯವನ್ನೂ ನಿರೀಕ್ಷಿಸದೆ

ಉದಾಸೀನವಾಯಿತು. ಮತ್ತೆ ಜನರು ಮಾತಾಡುವ ಸದ್ದು ಸಮೀಪವಾದಂತೆ ತೋರಿತು. ಇದ್ದಕ್ಕಿದ್ದಹಾಗೆ ಸುತ್ತಮುತ್ತಲೂ ಹಳುವಿನಲ್ಲಿ ಸಣ್ಣ ಪ್ರಾಣಿಗಳು ಓಡಾಡುವ ಸದ್ದಾಯಿತು. ಹಿಂದುಗಡೆ ನಾಯಿಯೊಂದು ತೀಕ್ಷ್ಣವಾಗಿ ಬಗುಳಿತು. ಮೊದಲು ಮೊದಲು, ಮದಿಸಿದ ವರಾಹ ಅದನ್ನು ಲೆಕ್ಕಿಸಲಿಲ್ಲ. ಆದರೆ ನಾಯಿ ನಾಲ್ಕೈದು ಸಾರಿ ಒಂದೇ ಸಮನೆ ಕಾಡಿನ ಮೌನಕ್ಕೆ ಬಾಣ ವೆಸೆದಂತೆ ಕೂಗಲು, ಹಂದಿ ಮೈ ರೋಮಗಳನ್ನು ಹುರಿಮಾಡಿಕೊಂಡು ಮೇಲೆದ್ದು ಹಿಂತಿರುಗಿ ನಿಂತಿತು. ಅಷ್ಟರಲ್ಲಿ ಮೊದಲನೆ ನಾಯಿಯ ಕೂಗನ್ನು ಕೇಳಿ ನಾಲ್ಕೈದು ನಾಯಿಗಳು ಹಾರಿ ನುಗ್ಗಿಬಂದು ಹಂದಿಯ ಸುತ್ತಲೂ ಸ್ವಲ್ಪ ದೂರ ದಲ್ಲಿ ನಿಂತು ಬಗುಳಿದುವು. ಹಂದಿ ಅಲ್ಲಿಂದ ಕಾಲುಕೀಳಲು ಹವಣಿಸುತ್ತಿದ್ದಂತೆಯೆ ಮತ್ತೂ ಎರಡು ಮೂರು ನಾಯಿಗಳು ನುಗ್ಗಿಬಂದುವು. ನಾಯಿಗಳು ನಾಲ್ದೆಸೆ ಗಳಿಂದಲೂ ಅದರ ಮೈಮೇಲೆ ಬೀಳಹೋಗಲು ಆ ಒಂಟಿಗ ಒಂದು ಸಾರಿ ಕಾಡು ನಡುಗುವಂತೆ ಭಯಂಕರವಾಗಿ ಹೂಂಕರಿಸಿ ಮುಂದೆ ನುಗ್ಗಿತು. ಅಲ್ಲಿದ್ದ ನಾಯಿಗಳು ಚಿಮ್ಮಿ ನೆಗೆದು ತಪ್ಪಿಸಿಕೊಂಡು, ಮತ್ತೆ ಅದನ್ನು ತಡೆದು ನಿಲ್ಲಿಸಿ, ಕೂಗತೊಡಗಿದುವು. ಆದರೂ ಹಂದಿ ಮತ್ತೆ ನಾಲ್ಕು ಹೆಜ್ಜೆ ಮುಂದೆ ನುಗ್ಗಿತು. ನಾಯಿಗಳು ಅದರ ಕೋರೆಗೆ ಸಿಕ್ಕದೆ ತಪ್ಪಿಸಿಕೊಂಡು ಪುನಃ ಅದನ್ನು ತಡೆದು ಕೂಗತೊಡಗಿದುವು. ಕಾಡಿನ ಮೌನ ಹಂದಿಯ ಹೂಂಕಾರ ಮತ್ತು ನಾಯಿಯ ಕೂಗುಗಳಿಂದ ಸಮ್ಮಥಿತವಾಯಿತು. ಅಷ್ಟರಲ್ಲಿ ಮನುಷ್ಯರ ಕೂಗು ಕೇಳಿಸಿ, ಹಂದಿ ಅಲ್ಲಿ ನಿಂತರೆ ಕ್ಷೇಮವಲ್ಲವೆಂದು ಒಂದೇ ರಭಸದಿಂದ ಕಾಲುಕಿತ್ತು ನುಗ್ಗಿತು. ಈ ಸಾರಿ ಎಲ್ಲಿಯೂ ನಿಲ್ಲದೆ ಓಡಿಬಿಡಬೇಕೆಂದು ಮನಸ್ಸು ಮಾಡಿತ್ತು; ನಾಯಿ ಗಳಿಗೆ ಹೆದರಿಯಲ್ಲ, ಮನುಷ್ಯರಿಗೆ ಹೆದರಿ. ಹಂದಿ ಹತ್ತು ಇಪ್ಪತ್ತು ಮಾರು ಓಡಿತ್ತು. ಹಿಂದುಗಡೆಯಿಂದ ಬಗುಳುತ್ತ ಬರುತ್ತಿದ್ದ ನಾಯಿಗಳಲ್ಲಿ ಒಂದು ಅದರ ಬೆನ್ನಿನಮೇಲೆ ಹಾರಿ ಕಚ್ಚಿತು. ಸ್ವಸಂರಕ್ಷಣೆಗಾಗಿಯೂ ಪ್ರತಿಭಟನೆ ಗಾಗಿಯೂ ಪ್ರತಿಹಿಂಸೆಗಾಗಿಯೂ ಕೆರಳಿದ ಹಂದಿ ಗರಕ್ಕನೆ ಹಿಂದಿರುಗಿ ಹೂಂಕರಿ ಸುತ್ತ ನಾಯಿಗಳ ಕಡೆಗೆ ರಭಸದಿಂದ ನುಗ್ಗಿತು. ಅದು ಹಿಂತಿರುಗಿದ ವೇಗಕ್ಕೆ ಅದರ ಬೆನ್ನು ಕಚ್ಚಿದ್ದ ನಾಯಿ ಕವಣೆಕಲ್ಲೆಸೆದಂತೆ ಒಂದುಮಾರು ಚಿಮ್ಮಿಬಿದ್ದು. ಮರಕ್ಕೆ ಮೈ ತಗುಲಿ ನೋವಿನಿಂದ ಕೂಗಿಕೊಂಡಿತು. ಇತರ ನಾಯಿಗಳು ಯುಕ್ತಿಯಿಂದ ನೆಗೆದು ತಪ್ಪಿಸಿಕೊಂಡುವು. ಹಂದಿ ಅದೇ ಮುಖವಾಗಿ ಮತ್ತ ಓಡಿತು. ಮತ್ತೆ ನಾಯಿಗಳೂ ಗಟ್ಟಿಯಾಗಿ ಬಗುಳುತ್ತ ಹಿಂಬಾಲಿಸಿದುವು. ಹೀಗೆ ಆ ಒಂಟಿಗ ಹಂದಿ ನಿಲ್ಲಲೂ ಆರದೆ ಓಡಲೂ ಆರದೆ ನಾಯಿಗಳ ಪೀಡನೆಗೆ ಸಿಕ್ಕಿ, ಹೂಂಕರಿಸುತ್ತ ಅಲ್ಲಿಂದಿಲ್ಲಿಗೆ, ಇಲ್ಲಿಂದಲ್ಲಿಗೆ ಹಳುವಿನಲ್ಲಿ ತೊಳಲುತ್ತಿತ್ತು:

ಬೇಟೆಯಲ್ಲಿ ಪಳಗಿದ್ದ ಆ ನಾಯಿಗಳು ಹಂದಿಯನ್ನು ಹೋಗಗೊಡದೆಯೂ ಅದರಿಂದ ತಿವಿಸಿಕೊಳ್ಳದೆಯೂ ಅದನ್ನು ತಡೆದು, ಮನುಷ್ಯರಿಗೆ 'ಹಂದಿ ತಡೆದಿದ್ದೇವೆ' ಎಂದು ಸೂಚನೆ ಕೊಡುವಂತೆ ಬಗುಳುತ್ತಿದ್ದುವು. ಸ್ವಲ್ಪ ಹೊತ್ತಿಗೆ ಮುಂಚೆ 'ಸತ್ತ ಶವ'ದಂತೆ ನಿಶ್ಶಬ್ದವಾಗಿದ್ದ ಆ 'ಕತ್ತಲೆಗಿರಿಯ ಸರು' ಈಗ ಕಾಕುಹಾಕುವ ಹುಚ್ಚನಂತೆ ಶಬ್ದಮಯವಾಗಿತ್ತು.

ಸಿಂಗಪ್ಪಗೌಡರು ಕಡಿಸಿದ್ದ ಕಳ್ಳನಾಟಾಗಳನ್ನು ಕದ್ದು ಸಾಗಿಸಲೆಂದು ಕಾನೂರಿನಿಂದ ಹೊರಟಿದ್ದ ಸಾಹಸಿಗಳ ದಂಡು 'ಕತ್ತಲೆಗಿರಿಯ ಸರು'ವಿಗೆ ಸಮೀಪದಲ್ಲಿ ಹೋಗುತ್ತಿದ್ದಾಗ, ಜೊತೆಯಲ್ಲಿ ಬರುತ್ತಿದ್ದ ನಾಯಿಗಳು ಇದ್ದಕ್ಕಿದ್ದಂತೆ ನೆಲವನ್ನು ಮೂಸಿ 'ಗಾಳಿ ಹಿಡಿ'ಯುತ್ತ ಹೆಚ್ಚು ವೇಗದಿಂದಲೂ ಉತ್ಸಾಹ ಉದ್ವೇಗಗಳಿಂದಲೂ ಹಳುವಿನಲ್ಲಿ ಹುಡುಕುನೋಟದಿಂದ ತಿರುಗತೊಡಗಿದುವು! ನಾಯಿಗಳಿಗೆ ಯಾವುದೊ ಪ್ರಾಣಿಯ 'ಗಾಳಿ ಸಿಕ್ಕಿದೆ' ಎಂದು ಎಲ್ಲರಿಗೂ ಗೊತ್ತಾಯಿತು. ಎಲ್ಲರೂ ನೆಲದ ಕಡೆ ನೋಡಹತ್ತಿದರು. ಹಳೆಪೈಕದ ತಿಮ್ಮ "ಇಲ್ಲಿ ನೋಡಿ ಪುಟ್ಟೇಗೌಡ್ರೇ, ಹಂದಿ ಹೆಜ್ಜೆ! ಇವತ್ತು ಬೆಳಿಗ್ಗೆ ಹೋಗ್ಯಾದೆ!" ಎಂದನು. ಪುಟ್ಟಣ್ಣನೊಡನೆ ಎಲ್ಲರೂ ಅಲ್ಲಿಗೆ ಹೋಗಿ ನೋಡಿದರು. ಸೇರೆಗಾರರು ಸಾಕ್ಷಾತ್ ಹಂದಿಯನ್ನೆ ಕಂಡವರಂತೆ ಹರ್ಷಿತರಾಗಿ "ಏನು ಮಾಡುವ? ಈ ಕೆಲಸವೊಂದು ಇಲ್ಲದಿದ್ದರೆ ಒಂದು ಶಿಕಾರಿ ಕಾಂಬುದಿತ್ತು! ಹೌದಾ ಗೌಡ್ರೇ?" ಎಂದರು.

ಗಟ್ಟದಾಳೊಬ್ಬನು "ಕಾಣೆನಿ ಇಲ್ಲಿ, ಮುಸುಂಡಿ ಊರಿತ್ತು" ಎಂದು ಸ್ವಲ್ಪ ದೂರದಲ್ಲಿ ಮತ್ತೊಂದೆಡೆ ಬಾಗಿದನು.

"ಹೌದು ಕಣ್ರೋ, ದೆಯ್ಯಂದೀ! ಅದ್ರ ಹೆಜ್ಜೇ ನೋಡಿ! ದನಿನ ಹೆಜ್ಜೆ ಇದ್ದ್ಹಾಂಗದೆ!" ಎಂದನು ಬೈರ.

ಅಷ್ಟರಲ್ಲಿ ಕತ್ತಲೆಗಿರಿಯ ಸರುವಿನಲ್ಲಿ ನಾಯಿ ಬಗುಳಿತು. ಎಲ್ಲರೂ ಬೆಚ್ಚಿ ಅವಾಕ್ಕಾಗಿ ಕಣ್ಣರಳಿಸಿ ಕಿವಿಗೊಟ್ಟು ಆಲಿಸುತ್ತ ನಿಂತರು. ಕಾಡಿನ ಮೇಲೆ ಬಿದ್ದು ಹಸುರುಗಟ್ಟಿದ್ದ ಪೂರ್ವಾಹ್ನದ ಬಿಸಿಲಿನಲ್ಲಿ ಮರಗಳ ದಟ್ಟವಾದ ಕರಿನೆಳಲು ನೆಲದಮೇಲೆ ಮಸಿ ಹೊಯ್ದಂತೆ ಅಲ್ಲಲ್ಲಿ ಬಿದ್ದಿತ್ತು. ಹತ್ತಿರದಲ್ಲಿಯೆ ಹಾರಾಡಿ ಹಾಡುತ್ತಿದ್ದ ಪಿಕಳಾರ ಹಕ್ಕಿಗಳ ಕೂಗು ಕೇಳಿಸಿತ್ತು.

ನಾಯಿ ಒಂದು ಸಾರಿ ಕೂಗಿತು. ಎರಡು ಸಾರಿ ಕೂಗಿತು. 'ಬೌ ವೌ ವೌ!'

"ಟೈಗರಲ್ಲವೇನೋ?" ಎಂದು ಪಿಸುಮಾತಿನಲ್ಲಿ ಕೇಳಿದನು ಪುಟ್ಟಣ್ಣ.

"ಹೌದು ಕಣ್ರೋ" ಎಂದು ಮೆಲ್ಲನೆ ಸಮ್ಮತಿಸಿದನು ಹಳೆಪೈಕದ ತಿಮ್ಮ.

"ಸುಮ್ನೆ ಕೂಗಾಕಿಲ್ಲ ನೋಡಿ ಅದೂ! ಹಂದಿ ಕಂಡ್ರೇ ಸೈ ಹಾಂಗೆ ಕೂಗಾದು!" ಎಂದನು ಬೈರ.

ಅಷ್ಟರಲ್ಲಿ 'ಬೌವೌವೌ!' 'ಕಂಯ್‌ಕ್ಯೈಕ್ಯೈ!' ಮೊದಲಾಗಿ ನಾಯಿಗಳ ನಾನಾ ಸ್ವರಗಳು ಕೇಳಿಬಂದುವು. ತಿಮ್ಮನ ಹೃದಯ ಬಾಯಿಗೆ ಬಂದಂತಾಗಿ ಪುಟ್ಟಣ್ಣನನ್ನು ನಿರ್ದೇಶಿಸಿ ಗಟ್ಟಿಯಾಗಿದ್ದ ಪಿಸುಮಾತಿನಲ್ಲಿ "ಹಂದಿ ತಡ್ದಾವೆ ಕಣ್ರೋ! ಓಡ್ರೋ!" ಎನ್ನುತ್ತಿದ್ದಾಗಲೆ ಹಂದಿಯ ಭಯಂಕರ ಹೂಂಕಾರ ನಾಯಿಗಳ ಬೊಬ್ಬೆಯನ್ನು ಮೀರಿ ಕೇಳಿಸಿತು! ಪುಟ್ಟಣ್ಣ ಸ್ವಲ್ಪವೂ ತಡ ಮಾಡದೆ 'ಕತ್ತಲೆಗಿರಿಯ ಸರು' ವಿಗೆ ನುಗ್ಗಿದನು. ತಿಮ್ಮ "ಅಯ್ಯೋ ನಾನು ಕೋವಿ ಬಿಟ್ಟುಬಂದೆನಲ್ಲಾ!" ಎಂದುಕೊಂಡು ನಿಂತಲ್ಲಿ ನಿಲ್ಲದೆ ಅತ್ತಿತ್ತ ಓಡಾಡತೊಡಗಿದನು. ಗಟ್ಟದಾಳುಗಳಂತೂ 'ಇಲ್ಲಿ ಬಾರೋ, ಅಲ್ಲಿ ಹೋಗೋ' ಎಂದು ಕೂಗುತ್ತ ಸುಲಭವಾಗಿ ಹತ್ತಲು ಮರಗಳಿವೆಯೇ ಎಂದು ನೋಡ ತೊಡಗಿದರು.

ಪುಟ್ಟಣ್ಣ ನಾಯಿಯ ಕೂಗು ಕೇಳಿಬರುತ್ತಿದ್ದ ಕಡೆಗೆ ದಟ್ಟವಾದ ಹಳುವಿನಲ್ಲಿ ಕಣ್ಣುಮುಚ್ಚಿಕೊಂಡು ನುಗ್ಗಿದನು. ಅವನ ಮನಸ್ಸೆಲ್ಲ ಹಂದಿಯ ಮೇಲಿತ್ತು. ಕೆಲವೆಡೆಗಳಲ್ಲಿ ನೆಟ್ಟಗೆ ಹೋಗಲಾರದೆ ನೆಲದವರೆವಿಗೂ ಬಾಗಿ ನುಸಿಯಬೇಕಾ ಗಿತ್ತು. ಬಳ್ಳಿ ಗಿಡ ಹೊದರು ಮರಗಳು ಹೆಜ್ಜೆಹೆಜ್ಜೆಗೂ ತಡೆಗಟ್ಟಿ ನಿಂತಿದ್ದುವು. ಇಂಬಳಗಳು ಹತ್ತಿ ನೆತ್ತರು ಹೀರತೊಡಗಿದ್ದುದೂ ಅವನ ಗಮನಕ್ಕೆ ಬರಲಿಲ್ಲ. ನೂಲು ಆ ಟೋಪಿಯಾಗಿ ಅವತಾರ ಎತ್ತಿದಂದಿನಿಂದಲೂ ನೀರು ಕಾಣದೆ, ಎಣ್ಣೆಯ ಜಿಡ್ಡು ಹಿಡಿದು ಮೇಣಗಪ್ಪಟವಾಗಿದ್ದ ಅವನ 'ಹಾಸನದ ತೋಪಿ' ಯ ಸಂದಿಗೊಂದಿಗಳಲ್ಲಿ ಗಿಡುಹಿಡಿದು ಹೊರಹೊಮ್ಮಿದ ಕೂದಲು ಕೆದರಿಕೊಂಡಿತ್ತು. ನಡುನಡುವೆ ಕಳಚಿಬೀಳಲು ಅಣುವಾಗುತ್ತಿದ್ದ 'ತೋಪಿ' ಯನ್ನು ತಲೆಗೆ ಒತ್ತಿಕೊಂಡು ಬಹು ಕ್ಲೇಶದಿಂದ ಆದರೂ ವೇಗದಿಂದ ಮುಂದುವರಿದನು. ಶಬ್ದದಿಂದ ಹಂದಿ ನಾಯಿಗಳನ್ನು ಬೆದರಿಸಿ ಅತ್ತ ಇತ್ತ ನುಗ್ಗುತ್ತಿದ್ದುದು ಅವನಿಗೆ ಗೊತ್ತಾಯಿತು. ಹೂಂಕಾರದಿಂದ ಅದು ದೊಡ್ಡ ಒಂಟಿಗನಿರಬೇಕೆಂದೂ ಊಹಿಸಿದನು.

ಪುಟ್ಟಣ್ಣ ಬಹಳ ಎಚ್ಚರಿಕೆಯಿಂದ ಹಳುವಿನಲ್ಲಿ ನುಸುಳಿ ನಡೆದು ಶುನಕ ಸೂಕರಗಳ ಸಮರ ರಂಗಕ್ಕೆ ಬಳಿಯಾದನು! ಹಂದಿಯೂ ಅವನ ಕಣ್ಣಿಗೆ ಬಿದ್ದಿತು. ಅದನ್ನು ಸುಡಲು ಬಂದೂಕನ್ನು ಸರಕ್ಕನೆ ನೆಗಹಿದನು. ಆದರೆ ಸುತ್ತಲೂ ಮುತ್ತಿದ್ದ ನಾಯಿಗಳು ಮನುಷ್ಯನ ಸಾಮೀಪ್ಯವನ್ನರಿತು ಧೈರ್ಯ ಗೊಂಡು, ಪ್ರಾಣಿಯನ್ನು ನಾಲ್ದೆಸೆಗಳಿಂದಲೂ ಮೇಲ್ವಾಯ್ದು ಪೀಡಿಸಲು ಪ್ರಾರಂಭಮಾಡಿದುದರಿಂದ ಕೈ ತಡೆದನು. ಏಕೆಂದರೆ, ಅನೇಕ ಬೇಟೆಗಾರರು ಅಂತಹ ಸಮಯಗಳಲ್ಲಿ ವಿವೇಚನೆ ಸಾಲದೆ ಹೋಗಿ ಹಂದಿಯಜೊತೆಗೆ ನಾಯಿ

ಗಳನ್ನೂ ಕೊಂದುದುಂಟು. ಅವನು ಸರಿಯಾದ ಸಮಯಕ್ಕಾಗಿ ಹವಣಿಸು ತ್ತಿದ್ದಾಗಲೆ ಹಂದಿಗೂ ಮನುಷ್ಯನ ಸುಳಿವು ಸಿಕ್ಕಿ, ಒಂದು ಬಾರಿ, ಪರಾರಿಯಾಗಲು ರಭಸದಿಂದ ಓಡಿತು. ಆಗ ನಾಯಿಗಳು ಸ್ವಲ್ಪ ಹಿಂದೆ ಬಿದ್ದ ಹೊತ್ತನ್ನೆ ಕಾದು, ಮರ ಗಿಡ ಪೊದೆಗಳ ಮಧ್ಯೆ ಅಲ್ಲಲ್ಲಿ ಮಿಂಚಿ ಮುಂಚುತ್ತಿದ್ದ ಹಂದಿಗೆ ಪುಟ್ಟಣ್ಣ ಒಂದು ಗುಂಡು ಹೊಡೆದನು. ಕಣ್ಣು ಮುಚ್ಚಿ ಬಿಡುವಷ್ಟರಲ್ಲಿಯೆ ಮತ್ತೊಂದು ಈಡೂ ಹಾರಿತ್ತು. ಈಡು ಹಾರಿದ ಸದ್ದನ್ನು ಕೇಳಿದ ನಾಯಿಗಳಂತೂ ರಣಭೇರಿಯನ್ನು ಆಲಿಸಿದ ಸೈನಿಕರಂತೆ ಮೃಗಯಾವೇಶದಿಂದ ಸೂಕರನನ್ನು ಹಿಂಬಾಲಿಸಿದುವು. ಪುಟ್ಟಣ್ಣನೂ ಬೆನ್ನಟ್ಟಿದನು. ಆದರೆ ಆ ದಟ್ಟ ಹಳುವಿನಲ್ಲಿ ಹಿಂಬಾಲಿಸಲು ಸಾಧ್ಯವಾಗದೆ, ಸ್ವಲ್ಪದೂರ ಓಡಿದವನು, ಏದುತ್ತ ಹಾಗೆಯೆ ನಿಂತುಬಿಟ್ಟನು. ಹಂದಿ ನಾಯಿಗಳ ಸದ್ದು ಬರಬರುತ್ತ ದೂರದೂರವಾಗಿ ಕಿವಿಮರೆಯಾಯಿತು.

ಹಂದಿಗೆ ಈಡು ಹೊಡೆದಲ್ಲಿಗೆ ಬಂದು, 'ಗುಂಡಿನ ಹುಯಿಲು' ನೋಡಿ, ನೆತ್ತರು ಗಿತ್ತರು ಬಿದ್ದಿದೆಯೋ ಏನೋ ಎಂದು ಹಳುವನ್ನೂ ನೆಲವನ್ನೂ ಪರೀಕ್ಷಿಸಿದನು. ಒಂದೆಡೆ ಎಲೆಗಳ ಮೇಲೆ ರಕ್ತ ಸೋರಿತ್ತು. ಗುಂಡು ತಗುಲಿದೆ ಎಂಬುದೇನೋ ನಿಶ್ಚಯವಾಯಿತು. 'ಹೋಇಯ್!' ಎಂದು ಗಟ್ಟಿಯಾಗಿ ಕೂಗಿ ಕರೆದನು. 'ಹೋಇಯ್!' ಎಂದು ದೂರದಿಂದ ತಿಮ್ಮನ ಮಾರುತ್ತರ ಬಂದಿತು. ಕಾಡು ನೀರವವಾಗಿತ್ತು. "ಇಲ್ಲಿ ಬಾರೋ" ಎಂದನು.

ತಿಮ್ಮನು ಹಂದಿ ಬಿದ್ದಿದೆ ಎಂದೇ ನಿಶ್ಚಯಿಸಿ ಓಡೋಡುತ್ತ ಬಂದನು. ಏಕೆಂದರೆ, ಪುಟ್ಟಣ್ಣನು ಇಟ್ಟ ಗುರಿ ತಪ್ಪದು ಎಂದು ಅನುಭವದಿಂದ ಎಲ್ಲರಿಗೂ ತಿಳಿದಿತ್ತು. ಅದೊಂದು ವಿಧವಾದ ಮೂಢ ನಂಬಿಕೆಯೂ ಆಗಿಬಿಟ್ಟಿತ್ತು. ಹಿಂದಿನಿಂದ ಸೇರೆಗಾರರೂ ಬೈರನೂ 'ಹೋ!... ಹೋ!' ಎಂದು ಕರೆದು ಗೊತ್ತುಹಚ್ಚುತ್ತ ಬಂದರು. ಅಂಜುಬುರುಕರಾದ ಗಟ್ಟದಾಳುಗಳಲ್ಲಿ ಕೆಲವರು ಹಂದಿಯ ಆರ್ಭಟ, ನಾಯಿಗಳ ಬೊಬ್ಬೆ, ಬಂದೂಕಿನ ಢಂಕಾರಗಳನ್ನು ಕೇಳಿ, ಗಾಯದ ಹಂದಿ ಎಲ್ಲಿ ತಮ್ಮ ಕಡೆಗೇ ನುಗ್ಗುತ್ತದೆಯೋ ಎಂದು ಹೆದರಿ, ಆಗಲೇ ವೃಕ್ಷಾಲಿಂಗನ ಕಾತರರಾಗಿದ್ದರು. ಅವರಲ್ಲಿ ಡೊಳ್ಳುಹೊಟ್ಟೆಯ ಸೋಮನಂತೂ ದಪ್ಪವಾದ ಒಂದು ನಂದಿಯ ಮರವನ್ನೇ ತಬ್ಬಿ, ಹತ್ತಲೆಳಸಿ, ಸಲಸಲವೂ ಜಾರುತ್ತಿದ್ದನು. ಜಾರಿದಂತೆಲ್ಲ ಅವನ ಭಯೋದ್ವೇಗಗಳು ಹೆಚ್ಚಿ, ಮತ್ತಷ್ಟು ಗಡಿಬಿಡಿಯಿಂದ ಮರವನ್ನು ಹತ್ತಲೆಳಸಿ, ಮತ್ತಷ್ಟು ರಭಸದಿಂದ ಜಾರಿ ಬೀಳುತ್ತಿದ್ದನು. ಅಲ್ಲಿದ್ದವರೆಲ್ಲರೂ ಭಯಗ್ರಸ್ತರಾಗಿದ್ದುದರಿಂದ ಯಾರೂ ನಗಲಿಲ್ಲ. ಅವರವರ ಪಾಡು ಅವರವರಿಗಾಗಿತ್ತು. ನಾಯಿಗಳ ಬೊಬ್ಬೆಯೂ

ಹಂದಿಯಬ್ಬರವೂ ನಿಂತು ಪುಟ್ಟಣ್ಣನ ಕರೆಯೂ ತಿಮ್ಮನ 'ಓ' ಕೊಳ್ಳುವಿಕೆಯೂ ಕೇಳಿಸಲು, ಗಟ್ಟದಾಳುಗಳಿಗೆ ಹೋಗಲಿದ್ದ ಜೀವ ಬಂದಂತಾಗಿ, ಮೆಲ್ಲಮೆಲ್ಲನೆ ಪುಟ್ಟಣ್ಣ ಕರೆಯುತ್ತಿದ್ದಲ್ಲಿಗೆ ಹರಿದು ನಡೆದರು.

ಎಲ್ಲರೂ ಸೇರಿ ಗುಂಡಿನ ಹುಯಿಲನ್ನು ಹುಡುಕಿದರು. ಮೊದಲನೆ ಈಡು ಕಡಕಿನ ತೋಟಾದ್ದಾದ್ದರಿಂದ ಒಂದೆರಡು ಕಡಕುಗಳು ಗಿಡಗಳಿಗೆ ತಗುಲಿದ್ದುದು ಕಂಡುಬಂದಿತು. ಎರಡನೆ ಈಡು ಗುಂಡಿನದು. ಎಷ್ಟು ಅರಸಿದರೂ ಗುಂಡು ಯಾವ ಗಿಡಕ್ಕಾಗಲಿ ಮರಕ್ಕಾಗಲಿ ಬಡಿದಂತೆ ಕಾಣಲಿಲ್ಲ. ಬಹಳ ಹೊತ್ತು ಪರೀಕ್ಷೆ ಮಾಡಿದ ತರುವಾಯ ಗುಂಡು ಹಂದಿಗೆ ತಗುಲಿದೆ; ಆದರೆ ಅಪಾಯದ ಸ್ಥಳಕ್ಕೆ ಏಟುಬೀಳಲಿಲ್ಲವಾದ್ದರಿಂದ ಪ್ರಾಣಿ ಓಡಿಹೋಗಿದೆ ಎಂದು ನಿರ್ಧರಿಸಿದರು.

ಅಲ್ಲಿ ಚೆಲ್ಲಿದ್ದ ರಕ್ತವನ್ನು ನೋಡಿದ ಹಾಗೆಲ್ಲ ಸೋಮನಂತೂ ಬಾಯಿ ಬಾಯಿ ಬಿಟ್ಟು ಬೇಗುತ್ತಿದ್ದನು. ಅವನಿಗೆ ಮಾಂಸವೆಂದರೆ ಜೀವಕ್ಕಿಂತಲೂ ಬೆಲ್ಲವಾಗಿತ್ತು. ಅವನ ಡೊಳ್ಳಿಗೆ ನಿಜವಾದ ಕಾರಣ ಜ್ವರಗಡ್ಡೆಯಾಗಿದ್ದರೂ ಹಳ್ಳಿಯವರೆಲ್ಲ ಅವನು ತಿನ್ನುತ್ತಿದ್ದ ಮಾಂಸದ ಪ್ರಮಾಣವೇ ಅದಕ್ಕೆ ಕಾರಣವೆಂದು ಹೇಳುತ್ತಿದ್ದರು. ಅವನಿಗೂ ಕೂಡ ತನಗೆ ಮಾಂಸದಲ್ಲಿದ್ದ ಅತ್ಯಾಶೆಯನ್ನು ಅಡಗಿಸಿಟ್ಟುಕೊಳ್ಳುವಷ್ಟು ಸಂಯಮ ಶಕ್ತಿಯಿರಲಿಲ್ಲ. ಹಿಂದೆ ಒಂದುಸಾರಿ ಬೇಟೆಯಲ್ಲಿ ದೊಡ್ಡ ಕಡವೆಯೊಂದನ್ನು ಕೊಂದು ಹಸುಗೆ ಮಾಡುತ್ತಿದ್ದಾಗ, ಅವನ ಪಾಲಿಗೆ ಬಂದ ಮಾಂಸ ಸಾಲದೆಹೋಗಿ ಇನ್ನೊಬ್ಬನ ಪಾಲಿನಿಂದಲೂ ಒಂದಷ್ಟನ್ನು ಕದ್ದು, ಎಲ್ಲರ ನಿಂದೆಗೂ ಹಾಸ್ಯಕ್ಕೂ ಗುರಿಯಾಗಿದ್ದನು.

"ಈಗೇನು ಮಾಡೋದು, ಹೇಳಿ" ಎಂದನು ಪುಟ್ಟಣ್ಣ.

"ಸ್ವಲ್ಪ ದೂರ ಹೋಗಿ ನೋಡುವ. ನಾಯಿ ಬರಲಿಲ್ಲ" ಎಂದರು ಸೇರೆಗಾರರು.

"ಹೌದು ಕಣ್ರಾ, ಅಲ್ಲೆಲ್ಲಾದ್ರೂ ಸತ್ತುಬಿದ್ದಿದ್ರೆ? ಒಂದು ಹಂದೀನೆ ದಂಡಾಗ್ತದಲ್ಲಾ! ಅದ್ರ ಜೀವ ಉಳಿದ್ಹಾಂಗೂ ಆಗ್ಲಿಲ್ಲ, ನಮಗೆ ಸಿಕ್ಕಿದ್ಹಾಂಗೂ ಆಗ್ಲಿಲ್ಲ!" ಎಂದನು ಬೈರ,

"ಹೌದೂ! ಇವತ್ತಿನ ಕೆಲಸಕ್ಕೆ ಹೊತ್ತಾದರೆ? ಗೌಡರು ನಮ್ಮನೇನು ಸುಮ್ಮನೆ ಬಿಡೋದಿಲ್ಲ" ಎಂದು ಪುಟ್ಟಣ್ಣ ಕೆಲಸದ ನೆನಪು ಮಾಡಿಕೊಡಲು ಎಲ್ಲರ ಮುಖವೂ ಪೆಚ್ಚಾಗಿ ನಿರುತ್ಸಾಹಿಗಳಾದರು.

ತಿಮ್ಮ "ಹಾಳ್ಹಂದಿ! ಇವತ್ತೇ ದಾರಿಗಡ್ಡಬರಾದೇ? ಗೌಡ್ರಾದ್ರೂ ಮನೇಲಿದ್ದಿದ್ರೆ ಕೇಳ್‌ಬ್ಯೆದಾಗಿತ್ತು, ನಾಳೆ ನಾಟಾ ಹೊರ್ತೀವಿ ಅಂತಾ. ಹಾಳಾಗಿ ಹೋಗ್ಲಿ, ಹೋಗಾನ ಬನ್ನಿ. ನಾಯಿ ಕರೀರಿ" ಎಂದನು ಹತಾಶಭಾವದಿಂದ.

ಎಲ್ಲರೂ ಮನಸ್ಸಿಲ್ಲದ ಮನಸ್ಸಿನಿಂದ ಒಪ್ಪಿಗೆಯನ್ನು ನಟಿಸಿದರು. ಪುಟ್ಟಣ್ಣ 'ಕ್ರೊ! ಕ್ರೊ!' ಎಂದು ಗಟ್ಟಿಯಾಗಿ ನಾಯಿ ಕರೆಯತೊಡಗಿದನು.

ರಕ್ತವನ್ನೇ ಅಭೀಷ್ಟಕ ದೃಷ್ಟಿಯಿಂದ ನೋಡುತ್ತಿದ್ದ ಸೋಮನ ಎದೆಯಲ್ಲಿ ಸಂತಾಪದುರಿಯೆದ್ದು, ಕನಿಕರ ಹುಟ್ಟುವಂತೆ ಅಗಲವಾಗಿ ಬಾಯಿತೆರೆದು "ಅಯ್ಯಯ್ಯೋ ಒಡೆಯ, ಆ ಹಂದಿ ಬಿಟ್ಟುಹೋಪ್ಪುದೇ? ಕಾಣನಿ ರಯ್ತ (ರಕ್ತ ಎಂಬುದಕ್ಕೆ) ಹ್ಯಾಂಗೆ ಕೋಡಿ ಹರಿದಿತ್ತು! ಹಂದಿ ಅಲ್ಲೇ ಸತ್ತು ಬಿದ್ದಿರ ಬೇಕು! ಒಂದು ಸ್ವಲ್ಪ ದೂರ ಹೋಗಿ ನೋಡಿಕೊಂಡು ಹೋಗುವ" ಎಂದು ಒದರಿದನು.

ಎಲ್ಲರ ಮನಸ್ಸೂ ಹಾಗೆಯೇ ಇತ್ತು. ಆದರೂ ಸೋಮನ ದಾಕ್ಷಿಣ್ಯಕ್ಕೋ ಎಂಬಂತೆ ರಕ್ತದ ಜಾಡನ್ನು ಹುಡುಕಿಕೊಂಡು ಹೊರಟರು. ನೆತ್ತರು ಕೆಲವೆಡೆ ಗಳಲ್ಲಿ ಹೆಚ್ಚಾಗಿ ಸೋರಿತ್ತು. ಮತ್ತೆ ಸ್ವಲ್ಪ ದೂರ ಏನೂ ಸೋರಿರಲಿಲ್ಲ. ಹಂದಿ ಓಡಲಾರದೆ ನಿಂತು ನಿಂತು ಹೋಗಿದೆ ಎಂಬುದೂ ತಿಳಿಯಿತು. ಅದು ನಿಂತೆಡೆಗಳಲ್ಲಿ ರಕ್ತ ಸೋರಿ ಹೆಪ್ಪುಗಟ್ಟಿತ್ತು. ಹೀಗೆ ಮುಂದೆ ಮುಂದೆ ಹೋಗು ತ್ತಿದ್ದಾಗಲೆ ಒಂದು ಈಡು ಕೇಳಿಸಿತು.

ಪುಟ್ಟಣ್ಣ "ಹೋಯ್, ನಮ್ಮ ಹಂದಿಗೇ ಯಾರಾದರೂ ಹೊಡೆದರೋ?" ಎಂದನು. ಅಷ್ಟರಲ್ಲಿ ನಾಯಿಗಳ ಕೂಗಾಟದ ಸದ್ದೂ ಬಹುದೂರದಲ್ಲಿ ಕೇಳಿ ಸಿದ ಹಾಗಾಯಿತು.

ಎಲ್ಲರೂ ಈಡು ಕೇಳಿಸಿದ ಕಡೆಗೆ ವೇಗವಾಗಿ ಧಾವಿಸಿದರು. ಮುಂದು ವರಿದಂತೆಲ್ಲ ನಾಯಿಗಳ ಕೂಗು ಹೆಚ್ಚು ಹೆಚ್ಚು ಸ್ಪಷ್ಟವಾಗಿ ಕೇಳಿಬಂದಿತು. ಮತ್ತಷ್ಟು ಬೇಗಬೇಗನೆ ನಡೆದರು.

ಸ್ವಲ್ಪದೂರ ಹೋದಮೇಲೆ ನಾಯಿಗಳ ಕೂಗು ಕೇಳಿಸಲಿಲ್ಲ; ಮನುಷ್ಯರ ಮಾತು ಕೇಳಿಸಿತು. ಸೇರೆಗಾರರು ಸುತ್ತಮುತ್ತಲೂ ತಿರುಗಿ ನೋಡಿ "ಹೋಯ್, ಪುಟ್ಟೇಗೌಡರೆ, ನಾಟಾ ಕಡಿದಲ್ಲಿಗೇ ಬಂದಿದ್ದೇವೆ" ಎಂದರು.

ಹೋಗಿ ನೋಡುತ್ತಾರೆ: ಸೀತೆಮನೆ ಸಿಂಗಪ್ಪಗೌಡರ ಮಗ ಕೃಷ್ಣಪ್ಪನೂ, ಅವರ ಆಳು ಕಿಲಿಸ್ತರ ಜಾಕಿಯೂ, ಹತ್ತಿಪ್ಪತ್ತು ಜನಗಳೊಂದಿಗೆ ನಾಟಾ ರಕ್ಷಣೆಗೆ ಸಿದ್ಧರಾಗಿ ನಿಂತಿದ್ದಾರೆ! ಇವರ ನಾಯಿಗಳು ಅವರ ಸುತ್ತಲೂ, ನಡೆದ ಚೋರತನವನ್ನೋ ಅಥವಾ ಡಕಾಯತಿಯನ್ನೋ ಸೂಚಿಸಲೆಂಬಂತೆ, ಕಾತರತೆ ಯಿಂದ ಸುತ್ತಾಡುತ್ತಿವೆ! ಪುಟ್ಟಣ್ಣನನ್ನು ಕಂಡೊಡನೆ ಟೈಗರು ಓಡಿಬಂದು ಮೈಮೇಲೆ ಹಾರಿ ಹಾರಿ ಸಂತೋಷ ಪ್ರದರ್ಶನಮಾಡಿತು.

# ೧೮

# ಕಿಲಿಸ್ತರ ಜಾಕಿ ಮತ್ತು ಟೈಗರ್ ನಾಯಿ

ಹೂವಯ್ಯನನ್ನು ನೋಡಲು ಚಂದ್ರಯ್ಯಗೌಡರು ಮುತ್ತಳ್ಳಿಗೆ ಬರುತ್ತಾರೆಂದು ತಿಳಿದು, ಅವರನ್ನು ಅಲ್ಲಿ ಸಂಧಿಸಲು ಮನಸ್ಸಿಲ್ಲದೆ, ಸಿಂಗಪ್ಪಗೌಡರು ಬೆಳಗ್ಗೆ ಬಹು ಮುಂಚಿತವಾಗಿ ಎದ್ದು, ತಮ್ಮ ಮನೆಗೆ ಹೋಗಿದ್ದರು. ಅಲ್ಲಿಗೆ ಬಂದ ಓಬಯ್ಯನಿಂದ ತಾವು ಕಡಿಸಿದ್ದ ನಾಟಾ ಸಾಗಿಸುತ್ತಾರೆ ಎಂಬ ಸಂಗತಿಯನ್ನು ತಿಳಿದು, ಕೆಂಡವಾಗಿ, ತಮ್ಮ ಮಗ ಕೃಷ್ಣಪ್ಪನನ್ನೂ ತಮ್ಮ ಆಳು ಕಿಲಿಸ್ತರ ಜಾಕಿಯನ್ನೂ ಹತ್ತಿಪ್ಪತ್ತು ಜನಗಳೊಡನೆ ನಾಟಾ ರಕ್ಷಣೆಗೆ ಕಳುಹಿಸಿದರು. "ಹೆಣ ಉರುಳಿದರೂ ಚಿಂತೆಯಿಲ್ಲ, ನಾಟಾದ ಒಂದು ತುಂಡೂ ಅವರ ಕೈಸೇರಬಾರದು. ಬಂದಿದ್ದೆಲ್ಲ ಬರಲಿ, ನಾನು ನೋಡಿಕೊಳ್ಳುತ್ತೇನೆ. ಇದರಲ್ಲಿ ನನ್ನ ಮನೆ ಮಾರಿ ಹೋದರೂ ಹೋಗಲಿ!" ಎಂಬುದವರ ಭೀಷಣ ಆಜ್ಞೆಯೂ ಪ್ರತಿಜ್ಞೆಯೂ ಆಗಿತ್ತು. ಬಲಿಷ್ಠನೂ ಪುಂಡನೂ ಧೂರ್ತನೂ ಆಗಿದ್ದ ಕಿಲಿಸ್ತರ ಜಾಕಿ "ಹೆಣ ಉರುಳಿದರೂ ಚಿಂತೆಯಿಲ್ಲ" ಎಂದು ಸಿಂಗಪ್ಪಗೌಡರು ಕೋಪದಲ್ಲಿ ಹೇಳಿದ ಮಾತಿಗೆ "ಹೆಣ ಉರುಳಿಸಲೇ ಬೇಕು" ಎಂದು ಅರ್ಥಮಾಡಿಕೊಂಡು ದೃಢ ಮನಸ್ಸು ಮಾಡಿ ಹೊರಟಿದ್ದನು.

ಅವರೆಲ್ಲರೂ ನಾಟಾ ಕಡಿದಿದ್ದ ಸ್ಥಳವನ್ನು ಸೇರುತ್ತಿದ್ದ ಹಾಗೆಯೆ ನಾಯಿಗಳು ಹಂದಿಯನ್ನು ಅಟ್ಟಿಸಿಕೊಂಡು ಬಂದುವು. ಹಂದಿ ಗಾಯದಿಂದಲೂ ಆಯಾಸದಿಂದಲೂ ಮೆಲ್ಲಮೆಲ್ಲಗೆ ಓಡುತ್ತಿತ್ತು. ಕೃಷ್ಣಪ್ಪನು ತನ್ನ ಕೈಲಿದ್ದ ಬಂದೂಕಿನಿಂದ ಒಂದು ಗುಂಡು ಹೊಡೆದನು. ಹಂದಿ ಸತ್ತುಬಿದ್ದಿತು. ನಾಯಿಗಳು ಅದನ್ನು ಮುತ್ತಿ ಅಲುಬಿದುವು.

ಕೃಷ್ಣಪ್ಪನಿಗೆ ನಾಯಿಗಳು ಕಾನೂರಿನವೆಂದು ಗುರುತಾಯಿತು. ಕಿಲಿಸ್ತರ ಜಾಕಿಯ ಸಲಹೆಯಂತೆ ಎಲ್ಲರೂ ಸೇರಿ ಹಂದಿಯನ್ನು ಒಂದೆಡೆ ಸೊಪ್ಪಿನ ತುಂಡೆಗಳಿಂದ ಮುಚ್ಚಿದರು. ಅದರ ಮೇಲೆ ಕಂಬಳಿ ಹಾಸಿಕೊಂಡು, ಕೈಯಲ್ಲೊಂದು ದೊಣ್ಣೆ ಹಿಡಿದುಕೊಂಡು, ಕಿಲಿಸ್ತರ ಜಾಕಿ ಕುಳಿತುಕೊಂಡನು. ನಾಯಿಗಳು ಬಳಿ ಸಾರಲು ಪ್ರಯತ್ನಪಟ್ಟಾಗ ದೊಣ್ಣೆಯನ್ನು ಬೀಸಿ ಪ್ರಹರಿಸಿದನು. ಅವುಗಳೆಲ್ಲ ಅಲ್ಲಿಯೆ ಸುತ್ತಲೂ ಸುಳಿದಾಡಹತ್ತಿದುವು. ಪುಟ್ಟಣ್ಣ ಇತರರೊಡನೆ ಅಲ್ಲಿಗೆ ಬರಲು, ಟೈಗರು ದೂರು ಹೇಳುವ ರೀತಿಯಲ್ಲಿ ಅವನ ಮೈಮೇಲೆ ಹಾರಿ

ಹಾರಿ ಬಿದ್ದು, ಜಾಕಿ ಕೂತಿದ್ದ ಕಡೆಗೆ ಓಡಿಹೋಗಿ ನೋಡಿ, 'ಇಲ್ಲಿದೆ!' ಎನ್ನುವಂತೆ ಸೂಚಿಸಿ ಬಾಲವಳ್ಳಾಡಿಸುತ್ತಿತ್ತು.

ಅನುಭವಶಾಲಿಯಾಗಿದ್ದ ಪುಟ್ಟಣ್ಣನಿಗೆ ಕ್ಷಣಮಾತ್ರದಲ್ಲಿ ನಡೆದ ಸಂಗತಿಯೆಲ್ಲ ಗೊತ್ತಾಯಿತು: ತಮಗೆ ಕೇಳಿಸಿದ್ದ ಈಡು ಕೃಷ್ಣಪ್ಪ ಹೊಡೆದುದಾಗಿರಬೇಕು. ಹಂದಿ ಸತ್ತಿರಬೇಕು. ಅದನ್ನು ಅಲ್ಲಿದ್ದವರು ಅಡಗಿಸಿರಬೇಕು. ಏಕೆಂದರೆ ಹಂದಿ ಮುಂದೆ ಹೋಗಿದ್ದ ಪಕ್ಷದಲ್ಲಿ ನಾಯಿಗಳು ಅದನ್ನು ಹಿಂಬಾಲಿಸದೆ ಅಲ್ಲಿಯೆ ನಿಲ್ಲುತ್ತಿರಲಿಲ್ಲ. ನಾಯಿಗಳ ಉದ್ವೇಗವೂ ನಡವಳಿಕೆಯ ರೀತಿಯೂ ತನ್ನ ಊಹೆಯನ್ನೇ ಸಮರ್ಥಿಸುತ್ತಿತ್ತು. ಅಲ್ಲಿದ್ದವರ ಮುಖಭಂಗಿಯೂ ಏನೋ ಒಂದು ಗುಟ್ಟನ್ನು ಬಿಟ್ಟುಕೊಡಬಾರದೆಂಬಂತಿದೆ! ಎಲ್ಲರೂ ಮಾತು ನಿಲ್ಲಿಸಿ ಮುಂದೇನಾಗುವುದೋ ಎಂಬ ನಿರೀಕ್ಷಣೆಯಿಂದ ನಿಂತಿದ್ದಾರೆ.

ಇಷ್ಟೆಲ್ಲವೂ ಗೊತ್ತಾದರೂ ತಿಳಿಯದವನಂತೆ ಪುಟ್ಟಣ್ಣ ಮರ್ಯಾದೆಗಾಗಿ "ಕೃಷ್ಣಪ್ಪಗೌಡರಿಗೆ ನಮಸ್ಕಾರ!... ಏನು ಶಿಕಾರಿಗೆ ಬಂದಿರೇನು?" ಎಂದು ಕೇಳಿದನು. ಅವನ ಮುಖದಲ್ಲಿ ಹುಸಿನಗೆ ಮುಗುಳು ಬಿರಿಯುತ್ತಿತ್ತು.

ಕೃಷ್ಣಪ್ಪನೂ ವಿನೋದವಾಗಿಯೆ 'ನಮಸ್ಕಾರ' ಹೇಳಿ ಸಮ್ಮತಿಸಿದನು. ಅವನ ವಾಣಿಯಲ್ಲಿ ಮೂದಲಿಕೆ ತುಂಬಿತ್ತು. ಕಿಲಿಸ್ತರ ಜಾಕಿಯ ಕಡೆ ಒಂದು ಸಾರಿ ಫಕ್ಕನೆ ತಿರುಗಿ ನೋಡಿ, ಮತ್ತೆ ಪುಟ್ಟಣ್ಣನನ್ನು ಕುರಿತು "ಎರಡು ಈಡು ಕೇಳಿತಲ್ಲಾ ನಿಮ್ಮ ಕಡೆಯವರೇ ಹೊಡಿದಿದ್ದೇನು?" ಎಂದನು.

"ಹೌದು ನಾನೇ ಹೊಡೆದಿದ್ದು, ಒಂದು ಹಂದಿಗೆ. ಇತ್ತ ಮಖಾನೆ ಬಂತಪ್ಪ! ಇತ್ತಲಾಗಿ ಒಂದು ಈಡು ಕೇಳಿಸ್ತಲ್ಲಾ, ಯಾರು ಹೊಡೆದಿದ್ದು?"

"ಒಂದು ಈಡೇನೋ ಕೇಳಿಸಿತು ಈ ಕಡೆ. ಯಾರು ಹೊಡೆದರೋ ಗೊತ್ತಿಲ್ಲ."

"ನಮ್ಮ ನಾಯಿ ಇಲ್ಲೆ ಅವೆ?" ಎಂದು ಪುಟ್ಟಣ್ಣ ಜಾಕಿಯ ಕಡೆ ಸಂಶಯದಿಂದ ನೋಡಿದನು.

"ಈಗ ನೀವು ಬರೋಹೊತ್ತಿಗೆ ಬಂದುವಷ್ಟೆ!" ಎಂದು ಜಾಕಿ ದೊಣ್ಣೆ ಬೀಸಿ ತನ್ನ ಬಳಿಗೆ ಬರುತ್ತಿದ್ದ ನಾಯಿಗಳನ್ನು ಚೆದರಿಸಿದನು. ಟೈಗರು ದೂರ ಚಿಮ್ಮಿನಿಂತು ರೋಷದಿಂದ ಜಾಕಿಯ ಕಡೆಗೆ ಬಗುಳಿತು.

ಪುಟ್ಟಣ್ಣನೂ ಸೇರೆಗಾರರೂ ಸ್ವಲ್ಪ ಪೆಚ್ಚಾದರು. ಯಾರೂ ಇರುವುದಿಲ್ಲ, ನಾಟಾಗಳನ್ನು ಸರಾಗವಾಗಿ ಸಾಗಿಸಿಬಿಡಬಹುದೆಂದು ಭಾವಿಸಿದ್ದ ಅವರಿಗೆ, ಅಷ್ಟು ಜನರು ಅಲ್ಲಿದ್ದದ್ದು ಆಶ್ಚರ್ಯವಾಗಿ ಕಂಡಿತು. ಅದರಲ್ಲಿಯೂ ಕಿಲಿಸ್ತರ ಜಾಕಿ! ಆ ಪಟಿಂಗನು ಖೂನಿ ಮಾಡುವುದಕ್ಕೂ ಹೇಸುವುದಿಲ್ಲ! ಇವತ್ತು ನಾಟಾ ಸಾಗಿಸುವುದು ಅಸಾಧ್ಯ ಎಂದು ಮನದಲ್ಲಿಯೆ ನಿರ್ಣಯಿಸಿದರು.

ಗಂಡಾಗುಂಡಿಯಲ್ಲಿ ಪುಟ್ಟಣ್ಣನೇನು ಕಿಲಿಸ್ತರ ಜಾಕಿಗೆ ಕಡಿಮೆಯಾದವನಲ್ಲ. ಅವನಿಗೆ ಮನೆ, ಮಾರು, ಹೆಂಡಿರು, ಮಕ್ಕಳು, ಆಸ್ತಿ, ಭೂಮಿ — ಒಂದೂ ಇರಲಿಲ್ಲ. ಅವನು ಯಾವುದಕ್ಕೂ ಅಂಜಿದವನೂ ಅಲ್ಲ. ಬೇಟೆಗಳಲ್ಲಿ ಹುಲಿ ಹಂದಿಗಳೊಡನೆ ಭಯಂಕರ ಸನ್ನಿವೇಶಗಳಲ್ಲಿ ಸಿಕ್ಕಿ ಪಾರಾಗಿದ್ದನು. ಕಾಡಿನಲ್ಲಿ ರಾತ್ರಿ ಹಗಲೆನ್ನದೆ ಹೆಗಲಮೇಲೆ ಕೋವಿ ಹಾಕಿಕೊಂಡು, ಯಾವಾಗ ಬೇಕೆಂದರೆ ಆವಾಗ ಅಲೆದಾಡುತ್ತಿದ್ದನು. ಎಷ್ಟೋ ರಾತ್ರಿಗಳನ್ನು ಕಾಡಿನಲ್ಲಿ ನೆಲದಮೇಲೆ ನಿಶ್ಚಿಂತನಾಗಿ ಮಲಗಿ ಕಳೆದಿದ್ದನು. ಭಯವೆಂಬುದು ಅವನರಿಯದ ಅನುಭವವಾಗಿತ್ತು. ಹಂದಿಯ ಕೋರೆಯ ಗಾಯಗಳು ಅವನ ಮೈಮೇಲೆ ನಾಲ್ಕೈದಕ್ಕಿಂತ ಹೆಚ್ಚಾಗಿಯೆ ಇದ್ದುವು. ಕೆಚ್ಚಿದೆ ಸಾಹಸ ಧೂರ್ತತನಗಳಲ್ಲಿ 'ದೈತ್ಯ' ಸದೃಶನಾಗಿದ್ದನು. ಆದರೆ ಕಿಲಿಸ್ತರ ಜಾಕಿಯಂತೆ ಮಾನ ಮರ್ಯಾದೆಗಳನ್ನು ಬಿಟ್ಟು, ಕೆಟ್ಟ ಬಾಳು ಬಾಳಿದವನಾಗಿರಲಿಲ್ಲ. ಜಾಕಿ ಮಹಾ ಕುಡುಕ, ಕಟುಕ. ಅವನ ಕೆಚ್ಚೆದೆಗೆ ಅಜ್ಞಾನ ಅಸಂಸ್ಕೃತಿಗಳು ಮೂಲಾಧಾರವಾಗಿದ್ದುವು. ಅವನಲ್ಲಿ ಒಂದು ವಿಧವಾದ 'ಹಂದಿತನ' ವಿತ್ತು. ಪುಟ್ಟಣ್ಣನಲ್ಲಿದ್ದ ನಯವಾಗಲಿ ಸಂಸ್ಕೃತಿಯಾಗಲಿ ಗೌರವ ಬುದ್ಧಿಯಾಗಲಿ ಸ್ವಲ್ಪವೂ ಇರಲಿಲ್ಲ. ಹೆಮ್ಮರದ ಹೆಗ್ಗೊಂಬೆಗಳಂತೆ ಗಂಟುಗಂಟಾಗಿ ಮೊರಡಾಗಿದ್ದ ಅವನ ಕಾಲು ಕೈಗಳು, ಕರಿಯ ಮೈ, ಸಿಡುಬೆದ್ದು ಕುಣಿಕುಣಿಯಾಗಿದ್ದ ಮುಖ, ನೀಳವಾಗಿ ಪೊದೆಪೊದೆಯಾಗಿ ಮೃಗೀಯವಾಗಿದ್ದ ಮೀಸೆಗಳು, ಮೇಲ್ದುಟಿಯನ್ನು ಮೀಟಿ ಮೇಲೆದ್ದು ಕಾಣುತ್ತಿದ್ದ ಉಬ್ಬುಹಲ್ಲು, ಕೆಂಪು ವಸ್ತ್ರವನ್ನು ಸುತ್ತಿಕೊಂಡಿದ್ದ ಕಗ್ಗಲ್ಲಿನಂತಿದ್ದ ಬೋಳುತಲೆ, ಕರಾಳವಾದ ಹುಬ್ಬುಗಳು, ಕರ್ಕಶ ದೃಷ್ಟಿಯ ಮೆಳ್ಳೆಗಣ್ಣುಗಳು, ಚಪ್ಪಟೆಯಾಗಿದ್ದ ಸಿಂಡುಮೂಗು —ಇವುಗಳಲ್ಲಿ ಒಂದೊಂದೂ ಅವನ ಕ್ರೂರತೆ ಭೀಷಣತೆ ನಿರ್ದಾಕ್ಷಿಣ್ಯಗಳಿಗೆ ಸಾಕ್ಷಿಯಾಗಿದ್ದುವು. ಪುರಾಣಗಳ ಕಾಲವಾಗಿದ್ದರೆ ಅವನನ್ನು ಹಿಡಿಂಬ, ಬಕಾಸುರ, ವಿರಾಧ ಮೊದಲಾದ ರಾಕ್ಷಸರ ಜಾತಿಗೆ ಸೇರಿಸಿ ಬಿಡಬಹುದಾಗಿತ್ತು. ಮತಾಂತರದಿಂದ ಅವನಲ್ಲಿದ್ದ ರಾಕ್ಷಸೀಭಾವ ಒಂದಿನಿತೂ ಪಳಗಿರಲಿಲ್ಲ. ಅದಕ್ಕೆ ಬದಲಾಗಿ ಹಿಂದೂ ಸಮಾಜದ ಕಟ್ಟುಗಳಿಂದ ಪಾರಾಗಿ, ಹಳ್ಳಿಯಲ್ಲಿ ಕ್ರೈಸ್ತ ಸಮಾಜದ ಅಭಾವದಿಂದ ಅದರ ಸಂಯಮ ನಿಯಮಗಳಿಗೂ ಸಿಕ್ಕದೆ, ಸ್ವಚ್ಛಂದ ಜೀವನದಿಂದ ಇಮ್ಮಡಿ ಕಿರಾತನಾಗಿದ್ದನು. ತೀರ್ಥಹಳ್ಳಿಯಲ್ಲಿ ತನ್ನನ್ನು ಕ್ರೈಸ್ತಮತಕ್ಕೆ ಸೇರಿಸಿದ ಪಾದ್ರಿಯನ್ನೇ ಕೊಲ್ಲಲು ಹೋಗಿದ್ದನಂತೆ! ಮತಕ್ಕೆ ಸೇರಿದರೆ ಹಣ ಕೊಡುತ್ತೇನೆಂದು ಸುಳ್ಳಾಡಿ ಮೋಸಮಾಡಿದುದಕ್ಕಾಗಿ! ಹೆಚ್ಚಾಗಿ ಬ್ರಾಂದಿ ಕುಡಿಯಲು ಹಣ ದೊರಕುತ್ತದೆ ಎಂದೇ ಅವನು ಕ್ರೈಸ್ತಮತಕ್ಕೆ ಸೇರಿದ್ದನಂತೆ! ಆಮೇಲೆ ಪಾದ್ರಿಯಿಂದ ದುಡ್ಡು ಸಿಕ್ಕದಿರಲು, ಸಿಟ್ಟಿನಿಂದ ಅವನನ್ನು ತಿವಿಯಲು ಪ್ರಯತ್ನಿಸಿದ್ದ

ನಂತೆ. ಅಲ್ಲಿಂದ ಓಡಿಬಂದು ಸೀತೆಮನೆಯಲ್ಲಿ ಕೆಲವು ವರ್ಷಗಳಿಂದ ಸೇರಿಕೊಂಡಿದ್ದನು. ಸಿಂಗಪ್ಪಗೌಡರೂ ತಮ್ಮ ಬಲಕ್ಕೆ ಅಂಥವನೊಬ್ಬನು ಇರಬೇಕೆಂದು ಅವನಿಗೆ ಅನ್ನ ಹಾಕಿ ಇಟ್ಟುಕೊಂಡಿದ್ದರು.

ಎರಡು ಮೂರು ನಾಯಿಗಳು ಒಂದೆಡೆ ನೆಲದ ಮೇಲೆ ದಟ್ಟವಾಗಿ ಬಿದ್ದಿದ್ದ ತರಗೆಲೆಗಳಲ್ಲಿ ಏನನ್ನೊ ನೆಕ್ಕುತಿದ್ದುದನ್ನು ಕಂಡ ಸೋಮನು ಅಲ್ಲಿಗೆ ಹೋಗಿ ನೋಡಿ "ಅಯ್ಯಯ್ಯಯ್ಯೋ! ಏನು ರಯ್ತ ಕೋಡಿಹೋಯಿತ್ತು ಕಾಣಿ!... ಪುಟ್ಟೇಗೌಡ್ರೇ, ಹಂದಿ ಹೊಡ್ದಿಲ್ಲಂಬ್ರಲ್ಲಾ, ಇಲ್ಲಿ ಬಂದು ಕಾಣಿ" ಎಂದು ಕಳ್ಳರನ್ನು ಪತ್ತೆಮಾಡಿದ ಸಂಭ್ರಮದಿಂದ ಕೂಗಿದನು.

ಪುಟ್ಟಣ್ಣ, ರಂಗಪ್ಪ ಸೆಟ್ಟರು, ತಿಮ್ಮ, ಬೈರ ಎಲ್ಲರೂ ನೋಡಿದರು. ಕೃಷ್ಣಪ್ಪನ ಕಡೆಯವರು ಮಾತ್ರ ಒಬ್ಬರೂ ನಿಂತಲ್ಲಿಂದ ಅಲುಗಾಡದೆ ತಮ್ಮ ತಮ್ಮಲ್ಲಿಯೆ ಒಬ್ಬರ ಕಣ್ಣನ್ನೊಬ್ಬರು ನೋಡಿಕೊಂಡರು.

"ಕೃಷ್ಣಪ್ಪಗೌಡರೇ, ಇಲ್ಲಿ ಬನ್ನಿ." ಕರೆದನು ಪುಟ್ಟಣ್ಣ.

ಕೃಷ್ಣಪ್ಪ ಸ್ವಲ್ಪವೂ ಚಲಿಸದೆ "ಯಾಕೆ?" ಎಂದನು. ಅವನ ಧ್ವನಿಯಲ್ಲಿ ಪ್ರತಿಭಟನೆಯಿತ್ತು.

ಸೇರೆಗಾರರಿಗೆ ರೇಗಿ "ಯಾಕೆ ಅಂದ್ರೆ? ಇಲ್ಲಿ ಬಂದು ಕಾಣಿ! ಹಂದಿ ಹೊಡ್ದಿಲ್ಲ ಅಂತಾ ಸುಳ್ಳು ಹೇಳಿದರಾಯ್ತೇನು? ರಕ್ತ ಕೋಡಿ ಹರಿದಿತ್ತು. ಹಂದಿ ಬಿದ್ದಿತ್ತು, ಒದ್ದುಕೊಂಡಿತ್ತು, ಕಾಣ್ತದೆ!" ಎಂದರು.

ಹಂದಿಯಮೇಲೆ ಕಂಬಳಿ ಹಾಸಿಕೊಂಡು ಕೂತಿದ್ದ ಜಾಕಿಗೆ ಆವೇಶವೇರುತ್ತಿತ್ತು. ಆದರೆ ತಾನು ಕುಳಿತ ಜಾಗದಿಂದ ಎದ್ದರೆ ನಾಯಿಗಳು ಗುಟ್ಟನ್ನು ಬಯಲು ಮಾಡುತ್ತವೆ ಎಂಬ ಹೆದರಿಕೆಯಿಂದ ಅಲ್ಲಿಂದಲೇ "ಏನ್ರೀ, ನೀವು ಹೇಳೋದು? ಮಾನ ಮರ್ಯಾದೆ ಬಿಟ್ಟು ಮಾತಾಡ್ತೀರಿ! ನಿಮ್ಮ ಹಂದಿ ಹೆಣ ನಮಗ್ಯಾತಕ್ಕೆ? ಹೆಚ್ಚಿಗೆ ಮಾ..." ಕುಳಿತಿದ್ದ ಜಾಕಿ ದಡಕ್ಕನೆ ಬೆಚ್ಚಿಬಿದ್ದೆದ್ದು ದೂರ ಹಾರಿ ಚಿಮ್ಮಿ ನಿಂತನು. ಹಠಾತ್ತಾಗಿ ಅವನ ಕಂಬಳಿಯ ಪೀಠ ಚಲಿಸಿತ್ತು. ಅದರಡಿಯಲ್ಲಿದ್ದ ಸೊಪ್ಪುಗೊಂಬೆಗಳಲ್ಲಿ ಸದ್ದಾಯಿತು. ಕಂಬಳಿ ಉಸಿರೆಳೆದುಕೊಳ್ಳುವಂತೆ ಡೊಳ್ಳಾಗಿ ಮೇಲೆದ್ದು ಮುಂಬರಿಯಿತು! ನಾಯಿಗಳೆಲ್ಲ ಕ್ಷಣಾರ್ಧದಲ್ಲಿ ಅಲ್ಲಿಗೆ ನುಗ್ಗಿದುವು. ಕಂಬಳಿ ಕೆಳಗುರುಳಿತು; ಸೊಪ್ಪು ತೊಲಗಿತು. ಗಾಯದ ಹಂದಿ ಹೊರಳಾಡುವುದು ಕಾಣಿಸಿಕೊಂಡಿತು. ರೋಷದಿಂದಿದ್ದ ಟೈಗರಂತೂ ಅದರ ಕುತ್ತಿಗೆಗೆ ಬಲವಾಗಿ ಕಚ್ಚಿ ಅಲುಬುತ್ತಿತ್ತು. ಜಾಕಿ ಭಯದಿಂದ ದೂರ ಓಡಿದುದನ್ನು ಕಂಡೊಡನೆ ಪುಟ್ಟಣ್ಣನಿಗೆ ಗುಟ್ಟು ತಿಳಿದು ಬಂದೂಕನ್ನು ಗುರಿ ಮಾಡಿದ್ದನು. ಆದರೆ ಹಂದಿ ಓಡಿಹೋಗುವಂತಿರಲಿಲ್ಲವಾದ್ದರಿಂದ ಬಂದೂಕನ್ನು

ಕೆಳಗಿಟ್ಟು, ಜೇಬಿನಲ್ಲಿದ್ದ ದೊಡ್ಡ ಚೂರಿಯನ್ನು ತುಡುಕಿ ಹಿಡಿದು, ನಾಯಿಗಳ ನಡುವೆ ನುಗ್ಗಿ, ಹಂದಿಯ ಕುತ್ತಿಗೆಗೆ ತಿವಿದನು. ಬಿಸಿರಕ್ತದ ಬುಗ್ಗೆ ಚಲಕ್ಕನೆ ಹಾರಿ ಅವನ ಕೈ ಕೆಂಪಾಯಿತು!

ಕೃಷ್ಣಪ್ಪನ ಕಡೆಯವರು ಹಂದಿಯನ್ನು ಬೈತಿಡುವ ಅವಸರದಲ್ಲಿ ಅದು ಸತ್ತಿದೆಯೊ ಮೈಮರೆತಿದೆಯೊ ಎಂಬುದನ್ನೂ ಗಮನಿಸಿರಲಿಲ್ಲ.

ಹಂದಿ ಮೈಯೊದರಿಕೊಂಡು ತುಸು ಹೊತ್ತಿನಲ್ಲಿ ನಿಶ್ಚಲವಾಯಿತು. ಪುಟ್ಟಣ್ಣ ರಕ್ತಮಯವಾಗಿದ್ದ ಚೂರಿಯನ್ನು ನೆಲದ ಮೇಲೆಸೆದು, ದೂರ ನಿಂತು, ನಿಡು ಸುಯ್ಯುತ್ತಿದ್ದನು. ನಾಯಿಗಳು ಮಾತ್ರ ಇನ್ನೂ ಪ್ರಾಣಿಯ ಮೇಲಿದ್ದ ತಮ್ಮ ರೋಷವನ್ನೆಲ್ಲ ತೀರಿಸಿಕೊಳ್ಳುವುದರಲ್ಲಿ ಮಗ್ನವಾಗಿದ್ದುವು. ದೂರ ಓಡಿಹೋಗಿದ್ದ ಜಾಕಿ, ಹಂದಿಯ ಮೇಲಿದ್ದ ತನ್ನ ಹಕ್ಕನ್ನು ಮತ್ತೆ ಸ್ಥಾಪಿಸ ಲೋಸುಗ ರಭಸದಿಂದ ನುಗ್ಗಿಬಂದು, ನಾಯಿಗಳನ್ನು ದೊಣ್ಣೆಯಿಂದ ಚೆದರಿಸಿ, ಪಕ್ಕದಲ್ಲಿ ನಿಂತನು.

ಸೇರೆಗಾರರು "ಏ, ನಾಯಿ ಯಾಕೆ ಅಟ್ಟೀಯೋ?" ಎಂದು ಕೂಗಿದರು.

ಜಾಕಿ "ಏನ್ರೀ! 'ಏ ಗೀ' ಅಂತೀರಿ! ನಿಮ್ಮ ಹೆಂಡ್ತೀಗೆ ಹೇಳಿ 'ಏ' ಅಂತಾ..." ಎಂದವನೆ ತನ್ನ ಕಡೆಯವರನ್ನು ಕುರಿತು "ಬನ್ರೋ ಇಲ್ಲಿ. ಹಂದಿ ಕಾಲ್ಕಟ್ಟಿ ಹೊರಿ" ಎಂದು ಭೀಷಣ ಧ್ವನಿಯಿಂದ ಅಪ್ಪಣೆ ಮಾಡಿದನು. ಸೇರೆ ಗಾರರೂ ತಮ್ಮವರಿಗೆ ಹಾಗೆಯೇ ಅಪ್ಪಣೆ ಮಾಡಿದರು.

"ಮೈಮೇಲೆ ಬಂದ್ರೆ, ಹೆಣಾ ಉರುಳಿಸಿಬಿಡ್ತೀನಿ" ಎಂದು ಜಾಕಿ ದೊಣ್ಣೆ ಯನ್ನು ಭದ್ರಮುಷ್ಟಿಯಿಂದ ಹಿಡಿದು ನಿಂತನು.

ಅನಾಹುತವಾಗುತ್ತದೆ ಎಂದು ಅಳುಕಿ, ಕೃಷ್ಣಪ್ಪ "ಜಾಕೀ, ಜಾಕೀ, ಇಲ್ಲಿ ಬಾರೋ" ಎಂದು ಕರೆದನು.

ಜಾಕಿ "ಬಿಡೀ ಸ್ವಾಮಿ. ಹಂದಿ ಹೋಗ್ಬೇಕು, ಇಲ್ದಿದ್ರೆ ನನ್ನ ಹೆಣ ಹೋಗ ಬೇಕು" ಎಂದವನು ಕೃಷ್ಣಪ್ಪನ ಕಡೆಗೆ ತಿರುಗಿ ಕೂಡ ನೋಡಲಿಲ್ಲ. ಟೈಗರು ದೂರ ನಿಂತು ಜಾಕಿಯನ್ನು ರೋಷದೃಷ್ಟಿಯಿಂದ ನೋಡುತ್ತಿತ್ತು. ಸೇರೆಗಾರ ರೇನೋ ಅಪ್ಪಣೆ ಮಾಡಿದರು. ಆದರೆ ಜಾಕಿಯ ದೊಣ್ಣೆಗೆ ಹೆದರಿ ಯಾರೂ ಮುಂದುವರಿಯಲಿಲ್ಲ.

ಬಾಡುಗಳ್ಳ, ಡೊಳ್ಳು ಹೊಟ್ಟೆಯ ಸೋಮನು ಮಾತ್ರ ಮುಂದೆ ಸಾಗಿದನು. ಅವನು ಮುಂದುವರಿದುದು ಮಾಂಸಲೋಭದಿಂದಲೇ ಹೊರತು ಧೈರ್ಯ ದಿಂದಲೂ ಅಲ್ಲ, ಶಕ್ತಿಯಿಂದಲೂ ಅಲ್ಲ. ಅವೆರಡರಲ್ಲಿ ಅಲ್ಲಿದ್ದವರೆಲ್ಲರೂ ಅವನಿಗಿಂತ ಮೇಲಾಗಿದ್ದರು.

ಬರುತ್ತಿದ್ದ ಸೋಮನನ್ನು ಕಂಡು ಜಾಕಿ "ಬೇಡ, ಬೇಡ; ದೂರ ಹೋಗು!" ಎಂದು ಗರ್ಜಿಸಿದನು.

ಸೋಮನು ಲಕ್ಷಿಸಲಿಲ್ಲ. ಅವನ ಮನಸ್ಸಿನಲ್ಲಿ ಜಾಕಿ ಹೆದರಿಸುತ್ತಾನೆಯೆ ಹೊರತು ಇಷ್ಟು ಜನರ ಮಧ್ಯೆ ನಿಜವಾಗಿಯೂ ತನ್ನನ್ನು ಹೊಡೆಯುವದಿಲ್ಲ ಎಂದು ಊಹಿಸಿದ್ದನು.

ಆದರೆ ಊಹೆ ತಪ್ಪಾಯಿತು. ಜಾಕಿ ದೊಣ್ಣೆಯನ್ನು ಬಲವಾಗಿ ಬೀಸಿದನು. ಸೋಮನು ಮೈಗೆ ಬೀಳುವ ಪೆಟ್ಟನ್ನು ನಿವಾರಿಸಲು ಕೈ ಎತ್ತಿದನು. ಪೆಟ್ಟು ಎಡಗೈಗೆ ತಗುಲಿ "ಅಯ್ಯೋ, ಸತ್ತೇ!" ಎಂದು ಅರಚಿಕೊಂಡು ಕುಸಿದು ಬಿದ್ದನು.

ಸೇರೆಗಾರರು ಕ್ರೋಧದಿಂದಲೂ ಭಯದಿಂದಲೂ ಗಟ್ಟಿಯಾಗಿ "ಹಿಡಿ! ಟೈಗರ್! ಹಿಡಿ!" ಎಂದು ಕೂಗಿದರು.

ಸೋಮನು ಬಿದ್ದೊಡನೆಯೆ ಪುಟ್ಟಣ್ಣ ಕೃಷ್ಣಪ್ಪ ಎಲ್ಲರೂ "ಜಾಕೀ! ಜಾಕೀ!" ಎಂದು ಗದರಿಸುತ್ತ ಅವನಿದ್ದಲ್ಲಿಗೆ ಬರುತ್ತಿದ್ದರು.

ಸೇರೆಗಾರರು "ಹಿಡಿ! ಟೈಗರ್! ಹಿಡಿ!" ಎಂದು ಕೂಗಿದೊಡನೆಯೆ, ಮೊದಲಿನಿಂದಲೂ ಜಾಕಿಯ ಮೇಲೆ ರೋಷವಿಟ್ಟಿದ್ದ ಆ ದೊಡ್ಡ ಜಾತಿನಾಯಿ ಬಾಣದಂತೆ ಚಿಮ್ಮಿ ಜಾಕಿಯ ಮೇಲೆ ನುಗ್ಗಿತು. ಅವನು ಸ್ವಲ್ಪ ಹಿಂದಕ್ಕೆ ಹಾರಿ ನಿಂತು, ದೊಣ್ಣೆಯನ್ನು ಬಲವಾಗಿ ಬೀಸಿ, ಅದರ ತಲೆಗೆ ಹೊಡೆದನು. ನಾಯಿ ಕೂಗಿಕೊಳ್ಳುತ್ತ ಕೆಳಗೆ ಬಿತ್ತು.

"ಕೊಂದ್ಯೇನೋ ನಾಯಿಾನ!" ಎಂದು ಪುಟ್ಟಣ್ಣ ದುಃಖೋದ್ವೇಗದ ಧ್ವನಿಯಿಂದ ಕೂಗಿ, ಓಡಿ, ಕೆಳಗೆ ಬಿದ್ದಿದ್ದ ನಾಯಿಯ ಬಳಿ ಕುಳಿತು ಬಾಗಿದನು.

ಕೃಷ್ಣಪ್ಪ "ನಿನಗೇನು ಪಿತ್ತ ಕೆದರಿದೆಯೇನೋ?" ಎಂದು ಗದರಿಸುತ್ತ ಜಾಕಿಯ ಕೈಯಿಂದ ದೊಣ್ಣೆ ಕಸುಕೊಂಡನು.

ಟೈಗರ್ ನಿಶ್ಚಲವಾಗಿತ್ತು. ತಲೆಗೆ ಬಿದ್ದ ಪೆಟ್ಟಿನಿಂದ ಬುರುಡೆ ಬಿರಿದು ಬಿಳಿಯ ರೇಷ್ಮೆಯಂತಿದ್ದ ಅದರ ನುಣ್ಗೂದಲು ನೆತ್ತರಿನಿಂದ ತೊಯ್ದು ಕೆಂಪಾಗಿತ್ತು. ಮೂಗು ಬಾಯಿಗಳಲ್ಲಿಯೂ ರಕ್ತ ಹೊರಟಿತ್ತು. ಜೀವವಿರುವ ಸೂಚನೆ ಒಂದಿನಿತೂ ಇರಲಿಲ್ಲ. ತೆರೆದ ಗಾಜುಗಣ್ಣುಗಳು ಪುಟ್ಟಣ್ಣನ ಕರುಳಿನಲ್ಲಿ ಉರಿ ಹೊತ್ತಿಸುತ್ತಿದ್ದುವು. ಅವನು ಅದರ ಮೈ ಸವರಿದನು. 'ತೋಪಿ' ಯಿಂದ ಗಾಳಿ ಬೀಸಿದನು. "ಟೈಗರ್! ಟೈಗರ್!" ಎಂದು ಕರೆದನು. "ಬೈರಾ! ಬೈರಾ! ನೀರು ತಗೊಂಡುಬಾರೋ" ಎಂದು ಅಳುದನಿಯಿಂದ ಹೇಳಿದನು. ಬೈರ ಓಡಿದನು.

ಸೇರೆಗಾರರೂ ಕೃಷ್ಣಪ್ಪನೂ ಸೋಮನನ್ನು ಎತ್ತಿ ಕೂರಿಸಿ, ಅವನ ಕೈಗೆ ಬಟ್ಟೆ ಸುತ್ತುತ್ತಿದ್ದರು. ಉಳಿದವರಲ್ಲಿ ಕೆಲವರು ಪುಟ್ಟಣ್ಣನ ಸುತ್ತಲೂ, ಮತ್ತೆ ಕೆಲವರು ಸೋಮನ ಸುತ್ತಲೂ, ಗುಂಪುಕಟ್ಟಿಕೊಂಡು ಮೌನವಾಗಿದ್ದರು. ಜಾಕಿ ಮಾತಾಡದೆ ದೂರ ಹೋಗಿ ನಿಂತಿದ್ದನು. ಅವನಲ್ಲಿ ಸ್ವಲ್ಪ ವಿವೇಕೋದಯ ವಾದಂತಿತ್ತು. ರೋಷಾವೇಶಗಳಿಗೆ ಬದಲಾಗಿ ಅವಮಾನ ಪಶ್ಚಾತ್ತಾಪಗಳು ಮೊಳೆದೋರಿದ್ದುವು. ಹೆಡೆಬಿಚ್ಚಿದ್ದ ಅವನ ಮೃಗೀಯ ಧೈರ್ಯ ಹೆಡೆಮುಚ್ಚಿ ಅಧೀರವಾಗಿತ್ತು.

ಧೈರ್ಯಗಳಲ್ಲಿ ಎರಡು ವಿಧಗಳಿವೆ. ಒಂದನೆಯದು ಮೃಗೀಯ ಮತ್ತು ತಾಮಸ. ಎರಡನೆಯದು ದೈವಿಕ ಮತ್ತು ಸಾತ್ವಿಕ. ತಾಮಸ ಧೈರ್ಯ ರಾಗಮೂಲವಾದುದು; ಕ್ಷಣಿಕ ಉದ್ರೇಕಗಳಿಂದ ಉದ್ದೀಪನವಾದುದು, ಅವಿವೇಕವಾದುದು. ಸಾತ್ತ್ವಿಕ ಧೈರ್ಯ ನೀತಿಮೂಲವಾದುದು. ಮೊದ ಲನೆಯದು ಹುಲ್ಲುಬೆಂಕಿಯಂತೆ; ಎರಡನೆಯದು ಕಲ್ಲಿದ್ದಲ ಬೆಂಕಿಯಂತೆ. ಮೃಗೀಯಧೈರ್ಯ ದೇಹಬಲದ ಮೇಲೆ ನಿಂತಿದೆ. ದೈವಿಕಧೈರ್ಯ ಆತ್ಮ ಬಲದ ಮೇಲೆ ನಿಂತಿದೆ. ಮೃಗೀಯಧೈರ್ಯ ತನಗಿಂತಲೂ ಬಲವತ್ತರವಾದ ಪ್ರತಿಭಟನೆಯಿಂದ ಕುಗ್ಗಿಹೋಗುತ್ತದೆ. ಸಾತ್ತ್ವಿಕ ಧೈರ್ಯ ಕಷ್ಟ ಸಂಕಟ ಪ್ರತಿಭಟನೆಗಳಿಂದ ಮತ್ತಿನಿತು ಹಿಗ್ಗಿ ಉಜ್ವಲವಾಗುತ್ತದೆ. ಮೊದಲನೆಯದಕ್ಕೆ ಮರಣಭಯವಿದೆ; ಎರಡನೆಯದಕ್ಕೆ ಅದಿಲ್ಲ. ಮೊದಲನೆಯದು ಕೇಡಿ ಯಾಗಿರುವ ಮಾರುವೇಷದ ಹೇಡಿತನ. ಎರಡನೆಯದು ಶಿಲುಬೆಗೇರುವ ಯೇಸುಕ್ರಿಸ್ತನ ಅಪಾರ ಸಾಮರ್ಥ್ಯ. ತಾಮಸಧೈರ್ಯ ಉದ್ರೇಕ ಕೊನೆಗೊಂಡೊ ಡನೆಯೆ ತಲೆ ಬಾಗುತ್ತದೆ. ಆದ್ದರಿಂದಲೆ ಜಾಕಿ ಮೂಕನಾಯಿಯನ್ನು ಕೊಲೆ ಗೈದು ತನ್ನವರಿಂದಲೂ ತಿರಸ್ಕೃತನಾಗಿ ದೂರ ನಿಂತಿದ್ದ.

ಬೈರನು ಒಂದು ದೊಡ್ಡ ಎಲೆಯಲ್ಲಿ ಸರುವಿನಿಂದ ನೀರು ತಂದು ಪುಟ್ಟಣ್ಣನ ಹೇಳಿಕೆಯಂತೆ ನಾಯಿಯ ತಲೆಯಮೇಲೆ ಸ್ವಲ್ಪ ನೀರು ಹಾಕಿದನು. ಅದರ ಬಾಯಿಗಷ್ಟು ನೀರು ಹಾಕಬೇಕೆಂದು ಪುಟ್ಟಣ್ಣನು ಪ್ರಯತ್ನಪಟ್ಟನು. ಆದರೆ ಬಾಯಿ ತೆರೆಯಲಿಲ್ಲ. ಅವನಿಗಿದ್ದ ದೂರದಾಸೆಯೂ ಸಿಡಿದೊಡೆದು, ನಾಯಿ ಬದುಕುತ್ತದೆಯೋ ಸಾಯುತ್ತದೆಯೋ ಎಂಬ ಸಂದೇಹ ಜನ್ಯವಾಗಿದ್ದ ಉದ್ವೇಗ ಕೊನೆ ಮುಟ್ಟಿ, ರೋಷ ಹೊಗೆಯಾಡಿತು. ಭೀಷಣನಾದನು.

ಬೇಟೆಗಾರನಿಗೆ ನಾಯಿಗಳೆಂದರೆ ಪ್ರಾಣ. ಅದರಲ್ಲಿಯೂ ಚೆನ್ನಾಗಿ ಷಿಕಾರಿ ಮಾಡುವ ನಾಯಿಗಳನ್ನು ಬಂಧುಮಮತೆಯಿಂದ ಕಾಣುತ್ತಾನೆ. ಅವುಗಳಿಗೂ ತನ್ನಂತೆಯೆ ವ್ಯಕ್ತಿತ್ವವಿದೆ ಎಂಬುವುದರಲ್ಲಿ ಅವನಿಗೆ ಸ್ವಲ್ಪ ಮಾತ್ರವೂ ಸಂದೇಹ

ವಿರುವುದಿಲ್ಲ. ನಾಯಿಗಳಿಗಾಗುವ ಅಪಾಯವೂ ತನ್ನ ಅಂಗಗಳಿಗಾದ ಅಪಾಯ ದಂತೆ. ಶಿವಾಜಿ ತನಗೆ ಬಲಗೈಯಂತಿದ್ದು ಪ್ರೀತಿಪಾತ್ರನಾಗಿದ್ದ ತಾನಾಜಿಯ ಮರಣವಾರ್ತೆಯನ್ನು ಕೇಳಿದಾಗ ಎಷ್ಟು ಶೋಕಪಟ್ಟನೊ ಅಷ್ಟೇ ಶೋಕ ವಾಗುತ್ತದೆ, ಬೇಟೆಗಾರನಿಗೆ ತನ್ನ ನಚ್ಚಿನ ನಾಯಿಯ ಸಾವಿನಿಂದ!

ಟೈಗರ್ ಮೃತಪಟ್ಟುದು ನಿಶ್ಚಯವಾದೊಡನೆಯೆ ಪುಟ್ಟಣ್ಣ ರೋಷ ಭೀಷಣ ನಾಗಿ, ಮುಯ್ಯಿ ತೀರಿಸಿಕೊಳ್ಳುವ ಛಲದಿಂದ ಮೇಲೆದ್ದನು. ಹನಿತುಂಬಿದ್ದ ಅವನ ನೇತ್ರಗಳು ವಿಸ್ಫಾರಿತವಾಗಿ ಆರಕ್ತವಾದುವು. ಕ್ರೋಧಾವೇಗದಿಂದ ತುಟಿಗಳು ಕಂಪಿಸಿದುವು. ಮುಖ ಕರಾಳಕರ್ಕಶವಾಯಿತು. ನರಗಳೂ ಮಾಂಸ ಖಂಡಗಳೂ ಬಿಗಿದು ದೃಢನಿಶ್ಚಯತೆ ಮುಖದ ರೇಖೆ ರೇಖೆಗಳಲ್ಲಿಯೂ ಪ್ರಸ್ಫುಟವಾಗಿತ್ತು. ಹಂದಿಯ ರಕ್ತದಿಂದ ಮೊದಲೇ ಕೆಂಪಾಗಿದ್ದ ಅವನ ಕೈ ಮೈಗಳು ಅವನ ಸ್ಥಿತಿಯನ್ನು ದ್ವಿಗುಣಿತ ರೌದ್ರವನ್ನಾಗಿ ಮಾಡಿದುವು. ಅಲ್ಲಿದ್ದ ವರೆಲ್ಲರೂ ಮುಂದೇನೋ ಅನಾಹುತವಾಗುವುದೆಂದು ಆಶಂಕೆಯಿಂದ ಭೀತ ರಾದರು.

ಪುಟ್ಟಣ್ಣ "ಎಲ್ಲಿ ಆ ಸೂಳೇಮಗ?" ಎಂದು ಕೂಗಿ ಹಿಂತಿರುಗಿ ನೋಡಿದನು. ಸಿಟ್ಟಿನಿಂದ ಅವನ ಮೂಗು ಬುಸುಗುಡುತ್ತಿತ್ತು. ನಿಡುಸುಯ್ಲುಗಳಿಂದ ಎದೆ ಉಬ್ಬಿಯುಬ್ಬಿ ಬೀಳುತ್ತಿತ್ತು.

ಸೇರೆಗಾರರು "ಸ್ವಲ್ಪ ತಾಳಿನಿ, ಪುಟ್ಟೆಗೌಡ್ರೆ!" ಬೇಡುವ ದನಿಯಿಂದ ಹೇಳಿದರು.

"ಬಿಡ್ರಿ! ನನಗೆ ಹೆಂಡ್ರಿಲ್ಲ, ಮಕ್ಕಳಿಲ್ಲ... ಅವನ್ನ ಗುಂಡಿನಲ್ಲಿ ಹೊಡೆದು ...ಗಲ್ಲಾದ್ರೆ ಆಗ್ಲಿ..." ಎಂದು ಪುಟ್ಟಣ್ಣ ಬಂದೂಕು ಬಿಟ್ಟಿದ್ದಲ್ಲಿಗೆ ನುಗ್ಗಿದನು.

"ತಾಳಿನಿ, ಪುಟ್ಟೆಗೌಡ್ರೆ!..." "ಸ್ವಲ್ಪ ತಾಳು, ಪುಟ್ಟಣ್ಣ!..." "ಬೇಡ, ಬೇಡ, ನಿಮ್ಮ ದಮ್ಮಯ್ಯ..." "ತಿಮ್ಮಾ, ಕೋವಿ ತಗೊಂಡು ಹೋಗೋ!..." ಎಂದು ಅನೇಕ ಉದ್ವೇಗದ ಭಯದ ವಾಣಿಗಳು ಸುತ್ತಲೂ ಕೇಳಿಸಿದುವು.

ಪುಟ್ಟಣ್ಣ ತಾನು ಇಟ್ಟಿದ್ದಲ್ಲಿ ಬಂದೂಕನ್ನು ಕಾಣದೆ ಇನ್ನಷ್ಟು ಕ್ರೋಧಾಂಧ ನಾಗಿ "ಕೋವಿ ಕೊಡ್ತೀರೊ ಇಲ್ಲೊ!" ಎಂದು ಗರ್ಜಿಸಿ ಅಲ್ಲಿದ್ದವರ ಕಡೆ ಕೆಂಗಣ್ಣಾಗಿ ನೋಡಿದನು. ಕೋವಿ ಯಾರ ಬಳಿಯೂ ಇರಲಿಲ್ಲ. ಹಳೆಪೈಕದ ತಿಮ್ಮ ಅದನ್ನು ತೆಗೆದುಕೊಂಡು ದೂರ ದೂರ ಹೋಗುತ್ತಿದ್ದನು. ಪುಟ್ಟಣ್ಣ "ನಿಲ್ತೀಯೋ ಇಲ್ಲೋ?" ಎಂದು ಹುಚ್ಚು ಹಿಡಿದವನಂತೆ ಆರ್ಭಟಿಸಿ ಅವನ ಕಡೆಗೆ ನುಗ್ಗಿದನು. ತಿಮ್ಮ ಭಯಗ್ರಸ್ತನಾಗಿ ಗೊಂಬೆಯಂತೆ ನಿಂತುಬಿಟ್ಟನು. ನಿಮಿಷಾರ್ಧದಲ್ಲಿಯೆ ಬಂದೂಕು ಪುಟ್ಟಣ್ಣನ ಕೈಲಿತ್ತು.

"ಓಡೋ, ಜಾಕಿ!"..."ಜಾಕಣ್ಣಾ, ಓಡು..." "ಅಯ್ಯೋ ಅಯ್ಯೋ, ಬ್ಯಾಡ, ಬ್ಯಾಡ...ದಮ್ಮಯ್ಯಾ ಬಿಡಿ..." ಎಂದು ಎಲ್ಲರೂ ಆರ್ತನಾದ ಮಾಡತೊಡಗಿದರು. ಜಾಕಿ ಮಾತ್ರ ನಿಂತಲ್ಲಿಂದ ಅಲುಗಾಡಲಿಲ್ಲ.

ಪುಟ್ಟಣ್ಣ ಬಂದೂಕನ್ನು ತುಡುಕಿ ಹಿಡಿದು, ಜಾಕಿ ನಿಂತಿದ್ದ ದಿಕ್ಕಿಗೆ ತಿರುಗಿದೊಡನೆಯೆ ಸೇರೆಗಾರರೂ ಕೃಷ್ಣಪ್ಪನೂ "ಬೇಡ! ಬೇಡ!" ಎಂದು ಕೂಗುತ್ತ ಅವನನ್ನು ಬಲವಾಗಿ ಮುತ್ತಿದರು.

"ನನ್ನ ಕೊಂದು ಮುಂದೆ ಹೋಗಬೇಕು ನೀವು" ಎಂದು ಸೇರೆಗಾರರು ಕೋವಿಯನ್ನು ಭದ್ರಮುಷ್ಟಿಯಿಂದ ಹಿಡಿದರು. ಅದರ ನಳಿಗೆ ಅವರ ಎದೆಗೆ ತಾಗಿತ್ತು. ಜನಗಳ ಬೊಬ್ಬೆ, ನಾಯಿಗಳ ಕೂಗಿನಿಂದ ಕಾಡೆಲ್ಲ ಕಿವುಡಾಗಿತ್ತು.

ಬಿಡಿಸಿಕೊಳ್ಳಲು ಮಾಡಿದ ಪ್ರಯತ್ನ ವಿಫಲವಾಗಿ, ಪುಟ್ಟಣ್ಣ ಮುಷ್ಟಿಯನ್ನು ಸಡಿಲಿಸಿ ಕೋವಿಯನ್ನು ಸೇರೆಗಾರರ ಕೈಯಲ್ಲಿಯೆ ಬಿಟ್ಟು, ಮತ್ತೆ ನಾಯಿಯ ಬಳಿ ಹೋಗಿ ಕುಳಿತು, ಬಿಕ್ಕಿ ಬಿಕ್ಕಿ ಅಳತೊಡಗಿದನು. ರೋಷವೆಲ್ಲ ರೋದನವಾಯಿತು: ಜಾಕಿಯ ನೆತ್ತರಿಗೆ ಬದಲಾಗಿ ತನ್ನ ಕಣ್ಣೀರನ್ನೇ ನಾಯಿಯ ಮೇಲೆ ಸುರಿದನು. ಕಾಡೆಲ್ಲ ಮಳೆ ಬಂದು ಬಿಟ್ಟಂತೆ ನೀರವವಾಗಿತ್ತು.

ಸ್ವಲ್ಪ ಹೊತ್ತಾದ ಮೇಲೆ ದೈನ್ಯತಾ ಸೂಚಕವಾದ ದುಃಖಧ್ವನಿಯಿಂದ ಪುಟ್ಟಣ್ಣ "ಬೈರಾ ಇಲ್ಲಿ ಬಾರೋ" ಎಂದನು. ಬೈರ ಬಳಿಗೆ ಬರಲು ಟೈಗರಿನ ಶವವನ್ನು ನಿರ್ದೇಶಿಸಿ "ಹೊತ್ತುಕೋ" ಎಂದನು. ಬೈರ ನಾಯಿಯನ್ನೆತ್ತಿ ಬೆನ್ನಿನ ಮೇಲೆ ಹಾಕಿಕೊಂಡನು. ಹಿಂದೆ ಅನೇಕ ಸಾರಿ ಸತ್ತ ಕರುಗಳನ್ನು ಹಾಗೆಯೆ ಹೊತ್ತಿದ್ದ ಅವನಿಗೆ ಅದೊಂದು ಶ್ರಮವಾಗಿರಲಿಲ್ಲ.

ಪುಟ್ಟಣ್ಣ ಕಣ್ಣೊರಸಿಕೊಳ್ಳುತ್ತ ಮೇಲೆದ್ದು, ಸೇರೆಗಾರರ ಬಳಿಗೆ ಬಂದು ಅತ್ಯಂತವಾದ ಶಾಂತ ನಮ್ರವಾಣಿಯಿಂದ ಮೃದುವಾಗಿ "ಕೋವಿ ಕೊಡಿ, ಸೇರೆಗಾರ್‍ರೇ" ಎಂದು ಕೈ ನೀಡಿದನು. ಹಿಂದೆ ರೋಷಮೂರ್ತಿಯಾಗಿದ್ದವನು ಈಗ ದುಃಖಮೂರ್ತಿಯಾಗಿದ್ದನು. ಆದರೂ ಸೇರೆಗಾರರಿಗೆ ಕೋವಿಯನ್ನು ನೀಡಲು ಧೈರ್ಯ ಬರದೆ "ನಾನೇ ತರುತ್ತೇನೆ" ಎಂದರು.

"ಕೊಡಿ, ಆ ಪಾಪೀನ ನಾನ್ಯಾಕೆ ಕೊಲ್ಲಲಿ. ಬದುಕಿ ಹಾಳಾಗಲಿ" ಎಂದನು.

ಸೇರೆಗಾರರು ಬಂದೂಕನ್ನು ಕೈಗೆ ನೀಡಲು ಅದರ ನಳಿಗೆಯನ್ನು ಬಿಚ್ಚಿ ನೋಡಿದನು. ತೋಟಾಗಳಿರಲಿಲ್ಲ.

"ತೋಟಾ ಎಲ್ಲಿ? ಕೊಡಿ."

"ಇಲ್ಲ, ನಾ ತೆಗೀಲಿಲ್ಲ."

ತಿಮ್ಮ ಹಿಂದಿನಿಂದ "ನಾನಾಗ್ಲೆ ತೆಗ್ದಿಟ್ಕೊಂಡಿದ್ದೆ! ಹಿಡೀರಿ" ಎಂದು

ಎರಡು ಕೆಂಬಣ್ಣದ ತೋಟಾಗಳನ್ನು ನೀಡಿದನು. ಪುಟ್ಟಣ್ಣ ಅವುಗಳನ್ನು ನಳಿಗೆಗೆ ಹಾಕದೆ, ಜೇಬಿಗೆ ಹಾಕಿಕೊಂಡು, ನಾಯಿಯ ಹೆಣವನ್ನು ಹೊತ್ತು ನಿಂತಿದ್ದ ಬೈರನಿಗೆ ತಲೆಯಲ್ಲಾಡಿಸಿ ಹೊರಡಲು ಸನ್ನೆ ಮಾಡಿ, ಬಂದೂಕನ್ನು ಹೆಗಲ ಮೇಲಿಟ್ಟುಕೊಂಡು ಹೊರಟನು. ನಾಯಿಗಳೆಲ್ಲ ಮೌನವಾಗಿ ಅವನ ಹಿಂದೆ ನಡೆದುವು. ಬೈರನು ಹೆಜ್ಜೆಯಿಟ್ಟಂತೆಲ್ಲ ಅವನ ಬೆನ್ನುಗಡೆ ಜೋಲು ಬಿದ್ದಿದ್ದ ಟೈಗರಿನ ತಲೆ ತೂಗಾಡುತ್ತಿತ್ತು. ಕೆಲವು ನಾಯಿಗಳು ಆಗಾಗ ಅದರಕಡೆ ಬೆರಗಾಗಿ ನೋಡುತ್ತಿದ್ದುವು. ಟೈಗರೂ ಹಿಂದೆ ಅನೇಕ ಸಾರಿ ಬೈರನು ಹಾಗೆಯೇ ಹೊತ್ತಿದ್ದ ಕಾಡುಪ್ರಾಣಿಗಳ ಹೆಣವನ್ನು ಹಾಗೆಯೇ ನೋಡಿತ್ತು. ಆದರೆ ಆ ನೋಟದಲ್ಲಿ ದಿಗ್ವಿಜಯದ ಸೂಚನೆಯಿರುತ್ತಿತ್ತು.

ಅಪರಾಹ್ಣವಾಗಿದ್ದರೂ ಆ ದಟ್ಟವಾದ ಕಾಡಿನಲ್ಲಿ ತಂಪುನೆಳಲು ಅಕ್ಷತವಾಗಿತ್ತು. ಎಲ್ಲಿಯಾದರೂ ಒಂದೊಂದೆಡೆ ಮಾತ್ರ ಬಿಸಿಲು ಚೆಲ್ಲಿದ್ದಿತು. ಸೇರೆಗಾರರೂ ಕೃಷ್ಣಪ್ಪನೂ ಮತ್ತುಳಿದವರೆಲ್ಲರೂ ಮಾತಾಡದೆ ನಿಂತು ನೋಡಿದರು. ಹೆಗಲಮೇಲೆ ಬಂದೂಕು ಹೊತ್ತಿದ್ದ ಪುಟ್ಟಣ್ಣ ಮುಂದೆ, ನಾಯಿಯ ಬಿಳಿಯ ಹೆಣವನ್ನು ಹೊತ್ತಿದ್ದ ಬೈರ ಹಿಂದೆ, ಅವರ ಸುತ್ತಲೂ ಸಣ್ಣ ದೊಡ್ಡ ನಾಯಿಗಳ ಚಲಿಸುವ ಮಂದೆ! ಅದೊಂದು ಭವ್ಯವಾದ ಶ್ಮಶಾನ ಮೆರವಣಿಗೆಯಂತಿತ್ತು. ಅದೇ ಶೋಕ, ಅದೇ ಮೌನ, ಅದೇ ಗಾಂಭೀರ್ಯ! ಆದರೆ ಮೃತ್ಯುಸೂಚಕವಾದ ಶೋಕವಾದ್ಯಗಳಿರಲಿಲ್ಲ. ಅದನ್ನು ನೋಡಿ ಜಾಕಿಯ ಮನಸ್ಸು ಕೂಡ ವಿಕ್ಷುಬ್ಧವಾಗಿತ್ತು. ಅವನು ಕಂಡಿದ್ದ ತನ್ನ ಜಾತಿಯವರ ಶ್ಮಶಾನಯಾತ್ರೆ ಅದಕ್ಕಿಂತಲೂ ಹೆಚ್ಚೇನು ಶೋಕಪೂರ್ಣವಾಗಿ ಭವ್ಯತರವಾಗಿರಲಿಲ್ಲ.

ತುಸು ಹೊತ್ತಿನಲ್ಲಿ ಪುಟ್ಟಣ್ಣನೂ ಬೈರನೂ ನಾಯಿಗಳೂ ಹಳುವಿನ ಮಧ್ಯೆ ಕಣ್ಮರೆಯಾದರು. ಬಾಣಗಳಂತೆ ಹಾರಿ ಬಂದ ನೂರಾರು ಗಿಳಿಗಳ ಒಂದು ಹಸುರುಹಿಂಡು ಕಾಡಿನ ನೀರವತೆಯನ್ನು ಕ್ಷಣಮಾತ್ರ ಗಾನಮಯವನ್ನಾಗಿ ಮಾಡಿ ಹಾದುಹೋಯಿತು.

ಕೈಗೆ ಬಟ್ಟೆ ಕಟ್ಟಿಕೊಂಡು ಕುಳಿತಿದ್ದ ಸೋಮನು ಹಂಬಲಿಕೆಯಿಂದ ನೋಡುತ್ತಿದ್ದನು, ಸತ್ತ ಹಂದಿಯ ಕಡೆಗೆ!

## ೧೯

# ಮಾಯಗಾರ್ತಿ ಗಂಗೆ

ಸುಬ್ಬಮ್ಮ ಕಾನೂರಿಗೆ ಬಂದ ಹೊಸದರಲ್ಲಿ, ಒಂದು ದಿನ ಕಿರುಜಗಲಿಯಲ್ಲಿ ಒಬ್ಬ ಹೆಂಗಸು ಚಂದ್ರಯ್ಯಗೌಡರ ತಲೆ ಬಾಚುತ್ತಿದ್ದುದನ್ನು ಕಂಡಳು. ಉಡುಗೆಯಿಂದಲೂ ಮುಖಲಕ್ಷಣದಿಂದಲೂ ಆ ಹೆಂಗಸು ದಕ್ಷಿಣ ಕನ್ನಡ ಜಿಲ್ಲೆಯವಳೆಂದು ಆಕೆಗೆ ಗೊತ್ತಾಯಿತು. ಅವಳು ತುರುಬು ಹಾಕಿಕೊಂಡು ಹೂ ಮುಡಿದಿದ್ದಳು. ಕಿವಿಯಲ್ಲಿ ಬೆಂಡೋಲೆ, ಮೂಗಿನಲ್ಲಿ ಮೂಗುತಿ, ಕೈಯಲ್ಲಿ ಹೊಂಬಳೆ ಎಲ್ಲಾ ಇದ್ದುವು. ತನ್ನ ಗಂಡನು ಪರಕೀಯಳೊಬ್ಬಳಿಂದ ತಲೆ ಬಾಚಿಸಿಕೊಳ್ಳುತ್ತಿದ್ದರೂ ಮಡ್ಡ ಪ್ರಕೃತಿಯ ಅವಳಲ್ಲಿ ಮೊತ್ತಮೊದಲು ಮಾತ್ಸರ್ಯ ಜನಿಸಲಿಲ್ಲ. ಅದಕ್ಕೆ ಬದಲಾಗಿ ಕುತೂಹಲವುಂಟಾಯಿತು. ತರುವಾಯ ವಿಚಾರಿಸುವಲ್ಲಿ ಆ ಹೆಂಗಸು ಗಂಗೆ ಎಂದು ಗೊತ್ತಾಯಿತು.

ಕೆಲದಿನಗಳಲ್ಲಿ ಗಂಗೆ ಪರಿಚಿತೆಯಾದಳು. ಸುಬ್ಬಮ್ಮನಿಗೆ ಗಂಗೆ ತಾನು ಕಂಡ ಇತರ ಸ್ತ್ರೀಯರಿಗಿಂತಲೂ ಸ್ವಲ್ಪ ಭಿನ್ನವಾಗಿ ತೋರಿದಳು. ಅದಕ್ಕೆ ಕಾರಣವೇನೆಂಬುದು ಆಕೆಗೆ ಹೊಳೆಯಲಿಲ್ಲ. ಗಂಗೆ ಗಂಡಸರೊಡನೆ ಸ್ತ್ರೀ ಸಹಜವಾದ ಭೀರುತ್ವ ಲಜ್ಜೆಗಳನ್ನುಳಿದು ಹೆಚ್ಚು ಸ್ವಾತಂತ್ರ್ಯದಿಂದ ವರ್ತಿಸುವಳು. ಮಾತು ಕತೆಯಲ್ಲಿಯೂ ಆಚಾರ ವ್ಯವಹಾರದಲ್ಲಿಯೂ ಅವಳು ಏನೋ ಒಂದು ತೆರನಾದ ಬೆಡಗಿನಿಂದಲೂ ವೈಯಾರದಿಂದಲೂ ನಡೆಯುವಳು. ಗಂಡಸರು ಕೂಡ ಅವಳೊಡನೆ ಇತರ ಹೆಂಗಸರೊಡನೆ ನಡೆದಂತೆ ನಡೆದುಕೊಳ್ಳದೆ ಹೆಚ್ಚು ಸಲಿಗೆಯಿಂದಲೂ ನಾಣಿಲ್ಲದೆಯೂ ವ್ಯವಹರಿಸುವರು. ಇದನ್ನೆಲ್ಲ ನೋಡಿ ಸುಬ್ಬಮ್ಮನಿಗೆ ಗಂಗೆಯ ಪರವಾಗಿ ಪ್ರಶಂಸೆಯುಂಟಾಗಿ ಅವಳೊಡನೆ ಇತರ ಯಾರಿಗೂ ಹೇಳದ ಸುಖದುಃಖಗಳನ್ನು ಹೇಳುವಳು; ಕಷ್ಟ ಸಂಕಟಗಳಲ್ಲಿ ಬುದ್ಧಿವಾದ ಕೇಳುವಳು.

ಗಂಗೆಯ ಮನಸ್ಸು ಮಾತ್ರ ಬೇರೆಯಾಗಿತ್ತು. ಸುಬ್ಬಮ್ಮನ ದೆಸೆಯಿಂದ ಅವಳಿಗೆ ಚಂದ್ರಯ್ಯಗೌಡರ ಪ್ರಣಯವು ಬರಬರುತ್ತ ಇಳಿಮುಖವಾಗಿ ಕಡೆಗೆ ತಪ್ಪತೊಡಗಿತ್ತು. ಆದಕಾರಣ ಸುಬ್ಬಮ್ಮನೊಡನೆ ಮೇಲೆಮೇಲೆ ಸಲಿಗೆ ಸ್ನೇಹಗಳಿಂದ ನಡೆಯುತ್ತಿದ್ದರೂ ಒಳಗೊಳಗೆ ಅವಳೆದೆ ಕುದಿಯತೊಡಗಿತ್ತು. ಅದೂ ಅಲ್ಲದೆ ಸುಬ್ಬಮ್ಮ ಎಷ್ಟೇ ಅಸಂಸ್ಕೃತೆಯಾಗಿದ್ದರೂ ಆಕೆಯಲ್ಲಿದ್ದ ಗ್ರಾಮ್ಯ ಸಹಜವಾದ ಮುಗ್ಧತೆ ಪರಿಶುದ್ಧತೆಗಳನ್ನು ನೋಡಿ ಕರುಬಿದಳು. ಕೆಟ್ಟವರಿಗೆ

ನೆಟ್ಟಗಿರುವವರನ್ನೂ ತಮ್ಮಂತೆ ಮಾಡಿಕೊಳ್ಳುವ ಚಪಲತೆಯಾಗುತ್ತದೆ. ಸುಬ್ಬಮ್ಮ ಆ ವಿಚಾರದಲ್ಲಿ ಎಷ್ಟು ಮೂರ್ಖಳಾಗಿದ್ದಳೆಂದರೆ ಗಂಗೆಯ ದುಷ್ಟ ಸೂಚನೆಗಳನ್ನು ತಿಳಿದುಕೊಳ್ಳಲು ಕೂಡ ಸಮರ್ಥಳಾಗಿರಲಿಲ್ಲ. ಅಂತೂ ಗಂಗೆ ತನಗೆ ಪುರಸತ್ತು ದೊರೆತಾಗಲೆಲ್ಲ ಮನೆಗೆ ಬಂದು ಸುಬ್ಬಮ್ಮನೊಡನೆ ಮಾತಾಡು ವಳು. ಸುಬ್ಬಮ್ಮನೂ ಆಗಾಗ ಗಂಗೆಯ ಬಿಡಾರಕ್ಕೆ ಹೋಗಿ ಅವಳಿತ್ತ ತಾಂಬೂಲ ಹಾಕೊಳ್ಳುವಳು; ಕಳ್ಳು ಕುಡಿಯುವಳು. ಹೀಗೆ ಅಸಂಸ್ಕೃತಿಯು ಕುಸಂಸ್ಕೃತಿಯ ಬಲೆಗೆ ಮೆಲ್ಲಮೆಲ್ಲನೆ ತನಗರಿಯದಂತೆಯೆ ಬೀಳುತ್ತಿತ್ತು.

ನಾಗಮ್ಮನವರು ಕೆಲವು ಸಾರಿ ಎಚ್ಚರಿಕೆ ಹೇಳಿದರೂ ಸುಬ್ಬಮ್ಮ ಹೊಟ್ಟೆ ಕಿಚ್ಚಿಗೇ ಹೇಳುತ್ತಾರೆಂದು ಊಹಿಸಿ, ಅದನ್ನು ಲಕ್ಷ್ಯಕ್ಕೆ ತರಲಿಲ್ಲ. ಅದೂ ಅಲ್ಲದೆ ಗಂಗೆ ರುಚಿಯಾಗಿ ಮಾತಾಡುತ್ತಿದ್ದುದರಿಂದಲೂ ರುಚಿಯಾದ ಮದ್ಯವನ್ನು ನೀಡುತ್ತಿದ್ದುದರಿಂದಲೂ ಆ ಪ್ರಲೋಭನದಿಂದಲೂ ಸುಬ್ಬಮ್ಮ ತಪ್ಪಿಸಿಕೊಳ್ಳ ಲಾಗಲಿಲ್ಲ. ಗಂಗೆಯ ಬಿಡಾರಕ್ಕೆ ಹೋಗಿ ಮಾತುಕತೆಯಾಡಿ ಬೇಜಾರು ಪರಿ ಹರಿಸಿಕೊಂಡು ಬರುವುದರಲ್ಲಿ ಆಕೆಯ ಗ್ರಾಮ್ಯಬುದ್ಧಿಗೆ ಯಾವ ದೋಷವೂ ತೋರಲಿಲ್ಲ. ಚಂದ್ರಯ್ಯಗೌಡರಿಗೆ ಈ ವಿಷಯ ಗೊತ್ತಾದರೂ ಗಂಗೆಯ ದಾಕ್ಷಿಣ್ಯಕ್ಕಾಗಿ ಸುಮ್ಮನಿದ್ದರು. ಆದರೂ ಅವರ ಹೃದಯಾಂತರಾಳದಲ್ಲಿ ಕಳ ವಳವಿಲ್ಲದಿರಲಿಲ್ಲ.

ಸುಬ್ಬಮ್ಮ ಅನೇಕ ಸಾರಿ ಗಂಗೆಯ ಊರು ಮನೆ ನೆಂಟರಿಷ್ಟರುಗಳನ್ನು ಕುರಿತು ಪ್ರಶ್ನೆಮಾಡಿದ್ದಳು. ಆದರೆ ಮದುವೆಯ ವಿಚಾರ ಬಂದಾಗಲೆಲ್ಲ ಗುಟ್ಟನ್ನು ಮರೆಮಾಡಿ ತನ್ನ ಗಂಡನು ಊರಿನಲ್ಲಿದ್ದಾರೆ ಎಂದು ಹೇಳುತ್ತಿದ್ದಳು. ಸುಬ್ಬಮ್ಮನ ಸ್ಥೂಲಮತಿಗೆ ಸೂಕ್ಷ್ಮ ಪ್ರಶ್ನೆಗಳನ್ನು ಕೇಳಿ ಗುಟ್ಟನ್ನು ಬಯಲಿ ಗೆಳೆಯುವ ಶಕ್ತಿಯೂ ಇರಲಿಲ್ಲ.

ಆ ದಿನ ಚಂದ್ರಯ್ಯಗೌಡರು ನಾಗಮ್ಮ ಪುಟ್ಟಮ್ಮ ಎಲ್ಲರೂ ಮುತ್ತಳ್ಳಿಗೆ ಹೋಗಿದ್ದುದರಿಂದಲೂ ಪುಟ್ಟಣ್ಣ ಮೊದಲಾದವರು ನಾಟಾ ಸಾಗಿಸಲು ಹೋದುದರಿಂದಲೂ ಮನೆಯಲ್ಲಿ ನಿಂಗನ ಮಗ ಪುಟ್ಟ ಮತ್ತು ಇಬ್ಬರು ಮೂವರು ಮನೆಗೆಲಸದವರಲ್ಲದೆ ಕಾನೂರಿನಲ್ಲಿ ಯಾರೂ ಇರಲಿಲ್ಲ. ವಿರಾಮವಾಗಿದ್ದ ಗಂಗೆ ಮಧ್ಯಾಹ್ನ ಬಂದಳು. ಸುಬ್ಬಮ್ಮಗೆ ಪರಮಾನಂದವಾಯಿತು. ತಾನು ಕದ್ದು ತಯಾರುಮಾಡಿದ್ದ ಹೆಂಡವನ್ನೂ ಸ್ವಾರಲು ಮೀನನ್ನೂ ಕೊಟ್ಟು ಗಂಗೆಗೆ ಅತಿಥಿ ಸತ್ಕಾರ ಮಾಡಿದಳು. ಇಬ್ಬರೂ ಹಿತ್ತಲುಕಡೆಯ ಬಾಗಿಲಲ್ಲಿ ಚಕ್ಕಂದ ದಿಂದ ಮಾತಾಡುತ್ತ, ಎಲೆಯಡಕೆಯ ಬುಟ್ಟಿಯನ್ನು ನಡುವೆ ಇಟ್ಟುಕೊಂಡು ತಾಂಬೂಲವನ್ನು ಸವಿಯುತ್ತ ಕುಳಿತರು.

ಮಾಡಿನ ನೆಳಲು ಪೂರ್ವದ ಕಡೆಗೆ ಓರೆಯಾಗಿ ಅಂಗಳದಲ್ಲಿ ಬಿದ್ದಿತ್ತು. ಅಂಗಳದ ಒಂದು ಮೂಲೆಯಲ್ಲಿ, ಬಿಸಿಲು ಬಿದ್ದೆಡೆ, ಗೆರಸಿಯಲ್ಲಿ ಮಜ್ಜಿಗೆ ಮೆಣಸಿನಕಾಯಿ ಹರಡಿತ್ತು. ಮುಖ ಬಾಯಿ ತೊಳೆದೂ ತೊಳೆದೂ ನೀರು ದಪ್ಪಗಟ್ಟಿ ಕಪ್ಪುಕೆಸರಾಗಿದ್ದ ಮತ್ತೊಂದು ಮೂಲೆಯಲ್ಲಿ ಹೇಂಟೆಯೊಂದು ತನ್ನ ಹತ್ತಿಪ್ಪತ್ತು ಹೂಮರಿಗಳೊಡನೆ ಕೆದರಿ ಕೆದರಿ ಹುಳುಹುಪ್ಪಟೆಗಳನ್ನು ಹುಡುಕುತ್ತಿತ್ತು. ಮುಗ್ಧ ಕೋಮಲ ಶುಭ್ರ ಸಜೀವ ಕುಟ್ಮಲಗಳಂತೆ, ಆಗತಾನೆ ಹುಟ್ಟಿಬಂದಿದ್ದ ಸುಣ್ಣನೆ ತಿಪ್ಪುಳದಿಂದ ಸುಮನೋಹರವಾಗಿದ್ದ ಆ ಹೂಮರಿಗಳು ಚ್ಲೀ ಪ್ಲೀ ಚ್ಲೀ ಪ್ಲೀ ದನಿಗೈಯುತ್ತ ತಾಯಿಯ ಸುತ್ತಲೂ ಏನೋ ಮಹಾ ಕಾರ್ಯದಲ್ಲಿ ತೊಡಗಿರುವಂತೆ ತಿರುಗುತ್ತಿದ್ದುವು. ನಸುಕೆಂಬಣ್ಣದ ಮೂವತ್ತು ನಾಲ್ವತ್ತು ಮರಿಕಾಲುಗಳು ಕಗ್ಗೆಸರಿನಲ್ಲಿ ಅದ್ದಿಯದ್ದಿ ಅಸಹ್ಯವಾಗಿದ್ದುವು.

ಸುಬ್ಬಮ್ಮ ಗಂಗೆಯರು ಅನೇಕ ವಿಚಾರಗಳನ್ನು ಕುರಿತು ಮಾತನಾಡಿದರು. ಗಂಗೆ ಹಿಂದಿನ ದಿನ ನಡೆದ ಕಥೆಯ ಪೂರ್ವೋತ್ತರಗಳನ್ನು ಕೇಳಿ ತಿಳಿದಳು. ಚಂದ್ರಯ್ಯಗೌಡರು ನಾಗಮ್ಮ ಮೊದಲಾದವರು ಮುತ್ತಳ್ಳಿಗೆ ಹೋದುದಕ್ಕೆ ಕಾರಣ ಗೊತ್ತಿದ್ದರೂ ಮತ್ತೆ ಮತ್ತೆ ಕೇಳಿ ಸುಬ್ಬಮ್ಮನ ಮನಸ್ಸನ್ನು ಕೆರಳಿಸಿದಳು.

"ಎಷ್ಟಾದರೂ ಮೂರನೆ ಹೆಂಡ್ತಿ! ಅದಕ್ಕೇ ಸಿಕ್ಕಾಪಟ್ಟೆ ಹೊಡೀತಾರೆ."

"ಅವರ ಕೈ ಕುಸಿದುಬೀಳಾಕೆ. ಎಲ್ಲ ಆ ನಾಗಿ ಇದ್ದಾಳಲ್ಲಾ, ಆ ಹಾಳು ಮುಂಡೆ, ಅವಳ ದೆಸೆಯಿಂದ" ಎಂದು ನಾಗಮ್ಮನವರನ್ನು ಬೈದಳು.

"ನಿಮ್ಮ ಗಂಡಗೆ ಹೇಳಿ, ಅವರನ್ನು ಬೇರೆ ಹಾಕಿ ಅಂತಾ."

"ಹೇಳ್ದೆ... ಅವಳಿದ್ರೆ ನಾನು ಈ ಮನೇಲಿ ಇರಾದಿಲ್ಲಾ ಅಂತಾ."

"ಏನು ಹೇಳಿದರು ಅದಕ್ಕೆ?"

"ಹೂವಯ್ಯ ರಜಾಕ್ಕೆ ಬರ್ಲಿ ನೋಡಾನ ಅಂತಾ ಹೇಳ್ತಿದಾರೆ..."

"ಹೂವೇಗೌಡ್ರು ಬಹಳ ಒಳ್ಳೇರು ಕಣ್ರೋ... ನೀವು ಅವರನ್ನು ನೋಡಲಿಲ್ಲ ಅಂತ ಕಾಣ್ತದೆ?"

"ನೋಡಿದ್ದೆ... ನನ್ನ ಮೊದಲು ಕೇಳ್ದಾಗ ಅವರಿಗೇ ಕೇಳಿದ್ದು ಅಂತ ಮಾಡಿದ್ದೆ..."

"ಅಯ್ಯೋ! ಆ ಪುಣ್ಯ ನಿಮಗೆಲ್ಲಿ ಬಂತು?" ಗಂಗೆ ವ್ಯಂಗ್ಯವಾಗಿ ಸುಬ್ಬಮ್ಮನ ಕಡೆ ನೋಡಿದಳು. ಆದರೆ ಸುಬ್ಬಮ್ಮ ಇಂಗಿತವನ್ನು ತೃಣಮಾತ್ರವಾದರೂ ಗ್ರಹಿಸಲಾರದೆ, ಅಂಗಳದಲ್ಲಿದ್ದ ಹೂಮರಿಗಳ ಕಡೆ ನೋಡುತ್ತಿದ್ದಳು. ಗಂಗೆ ಅದುವರೆಗೆ ಹೇಳದೆ ಗುಟ್ಟಾಗಿಟ್ಟಿದ್ದ ತನ್ನ ಜೀವನಕಥೆಯಿಂದ ಸುಬ್ಬಮ್ಮನ ಮಡ್ಡತನವನ್ನು ಭೇದಿಸಬೇಕೆಂದು ಹವಣಿಸಿದಳು.

“ಅವರನ್ನೇ ಮದುವೆಯಾಗ್ತೀನಿ ಅಂತಾ ಮಾಡಿದ್ರೇನು ನೀವು?” ಆ ಪ್ರಶ್ನೆ ಕುಹಕಗರ್ಭಿತವಾಗಿತ್ತು.

“ಹೌದೂ... ಆದ್ರೆ ಅವರು ಮದುವೇನೇ ಆಗೋದಿಲ್ಲ ಅಂತಾ ಹೇಳ್ತಿದ್ರಂತೆ...”

“ಗಂಡಸ್ರೆಲ್ಲಾ ಹಾಂಗೇನೆ... ಮೊದಲು... ಆಮೇಲೆ...” ಗಂಗೆ ಏನನ್ನೋ ಅಶ್ಲೀಲವಾಗಿ ಪಿಸುಮಾತಿನಲ್ಲಿ ಹೇಳಿದಳು. ಸುಬ್ಬಮ್ಮ ನಾಚಿಕೊಂಡು ನಕ್ಕಳು. ಗಂಗೆಯೂ ನಕ್ಕಳು.

“ಈ ಗಂಡಸರನ್ನ ನಾ ಚೆನ್ನಾಗಿ ಬಲ್ಲೆ... ನಾನೂ ನಿಮ್ಮ ಹಾಗೆ ಒಬ್ಬರನ್ನ ನಚ್ಚಿ ಮತ್ತೊಬ್ಬರ ಕೈ ಸೇರ್ದೆ...”

“ಹಾಂಗಂದ್ರೆ?”

ಸುಬ್ಬಮ್ಮ ಪ್ರಶ್ನೆಮಾಡಲು ಗಂಗೆ ಖಿನ್ನವದನೆಯಾಗಿ ದುಃಖಧ್ವನಿಯಿಂದ “ಅಯ್ಯೋ ನನ್ನ ಕತೆ ಕೇಳಿದರೆ ನೀವೇನಂತೀರೋ...” ಎಂದು ನಿಡುಸುಯ್ದಳು. ಸುಬ್ಬಮ್ಮ ಏನೂ ಮಾತಾಡಲಿಲ್ಲ. ಗಂಗೆ ತನ್ನ ಕಥೆಯನ್ನು ಸ್ವಾರಸ್ಯವಾಗಿ ಹೇಳಿದಳು. ನಡುನಡುವೆ ಕಂಬನಿಗರೆದಳು. ಸುಬ್ಬಮ್ಮನಂತೂ ಆ ಸಾಹಸಗಿತ್ತಿಯ ಜೀವನ ಚರಿತ್ರೆಯನ್ನು ತುಟಿದೆರೆದು ಮಾತಾಡದೆ ಅಲುಗಾಡದೆ ಆಲಿಸಿದಳು.

ಗಂಗೆಯ ತಂದೆತಾಯಿಗಳು ಬಡವರು. ಅವರಿವರ ಕೂಲಿ ಕೆಲಸ ಮಾಡಿ ಗುಡಿಸಲಿನಲ್ಲಿ ಗಂಜಿಯುಂಡು ಬಾಳುತ್ತಿದ್ದರು. ಗಂಗೆ ಹುಡುಗಿಯಾಗಿದ್ದಾಗ ತಮ್ಮೂರಿನಲ್ಲಿ ತಮ್ಮಂತೆಯೆ ಬಡವನಾಗಿದ್ದ ಕೃಷ್ಣಯ್ಯಸೆಟ್ಟಿ ಎಂಬ ಯುವಕನೊಡನೆ ಕೆಳೆತನ ಬೆಳೆಸಿದಳು. ಕೆಳೆತನವು ಕ್ರಮೇಣ ಅನುರಾಗವಾಗಿ, ಕಡೆಗೆ ಪ್ರಣಯವಾಯಿತು. ಕೃಷ್ಣಯ್ಯಸೆಟ್ಟಿಯೂ ಗಂಗೆಯೂ ಕೆಲಸ ಕಾರ್ಯಗಳಲ್ಲೆಲ್ಲ ಒಟ್ಟಾಗಿ ನಲಿಯತೊಡಗಿದರು. ಮುಂದೆ ಅವರಿಬ್ಬರೂ ತಮ್ಮ ಜೀವನ ಸೂತ್ರಗಳನ್ನು ಹೊಸೆದು ಒಟ್ಟಿಗೆ ಸಂಸಾರ ನಡಸಬೇಕೆಂದೂ ಮಾತಾಡಿಕೊಂಡರು. ಅದೇ ಊರಿನಲ್ಲಿ ತಿಮ್ಮಯ್ಯಸೆಟ್ಟರೆಂಬ ಸಾಹುಕಾರರಿದ್ದರು. ತಿಮ್ಮಯ್ಯಸೆಟ್ಟರಿಗೆ ನಾಲ್ಕೈದು ಮದುವೆಗಳಾಗಿದ್ದರೂ, ವಯಸ್ಸು ಅರುವತ್ತಕ್ಕೆ ಮೀರಿದ್ದರೂ ಮತ್ತೊಂದು ಮದುವೆಯಾಗಬೇಕೆಂಬ ಚಪಲ ಹುಟ್ಟಿ ಗಂಗೆಯ ತಂದೆತಾಯಿಗಳನ್ನು ಹೆಣ್ಣು ಕೊಡುವಂತೆ ಕೇಳಿದರು. ಅವರು ಬಡವರಾಗಿದ್ದುದರಿಂದಲೂ, ಧನಿಕರ ಬಾಂಧವ್ಯದಿಂದ ತಮ್ಮ ದಾರಿದ್ರ್ಯ ಪರಿಹಾರವಾಗುತ್ತದೆ ಎಂಬ ಆಕಾಂಕ್ಷೆಯಿಂದಲೂ, ದೊಡ್ಡ ಮನುಷ್ಯನು ಹೆಣ್ಣು ಕೇಳಿದರೆ ಕೊಡುವುದಿಲ್ಲ ಎನ್ನುವುದು ಹೇಗೆ ಎಂಬ ದಾಕ್ಷಿಣ್ಯದಿಂದಲೂ ಒಪ್ಪಿದರು. ಪ್ರಣಯಿಗಳಿಗೆ

ಈ ಸುದ್ದಿ ತಿಳಿದ ಕೂಡಲೆ ಆ ಊರಿನಿಂದ ಜೊತೆಗೂಡಿ ಓಡಿಹೋಗಬೇಕೆಂದು ನಿರ್ಧರಿಸಿದರು. ಆದರೆ ಆ ಪ್ರಯತ್ನ ಸಾಗಲಿಲ್ಲ. ಗಂಗೆ ತನ್ನ ಇಷ್ಟಕ್ಕೆ ವಿರೋಧವಾಗಿ ಮುದುಕರಾದ ತಿಮ್ಮಯ್ಯಸೆಟ್ಟರ ಪತ್ನಿಯಾಗಬೇಕಾಯಿತು. ಆದರೂ ಆಕೆಯ ಪ್ರೇಮವೆಲ್ಲ ಕೃಷ್ಣಯ್ಯಸೆಟ್ಟಿಯ ಮೇಲಿತ್ತು. ಕೃಷ್ಣಯ್ಯ ಸೆಟ್ಟಿಯೂ ಸಮಯ ದೊರೆತಾಗಲೆಲ್ಲ ತಿಮ್ಮಯ್ಯಸೆಟ್ಟರ ಮನೆಗೆ ಬಂದು ಗಂಗೆಯನ್ನು ಮಾತಾಡಿಸಿಕೊಂಡು ಹೋಗುತ್ತಿದ್ದನು. ತಿಮ್ಮಯ್ಯಸೆಟ್ಟರಿಗೆ ಅದು ಸರಿಬೀಳದೆ ತನ್ನ ಮನೆಗೆ ಬರಕೂಡದೆಂದು ಕೃಷ್ಣಯ್ಯಸೆಟ್ಟಿಗೆ ಆಜ್ಞೆ ಮಾಡಿದರು. ಆಮೇಲೆ ಅವನು ಕದ್ದು ಬರತೊಡಗಿದನು. ತಿಮ್ಮಯ್ಯ ಸೆಟ್ಟರಿಗೆ ಅದೂ ಗೊತ್ತಾಗಿ ಅವನನ್ನು ಗುಂಡಿನಿಂದ ಹೊಡೆಯುತ್ತೇನೆಂದು ಹೆದರಿಸಿದರು. ಒಂದು ದಿನ ರಾತ್ರಿ ಎಂಟು ಗಂಟೆಗೆ ತಿಮ್ಮಯ್ಯಸೆಟ್ಟರು ಬೇರೆಯೂರಿಗೆ ಹೋಗಿದ್ದಾರೆಂದು ತಿಳಿದು ಕೃಷ್ಣಯ್ಯಸೆಟ್ಟಿ ಗಂಗೆಯ ಬಳಿಗೆ ಬಂದನು. ಆದರೆ ತಿಮ್ಮಯ್ಯಸೆಟ್ಟರು ನಿಜವಾಗಿಯೂ ಹೊರಗೆ ಹೋಗಿರಲಿಲ್ಲ. ಬೇಕೆಂದೇ ಆ ಸುದ್ದಿಯನ್ನು ಹುಟ್ಟಿಸಿ ಮನೆಯಲ್ಲಿ ಅಡಗಿ ಹೊಂಚುಹಾಕುತ್ತಿದ್ದರು. ಕೃಷ್ಣಯ್ಯಸೆಟ್ಟಿಯೂ ಗಂಗೆಯೂ ಒಂದು ಕೋಣೆಯಲ್ಲಿದ್ದಾಗ ಬಾರುಮಾಡಿದ ಬಂದೂಕನ್ನು ಕೈಲಿ ಹಿಡಿದುಕೊಂಡು ಬಂದು ಬಾಗಿಲು ತಟ್ಟಿದರು. ಗಂಗೆ ಬಾಗಿಲು ತಟ್ಟಿದವರು ತನ್ನ ಗಂಡನೆಂದರಿಯದೆ, ಪ್ರಿಯನನ್ನು ಬಾಗಿಲು ಸಂದಿ ಯಲ್ಲಿ ಅಡಗಿಸಿಟ್ಟು, ಬಾಗಿಲು ತೆರೆದಳು. ಮಾತ್ಸರ್ಯದಿಂದ ಕೋಪೋದ್ದೀ ಪಿತನಾದ ವೃದ್ಧ ಪತಿಯ ಪ್ರಲಯಮೂರ್ತಿ ಎದುರಿಗೆ ನಿಂತಿತ್ತು.

"ಹ್ಯಾ! ಹ್ಯಾ! ಹ್ಯಾ!" ಎಂದು ಕೂಗುತ್ತ ಸುಬ್ಬಮ್ಮ ಎದ್ದು ಅಂಗಳದ ಕಡೆಗೆ ನುಗ್ಗಿದಳು.

ಇವರು ಮಾತಾಡುತ್ತ ಕುಳಿತಿದ್ದಾಗ ಗರುಡನೊಂದು ಮೇಲೆ ಆಕಾಶದಲ್ಲಿ ಹಾರಾಡಿ ಅಂಗಳದ ಕೆಸರಿನಲ್ಲಿ ಹೇಂಟೆಯೊಡನೆ ಮೇಯುತ್ತಿದ್ದ ಹೂಮರಿಗಳಿಗಾಗಿ ಹೊಂಚು ಹಾಕುತ್ತಿತ್ತು. ರುಚಿರುಚಿಯಾದ ಕ್ರಿಮಿಭೋಜನದಲ್ಲಿ ಆಸಕ್ತ ವಾಗಿದ್ದ ಕುಕ್ಕುಟ ಸಂಸಾರವು ಅದನ್ನು ಕಾಣಲಿಲ್ಲ. ಗರುಡನು ಹಠಾತ್ತಾಗಿ ಮಿಂಚಿನ ವೇಗದಿಂದ ಸಿಡಿಲಿನಂತೆ ಎರಗಿತು. ಮರಿಗಳು ಚ್ಲಿಯೋ ಪ್ಲಿಯೋ ಎಂದು ಆರ್ತನಾದ ಮಾಡುತ್ತ ಚೆಲ್ಲಾಪಿಲ್ಲಿಯಾದುವು. ಕೆಲವು ಕಲ್ಲು ಕಟ್ಟಣೆಯ ಬಿರುಕುಗಳಲ್ಲಿ ಹುದುಗಿದುವು. ಮತ್ತೆ ಕೆಲವು ಗಾಬರಿಯಿಂದ ಕಂಗೆಟ್ಟು ಅತ್ತಿತ್ತ ತಮ್ಮ ಪುಟ್ಟ ಕಾಲು ಮತ್ತು ರೆಕ್ಕೆಗಳ ಶಕ್ತಿಯನ್ನೆಲ್ಲ ವೆಚ್ಚಮಾಡಿ ಧಾವಿಸತೊಡಗಿದುವು. ಹೇಂಟೆ ಗರುಡನು ಹತ್ತಿರ ಬರಲು ಎಚ್ಚತ್ತು ಅದನ್ನು ಅಟ್ಟಿಸಿಕೊಂಡು ಹೋಯಿತು. ಆದರೂ ಗರುಡನು ಒಂದು ಮರಿಗೆ ಎರಗಿತು.

ಆಯುಸ್ಸು ಗಟ್ಟಿಯಾಗಿದ್ದುದರಿಂದಲೋ, ಹೇಂಟೆಯ ಸಾಹಸದಿಂದಲೋ, ಗರುಡನ ಗುರಿ ತಪ್ಪಿದುದರಿಂದಲೋ, ಅಥವಾ ಅದರ ಸ್ವಂತ ಚಟುವಟಿಕೆಯಿಂದಲೋ ಆ ಮರಿ ತಪ್ಪಿಸಿಕೊಂಡಿತು. ಗರುಡನು ಮತ್ತೊಂದು ಸಾರಿ ಮೇಲಕ್ಕೆ ಚಿಮ್ಮಿ ತೇಲಿ, ಹೇಂಟೆ ಒದೆಯುತ್ತಿದ್ದರೂ ಸುಬ್ಬಮ್ಮ 'ಹ್ಯಾ! ಹ್ಯಾ! ಹ್ಯಾ!' ಎಂದು ಕೂಗಿ ಬರುತ್ತಿದ್ದರೂ ಲೆಕ್ಕಿಸದೆ, ಇನ್ನೊಂದು ಮರಿಗೆ ಎರಗಿ ಮೇಲೆ ಹಾರಿತು. ಅದರ ಉಗ್ರನಖಪಂಜರದಲ್ಲಿ ಸೆರೆ ಸಿಕ್ಕಿದ್ದ ಕೋಳಿಮರಿಯ ಶಿಶುಪ್ರಲಾಪ ಬರಬರುತ್ತ ಗಗನದಲ್ಲಿ ಕಿವಿಮರೆಯಾಯಿತು. ಕುಂಕುಮಾಂಕಿತ ಶರೀರಿಯೂ ಧವಳಾಂಕಿತ ವಕ್ಷನೂ ಆಗಿದ್ದ ಆ ಕೃಷ್ಣವಾಹನನು ಸ್ವರ್ಗದ ಅಸೀಮತೆಯಿಂದ ಮಿಂಚಿ ಬಂದು ಕಾನೂರಿನ ಹಿತ್ತಲುಕಡೆಯ ಅಂಗಳದಡೆ ಕೆಸರಿನಲ್ಲಿ ವಿಹರಿಸುತ್ತಿದ್ದ ಕೋಳಿಯ ಹೂಮರಿಯನ್ನು ಅದರ ಪೂರ್ವಜನ್ಮದ ಸುಕೃತಫಲದಿಂದಲೋ ಎಂಬಂತೆ ವೈಕುಂಠಕ್ಕೆ ಎತ್ತಿಕೊಂಡು ಹೋಗುತ್ತಿರುವುದನ್ನು ಗಂಗೆ ಸುಬ್ಬಮ್ಮರಿಬ್ಬರೂ ನಿಸ್ಸಹಾಯರಾಗಿ ಕಣ್ಣಾರೆ ನೋಡುತ್ತ ನಿಂತರು. ಹಿಂದೆ ಅನೇಕಸಾರಿ ಗರುಡನಿಗೆ ಕೈ ಮುಗಿದಿದ್ದ ಸುಬ್ಬಮ್ಮ ಹೂಮರಿಯ ಕರುಣಾಕರವಾದ ಆರ್ತಧ್ವನಿಯನ್ನು ಕೇಳಿ, ಕೋಪ ಕನಿಕರ ಹೊಟ್ಟೆಯುರಿಗಳಿಂದ "ನಿನ್ನ ಕುಲ ನಾಶನಾಗ!" ಎಂದು ವಿಷ್ಣುವಾಹನನನ್ನು ಶಪಿಸಿದಳು. ಆಮೇಲೆ ಹೇಂಟೆಯ ಕಡೆಗೆ ತಿರುಗಿ "ಈ ಹಡಬೇ ಹಾದರಗಿತ್ತಿ ಮರಿಕಟ್ಟಿಕೊಂಡು ಬಂದು ಬಯಲಿನಲ್ಲೇ ಸಾಯ್ತದೆ!" ಎಂದು ಭರ್ತ್ಸನೆ ಮಾಡಿದಳು. ಅಡಗಿದ್ದ ಮರಿಗಳೆಲ್ಲ ಹೊರಗೆ ಬಂದುವು. ಹೇಂಟೆ ಮತ್ತೆ ಮೊದಲಿನಂತೆ ಅವುಗಳೊಡನೆ ಕೆಸರು ಕೆದರಲು ಪ್ರಾರಂಭಿಸಿತು.

ತನ್ನ ಸಂಸಾರಕ್ಕಾದ ನಷ್ಟವಾಗಲಿ, ತಾನು ಅನೇಕ ದಿವಸಗಳಿಂದ ಮೊಟ್ಟೆಗಳ ಮೇಲೆ ಬೇಸರವಿಲ್ಲದೆ ಕಾವು ಕೂತು ಹೊರಡಿಸಿದ ತನ್ನ ಮುದ್ದು ಹೂಮರಿಯೊಂದಕ್ಕೆ ಒದಗಿದ ಅಕಾಲ ಮೃತ್ಯುವಾಗಲಿ, ಗರುಡನು ಆ ಮರಿಯನ್ನು ಕೊಕ್ಕಿನಿಂದ ಕಿತ್ತು ಕಿತ್ತು ತಿನ್ನುವಾಗ ಅದಕ್ಕಾಗುವ ನೋವಿನ ಕಲ್ಪನೆಯಾಗಲಿ ಕುಕ್ಕುಟ ಮಾತೆಯ ಮನಸ್ಸನ್ನು ವಿಕ್ಷುಬ್ಧಮಾಡಿದಂತೆ ತೋರಲಿಲ್ಲ. ಕೆಸರನ್ನು ಕೆದರಿ ಕೆದರಿ ಉಳಿದ ಮರಿಗಳ ಲಾಲನೆ ಪಾಲನೆಗಳಲ್ಲಿ ತನ್ಮಯವಾಗಿತ್ತು.

ಸುಬ್ಬಮ್ಮ ಗಂಗೆಯರಿಬ್ಬರೂ ಹಾಕಿಕೊಂಡಿದ್ದ ತಾಂಬೂಲರಸವನ್ನು ಅಂಗಳವು ಕೆಂಪಾಗುವಂತೆ ಉಗುಳಿ, ಹಿಂದಕ್ಕೆ ಬಂದು ಕುಳಿತು, ತುಂಡುಗಡಿದಿದ್ದ ಕಥೆಯನ್ನು ಮತ್ತೆ ಪ್ರಾರಂಭಿಸಿದರು.

ಗಂಗೆ ಬಾಗಿಲು ತೆರೆದಕೂಡಲೆ ತಿಮ್ಮಯ್ಯಸೆಟ್ಟರು ಒಳನುಗ್ಗಿ ಬಾಗಿಲು ಹಾಕಿದರು. ಬಾಗಿಲು ತೆರೆದಾಗ ಮಾತ್ರ ಮರೆಯಾಗಿದ್ದ ಜಾಗ ಬಯಲಾಗಿ,

ಅವಿತುಕೊಂಡಿದ್ದ ಕೃಷ್ಣಯ್ಯಸೆಟ್ಟಿ ಪ್ರದರ್ಶಿತ ವಿಗ್ರಹದಂತೆ ಕಾಣಿಸಿಕೊಂಡನು. ತಿಮ್ಮಯ್ಯಸೆಟ್ಟರ ರೋಷ ಮಾತಿನ ಮೇರೆಯನ್ನು ಮೀರಿತ್ತು. ಕೈಯಲ್ಲಿದ್ದ ಕೋವಿಯನ್ನು ನೆಗಹಿ, ಬಾಯೊಣಗಿ ನಡುಗುತ್ತ ನಿಂತಿದ್ದ ಕೃಷ್ಣಯ್ಯಸೆಟ್ಟಿಯ ಎದೆಗೆ ಚಾಚಿದರು. ಗಂಗೆ 'ದಮ್ಮಯ್ಯಾ ಬಿಡಿ' ಎಂದು ಕೈಹಿಡಿದು ಕೂಗಿಕೊಂಡಳು. ಕೃಷ್ಣಯ್ಯಸೆಟ್ಟಿಯೂ ಕೈಮುಗಿದುಕೊಂಡು ಪ್ರಾಣಭಿಕ್ಷೆ ಬೇಡಿದನು. ಆದರೂ ಗುಂಡು ಹಾರಿತು.

ಕೃಷ್ಣಯ್ಯಸೆಟ್ಟಿಯನ್ನು ಖೂನಿ ಮಾಡಿದುದಕ್ಕಾಗಿ ತಿಮ್ಮಯ್ಯಸೆಟ್ಟರಿಗೆ ಆಮರಣಾಂತ ಶಿಕ್ಷೆಯಾಯಿತು. ಗಂಗೆಯನ್ನು ವ್ಯಭಿಚಾರಿಣಿಯೆಂದು ಮನೆಯಿಂದ ಹೊರಗೆ ತಳ್ಳಿದರು. ಅವಳು ಒಂದೆರಡು ವರ್ಷಗಳವರೆಗೆ ದುಃಖದಿಂದಿದ್ದು, ಕಡೆಗೆ ಸೇರೆಗಾರ ರಂಗಪ್ಪನೊಡನೆ ಗಟ್ಟದ ಮೇಲಕ್ಕೆ ಬಂದಳು.

ಗಂಗೆ ತನ್ನ ವೈಧವ್ಯದ ಕಷ್ಟಗಳನ್ನೂ ಆಮೇಲೆ ತನಗಾದ ಸುಖವನ್ನೂ ತನ್ನ ನಡತೆಯ ಸಮರ್ಥನೆಯನ್ನೂ ವಿವರವಾಗಿ, ಸುಬ್ಬಮ್ಮನ ಸಹಾನುಭೂತಿಯನ್ನೂ ಸೂರೆಗೊಳ್ಳುವಂತೆ, ಮಾಡಿದಳು. ಸುಬ್ಬಮ್ಮನೂ ಅವಳು ಹೇಳಿದುದನ್ನೆಲ್ಲ ಚಾಚೂ ತಪ್ಪದೆ ಒಪ್ಪಿದಳು. ಅವಳಲ್ಲಿದ್ದ ಗ್ರಾಮ್ಯ ಮುಗ್ಧತೆಗೆ ಗಂಗೆ ತನ್ನ ವಿದಗ್ಧತೆಯ ವಿಷದ ಹನಿಯನ್ನು ಮೆಲ್ಲನೆ ಹೆಪ್ಪು ಹಾಕುತ್ತಿದ್ದಳು.

ಗಂಗೆಯ ಕಥೆಯನ್ನು ಕೇಳಿದ ಸುಬ್ಬಮ್ಮನ ಚಿತ್ತದಲ್ಲಿ ಅದುವರೆಗೂ ಸುಪ್ತವಾಗಿದ್ದ ಕೆಲವು ವಿಷಯಗಳು ಎಚ್ಚತ್ತುವು: ತಾನೂ ಕೂಡ ಹೂವಯ್ಯಗೌಡರನ್ನು ಪ್ರೀತಿಸುತ್ತಿದ್ದೆ; ಆದರೆ ಚಂದ್ರಯ್ಯಗೌಡರು ಮದುವೆಯಾದರು. ಚಂದ್ರಯ್ಯಗೌಡರಿಗೆ ಇಬ್ಬರು ಹೆಂಡಿರು ಆಗಿ ಹೋಗಿದ್ದಾರೆ. ತಾನು ಮೂರನೆಯ ಹೆಂಡತಿ. ಮದುವೆಯಾಗುವಾಗ ತನ್ನ ಇಚ್ಛೆಯನ್ನು ಯಾರೂ ವಿಚಾರಿಸಲಿಲ್ಲ. ಚಂದ್ರಯ್ಯಗೌಡರೂ ಕೂಡ ತನ್ನನ್ನು ಹೊಸದರಲ್ಲಿ ಮೊದಮೊದಲು ಅಕ್ಕರೆಯಿಂದ ಕಾಣುತ್ತಿದ್ದಂತೆ ಈಚೀಚೆಗೆ ಕಾಣುತ್ತಿಲ್ಲ. ಅದಕ್ಕೆ ಬದಲಾಗಿ ಹೊಡೆಯಲೂ ತೊಡಗಿದ್ದಾರೆ. ತಾವಿಬ್ಬರೆ ಇರುವಾಗ ಇರುಳಿನಲ್ಲಿ ಮುತ್ತಿಟ್ಟು ಆಲಿಂಗಿಸಿದರೂ ಅದು ಅವರ ಸುಖದ ಸ್ವಾರ್ಥತೆಗಾಗಿಯೇ ಹೊರತು ತನ್ನ ಮೇಲಣ ಪ್ರೀತಿಯಿಂದಲ್ಲ. ಆಲೋಚನೆಗಳು ಮೇಲೆ ಹೇಳಿರುವಂತೆ ಸ್ಪಷ್ಟ ರೀತಿಯಲ್ಲಲ್ಲ ಅವಳ ಮನಸ್ಸಿಗೆ ಬಂದುದು. ಅಷ್ಟು ಸ್ಪಷ್ಟವಾಗಿ ಆಲೋಚನೆ ಮಾಡಲು ಆಕೆಗೆ ಧೈರ್ಯವೂ ಇರಲಿಲ್ಲ; ಚಾತುರ್ಯವೂ ಇರಲಿಲ್ಲ. ಯಾರಾದರೂ 'ನೀನು ಹೀಗೆ ಆಲೋಚಿಸುತ್ತಿದ್ದೀಯಾ' ಎಂದು ಹೇಳಿದ್ದರೆ ಅವರನ್ನು ಸುಳ್ಳುಗಾರರೆಂದು ಬೈದುಬಿಡುತ್ತಿದ್ದಳು. ಹಾವು ಹೊಸದಾಗಿ ಹಾಕಿದ ಮೊಟ್ಟೆಗಳನ್ನು ಒಡೆದರೆ ಅದರಲ್ಲಿ ಮರಿ ಇರುತ್ತದೆಯೇ? ಕೆಂಪು ಬಿಳುಪಿನ ಲೋಳೆ

ಇರುತ್ತದೆ. ಆ ಮೊಟ್ಟೆಗಳೂ ಎಷ್ಟು ಮುಗ್ಧ ಮನೋಹರವಾಗಿ ಕಾಣುತ್ತವೆ! ಮುಂದೆ ಅವುಗಳಿಂದಲೆ ಘೋರ ವಿಷಸರ್ಪಗಳು ಹುಟ್ಟುತ್ತವೆ ಎಂದು ಹೇಳಿದರೆ ತಿಳಿಯದವರು ಖಂಡಿತವಾಗಿ ನಂಬಲಾರರು. ಆದರೂ ಕಾಲಾನಂತರದಲ್ಲಿ, ಸರಿಯಾದ ಸನ್ನಿವೇಶ ಒದಗಿ ಬಂದಾಗ, ಆ ಮೊಟ್ಟೆಗಳಿಂದಲೆ ಹಾವು ಹೊರಡುತ್ತವೆ. ಹಾಗೆಯೆ ಸುಬ್ಬಮ್ಮನ ಆಲೋಚನೆಗಳೂ ಅಂಡಾವಸ್ಥೆಯಲ್ಲಿದ್ದುವು.

ಮನಸ್ಸು ಇಂತಿದ್ದರೂ ಬಾಯಿ ಬೇರೆ ಮಾತಾಡುತ್ತಿತ್ತು. ನಾಟಾ ತರಲು ಹೋದವರು ಏಕೆ ಇನ್ನೂ ಊಟಕ್ಕೆ ಬರಲಿಲ್ಲ? ಇಷ್ಟು ಹೊತ್ತಾದರೂ ಒಂದು ಸಾರಿಯಾದರೂ ನಾಟಾ ತರಲಿಲ್ಲವೇಕೆ? ಮಜ್ಜಿಗೆ ಮೆಣಸಿನಕಾಯಿಗೆ ಹುಳಿಮಜ್ಜಿಗೆ ಸಾಲಲಿಲ್ಲ, ಇತ್ಯಾದಿಯಾಗಿ.

ಅಷ್ಟರಲ್ಲಿ ಅಡುಗೆ ಮನೆಯಲ್ಲಿ ದಡದಡದಢಾರ್ ಎಂದು ಸದ್ದಾಗಿ ಯಾರೋ ಧೊಪ್ಪನೆ ಬಿದ್ದಂತಾಯಿತು. ಸುಬ್ಬಮ್ಮ ಗಂಗೆ ಇಬ್ಬರೂ ಒಳಗೆ ಓಡಿದರು. ಉರುಳಿಬಿದ್ದ ಮಣೆಗಳ ರಾಶಿಯ ಪಕ್ಕದಲ್ಲಿ ಪುಟ್ಟನು ಮೆಲ್ಲಗೆ ಏಳುತ್ತಿದ್ದವನು ಅವರನ್ನು ಕಂಡೊಡನೆಯೆ ಅಳತೊಡಗಿದನು.

ಆ ದಿನ ಬೆಳಗ್ಗೆ ವಾಸು ಮುತ್ತಳ್ಳಿಗೆ ಹೋಗುವಾಗ ಹಿಂದಿನದಿನ ಕೋಳಿ ಕಣ್ಣು ಕುಕ್ಕಿದ್ದ ನಾಯಿಮರಿಯನ್ನು ಜಾಗರೂಕತೆಯಿಂದ ನೋಡಿಕೊಳ್ಳುವಂತೆ ಪುಟ್ಟನಿಗೆ ಅಪ್ಪಣೆ ಮಾಡಿದ್ದನು. ಅದರ ಆರೈಕೆಗಾಗಿ ಸುಬ್ಬಮ್ಮನನ್ನು ಹಾಲು ಕೇಳಿದರೆ ಕೊಡುವುದಿಲ್ಲ ಎಂದಿದ್ದಳು. ಪುಟ್ಟನು ಸಮಯವನ್ನೇ ಹೊಂಚುಹಾಕಿ ಕಾದು ಅಡುಗೆಮನೆಯಲ್ಲಿ ಯಾರೂ ಇಲ್ಲದಿರುವಾಗ ಅಲ್ಲಿಗೆ ಹೋಗಿ, ಒಲೆಯ ಪಕ್ಕದಲ್ಲಿದ್ದ ಹಾಲಿನ ಗಡಿಗೆಯಿಂದ ಹಾಲು ಕಳಲು ಪ್ರಯತ್ನಿಸಿದನು. ಲೋಟಗಳನ್ನೆಲ್ಲ ನಾಗಂದಿಗೆಯ ಮೇಲೆ ಅವನಿಗೆ ನಿಲುಕದಂತೆ ಇಟ್ಟಿದ್ದರಿಂದ, ಊಟಕ್ಕೆ ಕೂರುವ ಮಣೆಯನ್ನು ಒಂದರಮೇಲೊಂದು ಹೇರಿ, ಆ ರಾಶಿಯ ಮೇಲೆ ಹತ್ತಿದನು. ಗಾಬರಿಯಲ್ಲಿ ಕೆಲವು ಸಣ್ಣ ಮಣೆಗಳನ್ನು ತಳಕ್ಕೆ ಹಾಕಿ ಮೇಲೆ ದೊಡ್ಡ ಮಣೆಗಳನ್ನು ಹೇರಿದ್ದರಿಂದ ಪುಟ್ಟನು ಹತ್ತಿದೊಡನೆ ಮಣೆಯ ರಾಶಿ ಜರಿದುಬಿದ್ದು ಅವನಿಗೂ ನೋವಾಯಿತು. ಅಷ್ಟರಲ್ಲಿ ಸುಬ್ಬಮ್ಮ ಗಂಗೆಯರೂ ಬಂದುದರಿಂದ ನೋವಿಗಿಂತಲೂ ಹೆಚ್ಚಾಗಿ ಭಯದಿಂದಲೂ ಕರುಣೆ ಸಹಾನುಭೂತಿಗಳನ್ನು ಸಂಪಾದಿಸುವ ಸಲುವಾಗಿಯೂ ಅಳತೊಡಗಿದನು.

ಅಷ್ಟುಹೊತ್ತಿಗೆ ಪುಟ್ಟಣ್ಣನೂ ಬೈರನ ಕೈಲಿ ಟೈಗರನ್ನು ಹೊರಿಸಿಕೊಂಡು ಬಂದದ್ದರಿಂದ ಪುಟ್ಟನು ಗುದ್ದು ತಿನ್ನದೆ ಬಚಾಯಿಸಿಕೊಂಡನು.

ಪುಟ್ಟಣ್ಣನು ಬೈರನಿಗೆ ಊಟಮಾಡಿಕೊಂಡು ಬರುವಂತೆ ಹೇಳಿ ಕಳುಹಿಸಿ, ತಾನು ಊಟಮಾಡಲೊಪ್ಪದೆ, ಒಂದು ಜಾಯಿಕಾಯಿ ಪೆಟ್ಟಿಗೆಯಿಂದ ಬಟ್ಟೆ

ಗಳನ್ನು ತೆಗೆದು ತೆಗೆದು ಆಯಲು ತೊಡಗಿದನು. ಆ ಪೆಟ್ಟಿಗೆ ಅವನ ಸರ್ವಸ್ವ ವಾಗಿತ್ತು. ಅದರಲ್ಲಿ ಕೋವಿಯ ಸಾಮಾನಿನಿಂದ ಹಿಡಿದು ಉಡುಗೆ ತೊಡುಗೆ ಗಳ ವರೆಗೂ ದಾಸ್ತಾನಾಗಿತ್ತು. ಅವನ ಬಳಿ ಉತ್ತಮ ವಸನಗಳೇನೂ ಇರಲಿಲ್ಲ. ಮದುವೆಮನೆಗಳಿಗೂ ಕೊಪ್ಪ ತೀರ್ಥಹಳ್ಳಿಗಳಿಗೂ ಹೋಗುವಾಗ ಉಡುತ್ತಿದ್ದ ಒಂದು ಸಾಧಾರಣವಾದ ಪಂಚೆಯೇ ಆ ಪೆಟ್ಟಿಗೆಯಲ್ಲಿ ಅವನ ವಶದಲ್ಲಿದ್ದ 'ಚೂಡಾಮಣಿ!' ಆ ವಸ್ತ್ರಚೂಡಾಮಣಿಯನ್ನು ಹೊರಗಿಟ್ಟು ಉಳಿದ ಸಾಮಾನುಗಳನ್ನೆಲ್ಲ ಮತ್ತೆ ಪೆಟ್ಟಿಗೆಗೆ ತುರುಕಿ, ಬೀಗ ಹಾಕಿದನು. ಮತ್ತೆ ಪಂಚೆಯನ್ನು ಕೈಲಿ ತೆಗೆದುಕೊಂಡು ಬಿಚ್ಚಿ ನೋಡಿದನು. ಟೈಗರಿನ ಯೋಗ್ಯತೆಗೆ ಅದು ಅಲ್ಪವಾದುದೆಂದು ಅವನ ಮನಸ್ಸಿಗೆ ನೋವಾಯಿತು. ಆದರೆ ಅದಕ್ಕಿಂತಲೂ ಉತ್ತಮವಾದುದು ಅವನಲ್ಲಿರಲಿಲ್ಲ.

ಬೈರನು ಉಂಡುಕೊಂಡು ಬಂದಮೇಲೆ ಟೈಗರಿನ ಶವದೊಡನೆ ಹಾರೆ, ಗುದ್ದಲಿ, ಪಂಚೆಗಳನ್ನು ತೆಗೆದುಕೊಂಡು ಇಬ್ಬರೂ ಗುಡ್ಡವೇರಿ ಕಾನುಬೈಲಿನ ಕಡೆಗೆ ಹೊರಟರು. ಹತ್ತುಮಾರು ಹೋದಮೇಲೆ ಪುಟ್ಟಣ್ಣ ಹಿಂಬಾಲಿಸು ತ್ತಿದ್ದ ನಾಯಿಗಳನ್ನು ಗದರಿಸಿ ಅಟ್ಟಿ, ಪುಟ್ಟನನ್ನು ಕರೆದು ಅವುಗಳಿಗೆ ಅನ್ನ ಹಾಕುವಂತೆ ಕೂಗಿ ಹೇಳಿದನು. ನಾಯಿಗಳು ಒಡೆಯನ ಇಂಗಿತವನ್ನು ತಿಳಿದು ಖಿನ್ನಗತಿಯಿಂದ ಹಿಂತಿರುಗಿ ಮನೆಗೆ ಹೋದುವು. ಮರದ ನೆಳಲು ಪೂರ್ವ ದಿಕ್ಕಿನ ಕಡೆಗೆ ನೀಳವಾಗಿ ಬೇಗಬೇಗನೆ ಹರಿಯುತ್ತಿತ್ತು. ಹೊತ್ತು ಅಪರಾಹ್ಣ ದಿಂದ ಸಂಧ್ಯೆಗಿಳಿಯುತ್ತಿತ್ತು.

'ಕಾನುಬೈಲಿ'ನಲ್ಲಿ ಒಂದು ಉನ್ನತ ಪ್ರಶಸ್ತವಾದ ಸ್ಥಳದಲ್ಲಿ ಕುಣಿ ತೋಡಿ, ತಾನು ತಂದಿದ್ದ ಪಂಚೆಯಿಂದ ಟೈಗರಿನ ಹೆಣವನ್ನು ಪ್ರೀತಿಪೂರ್ವಕವಾಗಿ ಕಂಬನಿ ಗರೆಯುತ್ತ ಸುತ್ತಿ, ಕುಣಿಯೊಳಗೆ ಮೃದುವಾಗಿ ಮಲಗಿಸಿ, ಪುಟ್ಟಣ್ಣನೇ ಮಣ್ಣು ಮುಚ್ಚಿದನು. ಆಮೇಲೆ ಬೈರ ಕೆಲವು ಮುಳ್ಳುಗಿಡಗಳನ್ನು ಕಡಿದು ತಂದು ಆ ಸ್ಥಳದ ಮೇಲೆ ಹಾಕಿ, ಕಾಡುಪ್ರಾಣಿಗಳು ಅದನ್ನು ಕೀಳದಂತೆ ಕಲ್ಲು ಹೇರಿದನು.

ಪುಟ್ಟಣ್ಣ ಪಕ್ಕದಲ್ಲಿದ್ದ ಒಂದು ಬಂಡೆಯಮೇಲೆ ಕುಳಿತು, ತಾನು ಹಿಂದಿನಿಂದ ಬರುತ್ತೇನೆ ಎಂದು ಹೇಳಿ, ಬೈರನನ್ನು ಹಾರೆ ಗುದ್ದಲಿಗಳ ಸಮೇತ ಮನೆಗೆ ಕಳುಹಿಸಿದನು. ಬೈರನಿಗೆ ಪುಟ್ಟಣ್ಣನ ನಡತೆ ವಿಚಿತ್ರವಾಗಿ ತೋರಿತು. ನಾಯಿ ಯೊಂದು ಸತ್ತುದಕ್ಕೆ ಮನುಷ್ಯರು ಅಷ್ಟು ವ್ಯಸನಪಡುತ್ತಾರೆಂದು ಅವನು ಊಹಿಸಿರಲಿಲ್ಲ. ಪುಟ್ಟಣ್ಣ ಪಂಚೆಯನ್ನು ಟೈಗರಿಗೆ ಸುತ್ತಿ ಮಣ್ಣು ಮುಚ್ಚು ತ್ತಿದ್ದಾಗ ಬೈರ ಮನಸ್ಸಿನಲ್ಲಿಯೆ 'ನನಗಾದ್ರೂ ಕೊಟ್ಟಿದ್ದರೆ. ಆ ಪಂಚೆಯನ್ನು! ಸುಮ್ಮನೆ ಮಣ್ಣು ಮಾಡುತ್ತಿದ್ದಾರಲ್ಲಾ' ಎಂದುಕೊಂಡಿದ್ದನು.

ಟೈಗರು ಹೂವಯ್ಯನು ಬೆಂಗಳೂರಿನಿಂದ ಇಪ್ಪತ್ತೈದು ರೂಪಾಯಿ ಕೊಟ್ಟು ತಂದಿದ್ದ ನಾಯಿ. ಮೊದಮೊದಲು ಅದಕ್ಕೆ ಕಾಡು, ಬೇಟೆ, ಬಂದೂಕಿನ ಸದ್ದು, ಎಂದರೆ ಭಯವಾಗುತ್ತಿತ್ತು. ಎಷ್ಟೋ ಸಾರಿ ಪುಟ್ಟಣ್ಣನೇ ಅದಕ್ಕೆ ಸರಪಣಿ ಹಾಕಿ ಕಾಡಿಗೆ ಬೇಟೆಯಾಡಲು ಎಳೆದೊಯ್ದಿದ್ದನು. ಆದರೂ ಒಂದೆರಡು ಈಡು ಕೇಳಿದ ಕೂಡಲೆ ಹೇಳದೆ ಕೇಳದೆ ಮನೆಯ ಕಡೆಗೆ ಕಾಲಿಗೆ ಬುದ್ಧಿ ಹೇಳು ತ್ತಿತ್ತು. ಕ್ರಮೇಣ ಟೈಗರು ಸೊಗಸಾದ ಬೇಟೆನಾಯಿಯಾಯಿತು. ಕಡೆಕಡೆಗೆ ಇತರ ನಾಯಿಗಳಿಗೆ ಗುರುವೂ ಮಾರ್ಗದರ್ಶಿಯೂ ಆಯಿತು. ಟೈಗರು ಹಂದಿ ತಡೆಯಿತೆಂದರೆ ಷಿಕಾರಿಯಾಯಿತೆಂದೇ ಗೊತ್ತು. ಇತರ ನಾಯಿಗಳ ಕೂಗಿಗೆ ಲಕ್ಷ್ಯ ಕೊಡದಿದ್ದವರು ಟೈಗರಿನ ಕೂಗಿಗೆ ಚುರುಕಾಗುತ್ತಿದ್ದರು. ಎಲ್ಲರ ಬಾಯಿ ಯಲ್ಲಿಯೂ ಟೈಗರಿನ ಕೀರ್ತಿ. ವಾಸುವಿಗಂತೂ ಟೈಗರೆಂದರೆ ಹೆಮ್ಮೆ. ಅದಕ್ಕೆ ಎಲ್ಲಾ ನಾಯಿಗಳಿಗಿಂತಲೂ ಹೆಚ್ಚು ಪಾಲು ಸಿಕ್ಕುತ್ತಿತ್ತು. ಹೂವಯ್ಯ ರಜಾಕ್ಕೆ ಬಂದಾಗ ಟೈಗರು ಯಾವಾಗಲೂ ಅವನ ಪಕ್ಕದಲ್ಲಿಯೇ ಇರುತ್ತಿತ್ತು. ವಾಸು ವಂತೂ ಸಾಬೂನು ಹಚ್ಚಿ ಅದರ ಮೈಯನ್ನು ತೊಳೆದೂ ತೊಳೆದೂ ಅದರ ಕೂದಲು ರೇಷ್ಮೆಯಾಗಿತ್ತು. ಅವನು ಅದರ ಮುಂಗಾಲುಗಳನ್ನು ಹಿಡಿದೆತ್ತಿ ತನಗಿಂತಲೂ ಎತ್ತರವಾಗಿದ್ದ ನಾಯಿಯನ್ನು ನೋಡಿ ಆಶ್ಚರ್ಯಪಡುತ್ತಿದ್ದನು. ತನಗೆ ತಂದುಕೊಟ್ಟಿದ್ದ ಒಂದು ಬೆಲ್ಟನ್ನೇ ಕತ್ತರಿಸಿ ಅದರ ಕೊರಳಿಗೆ ಪಟ್ಟಿಹಾಕಿ, ಅಪ್ಪಯ್ಯನಿಂದ ಪೆಟ್ಟುತಿಂದಿದ್ದನು. ಟೈಗರು ಮನೆಗೆ ಬಂದಮೇಲೆ ಪುಟ್ಟಣ್ಣನ ಬೇಟೆ ಇಮ್ಮಡಿಯಾಗಿತ್ತು. ಮನೆಯಲ್ಲಿ ಕಾರ ಕಡೆದಿಡಲು ಹೇಳಿಯೇ ಅದರೊಡನೆ ಕಾಡಿಗೆ ಹೋಗುತ್ತಿದ್ದನು. ಪುಟ್ಟಣ್ಣ ಇಂತಹ ನೂರಾರು ಸಂಗತಿ ಗಳನ್ನು ನೆನೆದು ಚಿಂತಿಸುತ್ತ ಬಂಡೆಯ ಮೇಲೆ ಕುಳಿತ್ತಿದ್ದನು.

ಸೂರ್ಯನು ಒಯ್ಯೊಯ್ಯನೆ ಧೀರತರಂಗಿತ ಪಶ್ಚಿಮಗಿರಿ ಶಿಖರಗಳ ದಿಗಂತ ಸೀಮಾರೇಖೆಗೆ ಸಮೀಪಗತನಾದನು. ಸಂಜೆಯ ಬಾನು ಕಿತ್ತಳೆಹಣ್ಣಿನಂತೆ ಮಾಗತೊಡಗಿತು. ವಿವಿಧಾಕಾರದ ಮುಗಿಲುಗಳಿಗೆ ಬಣ್ಣವೇರಿ ಮನೋಹರ ವಾಗಿತ್ತು. ಪುಟ್ಟಣ್ಣ ಚಿಂತಾಮಗ್ನನಾಗಿ ಸುಮ್ಮನೆ ಅತ್ತಕಡೆಗೆ ನೋಡುತ್ತಿದ್ದ ವನು ಇದ್ದಕ್ಕಿದ್ದಹಾಗೆ ಚಕಿತನಾದನು. ಸ್ವಲ್ಪ ಹೊತ್ತಿಗೆ ಮೊದಲು ಅವನ ಭಾಗಕ್ಕೆ ಉದಾಸೀನವಾಗಿದ್ದ ಪಡುವಣ ಬಾನು ಹಠಾತ್ತಾಗಿ ಕೌತೂಹಲ ಪೂರ್ಣ ವಾಯಿತು. ಪುಟ್ಟಣ್ಣ ನೋಡಿದನು. ಎವೆಯಿಕ್ಕದೆ ನೋಡಿದನು. ಹರ್ಷ ಚಿತ್ತನಾಗಿ "ನನ್ನ ಟೈಗರು ಸ್ವರ್ಗಕ್ಕೆ ಹೋಗುತ್ತಿದೆ" ಎಂದುಕೊಂಡು ಬಂಡೆಯ ಮೇಲೆ ಎದ್ದು ನಿಂತು ನೋಡಿದನು.

ಮುಗಿಲೊಂದು ನಾಯಿಯ ಆಕಾರವನ್ನು ತಾಳಿ, ಸಂಜೆಯ ಮಾಯೆಯಲ್ಲಿ

ಸಜೀವವಾದಂತಿತ್ತು. ಬೇರೆಯ ದಿನಗಳಲ್ಲಾಗಿದ್ದರೆ ಪುಟ್ಟಣ್ಣನಿಗೆ ಅದು ಹಾಗೆ ಕಾಣಿಸುತ್ತಿರಲಿಲ್ಲ. ಇಂದು ಅವನ ಭಾವ ಕಲ್ಪನಾಲೋಚನಾ ಶಕ್ತಿಗಳೆಲ್ಲ ಪ್ರಬುದ್ಧವಾಗಿದ್ದುದರಿಂದ ಅಂತಃಕರಣವೇ ಆಕಾರಗಳನ್ನು ಕಲ್ಪಿಸಲು ಸಮರ್ಥವಾಗಿದ್ದ ಆ ಸ್ಥಿತಿಯಲ್ಲಿ ಸಂಧ್ಯಾಮೇಘ ರಚನೆಯು ಕೊಟ್ಟ ಸಾಧಾರಣ ಸೂಚನೆ ಅವನ ಮನಸ್ಸಿಗೆ ಟೈಗರಾಗಿ ಪರಿಣಮಿಸಿತು. ಅವನಿಗೆ ಸ್ವರ್ಗ, ನರಕ, ಜೀವ, ದೇವರು ಮೊದಲಾದುವುಗಳ ವಿಚಾರವಾಗಿ ಯಾವುದೂ ಸ್ಪಷ್ಟವಾಗಿ ತಿಳಿದಿರಲಿಲ್ಲ. ಹರಿಕಥೆಗಳಿಂದಲೂ ಭಾಗವತರಾಟಗಳಿಂದಲೂ ಭಾರತ ರಾಮಾಯಣ ಕಥಾಶ್ರವಣದಿಂದಲೂ ಹೂವಯ್ಯನ ಮಾತುಕಥೆಗಳಿಂದಲೂ ಹಲಕೆಲವು ಭಾವಗಳನ್ನು ಶೇಖರಿಸಿದ್ದನು. ಸತ್ತಮೇಲೆ ಆತ್ಮವು ಸ್ವರ್ಗಕ್ಕಾಗಲಿ ನರಕಕ್ಕಾಗಲಿ ಹೋಗುತ್ತದೆ ಎಂದು ಕೇಳಿ ತಿಳಿದಿದ್ದನು. ಟೈಗರು ತನ್ನ ಪ್ರೀತಿಯ ನಾಯಿಯಾದ್ದರಿಂದ ಎಂದಿಗೂ ನರಕಕ್ಕೆ ಹೋಗಲಾರದು. ಅಲ್ಲದೆ ಅದು ಸ್ವಾಮಿಭಕ್ತಿಗಾಗಿ ಪ್ರಾಣಕೊಟ್ಟಿದೆ! ಆದ್ದರಿಂದ ಅದರ ಆತ್ಮವು ಮುಗಿಲಿನ ರೂಪದಿಂದ ಸ್ವರ್ಗಕ್ಕೆ ಹೋಗುತ್ತಿದೆ ಎಂದು ಸಂತೋಷಪಟ್ಟನು. ತನಗಿದ್ದ ದುಃಖವೆಲ್ಲ ಹೋಗಿ ಆನಂದವಾಗುತ್ತಿರುವದನ್ನು ಕಂಡು ಅವನಿಗೆ ಆಶ್ಚರ್ಯವಾಯಿತು. ನೋಡುತ್ತಿದ್ದ ಹಾಗೆಯೆ ರವಿ ಮುಳುಗಿದನು. ಮುಗಿಲಿಗಿದ್ದ ನಾಯಿಯ ಆಕಾರ ಬಣ್ಣಗಳೆಲ್ಲ ಅಳಿಸಿ ಹೋದುವು. ಆದರೆ ಪಶ್ಚಿಮದಿಕ್ಕು ಮಾತ್ರ ಸ್ವರ್ಗೀಯವಾಗಿತ್ತು; ಸ್ವರ್ಗವಾಗಿತ್ತು.

ದೃಶ್ಯದಲ್ಲಿ ತನ್ಮಯನಾಗಿದ್ದ ಪುಟ್ಟಣ್ಣನಿಗೆ ಬಾಡುಗಳ್ಳ ಡೊಳ್ಳುಹೊಟ್ಟೆಯ ಸೋಮನು ಬಳಿಗೆ ಬಂದದ್ದು ಗೊತ್ತಾಗಿರಲಿಲ್ಲ. "ಪುಟ್ಟೇಗೌಡ್ರೇ" ಎಂದು ಅವನು ಕರೆಯಲು ಬೆಚ್ಚಿಬಿದ್ದು ನೋಡಿದನು. ಜಾಕಿಯ ಪೆಟ್ಟು ಬಿದ್ದಿದ್ದ ಕೈಗೆ ಬಟ್ಟೆ ಸುತ್ತಿಕೊಂಡು, ಬೈಗುಗಪ್ಪಿನಲ್ಲಿ ಆಕಾರ ಮಾತ್ರನಾಗಿ ನಿಂತಿದ್ದನು. ಪುಟ್ಟಣ್ಣ ಸಂಧ್ಯಾಸ್ವರ್ಗದಿಂದ ಸ್ಥೂಲಪೃಥ್ವಿಗೆ ಇಳಿಯಬೇಕಾಯಿತು.

"ಹಂದಿ ಹಸಿಗೆ ಮಾಡಿಯಾಯ್ತು. ಎಷ್ಟುಪಾಲು ಮಾಡಬೇಕು? ಕೇಳ್ತಾರೆ!"

ಸೋಮನಿಗೆ ಪುಟ್ಟಣ್ಣನ ಮನಃಸ್ಥಿತಿಯಾಗಲಿ, ಅವನಿದ್ದ ಭಾವಜಗತ್ತಿನ ಔನ್ನತ್ಯವಾಗಲಿ, ಸಮಯಾಸಮಯಗಳ ವಿವೇಕ ವಿಚಾರವಾಗಲಿ ಯಾವುದೂ ಗೊತ್ತಿರಲೂ ಇಲ್ಲ, ಬೇಕಿರಲೂ ಇಲ್ಲ. ಅವನು ಬಂದದ್ದು ಹಂದಿಯ ಹಸುಗೆಯ ವಿಚಾರವಾಗಿ ಕೆಲವು ಕಟ್ಟುಕಟ್ಟಳೆಗಳನ್ನು ತಿಳಿದುಕೊಳ್ಳುವುದಕ್ಕೆಂದು. ಅದನ್ನು ಅವನಿಗೆ ಸಹಜವಾಗಿ ಒರಟುತನದಿಂದಲೆ ಕೇಳಿಬಿಟ್ಟನು.

ಪುಟ್ಟಣ್ಣನಿಗೆ ಅತಿ ಜುಗುಪ್ಸೆಯಾಗಿ "ಏನಾದರೂ ಮಾಡಿ, ನನಗೊಂದೂ ಗೊತ್ತಿಲ್ಲ" ಎಂದನು.

" ಅಲ್ಲಾಕಾಣೆ, ನೀವು ಮೊದಲು ಗುಂಡು ಹೊಡೆದವರು. ಕೃಷ್ಣಪ್ಪಗೌಡರಿಗೆ ದೊಡ್ಡ ಪಾಲು ಯಾಕೆ ಕೊಡುವುದು ? . . ." ಎಂದು ವಕೀಲಿಮಾಡತೊಡಗಿದನು.

ಪುಟ್ಟಣ್ಣ ರೇಗಿ " ನೀ ಹೋಗ್ತೀಯೋ ಇಲ್ಲೋ ಇಲ್ಲಿಂದ ! ನಾನು ಆಮೇಲೆ . . ." ಎಂದನು.

" ಕೇಳಿಕೊಂಡು ಬಾ ಅಂತ ಹೇಳಿದ್ರು ? . . . ಅದಕ್ಕೆ ಬಂದೆ."

" ನೀ ಹೋಗ್ತೀಯೋ ಇಲ್ಲೋ ! ಬಾಡೂ ಅಂದ್ರೆ ಪ್ರಾಣ ಬಿಡ್ತೀರಿ ! " ಎಂದು ಪುಟ್ಟಣ್ಣ ಮತ್ತೂ ರೇಗಿ ಕೂಗಿದನು.

" ಟೈಗರಿಗೂ ಪಾಲು ಬಿಡಬೇಕೋ ಬ್ಯಾಡವೊ ? ಕೇಳಿಕೊಂಡು ಬಾ ಅಂದರು ! "

ಪುಟ್ಟಣ್ಣ ಮಾತಾಡಲಿಲ್ಲ. ಅವನೆದೆ ಚುಚ್ಚುತ್ತಿತ್ತು.

" ಟೈಗರಿನ ಪಾಲು ನಾನು ತೆಗೆದುಕೊಳ್ಳಲೋ ? " ಎಂದು ಸೋಮನು ಅಂಗಲಾಚಿದನು.

" ಅಯ್ಯೋ ಮಾರಾಯ, ಏನಾದರೂ ಸಾಯಿ ! ನಿನ್ನ ದಮ್ಮಯ್ಯಾ ಅಂತೀನಿ ಹೋಗು ! "

ಪುಟ್ಟಣ್ಣ ಒಪ್ಪಿಗೆ ಕೊಟ್ಟನೆಂದು ಅರ್ಥಮಾಡಿಕೊಂಡು ಬಾಡುಗಳ್ಳ ಡೊಳ್ಳು ಹೊಟ್ಟೆಯ ಸೋಮನು ಗುಡ್ಡವಿಳಿದು ಹೋದನು. ಸತ್ತ ನಾಯಿಗೆ ಸಲ್ಲಬೇಕಾಗಿದ್ದ ಹಂದಿಯ ಮಾಂಸದ ಪಾಲನ್ನು ತಾನು ತೆಗೆದುಕೊಳ್ಳಲು ಅಪ್ಪಣೆ ಪಡೆಯುವ ಸಲುವಾಗಿಯೆ ಅವನು ಬೈರನಿಂದ ಪುಟ್ಟಣ್ಣನಿರುವ ಸ್ಥಳವನ್ನು ಕೇಳಿ ತಿಳಿದು ಕಾನು ಬೈಲಿಗೆ ಬಂದಿದ್ದನು.

## ೨೦

## ಸೀತೆ—ಹೂವಯ್ಯ

ಬಾಲ ದಿನಮಣಿಯ ಕೋಮಲ ಕಿರಣಗಳು ಕೋಟ್ಯಂತರ ಮೈಲಿಗಳಿಂದ ನಡೆದು ಬಂದು, ಮುತ್ತಳ್ಳಿಮನೆಯ ಹೆಬ್ಬಾಗಿಲಿನ ಹೊಸ್ತಿಲ ಮೇಲೆ ಕುಳಿತಿದ್ದ ಲಕ್ಷ್ಮಿಯ ಚೆಂಗೆನ್ನೆಗಳಿಗೆ ಬಿಸಿಮುತ್ತನಿಟ್ಟು, ನಲಿಯುತ್ತಿದ್ದುವು. ಆ ಹೊಂಗದಿರುಗಳು ಮರಗಳ ಹಸುರು ನೆತ್ತಿಯ ಮೇಲೆಯೂ ಮನೆಯ ಹೆಂಚುಗಳ ಮೇಲೆಯೂ ಕೆಂಧೂಳಿಯ ರಸ್ತೆಯ ಮೇಲೆಯೂ ಬಿದ್ದು ನಿಷ್ಪಕ್ಷಪಾತವನ್ನು ನಟಿಸುತ್ತಿದ್ದರೂ, ಅವುಗಳ ಏಕಮಾತ್ರ ಮಹದಾಕಾಂಕ್ಷೆಯೂ ಆನಂದವೂ ಪುಟ್ಟ ಹುಡುಗಿಯ

ತುಟಿ, ಕೆನ್ನೆ, ಗಲ್ಲ, ಹಣೆ, ಕಣ್ಣು, ಮುಂಗುರುಳುಗಳ ಮೇಲೆ ನರ್ತಿಸುವುದರಲ್ಲಿಯೂ ಅವುಗಳ ಕೂಡ ಆಟವಾಡುವುದರಲ್ಲಿಯೂ ಇದ್ದಿತೆಂದು ಜಡಮತಿಗೂ ಕೂಡ ಭಾಸವಾಗುತ್ತಿತ್ತು! ಲಕ್ಷ್ಮಿ ಕಿರಣಗಳನ್ನು ತನ್ನ ಮುದ್ದು ಕೈಗಳಿಂದ ಹಿಡಿಯ ಲೆಳಸಿ, ಕೆನ್ನೆ ತೆರೆ ತೆರೆಯಾಗುವಂತೆ ಆಹ್ಲಾದ ಪ್ರದರ್ಶನ ಮಾಡುತ್ತ, ಇಕ್ಕೆಲದ ಮರಗಳ ನಡುವೆ ಕೊಂಕಿ ಬಳುಕಿ ಹರಿದುಹೋಗಿ ಕಣ್ಮರೆಯಾಗಿದ್ದ ರಸ್ತೆಯನ್ನು ಸಲಸಲವೂ ಬಯಕೆಯ ನಯನಗಳಿಂದ ನಿರೀಕ್ಷಿಸುತ್ತ ಕುಳಿತಿದ್ದಳು. ಅವಳು ನೋಡುತ್ತಿದ್ದ ಹಾಗೆಯೆ ದೂರದಲ್ಲಿದ್ದ ಹಲಸಿನ ಮರದಾಚೆಯಿಂದ ಕುಂಬಾರ ನಂಜನು ತನ್ನ ಒಂದು ವರ್ಷದ ಹಸುಳೆಯನ್ನೆತ್ತಿಕೊಂಡು, ನಿಧಾನವಾಗಿ ಎಳಬಿಸಿಲನ್ನು ಆಸ್ವಾದಿಸುತ್ತ, ನಡೆದು ಬಂದನು. ಹಿಂದಿನ ದಿನ ರಾತ್ರಿ ಕಳ್ಳಂಗಡಿಯಲ್ಲಿ ಪಿಶಾಚಿಯಂತಿದ್ದ ನಂಜನು ಇಂದು ತನ್ನ ಕೂಸನ್ನೆತ್ತಿಕೊಂಡು, ಅತ್ಯಂತ ಸೌಮ್ಯತಮ ಪಿತೃವಾಗಿ ನಡೆದು ಬಂದು, ಲಕ್ಷ್ಮಿಯನ್ನು ಕುರಿತು "ಇಲ್ಲ್ಯಾಕೆ ಕೂತೀರಿ ಹೊಸಲಮೇಲೆ?" ಎಂದು ಕೇಳಿದನು.

"ಕಾನೂರಿನಿಂದ...ಗಾಡಿ ಬರ್ತದಂತೆ. ಉ...ಉ...ಉ...ವಾಸಪ್ಪ ಬಾವ, ಪುಟ್ಟತ್ತಿಗಮ್ಮ ಬರ್ತಾರಂತೆ." ಎಂದು ತೊದಲು ನುಡಿದ ಲಕ್ಷ್ಮಿ ಎದ್ದುನಿಂತು "ನಂಜಾ ನಾ ಕರ್ಕೊಳ್ತೀನೊ ಕೊಡೊ! ರಂಗೀ, ಬಾರೆ!" ಎಂದು ನಂಜನ ಕೂಸನ್ನು ಕರೆದುಕೊಳ್ಳಲೆಂದು ತನ್ನ ಪುಟ್ಟ ತೋಳುಗಳನ್ನು ನೀಡಿದಳು.

ನಂಜನ ಕೂಸು: ಕೈಕಾಲು ಸಣ್ಣಗಿತ್ತು; ಹೊಟ್ಟೆ ಡುಬ್ಬಣ್ಣವಾಗಿತ್ತು; ಮೂಗಿನಿಂದ ಸಿಂಬಳ ಸುರಿದು ಮೇಲ್ದುಟಿಯ ಮೇಲೆ ಕೋರೆಯಾಗಿತ್ತು. ಕೈಯಲ್ಲಿಯೂ ಹೊಟ್ಟೆಯ ಮೇಲೆಯೂ ಕಜ್ಜಿಗಳು ಕಾಣುತ್ತಿದ್ದುವು. ಎದೆಯ ಎಲುಬಿನ ಗೂಡಿನ ಆಕೃತಿ ಹಬ್ಬಿದ್ದ ಚರ್ಮದ ಮೇಲೆ ಚೆನ್ನಾಗಿ ಕಾಣುತ್ತಿತ್ತು. ನಿರ್ಮಲವಾಗಿರುವವರು ಯಾರೂ ಅದನ್ನು ಮುಟ್ಟಲು ಹೇಸುತ್ತಿದ್ದರು. ಆದರೆ ಲಕ್ಷ್ಮಿಯ ಮನಸ್ಸಿಗೆ ಅದೊಂದೂ ಬರಲಿಲ್ಲ. ಆಕೆಗಿದ್ದುದು ಕೂಸನ್ನು ಎತ್ತಿ ಕೊಳ್ಳಬೇಕೆಂಬ ಒಂದೇ ಆಸೆ. ಆ ಕೂಸು ಸುಂದರವಾಗಿದ್ದರೇನಂತೆ? ಕುರೂಪವಾಗಿದ್ದರೇನಂತೆ? ನಿರ್ಮಲವಾಗಿದ್ದರೇನಂತೆ? ಕೊಳಕಾಗಿದ್ದರೇನಂತೆ? ಸಜೀವವಾಗಿದ್ದರಾಯಿತು! ಇದ್ದದ್ದೂ ಆ ಗುಣವೊಂದೇ ನಂಜನ ಕೂಸಿಗೆ!

"ರಂಗೀ ಬಾರೆ! ಬಾರೆ! ಬೆಲ್ಲ ಕೊಡ್ತೀನಿ ಬಾರೇ!" ಎಂದು ಕೈ ಚಾಚಿದಳು.

"ಬೇಡ ಕಣ್ರೋ, ನಿಮ್ಮವ್ವ ಬಯ್ತಾರೆ" ಎಂದು ನಂಜ ಒಳಗೆ ಹೋಗ ಲೆಳಸಿದನು.

"ಬಯ್ಯೋದಿಲ್ಲ ಏನಿಲ್ಲ, ಕೊಡು!" ಎಂದು ಲಕ್ಷ್ಮಿ ತಡೆದಳು.

"ಥ್ಥೂ! ಬಿಡೀ ಅಂದ್ರೆ, ನಿಮಗೆ ಗೊತ್ತಿಲ್ಲ." ಎಂದು ಹೇಳಿ ಹೆಬ್ಬಾಗಿಲು ದಾಟಿಯೇ ಬಿಟ್ಟನು.

ತನ್ನ ಪ್ರೀತಿಯ ಪ್ರದರ್ಶನಕ್ಕೆ ಆಘಾತವಾದಂತಾಗಿ ಲಕ್ಷ್ಮಿ ಸುಮ್ಮನಾದಳು. ಸಮಾಜದ ಕಟ್ಟುನಿಟ್ಟುಗಳು, ದೊಡ್ಡವರು, ಬಡವರು ಎಂಬ ಭೇದ ಅವಳಿಗಿನ್ನೂ ಗೊತ್ತಾಗಿರಲಿಲ್ಲ.

ಜಗಲಿಯಮೇಲೆ ತಾಂಬೂಲದ ಹರಿವಾಣದ ಮುಂದೆ ಚಂದ್ರಯ್ಯಗೌಡರೂ ಶ್ಯಾಮಯ್ಯಗೌಡರೂ ಮಾತಾಡುತ್ತ ಕುಳಿತಿದ್ದರು. ನಂಜನನ್ನು ನೋಡಿದ ಕೂಡಲೆ ಶ್ಯಾಮಯ್ಯಗೌಡರಿಗೆ ಹಿಂದಿನ ದಿನ ಅವನು ಮಾಡಿದ್ದ ಅತ್ಯಾಚಾರದ ನೆನಪಾಗಿ ರೇಗಿದರು. ಆದರೆ ಕೈಯಲ್ಲಿ ಕೂಸು ಇದ್ದುದರಿಂದ ಅವನಿಗೆ ಪೆಟ್ಟು ಬೀಳಲಿಲ್ಲ. ಆಗ ಅವನು ತಂದೆಯಾಗಿ ಕಾಣುತ್ತಿದ್ದನೆ ಹೊರತು ಕುಡುಕನಾಗಿ ಕಾಣುತ್ತಿರಲಿಲ್ಲ. ಹಿಂದಿನ ದಿನ ಕಳ್ಳಂಗಡಿಯಲ್ಲಿ ಅವನನ್ನು ಕಂಡವರು ಯಾರಾದರೂ ಈಗ ನೋಡಿದ್ದರೆ ಆಶ್ಚರ್ಯಪಡುವಷ್ಟರಮಟ್ಟಿಗೆ ಸಂಭಾವಿತನಾಗಿ ತೋರುತ್ತಿದ್ದನು.

ಆ ದಿನ ಬೆಳಿಗ್ಗೆ ಮುಂಚೆ ಮುತ್ತಳ್ಳಿಗೆ ಬಂದಿದ್ದ ಚಂದ್ರಯ್ಯಗೌಡರು ಹೂವಯ್ಯನನ್ನು ಹೋಗಿ ನೋಡಿದರು. ರಾಮಯ್ಯನೂ ಚಿನ್ನಯ್ಯನೂ ಅಲ್ಲಿದ್ದರು ಸೋದರಳಿಯ ಚಿನ್ನಯ್ಯನೊಡನೆ ವಿನೋದವಾಗಿ ಸಲಿಗೆಯಿಂದ ಮಾತಾಡಿದರು. ಆದರೆ ಹೂವಯ್ಯನೊಡನೆಯೂ ರಾಮಯ್ಯನೊಡನೆಯೂ ಎಷ್ಟು ಆವಶ್ಯಕವೋ ಅಷ್ಟೇ ಮಾತಾಡಿದರು. ಹಾಗೆ ಮಾಡುವುದು ಮಲೆನಾಡಿನ ಮರ್ಜಿ. ಮನೆಯವರು ಹೊರಗಿನ ನೆಂಟರೊಡನೆ ವರ್ತಿಸುವಂತೆ ತಮ್ಮ ಮನೆಯವರೊಡನೆ ಸಲಿಗೆಯಿಂದ ವರ್ತಿಸುವುದಿಲ್ಲ. ಅದರಲ್ಲಿಯೂ ವಯಸ್ಸಾದ ಮಕ್ಕಳೊಡನೆ ತಂದೆಯಾದವನು ಔಪಚಾರಿಕವೆಂಬಂತೆ ವರ್ತಿಸುತ್ತಾನೆ. ಅಂತಹ ಪದ್ಧತಿಯಿಂದ ಕ್ರಮೇಣ ಅನಾಹುತವಾಗುತ್ತದೆ. ಉಪಚಾರ ಉದಾಸೀನವಾಗಿ ಕಡೆಗೆ ವೈರವಾಗುವ ಸಂಭವವೂ ಉಂಟು. ಚಂದ್ರಯ್ಯಗೌಡರು ತಮ್ಮ ಮನೆಮಕ್ಕಳಾದ ಹೂವಯ್ಯ ರಾಮಯ್ಯರೊಡನೆ ವರ್ತಿಸಿದಂತೆಯೇ ಶ್ಯಾಮಯ್ಯಗೌಡರೂ ಚಿನ್ನಯ್ಯನೊಡನೆ ವರ್ತಿಸುತ್ತಿದ್ದರು. ಅತಿಥಿಬಂಧುಗಳೊಡನೆ ಸರಸವಾಗಿರಬೇಕು, ನಿಜ. ಆದರೆ ಮನೆಮಂದಿಯೊಡನೆಯೂ ಯಜಮಾನನಾದವನು ಉಲ್ಲಾಸದಿಂದಲೂ ಸ್ನೇಹದಿಂದಲೂ ಸಲುಗೆ ವಿನೋದಗಳಿಂದಲೂ ನಡೆದುಕೊಂಡರೆ ತಪ್ಪೇನು? ಹಾಗೆ ಮಾಡಿದರೆ ಸಣ್ಣಬುದ್ಧಿ, ವೈಮನಸ್ಸು, ತಂದುಹಾಕುತನಗಳಿಗೆ ಅವಕಾಶ ಕಡಿಮೆಯಾಗಿ ಸಂಸಾರ ಹೆಚ್ಚು ಸುಖಮಯವಾಗುತ್ತದಲ್ಲವೆ?

ಒಂದು ಹಸುವನ್ನು ಹುಲಿ ಹಿಡಿದಿದೆ ಎಂಬ ಸುದ್ದಿಯನ್ನು ಕೇಳಿ ರಾಮಯ್ಯನೂ

ಚಿನ್ನಯ್ಯನೂ ಅದನ್ನು ಪರೀಕ್ಷಿಸಲು ಹೊರಟುಹೋದಮೇಲೆ, ಹೂವಯ್ಯನ ಇಷ್ಟಾನುಸಾರವಾಗಿ ಸೀತೆ ಅವನ ಟ್ರಂಕಿನಿಂದ ಕೆಲವು ಪುಸ್ತಕಗಳನ್ನು ತಂದು ಕೊಟ್ಟಳು. ಆ ಕೆಲಸವನ್ನು ಎಷ್ಟು ಹೆಮ್ಮೆಯಿಂದ ಮಾಡಿದಳೆಂದರೆ ಅದನ್ನು ನೋಡಿದವರು ಯಾರಿಗಾದರೂ ಅದರಲ್ಲಿ ಸೇವೆಗೆ ಬೇಕಾಗುವುದಕ್ಕಿಂತಲೂ ಅತಿಶಯವಾದ ಶ್ರದ್ಧೆಯಿದ್ದುದು ಗೊತ್ತಾಗುತ್ತಿತ್ತು. ಅವಳು ಪುಸ್ತಕಗಳನ್ನು ಎತ್ತಿತಂದು ಕೊಟ್ಟದ್ದರಲ್ಲಿ ಸತಿಯು ಪತಿಗೆ ತನ್ನ ಶಿಶುವನ್ನು ನೀಡುವ ರೀತಿಯಿತ್ತು. ಪುಸ್ತಕವಾಸನೆಯಿಂದಲೂ, ಕೆಂಪು ಹಸುರು ಮೊದಲಾದ ಬಣ್ಣದ ಬೈಂಡು ಗಳಿಂದಲೂ, ತಾನರಿಯದ ವಿಚಿತ್ರವಾದ ಇಂಗ್ಲಿಷು ಲಿಪಿಗಳಿಂದಲೂ ಭಾರವಾಗಿ ಭವ್ಯವಾಗಿ ನಿಗೂಢವಾಗಿದ್ದ ಆ ಗ್ರಂಥಸಮೂಹಗಳನ್ನು ಸ್ಪರ್ಶಿಸುವ ಅದೃಷ್ಟ ದೊರಕಿದುದು ಸೀತೆಗೆ ಒಂದು ಸೌಭಾಗ್ಯವೆಂಬಂತೆ ತೋರಿತ್ತು. ಅವಳು ಕನ್ನಡದ ಕಥೆ ಕಾದಂಬರಿಗಳನ್ನೇನೊ ಓದಿದ್ದಳು. ಅವಳ ಹತ್ತಿರವೂ ಕೆಲವು ಪುಸ್ತಕಗಳಿದ್ದುವು. ಆದರೆ ಆ ಪುಸ್ತಕಗಳಿಗೂ ಹೂವಯ್ಯನ ಆಂಗ್ಲೇಯ ಪಹಿಗಳಿಗೂ ಇದ್ದ ರೂಪ ತಾರತಮ್ಯ ಕಾಫಿತೋಟದ ಕೂಲಿಗೂ ಕಾಫಿತೋಟದ 'ದೊರೆ'ಗೂ ಇದ್ದ ವ್ಯತ್ಯಾಸದಂತಿತ್ತು. ಹೂವಯ್ಯನಲ್ಲಿ ಆಕೆಗೆ ಮೊದಲೇ ಇದ್ದ ಅನುರಾಗ ಗೌರವಗಳು ಅವನು ಓದುತ್ತಿದ್ದ ಆ ಹೊತ್ತಗೆಗಳನ್ನು ನೋಡಿ ಇಮ್ಮಡಿಯಾದುವು. ಆ ಪುಸ್ತಕಗಳನ್ನು ತೆರೆದು ನೋಡಬೇಕೆಂಬ ಮಹದಾಸೆ ಆಕೆಗೆ ಬಹಳವಾಗಿತ್ತು. ಹೂವಯ್ಯನಿಗೂ ಆಕೆಯ ಮನಸ್ಸು ತಿಳಿದು ಸಂತೋಷ ದಿಂದ ಒಂದು ಚರಿತ್ರೆಯ ಪುಸ್ತಕವನ್ನು ಕೊಟ್ಟು, ಚಿತ್ರಗಳನ್ನು ನೋಡುವಂತೆ ಹೇಳಿ, ತಾನು ಕವನ ಗ್ರಂಥವೊಂದನ್ನು ಓದುತ್ತ ದಿಂಬಿನಮೇಲೆ ಒರಗಿ ಕುಳಿತನು. ಕೆಲವು ಕ್ಷಣಗಳಲ್ಲಿ ಅವನ ಮನಸ್ಸು ಸೀತೆ ಮುತ್ತಳ್ಳಿಗಳನ್ನೆಲ್ಲ ಮರೆತು ಕವನಗಳ ಕಲ್ಪನಾಜಗತ್ತಿನ ಸೌಂದರ್ಯ ವೈಭವಗಳ ಸ್ವರ್ಗದಲ್ಲಿ ವಿಹರಿಸತೊಡಗಿತು. ನಗರದ ದ್ರುತಪದ ಸಂಚಾರಮಯವಾದ ಧೂಳೀ ಧೂಸರ ವಾತಾವರಣದಲ್ಲಿ ಸಪ್ಪೆಯಾಗಿ ತೋರುತ್ತಿದ್ದ ಕವನಗಳೂ ಆ ಮಲೆನಾಡಿನ ಶ್ಯಾಮಲ ಶೀತಲ ಸುಂದರ ಪ್ರಕೃತಿ ಪ್ರಪಂಚದ ಸಂಸರ್ಗದಲ್ಲಿ ಭಾವಪುಂಜಗಳಾಗಿ ರಂಜಿಸಿದುವು. ಕಿಟಕಿಯಲ್ಲಿ ತೂರಿಬಂದ ಪ್ರಾತಃಕಾಲದ ಹಸುಳೆಬಿಸಿಲೂ, ಹೊರಗಡೆ ಮರಗಿಡ ಗಳಲ್ಲಿ ಇಂಚರಗೈಯುತ್ತಿದ್ದ ಪಿಕಳಾರಹಕ್ಕಿಗಳ ಸವಿದನಿಯೂ, ಸದ್ಯಃ ವಿಸ್ಮೃತ ವಾಗಿದ್ದರೂ ಅವ್ಯಕ್ತ ಸ್ಮೃತವಾಗಿದ್ದ ಪ್ರೀತಿಯ ಲಲನೆಯೊಬ್ಬಳ ಮಧುರ ಸಾನ್ನಿಧ್ಯವೂ ಅವನ ಕಲ್ಪನೆಗೆ ರೆಕ್ಕೆ ಬರುವಂತೆ ಮಾಡಿದ್ದುವು.

ಪುಸ್ತಕದಲ್ಲಿದ್ದ ಚಿತ್ರಗಳನ್ನು ನೋಡುತ್ತಿದ್ದ ಸೀತೆ ಎರಡು ಮೂರು ಸಾರಿ ತಲೆಯೆತ್ತಿ ನೋಡಿದಳು, ಬಾವನನ್ನು ಕೇಳಿ ಚಿತ್ರಗಳ ಪರಿಚಯ ಮಾಡಿಕೊಳ್ಳ

ಬೇಕೆಂಬ ಆಸೆಯಿಂದ. ಆದರೆ ತನ್ಮಯನಾಗಿದ್ದ ಬಾವನ ಗಮನ ಆಕೆಯ ಕಡೆಗೆ ತಿರುಗಲಿಲ್ಲ. ನಾಲ್ಕನೆಯ ಸಾರಿ ತಲೆಯೆತ್ತಿ ನೋಡಿದವಳು ಮತ್ತೆ ತಲೆ ತಗ್ಗಿಸ ಲಿಲ್ಲ. ಪ್ರಸ್ತರಮೂರ್ತಿಯಂತೆ ನಿಷ್ಪಂದವಾಗಿದ್ದ ಬಾವನ ಮುಖವನ್ನೇ ನೋಡತೊಡಗಿದಳು.

ಹೂವಯ್ಯನ ಮುಖವು ಭಾವೋತ್ಕರ್ಷದಿಂದಲೂ ಹರ್ಷದಿಂದಲೂ ಆಗ ತಾನೆ ಅಭ್ಯಂಜನ ಮಾಡಿದವನ ಮುಖದಂತೆ ಕೆಂಪಾಗಿತ್ತು. ಕಣ್ಣು ಸಲಿಲಾ ವೃತವಾಗಿ ಮಿರುಗುತ್ತಿದ್ದುವು. ಒಮ್ಮೊಮ್ಮೆ ಎದೆಯುಬ್ಬಿ ಬೀಳುತ್ತಿತ್ತು. ಸೀತೆ ನೋಡುತ್ತಿದ್ದಹಾಗೆಯೆ ಮೆಲ್ಲೆಲರು ಬೀಸಿದಾಗ ಹೂವಿನಿಂದ ಹನಿಗಳು ದುರುವಂತೆ ಅವನ ಕಣ್ಣುಗಳಿಂದ ವಾರಿಬಿಂದುಗಳೂ ಸೂಸತೊಡಗಿದುವು. ಹೂವಯ್ಯ ಕಣ್ಣುಮುಚ್ಚಿದನು. ಓದುತ್ತಿದ್ದ ಪುಸ್ತಕ ಕೈಯಲ್ಲಿ ಹಾಗೆಯೇ ಇತ್ತು. ಅದನ್ನು ನೋಡಿ ಮುಗ್ಧೆಯಾದ ಸೀತೆಯ ಹೃದಯದಲ್ಲಿ ಭಯ ಸಂಚಾರವಾಯಿತು. ಆಕೆಯ ಮನಸ್ಸಿನಲ್ಲಿ ಏನೇನೊ ಭಾವನೆಗಳು ಮಿಂಚಿ ದುವು. ಬಾವನು ಬೆನ್ನುನೋವಿನಿಂದ ಅಳುತ್ತಿದ್ದಾರೆ ಎಂದುಕೊಂಡಳು. ಮಾತಾಡಿಸಿ ಕೇಳಬೇಕೆಂದು ಹವಣಿಸಿದಳು. ಆದರೆ ಏಕೋ ಏನೋ ಮಾತಾ ಡಿಸಲೂ ಸಾಧ್ಯವಾಗಲಿಲ್ಲ. ಬಹುಶಃ ಬುದ್ಧಿಗೆ ಗೋಚರವಾಗದಿದ್ದರೂ ಆಕೆಯ ಅಂತರಂಗಕ್ಕೆ ಗೋಚರವಾಗಿದ್ದಿರಬಹುದು, ಹೂವಯ್ಯನ ರಸಸಮಾಧಿಯ ದಿವ್ಯಾವಸ್ಥೆ! ಬಾವನಿಗೆ 'ಮೈಮೇಲೆ ಬಂದಿರಬಹುದು' ಎಂದು ಆಲೋಚಿಸಿ ಬೆದರಿದಳು. ಅನೇಕಬಾರಿ ದೆವ್ವ ಹಿಡಿಯುವುದನ್ನು ನೋಡಿದ್ದಳು. ನಂಜನ ಹೆಂಡತಿ ಗರ್ಭಿಣಿಯಾಗಿದ್ದಾಗ ಅವಳಿಗೆ ಮೈಮೇಲೆ ಬರುತ್ತಿದ್ದುದನ್ನು ಕಂಡು ಅನೇಕಸಾರಿ ಸ್ತಂಭಿತೆಯಾಗಿದ್ದಳು. ಆದರೆ ಬಾವನಲ್ಲಿ 'ಮೈಮೇಲೆ' ಬರುವ ಭಯಂಕರ ಚಿಹ್ನೆಗಳಿರಲಿಲ್ಲ. ಅದಕ್ಕೆ ಬದಲಾಗಿ ಮುಖ ಸೌಮ್ಯಸುಂದರ ವಾಗಿತ್ತು. ಬಾಲೆಯ ಹೃದಯವು ವಿವಿಧ ಭಾವ ಆಶಂಕೆಗಳಿಂದ ತಾಡಿತವಾಗಿ, ಪುಸ್ತಕವನ್ನು ಮುಚ್ಚುವ ನೆವದಿಂದ ಸ್ವಲ್ಪ ಸದ್ದುಮಾಡಿ, ಎದ್ದುನಿಂತಳು.

ಹೂವಯ್ಯ ಕಣ್ದೆರೆದನು. ತಟಕ್ಕನೆ ತನ್ನ ಸ್ಥಿತಿಯ ಮತ್ತು ಸನ್ನಿವೇಶದ ನೆನಪಾಗಿ, ಇನ್ನೊಬ್ಬರ ಮುಂದೆ ಭಾವಪ್ರದರ್ಶನ ಮಾಡಿಬಿಟ್ಟೆನಲ್ಲಾ ಎಂದು ನಾಚಿ ಮುಖವನ್ನು ಉಜ್ಜಿಕೊಳ್ಳುವವನಂತೆ ನಟಿಸಿ ಕಣ್ಣೀರೊರಸಿಕೊಂಡನು. ಸೀತೆ ಆಗತಾನೆ ಪುಸ್ತಕವನ್ನು ಮುಚ್ಚಿ ಕಿಟಕಿಯ ಕಡೆಗೆ ನೋಡುವಂತೆ ಅಭಿನಯ ಮಾಡುತ್ತಿದ್ದುದರಿಂದ ತನ್ನ ಭಾವಾವೇಶ ಅವಳಿಗೆ ತಿಳಿದಿಲ್ಲ ಎಂದುಕೊಂಡು ಸಮಾಧಾನಚಿತ್ತನಾಗಿ, ಮರೆಮಾಚಲೆಳಸುವ ಸಲುವಾಗಿ "ಚಿತ್ರ ಎಲ್ಲ ನೋಡಿ ಯಾಯ್ತೇನು?" ಎಂದು ಮಾತು ತೆಗೆದನು.

ಬಾವನ ಶಾಂತವಾಣಿಯನ್ನು ಕೇಳಿ ಸೀತೆಗೆ, ತಾನು ಊಹಿಸಿದುದೆಲ್ಲ ತಪ್ಪಾಯಿತೆಂದು ಆಶ್ಚರ್ಯವಾಯಿತು. ಸಂತೋಷದಿಂದ ಸಮ್ಮತಿಸಿ ಅವನನ್ನೆ ನೋಡುತ್ತ ನಿಂತಳು.

ಅವಳ ಮುಖಭಂಗಿಯಲ್ಲಿದ್ದ ಪ್ರಶ್ನೆಯನ್ನು ನಿವಾರಿಸಲೋಸುಗ ಹೂವಯ್ಯ "ಏನೇನು ಚಿತ್ರ ನೋಡಿದೆ?" ಎಂದನು.

"ನೋಡಿದ್ದೆ, ಗೊತ್ತಾಗಲಿಲ್ಲ."

"ನನ್ನ ಕೇಳಿದ್ದರೆ ಹೇಳ್ತಿದ್ದೆ"

ಸೀತೆ ಬಹಳ ಸಂತೋಷದಿಂದ "ನೀವು ಕಣ್ಣು ಮುಚ್ಚಿಕೊಂಡಿದ್ರಿ. ಬೆನ್ನು ನೋವು ಹೆಚ್ಚಾಗಿದೆ ಅಂತ ಕೇಳಲಿಲ್ಲ" ಎಂದಳು.

ಹಾಗಾದರೆ ಸೀತೆ ನೋಡಿಬಿಟ್ಟಿದ್ದಾಳೆ!

"ಬೆನ್ನು ನೋವಲ್ಲ. ಸುಮ್ಮನೆ ಕಣ್ಣು ಮುಚ್ಚಿಕೊಂಡು ಏನನ್ನೋ ಆಲೋಚಿಸುತ್ತಿದ್ದೆ... ನಮ್ಮ ಮನೆಯಿಂದ ಗಾಡಿ ಬರ್ತದೆ ಅಂತ ಹೇಳಿದರು ಚಿಕ್ಕಯ್ಯ..."

"ಹೌದು ಅತ್ತೆಮ್ಮ, ವಾಸು, ಪುಟ್ಟತ್ತಿಗಮ್ಮ ಬರ್ತಾರಂತೆ." ಎಂದ ಸೀತೆ ಬಹಳ ಸಂಕೋಚದಿಂದ "ಅಳ್ತಿದ್ರಲ್ಲಾ ಯಾಕೆ?" ಎಂದು ಕೇಳಿಯೇ ಬಿಟ್ಟಳು.

ಹೂವಯ್ಯ ಅವಳ ಪ್ರಶ್ನೆ ಬಹಳ ಲಘುವಾದುದರಿಂದ ಉತ್ತರಕ್ಕೆ ಕೂಡ ಅರ್ಹವಾದುದಲ್ಲವೆಂದು ನಕ್ಕು ನಿವಾರಿಸುವಂತೆ "ಯಾರು ಅಳುತ್ತಿದ್ದದ್ದು?" ಎಂದನು.

"ಕಣ್ಣಿನಲ್ಲಿ ನೀರು ಸುರೀತಿತ್ತು!"

ಸೀತೆಯ ಕೈಯಿಂದ ತಪ್ಪಿಸಿಕೊಳ್ಳಲಾಗಲಿಲ್ಲ. ಹೂವಯ್ಯನ ಮುಖ ಗಂಭೀರವಾಯಿತು. ಥಕ್ಕನೆ ಆದ ವ್ಯತ್ಯಾಸವನ್ನು ಕಂಡು ಸೀತೆ ಚಕಿತೆಯಾದಳು. ತಾನು ಕೇಳಿದುದು ಅಪರಾಧವಾಯಿತೋ ಏನೋ ಎಂದು.

ಹೂವಯ್ಯ ಪ್ರಯತ್ನ ಪೂರ್ವಕವಾದ ಸರಸವಾಣಿಯಿಂದ "ಸೀತೆ, ನೀನು ಯಾವಾಗಲೂ ಅತ್ತುದಿಲ್ಲವೇ?" ಎಂದು ಕೇಳಿದನು.

"ಅತ್ತಿದ್ದೆ."

"ಯಾವಾಗ?"

"ಯಾರಾದರೂ ಬೈದಾಗ, ಅಪ್ಪ ಹೊಡೆದಾಗ, ಬಿದ್ದು ನೋವಾದಾಗ" ಸೀತೆ ತನ್ನ ಮಾತಿಗೆ ತಾನೆ ಮುಗುಳು ನಗುತ್ತಿದ್ದಳು.

"ಮತ್ತೆ ಯಾವಾಗಲೂ ಕಣ್ಣೀರು ಸುರಿಸಿಲ್ಲವೇ?"

ಸೀತೆ ಅಪ್ರತಿಭಳಾಗಿ ಸ್ವಲ್ಪ ಹೊತ್ತು ಸುಮ್ಮನಿದ್ದಳು.

"ಅತ್ತೆಮ್ಮ ನಿನ್ನ ಬಿಟ್ಟು ನೆಂಟರ ಮನೆಗೆ ಹೋದಾಗ?"

"ಹೌದು, ಅತ್ತಿದ್ದೆ!"

"ಕಥೆ ಕೇಳುತ್ತಿದ್ದಾಗ ಅಥವಾ ಓದುತ್ತಿದ್ದಾಗ ಯಾವಾಗಲಾದರೂ ಅತ್ತಿದ್ದೀಯೇನು?"

ಸೀತೆ ಆಲೋಚಿಸಿದಳು. ಕಾದಂಬರಿಗಳನ್ನು ಓದುತ್ತಿದ್ದಾಗ ಗುಟ್ಟಾಗಿ ಕಣ್ಣೀರು ಕರೆದಿದ್ದುದು ಅವಳ ನೆನಪಿಗೆ ಬಂದಿತು. ಹಿಂದೆ ಒಂದು ಸಾರಿ ಹೂವಯ್ಯನು ಕಾನೂರಿನಲ್ಲಿ ನಾಗಮ್ಮ, ಗೌರಮ್ಮ, ಸೀತೆ ವಾಸು ಇವರಿಗೆ "ವಿಷವೃಕ್ಷ"ವನ್ನು ಓದಿ ಹೇಳುತ್ತಿದ್ದಾಗ ಸೀತೆ ಅಳುವನ್ನು ತಡೆಯಲಾರದೆ ತಾಯಿಯ ಮರೆಯಲ್ಲಿ ಅವಿತು ಸೆರಗಿನಿಂದ ಕಣ್ಣೀರು ಒರಸಿಕೊಂಡಿದ್ದಳು.

"ಹೌದು, ಸುಮಾರು ಸಲ ಹಾಂಗಾಗಿದೆ."

"ನೀನೆಂದಾದರೂ ಬೈಗಿನ ಹೊತ್ತು ನಿಮ್ಮ ಮನೆ ಮೇಲಿನ ಗುಡ್ಡದ ನೆತ್ತಿಗೆ ಹೋಗಿರುವೆಯೇನು?"

"ಹ್ಞ, ಹೋಗಿದ್ದೀನಿ."

"ಅಲ್ಲಿ ಪಶ್ಚಿಮ ದಿಕ್ಕಿನಲ್ಲಿ ಸೂರ್ಯ ಮುಳುಗುವುದನ್ನು ಕಂಡಿದ್ದೀಯೇನು?"

"ಕಂಡೀನಿ" ಎಂದವಳು ಥಕ್ಕನೆ "ಕಂಡಿದ್ದೇನೆ" ಎಂದು ಸರಿಮಾಡಿಕೊಂಡಳು. ಅವಳ ಭಾಷೆಯೂ ಅನುಕರಣದಿಂದ ಹೂವಯ್ಯನ ಭಾಷೆಯ ಮಟ್ಟಕ್ಕೆ ಅನೈಚ್ಛಿಕವಾಗಿಯೆ ಏರುತ್ತಿತ್ತು. ಹೂವಯ್ಯನ ಇಷ್ಟದಂತೆ ಸೀತೆ ಚಾಪೆಯ ಮೇಲೆ ಕೂತುಕೊಂಡಳು.

"ಆ ಸಂಧ್ಯಾ ಸೌಂದರ್ಯವನ್ನು ನೋಡಿ ಯಾವಾಗಲಾದರೂ ಕಣ್ಣೀರು ಕರೆದಿರುವೆಯೇನು?"

"ಇಲ್ಲ" ಎಂದಳು ಸೀತೆ. ಅವಳಿಗೆ ಹೂವಯ್ಯನ ಪ್ರಶ್ನೆಯ ಅರ್ಥ ಭಾವ ಸಾರ್ಥಕ್ಯಗಳೊಂದೂ ಗೊತ್ತಾಗಲಿಲ್ಲ.

ಹೂವಯ್ಯ ಹೇಳತೊಡಗಿದನು. ಸೀತೆಗೆ ಸ್ವಲ್ಪ ಅರ್ಥವಾಯಿತು. ಬಹಳ ಪಾಲು ಅರ್ಥವಾಗಲಿಲ್ಲ. ದೂರದರ್ಶಕ ಯಂತ್ರದಲ್ಲಿ ನೋಡುತ್ತಿರುವವನು ಬರಿಗಣ್ಣಿಗೆ ಕಾಣುವ ಮತ್ತು ಕಾಣದ ನಕ್ಷತ್ರ ರಾಶಿಗಳನ್ನು ವರ್ಣಿಸುತ್ತಿದ್ದರೆ, ಪಕ್ಕದಲ್ಲಿರುವವನು ಸುಮ್ಮನೆ ಆಕಾಶದ ಕಡೆಗೆ ನೋಡಿ 'ಹೂಂ' ಗುಡುವಂತೆ ಸೀತೆ ನಡುನಡುವೆ ಹ್ಞಾ, ಹ್ಞೂ, ಹೌದು, ಇಲ್ಲ, ಎಂಬ ಬಿಡಿಮಾತುಗಳನ್ನು ಮಾತ್ರ ಹೇಳುತ್ತಿದ್ದಳು. ಮಾತಾಡುತ್ತಿದ್ದವನು ಪ್ರೀತಿ ಪಾತ್ರನಾಗಿದ್ದುದರಿಂದ ಆಕೆ ತನ್ಮಯೆಯಾಗಿ ಆಲಿಸಿದಳು. ಕೇಳುತ್ತ ಕೇಳುತ್ತ ಸಹಾನುಭೂತಿಯಿಂದ ಆಕೆಯ ಭಾವವೂ ಕಲ್ಪನೆಯೂ ಉತ್ಕರ್ಷವಾಗತೊಡಗಿದುವು. ಬುದ್ಧಿಯಿಂದ

ತಿಳಿಯಲಾರದುದು ಭಾವಗೋಚರವಾಗಿ ಆಕೆಯ ಹೃದಯದಲ್ಲಿ ಯಾವುದೊ ಒಂದು ಮಹಾ ಪರಿವರ್ತನೆಯುಂಟಾಗುತ್ತಿತ್ತು.

ಹೂವಯ್ಯ ಮಾತಾಡುತ್ತಿದ್ದಾಗ ಸೀತೆಯ ಕಣ್ಣುಗಳನ್ನೇ ಎವೆಯಿಕ್ಕದೆ ನೋಡುತ್ತಿದ್ದನು. ಸೀತೆಯೂ ಬಾವನ ಮುಖವನ್ನೇ ನೋಡುತ್ತಿದ್ದಳು. ಆಗ ಹೂವಯ್ಯನಲ್ಲಾಗಲಿ ಸೀತೆಯಲ್ಲಾಗಲಿ ಪ್ರಿಯ ಪ್ರೇಯಸಿಯರ ಭಾವವಿರಲಿಲ್ಲ. ವಿಷಯದ ಉದಾರ ಔನ್ನತ್ಯ ಅವರಿಬ್ಬರ ಆತ್ಮಗಳನ್ನು ಶಾರೀರಕತೆಗೆ ಅತೀತವಾಗಿ ಮಾಡಿತ್ತು. ಆಗ ಅವರಿಬ್ಬರಿಗಿದ್ದ ಸಂಬಂಧ ಸ್ವಲ್ಪ ಹೆಚ್ಚುಕಡಿಮೆ ಗುರು ಶಿಷ್ಯೆಯರದಾಗಿತ್ತು.

"ನಾನು ಕಣ್ಣೀರು ಕರೆದಿದ್ದೇನೆ, ಸೀತೆ. ಸಂಧ್ಯಾಸೌಂದರ್ಯವನ್ನು ನೋಡಿದಾಗ ನಿನಗೆ ಕಣ್ಣೀರು ಬರಲಿಲ್ಲ ಎಂದು ಹೇಳಿದೆಯಲ್ಲವೆ? ನನಗೆ ಕಣ್ಣೀರು ಬಂದಿದೆ. ಎಷ್ಟೋಸಾರಿ ಬಂದಿದೆ..."

ಸೀತೆಗೆ ಬೈಗಿನ ಆಕಾಶವನ್ನು ನೋಡಿ ಏಕೆ ಕಣ್ಣೀರು ಸುರಿಸಬೇಕೋ ಅರ್ಥವಾಗದೆ ಸುಮ್ಮನೆ ಬೆಪ್ಪಾಗಿ ಕುಳಿತಿದ್ದಳು. ಆದರೂ ತಾನು ಹಾಗೆ ಮಾಡದಿದ್ದುದು ಆಕೆಗೊಂದು ಲೋಪವಾಗಿ ಕಂಡಿತು.

"ಅಷ್ಟೇ ಅಲ್ಲ. ಬೆಟ್ಟದ ನೆತ್ತಿಯ ಮೇಲೆ ನಿಂತು, ಕಣ್ಣು ಹೋಗುವವರೆಗೂ ಹಬ್ಬಿರುವ ದೊಡ್ಡ ಕಾಡುಗಳನ್ನು ನೋಡಿದಾಗ ಕಣ್ಣೀರು ಕರೆದಿದ್ದೇನೆ. ಪೂರ್ವ ದಿಗಂತದಲ್ಲಿ ಸೂರ್ಯಬಿಂಬ ಕೆಂಪು ಕುಂಕುಮದಲ್ಲಿ ಮಿಂದು ಮೂಡುತ್ತಿದ್ದಾಗ ನೋಡಿ ಕಣ್ಣೀರು ಕರೆದಿದ್ದೇನೆ! ಮುಂಗಾರಿನ ಪ್ರಾರಂಭದಲ್ಲಿ ಆಕಾಶವನ್ನೆಲ್ಲ ಕರಿಮುಗಿಲು ತುಂಬಿ, ಮಹಾಸರ್ಪದ ಮಹಾಜಿಹ್ವೆಗಳಂತೆ ಬಳ್ಳಿ ಮಿಂಚು ಕುಣಿಯುವುದನ್ನು ನೋಡಿ ಕಣ್ಣೀರು ಕರೆದಿದ್ದೇನೆ... ಪೂರ್ಣಿಮಾ ರಾತ್ರಿಯಲ್ಲಿ ಚಂದ್ರನು ಶುಭ್ರ ಜ್ಯೋತ್ಸ್ನೆ... (ಎದುರು ಕುಳಿತಿದ್ದವಳು ಸೀತೆ ಎಂಬುದು ಅವನ ನೆನಪಿಗೆ ಬಂದು) ಹುಣ್ಣಿಮೆ ರಾತ್ರಿಯಲ್ಲಿ ತಿಂಗಳ ಬೆಳಕು ಹಾಲು ಚೆಲ್ಲಿದಂತೆ ಕಾಡುಗಳ ಮೇಲೆ ಮಲಗಿರುವುದನ್ನು ನೋಡಿ ಕಣ್ಣೀರು ಕರೆದಿದ್ದೇನೆ... ಮಹಾತ್ಮರ ಕಥೆಗಳನ್ನು ಓದುತ್ತ ಕಣ್ಣೀರು ಕರೆದಿದ್ದೇನೆ... ನಿನಗೆ ಆಶ್ಚರ್ಯವಾಗಬಹುದು. ಉಳಿದ ಎಲ್ಲರಿಗಿಂತಲೂ ಇವರಿಗೆ ಕಣ್ಣೀರು ಹೆಚ್ಚಾಗಿರಬೇಕೆಂದು ಊಹಿಸಬಹುದು... ಹಾಗಾದರೆ ನನಗೇಕೆ ಕಣ್ಣೀರು ಬರುತ್ತದೆ? ಹೇಳು!... (ಸೀತೆ ಪೆಚ್ಚಾಗಿ ಸುಮ್ಮನಿದ್ದಳು) ... ನಿನಗೂ ಕಣ್ಣೀರು ಕರೆಯುವ ಶಕ್ತಿಯಿದೆ, ಸೀತೆ. ನಿನಗೆ ಯಾರೂ ಅದನ್ನು ಹೇಳಿಕೊಟ್ಟಿಲ್ಲ. (ಸೀತೆ ಮರುಗು ದನಿಯಿಂದಲೋ ಎಂಬಂತೆ "ಇಲ್ಲ" ಎಂದಳು.) ಚಿಂತೆಯಿಲ್ಲ, ನಾನು ಹೇಳಿಕೊಡುತ್ತೇನೆ. ಆಮೇಲೆ ನಿನ್ನ ದೃಷ್ಟಿ ಬದಲಾಯಿಸುತ್ತದೆ. ನಿನ್ನ ಆತ್ಮವೇ ಬೇರೆಯಾಗು

ತ್ತದೆ. . .ಜಗತ್ತೆಲ್ಲ ಆನಂದಮಯವಾಗುತ್ತದೆ. ದುಃಖವೂ ಕೂಡ ಮಧುರವಾಗು ತ್ತದೆ. . ."

ಸೀತೆಗೆ ಕಣ್ಣರಳಿತು. ಮನೋಹರವಾದ ನೂತನ ಪ್ರಪಂಚವನ್ನು ಸಂದರ್ಶಿಸಲು ಪ್ರಯಾಣ ಬೆಳೆಸುವ ಯಾತ್ರಿಕನಿಗಾಗುವ ಉಲ್ಲಾಸದ ಅನುಭವವಾಯಿತು. ಆ ಜಗತ್ತಿನ ವಿಷಯದಲ್ಲಿ ಆಕೆಗಿದ್ದ ಅನಿಶ್ಚಯತೆ ಅಪರಿಚಯತೆಗಳೇ ಕುತೂಹಲವನ್ನು ಮತ್ತೂ ಉಜ್ವಲಗೈದುವು.

"ನೀನು ನಿತ್ಯವೂ ಪ್ರಾರ್ಥನೆ ಮಾಡುತ್ತೀಯೇನು?"

ಸೀತೆ ಅಂಗಳದಲ್ಲಿದ್ದ ತುಲಸಿಯ ದೇವರಿಗೆ ಇತರರು ಮಾಡುತ್ತಿದ್ದಂತೆ ಆಗಾಗ ಕೈಮುಗಿದು ಅಡ್ಡಬೀಳುತ್ತಿದ್ದಳು. ಆದರೆ ಅದು ಬರಿಯ ಅನುಕರಣವಾಗಿದ್ದಿತೇ ಹೊರತು ಭಾವವಾಗಿರಲಿಲ್ಲ. ಅಲ್ಲದೆ ಮನೆಯವರು ವರ್ಷಕ್ಕೊಂದು ಸಾರಿ ಸಮೀಪದ ಬನದಲ್ಲಿ ಕೋಳಿ ಕುರಿಗಳನ್ನು ಬಲಿ ಕೊಡುತ್ತಿದ್ದ ಭೂತಗಳಿಗೆ ಎಲ್ಲರಂತೆ ಕೈಮುಗಿಯುತ್ತಿದ್ದಳು. ದೊಡ್ಡವರು ಕಷ್ಟ ನಿವಾರಣೆಗಾಗಿಯೂ ಭಯದಿಂದಲೂ ನಮಸ್ಕಾರ ಮಾಡಿದರೆ ಚಿಕ್ಕವರು ಹಾಗೆ ಮಾಡದಿದ್ದರೆ ಹಿರಿಯವರು ಬೈಯುತ್ತಾರೆಂದು ಅಂಧಶ್ರದ್ಧೆಯಿಂದ ಆಚರಿಸುತ್ತಿದ್ದರು.

ಅಂತೂ ಹೂವಯ್ಯನ ಪ್ರಶ್ನೆಗೆ ಸೀತೆ "ಇಲ್ಲ" ಎಂದಳು.

"ಪ್ರಾರ್ಥನೆ ಮಾಡಬೇಕು, ಸೀತೆ, ಪ್ರಾರ್ಥನೆ ಮಾಡಬೇಕು. ನೋಡು, ದೇವರು ಈ ಪ್ರಪಂಚವನ್ನೆಲ್ಲ ನಿರ್ಮಿಸಿದ್ದಾನೆ. ನನ್ನನ್ನೂ ನಿನ್ನನ್ನೂ ಇತರರನ್ನೂ ನಿರ್ಮಿಸಿದ್ದಾನೆ. ನಮಗೆಷ್ಟು ಸುಖಸಂತೋಷಗಳನ್ನು ಕೊಟ್ಟಿದ್ದಾನೆ! ನೀನು ಮುಡಿದುಕೊಂಡಿದ್ದೀಯಲ್ಲ ಆ ಹೂವುಗಳನ್ನೂ ಅವನೇ ಮಾಡಿದ್ದಾನೆ. ನಿನ್ನ ಮನೋಹರವಾಗಿರುವ ಕಣ್ಣುಗಳನ್ನೂ ಅವನೇ ಮಾಡಿದ್ದಾನೆ. ಯೋಚನೆ ಮಾಡು: ಕಣ್ಣುಗಳಿಲ್ಲದಿದ್ದರೆ ಏನಾಗುತ್ತಿತ್ತು? ನಾನು ನಿನ್ನನ್ನು ನೋಡುವುದಕ್ಕಾಗುತ್ತಿರಲಿಲ್ಲ. ನೀನು ನನ್ನನ್ನು ನೋಡುವುದಕ್ಕಾಗುತ್ತಿರಲಿಲ್ಲ. . ."

ಹೂವಯ್ಯ ಪ್ರಯತ್ನಪೂರ್ವಕವಾಗಿ ಸೀತೆಯ ಮಟ್ಟಕ್ಕಿಳಿದು ಮಾತಾಡುತ್ತಿದ್ದನು.

"ಸೀತೆ, ನಾವು ಬರಿಯ ದೇಹಗಳಲ್ಲ. ನಮ್ಮಲ್ಲಿ ಆತ್ಮವಿದೆ. ಅದು ನಾವು ಅಂಗಿ ಹಾಕಿಕೊಳ್ಳುವಂತೆ ಈ ದೇಹವನ್ನು ಹಾಕಿಕೊಂಡಿದೆ. ನೀನು ಸೀರೆ ಉಟ್ಟುಕೊಂಡಿರುವಂತೆ ಈ ದೇಹವನ್ನು ಉಟ್ಟುಕೊಂಡಿದೆ. ನೀನು ಐಶ್ವರ್ಯವಂತರ ಮಗಳು, ಆದ್ದರಿಂದ ಸೊಗಸಾದ ಸೀರೆಯನ್ನು ಉಟ್ಟುಕೊಂಡು ಚೆನ್ನಾಗಿ ಕಾಣುತ್ತಿದ್ದೀಯ. ಬಡವರು ಬಡಸೀರೆ ಉಟ್ಟುಕೊಂಡಿರುತ್ತಾರೆ. ಅವರವರ

ಉಡುಗೆತೊಡುಗೆಗಳನ್ನು ನೋಡಿದರೆ ಸಾಧಾರಣವಾಗಿ ಅವರವರ ಅಂತಸ್ತು ತಕ್ಕಮಟ್ಟಿಗೆ ಗೊತ್ತಾಗುತ್ತದೆ. ಹಾಗೆಯೇ ದೇಹಗಳೂ ಆತ್ಮದ ಯೋಗ್ಯತೆಗೆ ತಕ್ಕ ಹಾಗಿರುತ್ತವೆ. . ಆದರೆ ಆ ಸೀರೆ ಎಷ್ಟುದಿವಸ ಬಾಳುತ್ತದೆ? ಹಳೆಯ ದಾದ ಕೂಡಲೆ ಬಿಸಾಡಿ ಮತ್ತೊಂದು ಹೊಸ ಸೀರೆ ಉಟ್ಟುಕೊಳ್ಳುತ್ತೀಯಷ್ಟೆ? ಹಾಗೆಯೆ ನಮ್ಮ ಆತ್ಮ ಈ ದೇಹ ಅಯೋಗ್ಯವಾದ ಕೂಡಲೆ ಅದನ್ನು ಬಿಸಾಡು ತ್ತದೆ. ಅದನ್ನೇ 'ಸಾವು' ಎಂದು ಕರೆಯುತ್ತಾರೆ. ದೇಹ ಹೋದರೂ ಆತ್ಮ ಹೋಗುವುದಿಲ್ಲ; ಆತ್ಮ ಶಾಶ್ವತವಾದುದು; ಅದು ದೇವರಿಗೆ ಸೇರಿದ್ದು. ಆದ್ದರಿಂದ ನಾವು ಹೆಚ್ಚಾಗಿ ಅದರ ಆರೈಕೆ ಮಾಡಬೇಕು. ನಿನ್ನ ಸೀರೆಯನ್ನು ಅದು ಹಳೆಯದಾಗುವವರೆಗೆ ಚೊಕ್ಕಟವಾಗಿ ಒಗೆದು ಮಡಿಮಾಡಿಕೊಳ್ಳುತ್ತೀಯ. ಆದರೆ ಅದಕ್ಕಿಂತಲೂ ಹೆಚ್ಚಾಗಿ ದೇಹವನ್ನು ಪೋಷಣೆ ಮಾಡಿಕೊಳ್ಳುವುದಿಲ್ಲವೆ? ಹಾಗೆಯೆ ನಾವೂ ಬದುಕಿ ಬಾಳುವವರೆಗೆ ದೇಹವನ್ನು ಚೊಕ್ಕಟವಾಗಿಡಬೇಕು. ಆದರೆ ಅದಕ್ಕಿಂತಲೂ ಶಾಶ್ವತವಾದ ಆತ್ಮದ ಪೋಷಣೆಯನ್ನು ಮರೆಯಬಾರದು. ಒಳ್ಳೆಯ ಮಾತು ಕತೆ, ಆಲೋಚನೆ ನಡತೆ ಇವುಗಳಿಂದ ನಮ್ಮ ಆತ್ಮ ಶುದ್ಧ ವಾಗುತ್ತದೆ; ದೇವರಿಗೆ ಪ್ರಿಯವಾಗುತ್ತದೆ. ಆದ್ದರಿಂದ ನಿತ್ಯವೂ ದೇವರನ್ನು ಪ್ರಾರ್ಥಿಸಬೇಕು: ಒಳ್ಳೆಯ ಮಾತು ಕೊಡು; ಒಳ್ಳೆಯ ಆಲೋಚನೆ ಕೊಡು; ನಮ್ಮೆಲ್ಲರನ್ನೂ ಕಾಪಾಡು, ಎಂದು — . . . ಗೊತ್ತಾಯಿತೆ? . . ."

ಸೀತೆ 'ಹ್ಞು' ಎಂದಳು. ಆಕೆಯ ಮುಖದಲ್ಲಿ ಕೃತಜ್ಞತೆ ತುಳುಕುತ್ತಿತ್ತು.

"ದೇವರು ಈ ಜಗತ್ತನ್ನೆಲ್ಲಾ ಸೃಷ್ಟಿ ಮಾಡಿದ್ದಾನೆ. ಅವನು ಎಲ್ಲೆಲ್ಲಿಯೂ ಇದ್ದಾನೆ. ಇಲ್ಲಿಯೂ ಇದ್ದಾನೆ. ನಾನು ನೀನು ಆಡುತ್ತಿರುವ ಈ ಮಾತು ಗಳನ್ನೂ ಕೇಳುತ್ತಿದ್ದಾನೆ. ಅವನು ಏನು ಬೇಕಾದರೂ ಮಾಡಲೂ ಶಕ್ತನು. ನಾವು ಅವನನ್ನು ಪ್ರೀತಿಸಬೇಕು. ಅದನ್ನೇ 'ಭಕ್ತಿ' ಎಂದು ಕರೆಯುತ್ತಾರೆ . . . ಅವನು ಈ ಜಗತ್ತನ್ನು ಮಾಡಿ, ದೂರ ಓಡಿಹೋಗಿ ಕೂತುಕೊಂಡಿಲ್ಲ. ಅದರಲ್ಲಿ ಐಕ್ಯವಾಗಿದ್ದಾನೆ. ಸೇರಿಕೊಂಡಿದ್ದಾನೆ — ಸಕ್ಕರೆಯನ್ನು ನೀರಿಗೆ ಹಾಕಿದರೆ ಕರಗಿ ಸೇರಿಕೊಳ್ಳುವಂತೆ! ಬೆಳಿಗ್ಗೆ ಸೂರ್ಯನಾಗಿ ಮೂಡಿ ಬರುತ್ತಾನೆ. ರಾತ್ರಿ ಕತ್ತಲೆಯ ರೂಪದಿಂದ ಬರುತ್ತಾನೆ. ಅವನೇ ಗಾಳಿಯಾಗಿ ಬೀಸುತ್ತಾನೆ. ಮಳೆಯಾಗಿ ಸುರಿಯುತ್ತಾನೆ. ಮಿಂಚಾಗಿ ಹೊಳೆಯುತ್ತಾನೆ. . . ನೋಡು, ನೀನು ಮುಡಿದುಕೊಂಡಿರುವ ಹೂವಿನ ಸೌಂದರ್ಯವೂ ಅವನೇ! ನಿನ್ನ ಸೌಂದರ್ಯವೂ ಅವನೇ! ನಾನು ಆಗ ಹೇಳಿದೆನಲ್ಲಾ ಆ ಸಂಧ್ಯಾ ಸೌಂದರ್ಯವೂ ಅವನೇ! ಆ ಸಂಧ್ಯಾ ಸೌಂದರ್ಯವನ್ನು ನೋಡಿದಾಗ ಅವನನ್ನೇ ನೋಡಿದಂತೆ ನನಗೆ ಅನುಭವವಾಗುತ್ತದೆ. ಆಗ ನನಗೆ ಅತ್ಯಾನಂದವಾಗುತ್ತದೆ. ಆದ್ದರಿಂದ

ಕಣ್ಣೀರು ಬರುತ್ತದೆ. ನಿನಗೂ ಆ ಅನುಭವವಾದರೆ ಕಣ್ಣೀರು ಬಂದೇ ಬರುತ್ತದೆ. ದುಃಖದಿಂದಲ್ಲ, ಸುಖದಿಂದ! ನಾ ಹೇಳಿದ್ದು ಗೊತ್ತಾಯಿತೇ?"

ಸೀತೆ ತಲೆಯಲ್ಲಾಡಿಸಿ ಸಮ್ಮತಿಸಿದಳು. ಅವಳ ಹೃದಯ ಭಾವದಿಂದ ತುಳುಕಿ ಕಣ್ಣು ಹನಿಹನಿಯಾಗಿತ್ತು. ಹೂವಯ್ಯ ಹೇಳಿದ ಮಾತುಗಳು ತಿಳಿದವರಿಗೆ ಅತ್ಯಂತ ಸಾಧಾರಣವಾಗಿದ್ದರೂ ಮುಗ್ಧಳಾದ ಸೀತೆಗೆ ಮಾತ್ರ ಕಣ್ಣೀರು ಸುರಿಸುವಷ್ಟು ಮಹತ್ತಾಗಿದ್ದುವು. ಕಂಬನಿ ಧಾರಾಕಾರವಾಗಿ ಅವಳ ಭಾವೋಜ್ಜ್ವಲ ಕಪೋಲಗಳ ಮೇಲೆ ಇಳಿಯತೊಡಗಿದುವು. ಹೂವಯ್ಯನ ಕಣ್ಣಿನಿಂದಲೂ ನೀರು ಹರಿಯಿತು.

"ಸೀತೆ, ನೀನೀಗ ಯಾಕೆ ಅಳುತ್ತಿದ್ದೀಯ?"

ಸೀತೆ ಮುಗುಳ್ನಗೆಯಿಂದ "ಇಲ್ಲ, ನಾನು ಅಳುತ್ತಾ ಇಲ್ಲ" ಎಂದು ಕಣ್ಣೀರೊರಸಿಕೊಂಡಳು.

"ಮತ್ತೇಕೆ ಕಣ್ಣೀರು?"

ಸೀತೆಗೆ ತನ್ನ ಅನುಭವವನ್ನು ವರ್ಣಿಸುವ ಬುದ್ಧಿಸಾಮರ್ಥ್ಯವಿಲ್ಲದೆ "ಯಾಕೋ ನನಗೆ ಗೊತ್ತಿಲ್ಲ" ಎಂದಳು.

"ಅದಕ್ಕಾಗಿಯೇ ನನಗೂ ಆಗ ಕಣ್ಣೀರು ಬಂದದ್ದು. ಮಹತ್ತಾದುದನ್ನು ಕಂಡರೂ ಕೇಳಿದರೂ ನಮ್ಮ ಮಹತ್ತಿನ ನೆನಪಾಗಿ ಸಂತೋಷದಿಂದ ಹಾಗಾಗುತ್ತದೆ. ಅಂಥಾ ಕಣ್ಣೀರನ್ನು ನಾವೆಷ್ಟು ಸುರಿಸಿದರೆ ಅಷ್ಟು ಧನ್ಯರಾಗುತ್ತೇವೆ! ದೊಡ್ಡದೆಲ್ಲಾ ದೇವರೇ!..."

ಇಬ್ಬರೂ ಸ್ವಲ್ಪ ಹೊತ್ತು ಮೌನವಾಗಿದ್ದರು. ಹೂವಯ್ಯನು ಬೇರೆ ವಿಷಯವನ್ನೆತ್ತುವ ಸಲುವಾಗಿ "ಆ ಚಿತ್ರಗಳನ್ನೆಲ್ಲ ನೋಡಿದೆಯಲ್ಲ, ಅದರಲ್ಲಿ ನಮ್ಮ ದೇಶದ ಚಿತ್ರವನ್ನು ನೋಡಿದೆಯೇನು?" ಎಂದು ಕೇಳಿ, ಒಂದು ಪುಸ್ತಕವನ್ನು ತೆಗೆದು ಬಿಚ್ಚಿ, "ಇದು ನಾವಿರುವ ಭೂಮಿ" ಎಂದನು.

ತರುವಾಯ ಭೂಗೋಲದ ಕೆಲವು ವಿಷಯಗಳನ್ನು ಸಂಕ್ಷೇಪವಾಗಿ ವಿವರಿಸಿ, ಸೌರವ್ಯೂಹವನ್ನು ವರ್ಣಿಸುವಾಗ ಸೂರ್ಯನು ಭೂಮಿಗಿಂತಲೂ ಸಹಸ್ರಪಾಲು ದಪ್ಪವಾಗಿದ್ದಾನೆ ಎಂದು ಹೇಳಿದನು. ಸೀತೆಗೆ ಆಶ್ಚರ್ಯವಾಯಿತು. ಮತ್ತೇಕೆ ಸಣ್ಣಗೆ ಕಾಣುತ್ತಾನೆ ಎಂಬ ಅವಳ ಪ್ರಶ್ನೆಗೆ ಹೂವಯ್ಯ ಉತ್ತರ ಹೇಳಿ, "ಅಷ್ಟೇ ಅಲ್ಲ. ರಾತ್ರಿ ನಮಗೆ ಕಾಣುವ ನಕ್ಷತ್ರಗಳು ಸೂರ್ಯನಿಗಿಂತಲೂ ಸಹಸ್ರಪಾಲು ದೊಡ್ಡದಾಗಿವೆ" ಎಂದನು. ಇನ್ನಾರಾದರೂ ಹಾಗೆ ಹೇಳಿದ್ದರೆ ಸೀತೆ ಖಂಡಿತವಾಗಿ ನಂಬುತ್ತಿರಲಿಲ್ಲ. ಹೂವಯ್ಯನು ನಕ್ಷತ್ರಗಳ ಭಯಾನಕವಾದ ಗಾತ್ರ, ವೇಗ, ದೂರಗಳ ವಿಚಾರವಾಗಿ ತಿಳಿಸಿ, ಇಂಡಿಯಾದೇಶದ ಪಠವನ್ನು ಬಿಚ್ಚಿ

"ಇದು ನಮ್ಮ ಭರತಖಂಡ, ಇದು ನಮ್ಮ ಶ್ರೀಮನ್ಮಹಾರಾಜರು ಆಳುವ ನಾವಿರುವ ಮೈಸೂರು ದೇಶ" ಎಂದು ತೋರಿಸಿದನು.

"ಇಷ್ಟು ಸಣ್ಣದೆ ನಮ್ಮ ಮಹಾರಾಜರ ದೇಶ?"

"ಹೌದು, ಈ ಪ್ರಪಂಚಕ್ಕೆ ಹೋಲಿಸಿದರೆ ಬಹಳ ಸಣ್ಣದು."

"ಹಾಂಗಾದರೆ ತೀರ್ಥಳ್ಳಿ ಎಲ್ಲಿದೆ?"

"ಇದರಲ್ಲಿ ಅದಿಲ್ಲ. ಬಹಳ ಚಿಕ್ಕದು ಆದ್ದರಿಂದ," ಎಂದು ಮೈಸೂರು ದೇಶದ ಪಠವನ್ನು ತೋರಿಸಿ, ಒಂದು ಸಣ್ಣ ಚುಕ್ಕಿಯ ಮೇಲೆ ಬೆರಳಿಟ್ಟು "ಇದೇ ನಿನ್ನ ತೀರ್ಥಳ್ಳಿ!" ಎಂದನು. ಸೀತೆ 'ಅಯ್ಯಯ್ಯೋ! ಇಷ್ಟೇನೆ' ಎಂದಳು. ಮೆಚ್ಚಿದ ತನಗೆ ಅಷ್ಟು ದೊಡ್ಡದಾಗಿದ್ದ ತೀರ್ಥಹಳ್ಳಿಗೆ ಇಷ್ಟು ಸಣ್ಣ ಚುಕ್ಕಿಯೇ ಭೂಪಠದಲ್ಲಿ? ಎಂದು ಅವಳಿಗೆ ಸೋಜಿಗವಾಯಿತು.

"ಹಾಂಗಾದರೆ, ನಮ್ಮ ಮುತ್ತಳ್ಳಿ?"

ಹೂವಯ್ಯನು ನಸುನಕ್ಕು, ಮುತ್ತಳ್ಳಿಯನ್ನು ಚುಕ್ಕಿಯಿಂದಲೂ ಕೂಡ ನಿರ್ದೇಶಿಸಲು ಸಾಧ್ಯವಲ್ಲ. ಅಷ್ಟು ಸಣ್ಣದು, ಎಂದು ವಿವರಿಸಿದನು. ಸೀತೆಗೆ ಸ್ವಲ್ಪ ವ್ಯಸನವಾಯಿತು; ತಮ್ಮ ದೊಡ್ಡಮನೆ, ಗದ್ದೆ, ತೋಟ, ಆಳು, ಒಕ್ಕಲು ಅಪ್ಪಯ್ಯ, ಅವ್ವ ಎಲ್ಲರೂ ಇರುವ ಮುಖ್ಯಸ್ಥಳ ಚುಕ್ಕಿಗಿಂತಲೂ ಹೀನವಾಯಿತೇ ಎಂದು!

ಹೊರಗಡೆ ಗಂಟೆಯ ಸರದ ಸದ್ದೂ, ನಾಯಿಗಳ ಕೂಗೂ, ಲಕ್ಷ್ಮಿಯ ಉಲ್ಲಾಸಪೂರ್ಣವಾದ ಅಟ್ಟಹಾಸದ ಧ್ವನಿಯೂ ಕೇಳಿಸಿದುದರಿಂದ ಸೀತೆ "ಅತ್ತೆಮ್ಮ ಬಂದರು ಅಂತಾ ಕಾಣ್ತದೆ!" ಎಂದು ಜಗಲಿಗೆ ಓಡಿಹೋದಳು.

ನಂಟರು ಕಾಲು ತೊಳೆದುಕೊಂಡರು. 'ಬಂದ್ರೇ' 'ಬಂದ್ರೇ' ಎಂದು ಸ್ವಾಗತ ಬಯಸಿದವರಿಗೆ 'ಹ್ನು' 'ಹ್ನು' ಎಂದು ಉತ್ತರ ಹೇಳಿ, ಗೌರಮ್ಮ ಸೀತೆಯರೊಡನೆ ಒಳಗೆ ಹೋದರು. ವಾಸು ಗಂಡಸರ ಜಾತಿಗೆ ಸೇರಿದ್ದುದರಿಂದಲೂ ಶ್ಯಾಮಯ್ಯಗೌಡರು ಕರೆದುದರಿಂದಲೂ, ಮನಸ್ಸೆಲ್ಲ ಒಳಗಿದ್ದರೂ ಜಗಲಿಯಮೇಲೆಯೇ ಕುಳಿತನು. ಆದರೆ ತಂದೆಯ ಮುಂದೆ ಬಹಳ ಕಾಲ ನಂಟನಾಗಿ ಕುಳ್ಳಿರಲಾಗದೆ ಐದು ನಿಮಿಷ ಕಳೆಯುವುದರಲ್ಲಿ ಮೆಲ್ಲನೆದ್ದು ಒಳಗೆ ನುಗ್ಗಿದನು.

ನಾಗಮ್ಮನವರ ಉದ್ವೇಗ ಮಗನನ್ನು ನೋಡಿದ ಕೂಡಲೆ ಶಮನವಾಗಿ, ಅವರಿಗೆ ಸ್ವಾಭಾವಿಕವಾಗಿದ್ದ ಗಾಂಭೀರ್ಯ ಹಿಂತಿರುಗಿತು. ಆದರೂ ಮಗನ ಸುತ್ತಲೂ ಮೂರು ಕಾಸು ಆರು ಕಾಸುಗಳನ್ನು ಪ್ರದಕ್ಷಿಣೆ ಬರಿಸಿ, ತಮಗೆ ತಿಳಿದಿದ್ದ ದೇವ ದೆವ್ವರಿಗೆಲ್ಲ—ತಿರುಪತಿ ಧರ್ಮಸ್ಥಳಗಳಿಂದ ಹಿಡಿದು ಭೂತ ಪಂಜುರ್ಳಿಗಳವರೆಗೆ—ಮುಡುಪುಕಟ್ಟಿ, ಹೇಳಿಕೊಂಡರು.

ಹೂವಯ್ಯ ನಿಸ್ಸಹಾಯನಾಗಿ ಸುಮ್ಮನಿದ್ದನು. ತಾಯಿಯ ಪ್ರೀತಿಭಾವ ತನ್ನ ಬುದ್ಧಿವಿಚಾರಕ್ಕಿಂತಲೂ ಪವಿತ್ರವಾದುದೆಂದು ಅದನ್ನು ಆಸ್ವಾದಿಸುತ್ತ "ಅದೇನವ್ವಾ ಗಾಯ? ಹಣೆಗೆ ಬಟ್ಟೆ ಕಟ್ಟು ಕಟ್ಟಿದ್ದೀಯಾ!" ಎಂದು ಕೇಳಿದನು.

"ಏನೂ ಇಲ್ಲ, ಬಾಗಿಲು ಹೊಡೆದಿದ್ದು" ಎಂದು ನಾಗಮ್ಮನವರು ಮಗನ ಬಳಿ ಕುಳಿತು ನಾನಾ ನೆವಗಳಿಂದ ಅವನ ಹಣೆ ಕೆನ್ನೆ ತಲೆ ಕೈ ತೋಳುಗಳನ್ನು ಸವರಿ ಲಲ್ಲೆಗೈದರು. ಹೂವಯ್ಯನಿಗಂತೂ ತಾಯಿಯ ಸ್ಪರ್ಶ ಶಾಂತಿಯಾನಂದಗಳ ಸುಧಾಮುದ್ರೆಯಾಗಿತ್ತು.

## ೨೧

## ಆ ಹೊಸಬಿ ಅಪ್ಪಯ್ಯನ ಹೆಂಡತಿಯೆ !

ಆ ದಿನ ಸಾಯಂಕಾಲ ರಾಮಯ್ಯ ತಂದೆಯ ಇಷ್ಟದಂತೆ ಅವರೊಡನೆ ಕಾನೂರಿಗೆ ಬಂದನು.

ರಾತ್ರಿ ಊಟಕ್ಕೆ ಕುಳಿತಿದ್ದಾಗ ಅಪರಿಚಿತ ತರುಣ ಸ್ತ್ರೀಯೊಬ್ಬಳು ಬಡಿಸುತ್ತಿದ್ದುದನ್ನು ಕಂಡು, ಆಕೆ ಯಾರಿರಬಹುದೆಂದು ಬೆರಗಾದನು.

ಪುಟ್ಟಣ್ಣನೂ ಸೇರೆಗಾರರೂ ಚಂದ್ರಯ್ಯಗೌಡರಿಗೆ ಆ ದಿನ ಸಿಂಗಪ್ಪಗೌಡರ ಕಡೆಯವರಿಂದ ತಮಗೆ ಏನಾಯಿತೆಂಬುದನ್ನು ಭಾವಾಕ್ರೋಶಗಳಿಂದ ವರ್ಣಿಸುತ್ತಿದ್ದರು. ಚಂದ್ರಯ್ಯಗೌಡರೂ ರೇಗಿ ರೇಗಿ ನಡುನಡುವೆ, ಹಾಗೆ ಮಾಡಬೇಕಾಗಿತ್ತು, ಹೀಗೆ ಮಾಡಬೇಕಾಗಿತ್ತು ಎಂದು ಹೇಳುತ್ತಿದ್ದರು. ಕಡೆಗೆ ಸಿಂಗಪ್ಪಗೌಡರನ್ನು ನಿರ್ದೇಶಿಸಿ "ಅವನಿಗೆ ಮಾಡಿಸ್ತೀನಿ. ಕಳ್ಳನಾಟಾ ಕಡಿಸಿದ್ದನ್ನೆಲ್ಲ ಕಕ್ಕಿಸ್ತೀನಿ. ಸರ್ಕಾರವೆಲ್ಲ ಹಾಳಾಗಿ ಹೋಯ್ತೇನು ನೋಡಿಬಿಡ್ತೀನಿ." ಎಂದು ಮೊದಲಾಗಿ ಆರ್ಭಟಿಸಿದರು.

ರಾತ್ರಿ ಉಪ್ಪರಿಗೆಯ ಮೇಲೆ ಮಲಗಿದ್ದಾಗ ರಾಮಯ್ಯ ಆಲೋಚಿಸತೊಡಗಿದನು.

ಮನೆಗೆ ಬಂದ ತುಸು ಹೊತ್ತಿನಲ್ಲಿಯೆ ರಾಮಯ್ಯನಿಗೆ ತಮ್ಮ ಮನೆಗಿಂತಲೂ ಮುತ್ತಳ್ಳಿಯೆ ಹೆಚ್ಚು ಸಂತೋಷಕರವಾಗಿದ್ದಂತೆ ತೋರಿತು. ವಾಸು, ಪುಟ್ಟಮ್ಮ, ಹೂವಯ್ಯ, ನಾಗಮ್ಮ ಇವರೆಲ್ಲ ಇದ್ದಿದ್ದರೆ ಬಹುಶಃ ಹಾಗೆ ತೋರುತ್ತಿರಲಿಲ್ಲವೆಂದು ಕಾಣುತ್ತದೆ. ತಂದೆಯೊಡನೆ ಮೈಸೂರು, ಕಾಂಗ್ರೆಸ್ಸು, ಸ್ವರಾಜ್ಯದ ಚಳವಳಿ ಇತ್ಯಾದಿಗಳ ವಿಚಾರವಾಗಿ ಮಾತಾಡಲೆಳಸಿದನು. ಆದರೆ ಅವರಿಗೆ

ಗೃಹಕೃತ್ಯ ಕೋರ್ಟು ವ್ಯವಹಾರಗಳಲ್ಲಿ ಇದ್ದಷ್ಟು ಪರಿಶ್ರಮವಾಗಲಿ, ಆಸಕ್ತಿಯಾಗಲಿ, ಸಹಾನುಭೂತಿಯಾಗಲಿ ರಾಮಯ್ಯ ಆಡಿದ ದೂರದ ವಿಚಾರಗಳಲ್ಲಿರಲಿಲ್ಲ. ಅಲ್ಲದೆ ಅವುಗಳ ವಿಷಯದಲ್ಲಿ ಖಂಡನೆ ತಿರಸ್ಕಾರಗಳನ್ನೂ ಪ್ರದರ್ಶಿಸಿ, ಬಿಳಿಯಬಟ್ಟೆ, ಖಾದಿಯ ಟೋಪಿ, ಕಾಲು ಮುಚ್ಚುವ ಉದ್ದಪಂಚೆಗಳನ್ನು ಅವಹೇಳನ ಮಾಡಿದರು. ನೈರ್ಮಲ್ಯವೂ 'ಷೋಕಿ'ಯೇ ಎಂಬುದು ಅವರ ದೃಢವಾದ ಅಭಿಪ್ರಾಯವಾಗಿತ್ತು.

ರಾಮಯ್ಯ ಪುಟ್ಟಣ್ಣನೊಡನೆ ಶಿಕಾರಿ ನಾಯಿ ಬಂದೂಕಗಳನ್ನು ಕುರಿತು ಮಾತಾಡಿ, ಕಳೆದ ತಿಂಗಳುಗಳಲ್ಲಿ ಅವನು ಮಾಡಿದ್ದ ಸಾಹಸಗಳ ವರ್ಣನೆಯನ್ನು ಕೇಳಿ ಸಂತೋಷಪಟ್ಟನು. ಟೈಗರು ಜಾಕಿಯ ಧೂರ್ತ ಕ್ರೌರ್ಯದಿಂದ ಮಡಿದುದನ್ನು ಕೇಳಿ ವ್ಯಸನಪಟ್ಟನು. ಏನಾದರೂ ಅವನ ಮನಸ್ಸಿನ ವಿಷಣ್ಣತೆ ಮಾದು ಹೋಗಲಿಲ್ಲ. ಮೈಸೂರಿನಲ್ಲಿ ಇದ್ದಾಗ ಮನೆಯನ್ನು ನೆನೆದು ಸಂತೋಷ ಪಟ್ಟಂತೆ ಮನೆಯಲ್ಲಿದ್ದು ಸಂತೋಷಪಡಲಾಗಲಿಲ್ಲ.

ಸುತ್ತಲೂ ಕಗ್ಗತ್ತಲೆ ಕವಿದಿತ್ತು. ಎದುರಿಗಿದ್ದ ಬೆಟ್ಟ ಕಾಡುಗಳೆಲ್ಲ ಮಸಿಯ ಮುದ್ದೆಯಾಗಿದ್ದುವು. ಆಕಾಶದಲ್ಲಿ ಮಿಣುಕುತ್ತಿದ್ದ ನಕ್ಷತ್ರಗಳು ಅವನ ಏಕಾಂತ ಭಾವವನ್ನು ದ್ವಿಗುಣಿತ ನಿರ್ವಿಣ್ಣವಾಗಿ ಮಾಡಿದ್ದುವು. ಹಾಸಿಗೆಯ ಮೇಲೆ ಬೆಚ್ಚನೆ ಮಲಗಿದ್ದ ರಾಮಯ್ಯನು ವಿಚಾರಪೀಡಿತನಾದನು. ಬಡಿಸುತ್ತಿದ್ದ ಹೆಂಗಸು ಯಾರಿರಬಹುದು? ತಮ್ಮ ಮನೆಗೆ ನಂಟರಾಗಿ ಮಾತ್ರ ಬಂದವಳಾಗಿದ್ದರೆ ಅಡುಗೆಮನೆಯಲ್ಲಿ ಬಹಳ ಕಾಲದ ಬಳಕೆ ಇರುವವಳಂತೆ ಪರಿಚರ್ಯೆ ಮಾಡಲಾಗುತ್ತಿರಲಿಲ್ಲ! ಅಡುಗೆಮಾಡಲು ಸಂಬಳಕ್ಕೆ ಗೊತ್ತುಮಾಡಿದ್ದ ಹೆಂಗಸಾಗಿದ್ದರೆ ಉಡುಗೆ ತೊಡುಗೆಗಳಲ್ಲಿ ಅಷ್ಟು ನಾಜೋಕಿರುತ್ತಿರಲಿಲ್ಲ! ಪುಟ್ಟಣ್ಣನೇನಾದರೂ ಹೊಸದಾಗಿ ಮದುವೆಯಾಗಿದ್ದಾನೆಯೆ? ಇರಲಿಕ್ಕಿಲ್ಲ. ಹಾಗಿದ್ದರೆ ಅವನೇ ಹೇಳುತ್ತಿದ್ದನು. ಅವನನ್ನು ನೋಡಿದರಂತೂ ಆ ಊಹೆ ಸರ್ವಥಾ ತಪ್ಪು ಎಂದು ತೋರುತ್ತದೆ. ಹೀಗೆ ವಿಧವಿಧವಾಗಿ ಆಲೋಚಿಸುತ್ತ ಇದ್ದಕ್ಕಿದ್ದ ಹಾಗೆ ರಾಮಯ್ಯನ ಎದೆಯಲ್ಲಿ ರಕ್ತ ಸಂಚಾರ ವೇಗವಾಯಿತು. "ಛೆ— ಅದೆಂದಿಗೂ ಆಗಿರಲಿಕ್ಕಿಲ್ಲ" ಎಂದು ತನ್ನ ಮನಸ್ಸಿನಲ್ಲಿ ಮೂಡಿದ್ದ ಆಲೋಚನೆಯನ್ನು ನಿರಸನಮಾಡಲೆಳಸಿದನು. ತೊಲಗಿಸಲು ಯತ್ನಿಸಿದಂತೆಲ್ಲ ಆ ಆಲೋಚನೆ ಪ್ರಬಲತರವಾಯಿತು. ಮೆಲ್ಲನೆ ಸಮಂಜಸವಾಗತೊಡಗಿತು. ಕಡೆಕಡೆಗೆ ನಿಶ್ಚಯವಾಗಿಯೂ ತೋರಿತು. ಆದರೂ ರಾಮಯ್ಯ ಅದನ್ನು ನಂಬಲಿಲ್ಲ; ನಂಬಲು ಇಷ್ಟಪಡಲೂ ಇಲ್ಲ. ಅಂತಹ ಆಲೋಚನೆಗಾಗಿ ತನ್ನನ್ನು ತಾನೆ ಹಳಿದುಕೊಂಡನು. ಆದರೂ ಅವನೆದೆ ಅದೆಲ್ಲ ನಿಜವಾಗಿ ಬಿಡುವುದೋ

ಎಂದು ಕಾತರವಾಗಿತ್ತು. ಹಾಸಿಗೆಯ ಮೇಲೆ ಎದ್ದು ಕುಳಿತು 'ಅದು ನಿಜ ವಾಗದಿರಲಿ' ಎಂದು ಭಗವಂತನನ್ನು ಹೃತ್ಪೂರ್ವಕವಾಗಿ ಪ್ರಾರ್ಥಿಸಿದನು: ಅಷ್ಟು ಅಸಹ್ಯವಾಗಿ ವಿಕಟವಾಗಿ ತೋರಿತು, ಆ ಹೆಂಗಸು ತನ್ನ ತಂದೆ ತನಗರಿಯ ದಂತೆ ಮದುವೆಯಾದವಳು ಎಂಬ ಆಲೋಚನೆ.

ಮರುದಿನ ಬೆಳಗ್ಗೆ ರಾಮಯ್ಯನ ಮನಸ್ಸಿಗೆ ಮನೆಯವರೆಲ್ಲರೂ ಯಾವುದೋ ಒಂದು ಗುಟ್ಟನ್ನು ಮುಚ್ಚುಮರೆ ಮಾಡಿರುವಂತೆ ಭಾಸವಾಗತೊಡಗಿತು. ಪ್ರತಿ ಯೊಬ್ಬರ ಮಾತು, ನೋಟ, ನಡತೆ ಎಲ್ಲವೂ ಅದನ್ನೇ ಸಮರ್ಥಿಸುವಂತಿದ್ದುವು. ಕಾಫಿ ತಿಂಡಿ ಪೂರೈಸಿದ ಒಡನೆಯೆ ಪುಟ್ಟಣ್ಣನನ್ನು ಉಪ್ಪರಿಗೆಗೆ ಕರೆದು, ತನಗಿದ್ದ ಆಶಂಕೆಯ ವಿಚಾರವಾಗಿ ಪ್ರಶ್ನಿಸಿದನು. ಕೆಳಗೆ ಜಗಲಿಯಲ್ಲಿದ್ದ ಯಜಮಾನರಿಗೆ ಕೇಳಿಸದಂತೆ ಮೆಲ್ಲನೆ ಮಾತಾಡಿದರು.

"ಆ ಹೊಸಬಿ ಯಾರೋ?"

"ಯಾವ ಹೊಸಬಿ?"

"ಅಡುಗೆ ಮನೆಯಲ್ಲಿ ಕೆಲಸಮಾಡುತ್ತಿದೆಯಲ್ಲಾ, ಅದು."

ಪುಟ್ಟಣ್ಣ ಸ್ವಲ್ಪ ನಕ್ಕು "ಅಯ್ಯೋ ಇದ್ಯಾಕೆ ಹೀಂಗೆ ಕೇಳ್ತೀರಿ? ನಿಮ್ಮ ಚಿಕ್ಕಮ್ಮ" ಎಂದನು.

"ಚಿಕ್ಕಮ್ಮ!... ಯಾರ ಮನೆ, ಹೇಳು?"

"ನೆಲ್ಲಹಳ್ಳಿಯಿಂದ ನಿಮ್ಮಪ್ಪಯ್ಯನಿಗೆ ತಂದಿದ್ದು!"

"ಆ ಹೊಸಬಿ ಅಪ್ಪಯ್ಯನ ಹೆಂಡತಿಯೇ!"

ಯಾವುದು ಆಗಬಾರದೆಂದು ಭಗವಂತನನ್ನು ಪ್ರಾರ್ಥಿಸಿದ್ದನೋ ಅದೇ ಆಗಿಹೋಗಿದೆ! ರಾಮಯ್ಯನಿಗೆ ಬಹಳ ದುಃಖವಾಗಿ ಅವನ ಪ್ರಯತ್ನವನ್ನು ಮೀರಿ ಕಣ್ಣೀರು ಬಳಬಳನೆ ಉದುರಿದುವು. ಮೊದಲು 'ಹೊಸ ಚಿಕ್ಕಮ್ಮ' ನನ್ನು ತಂದ ಚಂದ್ರಯ್ಯಗೌಡರ ಕಾರ್ಯವನ್ನು ಪ್ರಶಂಸಿಸುವ ರೀತಿಯಲ್ಲಿ ಮಾತಾಡುತ್ತಿದ್ದ ಪುಟ್ಟಣ್ಣನು ರಾಮಯ್ಯನ ಕಣ್ಣೀರನ್ನು ನೋಡಿ ಅನುಕಂಪದಿಂದ ವ್ಯತಿರಿಕ್ತವಾಗಿ ಮಾತಾಡತೊಡಗಿದನು. ಅವನ ಧ್ವನಿ ಬಹಳ ಮೆಲ್ಲಗಾಯಿತು.

"ನಿಮಗೆ ಕಾಗದ ಬರಲಿಲ್ಲೇನು?"

ರಾಮಯ್ಯ ತಲೆದೂಗಿ 'ಇಲ್ಲ' ಎಂದನು.

"ನಾವೆಲ್ಲ ಬಡುಕೊಂಡೆವು, ನಿಮ್ಮಿಬ್ಬರನ್ನೂ ಕರೆಸಿ ಅಂತಾ. ನಮ್ಮ ಮಾತು ಎಲ್ಲಿ ಕೇಳ್ತಾರೆ?"

"ಕರೆಸದಿದ್ದದ್ದೇ ಒಳ್ಳೇದಾಯ್ತು" ಎಂದು ರಾಮಯ್ಯ ಸುಯ್ದನು.

"ಎಲ್ಲರೂ ಮುತ್ತಳ್ಳಿ ಶ್ಯಾಮೇಗೌಡರಾದಿಯಾಗಿ ಹೇಳಿದರು—'ಈ

ಸಂಬಂಧ ಬೇಡ, ನಿಮಗೆ ಹೇಳಿಸಿದ್ದಲ್ಲ' ಎಂದು. ಯಾರ ಮಾತನ್ನೂ ಮನಸ್ಸಿಗೆ ಹಾಕಿಕೊಳ್ಳಲಿಲ್ಲ ಅವರು. ಹಿಡಿದದ್ದು ಒಂದೇ ಹಟ ಮಾಡಿಬಿಟ್ಟರು . . . ಈಗ ನೋಡಿ ಮನೇಲೆಲ್ಲ ಜಗಳ. ಮೂರು ಹೊತ್ತೂ ರೇಜಿಗೆ. ನಿಮ್ಮ ತಂಗಿಗೂ ಅವರಿಗೂ ಹುಯ್ದಕ್ಕಿ ಬೇಯೋದಿಲ್ಲ. ನಾಗಮ್ಮನೋರಿಗೂ ಕೂಡ ಕಂಡಾಬಟ್ಟೆ ಹೇಳ್ತಾರೆ. ಹೀಂಗೆ ಆದರೆ ಮನೇ ಪಾಲಾಗದೇ ಸೈ ಅಂತಾ ಕಾಣ್ತದೆ."

ರಾಮಯ್ಯ ಮತ್ತೆ ಮಾತಾಡಲಿಲ್ಲ. ಸುಮ್ಮನೆ ಚಿಂತಿಸುತ್ತ ಕುಳಿತನು. ತೀರಿಹೋದ ಅವನ ತಾಯಿಯ ಶೋಕಪೂರ್ಣವಾದ ಆಕೃತಿ ಕಲ್ಪನೆಯ ಕಣ್ಣೆದುರಿನಲ್ಲಿ ನಿಂತು ಕಂಬನಿಗರೆಯುತ್ತಿತ್ತು. ಆಕೆಯ ಸೌಜನ್ಯಸ್ನೇಹಗಳು ಅವನ ಮನಸ್ಸಿಗೆ ಬಂದು, ಮರೆಯಾಗಿ ಮರೆತುಹೋದಂತಿದ್ದ ಮಾತೃ ಪ್ರೇಮ ವನ್ನು ನೆನೆದು ನಿರರ್ಗಳವಾಗಿ ಕಣ್ಣೀರು ಸುರಿಸತೊಡಗಿದನು.

ಅವನದು ಸ್ವಾಭಾವಿಕವಾಗಿ ಕೋಮಲ ಪ್ರಕೃತಿ. ದೃಢಚಿತ್ತದವನಲ್ಲ. ಚಿಕ್ಕಂದಿ ನಿಂದಲೂ ತಂದೆಯ ವಿಷಯದಲ್ಲಿ ಬೆಳೆದುಬಂದಿದ್ದ ಭೀತಿ ಅವನನ್ನು ಹೆದರೆದೆ ಯಾಗಿ ಮಾಡಿತ್ತು. ಅವನಲ್ಲಿದ್ದ ಉದಾತ್ತ ಹೃದಯಕ್ಕೆ ತಕ್ಕ ಮನೋಬಲವೂ ಇದ್ದಿದ್ದರೆ, ಸಂಸಾರದಲ್ಲಿ ಮುಂದೆ ಪ್ರಾಪ್ತವಾಗುವ ಹೃದಯವಿದ್ರಾವಕವಾದ ಅನಾಹುತಗಳು ನಡೆಯುತ್ತಿರಲಿಲ್ಲ. ಹೂವಯ್ಯನಲ್ಲಿ ಅವನಿಗಿದ್ದ ಗೌರವ ಪ್ರೀತಿ ಗಳಿಗೂ ಅದೇ ಕಾರಣವೆಂದು ತೋರುತ್ತದೆ. ತನ್ನಲ್ಲಿಲ್ಲದ ಹೃದ್ಬಲ, ಮನಃ ಸ್ಥೈರ್ಯ, ದೃಢಚಿತ್ತತೆಗಳು ಅವನಲ್ಲಿದ್ದುದರಿಂದ ಅವನನ್ನು ಆದರ್ಶ ಮೂರ್ತಿ ಯೆಂದು ಭಾವಿಸಿ ಆರಾಧಿಸುತ್ತಿದ್ದನು.

ಜಗಲಿಯಿಂದ ಚಂದ್ರಯ್ಯಗೌಡರು "ಓ ಪುಟ್ಟಣ್ಣ!" ಎಂದು ಕರೆದರು. ಅವನು ಸಡಿಲವಾಗಿದ್ದ ಏಣಿಯ ಮೆಟ್ಟಲುಗಳು ಸದ್ದಾಗುವಂತೆ ಇಳಿದು ಬರಲು "ರಾಮು ಎಲ್ಲೋ?" ಎಂದು ಕೇಳಿದರು.

"ಇಲ್ಲಿದ್ದೇನೆ, ಬಂದೇ" ಎಂದು ರಾಮಯ್ಯ ಬೇಗಬೇಗನೆ ಕಣ್ಣೀರೊರಸಿ ಕೊಂಡು ಮನಸ್ಸಮಾಧಾನ ಮಾಡಿಕೊಳ್ಳುತ್ತ ಇಳಿದು ಬಂದನು.

ಚಂದ್ರಯ್ಯಗೌಡರಿಗೆ ಅವನ ಮುಖಭಾವ ಗೊತ್ತಾದರೂ ಗೊತ್ತಾಗದವ ರಂತೆ ನಟಿಸಿ "ಕಬ್ಬಿನ ಹಿತ್ತಲಿಗೆ ಹೋಗೋಣ ಬನ್ನಿ" ಎಂದು ಅವರಿಬ್ಬರೊಡ ಗೂಡಿ ಹೆಬ್ಬಾಗಿಲು ದಾಟಿದರು.

ನಿದ್ರೆ, ಮೈಕೆರೆದುಕೊಳ್ಳುವುದು, ನೊಣಗಳನ್ನು ಮೇಲೆ ಕೂರದಂತೆ ಅಟ್ಟು ವುದು, ಒಂದರೊಡನೊಂದು ಆಟವಾಡುವುದು ಹೀಗೆ ನಾನಾ ಸ್ವಕೀಯ ಕಾರ್ಯ ದಲ್ಲಿ ಮಗ್ನವಾಗಿದ್ದ ನಾಯಿಗಳು ಒಂದರ ಹಿಂದೊಂದು ಎದ್ದು ನಡೆದು ಅವರನ್ನು ಹಿಂಬಾಲಿಸಿದುವು.

ದೃಶ್ಯಗಳೆಲ್ಲವೂ ಹೆಚ್ಚು ಕಡಿಮೆ ತಾನು ಮೈಸೂರಿಗೆ ಹೋದಾಗ ಹೇಗೆ ಇದ್ದುವೋ ಹಾಗೆಯೇ ಇದ್ದುವು. ಅದೇ ಅಂಗಳ, ಅದೇ ಕಣ, ಅಂಗಳವನ್ನು ಕಣದಿಂದ ವಿಭಾಗಿಸಿದ್ದ ಅದೇ ಒಂದಾಳು ಎತ್ತರದ ಕಲ್ಲುಕಟ್ಟಣೆ, ಕಲ್ಲುಕಟ್ಟಣೆಯ ಮೇಲೆ ಆಗ ಹಸುರಾಗಿದ್ದು ಈಗ ಬೇಸಗೆಯ ಬಿಸಿಲಿಗೆ ಒಣಗಿ ನಿಂತಿದ್ದ ಅದೇ ಹಳು, ಕಣದಲ್ಲಿ ಅದೇ ಹುಣಿಸೆಯ ಮರ, ಅದೇ ದೊಡ್ಡ ಬಸರಿಯ ಮರ, ಬಲ ಭಾಗದಲ್ಲಿ ಅದೇ ತೋಟ, ಬಾಳೆಯ ಮರಗಳ ಅದೇ ಹಸುರೆಲೆಗಳು ಇತ್ಯಾದಿ ! ಅಂದಿನಂತೆಯೆ ಮರಗಳಲ್ಲಿ ಹಕ್ಕಿಗಳ ಚಿಲಿಪಿಲಿ ! ಅಂದಿನಂತೆಯೆ ಮರಗಳ ಬಲೆನೆಳಲು ! ಆದರೆ ರಾಮಯ್ಯನ ಮನಸ್ಸಿಗೆ ಜಗತ್ತು ಹಿಂದಿದ್ದಂತೆ ಸರಳ ಸುಂದರವಾಗಿರಲಿಲ್ಲ. ಅವನ ಮನಸ್ಸು ವಿಷಾದಪೂರ್ಣವಾಗಿತ್ತು.

ಕಬ್ಬಿನಗದ್ದೆಯಲ್ಲಿ ಆಳುಗಳು ನೆರೆದಿದ್ದರು. ಸೇರೆಗಾರರು ಅವರಿಗೆ ಕೆಲಸ ಹೇಳುತ್ತಿದ್ದರು. ಸುಮಾರು ಒಂದೂವರೆ ಎರಡು ಅಡಿಗಳಷ್ಟು ಎತ್ತರ ಬೆಳೆದಿದ್ದ ಕಬ್ಬಿನ ಗರಿಯೋಲೆಗಳ ಮೇಲೆ ಬಿದ್ದಿದ್ದ ಬಿಸಿಲು ಕೂಡ ಹಸುರಾದಂತೆ ತೋರುತ್ತಿತ್ತು. ನಡುವೆ ಅಲ್ಲಲ್ಲಿ ಗಟ್ಟದ ತಗ್ಗಿನ ಗಂಡು ಮತ್ತು ಹೆಣ್ಣಾಳುಗಳು ಹಾಳೆಯ ಕುಲಾವಿಗಳಿಂದಲೂ ಕಾರೊಡಲುಗಳಿಂದಲೂ ನಿಂತು, ಒಬ್ಬರೊಡನೊಬ್ಬರು ತುಳು ಭಾಷೆಯಲ್ಲಿ ಗಳಪುತ್ತಿದ್ದರು.

ಗೌಡರು ಬರುತ್ತಿದ್ದುದನ್ನು ದೂರದಲ್ಲಿ ಕಂಡ ಆಳುಗಳೂ ಸೇರೆಗಾರರೂ ಕಾರ್ಯಸನ್ನಾಹದಲ್ಲಿಯೆ ನಿಮಗ್ನರಾಗಿದ್ದವರಂತೆ ತೋರಿಸಿಕೊಂಡರು. ಸೇರೆಗಾರರು ಕನ್ನಡದಲ್ಲಿ ಗಟ್ಟಿಯಾಗಿ ಅಪ್ಪಣೆಮಾಡತೊಡಗಿದರು. "ಏ ಬಗ್ರಾ, ಇಲ್ಲಿ ತಗೊಂಡು ಬಾರೋ ಹಾರೇನ . . . ಗುತ್ತೀ, ಅಲ್ಲೇನು ಮಾಡ್ತೀಯೋ ಥೂ ! ಖಳ್ಳ ! . . . ಸುಬ್ಬೀ, ಕಾಡೀ, ಏನ್ಮಾಡ್ತೀರೇ ಎಲ್ಲಾ ? . . . ಸದಿಯಾ, ಆ ಕಂಡಿ ಮುಚ್ಚಿ ಬಾ ಇಲ್ಲಿ . . ." ಮೊದಲಾದ ಆಜ್ಞೆ, ಭರ್ತ್ಸನೆಗಳಿಂದ ಕಬ್ಬಿನ ಹಿತ್ತಲು ಸಜೀವ ಸಶಬ್ದ ಸಚಲವಾಗಿಬಿಟ್ಟಿತು. ಅಷ್ಟರಲ್ಲಿ ಗೌಡರೂ ಅಲ್ಲಿಗೆ ಬಂದು ಅಂಚಿನಿಂದ ಅಂಚಿಗೆ ನಡೆದುಹೋಗಿ, ಕೆಲಸವನ್ನೆಲ್ಲ ಪರೀಕ್ಷೆಮಾಡಿ ಸೂಚನೆ ಕೊಡತೊಡಗಿದರು. ತಲೆಗೆ ಕೆಂಪುವಸ್ತ್ರವನ್ನು ಸುತ್ತಿಕೊಂಡಿದ್ದ ಸೇರೆಗಾರರು ಕೆಲವು ಸಾರಿ ಅವರ ಹಿಂದುಗಡೆಯೂ ಕೆಲವು ಸಾರಿ ಅಕ್ಕಪಕ್ಕದಲ್ಲಿಯೂ ಚಟುವಟಿಕೆಯಿಂದ ಸುತ್ತಾಡುತ್ತ, ತಮ್ಮ ಸ್ವಾಮಿಭಕ್ತಿಯನ್ನೂ ಕರ್ತವ್ಯ ನಿಷ್ಠೆಯನ್ನೂ ಪ್ರದರ್ಶಿಸಿದರು. ರಾಮಯ್ಯನ ಹಿಂದುಗಡೆಯಿದ್ದ ಪುಟ್ಟಣ್ಣನು ಹಿಂದಿನ ವರ್ಷ ಕಬ್ಬು ತಿನ್ನಲು ಬರುತ್ತಿದ್ದ ಒಂಟಿಗ ಹಂದಿಯೊಂದನ್ನು ಕೋವಿ ಕಟ್ಟಿ ಕೆಡಹಿದ ಸಂಗತಿಯನ್ನು ಹೇಳಿ, ವ್ಯೂಹ ವರ್ಣನೆ ಮಾಡುತ್ತಿದ್ದನು. ಸ್ವಲ್ಪ ಹೊತ್ತಿನಲ್ಲಿ ಗುದ್ದಲಿಗಳ ಕಪ್ಪು ಕೆತ್ತುವ ಶಬ್ದ ಪ್ರಾರಂಭವಾಗಿ ಮಾತು ನಿಂತು ಹೋಯಿತು.

ಗೌಡರು ಎತ್ತರವಾಗಿದ್ದ ಒಂದು ಅಂಚಿನ ಹಸುರು ಹುಲ್ಲಿನಲ್ಲಿ ಸೇರೆಗಾರರು ಹಾಸಿಕೊಟ್ಟ ಕರಿಕಂಬಳಿಯ ಮೇಲೆ ಕಾಮಗಾರಿಯನ್ನು ನೋಡುತ್ತ ಕುಳಿತರು. ನಾಯಿಗಳು ತಮ್ಮ ಸ್ವಭಾವಕ್ಕನುಗುಣವಾಗಿ ಅಲ್ಲಿ ಇಲ್ಲಿ ಸುತ್ತಿ ಕಬ್ಬಿನ ಗದ್ದೆಯಲ್ಲಿಯೆ 'ಹಳುನುಗ್ಗಿ'ದ್ದುವು.

ಇದ್ದಕ್ಕಿದ್ದ ಹಾಗೆ ಒಂದು ನಾಯಿ ತೀಕ್ಷ್ಣವಾಗಿ ಬಗುಳುತ್ತ ಕಬ್ಬಿನ ಗರಿಗಳು ಮೇಲೆ ಕೆಳಗೆ ಹಾರಾಡಿ ಸದ್ದಾಗುವಂತೆ ಏನನ್ನೋ ಅಟ್ಟಿಸಿಕೊಂಡು ಹೋಯಿತು. ಇತರ ನಾಯಿಗಳೂ ಅದೇ ದಿಕ್ಕಿಗೆ ಓಡಿದುವು. ಯಾರಿಗೂ ಪ್ರಾಣಿ ಯಾವುದೆಂದು ಗೊತ್ತಾಗಲಿಲ್ಲ. ಗೌಡರು ಎದ್ದು ನಿಂತು ನೋಡಿದರು. ಆಳುಗಳು ಹತಾರುಗಳನ್ನು ಹಿಡಿದು ನೆಟ್ಟಗೆ ನಿಂತು ನೋಡಿದರು. ಪುಟ್ಟಣ್ಣ ರಾಮಯ್ಯರೂ ನೋಡುತ್ತಿದ್ದರು. ನಾಯಿಗಳು ಕಬ್ಬಿನ ಗದ್ದೆಯನ್ನು ದಾಟಿ ಪಕ್ಕದಲ್ಲಿಯೆ ಬಯಲಾಗಿದ್ದ ನೆಲ್ಲುಗದ್ದೆಗೆ ನುಗ್ಗಿದುವು. ಆಗ ಕಾಣಿಸಿಕೊಂಡಿತು, ಬಾಣದ ವೇಗದಿಂದ ಬಳುಕಿ ಚಿಮ್ಮಿ ಹಾರಿ ಓಡುತ್ತಿದ್ದ ಒಂದು ಮೊಲ!

ಪುಟ್ಟಣ್ಣ "ಅಯ್ಯಯ್ಯೋ, ಕೋವಿ ತರಲಿಲ್ಲಲ್ಲಾ!" ಎಂದವನೇ "ಛೂ! ಹಿಡೀ! ಹಿಡ್ಕಾ! ಹಿಡೀ! ಹಿಡೀ!" ಎಂದು ಅಬ್ಬರಿಸಿ ಕೂಗುತ್ತ ಮುಂದೆ ನುಗ್ಗಿ, ಕಬ್ಬಿನಗದ್ದೆಯ ಬೇಲಿಯನ್ನು ಹತ್ತಿ ಹಾರಿ, ಬೆನ್ನಟ್ಟಿದನು. ಗೌಡರು ಓಡುತ್ತಿದ್ದ ಮೊಲವನ್ನೂ ಅಟ್ಟುತ್ತಿದ್ದ ನಾಯಿಗಳನ್ನೂ ಹಿಂಬಾಲಿಸುತ್ತಿದ್ದ ಪುಟ್ಟಣ್ಣನನ್ನೂ ನೋಡುತ್ತ ನಿಂತಿದ್ದ ಆಳುಗಳಿಗೆ "ಏನ್ನೋಡ್ತೀರೋ, ಬದ್ನೇಕಾಯಿ, ನಿಮ್ಮ ಕೆಲ್ಸಾ ಬಿಟ್ಕೊಂಡು!" ಎಂದು ಗದರಿಸಲು, ಮತ್ತೆ ಗುದ್ದಲಿ ಮಣ್ಣುಗಳ ಗುದ್ದಾಟ ಕೇಳಿಸತೊಡಗಿತು.

ತಂದೆ ಕರೆದರು. ಶಶಪ್ರಸಂಗದಿಂದ ಪ್ರಸನ್ನಪ್ರಾಯನಾಗಿದ್ದ ರಾಮಯ್ಯ ಮತ್ತೆ ವಿಷಣ್ಣನಾಗಿ ಅವರ ಬಳಿಗೆ ಬಂದು ಒಂದು ಮಾರು ದೂರದಲ್ಲಿ ಕುಳಿತನು.

"ಬಂದವರು ನೆಟ್ಟಗೆ ಮನೇಗೆ ಬರಬೇಕೋ, ನೆಂಟರ ಮನೆ ಕೂಳು ಹೆರಕ್ತಾ ಕೂತುಬಿಡಾದೇನು?" ಎಂದರು ಗೌಡರು.

ಮೊದಲೇ ಖಿನ್ನನಾಗಿದ್ದ ರಾಮಯ್ಯ ಮತ್ತೂ ಖಿನ್ನನಾಗಿ ತಪ್ಪನ್ನೊಪ್ಪಿಕೊಳ್ಳುವವನಂತೆ ಮೃದು ಧ್ವನಿಯಿಂದ "ಅಣ್ಣಯ್ಯನಿಗೆ ಬೆನ್ನು ನೋವಾಗಿತ್ತು. ಹೇಗೆ ಬರೋದು?" ಎಂದನು.

"ಅಣ್ಣಯ್ಯನಿಗೆ ಬೆನ್ನು ನೋವಾದ್ರೆ, ತಮ್ಮಯ್ಯ ಮಾಡೋದೇನಲ್ಲಿ?"

ರಾಮಯ್ಯ ಮಾತಾಡಲಿಲ್ಲ. ಕಯ್ಯಲ್ಲೊಂದು ಕಬ್ಬಿನ ಗರಿ ಹಿಡಿದುಕೊಂಡು ಸೀಳುತ್ತ, ಅದರ ಕಡೆಗೆ ತಲೆಬಾಗಿ ನೋಡುತ್ತಿದ್ದನು.

"ನಿಮ್ಮ ಸಾಮಾನೆಲ್ಲ ತಂದೀರೇನು?"

" ಇಲ್ಲ. ಹೋಟೆಲ್ ರೂಮಿನಲ್ಲೇ ಇಟ್ಟು ಬಂದಿದ್ದೇವೆ."

" ಯಾಕೆ? ತರಬಾರದಾಗಿತ್ತೇನು ? "

" ಮತ್ತೆ ಹೊತ್ತುಕೊಂಡು ಹೋಗೋರು ಯಾರು ಅಂತ ತರಲಿಲ್ಲ."

" ಹೊತ್ತುಕೊಂಡು ಹೋಗೋದೂ ಇಲ್ಲ, ಗಿತ್ತುಕೊಂಡು ಹೋಗೋದೂ ಇಲ್ಲ! ಸಾಕು ನೀವು ಓದಿ ಪ್ಯಾಸುಮಾಡಿದ್ದು ... ನೀವು ಅಮಲ್ದಾರಿಕೇ ಮಾಡೋದು ಅಷ್ಟರೊಳಗೇ ಇದೆ! ನೆಲಾ ಗುಡಿಸುವಂತೆ ಬಿಳೀ ಪಂಚೆ ಉಟ್ಕೊಂಡು ಷೋಕಿ ಮಾಡಿಬಿಟ್ಟರೆ ಎಲ್ಲಾ ಬಂತು! ಆ ವೆಂಕಪ್ಪಯ್ಯ ಹೇಳ್ದ್ಹಾಂಗೆ ಮಣ್ಣುಕೆರೆಯೋ ಜಾತಿ ಕೈಗೆ ಲೇಖಣಿ ಕೊಟ್ಟರೆ ಇನ್ನೇನಾಗ್ತದೆ! ... ಸಾಮಾನ್ನೆಲ್ಲ ತರಿಸಿಬಿಡಿ ರೈಲುಮೇಲೆ."

ರಾಮಯ್ಯನಿಗೆ ಕುರುವಿನ ಮೇಲೆ ಬೊಕ್ಕೆ ಬಂದಂತಾಯಿತು. ಅಪ್ರತಿಭನಾದನು. ಏನು ಹೇಳಬೇಕೋ ಗೊತ್ತಾಗಲಿಲ್ಲ. ತಂದೆ ಹೊಸ ಹೆಣ್ಣಿನೊಡನೆ ಹೊಸ ಕ್ರೌರ್ಯವನ್ನೂ ಸಂಪಾದಿಸಿದ್ದಂತೆ ತೋರಿತು. ಇಷ್ಟು ಬೇಗ ಇಂತಹ ಮಾತುಗಳನ್ನು ಕೇಳಲು ಅವನು ಸಿದ್ಧನಾಗಿರಲಿಲ್ಲ. ಕಡೆಗೆ ಅತ್ತ ನೋಡಿ, ಇತ್ತ ನೋಡಿ, ಎಂಜಲು ನುಂಗಿ " ಅಣ್ಣಯ್ಯ ಇನ್ನೂ ಓದಬೇಕು ಅಂತಿದ್ದಾನೆ " ಎಂದನು.

"ಊ್ಞ! ನೀವು ಓದ್ತಾ ಷೋಕಿ ಮಾಡ್ತಾ ಪ್ಯಾಟೆ ತಿರುಗ್ತಾ ಇರಿ. ನಾನಿಲ್ಲಿ ಗೊಬ್ಬರ ಹೊತ್ತು, ಗೆಯ್ದು ದುಡ್ಡು ಕಳಿಸ್ತಾ ಇರ್‍ತೀನಿ!... ಅವನು ಏನಾದ್ರೂ ಮಾಡ್ಲಿ!... ಅವನ ಪಾಲು ಅವನು ತಗೊಂಡು ಮೈಸೂರಿಗಾದ್ರೂ ಹೋಗ್ಲಿ, ಮದ್ರಾಸಿಗಾದ್ರೂ ಹೋಗ್ಲಿ!... ಅವನ ಅವ್ವನ ದೂರಂತೂ ನಾ ಕೇಳಲಾರೆ ... ಹೋದೋರ್‍ಹತ್ರ ಬಂದೋರ್‍ಹತ್ರ ಪಾಲುಮಾಡಿಕೊಡ್ಲಿ ಅಂತ ಹೇಳ್ತದಂತೆ ... ಕೇಳೀ ಕೇಳೀ ನನಗಂತೂ ತಲೆ ರೇಜಿಗೆ ಹಿಡಿದುಹೋಗಿದೆ ... ಅದನ್ನಂತೂ ಕಂಡರೆ ಆಗೋದಿಲ್ಲ... ('ಅದು' ಎಂದರೆ ಅವರ ಹೆಂಡತಿ ಸುಬ್ಬಮ್ಮ ಎಂಬುದನ್ನು ರಾಮಯ್ಯನಿಗೆ ಹೊಸದಾಗಿ ತಿಳಿಸಬೇಕಾಗಿರಲಿಲ್ಲ. ಚಂದ್ರಯ್ಯ ಗೌಡರೂ ಕೂಡ ತಮ್ಮ ಮದುವೆಯ ವಿಚಾರ ಮಗನಿಗೆ ಗೊತ್ತಾಗಿರಬೇಕು ಎಂದು ನಿಸ್ಸಂಕೋಚವಾಗಿ ಮಾತಾಡಿದರು.) ... ದಿನ ಬೆಳಗಾದರೆ ಅಡಿಗೆ ಮನೇಲಿ ಗುದ್ದಾಟ ... ಜಗಲೀಲಿ ಯಾರಾದ್ರೂ ಅಪ್ಪಂತೋರು ಬಂದು ಕೂತಿದ್ರಂತೂ ... ಏ ಬಗ್ರಾ, ಗಿಡಾನೇ ಕಡಿದೇನೋ! ಥೂ, ಕಳ್ಳಸೂಳೇ ಮಗನೇ" ಎಂದು ಗೌಡರು ಆಳೊಬ್ಬನನ್ನು ಬೈದರು.

ನೀಲಿಯ ಬಾನಿನಲ್ಲಿ ಕೆಲವು ಬಿಳಿಯ ಬಣ್ಣದ ತುಂಡುಮುಗಿಲು ನಿಶ್ಚಲಪ್ರಾಯವಾಗಿದ್ದುವು. ಪ್ರಾತಃಕಾಲದ ಎಳ ಬಿಸಿಲು ಒಯ್ಯೊಯ್ಯನೆ ಬೆಳೆಬಿಸಿಲಾಗಿ ಅಲೆಯಲೆಯಾಗಿ ದೃಷ್ಟಿ ಸೀಮಾ ಪರ್ಯಂತ ಪ್ರಸರಿಸಿದ್ದ ಮಹಾರಣ್ಯ

ಭೂಧರಗಳ ಮೇಲೆ ಸ್ವಚ್ಛಂದವಾಗಿ ವಿಹರಿಸುತ್ತಿತ್ತು. ರಾಮಯ್ಯ ಆ ಮಹಾ ದೃಶ್ಯವನ್ನು ಕಣ್ಣಿನಿಂದ ಮಾತ್ರ ನೋಡುತ್ತ, ವ್ಯಸನಾಕ್ರಾಂತನಾಗಿ ಅನ್ಯಮನಸ್ಕ ನಾಗಿದ್ದನು.

ಅತ್ತ ಪುಟ್ಟಣ್ಣ ಮೊಲ ಮತ್ತು ನಾಯಿಗಳ ಹಿಂದೆ ಓಡಿಯೋಡಿ ಸಾಕಾಗಿ ಏದುತ್ತ ನಿಂತನು. ಮೊಲವೂ ನಾಯಿಗಳೂ ಗದ್ದೆಯ ಬಯಲನ್ನು ದಾಟಿ ಕುರುಚಲು ಕಾಡನ್ನು ಪ್ರವೇಶಿಸಿದುವು. ಬಹಳ ಹೊತ್ತಾದರೂ ನಾಯಿ ಗಳು ಹಿಂದಕ್ಕೆ ಬಾರದಿರಲು ಪುಟ್ಟಣ್ಣ 'ಕ್ರೂ ಕ್ರೂ' ಎಂದು ಗಟ್ಟಿಯಾಗಿ ಕೂಗಿ ಕರೆದನು. ತುಸು ಹೊತ್ತಿನಲ್ಲಿ ಡೈಮಂಡು ಬಾಯಿ ತೆರೆದು, ಲಾಲಾಜಲ ಸ್ರವಿಸುತ್ತಿದ್ದ ಕೆಂಪು ನಾಲಗೆಯನ್ನು ಹೊರಗೆ ಚಾಚಿಕೊಂಡು, ಏದುತ್ತ ಓಡಿ ಬಂದಿತು. ಅದರ ಹಿಂದೆ ರೂಬಿ, ಟಾಪ್ಸಿ, ರೋಜಿ, ಕೊತ್ವಾಲ, ಡೂಲಿ ಒಂದೊಂದಾಗಿ ಕಾಣಿಸಿಕೊಂಡುವು. ಅವುಗಳನ್ನು ನೋಡಿದ ಕೂಡಲೆ ಪುಟ್ಟಣ್ಣ ನಿಗೆ ಗೊತ್ತಾಯಿತು, ಷಿಕಾರಿ ಬಿಕಾರಿಯಾಗಿದೆ ಎಂದು.

ಪುಟ್ಟಣ್ಣ ನಾಯಿಗಳೊಡನೆ ಹಿಂತಿರುಗಿ ಮನೆಗೆ ಬರುತ್ತಿದ್ದಾಗ, ಗಟ್ಟದಾಳು ಗಳ ಬಿಡಾರಗಳಿದ್ದ ಸ್ಥಳಕ್ಕೆ ಸಮೀಪದಲ್ಲಿ ಹಳೆಪೈಕದ ತಿಮ್ಮನು ಸಾಕಿದ್ದ ಕೆಲವು ಹೋತಗಳೂ ಆಡುಗಳೂ ಮರಿಗಳೊಡನೆ ಸೊಪ್ಪು ಮೇಯುತ್ತಿದ್ದುವು. ಎತ್ತರ ವಾಗಿದ್ದ ಕರಿಯ ಬಣ್ಣದ ಹೋತನೊಂದು ಹಿಂಗಾಲುಗಳ ಮೇಲೆ ನಿಂತು, ಮುಂಗಾಲುಗಳನ್ನು ಕೆಳಗೆ ಬಾಗಿದ್ದ ಒಂದು ಮರದ ಕೊಂಬೆಗೆ ಚಾಚಿ ಸೊಪ್ಪು ಮೇಯುತ್ತಿದ್ದುದು ದೂರದಿಂದಲೆ ಪುಟ್ಟಣ್ಣನ ಕಣ್ಣಿಗೆ ಬಿದ್ದಿತ್ತು. ಮೊಲ ವನ್ನಟ್ಟಿ ಬೇಟೆ ಸಿಕ್ಕದೆ ರೇಗಿದ್ದ ನಾಯಿಗಳು ಮೇಕೆಗಳಿದ್ದ ದಿಕ್ಕಿಗೆ ರಭಸದಿಂದ ನುಗ್ಗಿ ದುವು. ಅವು ಅರಚುತ್ತ ಚೆಲ್ಲಾಪಿಲ್ಲಿಯಾಗಿ ಓಡಿದುವು. ಓಡಲಾರದ ಮರಿಯೊಂದು ಶುನಕ ಸೇನೆಗೆ ಸುಲಭ ಗುರಿಯಾಯಿತು. ಪುಟ್ಟಣ್ಣ ನಾಯಿ ಗಳನ್ನು ಗದರಿಸುತ್ತ ಕುರಿಮರಿಯ ರಕ್ಷಣೆಗಾಗಿ ಓಡಿದನು. ಮರಿ ಅಲ್ಲಿ ನುಗ್ಗಿ ಇಲ್ಲಿ ನುಸಿದು ಒಂದೆರಡು ನಿಮಿಷಗಳವರೆಗೆ ತಪ್ಪಿಸಿಕೊಂಡಿತು. ಅದು ತಪ್ಪಿಸಿ ಕೊಂಡಂತೆಲ್ಲ ನಾಯಿಗಳಿಗೆ ಜಿದ್ದು ಹೆಚ್ಚಿದಂತಾಗಿ ಮತ್ತಷ್ಟು ರೋಷ ರಭಸಗಳಿಂದ ಬೆನ್ನಟ್ಟಿ, ಅದನ್ನು ಹಿಡಿದೇ ಬಿಟ್ಟುವು. ಕುರಿಮರಿ ಒಂದು ಸಾರಿ ಕರುಣಾಕರ ವಾಗಿ ಅರಚಿಕೊಂಡು ನೆಲಕ್ಕೆ ಬಿದ್ದು ಮೌನವಾಯಿತು.

ಪುಟ್ಟಣ್ಣನು ಓಡಿ ಭದ್ರಮುಷ್ಟಿಯಿಂದಲೆ ನಾಯಿಗಳನ್ನು 'ಘುಕ್' 'ಕ್ಷಿಇ' ಎನ್ನುವಂತೆ ಗುದ್ದಿ ಅಟ್ಟಿದಾಗ ನೊರೆಯ ಬಿಳಿಯ ಮುದ್ದು ಮರಿ ಹುಲ್ಲು ನೆಲದ ಮೇಲೆ ಲಿಬಿ ಲಿಬಿ ಒದ್ದಾಡುತ್ತಿತ್ತು. ಅದರ ತೊಗಲು ಕತ್ತಿನ ಬಳಿಯೂ ಹಿಂಗಾಲಿ ನಲ್ಲಿಯೂ ನೆತ್ತರು ಹಿಡಿದು ಕೆಂಪಾಗಿತ್ತು. ಮುದ್ದಿನ ಮುದ್ದೆಯಂತಿದ್ದ ಕುರಿ

ಮರಿಯ ಶೋಚನೀಯ ಸ್ಥಿತಿಯನ್ನು ಕಂಡು ಪುಟ್ಟಣ್ಣನ ಎದೆ ಕರಗಿ ನೀರಾಯಿತು. "ಅಯ್ಯೋ ನಿಮ್ಮ ಕುರ್ಕ ಹೊತ್ತುಕೊಂಡು ಹೋಗ!" ಎಂದು ಹಲ್ಲುಕಚಿ ನಾಯಿಗಳನ್ನು ಶಪಿಸುತ್ತ, ಮರಿಯನ್ನು ಮೆಲ್ಲಗೆ ಎತ್ತಿಕೊಂಡನು. ಅದರ ಮೃದುವಾದ ನುಣುಪಾದ ಚರ್ಮ ಕೈ ಸೋಂಕಿದ ಕೂಡಲೆ, ಪುಟ್ಟಣ್ಣನಲ್ಲಿ ದರ್ಶನದಿಂದ ಉಂಟಾಗಿದ್ದ ಕನಿಕರ ಸ್ಪರ್ಶದಿಂದ ಇಮ್ಮಡಿಯಾಯಿತು. ನೀರು ಕುಡಿಸಿ ಮರಿಗೆ ಶುಶ್ರೂಷೆ ಮಾಡುವ ಸಲುವಾಗಿ ಬಳಿಯಿದ್ದ ಗಟ್ಟದವರ ಬಿಡಾರಗಳಿಗೆ ಹೋದನು. ಆಳುಗಳೆಲ್ಲ ಕೆಲಸಕ್ಕೆ ಹೋಗಿದ್ದುದರಿಂದ ತಟ್ಟಿಯ ಬಾಗಿಲುಗಳನ್ನು ಮುಚ್ಚಿ ಬಿಗಿದು ಕಟ್ಟಿದ್ದರು. ಹಿಂದಿನ ದಿನ ತೋಳಿಗೆ ಪೆಟ್ಟು ಬಿದ್ದುದರಿಂದ ಸೋಮನು ಕೆಲಸಕ್ಕೆ ಹೋಗದಿದ್ದುದು ಪುಟ್ಟಣ್ಣನಿಗೆ ಕಬ್ಬಿನ ಗದ್ದೆಯಲ್ಲಿಯೆ ತಿಳಿದಿತ್ತು. ಅವನ ಬಿಡಾರಕ್ಕೆ ಹೋದನು. ಬಾಗಿಲು ತೆರೆದಿತ್ತು. ಒಳಗೆ ಯಾವುದೊಂದು ಸದ್ದೂ ಕೇಳಿಸಲಿಲ್ಲ. "ಸೋಮಾ! ಸೋಮಾ!" ಎಂದು ಕರೆದನು. ಉತ್ತರ ಬರಲಿಲ್ಲ. ಎತ್ತಿಕೊಂಡಿದ್ದ ಕುರಿಮರಿಯೊಡನೆ ಪುಟ್ಟಣ್ಣ ಮೈ ಕುಸಿದು ತಲೆ ಬಾಗಿ, ಬಾಗಿಲು ದಾಟಿದನು.

ಬಿಸಿಲಿನಿಂದ ಬಂದಿದ್ದ ಅವನ ಕಣ್ಣಿಗೆ ಒಳಗೆ ಅರೆಗತ್ತಲೆ ಕವಿದಂತಾಯಿತು. ಹಳೆಯ ಕೊಳಕು ಚಿಂದಿ ಬಟ್ಟೆಗಳ ವಾಸನೆಯೂ, ತೆಂಗಿನೆಣ್ಣೆಯ ವಾಸನೆಯೂ ಹೊಗೆಯ ಮತ್ತು ಹುರಿದ ಹಂದಿ ಮಾಂಸದ ವಾಸನೆಯೊಂದಿಗೆ ಮಿಳಿತವಾಗಿ ಮೂಗಿಗೆ ಬಡಿದುವು. ಏನೋ ಗೊರ್ ಗೊರ್ ಸದ್ದು ಕೇಳಿಸಿದಂತಾಗಿ "ಸೋಮಾ! ಸೋಮಾ!" ಎಂದನು. ಉತ್ತರವಾಗಿ ಗೊರ್ ಗೊರ್ ಸದ್ದು ಕೇಳಿಸಿತಲ್ಲದೆ ಯಾರೂ 'ಓ' ಕೊಳ್ಳಲಿಲ್ಲ. ಅಷ್ಟರಲ್ಲಿ ಕಣ್ಣು ಕಾಣುವಂತಾಗಿ, ಮೂಲೆಯಲ್ಲಿದ್ದ ಒಲೆಯ ಬಳಿ ನೆಲದ ಮೇಲೆ ಸೋಮನು ಗೊರ್ ಗೊರ್ ಎನ್ನುತ್ತ ಬಿದ್ದಿದ್ದದ್ದು ಗೋಚರವಾಗಿ, ಪುಟ್ಟಣ್ಣ ಸ್ತಂಭಿತನಾದನು! ಕುರಿಮರಿಯನ್ನು ಕೆಳಗಿಟ್ಟು ಸೋಮನ ಶರೀರದ ಮೇಲೆ ಬಾಗಿದನು. ಅವನ ಕಣ್ಣು ಮೆಳ್ಳೆಯಾಗಿತ್ತು. ಬಾಯಿ ತೆರೆದಿದ್ದು, ಬಹಳ ಕಷ್ಟದಿಂದ ಉಸಿರು ಗೊರಾ ಗೊರಾ ಎಂದು ಆಡುತ್ತಿತ್ತು. ಹೊಟ್ಟೆ ಊದಿಕೊಂಡಿತ್ತು. ಆಗ ನಿಶ್ಚಲವಾಗಿದ್ದರೂ ಸುತ್ತಲೂ ಚೆಲ್ಲಾಪಿಲ್ಲಿಯಾಗಿ ಬಿದ್ದಿದ್ದ ಸಾಮಾನುಗಳ ಅವ್ಯವಸ್ಥೆಯಿಂದ ಅವನು ಬಹಳ ಒದ್ದಾಡಿಕೊಂಡಿದ್ದುದು ಗೊತ್ತಾಗುತ್ತಿತ್ತು. ಮೊದಮೊದಲು ಅವನ ಆ ಸ್ಥಿತಿಗೆ ಕಾರಣ ಹೊಳೆಯದೆ ಪುಟ್ಟಣ್ಣ ಭೀತೋದ್ವಿಗ್ನನಾಗಿದ್ದರೂ ಒಂದೆರಡು ಕ್ಷಣಗಳಲ್ಲಿಯೆ ಅಲ್ಲಿ ತೆರೆದು ಬಿದ್ದಿದ್ದ ಹಂದಿಯ ಹುರಿದ ಮಾಂಸದ ಮಣ್ಣಿನ ಪಾತ್ರೆಯಿಂದ ಗುಟ್ಟು ಮನಸ್ಸಿಗೆ ಮಿಂಚಿ, ಒಡನೆಯೆ ಉದ್ಯಮಶೀಲನಾದನು. ಬೇಗ ಬೇಗನೆ ಸೋಮನನ್ನು ಎತ್ತಿ ಕೂರಿಸಿ, ಕತ್ತಿನ ಕೆಳಗೆ ಬೆನ್ನಿನ ಮೇಲೆ, ಬಲವಾಗಿ ಒಂದು ಗುದ್ದು ಗುದ್ದಿದನು. ಬಿಲ್ಲನ್ನು ಎಳೆದ ಕೂಡಲೆ

ಬಂದೂಕಿನಿಂದ ಗುಂಡು ಹಾರುವಂತೆ ಸೋಮನ ವದನಗಹ್ವರದಿಂದ ಲಾಲಾ ಜಲದಿಂದ ಲೋಳಿಯಾಗಿ ಸ್ವಲ್ಪ ಮಾಂಸಾವೃತವಾಗಿದ್ದ ಎಲುಬಿನ ತುಂಡೊಂದು ಜಲಕ್ಕನೆ ಹೊರನೆಗೆದು ಸದ್ದು ಮಾಡುತ್ತ ನೆಲದ ಮೇಲೆ ಉರುಳಿಹೋಯಿತು. ಸೋಮನು ದೀರ್ಘಶ್ವಾಸೋಚ್ಛ್ವಾಸಗಳನ್ನು ಬಿಡುತ್ತ, ಸತ್ತು ಬದುಕಿದವನಂತೆ ಪುಟ್ಟಣ್ಣನ ಕಡೆಗೆ ನೋಡುತ್ತ ಕುಳಿತನು.

ಆ ದಿನ ಬೆಳಿಗ್ಗೆ ಆಳುಗಳೆಲ್ಲರೂ ಗಂಜಿಯುಂಡು ಕೆಲಸಕ್ಕೆ ಹೋದಮೇಲೆ ಸೋಮನೊಬ್ಬನೇ ಬಿಡಾರದಲ್ಲಿ ತೋಳಿಗೆ ಬಟ್ಟೆ ಕಟ್ಟಿಕೊಂಡು ಮಲಗಿದ್ದನು. ಹೊತ್ತು ಕಳೆಯುವುದು ಪ್ರಯಾಸವಾಗಿ ಒಂದೆರಡು ಸಾರಿ ಎಲೆಯಡಕೆ ಹಾಕಿಕೊಂಡನು. ನಾಲ್ಕಾರು ಸಾರಿ ಹೊರಗೆ ತಲೆಹಾಕಿ ಎಂಜಲು ಉಗುಳಿದನು. ಹೊಗೆಸೊಪ್ಪು ಮಿಶ್ರವಾಗಿದ್ದ ತಾಂಬೂಲ ಚರ್ವಣವನ್ನು ಕಡೆಯ ಸಾರಿ ಉಗುಳಿ ಹಿಂತಿರುಗುತ್ತಿದ್ದಾಗ ಅವನ ಕಣ್ಣು ಒಲೆಯ ಮೇಲಿದ್ದ ಒಂದು ಮಣ್ಣಿನ ಪಾತ್ರೆಯ ಮೇಲೆ ಬಿತ್ತು. ಅದರೊಳಗೆ ಹಿಂದಿನ ದಿನ ಹೊಡೆದಿದ್ದ ಹಂದಿಯ ಹುರಿ ಮಾಂಸವಿತ್ತು. ಬಾಡುಗಳ್ಳ ಸೋಮನಿಗೆ ಬಾಯಲ್ಲಿ ನೀರಿನ ಚಿಲುಮೆ ಚಿಮ್ಮಿತು. ಬೆಳಿಗ್ಗೆ ಇತರರ ಜೊತೆಯಲ್ಲಿ ಗಂಜಿಯುಣ್ಣುತ್ತಿದ್ದಾಗ ನಂಚಿಕೊಳ್ಳಲು ವ್ಯಂಜನವಾಗಿ ಹಂಚಿದ್ದ ಹಂದಿಯ ಮಾಂಸ ಅವನಿಗೆ ಸಾಕಾಗಿರಲಿಲ್ಲ. ಸಾಯಂಕಾಲದ ಊಟಕ್ಕೂ ಸ್ವಲ್ಪವಿರಲಿ ಎಂದು ಎಲ್ಲರೂ ಒಪ್ಪಿ, ಉಳಿದುದನ್ನು ಬೆಂಕಿಯಾರಿದ್ದ ಒಲೆಯಮೇಲೆ ಮಡಕೆಯಲ್ಲಿಟ್ಟಿದ್ದರು. ಆದರಲ್ಲಿ ಸ್ವಲ್ಪ ತಿಂದರೆ ಇತರರಿಗೇನು ಗೊತ್ತಾಗುತ್ತದೆ? ಎಂದು ಯೋಚಿಸಿ ಸೋಮನು ಉಪ್ಪು ಹಾಕಿ ಹುರಿದಿದ್ದ ಮಾಂಸವನ್ನು ಒಂದೊಂದು, ಎರಡೆರಡು, ಕಡೆಕಡೆಗೆ ಮೂರುಮೂರು ತುಂಡುಗಳನ್ನಾಗಿ ಬಾಯಿಗೆ ಹಾಕಿಕೊಂಡು ಚಪ್ಪರಿಸಿ ತಿನ್ನತೊಡಗಿದನು. 'ಸ್ವಲ್ಪ ತಿಂದರೆ ಇತರರಿಗೇನು ಗೊತ್ತಾಗುತ್ತದೆ' ಎಂದು ಪ್ರಾರಂಭಿಸಿದ್ದನು. ಸ್ವಲ್ಪವನ್ನೇ ತಿಂದಿದ್ದರೆ ಇತರರಿಗೇನೂ ಗೊತ್ತಾಗುತ್ತಿರಲಿಲ್ಲ; ನಿಶ್ಚಯ. ಆದರೆ ಅವನ 'ಸ್ವಲ್ಪ'ಕ್ಕೆ ನಿಷ್ಕೃಷ್ಟವಾದ ಮೇರೆಯಿರಲಿಲ್ಲ. ಆದ್ದರಿಂದ ಸ್ವಲ್ಪ ಹೊತ್ತಿನಲ್ಲಿಯೇ 'ಸ್ವಲ್ಪ' 'ಸ್ವಲ್ಪ' 'ಸ್ವಲ್ಪ' 'ಸ್ವಲ್ಪ'ವಾಗಿ ಮಡಕೆಯಲ್ಲಿದ್ದ ಮಾಂಸ ಅರ್ಧಕ್ಕೆ ಮೀರಿ ಮಾಯವಾಗಿತ್ತು! ಬಕಾಸುರನಿಗೋಸ್ಕರವಾಗಿದ್ದ ಬಂಡಿಯನ್ನವನ್ನು ತಿಂದು ಜೀರ್ಣಿಸಿಕೊಂಡ ಭೀಮಸೇನ ನಮ್ಮ ಸೋಮನನ್ನು ನೋಡಿದ್ದರೆ ಕಣ್ಣರಳಿಸಿ ಬಾಯ್ದೆರೆದು ಅಪ್ರತಿಭನಾಗಿ ಸೋಲನ್ನೊಪ್ಪಿಕೊಳ್ಳುತ್ತಿದ್ದನೋ ಏನೋ! ಅರ್ಧ ಖರ್ಚಾದುದನ್ನು ನೋಡಿ, ಎಲ್ಲಿ ಸಿಕ್ಕಿಬೀಳುತ್ತೇನೆಯೋ ಎಂದು ಸೋಮನಿಗೆ ದಿಗಿಲಾಯಿತು. ಆದರೆ ಹೆಚ್ಚಾಗಿ ತಿನ್ನುವ ಹಕ್ಕು ತನಗಿದೆ: ತಾನಲ್ಲವೇ ಜಾಕಿಯಿಂದ ಹಂದಿಯನ್ನು ಬಿಡಿಸಿಕೊಳ್ಳಲು

ಮೊದಲು ಮುಂಬರಿದವನು? ಅಲ್ಲದೆ ಟೈಗರಿನ ಪಾಲನ್ನೂ ಕಷ್ಟಪಟ್ಟು ಕಾನು ಬೈಲಿಗೆ ಹತ್ತಿಹೋಗಿ ಪುಟ್ಟಣ್ಣನ ಅಪ್ಪಣೆ ಪಡೆದು ಇಸುಕೊಂಡು ಬಂದವನೂ ತಾನೇ! ಎಲ್ಲರಂತೆಯೇ ಪಾಲೇನು ತನಗೂ? ಅದೆಲ್ಲಿಯ ಮಾತು! ಎಂದು ಆಲೋಚಿಸಿದ ಸೋಮ ಮತ್ತೆ ಷುರುಮಾಡಿದನು! ಮೊದಲು ಮಾಂಸದ ತುಂಡುಗಳನ್ನು ಚೆನ್ನಾಗಿ ಅಗಿದು ತಿನ್ನುತ್ತಿದ್ದವನು ಆಮೇಲೆ ಬಾಯಲ್ಲಿ ಒಂದಿಷ್ಟು ಅಲ್ಲಾಡಿಸಿ ನುಂಗತೊಡಗಿದನು. ಆಗ ಅವನಲ್ಲಿದ್ದುದು ಹಸಿವೆಯೂ ಆಗಿರಲಿಲ್ಲ; ರುಚಿಪ್ರಿಯತೆಯೂ ಆಗಿರಲಿಲ್ಲ; ಲೋಭಮಾತ್ರವಾಗಿತ್ತು. ಅದೇ ಸಮಯ ದಲ್ಲಿಯೇ ನಾಯಿಗಳ ಕೂಗಾಟವೂ ಪುಟ್ಟಣ್ಣನ ತಾರಸ್ವರವೂ ಕೇಳಿಸಿ, ಸೋಮನು ಏಕೋ ಏನೋ ಗಾಬರಿಯಿಂದ, ತುಂಡುಗಳನ್ನು ಮುಕ್ಕತೊಡಗಿದನು. ಎಲುಬಿಲ್ಲದ ತುಂಡುಗಳನ್ನೇ ಬಾಯಿಗೆ ಹಾಕಿಕೊಳ್ಳುತ್ತಿದ್ದವನು ಹೊರಗಡೆ ಸದ್ದನ್ನು ಕೇಳಿದ ಕೂಡಲೆ ಯಾರು ಎಲ್ಲಿ ಬಂದುಬಿಡುತ್ತಾರೆಯೊ ಎಂಬ ಭಯದಿಂದ ವಿವೇಚನೆ ತಪ್ಪಿ ಮಾಂಸಾವೃತವಾಗಿದ್ದ ಒಂದು ದಪ್ಪ ಎಲುಬನ್ನು ನುಂಗಿಬಿಟ್ಟನು. ಆದರೆ ಅದು ಸುರಕ್ಷಿತವಾಗಿ ಜಠರ ಪ್ರವೇಶ ಮಾಡದೆ ದಾರಿಯಲ್ಲಿಯೆ ಕೀಟಲೆಮಾಡ ತೊಡಗಿ ಮುಂಬರಿಯಲಿಲ್ಲ. ಸೋಮನು ಅದನ್ನು ಮುಂದಕ್ಕೆ ತಳ್ಳಲು ಪ್ರಯತ್ನಮಾಡಿದನು. ಅದು ಮತ್ತೂ ಭದ್ರವಾಗಿ ಗಂಟಲಿನಲ್ಲಿ ಸಿಕ್ಕಿಕೊಂಡಿತು. ಉಸಿರಾಡಲು ಕಷ್ಟವಾಗಿ, ಅದನ್ನು ಹೊರಗೆ ಹಾಕಲು ಮಾಡಿದ ಸಾಹಸವೂ ವ್ಯರ್ಥವಾಗಿ ಒದ್ದಾಡಿದನು. ಯಾರನ್ನಾದರೂ ಕೂಗಬೇಕೆಂದು ಮಾಡಿದ ಪ್ರಯತ್ನವೂ ವಿಫಲವಾಯಿತು. ಮೊದಲು ಯಾರೂ ಬಿಡಾರದೊಳಗೆ ಬರದಿರಲಿ ಎಂದು ಎಷ್ಟು ಹಾರೈಸಿದ್ದನೋ ಈಗ ಅಷ್ಟೇ ಕಾತರತೆಯಿಂದ ಯಾರಾದರೂ ಬರಲಿ ಎಂದು ಕಣ್ಣು ಕಣ್ಣು ಬಿಡುತ್ತಿದ್ದನು. ಒಂದೆರಡು ನಿಮಿಷಗಳಲ್ಲಿಯೇ ಕಣ್ಣು ಕತ್ತಲೆಗಟ್ಟಿ, ಮನಸ್ಸೂ ಮಬ್ಬಾಗಿ, ಒದ್ದಾಟ ನಿಂತಿತು. ಆದ್ದರಿಂದಲೆ ಪುಟ್ಟಣ್ಣನ ಕರೆಯನ್ನಾಗಲಿ ಆಗಮನ ಪ್ರವೇಶಗಳನ್ನಾಗಲಿ ಅವನು ಅರಿಯದೆ ಇದ್ದದ್ದು.

ಪುಟ್ಟಣ್ಣನ ಗುದ್ದಿಗೆ ಎಲುಬು ಹೊರಕ್ಕೆ ನೆಗೆದ ತರುವಾಯ ಸೋಮ ಚೇತರಿಸಿಕೊಂಡನು.

"ಅಯ್ಯೋ, ನಿನ್ನ ಹೊಟ್ಟೆಗೆ ಬೆಂಕಿ ಹಾಕ! ಬಾಡಿಗಾಗಿ ಪ್ರಾಣಾನೂ ಬಿಟ್ಟಿದ್ದೆಯಲ್ಲೋ!"

ಪುಟ್ಟಣ್ಣನ ಭರ್ತ್ಸನೆಗೆ ಸೋಮ ಮಾತಾಡದೆ ನೆಲದಮೇಲೆ ದೂರಹಾರಿ ಬಿದ್ದಿದ್ದ ಎಲುಬಿನ ತುಂಡನ್ನು ಮುತ್ತಿದ್ದ ನೊಣಗಳನ್ನೇ ನೋಡುತ್ತ ನಿಧಾನವಾಗಿ "ಅಲ್ಲಾ ಕಾಣೆ, ಪುಟ್ಟೇಗೌಡ್ರೇ, ನೀವು ಆ ಹಂದಿ ಹೊಡೀಬಾರದಿತ್ತು... ಅದು ದೆಯ್ಯದ ಹಂದಿ ಅಂಬುದಾಗಿ ಕಾಣುತ್ತದೆ" ಎಂದನು.

ಆ ಹಂದಿಯ ದೆಸೆಯಿಂದ ಆಗಿದ್ದ ಅನಾಹುತಗಳನ್ನೆಲ್ಲ ನೆನೆದ ಸೋಮ ಅದರ ಮೇಲೆ ಯಾವುದೋ ಪಿಶಾಚ ಸವಾರಿ ಮಾಡುತ್ತಿದ್ದಿರಬೇಕೆಂದು ನಿರ್ಧರಿಸಿದ್ದನು. ಜಾಕಿಗೆ, ತನಗೆ, ಟೈಗರಿಗೆ, ಪುಟ್ಟಣ್ಣನಿಗೆ ಎಲ್ಲರಿಗೂ ಆ ಪಿಶಾಚಿಯ ಕಾರಣದಿಂದಲೇ ತೊಂದರೆಯಾಗಿದ್ದಿರಬೇಕೆಂದು ಅವನಿಗೆ ನಂಬುಗೆ ಬಂದುಬಿಟ್ಟಿತ್ತು.

ಪುಟ್ಟಣ್ಣನಿಗೆ ನಗು ತಡೆಯಲಾಗಲಿಲ್ಲ. ಕಣ್ಣೀರು ಹೊರಡುವ ತನಕ ಅಳ್ಳೆಹಿಡಿದು ನಕ್ಕುಬಿಟ್ಟನು. ಅದನ್ನು ನೋಡಿ ಸೋಮನ ನಂಬಿಕೆ ಮತ್ತಷ್ಟು ಪ್ರಬಲವಾಯಿತು!

ಪುನಃ ಪುಟ್ಟಣ್ಣ ಕುರಿಮರಿಯ ಬಳಿಗೆ ಬಂದಾಗ ಅದು ಸತ್ತು ನಿಮಿರಿ ನೆಟ್ಟಗಾಗಿತ್ತು.

## ೨೨

## ಹೂವಯ್ಯನ ಭಾವಸಮಾಧಿ

ಮನೆಗೆ ಬಂದು ಎರಡು ದಿನಗಳಾದಮೇಲೆ ರಾಮಯ್ಯನಿಗೆ ಹೂವಯ್ಯನನ್ನು ನೋಡಿಕೊಂಡು ಬರಲು ಮನಸ್ಸಾಗಿ, ತನ್ನ ಇಷ್ಟವನ್ನು ತಂದೆಗೆ ತಿಳಿಸಿದನು. ತಮ್ಮ ಮಗನು ಹೂವಯ್ಯನ ಪರವಾಗಿ ತೋರಿಸುತ್ತಿದ್ದ ಮಮತೆ ಚಂದ್ರಯ್ಯ ಗೌಡರಿಗೆ ಸರಿಬೀಳದೆ, ಅವರು ಒಪ್ಪಲಿಲ್ಲ.

"ನೀನ್ಯಾಕೆ ಹೋಗೋದೋ? ಇವತ್ತೋ ನಾಳೆಯೋ ಎಲ್ಲಾ ಬರ್‍ತಾರೆ" ಎಂದರು.

ರಾಮಯ್ಯನ ಮನಸ್ಸು ಅನೇಕ ಭಾವನೆಗಳಿಂದ ಕ್ಷುಬ್ಧವಾಗಿತ್ತು. ಅಣ್ಣನಿಗೆ ಎಲ್ಲವನ್ನೂ ತಿಳಿಸಿ ತನ್ನ ಹೃದಯದ ಭಾರವನ್ನು ತಕ್ಕಮಟ್ಟಿಗಾದರೂ ಕಡಿಮೆ ಮಾಡಿಕೊಳ್ಳಬೇಕೆಂಬ ಆಶೆ ತೀಕ್ಷ್ಣವಾಗಿತ್ತು. ಆದ್ದರಿಂದಲೆ ಸಹಜ ಭಯವನ್ನೂ ದಮನಗೈದು, ತಂದೆಯ ಇಷ್ಟಕ್ಕೆ ವಿರೋಧವಾಗಿ, ಆ ದಿನವೇ ಹಿಂತಿರುಗುತ್ತೇನೆ ಎಂದು ಹೇಳಿ, ಕಾಲುನಡಿಗೆಯಲ್ಲಿಯೆ ಮುತ್ತಳ್ಳಿಗೆ ಹೋದನು.

ಹೂವಯ್ಯನಿಗೆ ಬೆನ್ನು ನೋವು ಬಹಳ ಮಟ್ಟಿಗೆ ಗುಣವಾಗಿದ್ದುದರಿಂದ ಮರುದಿನವೆ ಎಲ್ಲರೂ — ನಾಗಮ್ಮ, ಪುಟ್ಟಮ್ಮ, ವಾಸು ಇವರನ್ನೂ ಕರೆದುಕೊಂಡು — ಕಾನೂರಿಗೆ ಹೊರಡುವುದೆಂದು ನಿಶ್ಚಯವಾಯಿತು. ಪುಟ್ಟಮ್ಮ ಸೀತೆಯೂ ತಮ್ಮೊಡನೆ ಬರಲಿ ಎಂದು ಗೌರಮ್ಮನವರೊಡನೆಯೂ ಶ್ಯಾಮಯ್ಯ ಗೌಡರೊಡನೆಯೂ ಬಹಳವಾಗಿ ಹೇಳಿಕೊಂಡಳು. ಆದರೆ ಅವರು "ಈಗ ಬೇಡ" ಎಂದುಬಿಟ್ಟರು.

ಮರುದಿನ ಮಧ್ಯಾಹ್ನ ಮುತ್ತಳ್ಳಿಯ ಕಮಾನುಗಾಡಿ ಕಾನೂರಿಗೆ ಹೊರಟಿತು. ಬಿಸಿಲು ಬಹಳ ಪ್ರಖರವಾಗಿತ್ತು. ಗಾಡಿ ಹೊಡೆಯುತ್ತಿದ್ದ ಕುಂಬಾರ ನಂಜ "ಈ ಬೇಗೆ ನೋಡಿದ್ರೆ ಮಳೆ ಬರ್ರ್ಹಾಂಗೆ ಕಾಣ್ತದೆ" ಎಂದನು.

ಸ್ವಲ್ಪ ಹೊತ್ತಿನಲ್ಲಿಯೆ ನಿಶ್ಚಲವಾಗಿದ್ದ ವಾಯುಮಂಡಲ ಚಲಿಸತೊಡಗಿತು. ಗಾಳಿ ಬರಬರುತ್ತ ಬಿರುಸಾಗಿ ಬೀಸತೊಡಗಿತು. ಕುಂಕುಮದಂತೆ ನುಣ್ಣಗಿದ್ದು, ಬೇಸಗೆಯ ಸುಡುಬಿಸಿಲಿಗೆ ಬೆಂದು ಹಗುರವಾಗಿದ್ದ ರಸ್ತೆಯ ಕೆಮ್ಮಣ್ಣು ಧೂಳಿ ಮುಗಿಲು ಮುಗಿಲಾಗಿ ಮೇಲೆದ್ದು, ಸುಳಿಸುಳಿಯಾಗಿ ಚಿತ್ರ ವಿಚಿತ್ರ ವಿನ್ಯಾಸ ಭಂಗಿಗಳಿಂದ ಇಕ್ಕೆಲದ ದಟ್ಟ ಕಾಡುಗಳ ಹಸುರಿನಲ್ಲಿ ನುಗ್ಗತೊಡಗಿತು. ಗಗನ ಚುಂಬಿಗಳಾದ ವೃಕ್ಷಶಿಖರಗಳು ಬಳ್ಳಿಗಳಂತೆ ಬಳುಕಿ ಭಯಂಕರವಾಗಿ ತಲೆ ದೂಗಿದುವು. ನಾಡಿನ ನೀರವತೆ ಭೋರೆಂಬ ಭೀಷಣ ನಾದಕ್ಕೆ ಸೂರೆಹೋಯಿತು. ಬೂರುಗದರಳೆ, ತರಗೆಲೆ, ಕಸಕಡ್ಡಿ, ಒಂದೆಡೆಯಿಂದ ಮತ್ತೊಂದೆಡೆಗೆ ಹುಚ್ಚು ಹಿಡಿದವರಂತೆ ಹಾರಾಡತೊಡಗಿದುವು. ಬಿದಿರ ಮೆಳೆಗಳು ತಲೆಗೆದರಿ ಆನೆಗಳಂತೆ ಘೀಳಿಟ್ಟುವು. ಒಂದನ್ನೊಂದು ಉಜ್ಜಿದ ಬೊಂಬುಗಳಿಂದ ಒಗೆದ ಆ ಘೀಂಕೃತಿ ಅರಣ್ಯಪಿಶಾಚಿಗಳ ಆರ್ತನಾದದಂತೆ ಭಯಾನಕವಾಯಿತು. ಗಾಡಿಯಲ್ಲಿದ್ದವರಿಗೂ ಒಂದೊಂದು ಸಾರಿ ಪವನಹತಿಯಿಂದ ಉಸಿರುಕಟ್ಟಿದಂತಾಗುತ್ತಿತ್ತು.

ನೋಡುತ್ತಿದ್ದ ಹಾಗೆಯೆ ನೀಲ ನಿರ್ಮಲವಾಗಿ, ಎಲ್ಲಿಯೋ ದೂರ ದೂರದಲ್ಲಿ ಒಂದೊಂದೆಡೆ ಮಾತ್ರ ಸಣ್ಣ ಸಣ್ಣ ಬೆಳ್ಮುಗಿಲುಗಳಿಂದ ಖಚಿತವಾಗಿದ್ದ ಆಕಾಶ ದೇಶವು ಸಜೀವವಾಯಿತು. ಆ ಕಿರಿಯ ಬಿಳಿಮುಗಿಲು ತೋಳಗಳ ಹಿಂಡಿನ ಬರುವಿಕೆಯನ್ನು ಅರಿತು ಭಯಭ್ರಾಂತವಾಗಿ ಮೇವು ಬಿಟ್ಟು ಓಡುವ ಬಿಳಿಯ ಕಂಬಳಿಕುರಿಗಳ ಮಂದೆಯಂತೆ, ದಿಕ್ಕುದಿಕ್ಕಿಗೆ ಚೆದರಿ ಬೆದರಿ ಧಾವಿಸಿದುವು. ಅವುಗಳಿಗೆ ಬದಲಾಗಿ ಧೂಮವರ್ಣದ, ಧೂಮರೂಪದ, ಮಹಾ ಶಿಲಾಖಂಡ ಗಳಂತೆ ಮೃದುಕಠಿನವಾಗಿದ್ದ ಮುಂಗಾರ್ಗಾಲದ ಕರಿಮುಗಿಲ ಸೇನೆ ಧೀರವಾಗಿ, ಗಭೀರವಾಗಿ, ಭೀಷಣವಾಗಿ, ವೇಗವಾಗಿ, ನಭಸ್ಥಲವನ್ನೆಲ್ಲ ಆಕ್ರಮಿಸಿತು. ಮೊದ ಮೊದಲು ದೂರದೂರವಾಗಿದ್ದ ಗುಡುಗು ಮಿಂಚು ತುಸು ಹೊತ್ತಿನಲ್ಲಿಯೆ ಭಯಂ ಕರವಾಗಿ ಬಳಿಸಾರಿದುವು. ಗಾಡಿಯ ಹಿಂಭಾಗದಲ್ಲಿ ಕೂತಿದ್ದ ಹೂವಯ್ಯ ಆ ಸೌಂದರ್ಯ ರೌದ್ರಗಳ ಭೀಷಣ ಭವ್ಯತೆಯನ್ನು ನೋಡಿ ಉನ್ಮನಸ್ಕನಾದನು. ಅವನಲ್ಲಿ ಭಯವೂ ರೋಮಾಂಚನವೂ ಒಂದರೊಡನೊಂದು ಸ್ಪರ್ಧೆ ಹೂಡಿ ದಂತಿತ್ತು. ಪ್ರಕೃತಿಯ ಆ ಪ್ರಚಂಡ ಶಕ್ತಿಗಳ ತಾಂಡವ ಲೀಲೆಯಲ್ಲಿ ಮಾನವನ ಮಹದ್ವ್ಯಾಪಾರಗಳೂ ಕೂಡ ಕ್ಷುದ್ರ, ಕ್ಷುದ್ರವಾಗಿ ತೋರತೊಡಗಿದುವು. ಆ ಝಂಝಾವಾತ ವಿದ್ಯುತ್ ವಜ್ರಗಳಿಗೆ ಮುತ್ತಳ್ಳಿಯ ಗಾಡಿಯೂ ಗಾಡಿಯಲ್ಲಿದ್ದ

ಅಸಂಸ್ಕೃತ ಅರ್ಧಸಂಸ್ಕೃತ ಸುಸಂಸ್ಕೃತರೂ ಅಲ್ಲಿ ಚಿಮ್ಮಿ ಚಿಗಿಯುತ್ತಿದ್ದ ತರಗೆಲೆಗಳಿಗಿಂತಲೂ ಹೆಚ್ಚೇನೂ ಗಣ್ಯವಾಗಿದ್ದಂತೆ ತೋರುತ್ತಿರಲಿಲ್ಲ.

ಮಳೆ ಬರುವುದರೊಳಗಾಗಿ ದಾರಿಯಲ್ಲಿದ್ದ ಕಳ್ಳಂಗಡಿಯನ್ನಾದರೂ ಸೇರಿಕೊಂಡರೆ ಎಲ್ಲರಿಗೂ ಕ್ಷೇಮ, ತನಗೆ ಪ್ರಯೋಜನ ಎಂಬ ಅಭಿಸಂಧಿಯಿಂದ ನಂಜ ಬಾರುಕೋಲಿನಿಂದ ಎತ್ತುಗಳಿಗೆ ಎಡೆಬಿಡದೆ ಬಾರಿಸತೊಡಗಿದನು. ಗಾಡಿ ಕೆಂಧೂಳಿಯ ಅವಿಚ್ಛಿನ್ನ ಪ್ರವಾಹವನ್ನೆಬ್ಬಿಸುತ್ತ ಉಬ್ಬು ತಗ್ಗುಗಳನ್ನು ಹತ್ತಿ ಹಾರಿ ಸಶಬ್ದವಾಗಿ ಓಡತೊಡಗಿತು.

ಒಂದೆಡೆ ನೇರವಾಗಿದ್ದ ರಸ್ತೆಯ ದೂರದ ತಿರುಗಣೆಯಲ್ಲಿ ಪೇಟ, ಕೋಟು, ಪಂಚೆಗಳನ್ನುಟ್ಟಿದ್ದ ದೊಡ್ಡ ಮನುಷ್ಯರೊಬ್ಬರು ಕೈಯಲ್ಲಿ ಮಡಿಸಿದ್ದ ಕೊಡೆಯನ್ನು ಹಿಡಿದು, ಹಾದಿಯ ಪಕ್ಕದ ಕಿರುಪೊದೆಗಳಲ್ಲಿ ಏನನ್ನೋ ಹುಡುಕುತ್ತಿದ್ದುದನ್ನು ಕಂಡ ನಂಜ "ಯಾರ್‍ರೋ ಅದು, ಈ ಮಳೆಗಾಳೀಲಿ?" ಎಂದು ತನಗೆ ತಾನೆ ಗಟ್ಟಿಯಾಗಿ ಹೇಳಿಕೊಂಡನು.

ಗಾಡಿಯಲ್ಲಿ ಕೂತಿದ್ದವರೆಲ್ಲರೂ ಕತ್ತೆತ್ತಿ ಆ ಕಡೆ ನೋಡಿ, ಯಾರಿರಬಹುದು ಎಂದು ಊಹಿಸುತ್ತಿದ್ದ ಹಾಗೆಯೆ, ಗಾಡಿ ಆ ವ್ಯಕ್ತಿಗೆ ಸಮೀಪಸ್ಥವಾಗಿ, ಸೀತೆಮನೆ ಸಿಂಗಪ್ಪಗೌಡರನ್ನು ಕಂಡು, ನಿಂತಿತು. ರಾಮಯ್ಯ ಕೆಳಗಿಳಿದನು. ಅವನ ಪ್ರಶ್ನೆಗೆ ಸಿಂಗಪ್ಪಗೌಡರು, ತಾನು ಮುತ್ತಳ್ಳಿಗೆ ಹೋಗುತ್ತಿದ್ದೇನೆಂದೂ ಜೇಬಿನಿಂದ ಮೂಗುವಸ್ತ್ರವನ್ನು ತೆಗೆದಾಗ, ಅವರ ಮಗ ಕೃಷ್ಣಪ್ಪನ ಜಾತಕವಿದ್ದ ಕಾಗದ ಕೆಳಗೆ ಬಿದ್ದು, ಗಾಳಿಯಲ್ಲಿ ಹಾರಿ ಹೋಗಿ ಅಲ್ಲಿಯೆ ಎಲ್ಲಿಯೋ ಪೊದೆಗಳಲ್ಲಿ ಅಡಗಿತೆಂದೂ, ಅದನ್ನೇ ಹುಡುಕುತ್ತಿದ್ದುದೆಂದೂ ಉತ್ತರ ಹೇಳಿದರು. ನಂಜನೂ ಗಾಡಿಯ ಕತ್ತರಿಯಿಂದ ಕೆಳಗಿಳಿದು ರಾಮಯ್ಯನೊಡನೆ ಜಾತಕಾನ್ವೇಷಣೆಗೆ ತೊಡಗಿದನು. ಸಿಂಗಪ್ಪಗೌಡರು ಗಾಡಿಯ ಹಿಂಭಾಗಕ್ಕೆ ಬಂದು ಅಲ್ಲಿದ್ದವರೆಲ್ಲರ ಯೋಗಕ್ಷೇಮವನ್ನು ವಿಚಾರಿಸುತ್ತಿದ್ದರು. ಅಷ್ಟರಲ್ಲಿ ರಾಮಯ್ಯ ತನಗೆ ಸಿಕ್ಕಿದ್ದ ಜಾತಕದ ಕಾಗದವನ್ನು ತಂದುಕೊಟ್ಟನು. ಮೊದಲೇ ಜೀರ್ಣಾವಸ್ಥೆಯಲ್ಲಿದ್ದ ಅದು ಗಾಳಿಯ ಹೊಡೆತಕ್ಕೆ ಹರಿದು ಹರಿದುಹೋಗಿದ್ದಿತು.

ಹೂವಯ್ಯ "ಅದೇನದು, ಕಕ್ಕಯ್ಯಾ?" ಎಂದನು.

"ನಮ್ಮ ಕೃಷ್ಣಪ್ಪನ ಜಾತಕ ಕಣೋ! ವೆಂಕಪ್ಪಯ್ಯ ಜೋಯಿಸರಿಗೆ ತೋರಿಸಬೇಕಾಗಿತ್ತು. ಇವತ್ತು ಮುತ್ತಳ್ಳಿಗೆ ಬರ್‍ತೀನಿ ಅಂತಾ ಹೇಳಿದ್ದರು. ಅದಕ್ಕೇ ಹೋಗ್ತಾ ಇದ್ದೀನಿ." ಎಂದು ಸಿಂಗಪ್ಪಗೌಡರು ಜಾತಕವನ್ನು ಒಳಜೇಬಿಗೆ ಹಾಕಿಕೊಂಡರು.

ಇವರು ಮಾತಾಡುತ್ತಿದ್ದ ಹಾಗೆಯೆ ದಪ್ಪದಪ್ಪವಾದ ಮಳೆಹನಿಗಳು ಗಾಡಿಯ

ಕಮಾನಿನ ತಾಳೆಯ ಚಾಪೆಯ ಮೇಲೆ ಪಟ್ ಪಟ್ ಪಟ್ ಎಂದು ಸದ್ದು ಮಾಡಿದುವು.

ಸಿಂಗಪ್ಪಗೌಡರು ಅವಸರವಾಗಿ "ಹಾಂಗಾದರೆ ನೀವು ಹೊರಡಿ ಮಳೆಬರ್ತದೆ" ಎಂದು ಕೈಲಿದ್ದ ಕೊಡೆಯನ್ನು ಬಿಚ್ಚಿದರು. ಗಾಳಿಯ ರಭಸಕ್ಕೆ ಅದು ಹೊಟ್ಟೆ ಬೆನ್ನಾಗಿ ಲಾಗಹಾಕಿ, ಅಲ್ಲಿದ್ದವರೆಲ್ಲ ನಗುವಂತಾಯಿತು. ಪುನಃ ಗಾಳಿಯ ಕಡೆಗೆ ಕೊಡೆಯನ್ನು ಬೆನ್ನುಮಾಡಿ ಹಿಡಿದು ಸರಿಮಾಡಿಕೊಂಡು ಸಿಂಗಪ್ಪಗೌಡರು ಬೇಗನೆ ಮುಂಬರಿದರು. ರಾಮಯ್ಯನೂ ಗಾಡಿಗೇರಲು ಅದು ಮೊದಲಿನಂತೆ ವೇಗವಾಗಿ ಹೊರಟಿತು. ಗಾಳಿಯೊಡನೆ ಹೋರಾಡುತ್ತಿದ್ದ ಕೊಡೆಯನ್ನು ಭದ್ರವಾಗಿ ಹಿಡಿದು ಹೋಗುತ್ತಿದ್ದ ಸಿಂಗಪ್ಪಗೌಡರ ಬೆಂಭಾಗ ಕ್ರಮಕ್ರಮೇಣ ಕಿರಿದಾಗಿ ಹಾದಿಯ ತಿರುವಿನಲ್ಲಿ ಕಣ್ಮರೆಯಾಯಿತು.

ಗಾಡಿ ಕಳ್ಳಂಗಡಿಯ ಬಳಿಗೆ ಬರುವಷ್ಟರಲ್ಲಿ ಮೊದಮೊದಲು ವಿರಳವಾಗಿ ಬೀಳುತ್ತಿದ್ದ ತೋರ ಹನಿಮಳೆ ಅವಿರಳ ಧಾರಾಕಾರವಾಗಿ ಸುರಿಯತೊಡಗಿತು. ಗುಡುಗು ಮಿಂಚು ಸಿಡಿಲು ಗಾಳಿಗಳ ಆರ್ಭಟವೂ ದ್ವಿಗುಣಿತವಾಯಿತು. ಜೊತೆಗೆ ಆಲಿಕಲ್ಲುಗಳೂ ಮುಗಿಲು ನೆಲಕ್ಕೆ ಕಲ್ಲೆಸೆದಂತೆ ಬೀಳತೊಡಗಿದುವು. ಗಾಳಿಯ ದೆಸೆಯಿಂದ ಮಳೆ ಗಾಡಿಯ ಒಳಕ್ಕೂ ನುಗ್ಗತೊಡಗಿತು; ಕೂತುಕೊಳ್ಳುವುದೂ ಅಸಾಧ್ಯವಾಯಿತು. ನಂಜನ ಬಯಕೆ ಕೈಗೂಡಿತು. ಕಳ್ಳಂಗಡಿ ಅಂಗಳದಲ್ಲಿ ಗಾಡಿಯನ್ನು ಬಿಟ್ಟು, ಎಲ್ಲರೂ ಒಳಗೆ ಹೋದರು. ಅಂಗಡಿಯವನು ಬಹಳ ಮರ್ಯಾದೆಯಿಂದ ಜಗಲಿಯ ಮೇಲೆ ಒಂದು ಗೀಕಿನ ಚಾಪೆ ಹಾಕಿ, ಕೂತು ಕೊಳ್ಳುವಂತೆ ಕೇಳಿಕೊಂಡನು. ಗೀಕಿನ ಚಾಪೆ ಅಂಚುಗಳಲ್ಲಿ ಶಿಥಿಲವಾಗಿ ಮೂಲೆ ಮೂಲೆಗಳಲ್ಲಿ ಹರಿದು, ಕೊಳೆ ಕೂತು ಮಾಸಲು ಬಣ್ಣದ್ದಾಗಿತ್ತು. ಒಳ್ಳೆಯ ಬಟ್ಟೆಗಳನ್ನು ಉಟ್ಟುಕೊಂಡಿದ್ದ ಅತಿಥಿಗಳಿಗೆ ಅದರ ಮೇಲೆ ಕೂತುಕೊಳ್ಳುವುದು ಸಪ್ರಯತ್ನವಾಯಿತು.

ನಾಗಮ್ಮನವರು ಅಂಗಡಿಯವನು ಅತಿಥಿಗಳಿಗಾಗಿ ತಂದಿಟ್ಟ ಎಲೆಯಡಕೆ ಯನ್ನು ಹಾಕಿಕೊಳ್ಳುತ್ತಿರಲು, ಪುಟ್ಟಮ್ಮ ವಾಸು ಇಬ್ಬರೂ ತಮ್ಮ ತಮ್ಮೊಳಗೆ ಏನೇನೊ ಮಾತಾಡಿಕೊಂಡು ನಗುತ್ತಿದ್ದರು. ಗೋಡೆಗೆ ಒರಗಿಕೊಂಡು ಕುಳಿತ ಹೂವಯ್ಯ ರಾಮಯ್ಯರೂ ಆ ಗುಡಿಸಲನ್ನೂ ಅಲ್ಲಿಯ ಸಾಮಾನುಗಳನ್ನೂ ಮತ್ತು ಅಲ್ಲಿ ತೋರುತ್ತಿದ್ದ ಗ್ರಾಮ್ಯ ಕಲಾಭಿರುಚಿಯ ದೃಶ್ಯಗಳನ್ನೂ ಅವಲೋಕಿ ಸುತ್ತ, ನಡು ನಡುವೆ ಒಬ್ಬರ ಮುಖವನ್ನೊಬ್ಬರು ನೋಡಿ ಮುಗುಳುನಗೆಯಿಂದ ಮಾತಾಡಿಕೊಳ್ಳುತ್ತಿದ್ದರು. ನಂಜನು ತನ್ನ ಕಂಬಳಿಯ ಮೇಲೆ ಕೂತುಕೊಂಡು, ನವ ಅತಿಥಿಗಳನ್ನು ನೋಡುವ ಕುತೂಹಲದಿಂದ ಹೊರಗೆ ಬಂದು ಹೊಸ್ತಿಲ

ಬಳಿ ನಿಂತಿದ್ದ ಅಂಗಡಿಯವನ ಹೆಂಡತಿ ಮಕ್ಕಳೊಡನೆ ಮಾತುಕತೆಯಾಡುತ್ತಿದ್ದನು. ಮುಂಗಾರು ಮಳೆ ಭೀಷಣ ರಭಸದಿಂದ ಸುರಿಯತೊಡಗಿತ್ತು.

ಹೂವಯ್ಯನು, ತಾನು ಕೂತುಕೊಳ್ಳಬೇಕಾಗಿದ್ದ ಚಾಪೆಯ ಕೊಳಕು, ಅಲ್ಲಿಯೆ ಮೇಲುಗಡೆ ನೇತುಹಾಕಿದ್ದ ಹಳೆ ಕೊಳಕು ಬಟ್ಟೆಯ ರಾಶಿ, ಮನೆಯನ್ನೆಲ್ಲಾ ತುಂಬಿದ್ದ ಹೆಂಡ ಕಳ್ಳು, ಸಾರಾಯಿ ಉಪ್ಪುಮೀನು ಇವುಗಳ ಸಹಿಸಲಸಾಧ್ಯವಾದ ದುರ್ಗಂಧ, ಇವುಗಳಿಗಾಗಿ ಮೊದಮೊದಲು ಅಸಹ್ಯಪಟ್ಟರೂ ಸ್ವಲ್ಪ ಹೊತ್ತಿನಲ್ಲಿ ಅವನ ಮನಸ್ಸು ಹೊರಗಡೆ ಜರುಗುತ್ತಿದ್ದ ಭವ್ಯ ಪ್ರಕೃತಿ ವ್ಯಾಪಾರಗಳಲ್ಲಿ ತನ್ಮಯವಾಗತೊಡಗಿತು. ಗಗನದಲ್ಲಿ ಕಿಕ್ಕಿರಿದು ಉನ್ಮತ್ತರಭಸದಿಂದ ಚರಿಸುತ್ತಿದ್ದ ಕರ್ಮುಗಿಲು, ಕ್ಷಣಕ್ಷಣಕ್ಕೂ ರೇಖಾರೂಪದ ಅಗ್ನಿಪ್ರವಾಹದಂತೆ ಕಾಳಮೇಘಗಳ ಮಧ್ಯೆಮಧ್ಯೆ ಶಾಖೋಪಶಾಖೆಗಳ ಲತಾವಿನ್ಯಾಸದಿಂದ ತಟಕ್ಕನೆ ಹೊಮ್ಮಿಹರಿದು ಕಣ್ಣು ಕೋರೈಸಿ ಮಾಯುವಾಗುತ್ತಿದ್ದ ಮಿಂಚು, ಒಡನೆಯೆ ಕಿವಿ ಬಿರಿಯುವಂತೆ ಕೇಳಿ ಬರುತ್ತಿದ್ದ ಗುಡುಗು ಸಿಡಿಲುಗಳ ಭಯಂಕರ ಧ್ವಾನ, ಉನ್ಮಾದಗ್ರಸ್ತನಾಗಿ ರುದ್ರ ಪ್ರಲಯ ಕರ್ಮಮುಖನಾದ ನಿರಾಕಾರ ರಾಕ್ಷಸನಂತೆ ಭೋರೆಂಬ ಘೋರನಾದದಿಂದ ಸುತ್ತಮುತ್ತಣ ತುಂಗವೃಕ್ಷ ಸಮೂಹದ ಅರಣ್ಯ ಶ್ರೇಣಿಗಳನ್ನು ನಿರ್ದಯೆಯಿಂದ ಮುರಿದು ಮಥಿಸುತ್ತಿದ್ದ ಕಾರ್ಗಾಲದ ಬಿರುಸು ಬಿರುಗಾಳಿ, ಬಾನು ಭೂಮಿಗಳಿಗಿದ್ದ ಪ್ರತ್ಯೇಕತೆಯನ್ನು ಅಳಿಸುವಂತೆ ಅವಿಚ್ಛಿನ್ನ ಧಾರಾಪ್ರವಾಹದಿಂದ ನಾಡನ್ನೆಲ್ಲ ಯವನಿಕಾವೃತವಾದಂತೆ ಮುಸಗುಮಾಡಿದ್ದ ಭೀಷಣ ವರ್ಷಸೌಂದರ್ಯ, ಪಳಪಳನೆ ಸುರಿದು ನೆಲವನ್ನೆಲ್ಲ ತುಂಬುತ್ತಿದ್ದ ಬಿಳಿಯ ಹೇರಾಲಿ ಕಲ್ಲುಗಳ ರಮಣೀಯತೆ—ಇವುಗಳಿಂದ ಮನಸ್ಸು ಭಾವಭೂಮಿಕೆಗೇರಿದ್ದ ಹೂವಯ್ಯನಿಗೆ ತಾನಿದ್ದ ಸ್ಥಳದ ಕ್ಷುದ್ರತೆಯಾಗಲಿ ಅಸಹ್ಯವಾಗಲಿ ದುರ್ವಾಸನೆಯಾಗಲಿ ತಿಳಿಯುವಂತಿರಲಿಲ್ಲ. ನಾಲ್ಕಾರು ಮೇಕೆಗಳೂ ಮರಿಗಳೂ ಮಳೆಗೆ ಬೆದರಿ ಓಡಿ ಬಂದು, ಜಗಲಿಯ ತುದಿಯಲ್ಲಿ ನಿಂತುವು. ತೊಯ್ದು ಅವುಗಳ ಬೆಚ್ಚನೆ ದೇಹದಿಂದ ಆವಿಹೊಗೆ ಹೊರಡುತ್ತಿತ್ತು. ಕರಿಯ ಬಿಳಿಯ ಬಣ್ಣದ ನುಣ್ಣನೆ ಮೈಕೂದಲಿನಿಂದ ನೀರು ಸೋರಿ ಜಗಲಿಯ ಮೇಲೆ ಬೀಳುತ್ತಿತ್ತು. ಕರಿಯ ಕಂತ್ರಿ ನಾಯಿಯೊಂದು ಅವುಗಳಂತೆಯೆ ಆಚರಿಸಿತು. ಹಸುವೊಂದು ತನ್ನ ಕರುವಿನೊಡನೆ ಆಶ್ರಯಕ್ಕಾಗಿ ಬಂದು ತಲೆ ಹಾಕಿತು. ಆದರೆ ಜಾಗವಿಲ್ಲದುದರಿಂದಲೂ ಅಂಗಡಿಯವನು ಅಟ್ಟಿದುದರಿಂದಲೂ ಕರುವನ್ನಲ್ಲಿಯೆ ಬಿಟ್ಟು, ಹಿಂಭಾಗದಲ್ಲಿದ್ದ ಕೊಟ್ಟಿಗೆಯ ಕಡೆಗೆ ನಡೆಯಿತು. ಆಡುಗಳ, ನಾಯಿಯ ಮತ್ತು ಕರುವಿನ ಮೈಗಳಿಂದ ಹೊರಟ ಸಿನುಗುಗಂಪು ಅಂಗಡಿಯ ನಾತದೊಡನೆ ಕೂಡಿತು. ಹುಲ್ಲುಗುಡಿಸಲು ಅಲ್ಲಲ್ಲಿ ಸೋರತೊಡಗಿ, ಮನುಷ್ಯರಲ್ಲಿ ಕೆಲವರು ಸ್ಥಳ ಬದಲಾಯಿಸಬೇಕಾಯಿತು.

ಮುತ್ತಳ್ಳಿಯ ಗಾಡಿ ಅಂಗಳಕ್ಕೆ ಬಂದು ನಿಂತಾಗ, ಕಳ್ಳಂಗಡಿಯ ಒಳಭಾಗದಲ್ಲಿ ಗಟ್ಟಿಯಾಗಿ ಆವೇಶದಿಂದ ಮಾತನಾಡುತ್ತ ಉಪ್ಪುಮೀನನ್ನು ನಂಚಿಕೊಂಡು ಸಾರಾಯಿ ಕುಡಿಯುತ್ತ ಮಜಾಮಾಡುತ್ತಿದ್ದ ಜಾಕಿ, ಓಬಯ್ಯ ಮತ್ತು ಕೃಷ್ಣಪ್ಪ ಇವರು ಮಾತು ನಿಲ್ಲಿಸಿದ್ದರು. ಸದ್ಗೃಹಸ್ತರ ಮನೆಯ ಮಗನಾದ ಕೃಷ್ಣಪ್ಪ ಗಾಡಿಯಲ್ಲಿ ಬಂದವರಾರೆಂಬುದನ್ನು ತಿಳಿದೊಡನೆ, ಜಾಕಿ ಓಬಯ್ಯರ ಸಹವಾಸಕ್ಕೆ ಸಿಕ್ಕಿ ತಾನು ಮಾಡುತ್ತಿದ್ದ ಕೆಲಸಕ್ಕೆ ನಾಚಿಕೊಂಡು, ತಾನು ಅಲ್ಲಿರುವುದು ಬಂದವರಿಗೆ ತಿಳಿಯಬಾರದೆಂದು ಸೂಚಿಸಿದನು. ಅದರಲ್ಲಿಯೂ ತನ್ನ ತಂದೆ, ಅದೇ ತಾನೆ ತನಗೆ ಹೆಣ್ಣು ಕೇಳಲೆಂದು ಮುತ್ತಳ್ಳಿಗೆ ಹೊರಟಿದ್ದರು! ತಾನು ಕಳ್ಳಂಗಡಿಯಲ್ಲಿ ಓಬಯ್ಯ ಜಾಕಿಯರಂತಹ ಭ್ರಷ್ಟಜೀವಿಗಳ ಸಂಗದಲ್ಲಿ ಮದ್ಯಪಾನದಲ್ಲಿ ತೊಡಗಿದ್ದುದು ಮಾವನ ಮನೆಯವರಿಗೆ ಎಲ್ಲಿಯಾದರೂ ತಿಳಿದುಬಿಟ್ಟರೆ ಏನು ಗತಿ? ಎಂತಹ ನಾಚಿಕೆಗೇಡು? ಅಂತೂ ತುಟಿಪಿಟಕ್ಕೆನ್ನದೆ ಮೂವರೂ ಪಾನಕಾರ್ಯವನ್ನು ಪೂರೈಸಿದರು. ಎಲ್ಲವೂ ಮುಗಿದ ತರುವಾಯ ಜಾಕಿ ಓಬಯ್ಯ ಇಬ್ಬರೂ ಬಾಯಿ ಒರಸಿಕೊಳ್ಳುತ್ತ ಜಗಲಿಗೆ ದಾಟಿದರು. ದಾಟಿದೊಡನೆ ವಿನಯದಿಂದ ಹೂವಯ್ಯ ರಾಮಯ್ಯರಿಗೆ ನಮಸ್ಕಾರ ಮಾಡಿದರು. ಹೂವಯ್ಯ ಭಾವದಲ್ಲಿದ್ದುದರಿಂದ ಅದನ್ನು ಗಮನಿಸಲಿಲ್ಲ. ರಾಮಯ್ಯನಿಗೆ ಬಂದವರಿಬ್ಬರನ್ನೂ ಕಂಡು ಜುಗುಪ್ಸೆ ಹುಟ್ಟಿತು. ಪುಟ್ಟಮ್ಮ ವಾಸು ಇಬ್ಬರೂ ಜಾಕಿಯ ವಿಕಾರ ಮುಖವನ್ನೇ ಹೆದರಿಕೆಯಿಂದ ನೋಡುತ್ತಿದ್ದರು.

ವಾಸು "ಓಬಣ್ಣಯ್ಯ, ಇದೇನು ಇಲ್ಲಿದ್ದೀಯಾ?" ಎಂದನು.

"ಅಗ್ರಹಾರದ ಕಡೆ ಹೋಗಿದ್ದೆ. ಮಳೇ ಕಂಡು ಹೆದರಿ ಇಲ್ಲಿಗೆ ಬಂದಿದ್ದೆ" ಎಂದು ಓಬಯ್ಯ ಸುಳ್ಳು ಹೇಳಿ ನಾಗಮ್ಮನವರೊಡನೆ ಮಾತಾಡಲು ತಿರುಗಿದನು.

ಆದರೆ ವಾಸು ಸುಮ್ಮನಿರದೆ "ನೀನು ಅವತ್ತು ಕಂಡ ಭೂತ ಮತ್ತೆ ಕಂಡಿತ್ತೇನು?" ಎಂದು ಮುಗ್ಧವಾಗಿ ಪ್ರಶ್ನೆಮಾಡಿದನು.

"ಹ್ಣೂನೋ, ದಿನಾ ಕಾಣಿಸಿಕೊಳ್ಳೋಕೆ ಅದೇನು ನಮ್ಮ ಆಳೇನು?" ಎಂದು ನಾಗಮ್ಮನವರೊಡನೆ ಮಾತಾಡತೊಡಗಿದನು.

ಅಷ್ಟುಹೊತ್ತೂ ತನ್ನ ಉದ್ದೇಶವನ್ನು ಹೇಗೆ ಕೈಗೂಡಿಸುವುದೆಂದು ಚಿಂತಿಸುತ್ತಿದ್ದ ನಂಜ ಮೆಲ್ಲಗೆ ಎದ್ದು, ಕಂಬಳಿಯನ್ನು ಹೆಗಲಮೇಲೆ ಹಾಕಿಕೊಂಡು, ಒಳಗೆ ದಾಟಿದನು. ಅಲ್ಲಿ, ಹೊರಗಡೆ ನಡೆಯುತ್ತಿದ್ದ ಸಂಭಾಷಣೆಯನ್ನು ಆಲಿಸಲು ಪ್ರಯತ್ನಿಸುತ್ತ ಕದ್ದು ಕುಳಿತಿದ್ದ ಕೃಷ್ಣಪ್ಪನನ್ನು ಕಂಡು "ಓಹೋ ಏನು ಕೃಷ್ಣಪ್ಪಗೌಡ್ರೇ, ಇಲ್ಲಿ?..." ಎನ್ನುತ್ತಿದ್ದ ನಂಜ ಕೃಷ್ಣಪ್ಪನ ಕೈಸನ್ನೆಯಿಂದ ಸುಮ್ಮನಾದನು.

ತಾನು ಅಲ್ಲಿದ್ದುದನ್ನು ಯಾರೊಡನೆಯೂ ಹೇಳಕೂಡದೆಂದು ತಿಳಿಸಿ, ಕೃಷ್ಣಪ್ಪ ಸಂಜನಿಗೆ ಲಂಚಕೊಡುವಂತೆ ಹೆಂಡದೌತಣ ಮಾಡಿಸಿದನು.

ಮಳೆ ನಿಂತಮೇಲೆ ನಂಜ ಅಂಗಡಿಯ ಹಿಂದಣ ಕೊಟ್ಟಿಗೆಯಲ್ಲಿ ಕಟ್ಟಿದ್ದ ಗಾಡಿ ಎತ್ತುಗಳನ್ನು ಬಿಚ್ಚಿಕೊಂಡು ಬಂದು ಗಾಡಿ ಕಟ್ಟಲು ಸಿದ್ಧನಾದನು. ಜಗಲಿಯಲ್ಲಿ ಕುಳಿತಿದ್ದ ಎಲ್ಲರೂ ಮೇಲೆದ್ದರು; ಆದರೆ ಹೂವಯ್ಯನು ಏಳಲಿಲ್ಲ, ಅವನಿನ್ನೂ ಪರವಶತೆಯಿಂದ ನಿಷ್ಪಂದನಾಗಿ ಕುಳಿತಿದ್ದನು. ಕಣ್ಣುಗಳಿಂದ ನೀರು ಸುರಿಯು ತ್ತಿತ್ತು. ಮುಖವು ಕೆಂಪೇರಿತ್ತು. ಅದನ್ನು ಕಂಡು ಎಲ್ಲರಿಗೂ ಗಾಬರಿ ಯಾಯಿತು. ರಾಮಯ್ಯ "ಸುಮ್ಮನಿರಿ ಅದೇನೂ ಅಲ್ಲ. ಅವನಿಗೊಂದೊಂದು ಸಾರಿ ಹಾಗಾಗುತ್ತದೆ" ಎಂದು ಹೇಳಿ, ಸಮಾಧಾನ ಪಡಿಸಿದನು. ಪ್ರಕೃತಿ ಸೌಂದರ್ಯ ದರ್ಶನದಿಂದ ಭಾವಪರವಶನಾಗಿದ್ದಾನೆ ಎಂಬುದು ಉಳಿದವರಾ ರಿಗೂ ಗೊತ್ತಾಗುವಂತಿರಲಿಲ್ಲ. ಆದ್ದರಿಂದಲೆ ಅವನು ವಿವರಿಸಿ ಹೇಳಲೂ ಇಲ್ಲ.

ಎಲ್ಲರೂ ಗಾಡಿಯಲ್ಲಿ ಕುಳಿತುಕೊಂಡು ಹೋದಮೇಲೆ ಕೃಷ್ಣಪ್ಪ ಹೊರಗೆ ಜಗಲಿಗೆ ಬಂದನು. ಓಬಯ್ಯ ಅವನೊಡನೆ ನಡೆದ ಸಂಗತಿಯನ್ನು ವಿವರಿಸುತ್ತ "ಹೂವಯ್ಯಗೌಡರಿಗೆ ಮೈಮೇಲೆ ಬಂದಿತ್ತು!" ಎಂದನು.

ಜಾಕಿ "ಮೈಮೇಲೆ ಬಂದಿದ್ದರೆ ಹಾಂಗೆ ಸುಮ್ಮನೆ ಕೂತುಕೊಳ್ತಿದ್ರೇನು? ಮೂರ್ಛೆರೋಗ ಇರಬೇಕು! ತೀರ್ಥಹಳ್ಳೀಲಿ ಒಬ್ಬರಿಗೆ ಮೂರ್ಛೆರೋಗ ಬರ್ತಿತ್ತು. ಅವರೂ ಹೀಂಗೇ ಮಾಡುತ್ತಿದ್ರು" ಎಂದನು.

ಅಂಗಡಿಯವನು "ಹೌದು, ನಾನೂ ಒಬ್ಬರನ್ನ ನೋಡಿದ್ದೆ" ಎಂದನು.

ಕೃಷ್ಣಪ್ಪನೂ "ನಾನೂ ಕೇಳಿದ್ದೆ" ಎಂದನು.

ಅಂದಿನಿಂದ ಹೂವಯ್ಯನ ಭಾವಸಮಾಧಿ 'ಮೈಮೇಲೆ ಬರುವುದು.' 'ದೆವ್ವ ಹಿಡಿಯುವುದು, 'ಮೂರ್ಛೆರೋಗ' ಎಂಬ ನಾನಾ ವಿಕಾರರೂಪಗಳನ್ನು ತಾಳಿ ಬಾಯಿಂದ ಬಾಯಿಗೆ ಕಿವಿಯಿಂದ ಕಿವಿಗೆ ಬಿದ್ದು ಹಬ್ಬತೊಡಗಿತು.

## ೨೩

## ಕಾಡುಕಿಚ್ಚಿಗೆ ಕಿಡಿಯ ಮುನ್ನುಡಿ

ಮರುದಿನ ಬೆಳಿಗ್ಗೆ ಎದ್ದಾಗ ಹೂವಯ್ಯನ ಮನಸ್ಸು ನಾನಾ ಚಿಂತೆಗಳಿಂದ ಭಾರವಾಗಿತ್ತು. ಹಿಂದಿನ ರಾತ್ರಿ ರಾಮಯ್ಯ ತನಗೆ ತಿಳಿದುಬಂದಿದ್ದ ತಮ್ಮ ಮನೆಯ ಎಲ್ಲ ವಿಚಾರಗಳನ್ನೂ ಅಣ್ಣನಿಗೆ ಹೇಳಿ, ತನ್ನ ಹೃದಯವನ್ನು ಹಗುರ

ಮಾಡಿಕೊಂಡಿದ್ದನು. ಆದರೆ ಹೂವಯ್ಯ ಬಹಳ ಹೊತ್ತು ಹಾಗಿರಲಾಗಲಿಲ್ಲ. ತನಗೆ ತಿಳಿಯದಿದ್ದರೂ ಅವನ ಆಗಮನದಿಂದ ಮನೆಯಲ್ಲೆಲ್ಲ ಏನೋ ಒಂದು ಉಲ್ಲಾಸ ತುಂಬಿ ತುಳುಕಾಡುತ್ತಿತ್ತು. ವಾಸುವಂತೂ ರೆಕ್ಕೆಬಂದ ಹಕ್ಕಿಯ ಮರಿಯಂತೆ ಹಾರಾಡುತ್ತಿದ್ದನು. ಅವನ ಸರಳ ಹೃದಯದ ಮುಗ್ಧ ಹರ್ಷವು ಎಂತಹ ಚಿಂತಾಭಾರವನ್ನಾದರೂ ಹಗುರಗೊಳಿಸುವಂತಿತ್ತು. ಅದೂ ಅಲ್ಲದೆ ಆ ದಿನದ ಪ್ರಾತಃಸಮಯ ಸ್ವರ್ಗೀಯ ರಮ್ಯವಾಗಿದ್ದುದರಿಂದ ಹೂವಯ್ಯನ ಮನಸ್ಸು ಅದರ ಪ್ರಭಾವದಿಂದ ಬಹಳ ಕಾಲ ತಪ್ಪಿಸಿಕೊಳ್ಳಲಾಗಲಿಲ್ಲ.

ಸ್ನಾನ ಕಾಫಿ ತಿಂಡಿಗಳು ಪೂರೈಸಿದೊಡನೆ ಹೂವಯ್ಯ ರಾಮಯ್ಯ ವಾಸು ಪುಟ್ಟಣ್ಣ ಎಲ್ಲರೂ ಗುಂಪಾಗಿ ಮನೆಯಿಂದ ಹೊರಟರು. ನಾಯಿಗಳೂ ಹಿಂಬಾಲಿಸಿದುವು. ಅವರು ಹೋಗುವುದನ್ನೇ ಬಾಗಿಲಲ್ಲಿ ನಿಂತು ನೋಡುತ್ತಿದ್ದ ಪುಟ್ಟಮ್ಮನಿಗೆ 'ಅಯ್ಯೊ ನಾನು ಗಂಡಾಗಿ ಹುಟ್ಟಬಾರದಾಗಿತ್ತೇ' ಎಂದೆನ್ನಿಸಿತ್ತು.

ಹಿಂದೆ ನಡೆದಿದ್ದ ಸೋಮನ ಕಥೆಯನ್ನು ಉಪ್ಪು ಕಾರ ಹಚ್ಚಿ ಹೇಳುತ್ತಿದ್ದ ಪುಟ್ಟಣ್ಣ ಹೆಗಲಮೇಲೆ ತೋಟಾಕೋವಿಯನ್ನು ಹೊತ್ತುಕೊಂಡಿದ್ದನು. ಎಲ್ಲರೂ ನಡುನಡುವೆ ಗಟ್ಟಿಯಾಗಿ ನಕ್ಕು ಹಾರಿ ಬೀಳುತ್ತಿದ್ದರು. ಆ ಬೆಳಗಿನ ತಿರುಗಾಟಕ್ಕೆ ಯಾರೂ ನಿಯಮಿಸದಿದ್ದರೂ, ವಾಸು ತನ್ನನ್ನು ತಾನೆ ನಿಯಮಿಸಿಕೊಂಡು, ಮಾರ್ಗದರ್ಶಿಯಾಗಿಬಿಟ್ಟಿದ್ದನು !

ಹಿಂದಿನ ದಿನ ಸಾಯಂಕಾಲ ಮುಂಗಾರು ಮಳೆ ಚೆನ್ನಾಗಿ ಸುರಿದಿದ್ದರಿಂದ ವಾಯುಮಂಡಲ ನಿರ್ಮಲವಾಗಿತ್ತು. ಆಕಾಶ ಪ್ರಸನ್ನವಾಗಿತ್ತು. ಮಳೆಯಲ್ಲಿ ಮಿಂದ ಮರಗಿಡ ಬಳ್ಳಿಗಳ ಹಸುರೆಲೆಗಳಿಗೆ ಮತ್ತಿನಿತು ಹಸುರೇರಿ ಕಾಡುಗಳೆಲ್ಲ ಕಳಕಳಿಸಿ ನಗುವಂತಿದ್ದುವು. ನೆಲದ ಹುಲ್ಲಿನಮೇಲೆಯೂ ಬಿದಿರುಮೆಳೆಗಳಲ್ಲಿಯೂ ಬಳ್ಳಿಯ ಕುಡಿಕುಡಿಗಳಲ್ಲಿಯೂ ಎಲೆಗಳ ತುದಿತುದಿಗಳಲ್ಲಿಯೂ ಜೇಡರ ಬಲೆ ಗಳಲ್ಲಿಯೂ ನೂರು, ಸಾವಿರ, ಕೋಟಿ ಕೋಟಿ ಹನಿಗಳು ಮುನ್ನೇಸರ ಹೊಂಬಿ ಸಿಲಲ್ಲಿ ಬಣ್ಣ ಬಣ್ಣದ ಸಣ್ಣ ಸಣ್ಣ ರನ್ನಸೊಡರುಗಳಂತೆ ಕಿಡಿಕಿಡಿಯಾಗಿ, ಉರಿ ಉರಿಯಾಗಿ, ಮೆಲ್ಲೆಲರಲ್ಲಿ ಮಿಣುಕಿಮಿಣುಕಿ ಮಿರುಗುತ್ತಿದ್ದುವು. ಗಿಣಿ, ಪಿಕಳಾರ, ಕಾಮಳ್ಳಿ, ಕಾಜಾಣ, ಮಿಂಚುಳ್ಳಿ, ಚೋರೆ, ಕುಟುರ, ಪುರುಳಿ — ಮೊದಲಾದ ಹಕ್ಕಿಗಳ ವಸಂತೋದಯ ಗಾನ ಪ್ರಾತರ್ಮೌನ ಸಮುದ್ರವನ್ನು ಮಧುರರವತರಂಗಿತವನ್ನಾಗಿ ಮಾಡಿತ್ತು. ತೊಯ್ದ ನೆಲದ ತಂಪು, ಮಿಂದ ಹಸುರಿನ ತಂಪು, ಮೃದುಗಾಳಿಯ ತಂಪುಗಳಿಂದ ಜಗವೆಲ್ಲ ತಂಪಾಗಿತ್ತು. ಜೀವಿ ಸುವುದಕ್ಕಿಂತಲೂ ಹೆಚ್ಚಾದ ಜೀವನದ ಗುರಿ ಮತ್ತೊಂದಿಲ್ಲ ಎಂಬಂತೆ ತೋರು ತ್ತಿತ್ತು.

ಮನೆಗೆ ಸಮೀಪದಲ್ಲಿದ್ದ ಕೆರೆಯ ಬಳಿಗೆ ಹೋಗಿ, ವಾಸು ನೆಟ್ಟು ಸಾಕಿದ್ದ ಕಿತ್ತಳೆ ಗಿಡಗಳನ್ನು ನೋಡಿದರು. ಅಲ್ಲಿಂದ ಪುಟ್ಟಣ್ಣನ ತರಕಾರಿಯ ಹಿತ್ತಲಿಗೆ ಹೋಗಿ ಮುಳುಗಾಯಿ, ಹರುವೆ ಸೊಪ್ಪು, ಕೊತ್ತುಂಬರಿ ಸೊಪ್ಪು, ಮೆಣಸಿನ ಗಿಡಗಳನ್ನೂ ನೋಡಿದರು. ಹಿಂದಿನ ದಿನದ ಮಳೆಗಾಳಿಗೆ ಉರುಳಿ ಬಿದ್ದಿದ್ದ ಗಿಡಗಳಿಗೆ ಊರೆಗೋಲುಗಳನ್ನು ಕೊಟ್ಟು ನಿಲ್ಲಿಸಿದರು. ಅಲ್ಲಲ್ಲಿ ಕೆಲವು ಗಿಡಗಳ ಬುಡಗಳಲ್ಲಿ ಪುಟ್ಟಪುಟ್ಟ ಕೆರೆಗಳಂತೆ ನಿಂತಿದ್ದ ಮಳೆನೀರನ್ನು ಸಣ್ಣಸಣ್ಣ ಕಾಲುವೆ ಮಾಡಿ ಓಡಿಸಿದರು.

ಅಲ್ಲಿಂದ ಗುಂಪು ತೋಟಕ್ಕಿಳಿದು, ಅಡಕೆಯ ಮರಗಳ ನಡುವೆ ನಿಬಿಡವಾಗಿ ಬೆಳೆದಿದ್ದ ಬಾಳೆಯ ಪೊದೆಗಳ ಸಂದುಗೊಂದುಗಳಲ್ಲಿ ನುಸುಳಿ ಗದ್ದೆಯ ಕಡೆಗೆ ಬರುತ್ತಿತ್ತು. ಬಾಳೆಯ ಎಲೆಗಳಿಂದಲೂ ಅಡಕೆಯ ಸೋಗೆಗಳಿಂದಲೂ ಪಟ ಪಟನೆ ಬೀಳುತ್ತಿದ್ದ ಹನಿಗಳಿಂದ ಎಲ್ಲರ ಬಟ್ಟೆಗಳೂ ತೊಯ್ದು ಹೋದುವು. ವಾಸು ಅಲ್ಲಲ್ಲಿ ಬಿದ್ದಿದ್ದ ಹೊಂಬಾಳೆಗಳನ್ನು ಆಯ್ದು ಆಯ್ದು ಪರೀಕ್ಷಿಸಿ, ಅಂದಿನ ಊಟಕ್ಕೆ ಉತ್ತಮವಾದ ಬಟ್ಟಲನ್ನು ಹುಡುಕುತ್ತಿದ್ದನು. ಉಳಿದವರು ಕಪ್ಪು ಗಳನ್ನು ಹಾರಿ ಹಾರಿ ದಾಟುತ್ತ, ಅದು ಇದು ಮಾತುಕತೆಯಾಡುತ್ತ ಹೋಗು ತ್ತಿದ್ದರು.

ಒಂದೆಡೆ ಬಾಳೆಯ ಪೊದರಿನ ಬುಡದಲ್ಲಿ ಕುಣಿತೋಡಿ, ಒಣಹುಲ್ಲು ಹಾಕಿ, ಯಾರಿಗೂ ತಿಳಿಯದಂತೆ ಬಾಳೆಯ ಗೊನೆಗಳನ್ನು ಕಡಿದು ಮುಚ್ಚಿಟ್ಟು, ಹಣ್ಣು ಮಾಡಿಕೊಂಡು, ಬೇಕಾದಾಗ ಬಂದು ಫಳಾರಮಾಡುವ ಅಭ್ಯಾಸವನ್ನಿಟ್ಟು ಕೊಂಡಿದ್ದ ಬೇಲರ ಬೈರನ ಮಗ, ಗಂಗಹುಡುಗ, ಗುಂಪು ಬರುತ್ತಿದ್ದುದನ್ನು ನೋಡಿ, ತಿನ್ನುತ್ತಿದ್ದ ಹಣ್ಣನ್ನು ಬೇಗ ಬೇಗನೆ ಪೂರೈಸಿ, ಉಳಿದೆಲ್ಲವನ್ನೂ ಮೊದಲಿನಂತೆಯೆ ಬಚ್ಚಿಟ್ಟು, ಒಣಗಿ ನೇತಾಡುತ್ತಿದ್ದ ಬಾಳೆಯೆಲೆಗಳ ಮರೆಯಲ್ಲಿ ಹುದುಗಿದನು. ಆದರೆ ನಾಯಿಯೊಂದು, ಸರಸರ ಸದ್ದಾದುದನ್ನು ಆಲಿಸಿ, ಆ ಕಡೆ ನೋಡಿ, ಗಂಗನ ಆಕೃತಿಯನ್ನು ಕಂಡು ಬೊಗಳಿತು. ವಾಸಪ್ಪನೂ ಅತ್ತಕಡೆ ನೋಡಿದನು. ಅವನಿಗೆ ಗಂಗನು ನಿಂತಿದ್ದು ಕಾಣಿಸಲೂ ಇಲ್ಲ, ಗೊತ್ತಾಗಲೂ ಇಲ್ಲ. ಆದರೆ ಬರುತ್ತಿದ್ದವರ ಕಡೆಯೆ ಉದ್ವೇಗದಿಂದ ನೋಡುತ್ತ ನಿಂತಿದ್ದ ಗಂಗನು ವಾಸಯ್ಯ ತನ್ನನ್ನು ನೋಡಿದರೆಂದೇ ಭಾವಿಸಿ, ತಾನು ಅಡಗಿ ನಿಂತಿಲ್ಲ ಎಂಬುದನ್ನು ತೋರಿಸಲೆಂದು 'ಹಚೀ ! ಹಚೀ ' ಎಂದು ನಾಯಿಯನ್ನು ಬೆದರಿಸಿದನು. ವಾಸು ಅವನು ಅವಿತಿದ್ದುದನ್ನು ತಿಳಿದು ಸಂಶಯದಿಂದ ಅಲ್ಲಿಗೆ ಹೋದನು. ಗಂಗನು ಎಲ್ಲವನ್ನೂ ಮರೆಮಾಡಿದ್ದರೂ ತಾನು ತಿಂದು ಪಕ್ಕದಲ್ಲಿ ಎಸೆದಿದ್ದ ಬಾಳೆಯ ಹಣ್ಣಿನ ಸಿಪ್ಪೆಗಳನ್ನು, ಮರೆತು, ಅಡಗಿಸಿರಲಿಲ್ಲ.

ಅದನ್ನು ಕಂಡ ವಾಸು "ಏನ್ಮಾಡ್ತಾ ಇದ್ಯೋ ಇಲ್ಲಿ?" ಎಂದು ಅಧಿಕಾರ ವಾಣಿಯಿಂದ ಕೇಳಿದನು.

"ಏನೂ ಇಲ್ಲಯ್ಯಾ, ಬಾಳೆ ಸರಬಲಿಗೆ ಬಂದಿದ್ದೆ!" ಎಂದನು ಗಂಗ.

ಗಂಗ ಹಕ್ಕಿಯ ಗೂಡಿನಿಂದ ಮರಿಗಳನ್ನು ಕದ್ದು ತನಗೆ ಮಾಡಿದ್ದ ಮೋಸವನ್ನು ವಾಸುವಿನ್ನೂ ಮರೆತಿರಲಿಲ್ಲ.

"ಕಳ್ಳಾ ಸುಳ್ಳು ಹೇಳ್ತೀಯಾ!" ಎಂದವನೆ ನೆಲವನ್ನು ಹುಡುಕತೊಡಗಿದನು. ಕಳ್ಳನ ಗುಟ್ಟು ಕಳ್ಳನಿಗೇ ಗೊತ್ತು ಎಂಬಂತೆ ಅಂತಹ ಕೆಲಸಗಳಲ್ಲಿ ನುರಿತಿದ್ದ ವಾಸುವಿಗೆ ಬಚ್ಚಿಟ್ಟಿದ್ದ ಹಣ್ಣುಗಳನ್ನು ಕಂಡುಹಿಡಿಯುವುದೇನೂ ಕಷ್ಟವಾಗಿರಲಿಲ್ಲ.

"ಹೂವಣ್ಣಯ್ಯಾ, ರಾಮಣ್ಣಯ್ಯಾ ಇಲ್ಲಿ ಬನ್ನಿ! ಇಲ್ಲಿ ಬನ್ನಿ!" ಎಂದು ಕೂಗಿದನು.

ಆಗಲೇ ಸ್ವಲ್ಪದೂರ ಮುಂದುವರಿದಿದ್ದ ಅವರು ನಿಂತು "ಯಾಕೋ?" ಎಂದು ಕೇಳಿದರು.

"ಇಲ್ಲಿ ಬನ್ನಿ! ಇಲ್ಲಿ ಬನ್ನಿ! ಒಂದು ವಡಾಸು!" ಎಂದು ಕೂಗಿ ಹೇಳಿ "ಕಳ್ಳಸೂಳೇಮಗನೇ, ನನ್ನ ಹತ್ರ ದಗಲಬಾಜಿ ಮಾಡ್ತೀಯಾ?" ಎಂದು ಗಂಗನನ್ನು ಬೈದನು.

ಎಲ್ಲರೂ ಬಂದು ನೋಡಿದರು. ಮಾಗಿದ್ದ ಹಳದಿ ಹೊಂಬಣ್ಣದ ಬಾಳೆಯ ಹಣ್ಣುಗಳು ಹುಲ್ಲು ಹಾಸಿದ್ದ ಕುಣಿಯಲ್ಲಿ ಕುಳಿತು ಕಂಪು ಬೀರುತ್ತಿದ್ದುವು. ಗಂಗ ಕಣ್ಣೀರು ಸುರಿಸುತ್ತ ನಿಂತಿದ್ದನು. ವಿಷಯವೆಲ್ಲವನ್ನೂ ತಿಳಿದ ಮೇಲೆ ಹೂವಯ್ಯ ಅವನನ್ನು ಗದರಿಸುವ ಕೆಲಸಕ್ಕೆ ಹೋಗದೆ, ಆದಷ್ಟು ಹಣ್ಣುಗಳನ್ನು ಎಲ್ಲರಿಗೂ ಹಂಚಿಕೊಟ್ಟು, ಉಳಿದುದನ್ನು ಗಂಗನ ಕೈಯಲ್ಲಿಯೆ ಮನೆಗೆ ಕೊಡುವಂತೆ ಹೇಳಿ ಕೊಟ್ಟನು. ವಾಸುವಿಗೆ ಆಶಾಭಂಗವಾಯಿತು, ಗಂಗನಿಗೆ ಪೆಟ್ಟು ಬೀಳಲಿಲ್ಲವಲ್ಲಾ ಎಂದು!

ತೋಟದಲ್ಲಿದ್ದ ಪೇರಲು ಪನ್ನೇರಲು ಮರಗಳಲ್ಲಿ ಪುಟ್ಟ ಗಂಗ ಮತ್ತು ಹಕ್ಕಿಗಳ ಕಣ್ಣಿಗೆ ತಪ್ಪಿಸಿಕೊಂಡಿದ್ದ ಹಣ್ಣುಗಳನ್ನು ಕುಯ್ದು ತಿನ್ನುತ್ತ, ಹೂವಯ್ಯ ಮೊದಲಾದವರು ಗದ್ದೆಯ ಬಯಲಿಗೆ ಬರುವಷ್ಟರಲ್ಲಿಯೆ ಬೈರ, ಸಿದ್ದರು ಆರುಕಟ್ಟಿದ್ದರು. ಹಿಂದಿನ ದಿನದ ಮಳೆ ಚೆನ್ನಾಗಿ ಹುಯ್ದುದರಿಂದ ಬೇಸಗೆಯ ಬಿಸಿಲಿಗೆ ಚೆನ್ನಾಗಿ ಒಣಗಿ ಬಿರುಕು ಬಿಟ್ಟಿದ್ದ ಗದ್ದೆಗಳೆಲ್ಲ ನೀರು ಕುಡಿದು ಮೆತ್ತಗಾಗಿದ್ದುವು. ಕಾಲಿಟ್ಟರೆ ಮಣ್ಣಿನ ಮೃದುತ್ವವೂ ಶೈತ್ಯವೂ ಹರ್ಷಪ್ರದವಾಗಿತ್ತು. ಕಾಳುಗಳನ್ನು ಮೇಯುತ್ತಿದ್ದ ಹೊರಸಲು ಹಕ್ಕಿಗಳು ಪಟಪಟನೆ ಹಾರಿ ಗದ್ದೆಯ ಮೇರೆಯಲ್ಲಿದ್ದ

ಮರಗಳ ಮೇಲೆ ಕುಳಿತುವು. ಪುಟ್ಟಣ್ಣ ಅವುಗಳಿಗಾಗಿ ಹೊಂಚು ಹಾಕಿಕೊಂಡು ಹೋದನು. ಹೂವಯ್ಯ ರಾಮಯ್ಯ ವಾಸು ಮೂವರೂ ಉಳುತ್ತಿದ್ದ ಗದ್ದೆಯ ಅಂಚಿಗೆ ಹೋದರು.

ಬೈರ ಕಬ್ಬಿಣದ ನೇಗಿಲು ಹಿಡಿದಿದ್ದನು. ಸಿದ್ದನದು ಮರದಿಂದ ಮಾಡಿದ್ದ ನಾಡು ನೇಗಿಲಾಗಿತ್ತು: "ಹುಮಾ, ಚಿಗಾ, ಹಮ್ ಮ್ ಮ್, ಚಿಗ ಚಿಗ ಚಿಗಾ" ಮೊದಲಾದ ಸಂಕೇತ ಪದಗಳಿಗೆ ಎತ್ತುಗಳು ಚಲಿಸಿದಂತೆಲ್ಲ ಕುಳವು ನೆಲವನ್ನು ಸೀಳಿ ಮಣ್ಣನ್ನು ಇಕ್ಕೆಲಗಳಿಗೂ ಹಾಕುತ್ತಿತ್ತು. ನೇಗಿಲ ಗೆರೆಯ ಸಾಲು ಹಿಂದೆ ಹಿಂದೆ ಹರಿಯುತ್ತಿತ್ತು.

"ರುಸಿ ಆಗ್ಬೇಕಂತಾ ಮಾಡೀರಂತೆ! ಹೌದ್ರೇನಯ್ಯಾ" ಎಂದು ಬೈರ ನಗುನಗುತ್ತ ಕೇಳಿದನು.

"ಹೌದು ಕಣೋ!" ಎಂದು ಹೂವಯ್ಯ ನಕ್ಕನು. ರಾಮಯ್ಯನೂ ನಕ್ಕನು.

"ಹಂಗಾರೆ ನೀವು ಮದುವೆ ಆಗಾದಿಲ್ಲೇನು?"

"ಅದೆಲ್ಲಾ ನಿನಗೇತಕ್ಕೋ?"

"ಅಲ್ಲಾ, ಸುಮ್ನೆ ಕೇಳ್ದೆ. ಯಾರ್ಯಾರೋ ಆಡ್ಕೊಳ್ತಿದ್ರು."

"ಅದಿರಲಿ, ನೇಗಿಲು ಬಿಡು. ನಾನು ಹೂಡ್ತೀನಿ."

"ಸೈ, ಬಿಡಿ! ನಿಮ್ಮ ಬಿಳಿ ಪಂಚೆ ನೆಲಾ ಗುಡ್ಸಿದ್ರೆ ವಯ್ನಾಗ್ತದೆ!"

"ಪಂಚೆ ಎತ್ತಿಕಟ್ಟಿಕೊಳ್ತೀನೋ."

"ಎತ್ತು ಬೆದರಿದ್ರೆ?"

"ಬೆದರೋದೂ ಇಲ್ಲ, ಏನೂ ಇಲ್ಲ. ಇತ್ತ ಕೊಡು."

ಹೂವಯ್ಯ ಪಂಚೆ ಎತ್ತಿಕಟ್ಟಿಕೊಂಡು, ಅಂಚಿನಿಂದ ಕೆಳಗಿಳಿದನು. ಬೈರ ತಾನು ಹಿಡಿದಿದ್ದ ನೆಕ್ಕಿಯ ಕೋಲನ್ನು ಹೂವಯ್ಯನಿಗೆ ಕೊಟ್ಟು, ನೇಗಿಲಿಂದ ದೂರ ನಿಂತನು. ರಾಮಯ್ಯನೂ ಸಿದ್ದ ಉಳುತ್ತಿದ್ದ ನೇಗಿಲನ್ನು ಹಿಡಿದು ನಿಂತನು. ಬೈರ ಉಳುವ ವಿದ್ಯೆಯ ವಿಚಾರವಾಗಿ ನಾಲ್ಕು ಉಪದೇಶದ ಮಾತು ಹೇಳಿ 'ಹುಮ' 'ಚಿಗ'ಗಳ ರಹಸ್ಯವನ್ನು ತಿಳಿಸಿದನು:

"ನೇಗಿಲು ಬಹಳ ಒತ್ತಬ್ಯಾಡಿ. ಕುಳ ಎತ್ತಿನ ಕೊಳಗಿಗೆ ಹೊಡೀದಿದ್ದಾಂಗೆ ನೋಡಿಕೊಳ್ಳಿ. ಎತ್ತು ಬಲಕ್ಕೆ ಒತ್ತಬೇಕಾದ್ರೆ 'ಚಿಗ, ಚಿಗ, ಚಿಗ' ಅಂತಾ ಹೇಳ್ತಾ ನೆಕ್ಕಿ ಬರ್ಲಾಗೆ ಎಡಕ್ಕೆ ತಟ್ಟಿ. ಎಡಕ್ಕೆ ಒತ್ತಬೇಕಾದ್ರೆ 'ಹುಮ, ಹುಮ, ಹುಮ,' ಅಂತ ಹೇಳ್ತಾ ಬಲಕ್ಕೆ ತಟ್ಟಿ..."

ಎಂದು ಬೈರ ಹೇಳುತ್ತಿದ್ದಂತೆ ಸಿದ್ದ "ನೋಡಿದಿರಾ, ಆಗಲೆ ಕಣ್ಣು ಮಳ್ಳಸ್ತದೆ

ಪುಟ್ರಾಮ!" ಎಂದು ಬೆದರುಗಣ್ಣಿನಿಂದ ಹೂವಯ್ಯನ ಬಿಳಿ ಬಟ್ಟೆಯ ಕಡೆಗೆ ನೋಡುತ್ತಿದ್ದ ಪುಟ್ಟರಾಮ ಎಂಬ ಎತ್ತನ್ನು ಗದರಿಸಿದನು. ಅದನ್ನು ನೋಡಿ ರಾಮಯ್ಯನೂ "ಹೌದು ಕಣೋ, ಅಣ್ಣಯ್ಯ. ನಿನ್ನ ಎತ್ತು ಯಾಕೋ ಕಣ್ಣು ಕೆಂಪಗೆ ಮಾಡಿಕೊಂಡಿದೆ. ಸ್ವಲ್ಪ ಹುಷಾರಾಗಿರು!" ಎಂದನು.

ಅದಕ್ಕೆ ಹೂವಯ್ಯ "ಹಾಗೇನಾದರೂ ಜೋರು ಮಾಡಿದರೆ ನೇಗಿಲು ಬಲವಾಗಿ ಒತ್ತಿ ಹಿಡಿದರೆ ಸರಿ. ಆಟ ನಿಂತುಹೋಗ್ತದೆ!" ಎಂದನು.

ಅಂಚಿನ ಮೇಲೆಯೆ ನಿಂತಿದ್ದ ವಾಸುವೂ ಏನೋ ಮಹಾ ಅನುಭವಶಾಲಿಯಂತೆಯೂ ಸಹಾಯ ಮಾಡುವವನಂತೆಯೂ "ನಾನು ಬರ್ಲೇನು ಹೇಳು, ಹೂವಣ್ಣಯ್ಯ?" ಎಂದನು.

"ಬೇಡ, ಮಾರಾಯಾ, ತಮ್ಮ ಸವಾರಿ ಅಲ್ಲೇ ನಿಂತಿರಲಿ! ನಿನ್ನ ಕಂಡರೆ ಕಲ್ಲು ಕೂಡ ಹಾರಾಡ್ತವೆ! ಎತ್ತಿನ ಗತಿ ಏನಾಗಬೇಕು!"

"ಹ್ಣೂ! ಬೈರನ್ನೇ ಕೇಳು. ಹೋದ ವರ್ಷ ನಾನೂ ಹೂಡಿದ್ದೆ!" ಎಂದನು ವಾಸು.

"ಊಟಕ್ಕೆ ಕೂತಾಗಲೇನು?"

ಬೈರ "ಹೌದು ಕಣ್ರಯ್ಯಾ. ವಾಸಪ್ಪಯ್ಯ ತಕ್ಕಮಟ್ಟಿಗೆ ಹೂಡಾಕ್ಕೆ ಕಲ್ತಾರೆ" ಎಂದನು.

ಅಂತೂ ವಾಸು ಅಂಚಿನ ಮೇಲೆಯೆ ನಿಂತು ನೋಡಬೇಕಾಯಿತು. ಹೂವಯ್ಯ ರಾಮಯ್ಯರು ಉಳಲು ಪ್ರಾರಂಭಿಸಿದರು.

ಯಾವಾಗಲೂ ಮಾಸಲು ಬಟ್ಟೆಯ ಮಂದಿಗಳನ್ನೆ ನೋಡಿ ನೋಡಿ ಅಭ್ಯಾಸವಾಗಿದ್ದ ಆ ಎತ್ತುಗಳು ಈ ಶ್ವೇತವಸನಧಾರಿಗಳನ್ನು ಕಂಡಾಗಣಿಂದಲೂ ಬೆಚ್ಚಿದ್ದುವು. ಅವರು ನೇಗಿಲು ಹಿಡಿದು ತಮ್ಮನ್ನು ಹಿಂಬಾಲಿಸಿ ಉಳಲು ತೊಡಗಿದ ಒಡನೆ ಕ್ರಮ ತಪ್ಪಿ ಸಾಗತೊಡಗಿದುವು. 'ಹುಮ' 'ಚಿಗ' 'ಹುಮ ಹುಮ ಹುಮ' 'ಚಿಗ ಚಿಗ ಚಿಗ' ಎಂದು ಎಷ್ಟು ಕೂಗಿಕೊಂಡರೂ ಎತ್ತುಗಳು ವ್ಯವಸಾಯ ವಿದ್ಯೆಯ ಪಾರಿಭಾಷಿಕ ಪದಗಳನ್ನು ಒಂದಿನಿತೂ ಲೆಕ್ಕಿಸದೆ, ಗದ್ದೆಯಲ್ಲಿ ಸಿಕ್ಕಿದ ಕಡೆಗೆ ನುಗ್ಗತೊಡಗಿದುವು. ವಾಸು, ಬೈರ, ಸಿದ್ದರು ಹೂವಯ್ಯ ರಾಮಯ್ಯರ ಪೇಚಾಟ ಕೂಗಾಟಗಳನ್ನು ನೋಡಿ ಗಟ್ಟಿಯಾಗಿ ನಗುತ್ತಿದ್ದರು. ನಡುನಡುವೆ ಸಲಹೆಗಳನ್ನು ಕೂಗಿ ಎಸೆಯುತ್ತಿದ್ದರು. ಎತ್ತುಗಳು ಇನ್ನೂ ಬೆಚ್ಚಿ ಧಾವಿಸಿದುವು. ಗಡಿಬಿಡಿಯಲ್ಲಿ ಹೂವಯ್ಯನ ಕಬ್ಬಿಣದ ನೇಗಿಲಿನ ಹರಿತವಾದ ಕುಳದ ಬಾಯಿ ಒಂದು ಎತ್ತಿನ ಕೊಳಗಿನ ಮೇಲ್ಭಾಗಕ್ಕೆ ತಗುಲಿ, ಕತ್ತಿಯಿಂದ ಕಡಿದಂತೆ ಗಾಯವಾಗಿ, ನೆತ್ತರು ಹಾರಿತು. ಅದನ್ನು ನೋಡಿದ

ಹೂವಯ್ಯನಿಗೆ ಗಾಬರಿಯಾಗಿ ತನ್ನ ಬಲವನ್ನೆಲ್ಲ ವೆಚ್ಚಮಾಡಿ ನೇಗಿಲನ್ನು ನೆಲಕ್ಕೆ ಅದುಮಿದನು. ಕಬ್ಬಿಣದ ನೇಗಿಲು ಆಳವಾಗಿ ನೆಲದಲ್ಲಿ ಹೂತುಕೊಂಡದ್ದರಿಂದ ಎಳೆಯಲಾರದೆ ಎತ್ತು ನಿಂತುವು.

ಆ ಹೊತ್ತಿಗೆ ಸರಿಯಾಗಿ, ಹೊರಸಲು ಹಕ್ಕಿಗಳಿಗಾಗಿ ಹೊಂಚು ಹಾಕುತ್ತಿದ್ದ ಪುಟ್ಟಣ್ಣ ಸಮೀಪದಲ್ಲಿಯೆ ಒಂದು ಈಡು ಹಾರಿಸಿದನು.

ಇನ್ನೂ ಹತೋಟಿಗೆ ಬಾರದೆ ಗದ್ದೆಯಲ್ಲಿ ನೇಗಿಲನ್ನೂ ರಾಮಯ್ಯನನ್ನೂ ಎಳೆದುಕೊಂಡು ಓಡಾಡುತ್ತಿದ್ದ ಎತ್ತುಗಳು 'ಢಾಂ' ಎಂಬ ಶಬ್ದಕ್ಕೆ ಮತ್ತಷ್ಟು ಬೆದರಿ, ರಭಸದಿಂದ ಆ ಗದ್ದೆಯನ್ನೇ ಬಿಟ್ಟು ಮತ್ತೊಂದು ಗದ್ದೆಯ ಕಡೆಗೆ ನುಗ್ಗಿದುವು. ರಾಮಯ್ಯ ಹಿಡಿದದ್ದು ಮರದ ನೇಗಿಲಾದ್ದರಿಂದ ಎಷ್ಟು ಅದು ಮಿದರೂ ಅದು ಎತ್ತುಗಳನ್ನು ತಡೆದು ನಿಲ್ಲಿಸುವಷ್ಟು ಘಾತಕ್ಕೆ ನೆಲದೊಳಗೆ ಹೋಗಲಿಲ್ಲ. ಎತ್ತು ಅವನನ್ನೂ ನೇಗಿಲನ್ನೂ ಒಂದೇ ಸಮನೆ ಎಳೆದುಕೊಂಡು ಅಂಚಿನೆಡೆಗೆ ಹೋದುವು. ಇನ್ನೇನು ಮೇಲಿನ ಗದ್ದೆಯ ಅಂಚಿನಿಂದ ಕೆಳಗಿನ ಗದ್ದೆಗೆ ಹಾರಬೇಕು! ರಾಮಯ್ಯ ಇದೇ ಸಮಯವೆಂದು ಭಾವಿಸಿ, ಸುಮಾರು ಒಂದು ಅಡಿ ಎತ್ತರವಾಗಿಯೂ ಎರಡು ಅಡಿ ಅಗಲವಾಗಿಯೂ ಇದ್ದ ಅಂಚಿಗೆ ನೇಗಿಲನ್ನು ಭದ್ರಮುಷ್ಟಿಯಿಂದ ಬಲವಾಗಿ ಒತ್ತಿದನು. ವೇಗದಿಂದ ಓಡುತ್ತಿದ್ದ ಎತ್ತುಗಳು ಝುಗ್ಗನೆ ನಿಂತುವು. ಆದರೆ ಒಂದೇ ಕ್ಷಣ! ಮರುಕ್ಷಣದಲ್ಲಿ ಮರದ ನೇಗಿಲು ಮುರಿದು, ಈಸು ನೊಗಗಳೊಡನೆ ಎತ್ತುಗಳು ಕೆಳಗದ್ದೆಗೆ ಹಾರಿದುವು. ನೇಗಿಲಿನ ಮೇಣಿಯನ್ನು ಮಾತ್ರ ಕೈಯಲ್ಲಿ ಹಿಡಿದುಕೊಂಡು ರಾಮಯ್ಯ ಮೇಲಿನ ಗದ್ದೆಯಲ್ಲಿಯೆ ನಿಂತಿದ್ದನು!

ಯಾರೂ ಹೆಚ್ಚು ಹೊತ್ತು ನಗಲಾಗಲಿಲ್ಲ. ಅಪಾಯ ಲಘುವಾಗಿದ್ದರೆ ವಿನೋದವಾಗುತ್ತದೆ; ಗುರುತರವಾದರೆ ವಿಷಾದವಾಗುತ್ತದೆ. ಗಾಯಗೊಂಡ ಎತ್ತಿನ ಕಾಲಿನಿಂದ ನೆತ್ತರು ಚಿಮ್ಮುತ್ತಿದ್ದದ್ದೂ ನೇಗಿಲು ಮುರಿದುಹೋದುದೂ ಬೇಸಾಯಗಾರರ ದೃಷ್ಟಿಗೆ ಲಘುಘಟನೆಗಳಾಗಿ ತೋರಲಿಲ್ಲ. ಅದರಲ್ಲಿಯೂ ಪ್ರಾರಂಭದ ದಿನದಲ್ಲಿ ನೇಗಿಲು ಮುರಿಯುವುದೆಂದರೆ ಮಹಾ ಅಪಶಕುನವೆಂದು ಅವರೆಲ್ಲರ ನಂಬುಗೆಯಾಗಿತ್ತು. ಉಲ್ಲಾಸದಿಂದ ಗಟ್ಟಿಯಾಗಿ ಮಾತಾಡುತ್ತಿದ್ದವರು ವಿಷಣ್ಣರಾಗಿ ಮೆಲ್ಲನೆ ಮಾತಾಡತೊಡಗಿದರು. ಬೈರ ಸಿದ್ದರಂತೂ ಭೀತರಾಗಿದ್ದರು: ನಡೆದ ಸಂಗತಿ ಗೌಡರಿಗೆ ತಿಳಿದರೆ ಏನು ಗತಿ, ಎಂದು.

ಬೈರ ಭಯೋದ್ವಿಗ್ನ ಧ್ವನಿಯಿಂದ "ನಾ ಹೇಳ್ದೆ ಆಗ್ಲೆ, ಬ್ಯಾಡ, ಎತ್ತು ಬೆದರ್ತಾವೆ ಅಂತಾ!" ಎಂದನು.

ಸಿದ್ದ "ಬೆಳಗಾತ ಎದ್ದವಷ್ಟೇ ಯಾರ ಮುಖಾ ನೋಡಿದ್ನೋ ಏನೋ. ನನ್ನ

ಗಿರಾಚಾರ!" ಎಂದು ಮುರಿದ ನೇಗಿಲನ್ನು ನೆಲಕ್ಕೆಸೆದು, ತಲೆಯಮೇಲೆ ಕೈಹೊತ್ತುಕೊಂಡು ಕುಳಿತನು.

"ಇಲ್ಲಿಗೆ ಬರುವಾಗ್ಲೆ ದಾರೀಲಿ ಕಾಗಿ ಅಡ್ಡ ಬಂತು. ಏನೋ ಆಗ್ತದೆ ಅಂತಾನೆ ಬಂದೆ! ಆಗೇ ಬಿಡ್ತು!"

"ನಾ ಕಲ್ಲು ಎಡಗ್ಗಾಡಿಗ್ಲೆ ಮನ್ಸೀಗೆ ಹೊಳೀತು, ಇವತ್ತು ನನ್ನ ಗಿರಾಚಾರ ನೆಟ್ಟಗಿಲ್ಲ ಅಂತಾ!"

ಬೈರ ಸಿದ್ದರು ಹೀಗೆ ಒಬ್ಬರಾದಮೇಲೊಬ್ಬರು ಗೊಣಗುತ್ತಿದ್ದರು. ನಡುವೆ ವಾಸುವೂ ಬಾಯಿ ಹಾಕಿ "ನಾ ಹೇಳಿದ್ದೆ ಮೊದಲೆ! ಅದಕ್ಕೇನೆ ನಾನೂಬರ್ಲೇನೂ ಅಂತ ಕೇಳ್ದೆ. ಹೂವಣ್ಣಯ್ಯ ಬೇಡ ಅಂತಾ ಬೈದುಬಿಟ್ಟ! ಈಗ?" ಎಂದನು.

ಅದುವರೆಗೂ ಸುಮ್ಮನಿದ್ದ ಹೂವಯ್ಯ ರಾಮಯ್ಯರಿಬ್ಬರಿಗೂ ಇವರ ಮಾತು ಗಳನ್ನು ಕೇಳಿ ಸಿಟ್ಟುಬಂದಿತ್ತು. ಆಗುವುದು ಆಗಿಹೋದ ಮೇಲೆ, ಮುಂದೆ ಮಾಡಬೇಕಾದ ಕೆಲಸವನ್ನು ಬಿಟ್ಟು, ಹೀಗೆ ಮಾತಾಡುತ್ತಿದ್ದರೆ ಯಾರಿಗೆ ತಾನೆ ಮನಸ್ಸು ನೋಯುವುದಿಲ್ಲ.

ಹೂವಯ್ಯ ವಾಸು ಮಾತು ಮುಗಿಸಿದ ಕೂಡಲೆ ಅವನ ಕಡೆಗೆ ತಟಕ್ಕನೆ ತಿರುಗಿ, ಮುಖ ಕಂತರಿಸಿಕೊಂಡು "ಸಾಕು, ಸುಮ್ಮನಿರೊ! ಏನು ಬೈದೆನೋ ನಾನು ನಿನಗೆ? ಮಹಾ! ಇವನಿದ್ದಿದ್ದರೆ ಎಲ್ಲ ಸರಿಹೋಗ್ತಿತ್ತಂತೆ?" ಎಂದು ಗದರಿಸಿದನು.

ವಾಸು ಮುಖ ಸಪ್ಪಗೆ ಮಾಡಿಕೊಂಡು ಸುಮ್ಮನೆ ನಿಂತನು.

ರಾಮಯ್ಯ ಗಟ್ಟಿಯಾಗಿ "ಏ ಬೈರಾ, ಆರು ಬಿಟ್ಟು, ಎತ್ತು ಕೊಟ್ಟಿಗೆಗೆ ಹೊಡೆದುಕೊಂಡು ಹೋಗಿ, ಕಾಲಿಗೆ ಔಷಧಿ ಹಾಕಿ" ಎಂದು, ಸಿದ್ದನ ಕಡೆ ತಿರುಗಿ "ಯಾಕೋ ತಲೇಮೇಲೆ ಕೈಹೊತ್ತುಕೊಂಡು ಕೂತೀಯ?.... ಏಳೋ!... ಏಳ್ತೀಯೋ ಇಲ್ಲೋ?" ಎಂದು ಅಪ್ಪಣೆ ಮಾಡಿದನು.

"ಎಂಥಾ ಏಳೋದೋ ಏನೋ? ನನಗಂತೂ ಕಾಲೇ ಬರೋದಿಲ್ಲ" ಎಂದು ನೀಳ್ದನಿಯಿಂದ ಗೊಣಗುತ್ತ ಸಿದ್ದನೆದ್ದು ನಿಂತನು.

ಅಷ್ಟರಲ್ಲಿ ಪುಟ್ಟಣ್ಣ "ಹಚೀ! ಹಚೀ! ಹಚೀ! ಬಿಡೂ! ಬಿಡೂ! ಬಿಡೂ! ಕೊತ್ವಾಲ!" ಎಂದು ಅಬ್ಬರಿಸಿ ಕೂಗಿಕೊಂಡದ್ದು ಕೇಳಿಬಂದು, ಹೂವಯ್ಯ ರಾಮಯ್ಯ ವಾಸು ಮೂವರೂ ಆ ಕಡೆಗೆ ಓಡಿದರು.

ಪುಟ್ಟಣ್ಣ ಈಡು ಹೊಡೆದೊಡನೆಯೆ ನಾಯಿಗಳೆಲ್ಲ ಅಲ್ಲಿಗೆ ಹೋಗಿದ್ದುವು. ರೆಕ್ಕೆಗೆ ಚರೆ ತಗಲಿ ಹೊರಸಲು ಹಕ್ಕಿಯೇನೋ ಕೆಳಗೆ ಬಿತ್ತು. ಆದರೆ ಪ್ರಾಣ ವಿದ್ದುದರಿಂದ ಎಲ್ಲಿಯೋ ಗಿಡಬಳ್ಳಿಗಳ ಇಡುಕುರಿನಲ್ಲಿ ಅಡಗಿಬಿಟ್ಟಿತು. ಬೇಟೆ ಗಾರನೊಡನೆ ನಾಯಿಗಳೂ ಅದನ್ನು ಅರಸತೊಡಗಿದುವು.

ಸ್ವಲ್ಪಹೊತ್ತು ಹುಡುಕಾಡಿದಮೇಲೆ ಹಕ್ಕಿ ಕೊತ್ವಾಲನ ಕಣ್ಣಿಗೆ ಬಿದ್ದು, ಬಾಯಿಗೂ ಬಿದ್ದಿತು! ಹಕ್ಕಿ ಪಟಪಟನೆ ಒದ್ದಾಡಿಕೊಂಡಿತು. ನಾಯಿ ಅದನ್ನು ಬಾಯಲ್ಲಿ ಕಚ್ಚಿಕೊಂಡು ಓಡತೊಡಗಿತು. ಪುಟ್ಟಣ್ಣ ಅಬ್ಬರಿಸುತ್ತ ಬೇಟೆಯನ್ನು ಬಿಡಿಸಿಕೊಳ್ಳಲೆಂದು ನಾಯಿಯನ್ನು ಅಟ್ಟಿಕೊಂಡುಹೋದನು. ನಾಯಿ ಓಡು ತ್ತಲೇ ಹಕ್ಕಿಯನ್ನೂ ನುಂಗುತ್ತ, ಸೀಗೆಯ ಮೆಳೆಗಳಲ್ಲಿ ನುಸುಳಿ ಹೋಯಿತು. ಪುಟ್ಟಣ್ಣ ಸಿಟ್ಟಿನಿಂದ ಹಲ್ಲುಹಲ್ಲು ಕಡಿಯುತ್ತ "ನೀನು ಮನೆಗೆ ಬಾ, ಹಕ್ಕಿ ತಿಂದಿದ್ದು ಕಕ್ಕಿಸ್ತೀನಿ!" ಎಂದು ಶಪಿಸುತ್ತ ನಿಂತಿದ್ದನು.

ಹೂವಯ್ಯ ಮೊದಲಾದವರು ಬರಲು, ನಡೆದುದನ್ನೆಲ್ಲ ಹೇಳಿ "ಏನು ಮಾಡ್ಬೇಕಾಯ್ತು ಆ ನಾಯಿಗೆ? ಇದೇ ಮೊದಲನೆ ಸಲ ಅಲ್ಲ. ಎರಡು ಮೂರು ಸಲ ಹೀಂಗೆ ಮಾಡಿದೆ!" ಎಂದನು.

ವಾಸು "ಎರಡು ಮೂರು ದಿನ ಕಟ್ಟಿಹಾಕಿ ಅನ್ನ ಹಾಕ್ಬಾರ್ದು" ಎಂದು ಶಿಕ್ಷೆ ವಿಧಿಸಿದನು.

ಎಲ್ಲರೂ ಸೇರಿ ಹಕ್ಕಿಬೇಟೆಗೋಸ್ಕರ ಕೆಳಕಾನೂರಿನ ಕಡೆಗೆ ಹೋದರು.

ಇತ್ತ ಬೈರ ಗಾಯಗೊಂಡ ಎತ್ತನ್ನು ಹಿಡಿದುಕೊಂಡು ಕೊಟ್ಟಿಗೆಯ ಕಡೆಗೆ ಹೊರಟನು. ಅವನ ಹಿಂದೆ ಸಿದ್ದ ಮುರಿದ ನೇಗಿಲನ್ನು ಹೊತ್ತುಕೊಂಡು ಹೋಗುತ್ತಿದ್ದನು.

ಕಬ್ಬಿನ ಗದ್ದೆಯಲ್ಲಿ ಗಟ್ಟದಾಳುಗಳ ಮೇಲ್ವಿಚಾರಣೆ ತೆಗೆದುಕೊಂಡು ಸೇರೆ ಗಾರರೊಡನೆ ಬರುತ್ತಿದ್ದ ಚಂದ್ರಯ್ಯಗೌಡರು ದೂರದಲ್ಲಿ ಬೈರ ಸಿದ್ದರು ಆರು ಬಿಟ್ಟು ಹೋಗುತ್ತಿದ್ದುದನ್ನು ಕಂಡು "ಈ ಸೂಳೇ ಮಕ್ಕಳಿಗೆ ಏನು ಮಾಡ ಬೇಕಾಯ್ತು? ಒಂಬತ್ತು ಗಂಟೆಗೆ ಕೆಲಸಕ್ಕೆ ಹೊರಡ್ತಾರೆ! ಹತ್ತು ಗಂಟೆಗೆ ಕೆಲಸ ಬಿಡ್ತಾರೆ!" ಎಂದು, ಗಟ್ಟಿಯಾಗಿ ಕೂಗಿದರು: "ಏ, ಬೈರಾ! ನಿಮ್ಮ ಬಿಡಾರಕ್ಕೆ ಬೆಂಕಿಬೀಳಾ! ಇಷ್ಟು ಬೇಗನೆ ಆರು ಬಿಟ್ಟು ಗುಡೀಗೆ ಸಾಯ್ತಿರೇನೋ?"

ಗೌಡರ ಸ್ವರವನ್ನು ಕೇಳಿದ ಕೂಡಲೆ ಸಿದ್ದನಿಗೆ ಜಂಘಾಬಲವೇ ಉಡುಗಿ ಹೋದಂತಾಗಿ "ಬೈರಣ್ಣಾ, ಇವತ್ತು ನಮಗೆ ಗಿರಾಚಾರ ಕಾಡಿದೆ!" ಎಂದನು.

ಬೈರ ನಡೆದುದನ್ನೆಲ್ಲ ಚಾಚೂ ತಪ್ಪದೆ ವರದಿ ಹೇಳಿದನು. ಗೌಡರು ಎತ್ತಿನ ಕಾಲಿಗಾದ ಗಾಯವನ್ನೂ ಮುರಿದ ನೇಗಿಲನ್ನೂ ನೋಡಿ "ಮನೆಹಾಳ ಮಕ್ಕಳು! ...ನಿಮಗೆ ಯಾರೋ ಹೇಳಿದವರು ಅವರ ಕೈಗೆ ನೇಗಿಲ ಕೊಡಾಕೆ?" ಎಂದವರೆ ಬೈರನ ಕಪಾಲಕ್ಕೊಂದು ಪಟೀರೆಂದು ಕೊಟ್ಟರು. ಮೇಲಿನ ಗದ್ದೆಯ ಅಂಚಿನ ಮೇಲೆ ನಿಂತಿದ್ದ ಸಿದ್ದ ತನಗೂ ಎಲ್ಲಿ ಏಟು ಬೀಳುತ್ತದೆಯೋ ಎಂದು

ಅಂಜಿ ಹಿಂದು ಹಿಂದಕ್ಕೆ ಸರಿದು, ಕಾಲುತಪ್ಪಿ, ಹೊತ್ತ ನೇಗಿಲೊಡನೆ ಮೂರು ನಾಲ್ಕು ಅಡಿ ತಗ್ಗಾಗಿದ್ದ ಕೆಳಗಿನ ಗದ್ದೆಗೆ ದಿಸಿಲ್ಲನೆ ಉರುಳಿಬಿದ್ದನು!

ಗೌಡರು ರಂಗಪ್ಪಸೆಟ್ಟರ ಕಡೆಗೆ ತಿರುಗಿ "ಸೇರೆಗಾರ್ರೇ ಇವರಿಗೆ ಇವತ್ತು ಕೂಲಿ ಬತ್ತ ವಜಾ!" ಎಂದು ನಶ್ಯಹಾಕುತ್ತ ಹೊರಟುಹೋದರು.

"ನಾವೇನು ಮಾಡಾದು, ನೀವೇ ಹೇಳಿ, ಸೇರೆಗಾರ್ರೆ! ಅವರು ಬಂದು ಕೇಳಿದ್ರೆ ಕೊಡಾದಿಲ್ಲ ಅನ್ನಾಕ್ಕೆ ಆಗ್ತದೆಯೇ?" ಎಂದು ಬೈರ ಕೆನ್ನೆಯುಜ್ಜಿ ಕೊಳ್ಳುತ್ತ ಕಣ್ಣೀರು ಕರೆದನು.

ಗದ್ದೆಯಿಂದ ಮೇಲೆದ್ದ ಸಿದ್ದ ಮೈಕೊಡವಿಕೊಳ್ಳುತ್ತ "ನಮ್ಮ ಗಿರಾಚಾರ! ಹಾಳು ಜನ್ಮಾನಾ ಬಿಸಾಕ!" ಎನ್ನುತ್ತಿದ್ದನು.

ಬೈರ ಹಿಡಿದುಕೊಂಡಿದ್ದ ಎತ್ತು ತನ್ನ ಗೋಣನ್ನು ಮಡಿಸಿ ಮೈನೆಕ್ಕಿಕೊಳ್ಳುತ್ತಿತ್ತು.

ಸೇರೆಗಾರರು ಕಣ್ಣುಮಿಟುಕಿಸಿ ಬೈರನ ಕಣ್ಣನ್ನೇ ನೋಡುತ್ತ ಪಿಸುಮಾತಿನಲ್ಲಿ "ಇವತ್ತೊಂದು ಸೀಸ ಕೊಡ್ತಿಯಾ?" ಎಂದರು.

ಬೈರ ಕ್ಷಣಾರ್ಧದಲ್ಲಿ ತನಗಾಗಿದ್ದ ನೋವು ಅಪಮಾನಗಳನ್ನೆಲ್ಲ ಮರೆತು ಬೇರೊಂದು ಪ್ರಪಂಚಕ್ಕೆ ಎಚ್ಚತ್ತವನಂತೆ, ಪಿಸುಮಾತಿನಲ್ಲಿಯೆ "ನೋಡ್ತೀನಿ ಏನಾಗ್ತದೋ. ಇವತ್ತು ನಮ್ಮ ಬಿಡಾರಕ್ಕೆ ನೆಂಟರು ಬರ್ತಾರಂತೆ! ಏನಾರಾಗ್ಲಿ, ಬೈಗಿನ ಹೊತ್ತು ಆ ಬಸಿರಿಮರದ ಬುಡದ ಹುಳಿಚೊಪ್ಪಿನ ಮಟ್ಟಾಗೆ ಬಂದು ನೋಡಿ!" ಎಂದನು.

ಸಾಯಂಕಾಲ. ಬಸಿರಿಮರದ ನೆಳಲು ಪೂರ್ವದ ಕಡೆಗೆ ಬೇಗ ಬೇಗನೆ ನೀಳ ವಾಗುತ್ತಿದ್ದಾಗ, ಇನ್ನೂ ದನಗಳು ಕೊಟ್ಟಿಗೆಗೆ ಬರುವ ಮೊದಲು ಸೇರೆಗಾರರು ಬೈರ ಸೂಚಿಸಿದ್ದ ಬಸಿರಿಮರದ ಬುಡದಲ್ಲಿದ್ದ ಹುಳಿಚೊಪ್ಪಿನ ಪೊದೆಗೆ ಹೋಗಿ ನೋಡಿದರು. ಹಸುರು ನೀಲಿಯ ಬಣ್ಣದ ಗಾಜಿನ ಶೀಸೆಯೊಂದೇನೋ ಅಲ್ಲಿ ಮೌನವಾಗಿ ನಿಂತಿತ್ತು. ಆದರೆ ಅದರಲ್ಲಿ ಕಳ್ಳು ಇರಲಿಲ್ಲ. ಸೆಟ್ಟರು ಬೈರನ ಮೇಲೆ ಮುನಿದುಕೊಂಡು "ಇರಲಿ, ನನ್ನ ಕೈಲೇನಾಗ್ತದೆ ಕಾಂಬ!" ಎಂದು ಕೊಂಡು ಮನೆಗೆ ಬಂದರು.

ಸ್ವಲ್ಪ ಹೊತ್ತಿನಮೇಲೆ ಬೈರ ಸಿದ್ದರಿಬ್ಬರೂ ಆ ದಿನ ಕೆಲಸಕ್ಕೆ ಹೋಗಿದ್ದ ಇತರ ಆಳುಗಳೊಡನೆ 'ಪಡಿ' ಇಸುಕೊಳ್ಳಲು ಮನೆಗೆ ಬಂದರು. ('ಮನೆ' ಎಂದರೆ ಗೌಡರ ನಿವಾಸ. ಉಳಿದವರೆಲ್ಲರ ನಿವಾಸಗಳಿಗೆ 'ಬಿಡಾರ' 'ಗುಡಿ' ಎಂದು ಹೆಸರು.)

ಸೇರೆಗಾರರು ಎಲ್ಲರಿಗೂ ಪಡಿಕೊಟ್ಟು, ಗೌಡರ ಅಪ್ಪಣೆಯ ಪ್ರಕಾರ, ಬೈರ ಸಿದ್ದರಿಗೆ ಕೊಡಲಿಲ್ಲ. ಅವರಿಬ್ಬರೂ ನಾನಾ ಪ್ರಕಾರವಾಗಿ ಬೇಡಿಕೊಂಡರು.

"ಹೀಂಗೆ ಮಾಡಿದ್ರೆ ಹೇಂಗ್ರೋ? ಅದಕ್ಕೆ (ತನ್ನ ಹೆಂಡತಿ ಸೇಸಿಗೆ) ಜಡ ಬಂದು ಬಿದ್ದುಕೊಂಡದೆ. ಗಂಜಿಮಾಡಿ ಹಾಕಾಕೆ ಅಕ್ಕಿಕಾಳಿಲ್ಲ ಗುಡೀಲಿ" ಎಂದನು ಬೈರ.

"ಗೌಡರ್ನೇ ಕೇಳ್ಕೊಂಡು ಬನ್ನಿ. ಹೊಟ್ಟೇಗಿಲ್ದೆ ಮಲ್ಗಾನೇನು ರಾತ್ರಿ" ಎಂದನು ಸಿದ್ದ.

"ಗೌಡರು ಮನೆಯಲ್ಲಿ ಇಲ್ಲವೋ." ಎಂದರು ಸೇರೆಗಾರರು.

ಅಷ್ಟು ಹೊತ್ತಿಗೆ ಒಳಗಿನಿಂದ ಜಗಲಿಗೆ ಬಂದ ಪುಟ್ಟಮ್ಮನನ್ನು ಕುರಿತು ಬೈರ ಅಹವಾಲು ಹೇಳಿಕೊಂಡನು.

ಪುಟ್ಟಮ್ಮ "ಸೇರೆಗಾರ್ರೇ, ಹೋಗಲಿ ಬಿಡಿ. ಇವತ್ತಿಗೆ ಕೊಟ್ಟು ಬಿಡಿ. ಪಾಪದವರು!" ಎಂದಳು.

ಸೇರೆಗಾರರು ಬೆಳಗ್ಗೆ ನೇಗಿಲು ಮುರಿದುದನ್ನೂ ಎತ್ತಿನಕಾಲು ಗಾಯ ಗೊಂಡುದನ್ನೂ ಹೇಳಿ, ಚಂದ್ರಯ್ಯಗೌಡರ ಕಟ್ಟಪ್ಪಣೆಯನ್ನೂ ತಿಳಿಸಲು ಪುಟ್ಟಮ್ಮ "ಹಾದೇನ್ರೋ, ಇಂಥ ಅನ್ಯಾಯ ಮಾಡೋದೆ?" ಎಂದು ಕೇಳಿದಳು.

ಕೆಳಗೆ ನಡೆಯುತ್ತಿದ್ದ ಈ ವಾದವಿವಾದಗಳನ್ನೆಲ್ಲ ಉಪ್ಪರಿಗೆಯ ಮೇಲೆ ಓದುತ್ತ ಕುಳಿತಿದ್ದ ಹೂವಯ್ಯ ಆಲಿಸಿ, ಅಲ್ಲಿಯೆ ಕೋವಿ ಉಜ್ಜುತ್ತಿದ್ದ ಪುಟ್ಟಣ್ಣನನ್ನು ಕರೆದು, ಬೈರ ಸಿದ್ದರಿಗೆ ಕೂಲಿಕೊಟ್ಟು ಕಳುಹಿಸುವಂತೆ ಹೇಳಿದನು. ಅವನು ಕೆಳಗಿಳಿದು ಬಂದು ಸೇರೆಗಾರರಿಗೆ ಕೂಲಿಕೊಡುವಂತೆ ಹೇಳಿದನು. ಸೇರೆ ಗಾರರು ಒಪ್ಪಲಿಲ್ಲ. ಬಹುಶಃ ಬೈರ ಶೀಸೆಗೆ ಕಳ್ಳು ತುಂಬಿ ಇಟ್ಟಿದ್ದರೆ ಸೆಟ್ಟರು ಅಷ್ಟೊಂದು ಮುಷ್ಕರದಿಂದ ಚಂದ್ರಯ್ಯಗೌಡರ ಆಜ್ಞೆಯನ್ನು ಪರಿಪಾಲಿಸಲು ಪ್ರಯತ್ನಿಸುತ್ತಿರಲಿಲ್ಲವೆಂದು ತೋರುತ್ತದೆ!

ಸೇರೆಗಾರರು ಕೂಲಿಕೊಡಲು ಒಪ್ಪದಿರಲು ಪುಟ್ಟಣ್ಣ ತಾನೇ ಕೊಡುತ್ತೇನೆಂದು ಮುಂದುವರಿದನು. ಸೆಟ್ಟರಿಗೆ ಅಭಿಮಾನ ಭಂಗವಾದಂತಾಗಿ ಅವನನ್ನು ಅಡ್ಡ ಗಟ್ಟಿ "ನೀವು ಕೊಡಕೂಡದು. ಗೌಡರು ಹೇಳಿದ್ದಾರೆ!" ಎಂದು ನಿಂತರು.

"ಅಲ್ಲರೀ, ಹೂವೇಗೌಡ್ರು ರಾಮೇಗೌಡ್ರು, ಎತ್ತಿನ ಕಾಲಿಗೆ ಗಾಯ ಮಾಡಿ ನೇಗಿಲು ಮುರಿದರೆ ಇವರಿಗ್ಯಾಕೆ ಪಡಿ ಕೊಡಬಾರದು?"

"ನನಗೆ ಗೊತ್ತಿಲ್ಲ. ಗೌಡರು ಹೇಳಿದ್ದಾರೆ!"

"ನನಗೆ 'ಕೂಲಿ ಕೊಡು' ಅಂತಾ ಹೇಳಿದ್ದೂ ಗೌಡ್ರೇ!"

"ಯಾವ ಗೌಡರು?"

"ಯಾವ ಗೌಡ್ರಾದ್ರೇನು? ಹೂವೇಗೌಡ್ರು!"

"ಯಜಮಾನರು ಚಂದ್ರೇಗೌಡರು, ಹೂವೇಗೌಡರಲ್ಲ!"

ಪುಟ್ಟಣ್ಣ ಅಪ್ರತಿಭನಾಗಿ ನಿಂತನು. ಯಾರೊಬ್ಬರೂ ಮಾತಾಡದೆ ಒಂದೆರಡು ಕ್ಷಣಗಳು ನಿಶ್ಶಬ್ದವಾಗಿತ್ತು. ಅಷ್ಟರಲ್ಲಿ ಏಣಿಯ ಮೆಟ್ಟಿಲು ದಡದಡನೆ ಸದ್ದಾಯಿತು. ಎಲ್ಲರೂ ಆ ಕಡೆಗೆ ತಿರುಗಿ ನೋಡಿದರು. ಓದುತ್ತಿದ್ದ ಗ್ರಂಥವನ್ನು ಕೈಯಲ್ಲಿ ಹಿಡಿದು ಸರೋಷಭಂಗಿಯಿಂದ ಹೂವಯ್ಯ ವೇಗವಾಗಿ ನಡೆದುಬಂದು "ಪುಟ್ಟಣ್ಣಾ, ಅಲ್ಲಿಂದೇಳು!" ಎಂದು ಭೀಷಣಧ್ವನಿಯಿಂದ ನುಡಿದನು. ಅವನ ಕಣ್ಣು ಕಿಡಿಕಿಡಿಯಾಗಿದ್ದುದು ಆ ಬೈಗುಗಪ್ಪಿನಲ್ಲಿಯೂ ಕೂಡ ಎಲ್ಲರಿಗೂ ಗೊತ್ತಾಗುವಂತಿತ್ತು. ಪುಟ್ಟಣ್ಣ ದೂರ ಸರಿದು ನಿಂತನು. ಸೇರೆಗಾರರೂ ಬತ್ತದ ಕಲಬಿಯ ಮೇಲಿದ್ದ ತಮ್ಮ ಕೈಯನ್ನು ಎಳೆದುಕೊಂಡು ಹಿಂಜರಿದರು. ಸದಾ ಸೌಮ್ಯನಾಗಿಯೂ ಪ್ರಸನ್ನವದನನಾಗಿಯೂ ಇರುತ್ತಿದ್ದ ಅಣ್ಣಯ್ಯನ ಆ ಉಗ್ರಾವತಾರವನ್ನು ಕಂಡು ಪುಟ್ಟಮ್ಮನಿಗೂ ಕೂಡ ದಿಗಿಲಾಯಿತು.

"ಸೇರೆಗಾರ್ರೇ, ಅವರಿಬ್ಬರಿಗೂ 'ಪಡಿ' ಕೊಡಿ" ಎಂದು ಹೂವಯ್ಯ ಗರ್ಜಿಸಿದ ಕೂಡಲೆ ಸೆಟ್ಟರ ಎದೆ ಧಿಗಿಲ್ಲೆಂದಿತು. ಆದರೂ ಮತ್ತೇನನ್ನೋ ಹೇಳಲೆಂದು ಪ್ರಯತ್ನಿಸುತ್ತಿದ್ದರು.

ಹೂವಯ್ಯ ಮತ್ತಷ್ಟು ರೇಗಿ ಎರಡು ಹೆಜ್ಜೆ ಮುಂಬರಿದು ಪುನಃ ಗರ್ಜಿಸಿದನು: "ನೀವೇನೂ ಹೇಳುವುದು ಬೇಡ! ಒಳ್ಳೆಯ ಮಾತಿನಲ್ಲಿ ಪಡಿ ಕೊಡುತ್ತೀರೋ ಇಲ್ಲವೋ?"

ಆ ಭೀಷ್ಮ ವ್ಯಕ್ತಿತ್ವದ ಮುಂದೆ ಸೇರೆಗಾರರು ಕುಗ್ಗಿಹೋಗಿ ಒಂದಿನಿತೂ ತಡಮಾಡದೆ ಸುಮ್ಮನೆ ಪಡಿ ಅಳೆದುಕೊಟ್ಟರು. ಆಮೇಲೆ 'ಬಾಯಿಗೂ' ಕೊಟ್ಟರು. (ಬಾಯಿಗೆ ಕೊಡುವುದೆಂದರೆ ಎಲೆಯಡಕೆ ಹೊಗೆಸೊಪ್ಪುಗಳನ್ನು ಕೊಡುವುದು ಎಂದರ್ಥ. ಮಲೆನಾಡುಗಳಲ್ಲಿ ಜೀತದಾಳುಗಳಿಗೆ ಪ್ರತಿದಿನವೂ ಸಾಯಂಕಾಲ ಪಡಿ ಕೊಡುವಾಗ ನಾಲ್ಕೈದು ಅಡಕೆಗಳನ್ನೂ ಸ್ವಲ್ಪ ಹೊಗೆ ಸೊಪ್ಪನ್ನೂ ಕೊಡುವ ಪದ್ಧತಿ.)

ಹೂವಯ್ಯ ಸರಕ್ಕನೆ ಹಿಂತಿರುಗಿ ಏಣಿ ಮೆಟ್ಟಲುಗಳನ್ನು ದಡದಡನೆ ಹತ್ತಿ ಉಪ್ಪರಿಗೆಗೆ ಹೋದನು.

ಕಂಬಳಿಯಲ್ಲಿ ಪಡಿಯ ಬತ್ತವನ್ನು ಸುತ್ತಿ ಬೆನ್ನಿನ ಮೇಲೆ ಹಾಕಿಕೊಂಡು ಬೈರ ಹೆಬ್ಬಾಗಿಲು ದಾಟಿದನು. ಸೇರೆಗಾರರು ಅವನ ಹಿಂದೆ ಹೋಗಿ "ಅಲ್ಲವೋ, ನಿನಗೆ ಬತ್ತ ಕೊಡಬಾರದು ಅಂತ ಅಲ್ಲಾ! ಕಳ್ಳು ಇಡುತ್ತೀನಿ ಅಂದ ಗೆಣೆಯ ಮೋಸ ಮಾಡಿಬಿಟ್ಟೆಯಲ್ಲಾ" ಎಂದು ಮೆಲ್ಲನೆ ಗುಸುಗುಟ್ಟಿದರು.

"ಆಗ್ಲೇ ಕಳ್ಳು ಸೀಸಕ್ಕೆ ಹುಯ್ದಿಟ್ಟಿದ್ದೆ!" ಎಂದು ಬೈರ ಬಾಯ್ದೆರೆದು ನಿಂತನು.

"ಸುಳ್ಳು ಬೇರೆ ಹೇಳುತ್ತೀಯಲ್ಲಾ! ನಾನಾಗಲೆ ಹೋಗಿ ನೋಡಿದೆ. ಖಾಲಿ ಸೀಸ ಇದ್ದಿದಲ್ಲಾ."

"ಇಲ್ಲ ಅಂತೀನಿ. ದೇವ್ರಾಣೆಗೂ ಕಳ್ಳು ಇಟ್ಟಿದ್ದೆ! ಹಾಂಗಾರೇನಾಗ್ಬೇಕು?"

ಇಬ್ಬರೂ ಮಾತಾಡುತ್ತಿದ್ದಂತೆಯೆ ಮುಚ್ಚಂಜೆಯ ಮಬ್ಬಿನಲ್ಲಿ, ಕಳ್ಳು ಕುಡಿಯುವ ದೈನಂದಿನ ಕಾರ್ಯಕ್ರಮವನ್ನು ಪೂರೈಸಿಕೊಂಡು, ಚಂದ್ರಯ್ಯ ಗೌಡರು ಹಳೆಪೈಕದ ತಿಮ್ಮನೊಡನೆ ಎದುರಾಗಿ ಬಂದರು.

"ಯಾರೋ ಅದೂ?" ಎಂದರು.

ಗೌಡರ ಧ್ವನಿಯಲ್ಲಿ ಮದ್ಯದ ರಭಸವೂ ರಸವೂ ಮಿಳಿತವಾಗಿದ್ದುವು. ಧ್ವನಿಯೂ ಅವರ ಮನಸ್ಸಿನಂತೆಯೆ ಕಳ್ಳಿನಲ್ಲಿ ತೇಲುವಂತಿತ್ತು.

ಬೈರ ಭಯದಿಂದ ಕ್ಷೀಣಸ್ವರನಾಗಿ "ನಾನಯ್ಯ" ಎಂದನು.

ಸಮೀಪಗತರಾದ ಗೌಡರು ಅವನ ಬೆನ್ನಿನ ಮೇಲಿದ್ದ ಕಂಬಳಿಯ ಗಂಟನ್ನು ನೋಡಿ "ಏನೋ ಅದೂ?" ಎಂದರು.

"ಬತ್ತ!"

"ಭತ್ತ! ಭತ್ತ!! ನಿಮ್ಮಪ್ಪನ್ಮನೇ ಬತ್ತ!!! ಯಾರೋ ನಿನಗೆ ಬತ್ತ ಕೊಟ್ಟೋರು?" ಎಂದು ಗದರಿದ ಗೌಡರು ಸೇರೆಗಾರರನ್ನು ನೋಡಿ "ನಾ ಹೇಳಲಿಲ್ಲೇನ್ರೀ ಬತ್ತ ಕೊಡಬೇಡೀ ಅಂತಾ! ಯಾಕೆ ಕೊಟ್ರಿ ನನ್ನ ಮಾತು ಮೀರಿ?"

ಸೇರೆಗಾರರು ನಡೆದುದನ್ನೆಲ್ಲ ಸಂಕ್ಷೇಪವಾಗಿ ಹೇಳಿಬಿಟ್ಟರು. ಮದ್ಯಪಾನದಿಂದ ಆಗಲೇ ರಭಸವಾಗಿದ್ದ ಗೌಡರ ಪ್ರಕೃತಿ ರಾಕ್ಷಸವಾಯಿತು.

"ಯಾವನೋ ನಾ ಹೇಳಿದ್ದಕ್ಕೆ ಪ್ರತಿಯಾಗಿ ಹೇಳ್ದವನು? ಯಾರ ಮನೆಯೋ ಇದು. ಯಾರಪ್ಪನ್ಮನೆ ಗಂಟೋ. ಅಲ್ಲಿಟ್ಟು ಹೋಗು ಆ ಬತ್ತಾನ!... ಇಡ್ತೀಯೋ ಇಲ್ಲೋ!" ಎಂದು ಕೂಗುತ್ತ ಗೌಡರು ಓಡಿಹೋಗಿ ಗಾಡಿಯ ನೊಗದಲ್ಲಿದ್ದ ಕೊರಳ ಗೂಟವನ್ನು ತುಡುಕಿ ಎಳೆದರು.

ಅವರು ಹಿಂತಿರುಗುವುದರೊಳಗಾಗಿ ಬೈರ ತನ್ನ ಕಂಬಳಿಯಲ್ಲಿ ಸುತ್ತಿದ್ದ ಬತ್ತದ ಗಂಟನ್ನು ಅಲ್ಲಿ ಬಿಸಾಟು, ಒಂದೇ ಉಸುರಿನಲ್ಲಿ, ಬಿಡಾರದ ಕಡೆಗೆ ಓಡಿ ಬಿಟ್ಟನು. ಇದನ್ನೆಲ್ಲ ನೋಡುತ್ತ ಅವಿತು ನಿಂತಿದ್ದ ಸಿದ್ದನೂ ಬೇರೆ ದಾರಿಯಲ್ಲಿ ಬೈರನಿಗಿಂತಲೂ ಹೆಚ್ಚು ಪ್ರಶಾಂತನೂ ಶ್ರೀಮಂತನೂ ಆಗಿ ಬಿಡಾರಕ್ಕೆ ಜುಣುಗಿದನು.

ಗದ್ದಲವನ್ನು ಕೇಳಿ ಅಲ್ಲಿಗೆ ಬಂದಿದ್ದ ನಾಯಿಗಳೂ ಮನುಷ್ಯರ ವರ್ತನೆಯನ್ನು ಕಂಡು ಆಶ್ಚರ್ಯಪಡುತ್ತಿವೆಯೋ ಎಂಬಂತೆ ಕಕ್ಕಾಬಿಕ್ಕಿಯಾಗಿ ನೋಡುತ್ತಿದ್ದುವು.

ಹೊರ ಅಂಗಳದಲ್ಲಿ ಆ ದೃಶ್ಯವಾಗುತ್ತಿದ್ದಾಗ ಉಪ್ಪರಿಗೆಯ ಮೇಲೆ ಬೇರೊಂದು ದೃಶ್ಯ ನಡೆಯುತ್ತಿತ್ತು.

ಹೂವಯ್ಯ ರಾಮಯ್ಯ ವಾಸು ಪುಟ್ಟಣ್ಣ ನಾಲ್ವರೂ ಕಿಟಕಿಯಿಂದ ಎಲ್ಲವನ್ನೂ ನೋಡುತ್ತಿದ್ದರು. ಗೌಡರು ಗಾಡಿಯ ನೊಗದ ಕೊರಳ ಗೂಟವನ್ನು ಎಳೆದು ಕೊಳ್ಳಲು ಹೋದೊಡನೆಯೆ, ಬೈರನ ಮೇಲಣ ಕನಿಕರದಿಂದಲೂ ತಮ್ಮ ತಪ್ಪಿಗೆ ಇತರರು ನೋಯಬೇಕಾಯಿತಲ್ಲಾ ಎಂಬ ಪಶ್ಚಾತ್ತಾಪದಿಂದಲೂ ಹೂವಯ್ಯ ಚಿಕ್ಕಯ್ಯನನ್ನು ತಡೆದು ಬೈರನಿಗೆ ನೆರವಾಗಲು ಮನಸ್ಸುಮಾಡಿ ಹೊರಟನು. ರಾಮಯ್ಯ ಅವನ ಕೈಯನ್ನು ಬಲವಾಗಿ ಹಿಡಿದು "ಬೇಡ. ಅಣ್ಣಯ್ಯ; ಈಗ ಹೋಗೋದು ಖಂಡಿತ ಬೇಡ. ಸಮಯ ಸರಿಯಾಗಿಲ್ಲ. ಅವರು ಈಗ ತಾನೇ ಕಳ್ಳುಗೊತ್ತಿನಿಂದ ಬಂದಿದಾರೆ. ಅವರ ಬುದ್ಧಿ ಅವರ ಕೈಲಿಲ್ಲ!" ಎಂದು ನಿಲ್ಲಿಸಿದನು. ಅಷ್ಟರಲ್ಲಿ ಬೈರ ಪರಾರಿಯಾದುದರಿಂದ ಹೂವಯ್ಯ ಚಿಕ್ಕಯ್ಯನನ್ನು ಸಂಧಿಸುವ ಸಾಹಸಕ್ಕೆ ಹೋಗಲಿಲ್ಲ.

## ೨೪
## ಶೂದ್ರಸಂಘದ ಮಹಾಸಭೆಯಲ್ಲಿ!

ರಾಮಯ್ಯ ಹೂವಯ್ಯನನ್ನು ತಡೆದುದರಲ್ಲಿ ವಿವೇಕವಿತ್ತು. ಮದ್ಯಪಾನ ದಿಂದಲೂ ಕೋಪೋದ್ರೇಕದಿಂದಲೂ ಮೈಮರೆತ ವ್ಯಕ್ತಿ ಸಾತ್ವಿಕ ವಚನಗಳಿಗೆ ಲಕ್ಷಕೊಡುವುದು ದುಷ್ಕರವೆಂಬುದೇನೋ ಸತ್ಯ. ಆದರೂ ಹೂವಯ್ಯ ಕೆಳ ಗಿಳಿದು ಹೋಗಿದ್ದರೆ ಚಂದ್ರಯ್ಯಗೌಡರು ರಾಮಯ್ಯನ ಊಹೆಯಂತೆ ವರ್ತಿಸು ತ್ತಿರಲಿಲ್ಲ. ಕಾರಣವೇನೆಂದರೆ, ವಯಸ್ಸಿನಲ್ಲಿ ಅವರು ಹೂವಯ್ಯನಿಗಿಂತ ಹಿರಿಯರಾಗಿದ್ದರೂ ಮನಸ್ಸಿನಲ್ಲಿ ಬಹಳ ಪಾಲು ಕಿರಿಯರಾಗಿದ್ದರು. ಅಲ್ಲದೆ ಹೂವಯ್ಯನ ಪಕ್ಕದಲ್ಲಿ ಇತರ ಎಲ್ಲ ಬಲಗಳನ್ನೂ ನುಂಗಿ ನೊಣೆಯುವ ನೀತಿ ಬಲವಿತ್ತು. ಚಂದ್ರಯ್ಯಗೌಡರು ಕೆಲವು ಸಾರಿ ಕ್ರೂರವಾಗಿ ಅನಾಗರಿಕವಾಗಿ ವರ್ತಿಸುತ್ತಿದ್ದರೂ ತಮಗಿಂತಲೂ ಉತ್ತಮವಾದುದನ್ನು ಕಂಡಾಗ ಅಥವಾ ಇದೆ ಎಂದು ಭಾವಿಸಿದಾಗ ಅವರಲ್ಲಿ ಒಂದು ತೆರನಾದ ಆಧ್ಯಾತ್ಮಿಕ ಭಯವೂ ಗೌರವವೂ ತಲೆದೋರುತ್ತಿದ್ದುವು. ಅವರ ಹೃದಯದಲ್ಲಿ ದುಷ್ಟ ವಾಸನೆ ಗಳನ್ನೂ ಪ್ರಲೋಭನಗಳನ್ನೂ ಜಯಿಸುವ ಶಕ್ತಿಯಿಲ್ಲದಿದ್ದರೂ ಮನಸ್ಸಿನಲ್ಲಿ ಸೌಜನ್ಯ ಪ್ರಿಯತೆಯಿತ್ತು. ಆ ಸೌಜನ್ಯ ಪ್ರಿಯತೆಯ ಪ್ರಭಾವದಿಂದಲೆ ಅವರು

ಕೆಲವು ವರ್ಷಗಳ ಹಿಂದೆ ಮದ್ಯಪಾನವನ್ನು ಬಿಟ್ಟುಬಿಡುತ್ತೇನೆಂದು ದೇವರಾಣೆ ಹಾಕಿಕೊಂಡು ಒಡಂಬಡಿಕೆಗೆ ರುಜುಹಾಕಿದ್ದರು. ಅದರ ಸಹಾಯದಿಂದಲೆ ವೆಂಕಪ್ಪಯ್ಯ ಜೋಯಿಸರೂ ಅವರ ಗೌರವಕ್ಕೆ ಪರಮಪಾತ್ರರಾಗಿದ್ದುದು.

ಆ ಕಥೆಯ ಸಂಕ್ಷೇಪ ನಿರೂಪಣೆಯಿಂದ ಚಂದ್ರಯ್ಯಗೌಡರ ವ್ಯಕ್ತಿತ್ವದ ಪರಿಚಯಕ್ಕೆ ಹೆಚ್ಚು ಸಹಾಯವಾಗುವುದರಲ್ಲಿ ಸಂದೇಹವಿಲ್ಲ.

ಆ ನಾಡಿನ ಒಕ್ಕಲಿಗರಲ್ಲಿ ಬಹು ಪುರಾತನದಿಂದಲೂ ಹೆಂಡ, ಕಳ್ಳು ಮೊದಲಾದ ಮಾದಕ ಪದಾರ್ಥಗಳನ್ನು ಸೇವಿಸುವುದು ಅತಿ ಸಾಮಾನ್ಯವಾದ ರೂಢಿಯಾಗಿತ್ತು. ಈಗಲೂ ಅದು ಸಂಪೂರ್ಣವಾಗಿ ತೊಲಗಿಲ್ಲ. ಮೊದಲು ಎಲ್ಲೆಲ್ಲಿಯೂ ಬಹಿರಂಗವಾಗಿ ನಡೆಯುತ್ತಿದ್ದುದು ಈಗ ಅಲ್ಲಲ್ಲಿ ಅಂತರಂಗವಾಗಿ ಸಾಗುತ್ತಿದೆ. ಅಂತೂ ಮದ್ಯಪಾನ ಮಾಡುವುದು ನಾಚಿಗೆಗೇಡಿನ ಕೆಲಸವೆಂದೇನೊ ಎಲ್ಲರಿಗೂ ಗೊತ್ತಾಗಿದೆ. ಕಾರಣವೇನೆಂದರೆ, ಸುಮಾರು ಮೂವತ್ತು ಮೂವತ್ತೈದು ವರ್ಷಗಳ ಹಿಂದೆ ನಾಡಿನ ಒಕ್ಕಲಿಗ ಮುಖಂಡರಲ್ಲಿ ಒಂದು ಚಳವಳಿಯೆದ್ದಿತು. ಆ ಚಳವಳಿಗೆ ಕ್ರೈಸ್ತಪಾದ್ರಿಗಳ ಉಪದೇಶವೂ, ಮೈಸೂರು ಸರಕಾರದ 'ಮಲೆನಾಡು ಅಭಿವೃದ್ಧಿ ಇಲಾಖೆ'ಯ ಬೋಧನೆಯೂ, ಬ್ರಿಟಿಷ್ ಆಳ್ವಿಕೆಯಿಂದುಂಟಾದ ನಾಗರಿಕತೆಯ ಆಗಮನವೂ, ಕಾಫಿ, ವೈನು, ವಿಸ್ಕಿ ಇತ್ಯಾದಿಯಾದ ವಿದೇಶೀಯ ಪಾನೀಯಗಳ ಆಮದೂ, ಸನ್ನಿವೇಶ ಪ್ರಭಾವದಿಂದ ಜನರಲ್ಲಿ ಸ್ವಾಭಾವಿಕವಾಗಿಯೆ ಉತ್ಪನ್ನವಾದ ಜಾಗ್ರತಿಯೂ ಕಾರಣಗಳಾದುವೆಂದು ಊಹಿಸಬಹುದು.

ಆಗ ಮಲೆನಾಡಿನಲ್ಲಿ ನಂಟರ ಮನೆಗೆ ಹೋದರೆ ಮೊದಲು ಕಾಲು ತೊಳೆಯಲು ನೀರು ಕೊಡುತ್ತಿದ್ದರು. ಆಮೇಲೆ ತಾಂಬೂಲ ನಿವೇದನವಾಗುತ್ತಿತ್ತು. ತರುವಾಯ ಹುರಿಮಾಂಸ ಅಥವಾ ಉಪ್ಪುಮೀನು ಅಥವಾ ಉಪ್ಪಿನಕಾಯಿ — ಇತ್ಯಾದಿ ಯಾವುದಾದರೊಂದು ವ್ಯಂಜನದ ಸಮೇತವಾಗಿ, ಬಾಯಿ ಲೊಚಗುಟ್ಟುವಷ್ಟರ ಮಟ್ಟಿಗೆ ಹುಳಿ ಹುಳಿಯಾದ ಹೆಂಡ ಕಳ್ಳುಗಳನ್ನು ಆದರಪೂರ್ವಕವಾಗಿ ವಿನಿಯೋಗಿಸಿ ಅತಿಥಿಸತ್ಕಾರ ಮಾಡುತ್ತಿದ್ದರು. ಈಗಿನವರು ಕಾಫಿ ಕೊಡುವುದನ್ನೂ ಕುಡಿಯುವುದನ್ನೂ ಹೇಗೆ ಸುಧಾರಣೆಯ ಚಿಹ್ನೆಯೆಂದೂ ನಾಗರಿಕತೆಯ ಗೌರವವೆಂದೂ ಭಾವಿಸುತ್ತಿರುವರೊ ಹಾಗೆಯೆ ಆಗಿನವರು ಹೆಂಡ ಕಳ್ಳುಗಳನ್ನು ಸನ್ಮಾನಿಸುತ್ತಿದ್ದರು.

ಆ ಪ್ರಾಂತದಲ್ಲಿ ಮೊಟ್ಟಮೊದಲು ಲೋವರ್ ಸೆಕೆಂಡರಿ ಪರೀಕ್ಷೆಯಲ್ಲಿ ಉತ್ತೀರ್ಣರಾಗಿ ಜನರಿಂದ ವಿದ್ವನ್ಮಣಿಯೆಂದು ಸಂಭಾವಿತರಾದ ಮಹನೀಯರೊಬ್ಬರು ಪಾದ್ರಿಗಳ ಮತ್ತು ಕೆಂಪು ಮುಖದ ರೆವರೆಂಡುಗಳ ಪ್ರಭಾವಕ್ಕೂ ಮೆಚ್ಚಿಗೆಗೂ ಪಾತ್ರರಾಗಿ, ತಮ್ಮ ಮತದ ಆಚಾರ ಅನಾಚಾರಗಳೆರಡನ್ನೂ

ಒಂದೇ ಉಸಿರಿನಲ್ಲಿ ನಿಂದಿಸಿ ಭಾಷಣ ಮಾಡತೊಡಗಿದರಂತೆ; ತಾವು ಕ್ರಿಸ್ತ ಮತಕ್ಕೆ ಸೇರುವುದಾಗಿಯೂ ಸಾರಿದರಂತೆ. ಪಾದ್ರಿಗಳ ಮತ್ತು ರೆವರೆಂಡ್ ದೊರೆಗಳ ಮೆಚ್ಚುಗೆಗಾಗಿ ತಮ್ಮ ಬಂಧುಗಳಲ್ಲಿಯೂ ಕೆಲವರನ್ನು ಕ್ರಿಸ್ತಮತಕ್ಕೆ ಸೇರಿಸಿ, ತಾವು ಮಾತ್ರ 'ಸೇರುತ್ತೇನೆ, ಸೇರುತ್ತೇನೆ' ಎಂದು ಹೇಳುತ್ತಿದ್ದು, ಕಡೆಗೂ ಭಾರತೀಯ ಕ್ರೈಸ್ತ ಜನಸಂಖ್ಯೆಗೆ ಸ್ವಲ್ಪವೂ ಲಾಭವಾಗದ ರೀತಿಯಲ್ಲಿ ಕೈಲಾಸವಾಸಿಯೆ ಆಗಿಬಿಟ್ಟರಂತೆ!

ಅವರಿಂದ ಪ್ರಚೋದಿತವಾಗಿದ್ದ ಸಂಘದ ಒಂದು ಸಭೆಯಲ್ಲಿ ಮದ್ಯಪಾನ ವನ್ನು ಬಿಡುವ ವಿಚಾರವಾಗಿ ಭಾಷಣಗಳಾದುವು. ಕೆಲವರಂತೂ ಚೆನ್ನಾಗಿ ಹೊಟ್ಟೆಗೂ ತಲೆಗೂ ಸೇಂದಿ ತುಂಬಿಕೊಂಡು ಬಂದಿದ್ದುದರಿಂದ ತೊದಲಿ ತೊದಲಿ ತೊನೆದು ತೂಗಿ 'ಉಪಣ್ಯಾಸ' ಮಾಡಿದರು! ಅವರಲ್ಲಿ ಮಹಾ ರಾಜೇಶ್ರೀ ಕಾನೂರು ಚಂದ್ರಯ್ಯಗೌಡರೂ ಒಬ್ಬರಾಗಿದ್ದರು.

ಅಧ್ಯಕ್ಷರಾದಿಯಾಗಿ ಸಕಲ ಸದಸ್ಯರ ಬಾಯಿ ಮೂಗುಗಳಿಂದಲೂ ಹೆಂಡ ಕಳ್ಳು ಸಾರಾಯಿಗಳ ಕಂಪು ಹೊಮ್ಮಿ, ಸಭಾಸ್ಥಳದ ವಾಯುಮಂಡಲವನ್ನೆಲ್ಲ ತೀವಿ, ಮದ್ಯಪಾನ ನಿರೋಧದ ಮಸೂದೆಯನ್ನು ಪರಿಹಾಸ್ಯಮಾಡುವಂತಿತ್ತು! ಬಾಳೂರು ಸಿಂಗೇಗೌಡರು 'ಉಪಣ್ಯಾಸ' ಮುಗಿಸಿ, ಬಾಯಲ್ಲಿ ಜೊಲ್ಲು ಸುರಿಸುತ್ತ, ಬಹಳ ಶ್ರಮದಿಂದ ತಮ್ಮ ಪೀಠವನ್ನು ತಡವಿ ತಡವಿ ಹುಡುಕಿ, ಕುಳಿತುಕೊಂಡ ಮೇಲೆ ಕಾನೂರು ಚಂದ್ರಯ್ಯಗೌಡರು ಮಾತಾಡಲು ಎದ್ದರು. ಸಭೆಯಲ್ಲಿ ಯಾರಾದರೂ ಮಾತನಾಡಲು ಎದ್ದರಾಗಲಿ ಅಥವಾ ಮಾತು ಮುಗಿಸಿ ಕುಳಿತರಾಗಲಿ, ಉತ್ತೇಜಕವಾಗಿಯೂ ಗೌರವ ಸೂಚಕವಾಗಿಯೂ ಕೈ ಚಪ್ಪಾಳೆ ಹೊಡೆಯುವುದು ಸಭ್ಯತೆಯ ಕುರುಹು ಎಂಬುದನ್ನು ಹೊಸದಾಗಿ ಕಲಿತಿದ್ದ ಆ ಸಂಘದ ಸದಸ್ಯರು, ಚಂದ್ರಯ್ಯಗೌಡರು ಎದ್ದುನಿಂತ ಕೂಡಲೆ, ಕುಡಿದ ಮತ್ತಿನಲ್ಲಿ, ಯದ್ವಾತದ್ವಾ ಕರತಾಡನ ಮಾಡಿದರು. ಅದೂ ಉತ್ತೇಜನ ಸೂಚಕವೊ ಪರಿಹಾಸ್ಯ ಸೂಚಕವೊ ಗೊತ್ತಾಗುವಂತಿರಲಿಲ್ಲ. ಅಂತೂ ಚೆನ್ನಾಗಿ ಕುಡಿದು ಹಣ್ಣುಹಣ್ಣಾಗಿದ್ದ ಚಂದ್ರಯ್ಯಗೌಡರು ಇದ್ದಕ್ಕಿದ್ದಹಾಗೆ ಆ ಕೈಚಪ್ಪಾಳೆಯ ಸಿಡಿಲುದನಿಗೆ ಕುಮುಟಿಬಿದ್ದರು. ಬಯಲು ಸೀಮೆಗೆ ರುಚಿಸುವಂತೆ ಹೇಳು ವುದಾದರೆ, ಹಠಾತ್ತಾಗಿ ಚಕಿತರಾದರು. (ಚಕಿತರಾದುದಕ್ಕಿಂತಲೂ ಸ್ವಲ್ಪ ಹೆಚ್ಚಾಗಿಯೇ ಆದರೆಂದು ಹೇಳಬೇಕು!) ಇನ್ನೇನು ತೂರಾಡಿ ನೆಲಕ್ಕೆ ಬೀಳಬೇಕು! ಅಷ್ಟರಲ್ಲಿ ಪಕ್ಕದಲ್ಲಿ ಕುಳಿತಿದ್ದ ಸೀತೆಮನೆ ಸಿಂಗಪ್ಪಗೌಡರು ಕೈಕೊಟ್ಟು ಹಿಡಿದು ನಿಲ್ಲಿಸಿದರು. ಚಂದ್ರಯ್ಯಗೌಡರು ಏನೇನನ್ನು ಹೇಳಬೇಕೆಂದು ಮನಸ್ಸು ಮಾಡಿದ್ದರೋ ಅದೆಲ್ಲ ಕೈಚಪ್ಪಾಳೆಯ ದೆಸೆಯಿಂದ ಮಿದುಳಿನಲ್ಲಿ ಕದಡಿಹೋಗಿತ್ತು.

ಅವರ ಕಣ್ಣಿಗೆ ಸಭಾಂಗಣವೆಲ್ಲ ಅಸ್ಫೂಲವಾದಂತಾಗಿ ಸ್ವಪ್ನದಲ್ಲಿಯೊ ಎಂಬಂತೆ ತೇಲಾಡತೊಡಗಿದರು. ಆದರೂ ನೆರೆದವರ ಅಜ್ಞಾನಾಂಧಕಾರವನ್ನು ಪರಿಹರಿಸಿ, ಅವರಿಗೆ ಬೆಳಕು ತೋರುವ ಸಲುವಾಗಿ 'ಉಫಣ್ಯಾಸ' ಮಾಡಿಯೇ ಬಿಟ್ಟರು. ಆದರೆ ಅವರು ಮಾತಾಡಿದುದು ಮದ್ಯಪಾನದ ಪರವಾಗಿಯೋ ವಿರೋಧವಾಗಿಯೋ ಒಬ್ಬರಿಗೂ ಗೊತ್ತಾಗಲಿಲ್ಲ.

"ಎಲ್ಲರಿಗೂ ಕೈಮುಗೀತೀನಿ... ನಾನು ಎಲ್ದು ಮಾತಾಡಿ ಕೂತ್ಕೋ ಬೇಕು ಅಂತ ಎದ್ದು ನಿಂತೀನಿ..."

ಗೌಡರಿಗೆ ಮುಂದೆ ಏನು ಹೇಳಬೇಕೋ ಗೊತ್ತಾಗಲಿಲ್ಲ. ತಲೆಯಲ್ಲಿ ಹೆಂಡವು ಮದ್ಯಪಾನ ನಿರೋಧಕ್ಕೆ ವಿರೋಧವಾಗಿ ಚಳವಳಿ ಹೂಡಿತ್ತು.

ಪಕ್ಕದಲ್ಲಿದ್ದ ಸಿಂಗಪ್ಪಗೌಡರು ಪಿಸುಮಾತಿನಲ್ಲಿ "ಹೆಂಡ ಕುಡಿಯುವುದು ಕೆಟ್ಟದ್ದು" ಎಂದು ಉಪನ್ಯಾಸ ಮಾಡಲು ಸೂಚನೆ ಕೊಟ್ಟರು.

ಆ ಕೊಟ್ಟ ಸೂಚನೆ ತಮಗೆ ಮಾಡಿದ ಉಪದೇಶವೆಂದು ಕೆರಳಿ ಚಂದ್ರಯ್ಯ ಗೌಡರು ಮೆಳ್ಳೆಗಣ್ಣು ಮಾಡಿಕೊಂಡು, ದುರು ದುರು ನೋಡುತ್ತ, ಸಿಂಗಪ್ಪಗೌಡರ ಕಡೆ ತಿರುಗಿ, ಗಟ್ಟಿಯಾಗಿ "ಯಾರೋ... ಯಾರೋ ಹೇಳ್ದೋರು ನಿನಗೆ?" ಎಂದು ಕೂಗಿದರು.

"ನಿಮಗಲ್ಲ ಹೇಳಿದ್ದು. ಅವರಿಗೆ ಹೇಳಿ ಅಂತ ಹೇಳ್ದೆ ಅಷ್ಟೇ!" ಎಂದು ಮೆಲ್ಲಗೆ ನುಡಿದು ಸಿಂಗಪ್ಪಗೌಡರು ಸಮಾಧಾನ ಮಾಡಿದರು.

ಚಂದ್ರಯ್ಯಗೌಡರು ಮತ್ತೆ ಪ್ರಾರಂಭಿಸಿದರು:

"ಹೆಂಡ ಕುಡಿಯೋದು... ಬಾ'ಳ ಕೆಟ್ಟದ್ದು... ಬಾ'ಳ ಕೆಟ್ಟದ್ದು... ಕಾಫಿ ಕುಡಿಯೋದೂ... ಅದಕ್ಕಿಂತಾ ಕೆಟ್ಟದ್ದು!... ಹೆಂಡ ಬಿಟ್ಟರೆ.. ಮುಂದೇನು ಗತಿ?... ಅಂತಾ ಕೇಳ್ತೀನಿ ನಾನು!... ನಮ್ಮ ಅಪ್ಪ ಕುಡ್ದಿದ್ದಾ... ನಮ್ಮಜ್ಜ ಕುಡ್ದಿದ್ದಾ... ನಾವು ಕುಡೀತೀವಿ... ಮಳೆಗಾಲದಾಗೆ ಕುಡಿದ್ರೆ ... ಒಳ್ಳೆ ಕಾವು ಬತ್ತದೆ!... ಸಕ್ತಿ... ಸಕ್ತಿ ಬತ್ತದೆ ... ಹೆಂಡ ಕುಡಿಯೋದು ಬಹಳ ಕೆಟ್ಟದ್ದು...."

ಭಾಷಣದ ನಡುವೆ ಚಂದ್ರಯ್ಯಗೌಡರು ಕುಸಿದುಬಿದ್ದರು....

ಮರುದಿನ ಒಂದು 'ಮಾನಪತ್ರ'ವಾಯಿತು. ಅದರಲ್ಲಿ ಇನ್ನು ಮುಂದೆ ಮದ್ಯಪಾನ ಮಾಡುವುದಿಲ್ಲ ಎಂದು ತಿರುಪತಿ, ಕಾಶಿ, ರಾಮೇಶ್ವರ, ಧರ್ಮಸ್ಥಳಗಳ ದೇವರುಗಳ ಆಣೆ ಹಾಕಿತ್ತು. ಕೆಲವರೆಲ್ಲ ಒಪ್ಪಿ ರುಜು ಹಾಕಿದರು. ಚಂದ್ರಯ್ಯ ಗೌಡರೂ ರುಜು ಹಾಕಿದರು.

ಬಾಳೂರು ಸಿಂಗೇಗೌಡರು "ನಾನು ದೇವರಾಣೆ ಹಾಕಿ ರುಜು ಹಾಕಲಾರೆ.

ನನಗೆ ಹೆಂಡ ಕಳ್ಳು ಬಿಡ್ತೀನಿ ಅಂತ ನಂಬಿಕೇನೂ ಇಲ್ಲ, ಇಷ್ಟಾನೂ ಇಲ್ಲ" ಎಂದುಬಿಟ್ಟರು!

ಚಂದ್ರಯ್ಯಗೌಡರು "ಹಾಂಗಾದ್ರೆ ನೀವು ಮೀಟಿಂಗಿಗೆ ಬಂದಿದ್ಯಾಕೆ?" ಎಂದರು.

"ನೀವೆಲ್ಲ ಕರೆದ್ರಿ, ನಾನು ಬಂದೆ. ಹೋಗು ಅಂದ್ರೆ ಹೋಗ್ತೀನಿ" ಎಂದು ಬಾಳೂರು ಸಿಂಗೇಗೌಡರು ಹೊರಟೇಹೋದರು.

ಅವರಂತೂ ಸಾಯುವವರೆಗೂ ಕುಡಿಯುವುದನ್ನು ಬಿಡಲಿಲ್ಲ. ಮಾನ ಪತ್ರಕ್ಕೆ ರುಜು ಹಾಕಿದವರಲ್ಲಿ ಯಾರೋ ಒಂದಿಬ್ಬರು ಮಾತ್ರ ಮದ್ಯಪಾನವನ್ನು ಸಂಪೂರ್ಣವಾಗಿ ವರ್ಜಿಸಿದರಂತೆ; ಉಳಿದವರು ಅದುವರೆಗೆ ಬಹಿರಂಗವಾಗಿ ದ್ದುದನ್ನು ಅಂತರಂಗವನ್ನಾಗಿ ಮಾಡಿಕೊಂಡರು.

ಈ ಶೂದ್ರ ಸಂಘದ ಮಹಾಸಭೆಯಲ್ಲಿ ನಡೆದ ಕಥೆಯ ಪೂರ್ವೋತ್ತರವನ್ನೆಲ್ಲ ಕೇಳಿ, ಅಗ್ರಹಾರದ ಜೋಯಿಸರು ವೆಂಕಪ್ಪಯ್ಯನವರು ಮೊದಲಾಗಿ ವೇದ ಮೂರ್ತಿಗಳಾದ ಬ್ರಾಹ್ಮಣ ನಾಗರಿಕರೆಲ್ಲ ಹಾರಿ ಹಾರಿ ಬಿದ್ದು ನಕ್ಕು "ಹುಟ್ಟು ಗುಣ ಸುಟ್ಟರೂ ಹೋದೀತೆ? ತೆನ್ನಾಲಿ ರಾಮಕೃಷ್ಣ ಕರಿಯ ನಾಯಿಯನ್ನು ತೊಳೆದು ಬಿಳಿಯ ನಾಯಿಯನ್ನಾಗಿ ಮಾಡಿದ ಹಾಗೆ!" ಎಂದರಂತೆ.

ಮಾನಪತ್ರಕ್ಕೆ ರುಜು ಹಾಕಿದ ಮೇಲೆ ಚಂದ್ರಯ್ಯಗೌಡರಿಗೆ ಪ್ರಾಣಕ್ಕೆ ಬಂದಿತು. ಒಂದು ದಿನವನ್ನೇನೋ ಬಹಳ ಕಷ್ಟಪಟ್ಟು ಕಳೆದರು. ಆ ದಿನ ಅವರ ಮನಃ ಸ್ಥಿತಿ ಅವರ್ಣನೀಯವಾಗಿತ್ತು. ಪ್ರಪಂಚವೂ ಜೀವನವೂ ಮನುಷ್ಯರೂ ಎಲ್ಲರೂ ಶತ್ರುಗಳಂತೆ ತೋರಿ ಕಂಡಕಂಡವರೊಡನೆ ಕದನವಾಡಿದರು. ಊಟಕ್ಕೆ ಕುಳಿತಾಗ ಸಾರಿಗೆ ಹುಳಿ ಹೆಚ್ಚು, ಮೊಸರು ನೀರಾಗಿದೆ, ಪಲ್ಯಕ್ಕೆ ಉಪ್ಪೇ ಇಲ್ಲ, ಎಂದು ಮೊದಲಾಗಿ ಹೆಂಗಸರನ್ನೆಲ್ಲ ಬೈದರು. ಆಳುಗಳೆಲ್ಲರೂ ಒಡೆಯರ ಸ್ಥಿತಿಯನ್ನು ಕಂಡು ನಡುಗಹತ್ತಿದರು.

ಸಂಜೆಯ ಹೊತ್ತಿಗೆ ಎಂದಿನಂತೆ ಹಳೆಪೈಕದ ತಿಮ್ಮ ಕಳ್ಳು ತಂದು ಗೌಡರನ್ನು ಆಹ್ವಾನಿಸಿದನು. ಹೋರಾಡಿ ದಣಿದಿದ್ದ ಗೌಡರ ಮನಸ್ಸು ಸಂತೋಷದಿಂದ ಸೋತುಹೋಯಿತು. ಆದರೆ ತಿರುಪತಿ, ಕಾಶಿ, ರಾಮೇಶ್ವರ ಮೊದಲಾದ ಪುಣ್ಯಸ್ಥಳಗಳ ದೇವರುಗಳ ಮೇಲೆ ಆಣೆ ಹಾಕಿದ್ದು ನೆನಪಿಗೆ ಬರಲು ಭೀತರಾದರು. ಅವರಿಗೆ ದೆವ್ವ ಭೂತ ದೇವತೆಗಳೆಂಬ ಅಪ್ರಾಪಂಚಿಕವಾದ ಪೋಲೀಸಿನಲ್ಲಿ ಅತಿ ಭೀತಿಯಿದ್ದುದರಿಂದ ಬಹು ಪ್ರಯತ್ನದಿಂದ, ಮಹಾ ಭೀಷ್ಮಸಾಹಸದಿಂದ ತಿಮ್ಮನನ್ನು ಕಳುಹಿಸಿಬಿಟ್ಟರು. ಅವನಂತೂ ಗೌಡರ ಸಂಯಮಕ್ಕೆ ಬೆಪ್ಪು ಬೆರಗಾಗಿ ಮೆಲ್ಲನೆ ಹಿಂತಿರುಗಿದನು. ಆದರೂ ಮನಸ್ಸಿನಲ್ಲಿ "ಕಳ್ಳುದೇವರಿಗಿಂತ

ಸುಳ್ಳುದೇವರೇ? ಇಂದಲ್ಲ ನಾಳೆ!" ಎಂದುಕೊಂಡು ಧೈರ್ಯ ತಾಳಿದನು.

ಮರುದಿನ ತಿಮ್ಮನ ಭವಿಷ್ಯತ್ತು ನಿಜವಾಯಿತು. "ಯಾರಿಗೂ ಹೇಳ ಬೇಡ" ಎಂದು ಅವನೊಡನೆ ಹೇಳಿ, ಗೌಡರು ಯಾವಾಗಲೂ ಕುಡಿಯುತ್ತಿದ್ದು ದಕ್ಕಿಂತಲೂ ಸ್ವಲ್ಪ ಹೆಚ್ಚಾಗಿಯೆ ಕುಡಿದುಬಿಟ್ಟು, ಮನೆಗೆ ಬಂದು, ಯಾವ ಯಾವ ದೇವತೆಗಳ ಹೆಸರಿನಲ್ಲಿ ಆಣೆ ಹಾಕಿದ್ದರೋ ಆಯಾ ದೇವತೆಗಳಿಗೆ 'ತಪ್ಪುಗಾಣಿಕೆ' ಕಟ್ಟಿ ಸ್ವಸ್ಥಚಿತ್ತರಾದರು!

ಇದಾದ ಮೂರು ನಾಲ್ಕು ದಿನಗಳಲ್ಲಿ ಚಂದ್ರಯ್ಯಗೌಡರು ಮುತ್ತಳ್ಳಿಗೆ ಹೋಗಬೇಕಾಗಿ ಬಂದಿತು. ಅಲ್ಲಿ ಬೈಗಿನ ಹೊತ್ತು ಶ್ಯಾಮಯ್ಯಗೌಡರು ಮಾನಪತ್ರದ ಪ್ರಸ್ತಾಪವನ್ನೆತ್ತಿ "ನೀವೇ ಸಿಪಾಯಿ ಕಣ್ರೀ! ಅಂತೂ ಕುಡಿ ಯೋದು ವಜಾ ಮಾಡೇಬಿಟ್ರಿ?" ಎಂದರು.

"ಮತ್ತೇನು ಮಾಡಾದು ಹೇಳಿ? ನಾಲ್ಕುಜನ ಮಾಡಿದ ಹಾಗೆ ನಾವು ಮಾಡಬೇಕಪ್ಪಾ! ಅಲ್ಲ ಅಂದ್ರೆ ಆಗ್ತದೇನು?" ಎಂದು ಚಂದ್ರಯ್ಯಗೌಡರು ಗೋಡೆಯ ಕಡೆಗೆ ನೋಡಿದರು.

ಸ್ವಲ್ಪ ಹೊತ್ತಾದಮೇಲೆ ಶ್ಯಾಮಯ್ಯಗೌಡರು "ನಾನು ಸ್ವಲ್ಪ ಹೊರಗೆ ಹೋಗಿ ಬರ್‍ತೀನಿ" ಎಂದು ತಂಬಿಗೆ ತೆಗೆದುಕೊಂಡು ಹೋದರು.

ಚಂದ್ರಯ್ಯಗೌಡರಿಗೆ ಸಂಶಯವಾಯಿತು. ಅವರೂ ಮೆಲ್ಲಗೆ ಎದ್ದು ಬಾವನ ಹಿಂದೆಯೆ ಹೋದರು. ಚಿರಪರಿಚಿತವಾಗಿದ್ದ ಕಳ್ಳುಗೊತ್ತಿನ ಬಳಿಗೆ ಹೋಗಿ ನೋಡಲು ಯಾರೂ ಕಾಣಿಸಲಿಲ್ಲ. ಕತ್ತಲೆ ಕವಿದಿತ್ತು. ಇನ್ನೇನು ಹತಾಶರಾಗಿ ಹಿಂತಿರುಗಬೇಕು; ಯಾರೋ ದೂರದ ಪೊದೆಗಳ ಮಧ್ಯೆ ಮೆಲ್ಲಗೆ ಕೆಮ್ಮಿ ದಂತಾಯಿತು! ಚಂದ್ರಯ್ಯಗೌಡರು ಆ ಕಡೆಗೆ ಸಾಗಿದರು. ಕತ್ತಲೆಯಲ್ಲಿ ಕಣ್ಣಿಗೆ ಯಾರೂ ಕಾಣಿಸದಿದ್ದರೂ ಗುಸು ಗುಸು ಮಾತಾಡುತ್ತಿದ್ದುದು ಕೇಳಿಬಂತು. ಚಂದ್ರಯ್ಯಗೌಡರು ಇನ್ನೂ ಹತ್ತಿರ ಹೋಗಿ, ಬಯಲಿನಲ್ಲಿದ್ದ ಹಿತ್ತಾಳೆಯ ಚೊಂಬೊಂದು ಕತ್ತಲೆಯಲ್ಲಿ ಕಿರುನಗೆ ಬೀರುತ್ತಿದ್ದುದನ್ನು ಕಂಡು 'ಯಾರದು?' ಎಂದರು.

ಪೊದೆಯ ನಡುವೆ ರಹಸ್ಯ ಧ್ವನಿಯೊಂದು "ಯಾರು ಚಂದ್ರಯ್ಯ ಬಾವ ನೇನು?" ಎಂದಿತು.

"ಯಾರು? ಶಾಮಯ್ಯ ಬಾವನೇ? ಇಲ್ಲೇನು ಮಾಡ್ತೀರಿ?" ಎಂದ ಚಂದ್ರಯ್ಯಗೌಡರ ಮೂಗಿಗೆ ಸರ್ವವೂ ವೇದ್ಯವಾಗಿ ಹೋಯಿತು.

"ಏನಿಲ್ಲ!... ನೀವು 'ಬಿಟ್ಟಿದ್ದೀನಿ' ಅಂದ್ರಿ. ಅದಕ್ಕೆ ನಾನೊಬ್ಬನೆ ಬಂದೆ!"

"ಒಳ್ಳೇ ಗಟ್ಟಿಗರು ನೀವು!... ನೀವೂ ರುಜುಹಾಕಲಿಲ್ಲೇನು ಮಾನಪತ್ರಕ್ಕೆ?"

“ ರುಜು ಹಾಕಿದ್ದ ತಪ್ಪಿಗೇ ಮತ್ತೆ, ಮೊನ್ನೆ ಮೂವತ್ತು ನಾಲ್ವತ್ತು ರೂಪಾಯಿ ತಪ್ಪುಗಾಣಿಕೆ ಕಟ್ಟಬೇಕಾಯ್ತು ! ”

“ ನಾನೂ ಅವತ್ತೇ ಕಟ್ಟಿಬಿಟ್ಟೆ ! ”

“ ಹಾಂಗಾದ್ರೆ ಬನ್ನಿ ! ”

ಇಬ್ಬರೂ ಸೇರಿ ಇದ್ದ ಕಳ್ಳನ್ನೆಲ್ಲ ಪೂರೈಸಿ ಹಿಂತಿರುಗಿದರು.

ನಾಡನ್ನೆಲ್ಲ ಕತ್ತಲೆ ಆವರಿಸಿತ್ತು, ಅರಣ್ಯ ಪರ್ವತಗಳೆಲ್ಲ ಕಳ್ಳು ಕುಡಿದು ಪ್ರಜ್ಞೆತಪ್ಪಿ ಬಿದ್ದಂತೆ ತೋರುತ್ತಿದ್ದುವು. ಮೇಲುಗಡೆ ಅನಂತಾಕಾಶದಲ್ಲಿ ಅಗಣಿತ ನಕ್ಷತ್ರಗಳು “ ಕುಡೀರಪ್ಪ ! ಚಿಂತೆಯಿಲ್ಲ ! ಇನ್ನ್ಯಾರು ನೋಡ್ತಾರೆ ! ” ಎಂದು ಕಣ್ಣು ಮಿಟುಕಿಸುತ್ತಿದ್ದುವು. ದೇವರಿಗೆ ಸಿಟ್ಟು ಬರುತ್ತದೆಯೇ— ಜಗತ್ತೇ ಸಹಾನುಭೂತಿ ತೋರಿಸುವಾಗ !

* * * * *

ಬೈರ ಬಿಡಾರಕ್ಕೆ ಪರಾರಿಯಾದ ಮೇಲೆ ಚಂದ್ರಯ್ಯಗೌಡರು ಒಳಗೆ ಬಂದು ಜಗಲಿಯಲ್ಲಿ ದೀಪಕ್ಕೆ ದೂರವಾಗಿ ಕುಳಿತರು. ಮನೆಯೆಲ್ಲ ಹೆದರಿದಂತೆ ನಿಶ್ಶಬ್ದವಾಗಿತ್ತು.

ಸ್ವಲ್ಪ ಹೊತ್ತಾದ ಬಳಿಕ ಏಣಿಮೆಟ್ಟಲು ಸದ್ದಾಯಿತು. ಗೌಡರು ತಿರುಗಿ ನೋಡಿದರು. ಹೂವಯ್ಯ ಕೆಳಗಿಳಿದು ಬಂದು ಹೆಬ್ಬಾಗಿಲು ದಾಟಿ ಹೊರಗೆ ಹೋದನು. ಶೌಚಕಾರ್ಯಕ್ಕೆ ಹೋಗುತ್ತಿರಬಹುದೆಂದು ಊಹಿಸಿ ಗೌಡರು ಸುಮ್ಮನಾದರು. ಐದು ನಿಮಿಷ ಕಳೆಯಿತು; ಹತ್ತು ನಿಮಿಷವಾಯಿತು. ಹೂವಯ್ಯ ಹಿಂದೆ ಬರಲಿಲ್ಲ. ಕಡೆಗೆ ಹದಿನೈದು ಇಪ್ಪತ್ತು ನಿಮಿಷಗಳೂ ಕಳೆದುವು. ಗೌಡರು ಮೆಲ್ಲಗೆ ಎದ್ದು ಸ್ವಲ್ಪಮಟ್ಟಿಗೆ ತತ್ತರಿಸುತ್ತಲೆ ಹೆಬ್ಬಾಗಿಲು ದಾಟಿ ನೋಡಿದರು. ಶುಕ್ಲಪಕ್ಷದ ಅಪೂರ್ಣಚಂದ್ರನ ಸೌಮ್ಯ ಕಾಂತಿ ತೋಟದ ಹಸುರಿನ ಮೇಲೆ ಮೌನವಾಗಿ ಮಲಗಿತ್ತು. ಬೆಳ್ದಿಂಗಳಲ್ಲಿ ಕಣದ ಮತ್ತು ಹೊರ ಅಂಗಳದ ನೆಲ ಬಿಳಿಬೂದಿ ಚೆಲ್ಲಿದ್ದಂತೆ ಕಾಣುತ್ತಿತ್ತು. ನೋಡುತ್ತಿದ್ದ ಹಾಗೆಯೆ ಗೌಡರ ಕಣ್ಣಿಗೆ ದೂರದ ಒಂದು ಬಾಳೆಯ ಪೊದೆಯ ಬುಡದಲ್ಲಿ ಯಾರೋ ನಿಂತಿದ್ದಂತೆ ಕಾಣಿಸಿತು. ಹೂವಯ್ಯ ನಿರಬೇಕೆಂದು ಆಲೋಚಿಸುತ್ತಿದ್ದ ಹಾಗೆಯೆ ಆಕೃತಿ ಮರೆಯಾಗಿ, ಬಾಳೆಯ ಸರಬಲು (ನೇತಾಡುವ ಒಣಗು ಎಲೆಗಳು) ಮಾತ್ರ ಕಾಣಿಸಿತು. ಕಳ್ಳು ಕುಡಿದಿದ್ದ ಗೌಡರ ಭ್ರಾಂತದೃಷ್ಟಿಗೆ ದಿಗ್ಭ್ರಾಂತಿಯಾದಂತಾಗಿ ಭಯದಿಂದ ಮತ್ತೆ ನೋಡಿದರು. ಹೌದು; ಅದೇ ಆಕೃತಿ ! ಬಾಳೆಯ ಪೊದೆಯ ಬುಡದಲ್ಲಿ ಮತ್ತೆ ನಿಂತಿತ್ತು ! ಆದರೆ ಮೊದಲಿಗಿಂತಲೂ ದೊಡ್ಡದಾಗಿ ತೋರಿತು !

“ ಯಾರದು ? ಹೂವಯ್ಯನೇನೋ ? ” ಎಂದರು.

ಯಾರೂ ಮಾತಾಡಲಿಲ್ಲ. ಪ್ರತ್ಯುತ್ತರವಾಗಿ ಆಕೃತಿ ಇನ್ನೂ ಹಿರಿದಾಯಿತು. ಗೌಡರು "ಅಯ್ಯೋ ಭೂತರಾಯ!" ಎಂದು ಕೂಗಿಕೊಂಡು ಕುಸಿದು ಬಿದ್ದರು.

ಬಾಳೆಯ ಪೊದೆಯ ಬುಡದಲ್ಲಿದ್ದವನು ಹೂವಯ್ಯನಾಗಿದ್ದ ಪಕ್ಷದಲ್ಲಿ ಗೌಡರ ಪ್ರಶ್ನೆಗೆ 'ಓ' ಕೊಳ್ಳುತ್ತಿದ್ದನು. ಆದರೆ ಹೂವಯ್ಯನಲ್ಲಿರಲಿಲ್ಲ.

ಅವನು ಬೈರನು ಬಿಸಾಡಿಹೋಗಿದ್ದ ಬತ್ತದ ಗಂಟನ್ನು ಹೊತ್ತುಕೊಂಡು ಬೇಲರ ಬಿಡಾರಕ್ಕೆ ಹೋಗಿದ್ದನು.

ಮುಟ್ಟದವನು ಬಿಟ್ಟುಹೋಗಿದ್ದ ಕಂಬಳಿಯ ಗಂಟನ್ನು ಹೊತ್ತು ನಡೆದು ಬೇಲರ ಬಿಡಾರವನ್ನು ಸಮಿಸಾಪಿಸುತ್ತಿದ್ದಾಗಲೆ, ಸದ್ದಿಲ್ಲದ ಇರುಳಿನಲ್ಲಿ ಗೋಳಾಟ ಹೃದಯವಿದ್ರಾವಕವಾಗಿ ಕೇಳಿಬಂದು ಹೂವಯ್ಯ ಗಾಬರಿಗೊಂಡವನಾಗಿ ಬೇಗ ಬೇಗನೆ ಕಾಲುಹಾಕಿ ಹೋಗಿ ನೋಡುತ್ತಾನೆ: ಬೈರನು ಉನ್ಮತ್ತನಾಗಿ ತನ್ನ ಹೆಂಡತಿ ಸೇಸಿಯ ಜುಟ್ಟನ್ನು ಹಿಡಿದು ಒನಕೆಯಿಂದ ಬತ್ತ ಕುಟ್ಟುವಂತೆ ಗುದ್ದುತ್ತಿದ್ದಾನೆ! ಅವಳು ಅಳುತ್ತ ಅರಚುತ್ತಿದ್ದಾಳೆ! ಗಂಗಹುಡುಗ ದೂರದಲ್ಲಿ ನಡುಗುತ್ತ ನಿಂತು ಗೋಳಿಡುತ್ತಿದ್ದಾನೆ. ಸಿದ್ದನೇ ಮೊದಲಾದ ಕೇರಿಯವರು ಸುತ್ತಲೂ ನಿಂತು ಬೈರನಿಗೆ ಬುದ್ಧಿಯ ಮಾತುಗಳನ್ನು ಹೇಳುತ್ತಿದ್ದಾರೆ!

ಆ ಗಲಭೆಯಲ್ಲಿ ಹೂವಯ್ಯ ಬಂದುದನ್ನೂ ಕೂಡ ಯಾರೂ ಗಮನಿಸಲಿಲ್ಲ. ಅವನು ಬತ್ತದ ಗಂಟನ್ನು ಕೆಳಗೆ ಹಾಕಿ ಓಡಿ ಬಳಿಗೆ ಹೋಗಿ "ಏ ಬೈರಾ! ಬೈರಾ!" ಎಂದು ಗದರಿಸಿದನು. ಅದುವರೆಗೂ ಯಾರನ್ನೂ ಲೆಕ್ಕಿಸದೆ ಕಾರ್ಯೋನ್ಮುಖನಾಗಿದ್ದ ಬೈರ ಶುಭ್ರವಸನಧಾರಿಯಾದ ಸುಸಂಸ್ಕೃತಮೂರ್ತಿಯನ್ನು ಕಂಡೊಡನೆ ತಟಕ್ಕನೆ ಹಿಂಜರಿದು ನಿಂತನು. ಸೇಸಿ ಓಡಿಬಂದು ಹೂವಯ್ಯನ ಕಾಲಿನ ಬುಡದಲ್ಲಿ ಕೈಮುಗಿದುಕೊಂಡು ಬಿದ್ದು ಗೋಳೋ ಎಂದು ಅಳತೊಡಗಿದಳು. ಅವಳಿಗೆ ತನ್ನ ಭಾಗದ ದೇವರೇ ಅಲ್ಲಿಗೆ ಬಂದಂತಾಗಿತ್ತು.

ಚಂದ್ರಯ್ಯಗೌಡರ ಕೈಯಿಂದ ಪಾರಾಗಿ ತಪ್ಪಿಸಿಕೊಂಡು ಹೋಗಿದ್ದ ಬೈರನ ಮನಸ್ಸು ಕೆಟ್ಟು ಹೋಗಿತ್ತು. ಅದರಲ್ಲಿಯೂ ಕೈಗೆ ಬಂದ ಬತ್ತ ಬಾಯಿಗೆ ಬರಲಿಲ್ಲವಲ್ಲಾ ಎಂದು ಹೊಟ್ಟೆಯುರಿಯುತ್ತಿತ್ತು. ಅಂತೂ ಸಿಟ್ಟಿನಿಂದಲೆ ಬಿಡಾರಕ್ಕೆ ಹೋಗಿ ಚೆನ್ನಾಗಿ ಕಳ್ಳು ಕುಡಿದನು. ಕುಡಿದ ಮತ್ತಿನಲ್ಲಿಯೆ ಊಟಕ್ಕೆ ಬಡಿಸುವಂತೆ ಹೇಳಿದನು. ಸೇಸಿ ಮನೆಯಲ್ಲಿ ಬತ್ತದ ಕಾಳೂ ಇಲ್ಲದಿದ್ದುದರಿಂದ ಅಡಿಗೆ ಮಾಡಲಿಲ್ಲ ಎಂದಳು. ಬೈರ ನೆರೆಮನೆಯಿಂದ ತರಬಾರದಾಗಿತ್ತೆ ಎಂದನು. ಸೇಸಿ ನೆರೆಮನೆಯವರು ಕಣಜ ಕಟ್ಟಿಲ್ಲ ಎಂದಳು. ಹೀಗೆ ಮಾತಿಗೆ ಮಾತಾಗಿ ರೇಗಿದ ಬೈರ ಹೆಂಡತಿಯನ್ನು ಹೊಡೆಯಲು ಪ್ರಾರಂಭಿಸಿದನು.

ಹೂವಯ್ಯ ಬೈರನಿಗೆ ಒಂದೆರಡು ಬುದ್ಧಿಯ ಮಾತು ಹೇಳಿ, ಸೇಸಿಯನ್ನು ಸಮಾಧಾನಪಡಿಸಿ ಅವರೆಲ್ಲರಿಗೂ ಆಶ್ಚರ್ಯವೂ ಆನಂದವೂ ಆಗುವ ರೀತಿಯಲ್ಲಿ ಬತ್ತದ ಗಂಟನ್ನು ಕೊಟ್ಟು, ಚಿಂತಾಮಗ್ನನಾಗಿ ಹಿಂತಿರುಗಿದನು:

ಒಂದು ಸಣ್ಣ ಕಾರಣದಿಂದ ಎಷ್ಟೆಷ್ಟು ವಿಪರೀತ ಕಾರ್ಯಗಳಾಗುತ್ತವೆ? ಅಕಸ್ಮಾತ್ತಾಗಿ ನೇಗಿಲು ಮುರಿದು, ಎತ್ತಿಗೆ ಗಾಯವಾದ ತಪ್ಪಿಗೆ ಈಗಾಗಲೆ ಎಷ್ಟೊಂದು ಗುರುತರ ಘಟನೆಗಳಾಗಿ ಹೋದುವು? ಇದಕ್ಕೆಲ್ಲ ಮನುಷ್ಯನಲ್ಲಿ ರುವ ಅನುದಾರವಾದ ಸಣ್ಣಬುದ್ಧಿಯೆ ಮೂಲಕಾರಣವಲ್ಲವೆ? ಅದನ್ನು ತಿದ್ದುವುದೆಂತು? ತಮ್ಮನು ತಿಳಿಸಿದಂತೆ ಚಿಕ್ಕಯ್ಯನ ಮನಸ್ಸೂ ಹುಚ್ಚು ಹುಚ್ಚಾಗುತ್ತಿದೆ! ಹೊಸ ಹೆಣ್ಣಿನ ದೆಸೆಯೋ ಏನೋ!

ಆಲೋಚಿಸುತ್ತ ಮನೆಯ ಬಳಿಗೆ ಬಂದಾಗ ಮನುಷ್ಯರೋದನ ಕೇಳಿಸಿತು. ಹೂವಯ್ಯ ಹೆಬ್ಬಾಗಿಲಿಂದ ಒಳಗೆ ನುಗ್ಗಿದನು.

ಜಗಲಿಯಲ್ಲಿ ಹಾಸಗೆಯ ಮೇಲೆ ಅರ್ಧ ಪ್ರಜ್ಞಾವಸ್ಥೆಯಲ್ಲಿ ಮಲಗಿದ್ದ ಚಂದ್ರಯ್ಯಗೌಡರ ಸುತ್ತಲೂ ಮನೆಯವರೆಲ್ಲ ಕಿಕ್ಕಿರಿದಿದ್ದರು. ಸುಬ್ಬಮ್ಮ ಗಟ್ಟಿ ಯಾಗಿ ಅಳುತ್ತಿದ್ದಳು. ಸೇರೆಗಾರರು ಭೂತಾದಿ ದೇವತೆಗಳಿಗೆ ಹರಕೆ ಹೇಳಿಕೊಳ್ಳುತ್ತ ಮುಡಿಪು ಕಟ್ಟುತ್ತಿದ್ದರು. ಪುಟ್ಟಣ್ಣ ಗಾಳಿ ಬೀಸುತ್ತಿದ್ದನು. ರಾಮಯ್ಯ ತಂದೆಯ ತಲೆಯ ಬಳಿ ಕುಳಿತು ತಲೆಗೆ ತಣ್ಣೀರು ತಟ್ಟುತ್ತಿದ್ದನು. ಹೂವಯ್ಯ, ಅಂತಹ ಸನ್ನಿವೇಶದಲ್ಲಿ ಎಷ್ಟು ತಿಳಿಯಬಹುದೋ ಅಷ್ಟು ವಿಷಯವನ್ನು ತಿಳಿದುಕೊಂಡು, ಎಲ್ಲರಿಗೂ ಸಮಾಧಾನ ಹೇಳುತ್ತ, ತಾನೂ ಚಿಕ್ಕಯ್ಯನ ಶುಶ್ರೂಷೆಗೆ ತೊಡಗಿದನು.

ಒಂದು ಗಂಟೆಯೊಳಗಾಗಿ ಗೌಡರು ಎದ್ದು ಕುಳಿತು ತಮಗಾದ ಅನುಭವದ ಕಥೆಯನ್ನು ವಿಸ್ತರಿಸಿದರು: "ಭೂತರಾಯನಿಗೆ ಏನೋ 'ಮುಟ್ಟು ಚಿಟ್ಟು' ಆಗಿದೆ! ಹರಕೆ ಮಾಡಬೇಕು. ವೆಂಕಪ್ಪಯ್ಯನವರನ್ನು ಕರೆಸಿ ಶುದ್ಧಿಮಾಡಿಸಿ ಹಣ್ಣು ಕಾಯಿ ಹಾಕಿಸಬೇಕು" ಎಂಬುದು ಅವರ ಸಿದ್ಧಾಂತವಾಗಿತ್ತು.

ಹೂವಯ್ಯ ರಾಮಯ್ಯ ಇಬ್ಬರಿಗೆ ಹೊರತು ಉಳಿದ ಎಲ್ಲರಿಗೂ ಗೌಡರ ಮಾತು ದಿಟವೆಂದು ತೋರಿತು.

"ಮುಟ್ಟಾದವರು ಯಾರಾದರೂ ತೋಟಕ್ಕೆ ಹೋಗಿದ್ದರೋ ಏನೋ" ಎಂದು ಸೇರೆಗಾರರು ಭೂತರಾಯನ ಕೋಪಕ್ಕೆ ಕಾರಣವನ್ನು ಸೂಚಿಸಿದರು.

ಗೌಡರೂ ಅದನ್ನೇ ಸಮರ್ಥಿಸುವಂತೆ "ಈ ಸೂಳೇಮಕ್ಕಳಿಗೆ ಎಷ್ಟಂತಾ ಹೇಳಾದು? ಬಡ್ಕೊಂಡು ಬಡ್ಕೊಂಡು ಸಾಕಾಯ್ತು!" ಎಂದು ಸುಬ್ಬಮ್ಮನ ಕಡೆಗೆ ಕಣ್ಣು ಕೆರಳಿಸಿ ನೋಡಲು, ಸ್ತ್ರೀಸಮುದಾಯವು ಮೆಲ್ಲನೆ ಅಡುಗೆ ಮನೆಯ ಕಡೆಗೆ ತಿರುಗಿತು.

## ೨೫

# ಸೀತೆಯ ಮನಸ್ಸಿಗೆ ಮೊದಲನೆಯ ಸಿಡಿಲು

ಹೂವಯ್ಯ ಮುತ್ತಳ್ಳಿಯಿಂದ ಹೊರಟುಹೋದೊಡನೆ ಸೀತೆಗೆ ಅದುವರೆಗೆ ತನ್ನ ಜೀವನವನ್ನು ತುಂಬಿ ತುಳುಕಾಡುತ್ತಿದ್ದ ಆನಂದವೆ ಮಾಯವಾದಂತಾಗಿ, ಆಕೆಯ ಮನಸ್ಸು ನೀರು ಬತ್ತಿಹೋದ ಕೆರೆಯ ಸುತ್ತಣ ವನಪ್ರದೇಶದಂತೆ ಬಿಕೋ ಎನ್ನುತ್ತಿತ್ತು. ತಾನೂ ಕಾನೂರಿಗೆ ಹೋಗುವುದಾಗಿ ನಂಬಿದ್ದ ಅವಳು ಹಿರಿಯರ ಅಪ್ಪಣೆ ದೊರಕದೆ ಇದ್ದುದಕ್ಕಾಗಿ ನಿರ್ವಿಣ್ಣಳಾಗಿದ್ದಳು. ಹೂವಯ್ಯ ಮೊದಲಾದವರು ಕೂತುಕೊಂಡಿದ್ದ ಕಮಾನು ಗಾಡಿಯೂ ತರುವಾಯ ಎತ್ತುಗಳ ಕೊರಳಿನಲ್ಲಿದ್ದ ಗಂಟೆಯ ಸರಗಳ ನಾದವೂ ಕಣ್ಮರೆ ಕಿವಿಮರೆಯಾದ ಮೇಲೆ ಅವಳು ಕೆಂಧೂಳಿಯ ಹಾದಿಯನ್ನೇ ನೋಡುತ್ತ ಸ್ವಲ್ಪಕಾಲ ವಿಷಣ್ಣಳಾಗಿ ನಿಂತಿದ್ದಳು. ಕಣ್ಣು ಹನಿತುಂಬಿ ರಸ್ತೆ ಮಂಜು ಮಂಜಾಗಲು ಸೆರಗಿನಿಂದ ಕಣ್ಣೊರಸಿಕೊಂಡು ಹಿತ್ತಲುಕಡೆಗೆ ಹೋಗಿ ಅಲ್ಲಿ ಯಾರೂ ಇಲ್ಲದಿದ್ದುದನ್ನು ಕಂಡು, ಹೊಸ್ತಿಲಮೇಲೆ ಕುಳಿತು ಹಗಲುಗನಸು ಕಾಣತೊಡಗಿದಳು.

ಅವಳು ಮೊದಲಿನ ಸೀತೆಯಾಗಿರಲಿಲ್ಲ. ಕೆಲವು ದಿನಗಳ ಹಿಂದೆ ಬರಿಯ ಹಳ್ಳಿಯ ಹುಡುಗಿಯಾಗಿದ್ದವಳು ಇಂದು ಸುಸಂಸ್ಕೃತ ತರಳೆಯಾಗಿದ್ದಳು. ಸ್ಪರ್ಶಮಣಿಯಿಂದ ಕಬ್ಬಿಣ ಚಿನ್ನವಾಗುತ್ತದಂತೆ. ಹೂವಯ್ಯನ ಸಾನ್ನಿಧ್ಯ ಪ್ರಭಾವದಿಂದ ಆಕೆಯಲ್ಲಿದ್ದ ಗ್ರಾಮ್ಯಜೀವನಕ್ಕೆ ಸಹಜವಾಗಿದ್ದ ಹಲಕೆಲವು ಸ್ಥೂಲಾಂಶಗಳು ಸೂಕ್ಷ್ಮವೂ ಶುಭ್ರವೂ ಆಗಿದ್ದುವು. ಉತ್ತಮ ಆಲೋಚನೆ ಗಳು ಆಕೆಯ ಮನೋರಂಗದಲ್ಲಿ ಮೊಳೆತು ನಳನಳಿಸಲು ಪ್ರಾರಂಭವಾಗಿದ್ದುವು. ಆಕೆಯ ಹೃದಯದಲ್ಲಿ ಉತ್ತಮತರ ಭಾವಗಳು, ಹೊಸ ಮಳೆಯ ನೀರು ಬಂದ ಹೊಳೆಯ ತೆರೆಗಳಂತೆ ಜಾಗರಿತವಾಗಿದ್ದುವು. ಹೂವಯ್ಯ ಎಷ್ಟು ಹೊಸ ವಿಷಯಗಳನ್ನು ತಿಳಿಸಿದ್ದನು! ಎಷ್ಟು ಹೊಸ ಭಾವಗಳನ್ನು ನೀಡಿದ್ದನು! ಎಂತೆಂತಹ ಆದರ್ಶನೀಯವಾದ ಪುರಾಣ ಕಥೆಗಳನ್ನು ಹೇಳಿದ್ದನು! ಸೀತಾ ರಾಮರ ಕಥೆ, ನಳ ದಮಯಂತಿಯರ ಕಥೆ, ಹರಿಶ್ಚಂದ್ರ ಚಂದ್ರಮತಿಯರ ಕಥೆ, ಸಾವಿತ್ರಿ ಸತ್ಯವಂತರ ಕಥೆ! ಕಥೆಗಳಂತೂ ಇರಲಿ! ಆತನ ಪ್ರೇಮ ಕೋಮಲ ವಾದ ಸಾನ್ನಿಧ್ಯದ ಪರಿಶುದ್ಧ'ಪ್ರಭಾವ ಮಾತ್ರದಿಂದಲೆ ಆಕೆಯ ಆತ್ಮದಲ್ಲಿ ಒಂದು ಹೊಸ ವಸಂತೋದಯವಾಗಿತ್ತು. ದೇವರ ವಿಚಾರವಾಗಿಯೂ, ದೆವ್ವ ಭೂತ ಗಳ ವಿಚಾರವಾಗಿಯೂ, ಭೂಮಿ ಆಕಾಶಗಳ ವಿಚಾರವಾಗಿಯೂ, ಪೂಜೆ

ಪ್ರಾರ್ಥನೆಗಳ ವಿಚಾರವಾಗಿಯೂ ಆಕೆಯಲ್ಲಿ ಮೊದಲು ಇದ್ದ ಒರಟು ಭಾವಗಳೆಲ್ಲ ವ್ಯತ್ಯಾಸ ಹೊಂದಿದ್ದುವು. ಪುನರ್ಜನ್ಮಧಾರಣೆ ಮಾಡಿದ್ದುವು ಎಂದರೆ ಹೆಚ್ಚು ನಿಜವಾಗುತ್ತದೆ.

ಆಕೆಯ ಹಗಲುಗನಸು ಮೆಲ್ಲಗೆ ಕಣಸಾಗತೊಡಗಿತು. ಆ ಕಣಸಿನಲ್ಲಿ ಭೂತ ಭವಿಷ್ಯದ್ವರ್ತಮಾನಗಳೆಲ್ಲವೂ ಏಕಕಾಲದಲ್ಲಿ ಚಿತ್ರಿತವಾಗಿದ್ದುವು. ಆ ದರ್ಶನದ ಕೇಂದ್ರದಲ್ಲಿ ಒಂದು ಅಲೌಕಿಕ ದೇವಮೂರ್ತಿ ಪ್ರತಿಷ್ಠಿತವಾಗಿತ್ತು. ಇತರ ಚಿತ್ರಗಳೆಲ್ಲ ಆ ಮೂರ್ತಿಯ ಸುತ್ತಲೂ ಹರಡಿದ್ದುವು. ಸೀತೆ ತಾನು ಹೂವಯ್ಯ ಭಾವನಿಗೆ ದಮಯಂತಿಯಾಗುತ್ತೇನೆ; ಚಂದ್ರಮತಿಯಾಗುತ್ತೇನೆ; ಸಾವಿತ್ರಿಯಾಗುತ್ತೇನೆ; ನಿಜವಾಗಿಯೂ ಸೀತೆಯಾಗುತ್ತೇನೆ; ಎಂದು ಮೊದಲಾಗಿ ಸಂಭ್ರಮದಿಂದ ಮನದಲ್ಲಿಯೆ ಹೇಳಿಕೊಂಡಳು. ಮತ್ತೆ ಕೆಲವು ಪ್ರಣಯ ಚಿತ್ರಗಳು ಒಳಗಣ್ಣಿಗೆ ಸುಳಿದುಬಂದು, ಆಕೆಯ ಚೆಂಗೆನ್ನೆಗಳು ನಾಚಿಕೆಯಿಂದ ಕೆಂಪಾದುವು. ಮಾಧುರ್ಯದಿಂದ ಮೈ ಪುಲಕಿತವಾಯಿತು.

"ಅಕ್ಕಯ್ಯಾ, ಸೀ . . . ರೇ . . . ಬಿಚ್ಚಿಹೋಯ್ತು!"

ದಿವಾಸ್ವಪ್ನಸ್ಥಳಾಗಿದ್ದ ಸೀತೆ ತನಗೆ ಸಮೀಪದಲ್ಲಿಯೆ ಸ್ವಲ್ಪ ಹೊತ್ತಿನಿಂದಲೂ ಗೊಂಬೆಯ ಆಟದಲ್ಲಿ ಮಗ್ನಳಾಗಿದ್ದ ಲಕ್ಷ್ಮಿಯನ್ನು ದೃಷ್ಟಿಸಿರಲಿಲ್ಲ. ಲಕ್ಷ್ಮಿಯ ಆಟದ ಮದುವೆಮಂಟಪದಲ್ಲಿ ಧಾರೆಯಾಗುತ್ತಿದ್ದಾಗ ಹೆಣ್ಣುಗೊಂಬೆ ಉರುಳಿ ಬಿದ್ದು, ಅದಕ್ಕೆ ಉಡಿಸಿದ್ದ ಸೀರೆ ಕಳಚಿ ಬಿದ್ದುಹೋಗಿತ್ತು. ಅದನ್ನು ಸರಿಮಾಡಲು ಅವಳೇ ಪ್ರಯತ್ನಿಸಿದಳು. ಆದರೆ ಫಲಕಾರಿಯಾಗದಿರಲು ಕೋಪದಿಂದ ಹೆಣ್ಣುಗೊಂಬೆಯ ದುರವಸ್ಥೆಗೆ ಗಂಡು ಗೊಂಬೆಯೇ ಕಾರಣವೆಂದು ಹೇಗೋ ತರ್ಕಮಾಡಿ, ಗಂಡು ಗೊಂಬೆಯನ್ನು ಎಡಗೈಯಲ್ಲಿ ತುಡುಕಿ ಹಿಡಿದು ನೆಲಕ್ಕೆ ಕುಕ್ಕಿದಳು. ಅದೂ ಸೊಂಟ ಮುರುಕಾಗಿ ಕುಸಿದುಬಿದ್ದಿತು. ಲಕ್ಷ್ಮಿ ಹೊಸ ಅಳಿಯನನ್ನು ದುರವಸ್ಥೆಗೆ ಗುರಿಮಾಡಿ, ಬಲಗೈಲಿದ್ದ ತನ್ನ ಮಗಳ ಶುಶ್ರೂಷೆಗೆ ತೊಡಗಿ, ಅಕ್ಕಯ್ಯನನ್ನೂ ಸಹಾಯಕ್ಕೆ ಕೂಗಿದ್ದಳು.

ಸೀತೆ ತಂಗಿಯ ಕೂಗಿಗೆ ಬೆಚ್ಚಿ, ನಸು ಸಿಟ್ಟಿನಿಂದ "ಏನಾಯ್ತು ನಿನಗೆ? ಚೀರ್ತೀಯಲ್ಲ!" ಎಂದು ಗದರಿಸಿದಳು. ನಿಜವಾಗಿಯೂ ಲಕ್ಷ್ಮಿ ಚೀರಿರಲಿಲ್ಲ.

ಲಕ್ಷ್ಮಿ ನೀಳವಾದ ಕೀಚಲು ದನಿಯಿಂದ "ಸೀರೆ ಬಿಚ್ಚಿಹೋಯ್ತೋ" ಎಂದಳು.

ಆ ದಿನ ಕಾನೂರಿಗೆ ಹೊರಡುವ ಮೊದಲು ಪುಟ್ಟಮ್ಮ ಲಕ್ಷ್ಮಿಗೆ ಒಂದು ಸಣ್ಣ ಸೀರೆಯನ್ನು ಬಹು ಪ್ರಯಾಸದಿಂದ ಬಿಗಿದು ತೊಡಿಸಿದ್ದಳು. ನೋಡಿದರೆ, ಸೀರೆಯೇ ಲಕ್ಷ್ಮಿಯನ್ನು ಆಕ್ರಮಿಸಿ ಸುತ್ತಿಕೊಂಡಿದ್ದಂತೆ ತೋರುತಿತ್ತೇ ಹೊರತು ಲಕ್ಷ್ಮಿ ಸೀರೆಯನ್ನು ಉಟ್ಟುಕೊಂಡಿದ್ದಂತೆ ತೋರುತ್ತಿರಲಿಲ್ಲ. ಅಷ್ಟು ಜೋಲು

ಜೋಲಾಗಿ ವಿಲಕ್ಷಣವಾಗಿತ್ತು. ಆದರೆ ಲಕ್ಷ್ಮಿಗೆ ಮಾತ್ರ ಅದು ಸೌಂದರ್ಯದ ಪರಮಾವಧಿಯಾಗಿತ್ತು. ಕಂಡಕಂಡವರಿಗೆಲ್ಲ ತನ್ನ ವಿನೂತನ ಅವಸ್ಥೆಯನ್ನು ಹೆಮ್ಮೆಯಿಂದ ತೋರಿ ತೋರಿ ಮೆರೆದಿದ್ದಳು. ಆ ಸೀರೆಯೇ ಬಿಚ್ಚಿಹೋಯಿತೋ ಏನೋ ಎಂದು ಸೀತೆ ನೋಡಿದಳು. ಅದು ಸರಿಯಾಗಿದ್ದುದನ್ನು ಕಂಡು "ಏನಾಗಿದೆಯೇ? ಸರಿಯಾಗಿದೆಯಲ್ಲ!" ಎಂದಳು.

"ಇಲ್ಲ, ಬಿಚ್ಚಿಹೋಗ್ಯಾದೆ. ಇಲ್ನೋಡು" ಎಂದು ಲಕ್ಷ್ಮಿ ಗೊಂಬೆಯನ್ನು ತೋರಿದಳು.

ಆಟದ ಮದುವೆಯ ಮಂಟಪವನ್ನು ಕಂಡ ಸೀತೆ "ಈಗಲೆ ಇವಳಿಗೆ ಮದುವೆಯ ಸಂಭ್ರಮ!... ಇಲ್ಲಿ ತಗೊಂಡು ಬಾ ನಿನ್ನ ಮದುವಳಿಗೀನ" ಎಂದಳು.

ತರುವಾಯ ಸೀತೆ ತನ್ನ ತಂಗಿಯ ಗೊಂಬೆಮಗಳ ಸೀರೆಯನ್ನು ಮಾತ್ರವಲ್ಲದೆ ಅವಳ ಗೊಂಬೆಯಳಿಯನ ಸೊಂಟವನ್ನೂ ಸರಿಮಾಡಿಕೊಡಬೇಕಾಯಿತು.

ಅಷ್ಟರಲ್ಲಿ ಕಾರ್ಗಾಳಿ ಬೀಸಿ, ಕರಿಮೋಡಗಳು ಕಿಕ್ಕಿರಿದು, ಸಿಡಿಲ್ಮಿಂಚುಗಳು ಜೋರಾಗಿ, ಮಳೆಯೂ ಆಲಿಕಲ್ಲುಗಳೊಡನೆ ಬೀಳತೊಡಗಿತು. ಅಕ್ಕತಂಗಿಯರಿಬ್ಬರೂ ಬಿಳಿಯ ಮಲ್ಲಿಗೆ ಮೊಗ್ಗುಗಳಂತೆ ಪಳಪಳನೆ ಬಿದ್ದು ಚಿಮ್ಮಿ ಒಳನುಗ್ಗಿದ 'ಆನೆಕಲ್ಲು'ಗಳನ್ನು ಹೆರಕಿ ಹೆರಕಿ ಬಾಯಿಗೆ ಹಾಕಿಕೊಂಡರು. ದೇವತೆಗಳು ಸುರಿದ ಮುತ್ತುಗಳನ್ನು ತಿಂದರೆ ಮುತ್ತೈದೆಯರಿಗೆ ಒಳ್ಳೆಯದಂತೆ!

ಲಕ್ಷ್ಮಿಯಂತೂ ಹೊರಗಡೆ ರಾಸಿರಾಸಿಯಾಗಿ ಬೀಳುತ್ತಿದ್ದ 'ಆನೆಕಲ್ಲು'ಗಳನ್ನು ನೋಡಿ ಬಾಯಿಕಿಸಿದು ಹಲ್ಲುಗಳನ್ನೆಲ್ಲಾ ಪ್ರದರ್ಶಿಸುತ್ತ "ಅಲ್ನೋಡೇ ಅಕ್ಕಯ್ಯಾ!" ಎಂದು ಕುಣಿದಾಡಿದಳು.

ಗಾಳಿ, ಸಿಡಿಲು, ಮಿಂಚು, ಮಳೆಗಳ ದೆಸೆಯಿಂದ ಯಾರೊಬ್ಬರೂ ಹೊರಗೆ ಹೋಗಿ ಆಲಿಕಲ್ಲುಗಳನ್ನು ಹೆರಕಲು ಸಾಹಸಮಾಡಲಿಲ್ಲ. ಜೊತೆಗೆ ಅಮ್ಮನ ಹೆದರಿಕೆ ಬೇರೆಯಿತ್ತು.

"ಬರೀ ಆನೆಕಲ್ಲಗಳೇ ಬೀಳಬಾರದೆ? ಈ ಗಾಳಿ ಮಳೆ ಸಿಡಿಲು ಮಿಂಚು ಯಾಕೋ ಏನೋ?" ಎನ್ನುತ್ತ ಸೀತೆ ಭೂಮ್ಯಾಕಾಶಗಳನ್ನು ಒಂದುಮಾಡುತ್ತ ಭೋರ್ಗರೆಯುತ್ತಿದ್ದ ಮುಂಗಾರ್ಮಳೆಯನ್ನು ದೃಷ್ಟಿಸಿದಳು. ಬಹುಶಃ ಅದೇ ಸಮಯದಲ್ಲಿದ್ದಿರಬೇಕು ಹೂವಯ್ಯ ಕಳ್ಳಂಗಡಿಯಲ್ಲಿ ಭಾವಸಮಾಧಿಯಲ್ಲಿದ್ದುದು.!

"ಅಲ್ಲೇನ್ಮಾಡ್ತೀರೇ? ಸಿಡ್ಲುಮಿಂಚು ಬರ್ತದೆ! ಒಳಗೆ ಬನ್ರೇ!" ಎಂದು ಗೌರಮ್ಮನವರು ಕರೆಯಲು ಇಬ್ಬರೂ ಒಳಗೆ ಹೋದರು.

ಮಳೆ ಹಿಮ್ಮೆಟ್ಟಿ ಹೊಳವಾದ ಮೇಲೆ ಸೀತೆ ಪುನಃ ಹಿತ್ತಿಲು ಕಡೆಯ ಬಾಗಿಲಲ್ಲಿ

ಬಂದು ಕುಳಿತಳು. ಕೈಯಲ್ಲಿದ್ದ ತರಕಾರಿಯ ಬುಟ್ಟಿಯನ್ನು ಎದುರಾಗಿ ಇಟ್ಟು ಕೊಂಡು, ಹರುವೆಯ ಸೊಪ್ಪನ್ನು 'ಸೋಸ' ತೊಡಗಿದಳು. ಬೈಗುಹೊತ್ತಿನ ಗಾಳಿ ಹೊಸ ಮಳೆಯಲ್ಲಿ ಮಿಂದು ತಣ್ಣಗೆ ಬೀಸುತ್ತಿತ್ತು. ಹೆಂಚುಗಳಿಂದ ನೀರಿನ್ನೂ ಹನಿಯುತ್ತಲೆ ಇತ್ತು. ಒಡ್ಡಿಗೆ ಹೋಗುತ್ತಿದ್ದ ಹುಂಜ, ಹೇಂಟೆ, ಮರಿ, ಹೂಮರಿಗಳೆಲ್ಲ ವಿಧವಿಧವಾಗಿ ತುಮುಲವಾಗಿ ರವಗೈಯುತ್ತಿದ್ದುವು. ಮುರುವಿನ ಒಲೆಯಲ್ಲಿ ಹೆಬ್ಬೆಂಕಿ ಚಟಪಟ ಒಟಗುಟ್ಟುತ್ತ, ತನ್ನ ಕೆಂಪು ನಾಲಗೆ ಗಳಿಂದ ಹಂಡೆಯ ಕರಿಯ ಬೆಂಬಾಗವನ್ನು ಅಪ್ಪಳಿಸುತ್ತಿತ್ತು. ಸೀತೆಯ ಕಣ್ಣು ಗಳಲ್ಲಿ ಅವುಗಳೆಲ್ಲದರ ಪ್ರತಿಬಿಂಬವಿದ್ದಿತೇ ಹೊರತು ಪ್ರಜ್ಞೆ ಇರಲಿಲ್ಲ. ಆಕೆಯ ಕೈಗಳೂ ಒಮ್ಮೊಮ್ಮೆ ಕೆಲಸವನ್ನು ನಿಲ್ಲಿಸಿ ಮತ್ತೆ ಪ್ರಾರಂಭಿಸುತ್ತಿದ್ದುವು. ಆಕೆಯ ಮುಖದಲ್ಲಿ ಅವಾಸ್ತವ ಪ್ರಪಂಚದ ಮಾಧುರ್ಯವು ಅರಳಲಿರುವ ಮೊಗ್ಗಿನಲ್ಲಿ ಹೂವು ಕಾಯಿ ಹಣ್ಣುಗಳ ಸವಿಗನಸು ಸುಳಿಯುವಂತೆ ನಲಿಯುತ್ತಿತ್ತು. ಆಕೆ ಮತ್ತೆ ಕಣಸು ಕಾಣತೊಡಗಿದಳು.

ಪ್ರೇಮ ಮೊಟ್ಟಮೊದಲು ಹೃದಯದ ಕೋರಕವನ್ನು ಪ್ರವೇಶಿಸಿದಾಗ ಅದರ ವಿದ್ಯುತ್ ಸ್ಪರ್ಶದಿಂದ ಜಡ ಜಗತ್ತು ಚೇತನಪೂರ್ಣವಾಗುತ್ತದೆ. ಆಗ ಹೊಂಗನಸಿನ ಹೆಗ್ಗಡಲಿನಲ್ಲಿ ಮಹಾ ಭಯಂಕರ ಭಾರವಾಗಿರುವ ಸ್ಥೂಲ ವಿಶ್ವವೂ ಬಣ್ಣದ ಗುಳ್ಳೆಯಾಗಿ ತೇಲಾಡುತ್ತದೆ. ಪ್ರಾಣಪಕ್ಷಿ ತನ್ನ ರೆಕ್ಕೆಗಳನ್ನು ಕೆದರಿ, ಅನಂತದಲ್ಲಿ ಅಶರೀರಿಯಾಗಿ ಹಾರಾಡತೊಡಗುತ್ತದೆ. ಆಶೆ ಅಲಕಾವತಿ ಅಮರಾವತಿಗಳನ್ನು ಪ್ರವೇಶಿಸಿ ಅಲ್ಲಿಯ ಐಶ್ವರ್ಯಗಳನ್ನೆಲ್ಲ ಸೂರೆಗೊಳ್ಳುತ್ತದೆ; ಅಲ್ಲಿಯ ನಂದನವನಗಳಲ್ಲಿ ಹರಿಯುವ ದೇವಗಂಗೆಯಲ್ಲಿ ಮೀಯುತ್ತದೆ ; ಕಲ್ಪವೃಕ್ಷಗಳ ಅನುರಾಗಪೂರ್ಣವಾದ ಧವಳ ಛಾಯೆಯುಗಳಲ್ಲಿ ಕುಳಿತು ಚಿತ್ರ ವಿಚಿತ್ರವಾದ ಇಚ್ಛೆಗಳನ್ನು ನೆರವೇರಿಸಿಕೊಳ್ಳುತ್ತದೆ; ಕಾಮಧೇನುಗಳ ಕೊಡ ಗೆಚ್ಚಲುಗಳಿಗೆ ಬಾಯಿ ಹಾಕಿ ಕಡೆಯ ಹನಿಯವರೆಗೂ ಆನಂದಾಮೃತವನ್ನು ಹೀರಲೆಳಸುತ್ತದೆ. ಅಂತಹ ಸ್ವರ್ಗದಲ್ಲಿದ್ದಳು ಸೀತೆ.

ಮುಸುರೆ ತಿಕ್ಕಲೆಂದು ಅಲ್ಲಿಗೆ ಬಂದಿದ್ದ ಕಾಳ, ಸೀತಮ್ಮನವರ ನಿಷ್ಪಂದ ಸ್ಥಿತಿ ಯನ್ನು ನೋಡಿ "ಎಂಥದು ಯೇಚ್ನೆ ಮಾಡ್ತಾ ಕೂತೀರಮ್ಮಾ?" ಎಂದು ಹಲ್ಲುಬಿಟ್ಟನು.

ಸೀತೆ ಫಕ್ಕನೆ ಸೊಪ್ಪು ಸೋಸುವುದನ್ನು ಪ್ರಾರಂಭಿಸಿ "ಎಂಥದಿಲ್ಲೋ, ನೀರು ಬೀಳ್ತಾ ಇತ್ತಲ್ಲಾ ಅದನ್ನೇ ನೋಡ್ತಾ ಇದ್ದೆ" ಎಂದಳು.

ಕಾಳ ಸಲಿಗೆಯಿಂದ ಒರಟು ಒರಟಾಗಿ "ನೀರು ನೋಡ್ತಾ ಇದ್ರೋ? ಗಂಡನ ಯೇಚ್ನೆಮಾಡ್ತಿದ್ರ್ಯೋ?" ಎಂದು ರಾಗ ಎಳೆದನು.

"ಸಾಕು ಸುಮ್ಮನಿರೋ! ನಿನಗೆ ಯಾವಾಗಲೂ ಅದೇ!"

ಕಾಳ ಮುಸುರೆ ತಿಕ್ಕಲು ಪ್ರಾರಂಭಿಸಿ ಸ್ವಲ್ಪ ಹೊತ್ತು ಸುಮ್ಮನಿದ್ದವನು "ಮತ್ತೆ ನೀವಿನ್ನು 'ಕೃಷ್ಣಾ' ಅನ್ನೋ ಹಾಂಗಿಲ್ಲ!" ಎಂದನು.

"ಯಾಕೋ?"

"ಯಾಕೇ ಅಂತಾ ಹೇಳ್ಲಿ, ಹೇಳಿ! ಅಂತೂ ಇನ್ಮೇಲೆ ದೇವರ ಹೆಸರೂ ಹೇಳದ ಹಾಂಗಾಗ್ತದೆ."

"ಥೂ, ನಿನ್ನ ಸೊಡ್ಡಿಗೆ ಬೆಂಕಿಹಾಕ!... ನಿನಗೇನು ಹುಚ್ಚುಗಿಚ್ಚು ಹಿಡಿಯಿತೇನೋ?" ಎಂದಳು ಸಲಿಗೆಯಿಂದ ಸೀತೆ.

"ನಾನು ಒಳ್ಳೇದು ಹೇಳಿದ್ರೆ, ನನ್ನ ಸೊಡ್ಡೀಗೆ ಯಾಕಮ್ಮಾ ಬೆಂಕಿ? ಹಾಂಗಾದ್ರೆ, ಗಂಡನ ಹೆಸರು ಹೇಳ್ತಾರೇನು ಹೇಳಿ ಯಾರಾದರೂ?"

"ಇಲ್ಲ."

"ಮತ್ತೆ?"

"ಮತ್ತೆ ಅಂದರೆ?"

"ನಿಮ್ಮನ್ನ ಸೀತೆಮನೆ ಕೃಷ್ಣಪ್ಪಗೌಡ್ರೀಗೆ ಕೊಟ್ರೆ, ನೀವು 'ಕೃಷ್ಣ' ಅನ್ನಾಕೆ ಆಗ್ತದೇನು?"

"ನಿನ್ನ ಬಾಯಿಗೆ ಬೆಂಕಿಹಾಕ! ಸುಮ್ಮನಿರು!" ಎಂದು ಸೀತೆ ಅಪಶಕುನವಾದ ರೀತಿಯಲ್ಲಿ ಸಿಡುಕಿದಳು.

"ನಾನೇನು ತಮಾಸೆಗೆ ಹೇಳ್ತೀನಂತಾ ಮಾಡಿರೇನು? ಮನ್ನೇನೆ ಸಿಂಗಪ್ಪಗೌಡ್ರು ಮದ್ವೆ ಪಸ್ತಾ್ರಪ ಮಾಡ್ಕೊಂಡು ಹೋಗಿದ್ರಂತೆ. ಇವತ್ತು ಜಾತ್ಕ ತಗೊಂಡು ಬಂದಾರೆ?... ಪಾಪ! ಮಳೇಲಿ ನೆಂದೂ ನೆಂದೂ ಉಡ್ರು ಹಿಡ್ದು ಹೋಗಿತ್ತು ಅವರೀಗೆ. ನಾನೇ ಈಗ ಬಿಸಿಬಿಸಿ ಕಾಪಿ ಕೊಟ್ಟು ಬಂದೀನಿ... ಹ್ಞೂ ಕಣ್ರೋ; ನಿಮ್ಮ ಮಾವ ಬಂದು ಕೂತಾರಾಗ್ಲೆ. ಹೋಗಿ ನೋಡಿ ಜಗಲೀ ಮೇಲೆ!..."

ಕಾಳ ಹಾಲಿಗೆ ಹುಳಿಯನ್ನು ಹಿಂಡಿ, ಬಾಲೆಯ ಹೃದಯದಲ್ಲಿ ಹೆಪ್ಪುಗಡುತ್ತಿದ್ದ ಶೋಕೋದ್ವೇಗಗಳ ಡಾವರವನ್ನು ಒಂದಿನಿತೂ ಅರಿಯದೆ, ಸ್ವಸ್ಥಚಿತ್ತನಾಗಿ ಹುಣಿಸೆಯ ಹಣ್ಣನ್ನು ಬೂದಿಯಲ್ಲಿ ಅದ್ದಿ, ಹಿತ್ತಾಳೆಯ ಪಾತ್ರೆಯೊಂದನ್ನು ಗಸಗಸನೆ ರಭಸದಿಂದ ಉಜ್ಜತೊಡಗಿದನು.

ಸೀತೆ ಪ್ರತಿಮೆಯಂತೆ ಕುಳಿತಳು. ಸುದ್ದಿ ಆಕೆಯ ಭಾಗಕ್ಕೆ ಪಿಶಾಚಿಯಂತೆ ಕ್ರೂರ ಕರ್ಕಶವಾಗಿತ್ತು. ಕಾಳ ವಿನೋದಕ್ಕಾಗಿ ಸುಳ್ಳು ಹೇಳಿರಬಹುದು; ತಾನೇ ಎದ್ದುಹೋಗಿ, ಜಗಲಿಯಲ್ಲಿ ನಿಜವಾಗಿಯೂ ಸಿಂಗಪ್ಪಗೌಡರು ಬಂದಿದ್ದಾ

ರೆಯೆ ಎಂದು ನೋಡಿಕೊಂಡು ಬರಲು ಮನಸ್ಸು ಮಾಡಿದಳು. ಆದರೆ ಕಾಳನ ಮಾತು ಎಲ್ಲಿ ಸತ್ಯವಾಗಿಬಿಡುವುದೋ ಎಂದು ಹೆದರಿ ಸುಮ್ಮನೆ ಕುಳಿತಳು. ಕಣ್ಣುಗಳಲ್ಲಿ ತುಂಬಿಬರುತ್ತಿದ್ದ ನೀರಿನಲ್ಲಿ ಹೂವಯ್ಯನ ಮನೋಹರ ವಿಗ್ರಹವು, ಪ್ರಾತಃಕಾಲ ಅರಳಿದ ತಾವರೆಯ ಹೂವಿನ ಎಸಳ ಮೇಲಣ ಹಿಮಮಣಿಯಲ್ಲಿ ಅನಂತದೂರದಿಂದ ಬಂದ ಬಾಲಸೂರ್ಯನ ಸ್ವರ್ಣಕಿರಣವೊಂದು ಮೆಲ್ಲೆಲರಿನಲ್ಲಿ ವಿಕಂಪಿಸುವಂತೆ ಅಸ್ಥಿರವಾಗಿತ್ತು.

ಆಕೆಯ ಸ್ಥಿತಿಯನ್ನರಿಯದ ಒರಟೆದೆಯ ಕಾಳ ಮತ್ತೆ ಕತ್ತೆತ್ತಿ "ನೀವಂತೂ ಗಂಡನ ಮನೆಗೆ ಹೋಗ್ತೀರಿ. ಬಡವನ್ನ ಮರೀಬ್ಯಾಡಿ... ನಿಮ್ಮಲ್ಲಿಗೆ ಬಂದರೆ ಒಂದೀಟು ಕಾಪೀಗೀಪಿ ಕೊಡ್ತೀರೇನಮ್ಮ?" ಎಂದು ವಿನೋದವಾಡಿದನು.

ಸೀತೆಯ ಕಣ್ಣುಗಳಲ್ಲಿ ತುಂಬಿದ್ದ ನೀರು ಕೆನ್ನೆಗಳ ಮೇಲೆ ಸೂಸಿತು. ನೋವು ಸಿಟ್ಟುಗಳಿಂದ ಮತ್ತೇನನ್ನೂ ಆಡಲರಿಯದೆ "ನಿನ್ನ ನಾಲಗೆ ಬಿದ್ದು ಹೋಗಲಿ" ಎಂದು ಬೈದಳು.

ಕಾಳ ಮತ್ತೂ ನಗುತ್ತ "ತಡೀರಿ, ಸೀತೆಮನೀಗೆ ಬಂದಾಗ ನಾನು ಕೃಷ್ಣಪ್ಪ ಗೌಡ್ರೀಗೇ ಹೀಂಗೆ ಬೈದ್ರು ಅಂತ ಹೇಳಿಕೊಟ್ಟು ಹಾಕಿಸ್ತೀನಿ ನಿಮಗೆ" ಎಂದನು.

"ನಿನ್ನ ಕೃಷ್ಣಪ್ಪಗೌಡ್ರನ್ನ ಹುಲಿ ಹಿಡೀಲೋ! ನನ್ನ ಸುದ್ದಿಗೆ ಮಾತಾಡಬೇಡ."

"ಏನ್ರಮ್ಮಾ, ಗಂಡಯ್ಯನ್ನೇ ಬೈತೀರಿ?"

"ಏನೋ ಅದೂ, ಕಾಳಾ?" ಎಂದು ಗೌರಮ್ಮನವರು ಅಡುಗೆಯ ಮನೆಯ ಕಿಟಕಿಯಿಂದ ಗದರಿದರು.

ಸೀತೆ "ನೋಡವ್ವಾ, ಕೆಟ್ಟ ಕೆಟ್ಟ ಮಾತಾಡ್ತಾನೆ" ಎಂದು ಕಣ್ಣೀರೊರಸಿಕೊಳ್ಳುತ್ತ ತಾಯಿಗೆ ದೂರು ಹೇಳಿದಳು.

ಕಾಳನು ಗಟ್ಟಿಯಾಗಿ "ಏನ್ರಮ್ಮಾ, ಸುಳ್ಳು ಹೇಳ್ತೀರಿ! ಮದುವೆ ಮಾತಾಡಿದ್ರೆ ಕೆಟ್ಟ ಮಾತೇನು?" ಎಂದು ವಿನಯವಾಣಿಯಿಂದ ನುಡಿದನು.

ಗೌರಮ್ಮನವರು "ನೀನು ಸುಮ್ಮನಿರೇ, ಅವನ ಕೈಲೇನು ಮಾತು?" ಎಂದರು.

ಸೀತೆ "ಬಂಡ ಬಂಡ ಮಾತೆಲ್ಲಾ ಆಡ್ತಾನೆ!" ಎಂದಳು.

ಗೌರಮ್ಮನವರು "ನೀನು ಸುಮ್ಮನಿರು! ಹೆಣ್ಣು ಕೇಳಿದ ಮಾತ್ರಕ್ಕೆ ಲಗ್ನ ಆಗಿಹೋಯ್ತೇನು? ಜಾತಕ ಸರಿಹೋಗಬೇಕೋ ಬೇಡವೋ? ಅವನು ಹೇಳಿದರೆ ಹೇಳಿಕೊಳ್ತಾನೆ! ನೀನು ಸುಮ್ಮನಿರು... ಹುಲಿ ಹಿಡೀಲಿ ಗಿಲಿ ಹಿಡೀಲಿ, ಅಂತಾ ಅಪಶಕುನ ಯಾಕೆ ನುಡೀತೀಯಾ?" ಎಂದು ಹೇಳಿ ಕಿಟಕಿಯಾಚೆ ಕಣ್ಮರೆಯಾದರು.

ಆಮೇಲೆ ಯಾರೊಬ್ಬರೂ ಮಾತಾಡಲಿಲ್ಲ. ಕಾಳ ಅವಸರವಾಗಿ ಮುಸುರೆ ತಿಕ್ಕ ತೊಡಗಿದನು.

ಸೀತೆಗೆ ಮಾತ್ರ ಯಾತನೆ ಇಮ್ಮಡಿಯಾಯಿತು. ತಾಯಿಯ ಮಾತುಗಳಿಂದ ಅವಳಿಗೆ ಕಾಳ ಹೇಳಿದುದರಲ್ಲಿದ್ದ ಸಂದೇಹಗಳೆಲ್ಲ ಪರಿಹಾರವಾಗಿ, ಸಿಂಗಪ್ಪಗೌಡರು ತಮ್ಮ ಮಗನಿಗಾಗಿ ತನ್ನನ್ನು ಕೇಳಲು ಬಂದಿದ್ದಾರೆಂಬುದು ನಿಶ್ಚಯವಾಯಿತು. ತರಕಾರಿಯ ಬುಟ್ಟಿಯನ್ನು ಒಂದು ಮೂಲೆಗೆ ನೂಕಿ, ಅಲ್ಲಿಂದೆದ್ದು ತನ್ನ ಕೋಣೆಗೆ ಹೋದಳು.

ಅಲ್ಲಿ, ಕವಿಯುತ್ತಿದ್ದ ಕತ್ತಲೆಯಲ್ಲಿ, ನೀರವವಾಗಿ ಬಿಕ್ಕಿ ಬಿಕ್ಕಿ ಅತ್ತಳು. ಅದೇ ಸ್ಥಳದಲ್ಲಿಯೆ ಕೆಲವು ದಿನಗಳ ಹಿಂದಿನಿಂದ ಕೆಲವು ಗಂಟೆಗಳ ಹಿಂದಿನವರೆಗೆ, ಹೂವಯ್ಯನ ಸಮೀಪದಲ್ಲಿ ಕುಳಿತು ಅವನ ಸುಂದರ ವದನದಿಂದ ಹೊರಹೊಮ್ಮುತ್ತಿದ್ದ ಮಧುರ ಭಾಷಣವನ್ನು ಕಿವಿದೆರೆದು ಕಣ್ಣರಳಿ ಕೇಳಿದ್ದಳು. ತನ್ನ ಹೃದಯವನ್ನು ಸುಖಕ್ಕೆಂತೋ ಅಂತೆಯೇ ದುಃಖಾನುಭವಕ್ಕೂ ಸೂಕ್ಷ್ಮತರವಾಗಿ ಮಿಾಸಲು ಮಾಡಿದ್ದಳು!

ಅಳುತ್ತಾ ಅಳುತ್ತಾ ಹೂವಯ್ಯನ ಮಾತುಗಳು ನೆನಪಿಗೆ ಬಂದು, ಅಳುವನ್ನು ನಿಲ್ಲಿಸಿ, ಆಲೋಚನೆಗೆ ತೊಡಗಿದಳು. ಮನಃಪೂರ್ವಕವಾಗಿ ದೇವರನ್ನು ಪ್ರಾರ್ಥಿಸಿದರೆ ಅದು ಕೈಗೂಡುತ್ತದೆ ಎಂದು ಹೂವಯ್ಯ ಹೇಳಿದ್ದನು. ಭಕ್ತಿಯಿಂದ ಸಾವಿತ್ರಿ ಸತ್ಯವಂತನ ಜೀವವನ್ನು ಯಮನಿಂದ ಹಿಂದಕ್ಕೆ ಪಡೆಯಲಿಲ್ಲವೆ? ಸೀತೆ ರಾವಣನಿಂದ ಪಾರಾಗಿ ಪುನಃ ರಾಮನನ್ನು ಸೇರಲಿಲ್ಲವೆ? ನಮ್ಮ ಸೀತೆಗೆ ದೇವರಲ್ಲಿ ತಾನು ಹಿಂದೆಂದೂ ಅನುಭವಿಸದಷ್ಟು ಭಕ್ತಿ ಮೂಡಿತು. ತನ್ನ ಇಷ್ಟಾರ್ಥವೆಲ್ಲವನ್ನೂ ನೆರವೇರಿಸಿಕೊಡುವಂತೆ ಭಗವಂತನನ್ನು ಎದೆತುಂಬಿ ಪ್ರಾರ್ಥಿಸಿದಳು. ಸೀತಾರಾಮರ ಚಿತ್ರಪಟಕ್ಕೆ ಸಲಸಲವೂ ಕೈಮುಗಿದು ತಲೆ ಬಾಗಿದಳು. ಆಕೆ ತಲೆಬಾಗುತ್ತಿದ್ದಾಗ ಹಲ್ಲಿ ಒಂದು ಸಾರಿ ಲೊಚಗುಟ್ಟಿತು. ಅದನ್ನಾಲಿಸಿದ ಸೀತೆ, ಹೊಳೆಯಲ್ಲಿ ಕೊಚ್ಚಿಕೊಂಡು ಹೋಗುವವನು ಹುಲ್ಲುಕಡ್ಡಿಯನ್ನು ಕಂಡು ಹಿಗ್ಗುವಂತೆ ಹಿಗ್ಗಿದಳು. ಹೆಣ್ಣು ಕೇಳಿದರೆ ಏನಾಯ್ತು? ದೇವರ ದಯದಿಂದ ಜಾತಕ ಸರಿಬರದೆ ಹೋಗುತ್ತದೆ ಎಂದು ಶಾಂತಳಾದಳು. ಎಲ್ಲವೂ ಹೆಣ್ಣುಕೇಳುವವರ, ಕೊಡುವವರ ಮತ್ತು ಜೋಯಿಸರ ಕೈಯಲ್ಲಿದೆ ಎಂಬುದು ಅವಳಿಗೆ ಇನ್ನೂ ಗೊತ್ತಾಗಿರಲಿಲ್ಲ.

## ೨೬
## ಬೈರನು ಹೊಂಡ ತೋಣಕಿದ್ದು

ಮರುದಿನ ಬೇಲರ ಬೈರ ಕೆಲಸಕ್ಕೆ ಹೋಗದೆ ಕೂತನು. ಕೂರುವುದೆಂದರೆ ರಜಾ ತೆಗೆದುಕೊಳ್ಳುವುದು ಎಂದರ್ಥ. ಬಿಡಾರದಲ್ಲಿಯೇ ಇದ್ದರೆ ಗೌಡರು ಎಲ್ಲಿಯಾದರೂ ಬಂದು ಬಲವಂತದಿಂದ ಕೆಲಸಕ್ಕೆ ಹೊರಡಿಸಿಯಾರೆಂಬ ಭೀತಿಯಿಂದ ಸೂರ್ಯನು ಮಲೆಬನಗಳ ನೆತ್ತಿಯ ಮೇಲೆ ಕಾಣಿಸಿಕೊಂಡು ಮರಗಿಡಗಳಿಗೂ ಮನೆ ಬಿಡಾರಗಳಿಗೂ ನೀಳವಾದ ನೆಳಲನ್ನಿತ್ತು ಹಕ್ಕಿಗಳೆದೆಯ ತುಪ್ಪುಳನ್ನು ಬೆಚ್ಚಗೆ ಮಾಡುತ್ತಿರಲು ಅವನು ತನ್ನ ಮಗ ಗಂಗನನ್ನೂ ಜೊತೆಗೆ ಕರೆದುಕೊಂಡು ಕಂಬಳಿ, ಕತ್ತಿ, ಹಾಳೆಕೊಟ್ಟೆ, ಹಾಳೆ ಮುಂತಾದ, 'ಹೊಂಡ ತೋಣಕಿ' ಮೀನು ಹಿಡಿಯಲು ಉಪಯೋಗವಾಗುವ ಸಲಕರಣೆಗಳನ್ನು ತೆಗೆದುಕೊಂಡು, ತನ್ನ ಹೆಂಡತಿ ಸೇಸಿಗೆ ಮೀನು ಮೇಲೋಗರಕ್ಕೆ ಕಾರ ಕಡೆದಿಡುವಂತೆ ಹೇಳಿ ಗದ್ದೆಯ ಕೋಗಿನಾಚೆಯಿದ್ದ ಹಳ್ಳದ ಕಡೆಗೆ ಎಲೆಯಡಕೆ ಅಗಿಯುತ್ತಾ ಹೊರಟನು.

ಗದ್ದೆಯಂಚುಗಳ ಮೇಲೆ ಕಾಲುಹಾದಿಯಲ್ಲಿ ಹೋಗುತ್ತಿದ್ದಾಗ ಎದುರಿಗೆ ಕಾಕಿಯ ಬಣ್ಣದ ಕೋಟನ್ನೂ ಇಜಾರವನ್ನೂ ಹಾಕಿ ತಲೆಗೆ ಕೆಂಪು ಬಟ್ಟೆಯನ್ನು ಸುತ್ತಿದ್ದ ವ್ಯಕ್ತಿಯೊಂದು ತನ್ನ ಕಡೆಗೇ ಬರುತ್ತಿದ್ದುದು ಬೈರನಿಗೆ ಕಾಣಿಸಿತು. ಕಾಕಿಯ ಬಟ್ಟೆಯನ್ನು ಕಂಡೊಡನೆ ಬೆಚ್ಚಿ ದಿಗಿಲುಬಿದ್ದು, ಬೈರ ಪಕ್ಕದಲ್ಲಿದ್ದ ನೆಕ್ಕಿಯ ಮಟ್ಟುಗಳಲ್ಲಿ ಮರೆಯಾಗಲೆಳಸಿದನು. ಅಷ್ಟರಲ್ಲಿ ಎದುರಿಗೆ ಬರುತ್ತಿದ್ದ ವ್ಯಕ್ತಿ "ಏ! ಏಯ್! ಇಲ್ಲಿ ಬಾರೊ" ಎಂದು ಕೂಗಿತು. ಬೈರನಿಗೆ ಕಾಲು ಬಾರದೆ ಹೋಗಿ ನಿಂತನು. ಗಂಗ ಅಪ್ಪನ ಮರೆಯಲ್ಲಿ ಹದುಗಿದನು.

ಆ ಹಳ್ಳಿಗಳಲ್ಲಿ ಅಂದು ಸರಕಾರದ ಅಧಿಕಾರಿಗಳ ದರ್ಶನ ಬಹಳ ಅಪೂರ್ವವಾಗಿತ್ತು. ಬೀಟು ತಿರುಗುವ ಪೋಲೀಸಿನವರು ವಾರಕ್ಕೋ ಪಕ್ಷಕ್ಕೋ ತಿಂಗಳಿಗೋ ಒಂದು ಸಾರಿ ಹಾಗೆಬಂದು ಹೀಗೆ ಸುಳಿದು, ಸಮಯಸಿಕ್ಕಿದರೆ ಬಡಪಾಯಿಗಳನ್ನು ಬೆದರಿಸಿ ಏನನ್ನಾದರೂ ಕಿತ್ತುಕೊಂಡು ಹೋಗುತ್ತಿದ್ದರು. ಅವರನ್ನು ಕಂಡರೆ ಲೈಸನ್ಸಿಲ್ಲದ ಬಂದೂಕಗಳ ಮಾಲೀಕರಿಗಂತೂ ಕಣ್ಣುಬೇನೆ. ಸಾಧಾರಣವಾಗಿ ಪೋಲೀಸಿನವರು ಮೈಗೆ ಕಾಕಿಯ ಬಣ್ಣದ ಬಟ್ಟೆಗಳನ್ನೂ ತಲೆಗೆ ಕರಿಯ ಪೇಟವನ್ನೂ ಧರಿಸುತ್ತಾರೆ. ಆದ್ದರಿಂದ ಹಳ್ಳಿಗರಿಗೆ ಕಾಕಿಬಟ್ಟೆ ಕರಿಪೇಟಗಳೆಂದರೆ ಏನೋ ಬಂತಪ್ಪಾ ಎಂದು ಹೆದರಿಕೆ. ಆದ್ದರಿಂದಲೇ ಬೈರ ನೆಕ್ಕಿಯ ಮಟ್ಟಿನಲ್ಲಿ ಮರೆಯಾಗಲು ಪ್ರಯತ್ನಿಸಿದ್ದು.

ಬೈರ ಚಲಿಸದೆ ನಿಂತಿರಲು, ಆ ವ್ಯಕ್ತಿ ಹತ್ತಾರುಮಾರು ದೂರಕ್ಕೆ ಬಳಿಸಾರಿ "ಗೌಡರು ಇದ್ದಾರೇನೋ ಮನೆಯಲ್ಲಿ?" ಎಂದು ಪ್ರಶ್ನೆ ಮಾಡಿತು.

"ಹೌದು, ಸ್ವಾಮಿ, ಇದ್ದಾರೆ" ಎಂದು ಬೈರ ಆದಷ್ಟುಮಟ್ಟಿಗೆ ಶುದ್ಧವಾಗಿ ಮಾತಾಡಲು ಪ್ರಯತ್ನಿಸಿದನು.

"ತಿಮ್ಮ ಇದ್ದಾನೇನೊ?"

"ಯಾವ ತಿಮ್ಮ, ಸ್ವಾಮಿ?"

"ಬಗನೀ ಕಟ್ಟೋ ಹಳೇಪೈಕದ ತಿಮ್ಮನೋ?"

ಬಗನಿಯ ಹೆಸರು ಕೇಳಿದ ಕೂಡಲೆ ಬೈರನ ನಾಡಿಗಳಲ್ಲಿ ನೆತ್ತರು ಫಕ್ಕನೆ ತಣ್ಣಗಾಗಿ ಮತ್ತೆ ಬಿಸಿಯಾಯಿತು.

ಗಾಬರಿಯಿಂದ "ನಂಗೊತ್ತಿಲ್ಲ, ಸ್ವಾಮಿ!" ಎಂದನು.

ತಿಮ್ಮನ ಮೇಲೆ ಏನೋ ಕಳ್ಳಿನ ಕೇಸಾಗಿರಬೇಕು; ಆದ್ದರಿಂದ ತನಗೇನೂ ತಿಳಿಯದು ಎಂದು ಹೇಳುವುದೇ ಲೇಸು ಎಂದು ಭಾವಿಸಿ, ತಿಮ್ಮ ಬಿಡಾರದಲ್ಲಿ ಇದ್ದದ್ದು ಗೊತ್ತಿದ್ದರೂ 'ಗೊತ್ತಿಲ್ಲ' ಎಂದೇ ಹೇಳಿಬಿಟ್ಟನು.

"ಸುಳ್ಳು ಹೇಳ್ತೀಯಾ?" ಎಂದು ಕಾಕಿಕೋಟಿನ ವ್ಯಕ್ತಿ ಕೈಯಲ್ಲಿ ಮಡಿಸಿ ಹಿಡಿದಿದ್ದ ಕೊಡೆಯನ್ನು ಆಡಿಸುತ್ತ ಎರಡು ಹೆಜ್ಜೆ ಮುಂದೆ ಬರಲು ಬೈರ "ಆ್ಞ! ...ಏನು ಕೇಳಿದಿರಿ?" ಎಂದನು.

"ತಿಮ್ಮ ಇದ್ದಾನೇನೋ ಮನೇಲಿ?"

"ಅ...ದೇ...ನು? ನಾನು ಏನೋ ಅಂತಾ ಮಾಡಿದ್ದೆ." ಎಂದು ಬೈರ ಹಲ್ಲು ಬಿಡುತ್ತಾ "ಹೌದು, ಮನೇಲಿದ್ರಪ್ಪಾ. ಈಗೆಲ್ಲಾರೂ ಹೋಗ್ಯಾರೋ ಏನೋ" ಎಂದನು.

"ನೀನೆಲ್ಲಿಗೆ ಹೊರಟೆ?"

"ಹೊಂಡಾ ತೋಣಕಕ್ಕೆ" ಎಂದು ಬೈರ ರಾಗವಾಗಿ ಹೇಳಿ, ತನ್ನ ಕೈಲಿದ್ದ ಹಾಳೆಕೊಟ್ಟೆಯ ಕಡೆಗೆ ನೋಡಿದನು.

"ಮೀನು ಬಹಳ ಇವೆಯೇನೋ?"

"ಎಲ್ಲಿವೆ ಹೇಳಿ? ಅದರಾಗೂ ಏನು ಹೊಂಡಾ ತೋಣಕೋರು ಒಬ್ರೇ ಇಬ್ರೇ, ಎಲ್ರಿಗೂ ಅದೇ ಕಸಬಾಗಿ ಹೋಗ್ಯಾದೆ! ಹೋದ್ದೋರ್ಸ ಮಸ್ತೆ ಮೀನಿತ್ತು. ಈವೊರ್ಸಾನೂ ಸಾಧಾರಣ ಮಟ್ಟಿಗಿತ್ತು. ಮನ್ನೆ ಮಳೆ ಬಂದು ಎಲ್ಲ ಹೊಳೀಗೆ ಹೋದ್ವೋ ಏನೋ!..."

ಬೈರ ಮೀನಿನ ಇತಿಹಾಸವನ್ನೇ ಪ್ರಾರಂಭಿಸುವಂತೆ ಕಂಡುದರಿಂದ ಎದುರು

ನಿಂತಿದ್ದ ವ್ಯಕ್ತಿ "ಹಾಗಾದರೆ ಹೋಗು, ಏನಾದರೂ ಸಾರಿಗೆ ಮಾರ್ಗ ಮಾಡಿ ಕೊಂಡು ಬಾ" ಎಂದು ಮುಂದುವರಿಯುತ್ತಿತ್ತು.

ಬೈರ ಅಷ್ಟು ಹೊತ್ತು ಮಾತಾಡಿದ ಸಲುಗೆಯಿಂದ ಧೈರ್ಯ ತಾಳಿ "ನಿಮ್ಮ ಮನೆ ಎಲ್ಲಿ?" ಎಂದವನೆ ತಿದ್ದಿಕೊಂಡು "ನಿಮ್ಮ ಊರು?" ಎಂದನು.

"ತೀರ್ಥಹಳ್ಳಿ!"

ತೀರ್ಥಹಳ್ಳಿಯ ಪೇಟೆಯೇ ಬಹುದೂರದ ಮಹಾನಗರವಾಗಿದ್ದ ಬೈರ "ಓಹೋಹೋ, ಸುಮಾರು ದೂರದಿಂದ ಬಂದೀರಿ? ಏನು ಕೆಲಸದಮೇಲೆ?" ಎಂದನು.

"ಬಗನಿ ಮರಕ್ಕೆ ಮಾರ್ಕ್ ಹಾಕೋಕೋ!" ಎಂದು ಹೇಳಿದ ವ್ಯಕ್ತಿ ಮುಂದುವರಿಯತೊಡಗಿತು.

ಆ ಸಮಯದಲ್ಲಿ 'ಮಾರ್ಕ'ನು ಹಿಂತಿರುಗಿ ನೋಡಿದ್ದರೆ ಬೈರನ ಮುಖ ಭಯಮುದ್ರಿತವಾಗಿದ್ದುದು ಚೆನ್ನಾಗಿ ಗೋಚರವಾಗುತ್ತಿತ್ತು. ಆದರೆ ಅವನು ಹಿಂತಿರುಗಿ ನೋಡದೆ ಸರಸರನೆ ಕಿರಿಕಿರಿದಾಗುತ್ತ ನಡೆದನು. ಬೈರ ದೂರ ವಾಗುತ್ತಿದ್ದ 'ಮಾರ್ಕ'ನ ಹಿಂಭಾಗವನ್ನೇ ನೋಡುತ್ತ, ಬಾಯಿ ಕಣ್ಣುಗಳೆ ರಡನ್ನೂ ತೆರೆದು ನಿಂತನು. ಆ ವ್ಯಕ್ತಿ 'ಮಾರ್ಕ'ನಲ್ಲದೆ ಇನ್ನಾರಾಗಿದ್ದರೂ, ಸಾಕ್ಷಾತ್ 'ಪೋಲೀಸ್ ಇನಿಸ್ಪೆಟ್ಟರೇ' ಆಗಿದ್ದರೂ ಬೈರನಿಗೆ ಅಷ್ಟೊಂದು ಭೀತಿ ಸಂಕಟಗಳಾಗುತ್ತಿರಲಿಲ್ಲ. ಕಾಕಿಕೋಟಿನ ವ್ಯಕ್ತಿ ಆಕಾರಮಾತ್ರವಾಗುವಷ್ಟು ದೂರವಾದೊಡನೆಯೆ ಬೈರನು "ಇವನೇ ಮಾರ್ಕನೇ? ಗಿರಾಚಾರ!" ಎಂದು ತನ್ನೊಳಗೆ ತಾನೆ ಹೇಳಿಕೊಂಡು "ಗಂಗಾ" ಎಂದು ಕರೆದನು.

ಹಿಂದುಗಡೆಯಿಂದ "ಆ್ಞ!" ಎನ್ನುತ್ತ ಗಂಗ ಮುಂದೆ ಬಂದು "ಅಪ್ಪಯ್ಯಾ, ಯಾರದು?" ಎಂದು ಕುತೂಹಲಿಯಾದನು.

ಬೈರ "ಮಾರ್ಕನಂತೆ ಕಣೋ, ಮಾರ್ಕ! ಗಿರಾಚಾರ!" ಎಂದು ನಿಡು ಸುಯ್ಯುತ್ತ ಮುಂದುವರಿದನು.

ಹಳ್ಳಕ್ಕೆ ಹೋಗಿ, ಅಲ್ಲಲ್ಲಿ ನೀರು ನಿಂತಿದ್ದ ಹೊಂಡಗಳನ್ನು ಪರೀಕ್ಷಿಸಿದನು. ಕೆಲವು ಸಣ್ಣಪುಟ್ಟ ಹೊಂಡಗಳು ಎರಡು ದಿನಗಳ ಹಿಂದೆ ಬಂದಿದ್ದ ಮಳೆಯ ನೀರು ಕೊಚ್ಚಿ ತಂದು ಹಾಕಿದ್ದ ಮರಳು ಮಣ್ಣು ಕಲ್ಲುಗಳಿಂದ 'ತೆಂಗಿ' ಹೋಗಿ ದ್ದುವು. ಹಳ್ಳದ ನಡುವೆಯೂ ಅಕ್ಕ ಪಕ್ಕಗಳಲ್ಲಿಯೂ ಅಲ್ಲಲ್ಲಿ ಬಿದಿರು ಕಣೆ, ಅಡಕೆ ಸೋಗೆ, ಸೊಪ್ಪು, ಸದೆಗಳು ಹೊನಲಿನ ಹೊಯ್ಲಿಗೆ ತೇಲಿಬಂದು ಸಣ್ಣ ದೊಡ್ಡ ರಾಶಿಗಳಾಗಿ ಮರದ ಬೇರುಗಳಿಗೂ ಬಂಡೆಯ ಸಂದಿಗಳಿಗೂ ಸಿಕ್ಕಿ ಕೊಂಡಿದ್ದು, ಮಳೆನೀರು ಎಲ್ಲಿಯವರೆಗೆ ಏರಿತ್ತು ಎಂಬುದಕ್ಕೆ ಸಾಕ್ಷಿಗಳಾಗಿದ್ದುವು.

ಹೊಂಡ ಹೊಂಡಗಳಲ್ಲಿ ನೀರು ನಿಂತಿದ್ದಿತೆ ಹೊರತು ತೊರೆ ಹರಿಯುತ್ತಿರಲಿಲ್ಲ. ತಂದೆ ಮಕ್ಕಳಿಬ್ಬರೂ ತೊರೆಯ ಪಾತ್ರಪಥಕ್ಕೆ ಅಲ್ಲಲ್ಲಿ ಅಡ್ಡವಾಗಿ ಬಿದ್ದಿದ್ದ ಮರ ಮೆಳೆಗಳನ್ನು ಹತ್ತಿ ಹಾರಿ, ಕುಸಿದು ನುಸಿದು ಹೊಂಡಹೊಂಡಗಳಲ್ಲಿ ಮತ್ಸ್ಯಾನ್ವೇಷಣೆಮಾಡುತ್ತ, ಕಡೆಗೆ ಒಂದು ತಾಣಕ್ಕೆ ಬಂದರು.

ಆ ಹೊಂಡ ಎರಡು ಎರಡೂವರೆ ಮಾರು ಅಗಲವಾಗಿಯೂ ಸೊಂಟದೆತ್ತರ ದಷ್ಟು ಆಳವಾಗಿಯೂ ಇದ್ದು ಕಸಕಡ್ಡಿ ಮರದ ಮುಂಡುಗಳಿಂದ ತುಂಬಿ ಕೊಂಡಿತ್ತು. ಒಂದೆಡೆ ದಟ್ಟವಾಗಿ ಬೆಳೆದಿದ್ದ ಪೊದೆಯ ಬೇರುಗಳು ನೀರಿನಲ್ಲಿ ಮೀನುಗಳ ವಾಸಕ್ಕೆ ಪೊಟರೆಗಳನ್ನು ರಚಿಸಿದಂತಿದ್ದುವು. ದಡದಲ್ಲಿದ್ದ ದೊಡ್ಡ ಮರಗಳ ನೆರಳು ಹೊಂಡದ ಒಂದು ಭಾಗದ ನೀರನ್ನು ಕಪ್ಪಗೆ ಮಾಡಿತ್ತು. ಎರಡು ದಿನಗಳ ಹಿಂದೆ ತೊರೆಯ ನೀರು ಏರಿ ಬಂದು ಕಲ್ಮಷಗಳನ್ನು ಕೊಚ್ಚಿ ತೊಳೆದಿದ್ದರೂ ಆಮೇಲೆ ಉದುರಿದ್ದ ಒಣಗೆಲೆಗಳು ನೀರಿನಲ್ಲಿಯೂ ಅಂಚಿನ ಕಲ್ಮರಳುಗಳಲ್ಲಿಯೂ ಯಥೇಚ್ಛವಾಗಿ ಬಿದ್ದಿದ್ದುವು.

ಬೈರ ಬಳಿಗೆ ಬಂದೊಡನೆ ಕಪ್ಪೆಗಳು ಚೊಳಚೊಳನೆ ಹಾರಿ, ದೂರ ಸರಿದುವು. ಕೆಲವು ಪುಡಿಮೀನುಗಳು ಮಾತ್ರ ಆಡುತ್ತಿದ್ದುವು. ಬೈರ ಕ್ಯಾಕರಿಸಿ ತುಪ್ಪಿದನು. ಶ್ಲೇಷ್ಮ ಸದೃಶವಾದ ಆ ಲೋಳಿಯಾದ ಬಿಳಿಯ ಉಗುಳಿನುಂಡೆ ನೀರಿಗೆ ಬಿದ್ದ ಕೂಡಲೆ ಸೋಸಲು ಮೀನುಗಳು ಚಕ್ರದ ಕೇಂದ್ರಕ್ಕೆ ನೇಮಿಯಿಂದ ಅರಗಳು ಬಂದು ನುಗ್ಗುವಂತೆ ಅಲ್ಲಿಗೆ ನುಗ್ಗಿದುವು. ಅದನ್ನು ಕಂಡು ಅವನಿಗೆ ತೃಪ್ತಿ ಯಾಯಿತು.

ತಂದೆ ಮಕ್ಕಳಿಬ್ಬರೂ 'ಹೊಂಡ ತೋಣಕ'ಲು (ಹೊಂಡದಲ್ಲಿರುವ ನೀರನ್ನು ತುಳುಕಿ, ಬತ್ತಿಸಿ, ಮೀನು ಹಿಡಿಯುವುದು ಎಂದರ್ಥ) ಪ್ರಾರಂಭಿಸಿದರು. ಸ್ವಲ್ಪ ಕಾಲದಲ್ಲಿಯೆ ಹೊಂಡದ ನೀರು ಬತ್ತಿದಂತೆಲ್ಲ ಹೆಚ್ಚು ಹೆಚ್ಚು ಬಗ್ಗಡವಾಯಿತು. ಹೊಂಡದಲ್ಲಿ ನೀರು ಕಡಮೆಯಾಗಲು ಹಾಳೆಯಿಂದ ತುಳುಕುತ್ತಿದ್ದ ನೀರಿನಲ್ಲಿಯೇ ಸಣ್ಣ ದೊಡ್ಡ ಸೋಸಲು ಮೀನುಗಳು ಹೋಗುತ್ತಿರಲು, ಕಂಬಳಿಯನ್ನೇ ಬಲೆಯನ್ನಾಗಿ ಮಾಡಿ ಗೋಚಿದರು. ಎತ್ತಿದಂತೆಲ್ಲ ಸಲಸಲಕ್ಕೂ ಕರಿಯ ಕಂಬಳಿಯಲ್ಲಿ ಗೋರಿಬಂದ ಕೆಸರು ಕಸಕಡ್ಡಿಗಳ ನಡುವೆ ಹೊಳೆಹೊಳೆವ ಬಿಳಿ ಪೊರೆಯ ಸೋಸಲು ಮೀನು ತಣಕ್ ಪಣಕ್ ಚಿಣುಕ್ ಮಿಣುಕ್ಕನೆ ಹಾರಾಡು ತ್ತಿದ್ದುವು. ಕರಿಯ ಕಣ್ಣಿನ ತಣ್ಣನೆ ನುಣ್ಣನೆ ಸಣ್ಣ ಜೀವಿಗಳನ್ನು ಇಬ್ಬರೂ ಹಿಡಿದು ಹಿಡಿದು ಹಾಳೆಯ ಕೊಟ್ಟೆಗೆ ತುಂಬಿದರು. ಅಲ್ಲಿ ಕೆಲ ನಿಮಿಷಗಳಲ್ಲಿಯೆ ಅವುಗಳ ಹಾರಾಟ ನಿಲ್ಲುತ್ತಿತ್ತು.

ಕೈಲಾದಮಟ್ಟಿಗೆ ಸೋಸಲುಗಳನ್ನೆಲ್ಲ ಹಿಡಿದು ಪೂರೈಸಿದ ಮೇಲೆ ಮತ್ತೆ

ಉಳಿದಿದ್ದ ನೀರನ್ನೂ ಹೊರಗೆ ಹಾಕಿದರು. ತುಸು ಹೊತ್ತಿನಲ್ಲಿಯೆ ಹೊಂಡದಲ್ಲಿ ನೀರು ಸಂಪೂರ್ಣವಾಗಿ ಬತ್ತಿಹೋಗಿ, ಕೆಸರು ನೆಲದ ಮೇಲೆ ಚಟ್ಟಂಗಿ ಸೀಗಡಿಗಳು ಒದ್ದಾಡತೊಡಗಿದುವು. ಅವುಗಳನ್ನೂ ಆಯ್ದು ಆಯ್ದು ಕೊಟ್ಟೆಗೆ ತುಂಬಿದರು. ಕೆಲವು ಕಪ್ಪೆಗಳು ಇದೇ ಸುಸಮಯವೆಂದು ಒದ್ದಾಡುತ್ತಿದ್ದ ಹುಡಿ ಮೀನುಗಳನ್ನೂ ಚಟ್ಟಂಗಿಗಳನ್ನೂ ಹಿಡಿದು ಹಿಡಿದು ನುಂಗುತ್ತಿರಲು, ಗಂಗ ಸಿಟ್ಟಿನಿಂದ ಅವುಗಳಿಗೆ ಶಿಲಾಪ್ರಹಾರ ಮಾಡಿ, ಅವು ಹೊಟ್ಟೆಮೇಲಾಗಿ ಕೈ ಕಾಲು ಕೆದರಿ ಬೀಳಲು "ಮೀನು ತಿಂತೀಯ?... ನಿನ್ನಪ್ಪನ್ಮನೇ ಗಂಟೇನು,..? ಬೇಕೇನು ಚಟ್ಟಂಗಿ?" ಎಂದು ಮೊದಲಾಗಿ ಮೂದಲಿಸುತ್ತಿದ್ದನು.

ಹೊಂಡದಿಂದ ನೀರೆಲ್ಲ ಹೋಗಿ ಕೆಸರು ಮಾತ್ರ ಉಳಿಯಲು, ಬೇರು ಸಂದಿಗಳೂ ಕಲ್ಲು ಪೊಟರೆಗಳೂ ಉಬ್ಬುತಗ್ಗುಗಳೂ ತೋರಿ, ನೀರು ತುಂಬಿದ್ದಾಗ ಸಮತಟ್ಟಾಗಿದ್ದ ಹೊಂಡ ಈಗ ತಳಭಾಗದಲ್ಲಿ ವಿಕಾರವಾಯಿತು. ಆಮೇಲೆ ಕೆಸರನ್ನು ಹಿಸುಕಿಯೂ, ಬೇರಿನ ಸಂದಿಗೊಂದಿಗಳಲ್ಲಿ ಕೈಹಾಕಿಯೂ, ಕಲ್ಲಿನ ಪೊಟರೆಗಳಿಗೆ ಕೋಲುಹಾಕಿಯೂ, ತೊಳ್ಳೆಮೀನು, ಮುರುಗುಂಡು, ಗಿರಲು, ಕೊಚ್ಚಲಿ, ಕಾರೇಡಿ ಮೊದಲಾದ ಜಲಜಂತುಗಳನ್ನು ಬೇಟೆಯಾಡಿದರು. ಗಂಗ ಕಪ್ಪೆಯೊಂದನ್ನು ಹೊಡೆದು ಕೊಂದು, ಅದನ್ನು ಕೋಲಿನ ತುದಿಗೆ ಕಟ್ಟಿ 'ಕಪ್ಪೆಗೋಲಿ'ನಿಂದ ಅನೇಕ ಏಡಿಗಳನ್ನು ಹಿಡಿದು, ಕೊಂಬು ಕಾಲುಗಳನ್ನು ಮುರಿದು, ಹಾಳೆ ಕೊಟ್ಟೆಗೆ ತುಂಬಿದನು. ತೂತಿನಲ್ಲಿದ್ದ ಏಡಿ ಕೋಲಿನ ತುದಿಯಲ್ಲಿದ್ದ ಸತ್ತ ಕಪ್ಪೆಯನ್ನು ಕೊಂಬುಗಳಿಂದ ಬಲವಾಗಿ ಕಚ್ಚಿಕೊಂಡು ಅತಿಲೋಭವಶವಾಗಿ ಗಂಗ ಕೋಲನ್ನೆಳೆದುಕೊಂಡರೂ ಕೂಡ, ಹಿಡಿದ ಕಪ್ಪೆಯನ್ನು ಬಿಡುತ್ತಿರಲಿಲ್ಲ. ಕಪ್ಪೆಯೊಡನೆ ಮೇಲೆ ಬಂದ ಏಡಿಯನ್ನು ಗಂಗ ತನಗೆ ಅಪಾಯ ಬರದಂತೆ ಉಪಾಯದಿಂದ ಬೆನ್ನು ಒತ್ತಿ ಹಿಡಿದು ಕೊಂಬು ಕಾಲುಗಳನ್ನು ಮುರಿದು ಹಾಕುತ್ತಿದ್ದನು. ಎಲ್ಲಿಯಾದರೂ ಒಂದುವೇಳೆ ಅವನ ಅಜಾಗರೂಕತೆಯಿಂದಲೇ ಏಡಿ ಕೈಬೆರಳು ಕಚ್ಚಿದರೆ ರೇಗಿದ ಗಂಗ ಅದರ ಕಣ್ಣನ್ನು ಚಿವುಟಿಹಾಕಿ ಪ್ರತಿಹಿಂಸಾ ಛಲವನ್ನು ಪ್ರದರ್ಶಿಸಿ, ಜಯಶೀಲನಾಗಿ ಹಿಗ್ಗುತ್ತಿದ್ದನು.

ಗಂಗ ಒಂದು ಸಾರಿ ಡೊಗರಿಗೆ ಕಪ್ಪೆಗೋಲು ಹಾಕಿ ಎಳೆದಾಗ ಏಡಿ ಬರಲಿಲ್ಲ. ಕಪ್ಪೆಯ ಸ್ವಲ್ಪಭಾಗ ಮಾತ್ರ ಹರಿದುಹೋಗಿತ್ತು. ಮತ್ತೆ ಅದೇ ತೂತಿಗೆ ಕಪ್ಪೆಗೋಲು ಹಾಕಿದನು. ಮತ್ತೆ ಎಳೆದನು. ಎರಡನೆಯ ಸಾರಿಯೂ ಏಡಿ ಬರುವ ಬದಲು ಕಪ್ಪೆಯೇ ಹರಿದುಹೋಗಿತ್ತು. ಯಾವುದೋ ಉಪಾಯಗಾರನಾದ ದೊಡ್ಡ ಮೀನೋ ಏಡಿಯೋ ಒಳಗಿರಬೇಕೆಂದು ಊಹಿಸಿ, ಅದನ್ನು ಆಕ್ರಮಿಸಲೇಬೇಕೆಂಬ ಛಲದಿಂದ ಡೊಗರಿಗೆ ಕೈಹಾಕಿದನು. ಒಡನೆಯೆ ನೀರು

ಹಾವೊಂದು ಅವನ ಬೆರಳನ್ನು ಕಚ್ಚಿ, ಕೈಗೆ ಸುತ್ತಿಕೊಂಡಿತು. ಹುಡುಗನು ಭಯಭ್ರಾಂತನಾಗಿ ಕಿಟ್ಟನೆ ಕಿರಿಚಿಕೊಂಡು ಕುಣಿದಾಡುತ್ತಿರಲು, ಬೈರ ಓಡಿ ಬಂದು ಹಾವನ್ನು ಎಳೆದುಹಾಕಿ ಕೊಂದನು. ಗಂಗನಿಗೂ ಕೆಸರು ಕೈಯಿಂದಲೆ ಒಂದು ಗುದ್ದು ಹಾಕಿ, ಕಳುಕು ನೀರನ್ನು ಕುಡಿಸಿ ಮದ್ದು ಮಾಡಿದನು. ಗಂಗ ನಡುಗುತ್ತ ಅಳುತ್ತ ದಡದಮೇಲೆ ಕುಳಿತನು.

"ಯಾರೋ ಅದು ಕೂಗಿದವರು ?"

ಕೆಸರು ಸೋಸಿ ಮೀನು ಹಿಡಿಯುವುದರಲ್ಲಿಯೆ ಮಗ್ನನಾಗಿದ್ದ ಬೈರ ತಲೆಯೆತ್ತಿ ನೋಡುತ್ತಾನೆ: ಡೊಳ್ಳುಹೊಟ್ಟೆಯ ಬಾಡುಗಳ್ಳ ಸೋಮ ಮೀನಿನ ಕೊಟ್ಟೆಯನ್ನೇ ನೋಡುತ್ತ ನಿಂತಿದ್ದಾನೆ. ಅವನ ನೆರಳು ಉಬ್ಬು ತಗ್ಗು ನೆಲದಲ್ಲಿ ಡೊಂಕಿ ಕೊಂಕಿ ಬಿದ್ದಿದೆ.

"ಇಲ್ಲೇನು ಮಾಡುತ್ತೀಯೊ ?" ಎಂದನು ಸೋಮ ಅತ್ಯಂತ ವಿನಯ ಪೂರ್ವಕವಾದ ಕುತೂಹಲದಿಂದ.

"ಕಾಣಾದಿಲ್ಲೇನು !" ಎಂದನು ಬೈರ ಉದಾಸೀನವಾಗಿ, ಒರಟಾಗಿ.

"ಕೂಗಿದವರು ಯಾರೋ ?"

ಬೈರ ಒರಟು ಉದಾಸೀನದಿಂದಲೇ ನಡೆದುದನ್ನು ಹೇಳುತ್ತ ತನ್ನ ಕೆಲಸಕ್ಕೆ ಕೈಹಾಕಿದನು.

ಸೋಮನೂ ಇಳಿದು ಬಂದು ಹಾಳೆಯ ಕೊಟ್ಟೆಯಲ್ಲಿದ್ದ ಮೀನುಗಳನ್ನು ಹಸಿದ ನಾಯಿ ಅನ್ನವನ್ನು ನೋಡುವಂತೆ ನೋಡಿ "ಬೈರಾ, ಆವೊತ್ತು ಆ ಬೋಳೀಮಗ ಹೊಡೆದಿದ್ದು ಇನ್ನೂ ಹಾಂಗೆ ಇದೆಯಲ್ಲೊ? ಏನು ಮಾಡ ಬೇಕಾಯ್ತು ಹೇಳು ಅದಕ್ಕೆ? — ಆ ನೋವಿಗೆ ದಿನಾ ಜ್ವರ ಬೇರೆ ಬರ್ತದೆ— ಗಂಜಿ ಬಾಯಿಗೆ ಹಾಕುವ ಹಾಗಿಲ್ಲ — ನಾಲಗೆ ಇಸ್ಸಿ" ಎಂದು ಎಂಜಲು ತುಪ್ಪಿ, ರುಚಿ ಕೆಟ್ಟಿರುವುದನ್ನು ಪ್ರಯೋಗತಃ ಪ್ರದರ್ಶಿಸಿದನು.

ಬೈರನಿಗೆ ಸೋಮ ಅಲ್ಲಿಗೆ ಬಂದಾಗಲೆ ಎಲ್ಲಿ ಮೀನು ಕೇಳುತ್ತಾನೆಯೊ ಎಂದು ಭಯವಾಗಿತ್ತು. ಆದ್ದರಿಂದಲೆ ಅವನನ್ನು ನಿವಾರಿಸಲು ಆದಷ್ಟು ಪ್ರಯತ್ನ ಪಟ್ಟು ಔದಾಸೀನ್ಯದಿಂದ ಒರಟು ಒರಟಾಗಿ ಮಾತಾಡಿದ್ದನು. ಆದರೂ ಸೋಮ ಅದಕ್ಕೆಲ್ಲ ಸೊಪ್ಪುಹಾಕುವವನಾಗಿರಲಿಲ್ಲ. ತನ್ನ ಕೈನೋವಿನ ಮಾತನ್ನೂ ಜ್ವರದಿಂದ ನಾಲಗೆ ರುಚಿಗೆಟ್ಟ ಮಾತನ್ನೂ ತೆಗೆದನು. ಬೈರನಿಗೆ ಚೆನ್ನಾಗಿ ಅರ್ಥವಾಯಿತು. ಆದರೂ "ಔಸಿದ್ದಿ ತಗೋಳ್‌ಬೈದಿತ್ತಲ್ಲ" ಎಂದನು.

"ಅದಾದರೂ ಕೊಡುವವರು ಯಾರು ?"

"ಕೆಳಕಾನೂರು ಅಣ್ಣೇಗೌಡ್ರ ಹತ್ರ ಹೋಗಿ."

"ಅವರು ಎಂಥಾ ಔಷಧಿ ಕೊಡುತ್ತಾರೆ? ಅವರಿಗೇ ಯಾರಾದರೂ ಕೊಟ್ಟರೆ ಸಾಕಾಗಿದೆ... ನಾಲಗೆ ರುಚಿ ಕೆಟ್ಟ ಮೇಲೆ ಔಷಧಿ ಸೇರುವುದಿಲ್ಲ..."

"ದೋಯಿಸ್ರು, ಎಂಕಪ್ಪಯ್ನೋರ ಹತ್ರ ಈಬೂತಿ ತನ್ನಿ."

"ನಾಲಗೆ ರುಚಿ ಕೆಟ್ಟಮೇಲೆ ಈಬೂತಿಯಾದರೂ ಏನು ಮಾಡ್ತದೆ?"

"ಕೂಳೂರು ದೇವ್ರ ಹತ್ರ ಕೇಳಿಸಿ ಪರ್ಸಾದ ತಗೊಂಡು ಬನ್ನಿ. ನಂಗೊಂದ್ಸಾರಿ ನಿಮ್ಗಾದ್ಹಾಂಗೆ ಆಗಿತ್ತು. ಕೂಳೂರು ದೇವರ ಪರ್ಸಾದ ತಂದೆ, ನೋಡಿ, ಎಲ್ಲ ಗಿರಾಚಾರ ಬಿಟ್ಟುಹೋಯ್ತು."

"ನೀನು ಹೇಳುವುದೇನೋ ಹೌದೆ! ಆದರೇ... ನೋಡು... ಮುಖ್ಯ ವಾಗಿ... ನಾಲಗೆ... ರುಚಿ ಕೆಟ್ಟಮೇಲೆ ಏನು ಮಾಡಿದರೂ... ಅಗೋ ಗೋ ಗೋ ಗೋ ಅಲ್ಲಿ ಹೋಯ್ತು! ಅಲ್ಹೋಯ್ತು!... ಇಲ್ಲಿ ಬಂತೋ ಇಲ್ಲಿ! ಇಲ್ಲಿ!... ದೊಡ್ಡ ಮೀನು ಕಣೋ, ಬಿಡ್ಬ್ಯಾರ್ದು..."

ಬೈರ ಕೆಸರು ಕಸಗಳನ್ನೆಲ್ಲ ಹಿಸುಕಿ ಹಿಸುಕಿ, ಸಂದಿಸಂದಿಗಳಲ್ಲಿ ಕೈಹಾಕಿ ನುಣುಚಿ ಕೊಳ್ಳುತ್ತಿದ್ದ ಆ ಮುರುಗುಂಡನ್ನು (ಒಂದು ಜಾತಿಯ ಮೀನು) ಹುಡುಕಿದನು. ಸೋಮ ಒಮ್ಮೆ ಪ್ರಶ್ನೆಚಿಹ್ನೆಯಾಗಿ, ಒಮ್ಮೆ ಆಶ್ಚರ್ಯಚಿಹ್ನೆಯಾಗಿ, ಒಮ್ಮೆ ಬಕಗ್ರೀವನಾಗಿ, ಒಮ್ಮೆ ಹಯಗ್ರೀವನಾಗಿ ಸಲಹೆಗಳನ್ನು ಕೊಡುತ್ತ ಅಂಚಿನಲ್ಲಿ ನಿಂತನು.

ಎಲ್ಲ ಪೂರೈಸಿದ ಮೇಲೆ ಬೈರ ಗಂಗನನ್ನು ಕರೆದುಕೊಂಡು ಗುಡಿಗೆ ಹೊರಡ ಲನುವಾದನು.

ಸೋಮ "ಬೈರಾ, ಜ್ವರ ಬಂದು ನಾಲಗೆ ಸತ್ತುಹೋಯಿತ್ತು ಕಣೋ. ಚಟ್ನಿಗೆ ಒಂದು ಏಡಿಯಾದರೂ ಕೊಟ್ಟಿದ್ದರೆ! ನಿನ್ನ ಹೆಸರಿನ ಮೇಲೆ ಒಂದು ಚಿಪ್ಪು ಗಂಜಿ ಉಣ್ತಿದ್ದೆ" ಎಂದು ಬಾಯಿಬಿಟ್ಟು ಕೇಳಿಯೇ ಬಿಟ್ಟನು.

. "ಹಾಳಾಗಿ ಹೋಗ್ಲಿ; ಹಿಡೀರಿ" ಎಂದು ಬೈರ ಹಾಳೆಯ ಕೊಟ್ಟೆಗೆ ಕೈಹಾಕಿ ಒಂದು ಸಣ್ಣ ಏಡಿಯನ್ನು ಆರಿಸಿಕೊಟ್ಟು, ನಡುಗುತ್ತಿದ್ದ ಗಂಗನನ್ನು ನೋಡಿ "ಯಾಕೋ ನಡಗ್ತೀಯಾ?" ಎಂದನು.

ಅವನು ಸಣ್ಣ ನಡುಕು ದನಿಯಿಂದ "ಜರ ಬಂದದೆ!" ಎಂದನು.

"ಹುಡುಗ ಹೆದರಿತ್ತು ಅಂಬುದಾಗಿ ಕಾಣುತ್ತದೋ... ಒಂದು ಕೋಳಿ ಸುಳಿದುಬಿಡು. ಇಲ್ಲಿ ರಣಪಿಶಾಚಿ ತಿರುಗಾಡ್ತದಂತೆ!" ಎಂದು ಸೂಚನೆ ಕೊಡುತ್ತ ಸೋಮ ಮಟಗುಡುತ್ತಿದ್ದ ಏಡಿಯನ್ನು ಮೂಸಿನೋಡಿ ಹಿಗ್ಗಿದನು.

## ೨೭

## ಕಿಲಿಸ್ತರ ಮಾರ್ಕನಿಗೆ ಬೈರ ನಾಮ ಹಾಕಿದ್ದು

ಇತ್ತ ಬೈರ ಗಂಗನೊಡಗೂಡಿ 'ಹೊಂಡ ತೋಣಿಕಿ' ಮೀನು ಹಿಡಿಯುತ್ತಿದ್ದಾಗ ಅತ್ತ ಹಳೆಪೈಕದ ತಿಮ್ಮನ ಹುಲ್ಲುಮನೆಯಲ್ಲಿ ಮಾರ್ಕ ಕಳ್ಳಬಗನಿ ಕಟ್ಟಿದವನನ್ನು ಹಿಡಿಯಲು ವ್ಯೂಹರಚನೆ ಮಾಡುತ್ತಿದ್ದನು. ಆ ದಿನ ಸಾಯಂಕಾಲವೆ ಬಗನಿಯ ಮರದ ಬಳಿ ಕಾದು ಕುಳಿತು ಕಳ್ಳುಕಳ್ಳನನ್ನು ಹಿಡಿಯಬೇಕೆಂದು ನಿರ್ಣಯ ವಾಯಿತು. ಮಾರ್ಕನಿಗೆ ಅರಣ್ಯಗಳ ಪರಿಚಯ ಸಾಲದಿದ್ದುದರಿಂದಲೂ, ಕತ್ತಲಾಗುವ ಹೊತ್ತು ಕಾಡಿನಲ್ಲಿ ಒಬ್ಬನೇ ಇರಲು ಧೈರ್ಯವಾಗದುದರಿಂದಲೂ, ಅಲ್ಲದೆ ಕಳ್ಳನೊಂದುವೇಳೆ ತನಗಿಂತಲೂ ಬಲಿಷ್ಠನಾದರೆ ಕೇಡಾಗಬಹುದೆಂಬ ಆಶಂಕೆಯಿಂದಲೂ ತಿಮ್ಮನೂ ಅವನೊಡನೆ ಹೋಗಬೇಕೆಂದು ಗೊತ್ತಾಯಿತು.

ಬೈಗಿನ ಹೊತ್ತು ಇಬ್ಬರೂ ಸೇರಿ ಬೈರನು ಕಳ್ಳಬಗನಿ ಕಟ್ಟಿದ್ದ ತಾಣಕ್ಕೆ ಹೋಗಿ ಹಳುವಿನಲ್ಲಿ ಅಡಗಿ ಕುಳಿತರು. ಪಿಸುಮಾತಾಡುತ್ತ ನಡುನಡುವೆ ಕಾನನ ನೀರವತೆಗೆ ಕಿವಿಕೊಟ್ಟು ಆಲಿಸುತ್ತಿದ್ದರು. ಆಲಿಸಿದಾಗಲೆಲ್ಲ ನಿಶ್ಶಬ್ದತೆ, ಅಥವಾ ಗೊತ್ತುಕೂರಲು ಹಾರಿಹೋಗುವ ಗಿಳಿಕಾಮಳ್ಳಿಗಳ ಹಿಂಡಿನ ಗುಂಪುದನಿ, ಅಥವಾ ಮರಕುಟಿಗನ ಹಕ್ಕಿ ಒಣಮರವನ್ನು ತನ್ನ ಕಬ್ಬಿಣಗೊಕ್ಕಿನಿಂದ ಕುಟುಕುವ ಸದ್ದು ಅಥವಾ ಜೀರುಂಡೆಗಳ ಜೀರ್ದನಿ ಅಥವಾ ಗಾಳಿಯ ಸದ್ದು, ಕೇಳಿಬರುತ್ತಿತ್ತು.

ಇಬ್ಬರೂ ಎಲೆಯಡಕೆ ಹಾಕಿದರು. ಮಾರ್ಕ ನಶ್ಯವನ್ನೂ ಸೇದಿದನು. ಕಾನೂರಿನ ವಿಚಾರಗಳನ್ನು ಕುರಿತು ಮಾತಾಡಿದರು; ಆಕಳಿಸಿದರು. ಮಗ್ಗುಲಿಂದ ಮಗ್ಗುಲಿಗೆ ತಿರುಗಿ ಕುಳಿತರು. ಮನುಷ್ಯರಂತಿರಲಿ, ಯಾವ ಪ್ರಾಣಿಕೂಡ ಹತ್ತಿರ ಸುಳಿದಾಡಿದಂತೆ ತೋರಲಿಲ್ಲ. ಬಹಳ ಬೇಸರವಾಯಿತು.

ತಿಮ್ಮ ಪಿಸುಮಾತಿನಲ್ಲಿ "ಹಾಂಗಾದರೆ ನೀವಿಲ್ಲಿ ಕೂತ್ಕೊಂಡಿರಿ. ನಾನೀಗ ಬಂದುಬಿಟ್ಟೆ" ಎಂದು ಎದ್ದನು.

"ಎಲ್ಲಿಗೋ?"

"ಇಲ್ಲೇ, ನನ್ನ ಬೈನೇ ನೋಡ್ಕೊಂಡ್ಬತ್ತೀನಿ. ಹಮಾ ದೂರಿಲ್ಲ. ನಾಕೇ ಮಾರು. ನೀವೇನು ಹೆದರ್ಬೇಡಿ. ನಾನೀಗ ಒಂದು ಚಣದಲ್ಲಿ ಬಂದುಬಿಟ್ಟೆ."

"ಹೆಚ್ಚು ಹೊತ್ತು ಮಾಡಬೇಡ. ಬೇಗ ಬಂದುಬಿಡು!"

"ನಿಮಗ್ಯಾಕೆ? ಈಗ ಬಂದುಬಿಡ್ತೀನಿ, ಎಲೆಗೆ ಸುಣ್ಣ ಹಚ್ಚೋ ಒಳಗಾಗಿ!"

ಸಂಧ್ಯಾ ಸಮಯದ ವನಾಂಧಕಾರದ ಹಳುವಿನಲ್ಲಿ ತಿಮ್ಮನ ಆಕಾರ ಕಣ್ಮರೆ

ಯಾಗಿ, ತರಗೆಲೆಗಳ ಮೇಲೆಯೂ ಮತ್ತು ಪೊದೆಗಳ ನಡುವೆಯೂ ನುಸಿಯುವ ಸದ್ದೂ ಬರಬರುತ್ತ ನಿಂತುಹೋಯಿತು. ಮಾರ್ಕನೊಬ್ಬನೇ ಹೆಮ್ಮರಗಳ ಕಾಡಿನ ಕಡೆಗೂ, ನಡುನಡುವೆ ಇಣಿಕಿದಂತಿದ್ದ ಆಕಾಶದ ಕಡೆಗೂ, ಮರಗಳ ನೆತ್ತಿಯ ಹಸುರಿಗೆ ಹೊನ್ನೆರಚಿದ್ದ ಮುದಿಬಿಸಿಲಿನ ಕಡೆಗೂ, ತನ್ನ ಹೂವಿನ ಕೈಯಲ್ಲಿ ಕರಿಯ ಮೊಗೆಯನ್ನು ಹಿಡಿದು ನಿಂತಿದ್ದ ಬಗನಿ ಮರದ ಕಡೆಗೂ ನೋಡುತ್ತ ಕಾದು ಕುಳಿತನು.

ಕಳ್ಳ ಬರುತ್ತಾನೆ. ಮರಕ್ಕೆ ಕಟ್ಟಿರುವ ಒಬ್ಬಿದಿರೇಣಿಯನ್ನು ಹತ್ತಿ ನೊರೆಗಳ್ಳು ತುಂಬಿರುವ ಮೊಗೆಯನ್ನು ಹಿಡಿದು ಕೆಳಗಿಳಿಯುತ್ತಿರುತ್ತಾನೆ. ಆಗ ಹೋಗಿ ಮರದ ಬುಡದಲ್ಲಿ ನಿಂತು ಅವನನ್ನು, ಮೊಗೆ ಬಗನಿಕತ್ತಿಗಳ ಸಮೇತ ಹಿಡಿಯುತ್ತೇನೆ. ಹಾಗೆ ಮಾಡದಿದ್ದರೆ ಸರಿಯಾದ ಸಾಕ್ಷಿ ಸಿಕ್ಕಿದಂತಾಗುವುದಿಲ್ಲ. ಆಮೇಲೆ ಸ್ವಲ್ಪ ಕಳ್ಳನ್ನೂ ಕುಡಿದರಾಯಿತು... ಈ ಹಾಳು ತಿಮ್ಮ ಎಷ್ಟು ಹೊತ್ತು ಮಾಡ್ತಾನೆ? ... ಕಳ್ಳ ಬರ್ತ್ತಾನೆಯೋ ಇಲ್ಲವೋ ಇವತ್ತು! ...ಇವತ್ತು ಬರದಿದ್ದರೆ ನಾಳೆ!— ಹೀಗೆಲ್ಲ ಆಲೋಚಿಸುತ್ತಿದ್ದ ಹಾಗೆಯೆ ದೂರದಲ್ಲಿ ತರಗೆಲೆಗಳ ಸದ್ದಾಯಿತು. ಮಾರ್ಕ ಮೈಯೆಲ್ಲ ಕಣ್ಣಾಗಿ ನೋಡಿದನು. ಹಳುವಿನ ನಡುವೆ ತರಗೆಲೆಗಳಲ್ಲಿ ನಡೆದುಬರುವ ಸದ್ದು ಕ್ರಮೇಣ ಸಮೀಪವಾಯಿತು.... ತಿಮ್ಮನೇ ಹಿಂತಿರುಗಿ ಬರುತ್ತಿರಬಹುದೆ? ಇಲ್ಲ; ತಿಮ್ಮ ಈ ದಿಕ್ಕಿನಿಂದ ಏಕೆ ಬರುತ್ತಾನೆ? ಸದ್ದು ತಟಕ್ಕನೆ ನಿಂತುಬಿಟ್ಟಿತು. ಮಾರ್ಕನ ಉತ್ಕಂಠಿತ ದೃಷ್ಟಿ ಸೂಜಿಯ ಮೊನೆಯ ಮೇಲೆ ಕುಳಿತಂತಿತ್ತು. ಮತ್ತೆ ಸದ್ದು ಪ್ರಾರಂಭವಾಯಿತು.— ಓಹೋ ಕಳ್ಳನೇ ಇರಬೇಕು! ನಿಂತು ನಿಂತು ನೋಡಿ ನೋಡಿ ಬರುತ್ತಿದ್ದಾನೆ! ಪಕ್ಕಾ ಕಳ್ಳ! ಲೌಡೀಮಗನಿಗೆ ಎಷ್ಟು ಎಚ್ಚರಿಕೆ!— ಎಂದು ಮಾರ್ಕ ಕೆಳತುಟಿಯನ್ನು ಮೇಲಿನ ಹಲ್ಲು ಸಾಲಿನಿಂದ ಕಚ್ಚಿದನು. ಸದ್ದು ಹತ್ತಿರವಾಯಿತು. ಹತ್ತಿರ! ಹತ್ತಿರ! ಇನ್ನೂ ಹತ್ತಿರ! ಪೊದೆಗಳ ಚಲನೆ ಕಾಣುತ್ತಿದೆ! ಹ್ಲಾ! ಆ ಪೊದೆ ದಾಟಿದರೆ ಕಾಣಿಸುತ್ತಾನೆ! ಯಾರಿರಬಹುದು? ಮಾರ್ಕ ವ್ಯಕ್ತಿಯ ಮುಖಪರಿಚಯಕ್ಕಾಗಿ ಹಾತೊರೆದು ದೃಷ್ಟಿಯಿಂದಲೇ ಅವನನ್ನು ಪೊದೆಯಿಂದೀಚೆಗೆ ಎಳೆಯುತ್ತಿದ್ದನು! ಅದೋ, ಅಲ್ಲಿ! ಮಾರ್ಕನು ಮನಸ್ಸಿನಲ್ಲಿಯೆ 'ಕಳ್ಳಬಡ್ಡೀಮಗನೇ' ಎಂದುಕೊಂಡು ನೋಡುತ್ತಾನೆ: ಮನುಷ್ಯಾಕೃತಿ! ಆದರೆ ಮನುಷ್ಯನಲ್ಲ! ಮೂರು ನಾಲ್ಕು ಅಡಿಗಳಷ್ಟು ಎತ್ತರವಿದೆ! ಬೂದು ಬಣ್ಣದ ಬಿಳಿಯಛಾಯೆಯ ಕೂದಲು ಮೈ ತುಂಬಿದೆ! ಚಪ್ಪಟೆಯಾದ ಮುಖದ ಸುತ್ತಲೂ ಕರಿಗೂದಲು ಸುತ್ತುಗಟ್ಟಿ ದಟ್ಟವಾಗಿ ಬೆಳೆದಿದೆ! ಕಣ್ಣು ಬೈಗುಗಪ್ಪಿನಲ್ಲಿ ಮಿಳ್ಮಿಳಿಸುತ್ತಿವೆ! ಅಗಲವಾದ ಎದೆ ! ಸಣ್ಣ ಸೊಂಟ!

ಹಿಂಗಾಲುಗಳ ಮೇಲೆ ನಿಂತು ನೋಡುತ್ತಿದೆ ಮುಸಿಯ! (ಸಿಂಗಳೀಕವೆಂಬ ದೊಡ್ಡ ಕಪಿ.)

ಮಾರ್ಕನಿಗೆ ಸ್ವಲ್ಪ ಭಯವಾಯಿತು. ಆದರೂ ಕುತೂಹಲದಿಂದ ಆ ಮನುಷ್ಯಸದೃಶವಾದ ರಾಮಸೇವಕನನ್ನೇ ನೋಡುತ್ತ ಕುಳಿತನು. ಅಲ್ಲಾಡ ಲಿಲ್ಲ. ಮುಸಿಯ ಸುತ್ತಲೂ ನೋಡಿ ಸದ್ದನ್ನಾಲಿಸಿತು. ಮಾರ್ಕನ ಕಿವಿಗೂ ಮತ್ತೊಂದು ಮುಸಿಯ ಹಿಂದುಗಡೆ ನಡೆದು ಬರುತ್ತಿದ್ದಂತೆ ಸದ್ದು ಕೇಳಿಸಿತು. ಆ ಸದ್ದು ಹತ್ತಿರವಾದಂತೆಲ್ಲ ಎದುರಿಗಿದ್ದ ಮುಸಿಯ ಬೆದರುಗಣ್ಣಿನಿಂದ ತಿರುಗಿ ನೋಡುತ್ತ, ಗಿಡಗಳ ನಡುವೆ ಬಡಬಡನೆ ನುಗ್ಗಿ ಹೋಗಿ, ಒಂದು ಹೆಮ್ಮರವನ್ನೇರಿ ದೊಡ್ಡ ಕೊಂಬೆಗಳೂ ಕೂಡ ಅಲ್ಲಾಡುವಂತೆ ಶಬ್ದಮಾಡುತ್ತಾ ಮರದಿಂದ ಮರಕ್ಕೆ ಧಿಮ್ಮಧಿಮ್ಮನೆ ಹಾರಿ ಹಾರಿ ಹೋಯಿತು.

ಮಾರ್ಕನಿಗೆ ಇನ್ನೂ ಭಯವಾಯಿತು. ಹಿಂದುಗಡೆ ಬರುತ್ತಿದ್ದ ಪ್ರಾಣಿ ಮುಸಿಯನಾಗಿದ್ದರೆ ಈ ಮುಸಿಯನೇಕೆ ಹೆದರಿ ಓಡಬೇಕಾಗಿತ್ತು? ಹುಲಿಯೋ ಏನೋ? ತಿಮ್ಮನನ್ನು ಹೋಗಗೊಡಬಾರದಾಗಿತ್ತು. ಹಾಳು ಮನುಷ್ಯ! ಎಷ್ಟು ಹೊತ್ತಾಯಿತು! ಇನ್ನೂ ಬರಲೇ ಇಲ್ಲವಲ್ಲ! ಮಾರ್ಕ ಯೋಚಿಸುತ್ತಿದ್ದ ಹಾಗೆಯೆ ಸದ್ದು ಹತ್ತಿರವಾಗಿ ಪ್ರಾಣಿ ಮಬ್ಬಿನಲ್ಲಿ ಗೋಚರವಾಯಿತು! ಎಂತಹ ವಿಧಿ ಲೀಲೆ? ಪ್ರಾಣಿಯಲ್ಲ, ಮನುಷ್ಯ! ಮಾರ್ಕ ಚೆನ್ನಾಗಿ ನೋಡುತ್ತಾನೆ, ತಾನು ಬೆಳಗ್ಗೆ ಗದ್ದೆಯಲ್ಲಿ ಕಂಡಿದ್ದವನೆ ಇವನು! ಕಾನೂರು ಚಂದ್ರಯ್ಯಗೌಡರ ಬೇಲರಾಳು! 'ಇವನಿಗೇಕೆ ಬೇಕಿತ್ತಪ್ಪಾ ಈ ಕೆಲಸ?' ಎಂದುಕೊಂಡನು.

ಬೈರ ಮರದ ಮೇಲೆ ಹಾರಿಹೋಗುತ್ತಿದ್ದ ಮುಸಿಯನ ಕಡೆಗೆ ನೋಡುತ್ತ ಸ್ವಲ್ಪ ಗಟ್ಟಿಯಾಗಿಯೇ "ಇದರ ಮನೆ ಹಾಳಾಗಲೋ! ಎಷ್ಟು ಹೆದರಿಸಿಬಿಡ್ತು ನನ್ನ!" ಎಂದುಕೊಂಡು ಅತ್ತ ಇತ್ತ ನೋಡದೆ ಬಗನಿಯ ಮರದ ಬುಡಕ್ಕೆ ಬಂದನು.

ಕಳ್ಳು ತುಂಬಿ ತೆಗೆದುಕೊಂಡು ಹೋಗಲೆಂದು ಮನೆಯಿಂದ ತಂದಿದ್ದ ಉಗ್ಗ ಹಾಕಿದ್ದ ಕರಿಯ ಮೊಗೆಯನ್ನು ಬುಡದಲ್ಲಿಟ್ಟು, ಬಗನಿಯ ಮರಕ್ಕೆ ಬಿಗಿದು ಕಟ್ಟಿದ್ದ ಬಿದಿರಿನ ಒಗ್ಗಾಲೇಣಿಯನ್ನು ಚತುರತೆಯಿಂದ ಸರಸರನೆ ಏರಿ, ಕಳ್ಳು ತುಂಬಿದ್ದ ಮೊಗೆಯನ್ನು ಬಿಚ್ಚಿ ಕೈಗೆ ತೆಗೆದುಕೊಂಡನು. ಕಳ್ಳಿನ ಹುಳಿ ವಾಸನೆಯನ್ನು ಆಘ್ರಾಣಿಸಿದ ಬೈರನಿಗೆ ಬಿಡಾರದಲ್ಲಿ ಸೇಸಿ ನಂಚಿಕೊಳ್ಳಲು ಮಾಡಿಟ್ಟಿದ್ದ ಖಾರವಾದ ಕೆಂಬಣ್ಣದ ಮೀನುಪಲ್ಯದ ನೆನಪಾಯಿತು.

ಮೊಗೆಯ ಉಗ್ಗವನ್ನು ಒಂದು ಕೈಯಲ್ಲಿ ಬಲವಾಗಿ ಹಿಡಿದು, ಅನುಭವ ಶಾಲಿಯಾದ ಬೈರ ಮೆಲ್ಲಗೆ ಇಳಿಯತೊಡಗಿದನು. ನಾಲ್ಕೈದು ಮೆಟ್ಟಲು

ಇಳಿದಾದ ಮೇಲೆ ನೆಲದಮೇಲೆ ಸದ್ದಾಯಿತು. ಬೈರ ಕೆಳಗೆ ನೋಡಿದನು. ಪೊದೆಗಳು ಅಲುಗಾಡುತ್ತಿದ್ದುವು. ಬೈರ ಆಶ್ಚರ್ಯ ಕುತೂಹಲ ಉದ್ವೇಗ ಭಯಗಳಿಂದ ನೋಡುತ್ತಿದ್ದ ಹಾಗೆಯೆ, ಮಾರ್ಕನು ಕಾಣಿಸಿಕೊಂಡು, ಬಗನಿಯ ಮರದ ಬುಡಕ್ಕೆ ಬಂದು ನಿಂತು, ಮೇಲೆ ನೋಡಿದನು. ಇಬ್ಬರ ದೃಷ್ಟಿಗಳೂ ಸಂಧಿಸಿದುವು.

"ಇಳೀ! ಇಳೀ! ಪರ್ವಾಯಿಲ್ಲ!" ಎಂದ ಮಾರ್ಕನ ಧ್ವನಿಯಲ್ಲಿ ಛಲವೂ ಹಾಸ್ಯವೂ ಇದ್ದುವೇ ಹೊರತು ಕನಿಕರವಿರಲಿಲ್ಲ.

ಬೈರ ಇಳಿಯಲಿಲ್ಲ. ಒಂದು ಕೈಯಲ್ಲಿ ಮೊಗೆಯನ್ನು ಹಿಡಿದು, ಮತ್ತೊಂದು ಕೈಯಲ್ಲಿ ಮರದ ಗಾತ್ರವನ್ನು ತಬ್ಬಿ, ಒಂದು ಕಾಲು ಮೇಲಿಟ್ಟು ಒಂದು ಕಾಲು ಕೆಳಗಿಟ್ಟು ಏಣಿಯ ಮೇಲೆ — ಗಡ್ಡೆ ಬೆಳೆದಿದ್ದ ಡೊಳ್ಳುಹೊಟ್ಟೆ ಸಲಸಲಕ್ಕೂ ಮರದ ದಿಂಡನ್ನು ರಭಸದಿಂದ ಚುಂಬಿಸುವಷ್ಟರಮಟ್ಟಿಗೆ ದೀರ್ಘವಾಗಿ ಶ್ವಾಸೋಚ್ಛ್ವಾಸ ಬಿಡುತ್ತ, ಸ್ತಬ್ಧ ನಿಶ್ಶಬ್ದವಾಗಿಬಿಟ್ಟನು. ಅವನಿಗೆ ಮುಂದೇನು ಮಾಡಬೇಕೆಂದು ಬಗೆಹರಿಯಲಿಲ್ಲ. "ನಾನು ಸಿಕ್ಕಿಬಿದ್ದೆ! ನನ್ನ ಗತಿ ಮುಗಿಯಿತು! ನಾನು ಕೆಟ್ಟೆ!" ಎಂದು ಮನಸ್ಸು ಕದಡಿಹೋಗಿ ಕಂಗೆಟ್ಟಿದ್ದನು.

"ಇಳೀತೀಯೋ ಇಲ್ಲೋ?" ಎಂದು ಮಾರ್ಕ ಮತ್ತೆ ಗದರಿ ಕೂಗಲು —

"ಇಳೀತೀನಿ, ನಮ್ಮಪ್ಪಾ! ನಿಮ್ಮ ದಮ್ಮಯ್ಯಾ ಅಂತೀನಿ! ಇಂದೊಂದು ಸಲ ಬಿಟ್ಟುಬಿಡಿ. ನಿಮ್ಮ ಕಾಲಿಗ್ಬೀಳ್ತೀನಿ!" ಎಂದು ಗಡ್ಡ ಮೀಸೆ ಒಂದೊಂದಂಗುಲ ಬೆಳೆದಿದ್ದ ಬೈರ ಹುಡುಗನಂತೆ ರೋದನಧ್ವನಿ ತೆಗೆದನೇ ಹೊರತು ಇದ್ದಲ್ಲಿಂದ ಒಂದಿನಿತೂ ಅಲುಗಾಡಲಿಲ್ಲ.

"ಇಳೀದಿದ್ದರೆ ನೋಡು! ಏಣಿ ಬಿಚ್ಚಿಹಾಕಿ ಹೋಗ್ತೀನಿ. ರಾತ್ರಿಯೆಲ್ಲಾ ಅಲ್ಲೇ ಕೂತಿರ್ಬೇಕು!" ಎಂದು ಮಾರ್ಕ ಕೆಳಭಾಗದ ಏಣಿಯ ತುಂಡಿಗೆ ಕೈಯಿಟ್ಟನು.

"ನಿಮ್ಮ ದಮ್ಮಯ್ಯಾ! ನಿಮ್ಮ ದಮ್ಮಯ್ಯಾ! ಇಳೀತೀನಿ!" ಎಂದು ಬೈರ ಎರಡು ಮೆಟ್ಟಲು ಇಳಿದು ಮತ್ತೆ, "ನಿಮ್ಮ ಕಾಲಿಗ್ಬೀಳ್ತೀನಿ! ಇದೊಂದು ಸಲ ಮಾಪಿಮಾಡಿ! ನಿಮಗೆ ಏನು ಬೇಕಾದರೂ ಕೊಡ್ತೀನಿ!" ಎಂದು ಕಣ್ಣೀರು ಕರೆದನು.

"ಇಳೀತೀಯೋ ಇಲ್ಲೋ? ಲೌಡೀಮಗನೇ, ಥೂ!" ಎಂದು ಮಾರ್ಕ ರೇಗಿ, ಮೇಲಕ್ಕೆ ಉಗುಳಿದನು. ಉಗುಳು ಗಾಳಿಯಲ್ಲಿ ತುಂತುರು ತುಂತುರಾಗಿ ಅವನ ಮುಖದ ಮೇಲೆಯೇ ಬಿದ್ದಿತು. ಮಾರ್ಕನಿಗೆ ಮತ್ತಷ್ಟು ಕೋಪವೇರಿತು. ಒಂದು ಬಡಿಗೆ ತೆಗೆದುಕೊಂಡು ಬೈರನ ಕಡೆಗೆ ಬೀಸಿದನು. ಅದು ಅವನಿಗೆ

ತಗುಲದೆ ಪಕ್ಕದಲ್ಲಿ ರೊಯ್ಯೆಂದು ನುಗ್ಗಿಹೋಗಿ ಹಳುವಿನಲ್ಲಿ ಬಿದ್ದು ಸದ್ದು ಮಾಡಿತು.

"ಅಯ್ಯಯ್ಯೋ! ಇಳೀತೀನಿ! ಇಳೀತೀನಿ! ನಿಮ್ಮ ದಮ್ಮಯ್ಯ!" ಎಂದು ಬೈರ ಇಳಿಯತೊಡಗಿದನು. ಮಾರ್ಕನು ಮುಖವೆತ್ತಿ ಅವನನ್ನೇ ನೋಡುತ್ತ, ಅವನು ಕೆಳಗಿಳಿದೊಡನೆಯೆ ಹೇಗೆ ಹಿಡಿಯಬೇಕೆಂಬುದನ್ನು ಕುರಿತು ಆಲೋಚಿಸುತ್ತಿದ್ದನು. ಬೈರ ಇಳಿಯುತ್ತಿದ್ದಾಗಲೇ ಹೇಗೆ ತಪ್ಪಿಸಿಕೊಳ್ಳಬೇಕೆಂದು ಆಲೋಚಿಸುತ್ತಿದ್ದನು.

ಇನ್ನೇನು ನೆಲ ಒಂಬತ್ತು ಹತ್ತು ಅಡಿಗಳಷ್ಟು ದೂರದಲ್ಲಿದೆ ಎನ್ನುವಾಗ ಬೈರ ನಿಂತನು. ಕೆಳಗೆ ನೋಡಿದನು.

"ಇಳಿಯೋ! ಇಳಿಯೋ! ಕತ್ತಲಾಯ್ತು!" ಮಾರ್ಕ ಬೈರನಿಗೆ ನೇರವಾಗಿ ಕೆಳಗಡೆ ನಿಂತು ಆಕಾಶದ ಕಡೆಗೆ ಮುಖವೆತ್ತಿ ಹೇಳುತ್ತಿದ್ದನು.

ಕ್ಷಣಮಾತ್ರದಲ್ಲಿ ಬೈರನ ಮನಸ್ಸಿಗೆ ಒಂದು ಉಪಾಯ ಹೊಳೆಯಿತು. ಹಿಂದೆ ಪ್ರಯತ್ನಪಟ್ಟರೂ ಹೊಳೆದಿರಲಿಲ್ಲ. ಈಗ ಅಪಾಯ ಸನ್ನಿಹಿತವಾದಾಗ, ಸನ್ನಿವೇಶವೇ ಉಪಾಯವನ್ನೂ ತೋರಿಸಿಕೊಟ್ಟಿತು. ತುಂಬಿದ್ದ ಕಳ್ಳುಮೊಗೆಯನ್ನು ಎಡಗೈಯಿಂದ ಬಲಗೈಗೆ ಜಾರಿಸಿಕೊಂಡನು. ಅದನ್ನೇ ನೋಡುತ್ತಿದ್ದ ಮಾರ್ಕ ಎಡಗೈ ಸೋತುದರಿಂದ ಬಲಗೈಗೆ ಸರಿಸಿಕೊಳ್ಳುತ್ತಿದ್ದಾನೆ ಎಂದು ಭಾವಿಸಿದನು. ಆದರೆ ಮರುಕ್ಷಣದಲ್ಲಿಯೇ ಕಳ್ಳುತುಂಬಿ ಭಾರವಾಗಿದ್ದ ಆ ಮೊಗೆ ಮೇಲೆ ನೋಡುತ್ತಿದ್ದ ಅವನ ಮುಖದಮೇಲೆ, ಅದರಲ್ಲಿಯೂ ಮೂಗಿಗೆ ಸರಿಯಾಗಿ, ಝೊಪ್ಪೆಂದು ಬಿದ್ದು ಒಡೆದು ಹೋಳುಹೋಳಾಗಿ ಚದರಿಹೋಯಿತು. ನೊರೆಗಳ್ಳು, ಕಣ್ಣು ಮೂಗು ಬಾಯಿ ಕಿವಿ ಎಲ್ಲೆಲ್ಲಿಯೂ ನುಗ್ಗಿ ಪ್ರವಹಿಸಿತು! ಮೂಗಿನ ಎಲುಬಂತೂ ಮುರಿದುಹೋದಂತಾಗಿ ಅಸಾಧ್ಯವಾಗಿ ನೋವಾಯಿತು. ಕಣ್ಣುಗಳಿಗೆ ನುಗ್ಗಿದ ಹುಳಿಗಳ್ಳು ಬೈರನ ಪರವಾಗಿ ಚೆನ್ನಾಗಿ ವಾದಿಸಿತ್ತು.

"ಅಯ್ಯೊ! ಅಯ್ಯಯ್ಯೋ! ಅಯ್ಯಯ್ಯೋ ಸೂಳೇ ಮಗನೇ! ತೆಗೆದಲ್ಲೋ ಕೊಂದ್ಯೇನೊ! ತಿಮ್ಮಾ! ಏ ತಿಮ್ಮಾ! ಎಲ್ಲಿ ಸತ್ತ್ಯೋ! ಕೊಂದನಲ್ಲೋ! ಕೊಂದನಲ್ಲೋ!... ಹಿಡಕೊಳ್ಳೊ ಓಡ್ದನಲ್ಲೊ! ಅಯ್ಯೊಯ್ಯೋ!..." ಎಂದು ಮೊದಲಾಗಿ ಮಾರ್ಕ ಆ ನಿಶ್ಶಬ್ದವಾದ ಸಂಧ್ಯಾ ಕಾನನದಲ್ಲಿ ತಾರಸ್ವರದಿಂದ ಕೂಗಿಕೊಂಡು ಹುಚ್ಚು ಹಿಡಿದವನಂತೆ ಚೇಳು ಕಡಿದವನಂತೆ ವರ್ತಿಸಿದನು. ಬೈರ ಇಳಿದು ಪರಾರಿಯಾದುದನ್ನು ನೋಡಲೂ ಆಗಲಿಲ್ಲ; ಆಲಿಸಲೂ ಆಗಲಿಲ್ಲ.

ಇದಾವುದರ ಅರಿವೂ ಇಲ್ಲದೆ, ತನ್ನ ಕೆಲಸವನ್ನು ಪೂರೈಸಿ, ಕೈಯಲ್ಲಿ ಕಳ್ಳಿನ ಮೊಗೆಯನ್ನು ಹಿಡಿದು ನಿಧಾನವಾಗಿ ಕಾಡಿನ ಹಳುವಿನಲ್ಲಿ ಏರಿ ಇಳಿದು ಬನ

ಗತ್ತಲೆಯ ಮಬ್ಬುಗಪ್ಪಿನಲ್ಲಿ ಬರುತ್ತಿದ್ದ ಹಳೆಪೈಕದ ತಿಮ್ಮ ಮಾರ್ಕನ ಭಯಂಕರ ಆರ್ತನಾದವನ್ನೂ— ಅಯ್ಯೊಯ್ಯೊ . . . ಕೊಂದ್ಯೇನೋ . . . ತಿಮ್ಮಾ . . . ಎಲ್ಲಿ ಸತ್ತ್ಯೋ . . . ಕೊಂದನಲ್ಲೊ . . . ಇತ್ಯಾದಿ ಪದಗಳನ್ನೂ ಕೇಳಿ ದಿಗಿಲುಬಿದ್ದು ಖೂನಿಯಾಯಿತೋ ಏನೋ ಎಂಬ ಬೀಭತ್ಸಭಯೋದ್ವೇಗದಿಂದ ಓಡತೊಡಗಿದನು. ಹಿಣಿಲು ಹಿಣಿಲಾಗಿ ಹೆಣೆದುಕೊಂಡಿದ್ದ ಪೊದೆಗಳ ನಡುವೆ ನುಗ್ಗಿ ಹಾರಿ ನುಸಿದು ಹೆಮ್ಮರಗಳಿಗೆ ತಾಗಿ ಬರುತ್ತಿರಲು, ದಾರಿಗೆ ಅಡ್ಡವಾಗಿದ್ದ ಒಂದು ಎತ್ತುಬೀಳಿಗೆ (ಒಂದು ಜಾತಿಯ ಮುಳ್ಳುಬಳ್ಳಿ) ಸಿಕ್ಕಿ ಮುಗ್ಗರಿಸಿ ಬಿದ್ದನು. ಕೈಲಿದ್ದ ಮೊಗೆ ಚೂರಾಗಿ ಕಳ್ಳು ಕಾಡುನೆಲದ ಪಾಲಾಯಿತು. ಮುಂಗೈ ಮೊಳಕಾಲು ತರಿದು ರಕ್ತವಾಯಿತು. ಅದನ್ನೂ ಲೆಕ್ಕಿಸದೆ ಎದ್ದು, ಸಾವು ಬದುಕನರಿಯದೆ ಓಡಿಯೋಡಿ ಬಂದನು.

"ಕಳ್ಳಸೂಳೇಮಗನೇ ಎಲ್ಲಿ ಹೋಗಿದ್ದ್ಯೋ ನೀನು?"

ಮಾರ್ಕನು ಬೈದರೂ— ಖೂನಿಯಾಗದಿದ್ದುದನ್ನು ಕಂಡು— ತಿಮ್ಮನಿಗೆ ಸ್ವಲ್ಪ ಎದೆಶಾಂತಿಯಾಗಿ, ಏದುತ್ತ "ಏನಾಯಿತ್ರೋ?" ಎಂದನು.

"ಕಳ್ಳಸೂಳೇಮಗನೇ, ನಿಮ್ಮದೆಲ್ಲಾ ಒಳಸಂಚು! ನನಗೆ ಗೊತ್ತಾಯಿತು. ನೀವೆಲ್ಲಾ ಸೇರಿ ನನ್ನ ಕೊಲ್ಲಬೇಕು ಅಂತಾ ಮಾಡಿದ್ರೇನು? . . ." ಎಂದು ಮಾರ್ಕ ಹುಚ್ಚುಹುಚ್ಚಾಗಿ ಆಪಾದನೆ ಮಾಡಲಾರಂಭಿಸಿದನು. ಅವನ ಸ್ಥಿತಿ ನಗೆ ತರುವಂತಿದ್ದರೂ ತಿಮ್ಮ ನಗಲಿಲ್ಲ; ಸಮಾಧಾನ ಮಾಡಿದನು.

"ಎಲ್ಹೋದ್ನೋ ಅವನೂ!" ಮಾರ್ಕನು ಕೂಗಿದನು.

"ಯಾರು?" ಎಂದು ತಿಮ್ಮ ಬೆರಗಾಗಿ ಕೇಳಿದನು.

"ಯಾರೇ? ನಿನ್ನಪ್ಪ! . . . ಗೊತ್ತಿಲ್ಲ ಅಂತ ನಟಿಸ್ತೀಯಾ? ಎಲ್ಹೋದ್ನೊ ಅವನು? ಹೇಳ್ತೀಯೋ ಇಲ್ವೋ? . . . ನಿನಗೂ ಜೈಲು ಹಾಕಿಸ್ತೀನಿ! ಕಳ್ಳ ಸೂಳೇಮಗ್ನೇ, ಯಾರ್ಹತ್ರ ಈ ಠಕ್ಕು?"

ತಿಮ್ಮನು ಕಕ್ಕಾಬಿಕ್ಕಿಯಾದನು. ಮಾರ್ಕನನ್ನು ಆದಷ್ಟುಮಟ್ಟಿಗೆ ಸಮಾಧಾನ ಪಡಿಸಿ, ತಾನು ಬರುವುದಕ್ಕೆ ಏಕೆ ಹೊತ್ತಾಯಿತು ಎಂಬುದನ್ನೂ ತಿಳಿಸಿದನು. ಮಾರ್ಕ ನಡೆದ ಸಂಗತಿಯನ್ನೆಲ್ಲ ಹೇಳಿ "ಅವನಿಗೆ ಸಜಾ ಹಾಕಿಸದೆ ಇದ್ದರೆ ನಾನು ಕಿಲಸ್ತರ ಜಾತಿಗೆ ಹುಟ್ಟಿದವನೇ ಅಲ್ಲ" ಎಂದು ಕೂಗಾಡಿದನು.

"ಅವನು ಯಾರು ನಿಮಗೆ ಗೊತ್ತೇನು?"

"ನಿಮ್ಮ ಬೇಲರ ಕೇರಿಯವನೋ. ಅವನ ಸುಡುಗಾಡು ಹೆಸರು ನನಗೆ ಗೊತ್ತಿಲ್ಲ! — ಒಂದೊಂದು ಅಂಗುಲ ಬೆಳೆದಿದೆಯಲ್ಲಾ ಗಡ್ಡ! ಡೊಳ್ಳು ಹೊಟ್ಟೆ! — ಯಾರಿರಬಹುದು ಹೇಳು?"

ತಿಮ್ಮ ಆಲೋಚಿಸಿ "ಯಾರದಪ್ಪಾ ಗಡ್ಡ, ಡೊಳ್ಳೊಟ್ಟೆ? ಹಾಂಗಿ ರೋನು ಬೈರೊಬ್ಬ..."

"ಅವ್ನೇ! ಅವ್ನೇ! ಬೈರಾ!—ಸೂಳೇಮಗನಿಗೆ ಕೋಳ ಹಾಕಿಸ್ತೀನಿ!"

"ಅವನೆಲ್ಲಿದಾನೆ ಇವತ್ತು ಕೇರೀಲಿ? ಸೀತೇಮನೆ ಬೇಲರಕೇರೀಲಿ ಅವನ ನಂಟಬಾವ ಸತ್ತನಂತೆ. ಅಲ್ಲಿಗೆ ಹೋಗಿರಬೈದು." ಬಗನಿ ಕಟ್ಟಿದವನು ಬೈರನೆಂದು ತಿಮ್ಮ ಕನಸಿನಲ್ಲಿಯೂ ಊಹಿಸಿರಲಿಲ್ಲ.

"ಸುಳ್ಳು ಹೇಳ್ತೀಯಾ? ಬೆಳಿಗ್ಗೆ ನೋಡಿದ್ದೀನಿ, ಹೊಂಡ ತೋಣಕಕ್ಕೆ ಹೋಗ್ತಿದ್ದ!"

"ಬೆಳಿಗ್ಗೆ ಹೊಂಡ ತೋಣಕಿದ್ರೆ ಮಜ್ಜಾನ ಹೋಗ್ಬಾರ್ದೇನು?"

ಹೀಗೆ ಬಹಳ ಹೊತ್ತು ವಾದವಿವಾದಗಳಾದ ಮೇಲೆಯೇ ಇಬ್ಬರೂ ಸೇರಿ ಸಾಕ್ಷಿಗಾಗಿ ಒಡೆದುಬಿದ್ದಿದ್ದ ಕಳ್ಳುಮೊಗೆಯ ಚೂರುಗಳನ್ನೂ ಮರದ ಬುಡದಲ್ಲಿ ಬೈರನಿಟ್ಟಿದ್ದ ಕಳ್ಳುಮೊಗೆಯನ್ನೂ ತೆಗೆದುಕೊಂಡು ಮನೆಯ ಕಡೆಗೆ ಹೊರಟರು.

ದಾರಿಯಲ್ಲಿ ತಿಮ್ಮನೆಂದನು: "ನೀವು ಕಿಲಿಸ್ತಾನ್ರು. ನಿಮಗೆ ಗೊತ್ತಾಗೋದಿಲ್ಲ. ಮನುಷ್ಯನಾದ್ರೆ ಇಷ್ಟೆಲ್ಲಾ ಮಾಡಿ ತಪ್ಪಿಸಿಕೊಳ್ಳಾಕೆ ಆಗ್ತದೆಯೇ?"

"ಮತ್ತೇನು ದೆವ್ವ ಅಂತ ಮಾಡಿಯೇನು?"

"ಹೀಂಗೆ ಎಷ್ಟೋ ಸಲ ಆಗ್ಯಾದೆ! ನಮ್ಮ ಭೂತ್ರಾಯ್ಗೆ ಕಿಲಿಸ್ತಾನ್ರು ಅಂದ್ರೆ, ಆಗೋದಿಲ್ಲ."

"ಹೋಗ್ಹೋಗೋ! ಯಾರಾದರೂ ಹಳ್ಳಿಗಮಾರರಿಗೆ ಹೇಳು" ಎಂದ ಮಾರ್ಕನ ಮನಸ್ಸಿನಲ್ಲಿ ತಿಮ್ಮನ ಮಾತಿನ ಹೆದರಿಕೆ ಬೇರೂರುತ್ತಿತ್ತು.

"ನೀವು ಹಾಂಗೆ ತಾತ್ಸಾರ ಮಾಡಬೇಡಿ. ನೋಡಿ, ನಿಮ್ಮ ಜಾತಿಯವನೇ ಆ ಸೀತೆಮನೆ ಜಾಕಣ್ಣ. ಅವನೂ ಮದ್ದುಮದ್ದು ಬಂದಾಗ ನಮ್ಮ ದೆಯ್ಯ ದ್ಯಾವರನ್ನ ಹಾಸ್ಯಮಾಡ್ತಿದ್ದ. ಒಂದು ಸಾರಿ ಚೌಡಿ ಕೊಡ್ತು ರಕ್ತ ಕಾರ್ಕೊಳ್ಳೋ ಹಾಂಗೆ! ಆಮೇಲೆ ನಮ್ಮ ದೆಯ್ಯ ದ್ಯಾವ್ರಿಗೆ ಹರಕೆ ಹೇಳ್ತಾನೆ; ಕೋಳಿ ಕುರಿ ಕೊಡ್ತಾನೆ. ಎಲ್ಲ ಮಾಡ್ತಾನೆ!... ಅವನು ನಿಜವಾಗ್ಲೂ ನಮ್ಮ ಬೇಲರ ಬೈರನೆ ಆಗಿದ್ರೆ, ನಿಮ್ಮಂಥ ಸರ್ಕಾರಿ ನೋಕ್ರ ಮುಖದ ಮೇಲೆ ಕಳ್ಳು ಮೊಗೆ ಹಾಕಿ ಓಡ್ಹೋಗೋದು ಅಂದ್ರೇನು? ಬೇಲರ ಬೈರಗೆ ಎಲ್ಲಿ ಬಂತು ಆ ಧೈರ್ಯ, ಆ ಉಪಾಯ? ನಿಮ್ಮಂಥೋರ ಕೈಲಿ ಅವನು ತಪ್ಪಿಸಿಕೊಂಡು ಹೋಗೋದೆ?—ಎಲ್ಲ ಭೂತರಾಯನ ಚ್ಯಾಷ್ಟೆ! ನಾಳೆ ನಾಡ್ದಿನ ಹಾಂಗೆ ನಮ್ಮ ಭೂತರಾಯನ ಹರಕೆ ಆಗ್ತದೆ. ನೀವೂ ಇದ್ದು, ಧೂಪ ಹಾಕಿ, ಪಾರ್ತ್ನೆ ಮಾಡಿ!"

ಆ ಕಾಡು, ಆ ಕತ್ತಲೆ, ಆ ಉದ್ವೇಗ, ಸಂದೇಹವೇನೆಂಬುದನ್ನೇ ಅರಿಯದ

ತಿಮ್ಮನ ಆ ಶ್ರದ್ಧಾವಾಣಿ ಇವುಗಳಿಂದ ಮಾರ್ಕನ ಚರ್ಮದಲ್ಲಿ ಮಾತ್ರವಿದ್ದ ಕ್ರೈಸ್ತಮತ ಅಳುಕಿತು. ನಡೆದುದನ್ನು ನೆನೆದಂತೆಲ್ಲ ತಿಮ್ಮನ ಉಪಪತ್ತಿಯೆ ಋಜುವಾಗುವಂತೆ ತೋರಿತು. ಆದರೂ ಹೊರಗೆ ಮಾತ್ರ "ನಾಳೆ ಬೇಲರನ್ನೆಲ್ಲಾ ಕರೆಸಿ ಗೌಡರಿಂದ ವಿಚಾರಣೆ ಮಾಡಿಸ್ತೀನಿ" ಎಂದನು.

*    *    *    *

ಆ ರಾತ್ರಿ ಬೇಲರ ಸಿದ್ದ ಬಿಡಾರದಲ್ಲಿ ಕೂತಿದ್ದಾಗ ಬೈರ ಅಲ್ಲಿಗೆ ಬಂದು ಅವನ ಕಿವಿಯಲ್ಲಿ ಬಹಳ ಹೊತ್ತು ಪಿಸುಮಾತಾಡಿದನು. ಆಮೇಲೆ ಅವರಿಬ್ಬರೂ ಸೇರಿ ಬೈರನ ಬಿಡಾರಕ್ಕೆ ಹೋದರು. ಅಲ್ಲಿ ಕ್ಷೌರದ ಕತ್ತಿ ಮತ್ತು ನೀರು ಸಿದ್ಧವಾಗಿತ್ತು. ಸಿದ್ದ ಬೈರನ ತಲೆಯನ್ನೂ ಗಡ್ಡ ಮೀಸೆಗಳನ್ನೂ ನುಣ್ಣಗೆ ಬೋಳಿಸಿದನು.

"ಈಗ ನನ್ನ ಗುರ್ತು ಸಿಕ್ತದೇನು?" ಎಂದನು ಬೈರ.

"ಗುರ್ತು ಸಿಕ್ಕೋದೆ ಸೈ!! ನನಗೇ ಸಿಕ್ಕೋದಿಲ್ಲಾ! ಆ ಪ್ಯಾಟೆ ಕತ್ತೆ ಮಾರ್ಕಗೆ ಸಿಕ್ಕಿಬಿಟ್ರೆ, ಇನ್ನೇನು ಕಡ್ಮೆಯಿಲ್ಲ!!!" ಎಂದು ಸಿದ್ದ ಪುನರ್ಜನ್ಮ ಧಾರಣೆ ಮಾಡಿದಂತಿದ್ದ ಬೈರನ ಮುಖವನ್ನೂ ಕಳ್ಳಿನ ಮೊಗೆಯಂತಿದ್ದ ಮಂಡೆಯನ್ನೂ ನೋಡಿ ನೋಡಿ ನಕ್ಕನು.

ಮರುದಿನ ಬೆಳಿಗ್ಗೆ ಪುಟ್ಟಣ್ಣ ಬೇಲರ ಕೇರಿಗೆ ಬಂದು — ಗಂಡಸರೆಲ್ಲರೂ ಬರಬೇಕಂತೆ; ಗೌಡರ ಅಪ್ಪಣೆಯಾಗಿದೆ — ಎಂದನು. ಸಿದ್ದ, ಬೈರ, ಮಂಜ, ಕೆಂಚ, ಗುತ್ತಿ, ದೊಡ್ಡರುದ್ರ, ಸಣ್ಣರುದ್ರ, ಎಲ್ಲರೂ 'ಮನೆಗೆ' ಹೊರಟರು. ತನ್ನ ಹಿಂದೆಯೇ ಬರುತ್ತಿದ್ದ ಗುಂಪನ್ನು ಅವಲೋಕಿಸಿ ಪುಟ್ಟಣ್ಣ "ಬೈರ ಬರಲಿಲ್ಲಲ್ಲೋ! ಕರಿಯೋ ಅವನ್ನಾ!" ಎಂದನು.

"ಇಲ್ಲಿದ್ದೀನಲ್ರಯ್ಯಾ!" ಎಂದು ಬೈರ ಮುಗುಳ್ನಗೆ ನಕ್ಕನು.

ಪುಟ್ಟಣ್ಣ ಬೆಪ್ಪುಬೆರಗಾಗಿ ನೋಡಿ "ಏನೋ ಇದೂ!" ಎಂದನು.

"ಸೀತೆಮನೆ ಕೇರೀಲಿ ನಮ್ಮ ನಂಟಬಾವ ಸತ್ತುಹೋದ. ಅಲ್ಲಿಗೆ ಹೋಗಿದ್ದೆ" ಎಂದ ಬೈರ. ಪುಟ್ಟಣ್ಣಗೂ ತನ್ನ ಗುರುತು ಸಿಕ್ಕದಿದ್ದುದನ್ನು ಕಂಡು ಹಿಗ್ಗಿದನು. ಹತ್ತಿರದ ಸಂಬಂಧಿ ಸತ್ತಾಗ ತಲೆಯನ್ನು ನುಣ್ಣಗೆ ಮಾಡಿಕೊಳ್ಳುವುದು ಬೇಲರ ಜಾತಿಯ ಪದ್ಧತಿಯೆಂದು ಊಹಿಸಿ ಪುಟ್ಟಣ್ಣನೂ ಹೆಚ್ಚು ಪ್ರಶ್ನೆ ಮಾಡುವ ಗೋಜಿಗೆ ಹೋಗಲಿಲ್ಲ.

ಕಾನೂರು ಮನೆಯ ಅಂಗಳದಲ್ಲಿ ಬೇಲರೆಲ್ಲರೂ ಸಾಲಾಗಿ ನಿಂತರು.

ಚಂದ್ರಯ್ಯಗೌಡರು, ಹೂವಯ್ಯ, ರಾಮಯ್ಯ, ವಾಸು ಮೊದಲಾದವರು ಜಗಲಿಯ ಮೇಲೆ ಕೂತಿದ್ದರು. ಮಾರ್ಕ ಕಿರುಜಗುಲಿಯ ಮೇಲೆ ಕೂತಿದ್ದನು.

ಕಳ್ಳಬಗನಿ ಕಟ್ಟುವ ವಿಚಾರವಾಗಿ ಸಂಭಾಷಣೆಯಾಗುತ್ತಿತ್ತು.

ಚಂದ್ರಯ್ಯಗೌಡರು "ಇವರಿಗೆ ಏನು ಮಾಡಬೇಕಾಯ್ತು? ಹೇಳಿದರೆ ಕೇಳೋದಿಲ್ಲ. ಬೋವಿ ಮನೆಗೆ, ಕಳ್ಳಂಗಡಿಗೆ ಬತ್ತ ಹೊತ್ತೂ ಹೊತ್ತೂ ಕುಡಿದು ಸಾಯೋದು ಸಾಲದೆ, ಕಳ್ಳಬಗನೀ ಬೇರೆ ಕಟ್ಟಾಕೆ ಸುರು ಮಾಡಿದ್ದಾರಲ್ಲಾ!" ಎಂದರು.

ಹೂವಯ್ಯನೂ ಸ್ವಲ್ಪ ವಿನೋದಕ್ಕಾಗಿ "ಹೌದು, ದೊಡ್ಡವರೆಲ್ಲ ಮಾನ ಪತ್ರಕ್ಕೆ ರುಜು ಹಾಕಿ, ದೇವರಮೇಲೆ ಆಣೆಹಾಕಿ, ಇನ್ನೂ ಕುಡಿಯೋದು ಬಿಟ್ಟಿಲ್ಲ. ಅಂದಮೇಲೆ ಬಡವರಿಗೆ ಯಾಕೆ ಹೇಳಬೇಕು? ದೊಡ್ಡವರಿಗೆ ದುಡ್ಡಿದೆ. ಲೈಸನ್ಸಿಗೆ ದುಡ್ಡು ಕೊಟ್ಟು ಬಗನಿಕಟ್ಟಿಸಿ, ಕಳ್ಳು ಕುಡಿಯುತ್ತಾರೆ. ಬಡವರು ಕದ್ದು ಬಗನಿ ಕಟ್ಟಿ ಕುಡಿಯುತ್ತಾರೆ!" ಎಂದನು.

ರಾಮಯ್ಯ "ಊರಿನಲ್ಲಿ ಯಾರೂ ಬಗನಿ ಕಟ್ಟಕೂಡದು ಎಂದು ಸಾರಿ ನಿಲ್ಲಿಸಿಬಿಟ್ಟರೆ ಎಲ್ಲ ಸರಿಹೋಗುತ್ತದೆ. ಒಬ್ಬರು ಬಗನಿ ಕಟ್ಟಿ ಕಳ್ಳು ಕುಡಿಯು ತ್ತಿದ್ದರೆ ಉಳಿದವರು ನೋಡುತ್ತ ಸುಮ್ಮನಿರುತ್ತಾರೇನು? ದುಡ್ಡಿಲ್ಲದಿದ್ದರೆ ಕಳ್ಳತನ ಮಾಡ್ತಾರೆ. ಹಾರೆ ಗುದ್ದಲಿ ಎಲ್ಲಾ ಹೊತ್ತುಕೊಂಡುಹೋಗಿ ಕದ್ದು ಮಾರಾಟಮಾಡಿ ಕುಡಿಯುತ್ತಾರೆ.." ಎಂದು ಮುಂತಾಗಿ ಆಡಿದನು.

ಟೀಕೆಯ ಕೊಡಲಿ ತಮ್ಮ ಬುಡಕ್ಕೇ ಬೀಳುತ್ತಿರಲು ಗೌಡರು ನಸುಮುನಿದು "ಒಳ್ಳೇ ಮಾತು ಹೇಳ್ತೀರಿ ನೀವಿಬ್ಬರೂ. ಸರ್ಕಾರಕ್ಕೆ ಮೋಸಮಾಡಿ ಅಂತಾ ಹೇಳ್ಕೊಡಿ ಎಲ್ಲಿರ್ಗೂ; ಪಸಂದಾಗ್ತದೆ" ಎಂದು ಮಾರ್ಕನ ಕಡೆ ನೋಡಿದರು.

ಹೂವಯ್ಯ "ಸರ್ಕಾರದ ಬೊಕ್ಕಸ ಬೆಳೆಯಲಿ ಎಂದೇನು ನೀವೆಲ್ಲ ಬಗನಿ ಮರಗಳಿಗೆ ತೆರಿಗೆ ತೆರುವುದು?" ಎಂದು ಹಾಸ್ಯಮಾಡಿದನು.

ರಾಮಯ್ಯನೂ "ಸರ್ಕಾರ ಮಾಡಿದ್ದೆಲ್ಲ ಸತ್ಕಾರ್ಯವೇನು? ಅದಕ್ಕೆ ಬೇಕಾಗಿರುವುದೂ ದುಡ್ಡೇ! ಇಲ್ಲಿ ಇವರೆಲ್ಲ ಕುಡಿದು, ಆರೋಗ್ಯ ಕೆಟ್ಟು ಸತ್ತ ರೇನಂತೆ? ಅಲ್ಲಿ ಪಟ್ಟಣ ಸಿಂಗಾರ ಮಾಡ್ತಾರೆ!" ಎಂದನು.

ಕ್ರಾಪು ಬಿಟ್ಟು, ಖಾದಿ ಬಟ್ಟೆ ತೊಟ್ಟು, ಇಂಗ್ಲೀಷು ಮಾತಾಡಬಲ್ಲ ತರುಣರನ್ನು ನೋಡಿದ ಮಾರ್ಕ ಮಾತಾಡಲಿಲ್ಲ. ಗೌಡರಿಗಂತೂ ಹೂವಯ್ಯನು ಅನೇಕ ಜನರ ಸಮಕ್ಷದಲ್ಲಿ ತಮ್ಮ ಹುಳುಕನ್ನು ಬಿಚ್ಚಿ ಹೇಳಿದ್ದರಿಂದ ಒಳಗೊಳಗೆ ಹೊಗೆ ಯಾಡಿತು. ಸೇರೆಗಾರ ರಂಗಪ್ಪಸೆಟ್ಟರ ದೃಷ್ಟಿ ಒಂದು ಸಾರಿ ಹೂವಯ್ಯನ ಕಡೆಗೂ ಮತ್ತೊಂದು ಸಾರಿ ಗೌಡರ ಕಡೆಗೂ ಹೊರಳುತ್ತಿತ್ತು. ಎರಡು ದಿನಗಳ ಹಿಂದೆ ಬೈರನಿಗೆ ಬತ್ತ ಕೊಡದಿದ್ದಾಗ ಹೂವಯ್ಯನಿಂದ ತಮಗಾಗಿದ್ದ ಮುಖ ಭಂಗವನ್ನು ಅವರು ಮರೆತಿರಲಿಲ್ಲ. ಅವರ ದೃಷ್ಟಿ ಅವರ ತಲೆಯ ಹುತ್ತದಲ್ಲಿ ಸರ್ಪವಾಗಿತ್ತು.

ಮಾರ್ಕನು ಸಾಲಾಗಿ ನಿಂತಿದ್ದ ಬೇಲರನ್ನು ಪರೀಕ್ಷಿಸಿ ಗುರುತು ಹಿಡಿಯಲು ಅಂಗಳಕ್ಕಿಳಿದನು. ಒಂದೆರಡು ನಿಮಿಷಗಳವರೆಗೆ ಚೆನ್ನಾಗಿ ಅವಲೋಕಿಸಿದನು. ಬೈರನ ಕಡೆಗಂತೂ ಕಣ್ಣೆತ್ತಿ ಕೂಡ ನೋಡಲಿಲ್ಲ. ಮನೆಯೆಲ್ಲ ಮೌನವಾಗಿ ಫಲಿತಾಂಶವನ್ನು ಕುತೂಹಲದಿಂದ ಕಾಯುವಂತಿತ್ತು. ಬೈರನಂತೂ ತಾನು ಪಾರಾದರೆ ಭೂತರಾಯನಿಗೆ ಒಂದು ಕೋಳಿ ಹೆಚ್ಚಾಗಿ ಕೊಡುತ್ತೇನೆಂದು ಹರಕೆ ಹೊರುತ್ತಿದ್ದನು.

"ಬೇಲರು ಎಲ್ಲಾ ಇದ್ದಾರೇನು ಇಲ್ಲಿ?" ಎಂದು ಮಾರ್ಕ ಗೌಡರ ಕಡೆ ನೋಡಿದನು.

ಗೌಡರಿಗೂ ತಮ್ಮ ಜೀತದಾಳು ಸರ್ಕಾರದ ಕೈಗೆ ಸಿಕ್ಕಿಬೀಳುವುದು ಸ್ವಲ್ಪವೂ ಇಷ್ಟವಿರಲಿಲ್ಲ. ಎಲ್ಲಿಯಾದರೂ ಹಾಗಾದರೆ ತಾವೂ ಕಷ್ಟನಷ್ಟಗಳಿಗೆ ಗುರಿಯಾಗಬೇಕಾಗುತ್ತದೆ ಎಂದು ಅವರಿಗೆ ತಿಳಿದಿತ್ತು.

"ಎಲ್ಲ ಬಂದಿದ್ದಾರೆ!" ಎಂದರು.

ಮಾರ್ಕ ಗುರುತುಹಿಡಿಯಲಾರದೆ ಹಿಂದಕ್ಕೆ ಬಂದು ಕುಳಿತನು. ಬೇಲರೆಲ್ಲರೂ ಗುಜುಗುಜು ಮಾತಾಡುತ್ತ ಹೆಬ್ಬಾಗಿಲು ದಾಟಿದರು.

"ನಿನ್ನೆ ಬೆಳಿಗ್ಗೆ ನಾನು ಗದ್ದೆಯಲ್ಲಿ ನೋಡಿದವನು ಬಂದಿಲ್ಲ" ಎಂದನು ಮಾರ್ಕ.

"ಹಾಂಗಾದ್ರೆ ನೀನು ನೋಡಿದ್ದು ಯಾರನ್ನೊ? ಇಲ್ಲಿ ನಮ್ಮ ಬೇಲರೆಲ್ಲ ಬಂದಿದ್ದರು."

"'ಬೈರ' ಅನ್ನುವನು ಬಂದಿದ್ನೇನು?"

"ಓಹೋ! ಭೇಷಕ್, ಬಂದಿದ್ದ!" ಎಂದನು ಪುಟ್ಟಣ್ಣ.

"ಎಲ್ಲಿ ನಾನು ಅವನ್ನ ಕಾಣಲಿಲ್ಲ."

"ಅವನು ನಿನ್ನೆ ಸೀತೆಮನೆ ಕೇರಿಗೆ ಹೋಗಿದ್ದನಂತೆ. ಯಾರೋ ಅವನ ನಂಟಬಾವ ಸತ್ತಿದ್ದನಂತೆ. ಊರಿನಾಗೆ ಇಲ್ಲದಿದ್ದವನ್ನ ಕಟ್ಟಿಕೊಂಡು ನೀವೇನು ಮಾಡ್ತೀರಿ?" ಎಂದನು ಪುಟ್ಟಣ್ಣ.

ಮಾರ್ಕನಿಗೆ ತಿಮ್ಮ ಹೇಳಿದ್ದ ಭೂತರಾಯನ ಕಥೆ ನೆನಪಿಗೆ ಬಂದು, ತಾನೂ ಹರಕೆಯಲ್ಲಿ ಭಾಗಿಯಾಗಲು ಮನಸ್ಸು ಮಾಡಿದನು.

## ೨೮

# ಮನೆ ಪಾಲಾಗುವ ಮಾತು

ತರುಣಿಯನ್ನು ಮದುವೆಯಾದ ವಯಸ್ಕರಾದ ಚಂದ್ರಯ್ಯಗೌಡರು ಬಹಳ ಕಾಲ ಅಸ್ಖಲಿತ ಸುಖವನ್ನು ಅನುಭವಿಸಲಾಗಲಿಲ್ಲ. ಸಣ್ಣ ಹೆಣ್ಣನ್ನು ಮದುವೆಯಾಗುವ ಮುದುಕನ ಮನಸ್ಸು ಬಹುಬೇಗನೆ ಅತ್ಯಲ್ಪ ಕಾರಣಗಳಿಂದ ಸಂಶಯ ಗ್ರಸ್ತವಾಗುತ್ತದೆ. ಸಂಶಯ ಒಮ್ಮೆ ಮುದಿ ಮಿದುಳನ್ನು ಪ್ರವೇಶಿಸಿತೆಂದರೆ ಒಣಗಿದ ಮರದ ಬುಡಕ್ಕೆ ಗೆದ್ದಲು ಹಿಡಿದಂತಾಗುತ್ತದೆ. ಏನು ಕಂಡರೂ ಏನು ಕೇಳಿದರೂ ಎಲ್ಲವೂ ಸಂಶಯಭೂತವನ್ನು ಮತ್ತೂ ಹಿರಿದಾಗಿ ಮಾಡುವ ಸಾಕ್ಷಿಗಳಾಗಿ ಪರಿಣಮಿಸುತ್ತವೆ. ಮೊದಲು ಸಾಧಾರಣ ಸರಳ ಮುಗ್ಧವಾಗಿ ತೋರುತ್ತಿದ್ದ ವಿಷಯಗಳು ತರುವಾಯ ಪಿತೂರಿಯ ಪಿಶಾಚಿಗಳಾಗಿ ತೋರುತ್ತವೆ. ಸಂಶಯದಿಂದ ಮಾತ್ಸರ್ಯ ದ್ವೇಷ ಕ್ರೋಧಗಳು ಹೊಮ್ಮಿ ಹೃದಯ ಹಿಂಸಾಭಿಮುಖವಾಗುತ್ತದೆ. ಕಾನೂನಿನ ಪ್ರಕಾರವೂ ಸಮಾಜದ ಆಚಾರದ ಪ್ರಕಾರವೂ ಸಣ್ಣ ಹೆಣ್ಣನ್ನು ಮದುವೆಯಾಗುವ ಮುದುಕ ಅಪರಾಧಿಯೂ ಅಲ್ಲ, ಪಾಪಿಯೂ ಅಲ್ಲ. ಆದರೂ ಪ್ರಕೃತಿಯ ತೀರ್ಪು ಬೇರೆಯಾಗಿರುತ್ತದೆ. ಮುದುಕನ ಮನಸ್ಸಿನಲ್ಲಿಯೇ ಅದು ವ್ಯಕ್ತವಾಗುತ್ತದೆ. ತಾನು ದುಡ್ಡು ಖರ್ಚು ಮಾಡಿ ಬಹುಜನ ಬಂಧುಗಳ ಸಮ್ಮುಖದಲ್ಲಿ ಶಾಸ್ತ್ರರೀತಿಯಾಗಿ ದೇವ ದೇವತೆಗಳ ಸಾಕ್ಷಿಯಲ್ಲಿ ಕೈಹಿಡಿದ ಬಾಲವಧುವನ್ನು ತನ್ನ ಕಾಮಲಾಲಸೆ ಪ್ರೇರಿಸಿದಂತೆ ಉಪಭೋಗಿಸಬಹುದಾದರೂ ಉಪಯೋಗಿಸುವನಾದರೂ, ಅಂತರಂಗದಲ್ಲಿ ತಾನು ಅಪರಾಧಿ ಎಂದು ತಿಳಿಯುತ್ತಾನೆ. ಅದಕ್ಕೆ ತಕ್ಕ ಶಿಕ್ಷೆಯೂ ಅಂತರಂಗದಲ್ಲಿಯೆ ಪ್ರಾರಂಭವಾಗುತ್ತದೆ. ಎಳೆಯದೆಂದಿಗೂ ಹಳೆಯದನ್ನು ಒಲಿಯಲಾರದು. ಬಾಲ್ಯ ವೃದ್ಧಾಪ್ಯಗಳಿಗೆ ಗೌರವದ ಸಂಬಂಧವಿರಬಲ್ಲುದೆ ಹೊರತು ಪ್ರೇಮಸಂಬಂಧವಿರಲಾರದು.

ಸುಬ್ಬಮ್ಮ ಎಷ್ಟೇ ಒರಟು ಹುಡುಗಿಯಾಗಿದ್ದರೂ ಎಷ್ಟೇ ಅನಾಗರಿಕಳಾಗಿದ್ದರೂ ಅವಳು ಎಳೆಯ ಹೆಣ್ಣು ಎಂಬುದನ್ನು ಮರೆಯಬಾರದು. ಬಡತನದಲ್ಲಿಯೆ ಬೆಳೆದಿದ್ದ ಆಕೆಗೆ ಶ್ರೀಮಂತರಾದ ಚಂದ್ರಯ್ಯಗೌಡರನ್ನು ಮದುವೆಯಾದಂದು ಅತ್ಯಂತ ಹೆಮ್ಮೆಯಾಗಿತ್ತು. ಎಂದೂ ಕಾಣದ ವಸನ ಭೂಷಣಗಳನ್ನು ಕಂಡು ಕಣ್ಣು ಕೋರೈಸಿ ಹೋಗಿತ್ತು. ಚಂದ್ರಯ್ಯಗೌಡರೂ ಪ್ರಯತ್ನಪೂರ್ವಕವಾಗಿ ತಾವು ತರುಣರಾಗಿದ್ದಾಗ ಪ್ರಥಮ ವಿವಾಹದಲ್ಲಿ ಅನುಭವಿಸಿದ್ದ

ಯೌವನದ ಕಾಲವನ್ನು ಮತ್ತೆ ಅನುಕರಿಸಿ, ಭಯಂಕರ ಧರ್ಮಾಧಿಕಾರಿಯಾಗಿರುವ ಕಾಲದೇವನನ್ನು ವಂಚಿಸಿದೆನೆಂದು ಊಹಿಸಿದ್ದರು. ಆದರೆ ಅದು ವಸ್ತುತಃ ಬಿಸಿಲ್ಗುದುರೆಯ ಸವಾರಿಯಾಗಿತ್ತು. ಏನೂ ಅರಿಯದ ಮಡ್ಡಹುಡುಗಿ ಸೇರೆಗಾರ ರಂಗಪ್ಪಸೆಟ್ಟರೆ ಮೊದಲಾದವರೊಡನೆ ಸರಳರೀತಿಯಿಂದ ಮಾತಾಡಿ ವರ್ತಿಸುತ್ತಿದ್ದುದು ಗೌಡರ ಕಣ್ಣಿಗೆ ಬಿದ್ದೊಡನೆ ಅವರ ಸಿಂಗಾರದ ಹೊಂಗನಸು ಬಿರುಕುಬಿಡತೊಡಗಿತು. ಅವರ ಪ್ರೇಮ ತಾನು ಹಾಕಿಕೊಂಡಿದ್ದ ಮುಸುಗನ್ನು ತೆರೆಯಿತು. ಗೌಡರು ನೋಡುತ್ತಾರೆ: ಕಾಮವು ನಾಚಿಕೆಗೇಡಿಯಾಗಿ ನಿಂತಿದೆ! ಅದರ ಕೈಯಲ್ಲಿ ಲೋಭದ ಬಲೆ! ಗೌಡರ ಮಾತ್ಸರ್ಯಕ್ಕೆ ಒಂದು ಅವಲಂಬನ ಬೇಕಾಯಿತು. ಸೇರೆಗಾರ ರಂಗಪ್ಪಸೆಟ್ಟರು ಸಿಕ್ಕಿದರು!

ಕಳ್ಳನ ಗುಟ್ಟು ಕಳ್ಳನಿಗೇ ಗೊತ್ತು. ಸೇರೆಗಾರರು ಮತ್ತೊಬ್ಬನ ಪತ್ನಿಯಾಗಿದ್ದ ಗಂಗೆಯನ್ನು ಹೇಗೆ ಕನ್ನಡ ಜಿಲ್ಲೆಯಿಂದ ಹಾರಿಸಿಕೊಂಡು ಬಂದು ಉಪಯೋಗಿಸುತ್ತಿದ್ದರೆಂಬುದು ಗೌಡರಿಗೆ ಅನುಭವವೇದ್ಯವಾಗಿತ್ತು. ಅಲ್ಲದೆ ಸೆಟ್ಟರಿಗೆ ಮಡಿ, ಮೈಲಿಗೆ, ತನ್ನದು ಪರರದು, ಶುಚಿ, ಎಂಜಲು ಎಂಬ ಯಾವ ಭೇದವೂ ಇಲ್ಲವೆಂಬುದೂ ಗೌಡರಿಗೆ ಗೊತ್ತಾಗಿತ್ತು. ಏಕೆಂದರೆ, ತಮಗೆ ಅವಶ್ಯಬಿದ್ದಾಗ ಗಂಗೆಯ ಸ್ನೇಹಮಾಡಲು ಸೆಟ್ಟರು ನಿಷೇಧಿಸುವುದಕ್ಕೆ ಬದಲಾಗಿ ಉತ್ತೇಜನವಿತ್ತು ಹೆಮ್ಮೆಪಟ್ಟಿದ್ದರು. ಅಂತಹ ವ್ಯಕ್ತಿ ಏನನ್ನು ಮಾಡಲು ತಾನೆ ಹೇಸುವನು? ಎಷ್ಟು ದೂರ ಹೋಗಲು ತಾನೆ ಹಿಂಜರಿಯುವನು? ಆತನಿಗೆ ಗಂಗೆಯಾದರೇನು? ಸುಬ್ಬಮ್ಮನಾದರೇನು? ಅಂತೂ ಸೇರೆಗಾರರು ಗೌಡರ ಸಂಶಯಕ್ಕೆ ಪಾತ್ರರಾಗಿದ್ದರು. ಆದರೆ ಅದನ್ನು ಹೊರಗೆ ಸೂಚಿಸಲು ಕೂಡ ಅವರಿಗೆ ಎದೆಯಾಗಿರಲಿಲ್ಲ. ಹಾಗೆ ಮಾಡುವುದು ತಮ್ಮ ಗೌರವಕ್ಕೆ ಕಡಮೆ ಎಂದು ಅವರ ಭಾವನೆಯಾಗಿತ್ತು. ಮನಸ್ಸು ಮಾಡಿದ್ದರೆ ಅವರು ಸೇರೆಗಾರರನ್ನು ಅವರ ಆಳುಗಳೆಲ್ಲರೊಡನೆ ಕಾನೂರಿನಿಂದಲೆ ಹೊರಡಿಸಬಹುದಾಗಿತ್ತು. ಹಾಗೆ ಮಾಡುವುದರಿಂದ ತಮ್ಮನ್ನು ತಾವೆ ಕೀಳುಗೈದಂತಾಗುತ್ತದೆ ಎಂದು ಸುಮ್ಮನಿದ್ದರು. ಅವಶ್ಯಬಿದ್ದಾಗ ಓಡಿಸಿದರಾಯಿತು! ಅಲ್ಲದೆ, ಸೇರೆಗಾರರೊಡನೆ ಗಂಗೆಯೂ ಹೋಗಿಬಿಡುತ್ತಾಳಲ್ಲವೆ?

ನಿಜವಾಗಿಯೂ ಸುಬ್ಬಮ್ಮನ ಮನಸ್ಸು ಗೌಡರು ಊಹಿಸಿದಷ್ಟು ಕೆಟ್ಟಿರಲಿಲ್ಲ. ಸೇರೆಗಾರರೂ ಗೌಡರು ಊಹಿಸಿದಷ್ಟು ಮುಂದುವರಿದಿರಲಿಲ್ಲ. ಗಂಗೆ ತನ್ನ ಪೂರ್ವ ಕಥೆಯನ್ನು ಹೇಳಿ ಉಪದೇಶಮಾಡಿದಂದು ಸುಬ್ಬಮ್ಮನ ಸುಪ್ತ ಚಿತ್ತದಲ್ಲಿ ಒಂದೆರಡು ಅಸ್ಫುಟ ಪಿಶಾಚಿಗಳು ಸುಳಿದುಹೋಗಿದ್ದುವೆಂಬುದೇನೋ ನಿಜ. ಆದರೆ ಗೌಡರು ಊಹಿಸಿದ್ದ ಸಾಹಸಕ್ಕೆ ಅವಳೆಂದಿಗೂ ಮನಸ್ಸು ಮಾಡಿರಲಿಲ್ಲ; ಧೈರ್ಯವೂ ಇರಲಿಲ್ಲ.

ಅಂತೂ ಮನದಲ್ಲಿ ಸಂಶಯ ಕಾಲಿಟ್ಟ ಮೇಲೆ ಗೌಡರು ತಮ್ಮ ತರುಣ ಪತ್ನಿಯ ಪರವಾಗಿ ಅದನ್ನೂ ಇದನ್ನೂ ನೆವಮಾಡಿಕೊಂಡು ಆಗಾಗ ಸ್ವಲ್ಪ ಕ್ರೂರವಾಗಿ ವರ್ತಿಸತೊಡಗಿದರು. ಹೊಡೆಯುವುದೂ ಬೈಯುವುದೂ ಹೆಚ್ಚಾ ಯಿತು. ತಮ್ಮ ಸಂಶಯವನ್ನು ಹೆಂಡತಿಗೆ ಹೇಳಿ ಆಕೆಯನ್ನು ಎಚ್ಚರಿಸಲೂ ಇಲ್ಲ. ಒಂದೆರಡು ಸಾರಿ ಅವರು ಹೆಂಡತಿಯನ್ನು ಹೊಡೆಯುತ್ತಿದ್ದಾಗ ಸೇರೆ ಗಾರರೇ ಅಡ್ಡಬಂದು ದಮ್ಮಯ್ಯಗುಡ್ಡೆಹಾಕಿ ಬಿಡಿಸಿದ್ದುದಂತೂ ಸಂಶಯಾಗ್ನಿಗೆ ಘೃತವೆರಚಿದಂತಾಗಿತ್ತು. ಮೊದಮೊದಲು ಗೌಡರ ಈ ಬುದ್ಧಿ ಸೆಟ್ಟರಿಗೆ ತಿಳಿಯದಿದ್ದರೂ ಕೆಲದಿನಗಳಲ್ಲಿಯೆ ಅನುಭವಶಾಲಿಯ ಮನಸ್ಸಿಗೆ ಗುಟ್ಟು ಮಿಂಚಿತು. ಆಮೇಲೆ ಒಂದಿನಿತು ಜಾಗರೂಕರಾಗಿಯೆ ನಡೆದುಕೊಳ್ಳತೊಡ ಗಿದರು. ಸೇರೆಗಾರರ ವರ್ತನೆಯಲ್ಲಿ ಬದಲಾವಣೆ ಕಂಡ ಯಜಮಾನರಿಗೆ ಮತ್ತೂ ದಿಗಿಲಾಯಿತು!

ಪರಿಸ್ಥಿತಿ ಹೀಗಿತ್ತು — ಹೂವಯ್ಯ ರಾಮಯ್ಯರು ಬೇಸಗೆಯ ರಜಾಕ್ಕೆ ಮನೆಗೆ ಬಂದಾಗ. ತರುವಾಯ ಸಮಸ್ಯೆ ಮೆಲ್ಲಮೆಲ್ಲನೆ ಮತ್ತೂ ಜಟಿಲವಾಗ ತೊಡಗಿತು — ಕಲ್ಪನೆಯೂ ಹೆದರುವಷ್ಟು!

ಚಂದ್ರಯ್ಯಗೌಡರ ಹೃದಯದಲ್ಲಿ ಕಳವಳ ಕದನಗಳು ಹೆಚ್ಚುತ್ತಿದ್ದಾಗಲೆ ಮನೆಯಲ್ಲಿ ಶಾಂತಿ ಮೈತ್ರಿಗಳು ನೆಲಸುತ್ತಿದ್ದಂತೆ ತೋರಿತು. ನಾಗಮ್ಮ ಸುಬ್ಬಮ್ಮರ ಕಚ್ಚಾಟಗಳು ನಿಂತುವು. ಪುಟ್ಟಮ್ಮ, ವಾಸು ಇಬ್ಬರೂ ಸುಬ್ಬಮ್ಮ ತಮ್ಮ ಪರವಾಗಿ ತೋರಿಸತೊಡಗಿದ ಆದರವನ್ನು ಕಂಡು ಸ್ವಲ್ಪ ಆಶ್ಚರ್ಯ ಗೊಂಡರೂ ಹರ್ಷಚಿತ್ತರಾದರು. ವಾಸುವಂತೂ ತುಪ್ಪ ಬೆಣ್ಣೆ ಕಾಫಿ ತಿಂಡಿ ಗಳನ್ನು ಖೂನಿಮಾಡಿದವರ ಕೈಯಿಂದ ಅಧಿಕಾರಿಗಳು ಲಂಚ ಕೀಳುವಂತೆ ಕಿತ್ತು ತಿನ್ನತೊಡಗಿದನು. ಸುಬ್ಬಮ್ಮ ಬರಬರುತ್ತ ವಿಧೇಯಳೂ ನಯಶೀಲಳೂ ಪ್ರಿಯವಚನಳೂ ಆಗುತ್ತಿದ್ದುದನ್ನು ಕಂಡು ಆಕೆಯ ಪತಿಯೊಬ್ಬನಿಗಲ್ಲದೆ ಉಳಿದವರಿಗೆಲ್ಲ ಮುದವಾಯಿತು.

ಕಾರಣವೇನೆಂದರೆ, ಸುಬ್ಬಮ್ಮ ಹೂವಯ್ಯ ರಾಮಯ್ಯರನ್ನು ನೋಡಿದಾ ರಭ್ಯ ತನ್ನ ಒರಟುತನಕ್ಕೆ ತಾನೆ ಅಸಹ್ಯಪಟ್ಟುಕೊಂಡು ತಿದ್ದಿಕೊಳ್ಳತೊಡಗಿದಳು. ಹೂವಯ್ಯನ ಭದ್ರಾಕಾರವೂ ಗಂಭೀರವರ್ತನೆಯೂ ಆತನಲ್ಲಿದ್ದ ಒಂದು ವಿಧವಾದ ಗುರುಭಾವವೂ ಸುಬ್ಬಮ್ಮನ ಆರಾಧನೆಗೆ ಗುರಿಯಾದುವು. ಆ ಆರಾಧನೆಯಲ್ಲಿ ಬೇಟದ ಭಾವ ಲವಲೇಶವೂ ಇರಲಿಲ್ಲ. ಗಂಗೆ ಪ್ರಚೋದಿಸಬೇಕೆಂದಿದ್ದ ಪ್ರಣಯ ಭಾವವು ಸರ್ವಶೂನ್ಯವಾಗಿ ಹೋಯಿತು. ದೊಡ್ಡದನ್ನು ಕಂಡಾಗ ಅದನ್ನು ಪೂಜಿಸಬೇಕು, ಅದರಂತಾಗಬೇಕು, ಅದರ ಕಣ್ಣಿಗೆ ಬೀಳಬೇಕು, ಅದರ ಪ್ರಶಂಸೆಗೆ

ಪಾತ್ರವಾಗಬೇಕು ಎಂಬುದು ಮನುಷ್ಯಕುಲದ ಸಾಮಾನ್ಯೇಚ್ಛೆ. ಸುಬ್ಬಮ್ಮನಲ್ಲಿ ಮೂಡಿದುದೂ ಅಂತಹ ಇಚ್ಛೆ. ನಾಗಮ್ಮನವರು ಹೂವಯ್ಯನ ತಾಯಿ ಯಾದುದರಿಂದ ಅವರನ್ನೂ ಹಿಂದಿನ ನಿಂದೆಗಳನ್ನೆಲ್ಲ ಮರೆಯಿಸುವಂತೆ ಗೌರವಿಸ ತೊಡಗಿದಳು. ಸುಬ್ಬಮ್ಮನ ಹೃದಯಪರಿವರ್ತನೆ ಹೂವಯ್ಯನ ವ್ಯಕ್ತಿತ್ವ ರಚಿಸಿದ ಒಂದು ಪವಾಡವೆಂದೇ ಹೇಳಬಹುದಾದರೂ ಆಕೆಯ ಎಳೆತನ, ಸರಳತೆ, ಮುಗ್ಧತೆ, ಕೆಟ್ಟದ್ದಾಗಲಿ ಒಳ್ಳೆಯದಾಗಲಿ ಸನ್ನಿವೇಶದ ಪ್ರಭಾವದಿಂದ ಬಹು ಬೇಗನೆ ಮುದ್ರಿತವಾಗುವ ಒಂದು ವಿಧವಾದ ಹಳ್ಳಿಯ ಹಸಿತನ, ತಾರುಣ್ಯ ಸಹಜವಾದ ನಿರಂತರ ಉದ್ಧಾರಾಕಾಂಕ್ಷೆ, ಪತಿಯ ಇತ್ತೀಚಿನ ಅನಾದರಣೆಯಿಂದ ನೊಂದೆದೆ, ಇವುಗಳನ್ನು ಗಮನಿಸಿದರೆ ಅದು ಅಘಟನ ಘಟನೆಯಾಗಿ ತೋರುವುದಿಲ್ಲ.

ಸುಬ್ಬಮ್ಮ ಹೆಚ್ಚು ಹೆಚ್ಚು ನಯಶೀಲೆಯಾದಂತೆಲ್ಲ ಯಜಮಾನರ ಕ್ರೌರ್ಯವೂ ಅನಾದರಣೆಯೂ ಹಿಂಸೆಯೂ ಹೆಚ್ಚಾಗುತ್ತ ಹೋದುವು. ಹೆಂಡತಿಯ ಹೃದಯದ ಹಠಾತ್ತಾದ ಪರಿವರ್ತನೆ ಮೊದಲೇ ಸಂಶಯಗ್ರಸ್ತರಾಗಿದ್ದ ಚಂದ್ರಯ್ಯ ಗೌಡರಿಗೆ ಅನ್ಯಥಾ ತೋರಿತು. ಆಕೆ ತನ್ನ ಮನಸ್ಸಿನ ಪಾಪವನ್ನು ಮುಚ್ಚಲೆಂದು ಹಾಕಿಕೊಂಡಿರುವ ಸೋಗು ಎಂದು ಭಾವಿಸಿದರು. ಅಲ್ಲದೆ ಮತ್ತೊಂದು ಭಯಾನಕವಾದ ಭೂತ ಅವರ ಮನಸ್ಸಿನಲ್ಲಿ ವಿಕಟಾಕಾರವಾಗಿ ಮೂಡಿತು. ಹೂವಯ್ಯ ಮನೆಗೆ ಬಂದೊಡನೆ ಸುಬ್ಬಮ್ಮ ಬದಲಾವಣೆಯಾದುದರಿಂದಲೂ, ಅವನು ವಯಸ್ಸಿನಲ್ಲಿ, ಬುದ್ಧಿಯಲ್ಲಿ, ಸೌಂದರ್ಯದಲ್ಲಿ, ಶೀಲದಲ್ಲಿ ಎಲ್ಲದರಲ್ಲಿಯೂ ತಮಗೆ ಮೇಲುಗೈಯಾದುದರಿಂದಲೂ, ಹೆಂಡತಿಯ ಮನಸ್ಸು ಅತ್ತಕಡೆಗೆ ತಿರುಗಿರಬೇಕೆಂದು ನಿರ್ಣಯಿಸಿದರು. ಅದುವರೆಗೆ ಸೇರೆಗಾರ ರಂಗಪ್ಪಸೆಟ್ಟರನ್ನು ಆಲಂಬಿಸಿದ್ದ ಅವರ ಸಂಶಯ ಈಗ ಹೂವಯ್ಯನನ್ನು ಆವರಿಸತೊಡಗಿತು! ನಾಗಮ್ಮನವರ ಮೇಲೆ ಅವರಿಗಿದ್ದ ವೈರವೂ, ಇದು ಯಾವುದನ್ನೂ ಅರಿಯದಿದ್ದ ಹೂವಯ್ಯ ಆಗಾಗ ಗೌಡರನ್ನು ಸರಳ ರೀತಿಯಿಂದ ವಿಮರ್ಶಿಸಿದುದೂ, ಅವರ ಸಂಶಯಪಿಶಾಚಕ್ಕೆ ಆಹಾರವಾಗತೊಡಗಿದುವು. ಮನೆಯಲ್ಲಿ ಮೊದಲು ಇಲಿ ಬೆಕ್ಕುಗಳಂತಿದ್ದವರೆಲ್ಲ ಈಗ ಮೈತ್ರಿಯಿಂದ ಇರುವುದನ್ನು ಕಂಡ ಯಜಮಾನರು ತಮಗರಿಯದಂತೆ ಒಳಗೊಳಗೆ ಏನೋ ಪಿತೂರಿಯಾಗುತ್ತಿರಬೇಕೆಂದು ಭ್ರಮಿಸಿ ಎಲ್ಲರೊಡನೆಯೂ ಹುಚ್ಚು ಹುಚ್ಚಾಗಿ ವರ್ತಿಸತೊಡಗಿದರು.

ಇದೆಲ್ಲವನ್ನು ಈಕ್ಷಿಸಿ ಅರಿತ ಸೇರೆಗಾರರು, ಗೌಡರಿಗೆ ತಮ್ಮ ಮೇಲಿದ್ದ ಸಂಶಯವನ್ನು ಪರಿಹರಿಸಿಕೊಳ್ಳಲು ಇದೇ ಸಮಯವೆಂದು ಹವಣಿಸಿ, ಬೈರ ನಿಗೆ ಕೂಲಿ ಕೊಡದಿದ್ದುದಕ್ಕಾಗಿ ಹೂವಯ್ಯ ತಮಗೆ ಮಾಡಿದ ಮುಖಭಂಗಕ್ಕೆ

ಮುಯ್ಯಿತೀರಿಸಿಕೊಳ್ಳುವ ಸಲುವಾಗಿ ಯಜಮಾನರ ಕಿವಿಯಲ್ಲಿ ನಾನಾವಿಧವಾಗಿ ಪಿಸುಣಾಡತೊಡಗಿದರು. 'ಕರಡಿ' ಎಂದರೆ ಕುರುಡಾಗುವವನಿಗೆ ಕತ್ತಲಲ್ಲಿ ಕಗ್ಗಲ್ಲು ತೋರಿಸಿದಂತಾಯಿತು.

ಸಾಯಂಕಾಲ ಜೊತೆಗೂಡಿ ಕಳ್ಳು ಕುಡಿಯುತ್ತಿದ್ದಾಗ ಸೇರೆಗಾರರು "ಹೌದಾ ಗೌಡರೆ, ನಾನು ಹೊಟ್ಟೆಕಿಚ್ಚಿಗೆ ಹೇಳುವುದಲ್ಲ. ಮೊನ್ನೆ ನಾನು ನಿಮ್ಮ ಮಾತಿನಂತೆ ಆ ಬೈರ ಇದ್ದಾನಲ್ಲಾ? ಬೇಲರ ಬೈರ! ಅವನಿಗೆ ಬತ್ತ ಕೊಡ ದಿದ್ದಾಗ ಹೂವಯ್ಯಗೌಡರು ಕಂಡಾಬಟ್ಟೆ ಹೇಳಿಬಿಟ್ಟರಲ್ಲಾ! ನನಗಂತೂ ಹೇಳಿದರೆ ದೋಷವಿರುವುದಾ? ಹೌದಾ! ನೀವೇ ಹೇಳಿ! ನಿಮಗೂ ಹೇಳುವದೆ ಕಂಡಾಬಟ್ಟೆ! ನಿಮ್ಮ ಕೂಳು ತಿಂದು ಕಣ್ಣಿಗೆ ಬಂದ ಆ ಪುಟ್ಟಣ್ಣ ಇದ್ದಾನಲ್ಲಾ ಅವನೂ ಹೇಳಿಬಿಡುವುದೇ ನಿಮಗೆ ಕಂಡಾಬಟ್ಟೆ!... ಹೌದಾ! ಕಾಣಿ! ನನಗೆ ಆ ಪಾಪ ಏಕೆ? ನಾನು ಹೊಟ್ಟೆಕಿಚ್ಚಿಗೆ ಹೇಳುವುದಲ್ಲ. ಎಷ್ಟಾ ದರೂ ವಯಸ್ಸಾದ ಮಕ್ಕಳನ್ನು ಮನೆಯಲ್ಲಿ ಮದುವೆ ಮಾಡದೆ ಇಟ್ಟುಕೊಳ್ಳು ವುದು ಅಷ್ಟೇನು ಒಳ್ಳೆಯದಲ್ಲ.— ಅಲ್ದಾ! ನಾನು ಸುಳ್ಳು ಹೇಳುತ್ತಿದ್ದರೆ ನನ್ನ ನಾಲಗೆ ಬಿದ್ದುಹೋಗಲಿ ಈವೊತ್ತೆ!..." ಎಂದು ಕನ್ನಡ ಜಿಲ್ಲೆಯ ಸೆಟ್ಟರು ಮಕ್ಕಳ ಬಿಡಿಯಕ್ಕರದ ಶೀವಿಯಲ್ಲಿ ರಾಗವಾಗಿ ಹೇಳಿ ಮುಗಿಸುವಷ್ಟರಲ್ಲಿಯೆ ಕುಡಿಯುತ್ತಿದ್ದ ಗೌಡರು ಆ ಸೂಚನೆಗಳನ್ನು ಸಾಸಿರ್ಮಡಿಯಾಗಿ ಸ್ವೀಕರಿಸಿ, "ನೀವೇನು ಹೊಸದಾಗಿ ಹೇಳೋದು ಬ್ಯಾಡ್ರೀ; ನನಗೆಲ್ಲ ಗೊತ್ತಾಗಿದೆ. ಅವನ್ನ ಅವನ ತಾಯಿನಾ, ಮನೆಯಿಂದ ಹೊರಡಿಸಿದ ಹೊರ್ತು ಸುಖವಿಲ್ಲ. ಗದ್ದೆಗೆ ಇಳಿಯೋ ಒಳಗಾಗಿ ಮನೆ ಪಾಲುಮಾಡಿ, ಅವರನ್ನ ಬ್ಯಾರೆ ಹಾಕಿಬಿಡ್ತೀನಿ. ಇಲ್ದಿದ್ರೆ, ಹಿರಿಯಕ್ಕನ ಚಾಳಿ ಮನೆಮಂದಿಗೆಲ್ಲ ಅಂತಾ, ಎಲ್ಲ ಕೆಟ್ಟುಹೋದ್ರೆ ಮುಂದೇನು ಗತಿ? — ಅವನಂತೂ ನೆಲಾ ಗುಡಿಸುವಂತೆ ಬಿಳೀ ಪಂಚೆ ಉಟ್ಟು ಕೊಂಡು ಉಪ್ಪರಿಗೆ ಮೇಲೆ ಕೂತುಬಿಡ್ತಾನೇ ಹೊರತು ಮನೆಕೆಲ್ಸ ಏನು ಎಂತೂ ಅಂತ ಕಣ್ಣು ಹಾಕಿ ನೋಡೋದಿಲ್ಲ. ಅವನ್ದೆಸೆಯಿಂದ ನಮ್ಮ ರಾಮೂನೂ ಕೆಟ್ಟುಹೋಗ್ತಾನೆ! — ನಮ್ಮ ದೆಯ್ಯ, ನಮ್ಮ ದ್ಯಾವರು ಅಂದ್ರೆ ಅವನಿಗಷ್ಟು ನಿಕ್ರುಷ್ಟ. ಅವನು ಮನೀಗೆ ಬಂದದ್ದೇ ತಡ, ಭೂತರಾಯನಿಗೆ ಸಿಟ್ಟು ಬಂದು ನನಗೆ ಕಾಣಿಸಿಕೊಂಡೇಬಿಟ್ಟ! — ನಾಳೆ ನಾಡ್ದು ಒಂದು ಹರಕೆಮಾಡಿ ಪೂರೈಸಿ, ಅವರ ಪಾಲು ಅವರಿಗೆ ಕೊಟ್ಟು ಕಳಿಸಿಬಿಡ್ತೀನಿ. ಎಲ್ಲಾದ್ರೂ ಸತ್ತುಕೊಳ್ಲಿ ಆಮೇಲೆ... ಆ ಪುಟ್ಟಣ್ಣನ್ನೂ ಹೊರಡಿಸಿಬಿಡ್ತೀನಿ. ಅವನೊಬ್ಬ ಉಂಡಾಡಿ ಬಟ್ಟ! ಕೂಳು ಖರ್ಚಿಗೆ ಸೇರಿಕೊಂಡಾನೆ. ಮೂರು ಹೊತ್ತೂ ಕೋವಿ ತಗೊಂಡು ತಿರುಗೋದು! ಚಾಡಿ ಹೇಳಿಕೊಡೋದು! ಚೆನ್ನಾಗಿ ರಟ್ಟೆ

ಮುರಿದು ಗೆಯ್ಕೊಂಡು ತಿನ್ನಲಿ! ಆಮೇಲೆ ಗೊತ್ತಾಗ್ತದೆ!" ಎಂದು ಮೊದಲಾಗಿ ಬಾಯಿಗೆ ಬೀಗವಿಲ್ಲದೆ ನುಡಿದುಬಿಟ್ಟರು.

ಅದೇ ದಿನ ಸಾಯಂಕಾಲ ಹೂವಯ್ಯ ಉಪ್ಪರಿಗೆಯ ಮೇಲೆ ಕಥೆ ಓದಿ ಹೇಳುತ್ತಾ ಕುಳಿತಿದ್ದಾಗ ಕಳ್ಳು ಕುಡಿದಿದ್ದ ಚಂದ್ರಯ್ಯಗೌಡರು ಅಲ್ಲಿಗೆ ಹೋದರು. ಪುಟ್ಟಮ್ಮ, ವಾಸು, ರಾಮಯ್ಯ, ಪುಟ್ಟಣ್ಣ ಎಲ್ಲರೂ ಆಲಿಸುತ್ತ ಕುಳಿತಿದ್ದರು.

"ಆಯ್ತು ಬಿಡಪ್ಪಾ! ಇದೊಂದು ಇಸ್ಕೂಲೇ ಆಗಿಹೋಯ್ತು!.... ನಿನಗೇನೆ ಕೆಲ್ಸ ಇಲ್ಲಿ? ಓದಿ ಪ್ಯಾಸು ಮಾಡಿ ದೊರಸಾನಿ ಆಗ್ತಿಯೇನೆ?"

ತಂದೆಯ ನಿಷ್ಠುರವಾಕ್ಯಗಳಿಗೆ ಎದ್ದುನಿಂತಿದ್ದ ಪುಟ್ಟಮ್ಮ ತಲೆತಗ್ಗಿಸಿಕೊಂಡೇ ಮೆಟ್ಟಲಿಳಿದು ಕೆಳಗೆ ಹೋದಳು. ಪುಟ್ಟಣ್ಣನೂ ಎದ್ದು ದೂರ ನಿಂತನು. ಅವನನ್ನು ಕುರಿತು ಗೌಡರು "ಇನ್ನೇನು ಬಿಡೋ! ನಿನ್ನ ದೆಸೆ ಕುಲಾಯಿಸ್ತು. ಪೇಟಕಟ್ಟಿಕೊಂಡು ಮೇಷ್ಟರ ಕೆಲಸಕ್ಕೆ ಹೊರಡು!" ಎಂದರು. ರಾಮಯ್ಯ ಹೂವಯ್ಯರೂ ಮುಖ ಮುಖ ನೋಡಿಕೊಂಡರು. ವಾಸು ನಕ್ಕುಬಿಟ್ಟನು. ಗೌಡರು ಕ್ರುದ್ಧರಾಗಿ "ಯಾಕೋ ನಗ್ತೀಯಾ? ಇಲ್ಲೇನು ಕರಡಿ ಕುಣಸ್ತಾರೇನು! ನಿನ್ನ ತೀರ್ಥಳ್ಳಿಗೆ ಓದಕ್ಕೆ ದಬ್ತೀನಿ, ತಡೀ!" ಎಂದು ಗದರಿ "ಹೂವಯ್ಯಾ, ರಾಮು ಹೇಳಿದನೇನೋ ನಾನು ಹೇಳಿದ್ದನ್ನ?" ಎಂದು ಪ್ರಶ್ನಿಸಿದರು.

"ಯಾವುದನ್ನು?" ಎಂದನು ಹೂವಯ್ಯ.

"ಯಾವುದನ್ನೇನು? ಇನ್ನುಮೇಲೆ ನೀವು ಓದಕ್ಕೆ ಹೋಗೋದು ಬ್ಯಾಡ. ಸಾಮಾನ್ನೆಲ್ಲ ತರ್ಸಿಬಿಡಿ" ಎಂದರು ಗೌಡರು.

"ಇನ್ನೊಂದು ವರ್ಷ ಓದಿದರೆ ಬಿ.ಎ. ಆಗ್ತದೆ. ಮಧ್ಯೆ ಬಿಟ್ಟುಬಿಡೋದೇನು?"

"ಬಿ.ಎ.ನೂ ಬೇಡ, ಗೀಯೇನೂ ಬೇಡ. ದುಡ್ಡು ಕಳ್ಸಾಕ್ಕೆ ನನ್ನಿಂದ ಬಿಲ್‌ಕುಲ್ ಸಾಧ್ಯವಿಲ್ಲ."

"ಸ್ಕಾಲರ್‌ಷಿಪ್ ಬರ್ತದೆ, ಅದರಲ್ಲೇ ಏನಾದ್ರೂ ಮಾಡಿಕೊಳ್ತೀನಿ."

"ನಂಗದೆಲ್ಲ ಗೊತ್ತಿಲ್ಲ! ನಿನ್ನ ಪಾಲು ಆಸ್ತಿ ನೀ ತಗೊಂಡು ಆಮೇಲೆ ಎಲ್ಲಿಗಾದರೂ ಹೋಗು. ನನಗೂ ನಿನ್ನಪ್ಪನಿಗೂ ಸರಿಬರೋದಿಲ್ಲ."

ನಾಗಮ್ಮನವರೂ ಮಗನೊಡನೆ ತಾವು ಪಾಲು ತೆಗೆದುಕೊಂಡು ಬೇರೆಯಾಗುವುದು ಲೇಸು ಎಂದು ಹೇಳಿದ್ದರು. ಹೂವಯ್ಯ ತಾನು ಓದಲು ಹೋಗಬೇಕಾದ್ದರಿಂದ ಅದು ಸಾಧ್ಯವೇ ಅಲ್ಲ ಎಂದು ತಾಯಿಗೆ ಚೆನ್ನಾಗಿ ಮನಗಾಣಿಸಿ ಒಪ್ಪಿಸಿದ್ದನು. ತಾಯಿಯೂ ಮಗನ ಶ್ರೇಯಸ್ಸಿಗಾಗಿ ತನಗೆ ಬಂದ

ಕಷ್ಟಗಳನ್ನೆಲ್ಲ ಅನುಭವಿಸಲು ಸಿದ್ಧಳಾಗಿದ್ದಳು. ಆದರೆ ಚಂದ್ರಯ್ಯಗೌಡರು ಮನೆಯನ್ನು ಪಾಲುಮಾಡುವ ವಿಚಾರವಾಗಿ ದೃಢಮನಸ್ಸು ಮಾಡಿದಂತೆ ತೋರಿತು. ಅದಕ್ಕೆ ಮುಖ್ಯ ಕಾರಣ ಮಾತ್ರ ಅವರು ಹೇಳಿದುದಾಗಿರಲಿಲ್ಲ. ಹೂವಯ್ಯ ತಾನೊಬ್ಬನೇ ಆಗಿದ್ದರೆ, ತನ್ನ ಪಾಲಿನ ಆಸ್ತಿಯನ್ನು ಯಾರಿಗಾದರೂ ಗುತ್ತಿಗೆಗೆ ಕೊಟ್ಟು ಓದಲು ಹೋಗಬಹುದಾಗಿತ್ತು. ಆದರೆ ತಾಯಿ? ಅವನ ಮನಸ್ಸಿನಲ್ಲಿ 'ತಾಯಿ ಇರದಿದ್ದರೆ ಎಷ್ಟು ಸ್ವತಂತ್ರವಾಗಿರುತ್ತಿತ್ತು!' ಎಂಬ ಆಲೋಚನೆ ಕ್ಷಣಕಾಲ ಮಿಂಚಿತು. ಒಡನೆಯೆ ಅಮಂಗಲಾಲೋಚನೆಗೆ ಬೆದರಿ, ಅದನ್ನು ಮನದಿಂದ ಒರಸಿಬಿಟ್ಟನು.

ಹೂವಯ್ಯ ಎಷ್ಟು ವಿಧವಾಗಿ ಸಮಾಧಾನ ಹೇಳಿ ವಾದಿಸಿದರೂ ಯಜಮಾನರು ಕೇಳಲಿಲ್ಲ. ರಾಮಯ್ಯ ತಾನು ಮನೆಯಲ್ಲಿರುವುದಾಗಿಯೂ, ಕೆಲಸ ಕಾರ್ಯಗಳಲ್ಲಿ ಸಹಾಯ ಮಾಡುವುದಾಗಿಯೂ, ಹೂವಯ್ಯ ಇನ್ನೊಂದು ವರುಷದ ಮಟ್ಟಿಗೆ ಓದಲು ಹೋಗಲೆಂದೂ, ಅಂಜಿಯಂಜಿ ಹೇಳಿದನು. ಗೌಡರು ಮಗನ ಮೇಲೆ ಕಣ್ಣು ಕೆಂಪಗೆ ಮಾಡಿಕೊಂಡು ರೇಗಿ ಅಸಮಂಜಸವಾಗಿ ಕೂಗಾಡಿಬಿಟ್ಟರು. ಹೆಚ್ಚು ಮಾತಾಡಿದರೆ ಅವಿವೇಕವಾಗುವುದೆಂದು ತಿಳಿದು ಹೂವಯ್ಯನೂ ಸುಮ್ಮನಾದನು.

ಗೌಡರು ಕೆಳಗಿಳಿದು ಹೋಗುವಾಗ ಕಂಭಕ್ಕೆ ಒರಗಿಕೊಂಡು ನಿಂತಿದ್ದ ಪುಟ್ಟಣ್ಣನನ್ನು ಕರೆದು ಹೇಳಿದರು: "ನಾಳೆ ದೆಯ್ಯದ ಹರಕೆ ಮುಗಿಸಿಕೊಂಡು ನೀನೂ ಬೇರೆ ಮನೆ ಮಾಡಿಕೋ. ಆಮೇಲೆ ನನ್ನ ಮನೇಲಿರೋದು ಬೇಡ."

ಗೌಡರು ಕೆಳಗಿಳಿದು ಹೋದಮೇಲೆ ಕಂಬನಿಗರೆಯುತ್ತಿದ್ದ ರಾಮಯ್ಯನನ್ನು ನೋಡಿ ಹೂವಯ್ಯ "ನೀನೇಕೆ ಅಳುತ್ತೀಯೋ? ಹೆಂಗಸರ ಹಾಗೆ! ಪ್ರಪಂಚ ಇರೋದೆ ಹೀಗೆ. ಅದು ತಿಳಿಯದಿದ್ದರೆ ನೀನು ಇಷ್ಟೊಂದು ಕಾವ್ಯ ಕಾದಂಬರಿಗಳನ್ನು ಓದಿರೋದೆಲ್ಲ ವ್ಯರ್ಥ!" ಎಂದು ಹೇಳುತ್ತ ಹನಿಗಣ್ಣಾಗಿದ್ದ ವಾಸುವನ್ನು ಪಕ್ಕಕ್ಕೆ ಎಳೆದು ಅಪ್ಪಿಕೊಂಡು "ಕಥೆ ಮುಂದಕ್ಕೋದೋಣೇನು?" ಎಂದನು.

ವಾಸು ಮಾತಾಡಲಿಲ್ಲ. ಒಂದೆರಡು ಅಶ್ರುಬಿಂದುಗಳು ಅವನ ಕೆನ್ನೆಗಳ ಮೇಲೆ ಇಳಿದುವು.

"ಅವರು ಈಗೀಗ ಏಕೆ ಹಿಂಗಾಗುತ್ತಿದ್ದಾರೋ ನನಗೆ ಬೇರೆ ಗೊತ್ತಾಗುವುದಿಲ್ಲ." ಎಂದು ರಾಮಯ್ಯ ತಂದೆಯನ್ನು ನಿರ್ದೇಶಿಸಿ ಕಣ್ಣೀರೊರಸಿಕೊಂಡನು.

"ಅದೆಲ್ಲ ಸೇರೆಗಾರರ ಪಿತೂರಿ!" ಎಂದನು ಪುಟ್ಟಣ್ಣ.

"ಆ ಸೂಳೇಮಗನ್ನ ನಾಳೇನೆ ಒದ್ದು ಓಡಿಸಿದರೆ ಏನಾಗ್ತದೆ?" ಎಂದು ವಾಸು ಹೂವಯ್ಯನ ಕಡೆ ನೋಡಿದನು. ಹೂವಯ್ಯ ಮಾತಾಡಲಿಲ್ಲ. ಮುಗುಳು ನಗೆಯೊಂದು ಮುಖದಮೇಲೆ ನಲಿದಾಡುತ್ತಿತ್ತು.

ಇರುಳು ಹೂವಯ್ಯನಿಗೆ ಬಹಳ ಹೊತ್ತು ನಿದ್ದೆ ಬರಲಿಲ್ಲ. ಚಿಕ್ಕಯ್ಯನಾಡಿದ್ದ ಮಾತುಗಳನ್ನೆ ಕುರಿತು ಯೋಚಿಸತೊಡಗಿದನು. ತನ್ನ ವಿದ್ಯಾರ್ಜನೆ ಕೊನೆಗಾಣುವುದಲ್ಲಾ ಎಂದು ಮನಸ್ಸಿಗೆ ಬಹಳ ನೋವಾಯಿತು. ಮತ್ತೆ— ಚಿಂತೆಯಿಲ್ಲ, ಈಶ್ವರೇಚ್ಛೆ ಹಾಗೇ ಇದ್ದರೆ ಮನೆಯಲ್ಲಿಯೇ ಗ್ರಂಥಗಳ ಸಹಾಯದಿಂದ ವಿದ್ಯಾದೇವತೆಯನ್ನು ಆರಾಧಿಸಬಹುದು ಎಂದು ಸಮಾಧಾನ ಮಾಡಿಕೊಂಡನು. ಮನಸ್ಸು ಅಲ್ಲಿ ಇಲ್ಲಿ ಸುಳಿದು ಸುತ್ತಿ, ಇಷ್ಟಮೂರ್ತಿಯ ದರ್ಶನ ಮಾಡಿತು. ಸೀತೆಯ ಲಾವಣ್ಯವಿಗ್ರಹ ಭುವನಮೋಹಕವಾಗಿ ಕಲ್ಪನೆಯ ಕಣ್ಣಿಗೆ ಕಾಣಿಸಿತು. ದುಃಖಮಯವಾಗಿ ತೋರುತ್ತಿದ್ದ ಭವಸಾಗರದಲ್ಲಿ ಆ ಸೌಂದರ್ಯ ಮೂರ್ತಿಯೊಬ್ಬಳೇ ಮನೋಹರವಾದ ಸುಖದ್ವೀಪದಂತೆ ರಾರಾಜಿಸಿದಳು. ಸೀತೆಯ ಸಮೀಪದಲ್ಲಿ ಇರಬಹುದೆಂಬ ಮಾಧುರ್ಯದಿಂದ ವಿದ್ಯಾರ್ಜನೆಗಾಗಿ ಮೈಸೂರಿಗೆ ಹೋಗಲಾರದ ನೋವೂ ಪ್ರಿಯವಾಗಿ ತೋರಿತು.

ಆದರೆ ವಿಧಿ ಬೇರೊಂದು ವ್ಯೂಹವನ್ನು ರಚಿಸುತ್ತಿತ್ತು.

## ೨೯

# ಕಾನೂರಿನಲ್ಲಿ ದೆಯ್ಯದ ಹರಕೆ

ಕಾನೂರಿನಲ್ಲಿ 'ದೆಯ್ಯದ ಹರಕೆ' ಎಂದರೆ, ಅದೊಂದು ಮಹಾಸಂಭ್ರಮದ ಘಟನೆ. ಚಂದ್ರಯ್ಯಗೌಡರ ಆಳು, ಒಕ್ಕಲು, ಸಮೀಪದ ಬಂಧುಗಳು ಎಲ್ಲರೂ ಅದರಲ್ಲಿ ಭಾಗಿಗಳಾಗುವುದು ವಾಡಿಕೆಯಾಗಿತ್ತು. ಕೆಲವು ಕುರಿಗಳೂ ಅನೇಕ ಕುಕ್ಕುಟಗಳೂ ಆ ದಿನ ಭೂತ, ರಣ, ಬೇಟೆರಣ, ಚೌಡಿ, ಪಂಜ್ರೊಳ್ಳಿ ಮೊದಲಾದ 'ದೆಯ್ಯ ದ್ಯಾವರು'ಗಳಿಗೆ ಬಲಿಯಾಗುತ್ತಿದ್ದುದರಿಂದ ಕೆಲವರ ಕಣ್ಣಿಗೂ ಎಲ್ಲರ ಹೊಟ್ಟೆಗೂ ಹಬ್ಬವಾಗುತ್ತಿತ್ತು. ನಂಟರೂ ನಂಟರ ಮನೆಯ ಮಕ್ಕಳೂ ಮನೆಯನ್ನೆಲ್ಲ ತುಂಬಿ, ಮನಸ್ಸಿಗೆ ಹರ್ಷವಾಗುವಂತೆ ಕಲಕಲರವವಾಗುತ್ತಿತ್ತು.

ಆದರೆ ಈ ವರ್ಷದ 'ದೆಯ್ಯದ ಹರಕೆ' ಮನೆಯವರಿಗೆ ಅಷ್ಟೇನೂ ಸಂಭ್ರಮಕಾರಿಯಾಗಿರಲಿಲ್ಲ. ಏಕೆಂದರೆ ಎಲ್ಲರ ಮನೋಗಗನದಲ್ಲಿಯೂ ಕಾರ್ಮುಗಿಲು ಕವಿದುಕೊಂಡಿತ್ತು. ಉಳಿದವರಿಗೆ ಎಂದಿನಂತೆಯೆ ಆಹ್ಲಾದಕರವಾಗಿತ್ತು.

ಕೆಲವು ಬಂಧುಗಳೂ ಒಕ್ಕಲುಗಳೂ ಹಿಂದಿನ ದಿನ ಸಾಯಂಕಾಲವೆ ಮನೆಗೆ ಬಂದುಬಿಟ್ಟಿದ್ದರು. ಮರುದಿನ ಬೆಳಿಗ್ಗೆ ಹೊರಗಿನ ಆಳುಗಳೆಲ್ಲ ಹಾಜರಾದರು. ಬೇಲರ ಬೈರ, ಸಿದ್ದ, ಹಳೆಪೈಕದ ತಿಮ್ಮ, ಕೆಳಕಾನೂರು ಅಣ್ಣಯ್ಯ ಗೌಡರು, ಅವರ ಮಗಳು, ಬಾಡುಗಳ್ಳ ಡೊಳ್ಳುಹೊಟ್ಟೆಯ ಸೋಮ, ಗಂಗೆ ಮೊದಲಾದ ರಂಗಪ್ಪಸೆಟ್ಟರ ಕಡೆಯ ಕನ್ನಡ ಜಿಲ್ಲೆಯ ಆಳುಗಳು! ಸ್ವಲ್ಪ ಹೊತ್ತಾಗು ವುದರೊಳಗೆ ಇತರ ಹಳ್ಳಿಗಳಿಗೆ ತನ್ನ ಕರ್ತವ್ಯದಮೇಲೆ ಹೋಗಿದ್ದ ಮಾರ್ಕನ ಸವಾರಿಯೂ ದಯಮಾಡಿಸಿತು. (ದೆಯ್ಯದ ಹರಕೆಗಿಂತಲೂ ತುಂಡು ಕಡುಬೇ ಅವನ ಆಗಮನಕ್ಕೆ ಬಹುಶಃ ಪ್ರಬಲತರವಾದ ಕಾರಣವಾಗಿದ್ದಿರಬಹುದು!) ಊರು ಬಿಟ್ಟು ಸೀತೆಮನೆಗೆ ಹೋಗಿದ್ದ ಓಬಯ್ಯನೂ ಬಂದನು. ಭೂತದ ಹರಕೆ ಎಂದರೆ ಅವನಿಗೆ ಹೆಚ್ಚು ಭಕ್ತಿ. ಅದರಲ್ಲಿಯೂ ಭೂತ ತನಗೆ ಆಗಾಗ ದರ್ಶನ ಕೊಡುತ್ತದೆಂದು ಅವನು ಎಲ್ಲೆಲ್ಲಿಯೂ ಸಾರಿಬಿಟ್ಟಿದ್ದನು. ಅಂತಹ ಭೂತಭಕ್ತ ಹರಕೆಗೆ ಬರದಿದ್ದರೆ ಆಗುತ್ತದೆಯೆ?

ಮೇಲುಜಾತಿಯ ಕೆಲವರು ಪಾಕಕಾರ್ಯಕ್ಕೆ ನಿಂತರು. ಕಡುಬಿಗೆ ಹಿಟ್ಟು ಕುಟ್ಟುವುದು, ಮಾಂಸಕ್ಕೆ ಕಾರ ಕಡೆಯುವುದು, ತೆಂಗಿನಕಾಯಿ ತುರಿಯುವುದು, ಮಸಾಲೆ ಸಾಮಾನು ಸಜ್ಜುಗೊಳಿಸುವುದು, ದೊಡ್ಡ ದೊಡ್ಡ ಕಡಾಯಿಗಳನ್ನು ಸಿದ್ಧಮಾಡುವುದು, ಬಾಳೆಯೆಲೆ ಬಾಡಿಸುವುದು ಇತ್ಯಾದಿ ಕಾರ್ಯಗಳು ವಿತರಣೆ ಯಿಂದ ಸಾಗಲಾರಂಭವಾದುವು. ಮತ್ತೆ ಕೆಲವರು ಕೆರೆಯ ಬಳಿ ಕತ್ತಿಗಳನ್ನು ಮಸೆಯುವುದು, ಬಾಳೆಯ ಹೆಡೆಗಳನ್ನು ಹಾಸುವುದು, ಕುರಿಕೋಳಿಗಳನ್ನು 'ಹಸಿಗೆ' ಮಾಡಲು ಬೆಂಕಿಗಾಗಿ ಕಟ್ಟಿಗೆ ತಂದೊಡ್ಡುವುದು, ಎಲುಬು ಕತ್ತರಿಸಲು 'ಕೊಚ್ಚುಗೊಲ್ಲಿ'ಗಳನ್ನು ತಯಾರಿಸುವುದು ಇತ್ಯಾದಿ ಕೆಲಸಗಳಲ್ಲಿ ನಿಯುಕ್ತ ರಾದರು. ಇನ್ನೂ ಕೆಲವರು ಆಯಾ ದೆವ್ವ ಭೂತಗಳಿಗೆ ಕೊಡಬೇಕಾಗಿದ್ದ ಬಲಿಯ ಕಾರ್ಯಕ್ಕೆ ನಿಯೋಜಿತರಾದರು. ಒಟ್ಟಿನಲ್ಲಿ ಕೆಲಸ ಮೂರುಕಾಸಿನ ದಾದರೆ ಗಲಾಟೆ ಒಂದು ರೂಪಾಯಿನದಾಗಿತ್ತು! ವಾಸುವಿನ ನೇತೃತ್ವದಲ್ಲಿ ಅಂದು ಮನೆಯಲ್ಲಿ ನೆರೆದ ಬಾಲಕ ಬಾಲಕಿಯರೆಲ್ಲ ಕೇಕೆಹಾಕಿ ಕುಣಿದಾಡುವುದೇ ಪರಮ ಕರ್ತವ್ಯವೆಂದು ತಿಳಿದು ಕೆರೆಯಿಂದ ಅಡುಗೆಮನೆಗೂ ಅಡುಗೆಮನೆ ಯಿಂದ ಜಗುಲಿಗೂ ಅಲ್ಲಿಂದ ಹೊರ ಅಂಗಳಕ್ಕೂ ಹಾಸು ಹೊಕ್ಕಾಡುತ್ತಿದ್ದರು. ರಾಮಯ್ಯ ಚಂದ್ರಯ್ಯಗೌಡರ ಆಜ್ಞಾವಾಹಕನಾಗಿ, ತನಗೆ ದೆಯ್ಯದ ಹರಕೆಯಲ್ಲಿ ಒಂದಿನಿತೂ ಇಷ್ಟವಿಲ್ಲದಿದ್ದರೂ, ಹಿಂಸಾಮಯ ಭೂತಾರಾಧನೆಗೆ ತತ್ವತಃ ವಿರೋಧಿಯಾಗಿದ್ದರೂ, ತಂದೆಯ ಹೆದರಿಕೆಯಿಂದ ಅವರು ಹೇಳಿದ ಕೆಲಸಗಳನ್ನು ಯಂತ್ರದಂತೆ ಮಾಡುತ್ತಿದ್ದನು. ಎರಡು ಕಿವಿಗಳಿಗೂ ಹತ್ತಿ ತುರುಕಿಕೊಂಡಿದ್ದ

ಚಂದ್ರಯ್ಯಗೌಡರು ಜನರ ಗಲಿಬಿಲಿಯನ್ನೆಲ್ಲ ಮೀರುವಂತೆ ತಾರಸ್ವರದಿಂದ ಹುಕುಂ ಚಲಾಯಿಸುತ್ತಿದ್ದರು. ಮನೆಯ ನಾಯಿಗಳಂತೂ ಎಲ್ಲಿಹೋದರೂ ಥೂ! ಛೀ! ಹಛೀ! ಎನ್ನಿಸಿಕೊಂಡು ನಿಲ್ಲಲು ತಾವಿಲ್ಲವೆಂಬಂತೆ ತಿರುಗುತ್ತಿದ್ದುವು. ಪುಟ್ಟಣ್ಣನು ಗೌಡರ ಅಪ್ಪಣೆಯಂತೆ ಮಿಂದು ಕೊಳೆ ಪಂಚೆಯನ್ನೇ ಮಡಿಯುಟ್ಟುಕೊಂಡು ಪೂಜಾಸಾಮಾಗ್ರಿಗಳನ್ನೆಲ್ಲ ಸಜ್ಜುಗೊಳಿಸಿ ಅಗ್ರಹಾರದ ವೆಂಕಪ್ಪಯ್ಯ ಜೋಯಿಸರ ಆಗಮನವನ್ನೇ ಇದಿರುನೋಡುತ್ತಿದ್ದನು. ಶೂದ್ರರಿಂದ ರಕ್ತಬಲಿಯಾಗುವ ಮುನ್ನ ಬ್ರಾಹ್ಮಣರಿಂದ ಭೂತಗಳಿಗೆಲ್ಲ ಪೂಜೆ ಮಾಡಿಸಿ 'ಜೈನೆಡೆ' ಹಾಕಿಸುವುದು ವಾಡಿಕೆ. ('ಜೈನೆಡೆ' ಎಂದರೆ ಜೈನರ ಎಡೆ ಎಂದರ್ಥ. ಎಂದರೆ ನಿರಾಮಿಷ ನೈವೇದ್ಯ!)

ಹೀಗೆ ಎಲ್ಲರೂ ಕೋಲಾಹಲದಲ್ಲಿ ಭಾಗಿಗಳಾಗಿದ್ದಾಗ ಉಪ್ಪರಿಗೆಯಲ್ಲಿ ಹೂವಯ್ಯನೊಬ್ಬನೆ ಕುಳಿತು ಭಗವದ್ಗೀತೆಯನ್ನು ಓದುತ್ತಿದ್ದನು. ಆದರೆ ಮನಸ್ಸು ಸಂಪೂರ್ಣವಾಗಿ ಭಗವದ್ಗೀತೆಯಲ್ಲಿತ್ತೆಂದು ಹೇಳಲಾಗುವುದಿಲ್ಲ. ಏಕೆಂದರೆ ಆಗಾಗ ಕತ್ತೆತ್ತಿ ಎದುರಿಗಿದ್ದ ಕಾಡು ಬೆಟ್ಟ ಬಾನುಗಳ ಕಡೆಗೆ ನೋಡು ತ್ತಿದ್ದನು. ಅವುಗಳನ್ನೂ ನೋಡುತ್ತಿರಲಿಲ್ಲವೆಂದು ತೋರುತ್ತದೆ. ಅವನ ಕಣ್ಣು ಮೊಟ್ಟೆಯ ಮೇಲೆ ಕಾವು ಕೂತ ಹಕ್ಕಿಯ ಕಣ್ಣಿನಂತೆ ಅಂತರ್ಮುಖ ವಾಗಿತ್ತು. ಚಿತ್ರಗಳೂ ಭಾವಗಳೂ ಆಲೋಚನೆಗಳೂ ಆಶೆ ಆಶಂಕೆಗಳೂ ಅವನ ಮನಸ್ಸರೋವರದಲ್ಲಿ ತರಂಗಿತವಾಗಿ, ಒಂದರಮೇಲೊಂದುರುಳಿ ಹೋಗುತ್ತಿದ್ದುವು.

ಆರ್ಯಧರ್ಮದ ಉತ್ತಮ ಆದರ್ಶವೇನು? ಹಿಂದೂಗಳೆಂದು ಹೇಳಿ ಕೊಳ್ಳುವ ಈ ಮಂದಿ ಮಾಡುತ್ತಿರುವ ಕಾರ್ಯಕಲಾಪಗಳೇನು? ಉಪನಿಷತ್ತು ಭಗವದ್ಗೀತೆಗಳ ಮಹೋನ್ನತ ದಿವ್ಯದರ್ಶನವೆಲ್ಲಿ? ಈ ಮಂದಿ ಕೈಕೊಂಡಿರುವ ಪಿಶಾಚಾರಾಧನೆಯೆಲ್ಲಿ? ಇದನ್ನೆಲ್ಲ ತಿದ್ದುವ ಬಗೆ ಹೇಗೆ? ಒಂದು ರೀತಿ ಯಿಂದ ನೋಡಿದರೆ ಪಾದ್ರಿಗಳ ಖಂಡನೆ ಎಷ್ಟು ಸತ್ಯವಾಗಿದೆ! — ಹೂವಯ್ಯ ಕೈಯಲ್ಲಿದ್ದ ಗೀತಾಶಾಸ್ತ್ರದ ಕಡೆಗೆ ನೋಡಿದನು. ಈ ಶ್ಲೋಕವು ಕಣ್ಣಿಗೆ ಬಿತ್ತು:

> ಯಾಂತಿ ದೇವವ್ರತಾ ದೇವಾನ್ ಪಿತೄನ್ ಯಾಂತಿ ಪಿತೃವ್ರತಾಃ |
> ಭೂತಾನಿ ಯಾಂತಿ ಭೂತೇಜ್ಯಾ ಯಾಂತಿ ಮದ್ಯಾಜಿನೋಽಪಿ ಮಾಮ್ ||

ದೇವತೆಗಳನ್ನು ಪೂಜಿಸುವವರಿಗೆ ದೇವಲೋಕ ಲಭಿಸುತ್ತದೆ. ಪಿತೃ ಪೂಜಕರು ಪಿತೃಲೋಕವನ್ನೈದುತ್ತಾರೆ. ಭೂತ ಪ್ರೇತ ಪೂಜಕರು ಆ ಭೂತ ಪ್ರೇತಗಳ ಲೋಕವನ್ನೇ ಸೇರುತ್ತಾರೆ. ನನ್ನ ಪೂಜಕರು ನನ್ನಲ್ಲಿಗೆ ಬರುತ್ತಾರೆ.

ಹಾಗೆಯೆ ಮತ್ತೊಂದು ಶ್ಲೋಕವೂ ನೆನಪಿಗೆ ಬಂದು ಹದಿನೇಳನೆಯ ಅಧ್ಯಾಯವನ್ನು ತೆಗೆದು ಓದಿದನು;

ಯಜಂತೇ ಸಾತ್ವಿಕಾ ದೇವಾನ್ ಯಕ್ಷರಕ್ಷಾಂಸಿ ರಾಜಸಾಃ |
ಪ್ರೇತಾನ್ ಭೂತಗಣಾಂಶ್ಚಾನ್ಯೇ ಯಜಂತೇ ತಾಮಸಾ ಜನಾಃ ||

ಸಾತ್ವಿಕರು ದೇವತೆಗಳನ್ನು ಪೂಜಿಸುತ್ತಾರೆ. ರಾಜಸರು ಯಕ್ಷರಾಕ್ಷಸರನ್ನು ಪೂಜಿಸುತ್ತಾರೆ. ತಾಮಸಜನರು ಪ್ರೇತಭೂತಗಣಗಳನ್ನು ಪೂಜಿಸುತ್ತಾರೆ.

"ಹೇ ಭಗವಾನ್, ಈ ಜನರ ಮನಸ್ಸನ್ನು ನಿನ್ನ ಕಡೆಗೆ ತಿರುಗಿಸಲು ನನಗೆ ಶಕ್ತಿಯನ್ನು ಕೃಪೆಮಾಡು" ಎಂದು ಹೂವಯ್ಯ ಮನದಲ್ಲಿಯೆ ಪ್ರಾರ್ಥಿಸಿದನು. ಯಾವುದೋ ಒಂದು ಭಾವೋತ್ಕರ್ಷದಿಂದ ಅವನ ಕಣ್ಣುಗಳಲ್ಲಿ ಹನಿ ತುಂಬಿತು. ಹನ್ನೆರಡನೆಯ ಅಧ್ಯಾಯವನ್ನು ತೆಗೆದು ಭಾವಪೂರ್ಣವಾಗಿ ಭಕ್ತಿಯೋಗದ ಶ್ಲೋಕಗಳನ್ನು ಓದತೊಡಗಿದನು: ಐದನೆಯ ಶ್ಲೋಕವನ್ನು ಮುಗಿಸಿ ಆರನೆಯದಕ್ಕೆ ಬಂದನು:

ಯೇ ತು ಸರ್ವಾಣಿ ಕರ್ಮಾಣಿ ಮಯಿ ಸಂನ್ಯಸ್ಯ ಮತ್ಪರಾಃ |
ಅನನ್ಯೇನೈವ ಯೋಗೇನ ಮಾಂ ಧ್ಯಾಯನ್ತ ಉಪಾಸತೇ ||
ತೇಷಾಮಹಂ ಸಮುದ್ಧರ್ತಾ ಮೃತ್ಯುಸಂಸಾರ ಸಾಗರಾತ್ |
ಭವಾಮಿ ನ ಚಿರಾತ್ಪಾರ್ಥ ಮಯ್ಯಾವೇಶಿತ ಚೇತಸಾಮ್ ||
ಮಯ್ಯೇವ ಮನ ಆಧತ್ಸ್ವ ಮಯಿ ಬುದ್ಧಿಂ ನಿವೇಶಯ |
ನಿವಸಿಷ್ಯಸಿ ಮಯ್ಯೇವ ಅತ ಊರ್ಧ್ವಂ ನ ಸಂಶಯಃ ||

ಎಲ್ಲ ಕರ್ಮಗಳನ್ನೂ ನನ್ನಲ್ಲಿ ನಿವೇದಿಸಿ, ನನ್ನಲ್ಲಿಯೇ ತತ್ಪರನಾಗಿ, ಅನನ್ಯ ಯೋಗದಿಂದ ನನ್ನನ್ನು ಉಪಾಸಿಸುವರನ್ನು ಮೃತ್ಯುಸಂಸಾರ ಸಾಗರದಿಂದ ಉದ್ಧಾರ ಮಾಡುತ್ತೇನೆ. ನನ್ನಲ್ಲಿಯೇ ಮನಸ್ಸಿರಲಿ, ನನ್ನಲ್ಲಿಯೇ ಬುದ್ಧಿ ಯಿರಲಿ, ನಿಸ್ಸಂದೇಹವಾಗಿ ನೀನು ನನ್ನನ್ನು ಪಡೆಯುತ್ತೀಯೆ.

ಹೂವಯ್ಯ ಭಾವವಶನಾದನು. ಮೈ ಪುಲಕಿತವಾಯಿತು. ಗೀತಾ ಪುಸ್ತಕ ನೆಲಕ್ಕುರುಳಿತು. ಥಕ್ಕನೆ ಎಚ್ಚೆತ್ತವನಂತೆ ಮತ್ತೆ ಗ್ರಂಥವನ್ನೆತ್ತಿ, ತೆರೆದು ನಮಸ್ಕರಿಸು ತ್ತಿರಲು, ಕಂಬನಿಯೊಂದು ಕಾಗದದ ಮೇಲೆ ತಟಕ್ಕೆಂದು ಬಿದ್ದಿತು. ಆ ಹನಿಯನ್ನು ಕೈಯಿಂದೊರಸುತ್ತಿರಲು ತೊಯ್ದ ಶ್ಲೋಕವು ತೂರ್ಯವಾಣಿಯಂತೆ ಕಾಣಿಸಿತು!

ಪತ್ರಂ ಪುಷ್ಪಂ ಫಲಂ ತೋಯಂ ಯೋ ಮೇ ಭಕ್ತ್ಯಾ ಪ್ರಯಚ್ಛತಿ ||
ತದಹಂ ಭಕ್ತ್ಯುಪಹೃತಮಶ್ನಾಮಿ ಪ್ರಯತಾತ್ಮನಃ ||

ಒಂದು ಎಲೆಯನ್ನಾಗಲಿ ಒಂದು ಹೂವನ್ನಾಗಲಿ ಒಂದು ಹಣ್ಣನ್ನಾಗಲಿ ನನಗೆ ಯಾವನಾದರೂ ಭಕ್ತಿಯಿಂದ ನಿವೇದಿಸಿದರೆ ಅದನ್ನು ಆನಂದದಿಂದ ಸ್ವೀಕರಿಸುತ್ತೇನೆ.

"ಭಗವಾನ್, ಕಂಬನಿಯ ನೈವೇದ್ಯ ಎಲ್ಲಕ್ಕಿಂತಲೂ ಶ್ರೇಷ್ಠವಾದುದಲ್ಲವೆ?" ಎಂದುಕೊಂಡು ಹೂವಯ್ಯ ಚೈತ್ರ ಸೂರ್ಯನ ಕಾಂತಿಯಲ್ಲಿ ಅನಂತ ವಿಸ್ತಾರವಾಗಿ ಹಬ್ಬಿದ್ದ ವನಪ್ರಾಂತವನ್ನು ನೋಡಿದನು.

ಕೆಳಗೆ ಹೊರ ಅಂಗಳದಲ್ಲಿ ಭೂತಬಲಿಗಾಗಿ ತಂದು ಕಟ್ಟಿದ್ದ ಮೇಕೆಗಳಲ್ಲಿ ಒಂದು ಅರಚಿಕೊಂಡಿತು. ಧ್ಯಾನಭಂಗವಾಗಿ ಹೂವಯ್ಯ ಕಿಟಕಿಯ ಬಳಿಗೆ ಹೋಗಿ ನಿಂತನು.

ಹೊರಗಡೆ, ಹುಣಿಸೆಯ ಮರದ ಬೇರಿಗೆ, ಬಲಿಗಾಗಿ ತಂದಿದ್ದ ಮೂರು ನಾಲ್ಕು ಮೇಕೆಗಳನ್ನು ಕಟ್ಟಿದ್ದರು. ಅವುಗಳಲ್ಲಿ ಅಚ್ಚ ಕಪ್ಪು ಬಣ್ಣದ ಹೋತನೊಂದು, ತನಗೆ ಅನತಿದೂರದಲ್ಲಿ ಎಟುಕಿಯೂ ಎಟುಕದಂತಿದ್ದ ಪೊದೆಯ ಸೊಪ್ಪಿಗಾಗಿ, ಕೊರಳ ಹಗ್ಗವನ್ನು ಜಗ್ಗಿ ತುಡಿದು, ಕುತ್ತಿಗೆಯನ್ನು ನೀಡಿ, ನಾಲಗೆಯನ್ನು ಚಾಚಿ ಚಾಚಿ ಸಾಹಸಮಾಡುತ್ತಿತ್ತು. ನಾಲಗೆ ಒಂದು ಎಲೆಯ ತುದಿಯನ್ನು ಮುಟ್ಟುತ್ತಿದ್ದಿತೆ ಹೊರತು ಎಲೆ ಬಾಯಿಗೆ ಸಿಕ್ಕುತ್ತಿರಲಿಲ್ಲ. ಇನ್ನೊಂದು ಗಂಟೆಯೊಳಗಾಗಿ ಹತವಾಗಲಿರುವ ಆ ಪ್ರಾಣಿ ಆಹಾರ ಸಂಪಾದನೆಗಾಗಿ ಎಷ್ಟು ಪ್ರಯತ್ನಪಡುತ್ತಿದೆ ಎಂದುಕೊಂಡ ಹೂವಯ್ಯನಿಗೆ ಸಂಕಟವಾಯಿತು. ವಾಸು, ಪುಟ್ಟ ಮತ್ತೆ ಕೆಲವು ಹುಡುಗರು ಆ ಯಜ್ಞಪಶುಗಳಿಗೆ ಸ್ವಲ್ಪ ದೂರದಲ್ಲಿ, ಅರ್ಧಚಂದ್ರ ವ್ಯೂಹವಾಗಿ ನಿಂತು ಏನೇನೊ ಚಿಲಿಪಿಲಿಗುಟ್ಟುತ್ತಿದ್ದರು. ನಿಂಗ, ಓಬಯ್ಯ, ಹಳೆಪೈಕದ ತಿಮ್ಮ ಮತ್ತು ಇತರ ಕೆಲವು ಜನರು ಕುರಿಗಳನ್ನೇ ನೋಡುತ್ತ ಮಾತಾಡಿಕೊಳ್ಳುತ್ತಿದ್ದರು. ಅವರಾಡಿಕೊಳ್ಳುತ್ತಿದ್ದ ಮಾತಿನ ಪರಿಣಾಮವಾಗಿ ಮಾರ್ಕ ಕರಿಯ ಹೋತನ ಬಳಿಗೆ ಹೋಗಿ, ತನ್ನ ಬಲಗೈಯನ್ನು ಕೊರಳಿಗೂ ಎಡಗೈಯನ್ನು ಪೃಷ್ಠಭಾಗಕ್ಕೂ ಕೊಟ್ಟು, ಪ್ರಾಣಿಯನ್ನು ಎತ್ತಿ ತೂಕವನ್ನು ನೋಡಿ "ಪರ್ವಾ ಇಲ್ಲ" ಎಂಬಂತೆ ಅಭಿನಯಿಸಿ ನಿಂತವರಿಗೆ ಏನನ್ನೋ ಹೇಳಿದನು. ಒಡನೆಯೆ 'ಹ ಹ ಹ ಹ!' 'ಹೊ ಹೊ ಹೋ!' ಎಂಬ ಅನೇಕ ಕಂಠಗಳ ನಗೆಯ ನಾದ ಕೇಳಿಸಿತು. ಮೇಕೆಗಳೆಲ್ಲ ಕಂಗಾಲಾಗಿ ಬೆದರುಗಣ್ಣಾದುವು.

ಅಷ್ಟರಲ್ಲಿ ಮತ್ತೊಂದು ಪರಿಚಿತ ಕಂಠಧ್ವನಿ ಕೇಳಿಸಿದಂತಾಗಲು ಹೂವಯ್ಯ ಆ ಕಡೆಗೆ ದೃಷ್ಟಿ ತಿರುಗಿಸಿದನು. ಅಗ್ರಹಾರದ ಜೋಯಿಸರು ವೆಂಕಪ್ಪಯ್ಯನವರು ಚಂದ್ರಯ್ಯಗೌಡರೊಡನೆ ಮಾತಾಡುತ್ತ ನಿಂತಿದ್ದಾರೆ! ಪಕ್ಕದಲ್ಲಿ

ಮುತ್ತಳ್ಳಿ ಚಿನ್ನಯ್ಯ ರಾಮಯ್ಯನೊಡನೆ ಮಾತಾಡುತ್ತಿದ್ದಾನೆ. ಹೂವಯ್ಯನ ಹೃದಯದಲ್ಲಿ ಇದ್ದಕ್ಕಿದ್ದ ಹಾಗೆ ಭಾವಸಂಚಾರವಾಯಿತು. ಆ ದಿನದ ದೆಯ್ಯದ ಹರಕೆ ಅವನಿಗೆ ಸಂಪೂರ್ಣವಾಗಿ ಅನಿಷ್ಟವಾಗಿದ್ದರೂ ಒಂದು ವಿಚಾರದಲ್ಲಿ ಮಾತ್ರ ಉತ್ಸಾಹವಿತ್ತು. ಚಿನ್ನಯ್ಯನನ್ನು ಕಂಡೊಡನೆ ಅದು ದ್ವಿಗುಣಿತವಾಯಿತು, ಅಣ್ಣನೊಡನೆ ತಂಗಿಯೂ ಬಂದಿರಬೇಕೆಂದು. ಪ್ರತಿ ವರ್ಷವೂ ಕಾನೂರಿನ ದೆಯ್ಯದ ಹರಕೆಗೆ ಶ್ಯಾಮಯ್ಯಗೌಡರಾಗಲಿ ಚಿನ್ನಯ್ಯನಾಗಲಿ ಗೌರಮ್ಮ, ಸೀತೆ, ಲಕ್ಷ್ಮಿಯರನ್ನು ಕರೆದುಕೊಂಡು ಬರುವುದು ವಾಡಿಕೆಯಾಗಿತ್ತು. ಹಾಗೆ ಬಂದಾಗಲೆಲ್ಲ ಸ್ತ್ರೀ ಬಂಧುಗಳು ಒಂದೆರಡು ವಾರಗಳು ನಂಟರ ಮನೆಯಲ್ಲಿಯೆ ನಿಲ್ಲುತ್ತಿದ್ದರು. ಅದನ್ನು ನೆನೆದು ಹೂವಯ್ಯ ಹರ್ಷಚಿತ್ತನಾದನು.

ಆದರೆ ಅವರನ್ನು ಕರೆತಂದ ಗಾಡಿಯೆಲ್ಲಿ? ತಾನು ಗೀತೆಯನ್ನು ಓದುತ್ತ ಕೂತಿದ್ದಾಗ ಗಾಡಿ ಬಂದಿರಬೇಕು; ಅದನ್ನು ಗಾಡಿಕೊಟ್ಟಿಗೆಯಲ್ಲಿ ನಿಲ್ಲಿಸಿರಬೇಕು ಎಂದು ಆಲೋಚಿಸಿದ ಹೂವಯ್ಯ ನಿಂತಲ್ಲಿ ನಿಲ್ಲಲಾರದೆ ಉಪ್ಪರಿಗೆಯನ್ನಿಳಿದು ಚಿನ್ನಯ್ಯ ರಾಮಯ್ಯರು ಮಾತಾಡುತ್ತಿದ್ದಲ್ಲಿಗೆ ಹೋದನು.

ಜೋಯಿಸರು ಭೂತಗಳಿಗೆ 'ಜೈನೆಡೆ' ಹಾಕಲು ಚಂದ್ರಯ್ಯಗೌಡರೊಡನೆ ಮಾತಾಡುತ್ತ ಹೋದರು. ಪುಟ್ಟಣ್ಣ ಸಕಲ ಸಾಮಾಗ್ರಿಗಳನ್ನು ಸಿದ್ಧಮಾಡಿಕೊಂಡು ಅವರ ಹಿಂದೆ ನಡೆದನು. ಉಳಿದ ಮೂವರೂ ಮರಳಿ ಉಪ್ಪರಿಗೆ ಯೇರಿದರು.

ಸ್ವಲ್ಪ ಹೊತ್ತು ಮಾತಾಡಿದ ಹೂವಯ್ಯ "ನಿಮ್ಮ ಗಾಡಿಯೆಲ್ಲಿ? ಬಂದಿದ್ದು ಕಾಣಲಿಲ್ಲ?" ಎಂದನು.

ರಾಮಯ್ಯ "ಅವನೊಬ್ಬನೆ ಬಂದಿದ್ದಾನೆ, ಗಾಡಿಯೇಕೆ?" ಎಂದನು.

ಹೂವಯ್ಯ "ಅದೇನು ಅತ್ತೆಮ್ಮ ಬರಲಿಲ್ಲವೇನು?" ಎಂದು ಕೇಳಿ ನಸು ನಾಚಿದನು.

ಚಿನ್ನಯ್ಯ "ನಮ್ಮ ಸೀತೆಗೆ ಮೈ ಹುಷಾರಿಲ್ಲ. ಅದಕ್ಕೇ ಅವರು ಯಾರೂ ಬರಲಿಲ್ಲ" ಎಂದು ಹೇಳುತ್ತ ಜೇಬಿನಿಂದ ಸಿಗರೇಟು ಪೊಟ್ಟಣ ತೆಗೆದನು.

ಹೂವಯ್ಯ ಸ್ವಲ್ಪ ಹತಾಶವಾಣಿಯಿಂದ "ಏನಾಗಿದೆ ಸೀತೆಗೆ?" ಎಂದು, ಚಿನ್ನಯ್ಯ ಬಾಯಲ್ಲಿದ್ದ ಸಿಗರೇಟಿಗೆ ಬೆಂಕಿ ಹೊತ್ತಿಸುವುದನ್ನು ನೋಡುತ್ತ ಪ್ರತ್ಯುತ್ತರಕ್ಕಾಗಿ ಕಾದನು.

ಚಿನ್ನಯ್ಯ ಹೊಗೆ ಬಿಡುತ್ತ ಪ್ರಾರಂಭಿಸಿದನು:

"ಏನಪ್ಪಾ? ನನಗೆ ಬೇರೆ ಗೊತ್ತಾಗುವುದಿಲ್ಲ. ನೀವೆಲ್ಲ ಹೊರಟು ಬಂದ ಮಾರನೆ ದಿನದಿಂದಲೆ ಯಾಕೊ ಏನೊ ಮಂಕಾಗಿದ್ದಾಳೆ. ಅವತ್ತು ರಾತ್ರಿ ಯೇನೋ ಕನಸಿನಲ್ಲಿ 'ಹುಲಿ! ಹುಲಿ!' ಅಂತ ಕೂಗಿಕೊಂಡಳಂತೆ.

ಮರುದಿನ ಜ್ವರ ಬಂದು ಸ್ವಲ್ಪ ಚಿತ್ತವಿಕಾರವಾದಂತಿದೆ. ಅವಳ ಜಾತಕ ನೋಡಿದ ವೆಂಕಪ್ಪಯ್ಯನವರು ಯಾವುದೋ ಗ್ರಹದ ಕಾಟ ಅಂತ ಹೇಳಿ, ಏನೇನೊ ಮಂತ್ರ ತಂತ್ರ ಮಾಡಿದರಂತೆ. ಇವತ್ತು ನಾನಿಲ್ಲಿಗೆ ಹೊರಟಾಗ ತಾನೂ ಬರ್‍ತೀನಿ ಅಂತ ಹಟಹಿಡಿದು ಕೂತಿದ್ದಳು! ಅವ್ವ ಹೆದರಿಸಿ 'ಬ್ಯಾಡ' ಅಂತು."

"ಗಾಡಿ ಮೇಲೆ ಕರಕೊಂಡು ಬರಬಹುದಾಗಿತ್ತು" ಎಂದನು ರಾಮಯ್ಯ. ಹೂವಯ್ಯ ಮಾತಾಡಲಿಲ್ಲ. ವೆಂಕಪ್ಪಯ್ಯನವರು ಸೀತೆಯ ಜಾತಕ ನೋಡಿದರು ಎಂದಾಗಲೆ — ಸೀತೆಮನೆ ಸಿಂಗಪ್ಪಗೌಡರು ತಮ್ಮ ಮಗ ಕೃಷ್ಣಪ್ಪನ ಜಾತಕವನ್ನು ಮುತ್ತಳ್ಳಿಗೆ ತೆಗೆದುಕೊಂಡು ಹೋಗಿದ್ದುದು ನೆನಪಿಗೆ ಬಂದು, ಅವನ ಎದೆಯಲ್ಲಿ ನಿರಾಕಾರ ಭಯವೊಂದು ಮೂಡಿತ್ತು.

"ಇದರ ಮಧ್ಯೆ ಒಂದು ಮದುವೆ ಬೇರೆ ನಿಶ್ಚಯವಾಗಿರೋ ಹಾಂಗೆ ಕಾಣ್ತದೆ!" ಎಂದನು ಚಿನ್ನಯ್ಯ.

ಹೂವಯ್ಯ ಅವ್ಯಕ್ತೋದ್ವೇಗದಿಂದ "ಯಾರಿಗೆ?" ಎಂದನು.

ಚಿನ್ನಯ್ಯ ಒಂದಿನಿತು ಅತೃಪ್ತಿಯಿಂದಲೊ ಎಂಬಂತೆ ಹೇಳಿದನು: "ನಮ್ಮ ಮಾತು ಯಾರು ಕೇಳ್ತಾರೆ? ಅವರು ಹಿಡಿದಿದ್ದೇ ಹಟ, ಅವರು ಹೋಗಿದ್ದೇ ಸರಿ ದಾರಿ; ನನಗೂ ಅಪ್ಪಯ್ಯನಿಗೂ ಅದೇ ವಿಚಾರದಲ್ಲಿ ಎರಡೆರಡು ಮಾತು ಆಗಿಹೋಯ್ತು. ಅವಳಿಗೇಕಪ್ಪಾ, ಇಷ್ಟುಬೇಗ ಮದುವೆ? ಇನ್ನೊಂದು ಎರಡು ವರ್ಷ ಹೋಗಿದ್ರೇನಾಗ್ತಿತ್ತು? ಆ ಸೀತೆಮನೆ ಸಿಂಗಪ್ಪ ಮಾವನಂತೂ ಓದೋದು ಶಾಸ್ತ್ರ, ಹಾಕೋದು ಗಾಣ. ಒಳಗೊಳಗೇ ಕತ್ತರಿಸ್ತಾನೆ! ಕೃಷ್ಣಪ್ಪನಿಗೆ ಸೀತೇನ ಕೊಡಬೇಕು ಅಂತ ಕೇಳಿದನಂತೆ. ಇವರು 'ಜಾತಕ ಸರಿಬಂದರೆ ಆಗಲಿ' ಅಂದುಬಿಟ್ಟರಂತೆ. ಆ ಊರುಹಾಳ ವೆಂಕಪ್ಪಯ್ಯ ಜಾತಕ ನೋಡಿ ಲಗ್ನ ನಿಶ್ಚಯಮಾಡಿ ಕೊಟ್ಟಿದ್ದಾನಂತೆ. . ."

"ಅವನ ಕೈಲಿ ಜಾತಕ ನೋಡಿಸಿ ಮದುವೆಯಾದವರು ಯಾರು ತಾನೆ ಸುಖವಾಗಿದ್ದಾರೆ?" ಎಂದ ರಾಮಯ್ಯನಿಗೆ ತನ್ನ ಉದ್ವೇಗವನ್ನು ಮುಚ್ಚಿಡಲಾಗಲಿಲ್ಲ.

ಚಿನ್ನಯ್ಯ "ಅವನೊಬ್ಬ ಬೃಹಸ್ಪತಿ ಆಗಿಬಿಟ್ಟಿದ್ದಾನೆ, ಅಪ್ಪಯ್ಯ, ಕಾನೂರು ಮಾವ, ಸಿಂಗಪ್ಪ ಮಾವ ಇವರಿಗೆಲ್ಲ!" ಎಂದು ಸಿಗರೇಟಿನ ತುದಿಯ ಬೂದಿಯನ್ನು ಚಿಟಿಕಿ ಹೊಡೆದು ಉದುರಿಸಿದನು.

"ಲಗ್ನ ನಿಶ್ಚಯವಾಗಿ ಹೋಯ್ತೇನು?" ಎಂದ ಹೂವಯ್ಯನ ಕೊರಳಿನಲ್ಲಿ ದುಃಖಧ್ವನಿಯಿತ್ತು.

ಚಿನ್ನಯ್ಯ "ಹೌದಂತೆ! ಈ ಹುಣ್ಣಿಮೆ ಕಳೆದಮೇಲಂತೆ! 'ಲಗ್ನಪತ್ರಿಕೆ

17

ಮಾಡಿಸಬೇಕು, ತೀರ್ಥಹಳ್ಳಿಗೆ ಹೋಗಬೇಕು' ಅಂತಿದ್ದರು. ಇಷ್ಟು ಬೇಗ ಏನು ಅವಸರವಾಗಿತ್ತೋ ಏನೋ? ಎರಡು ವರ್ಷ ತಡೆದಿದ್ದರೆ ಬೇರೆ ಗಂಡು ಸಿಕ್ತಿರಲಿಲ್ಲವೆ?" ಎಂದು ಹೂವಯ್ಯನ ಕಡೆಗೆ ಅರ್ಥಗರ್ಭಿತವಾಗಿ ನೋಡಿದನು. ಅವನ ಕಣ್ಣೂ ಒದ್ದೆಯಾದಂತಿತ್ತು.

ಇತ್ತ ಜೋಯಿಸರು ಭೂತಕ್ಕೆ ಹಣ್ಣು ಕಾಯಿ ಹಾಕಿ, ತಮಗೆ ಮಾಮೂಲಾಗಿ ಬರಬೇಕಾದ ದಾನ ದಕ್ಷಿಣೆಗಳನ್ನೆಲ್ಲ ಮಡಿಪಂಚೆಯಲ್ಲಿ ಗಂಟುಹಾಕಿಕೊಂಡು ಅಗ್ರಹಾರಕ್ಕೆ ಹಿಂತಿರುಗಿದರು. ಅವರಿಂದ ಮುತ್ತಳ್ಳಿಗೂ ಸೀತೆಮನೆಗೂ ಆಗಲಿರುವ ಹೊಸಸಂಬಂಧದ ಸುದ್ದಿಯನ್ನು ಕೇಳಿದ ಚಂದ್ರಯ್ಯಗೌಡರು ಮನದಲ್ಲಿ ಕುದಿದರು. ಸೀತೆಯನ್ನು ತಮ್ಮ ಮಗ ರಾಮಯ್ಯನಿಗೆ ತಂದುಕೊಳ್ಳಬೇಕೆಂಬುದು ಅವರ ಆಸೆಯಾಗಿತ್ತು. ಅವರೂ ಇನ್ನೇನು ಹೆಣ್ಣು ಕೇಳುವುದರಲ್ಲಿದ್ದರು. ಹಿರಿಯವನಾದ ಹೂವಯ್ಯ ಮನೆಯಲ್ಲಿದ್ದಾಗಲೆ ಕಿರಿಯವನಾದ ರಾಮಯ್ಯನಿಗೆ ಮದುವೆಮಾಡಿದರೆ ಜನರ ನಿಂದೆಗೆ ಗುರಿಯಾಗಬೇಕಾಗುತ್ತದೆ ಎಂದು ಭಾವಿಸಿ, ಹೂವಯ್ಯನಿಗೆ ಆಸ್ತಿಯಲ್ಲಿ ಪಾಲುಕೊಟ್ಟು ಬೇರೆ ಹಾಕಿದೊಡನೆಯೆ ಮಗನ ಮದುವೆಯನ್ನು ನೆರವೇರಿಸಬೇಕೆಂದು ಅವರ ಮನಸ್ಸಾಗಿದ್ದಿತು. ಸಿಂಗಪ್ಪಗೌಡರ ದೆಸೆಯಿಂದ ತಮ್ಮ ಆಶೆಗೆ ಭಂಗ ಬಂದಿತಲ್ಲಾ ಎಂದು ಅವರ ಮೇಲೆ ಮತ್ತಷ್ಟು ಮುನಿದುಕೊಂಡರು. ತಮ್ಮ ಕೈಯಲ್ಲಾಗುವ ತಳತಂತ್ರಗಳನ್ನೆಲ್ಲ ಹೂಡಿ ಈ ಸಂಬಂಧವನ್ನು ಮುರಿಯಬೇಕೆಂದು ಮನಸ್ಸುಮಾಡಿದರು. ಆದರೆ ಅದು ಹೇಗೆ ಸಾಧ್ಯ? . . . . ಶ್ಯಾಮಯ್ಯಗೌಡರೂ ತನ್ನನ್ನು ಒಂದು ಮಾತು ಕೇಳದೆ, ಹೆಣ್ಣುಕೊಡಲು ಒಪ್ಪಿದರಲ್ಲಾ ಎಂದು, ಅವರ ಮೇಲೆಯೂ ಸಿಟ್ಟಾದರು. ಸಿಂಗಪ್ಪಗೌಡರು ಕಳ್ಳನಾಟಾ ಕಡಿಸಿ ಮನೆಗೆ ಸಾಗಿಸಿದುದು ನೆನಪಿಗೆ ಬಂದು 'ಇರಲಿ, ನಾನೂ ಒಂದು ಮದುವೆ ಮಾಡಿಸ್ತೀನಿ ಅವನಿಗೆ' ಎಂದುಕೊಂಡರು.

## ೩೦

## ಹೋತದ ದೆಸೆಯಿಂದ

ಜೋಯಿಸರ ಪೂಜೆಯಾದ ಮೇಲೆ ರಕ್ತಬಲಿಗೆ ಪ್ರಾರಂಭವಾಯಿತು. ಗೌಡರ ಅಪ್ಪಣೆಯಂತೆ ಜನರು ಆಯಾ ದೊಡ್ಡ ಸಣ್ಣ ದೆಯ್ಯಗಳಿಗೆ ಬಲಿ ಕೊಡಬೇಕಾಗಿರುವ ಯಜ್ಞಪಶುಗಳನ್ನು ಕೊಂಡೊಯ್ದರು. ಮೇಕೆಗಳ ಅರಚುವಿಕೆಯೂ

ಕಾಲು ಕಟ್ಟಿದ ಕೋಳಿಗಳ ನಾನಾ ತೆರನಾದ ಕೂಗುವಿಕೆಯೂ ವಾಯುಮಂಡಲವನ್ನೆಲ್ಲ ತುಂಬಿತ್ತು. ಹರಕೆ ಹೊತ್ತುಕೊಂಡಿದ್ದವರೆಲ್ಲರೂ ತಮ್ಮ ತಮ್ಮ ಬಲಿ ಪ್ರಾಣಿಗಳನ್ನು ಎಳೆದುಕೊಂಡೋ ಹೊತ್ತುಕೊಂಡೋ ಆಯಾ ದೆಯ್ಯದ 'ಬನ' ಗಳಿಗೆ ಹೋದರು. ಆ ಹರಕೆಗೊಲೆಯ ದೃಶ್ಯಗಳನ್ನು ನೋಡಲೆಂದು ಮಕ್ಕಳೂ ದೊಡ್ಡವರೂ ಸಣ್ಣ ಸಣ್ಣ ಗುಂಪುಗಳಾಗಿ ನಡೆದರು. ಅದರಲ್ಲಿಯೂ ಚೌಡಿ ಎಂಬ ದೆಯ್ಯದ 'ಬನ'ಕ್ಕೆ ಹೋಗುತ್ತಿದ್ದವರೇ ಹೆಚ್ಚು. ಏಕೆಂದರೆ ಚೌಡಿಗೆ ಬಲಿ ಕೊಡಬೇಕಾಗಿದ್ದ ಮೇಕೆಯನ್ನು ಕತ್ತಿಯಿಂದ ಕತ್ತರಿಸಿ ಕೊಲ್ಲುತ್ತಿರಲಿಲ್ಲ! ಪ್ರಾಣಿಯ ಕಾಲುಗಳನ್ನು ಭದ್ರವಾಗಿ ಕಟ್ಟಿ, ಅದನ್ನು ಹೊಟ್ಟೆಮೇಲಾಗಿ ಅದುಮಿ ಹಿಡಿದು ಕೊಂಡಮೇಲೆ, ಒಬ್ಬನು ಒನಕೆಯಿಂದ ಪ್ರಾಣಿಯ ವಕ್ಷಸ್ಥಳಕ್ಕೆ ಬೀಸಿ ಬೀಸಿ ಹೊಡೆದು ಹೊಡೆದು ಕೊಲ್ಲುತ್ತಿದ್ದನು. ಹಾಗೆ ಕೊಂದರೇನೇ ಆ ಚೌಡಿಗೆ ಸಂತೃಪ್ತಿಯಂತೆ!

ಭೂತದ 'ಬನ'ದ ಕಡೆಗೂ ಅನೇಕರ ಪಕ್ಷಪಾತವಿತ್ತು. ಏಕೆಂದರೆ ಭೂತದ ಬಲಿಗಾರನಾಗಿದ್ದ ಹಳೆಪೈಕದ ತಿಮ್ಮ ಎಂತಹ ದೊಡ್ಡ ಹೋತನನ್ನಾದರೂ ಒಂದೇ ಕೊಚ್ಚಿಗೆ ಒಳ್ಳೆಯ ರಸಿಕತೆಯಿಂದ ಕತ್ತರಿಸುತ್ತಿದ್ದ ನೈಪುಣ್ಯವೂ ಶಕ್ತಿಯೂ ಅನೇಕ ಅಬಲರಿಗೆ ಆಕರ್ಷಣೀಯವಾದ ಸಾಹಸವಾಗಿತ್ತು.

ಕುಂಕುಮ, ಕೆಂಪುದಾಸವಾಳದ ಹೂ ಮೊದಲಾದುವುಗಳ ರುದ್ರವಿನಿಯೋಗ ದೊಡನೆ ಬಲಿಗೆ ಪ್ರಾರಂಭವಾಯಿತು. ಕರಿಯ ಹೋತನಂತೂ ತನ್ನ ಕೊರಳಿಗೆ ಹಾಕಿದ್ದ ದಾಸವಾಳದ ಹೂವುಗಳನ್ನೇ, ಕುತ್ತಿಗೆ ಬಗ್ಗಿಸಿ, ಬಹು ಶ್ರಮದಿಂದ ತಿನ್ನುತ್ತಿತ್ತು. ಆದರೆ ಕೋಳಿಗಳ ಬಲಿಗೆ ಆರಂಭವಾದೊಡನೆ ಆ ದೃಢಕಾಯ ವಾಗಿದ್ದ ಹೋತ ಹಠಾತ್ತಾಗಿ ಗಂಭೀರವಾಯಿತು. ಬಹುಶಃ ತನಗೊದಗಲಿರುವ ದುರ್ಗತಿಯ ಅರಿವಾಯಿತೋ ಏನೋ ಅದಕ್ಕೆ!

ಬಳಿಯಿದ್ದವರು 'ನೋಡಿದೆಯೋ ಭೂತದ ಮಹಿಮೆ! ಅದಕ್ಕೂ ಗೊತ್ತಾಗಿ ಹೋಯಿತು! ಎಷ್ಟು ಭಕ್ತಿಯಿಂದ ನಿಂತುಕೊಂಡಿದೆ?' ಎಂದು ವ್ಯಾಖ್ಯಾನ ಮಾಡಿದರು.

ತಿಮ್ಮ ಕೋಳಿಗಳ ಮಂಡೆಗಳನ್ನು ಒಂದೊಂದನ್ನಾಗಿ ಕೊಯ್ದು ಬೇರೆಮಾಡಿ, ಮರದ ಬುಡದಲ್ಲಿದ್ದ ಭೂತದ ಕಲ್ಲಿಗೆ ರಕ್ತ ಹಚ್ಚತೊಡಗಿದನು. ತಲೆ ಹೋದ ಕೋಳಿಗಳು ರೆಕ್ಕೆಗಳನ್ನು ರಪ್ಪರಪ್ಪನೆ ಬಡಿದುಕೊಂಡು ದಿಕ್ಕು ದಿಕ್ಕಿಗೆ ಹಾರಿ ಹಾರಿ ಬೀಳತೊಡಗಿದುವು. ಮರಗಳ ನಡುವೆ ತೂರಿ ಬರುತ್ತಿದ್ದ ಬಿಸಿಲಿನ ಬೆಳಕಿನಲ್ಲಿ ಚೆಲ್ಲಿದ್ದ ನೆತ್ತರು ರುದ್ರಾರುಣವಾಗಿತ್ತು. ರುಂಡವಿಲ್ಲದ ಕೋಳಿಯೊಂದು, ಅಸ್ಪೃಶ್ಯನಾಗಿದ್ದುದರಿಂದ ದೂರ ನಿಂತಿದ್ದ ಬೈರನ ಬಳಿಗೆ, ಒದ್ದಾಡಿಕೊಂಡು ಬರುತ್ತಿರಲು, ಅವನ ಸೊಂಟಕ್ಕೆ ಸುತ್ತಿದ್ದ ಕೊಳಕು ಪಂಚೆಗೆ ಅದರ ರಕ್ತ ಹಾರಿತು.

"ಹಾಳು ಮುಂಡೇದು! ತಲೆ ಹೋದರೂ ಸೊಕ್ಕು ಬಿಡದು!" ಎಂದವನೇ ಒಂದು ದೊಣ್ಣೆಯಿಂದ ಬಡಿದು ಅದರ ಹಾರಾಟವನ್ನು ನಿಲ್ಲಿಸಿದನು. ಅವನು ಹೊಡೆಯುತ್ತಿದ್ದಾಗ 'ಹ ಹ ಹ ಹ! ಹಿ ಹಿ ಹಿ ಹಿ! ಹೊ ಹೊ ಹೊ ಹೊ!' ಎಂದು ಎಲ್ಲರೂ ನಗುತ್ತಿದ್ದರು. ಕರಿಯ ಹೋತ ಬೆಚ್ಚಿಬಿದ್ದಿತು. "ಕನಿಕರದ ಮಾನವರೇ, ಕರುಣಿಸಿ, ಕಾಪಾಡಿ!" ಎಂಬಂತೆ ಕಿರಿಚಿಕೊಂಡು, ಕೊರಳ ಹಗ್ಗವನ್ನು ತುಯ್ದು ತಪ್ಪಿಸಿಕೊಳ್ಳಲೆಳಸಿತು. ಅದನ್ನು ಹಿಡಿದಿದ್ದ ನಿಂಗ ರೇಗಿ ಬಿದ್ದು "ಈ ಪುಣ್ಯ ನಿನಗಿನ್ನೆಲ್ಲಿ ಸಿಕ್ಕೀತು? ಸುಮ್ಮನೆ ನಿಂತುಕೋ!" ಎಂದು ಒಂದು ಗುದ್ದು ಗುದ್ದಿದನು.

ಕೋಳಿಗಳೆಲ್ಲ ಮುಗಿದಮೇಲೆ ತಿಮ್ಮ "ಹ್ನೂ! ಕುರೀ! ಬರ್ಲೀ!" ಎಂದು ಕೂಗಿದನು. ತನಗೆ ಆರೋಗ್ಯಭಾಗ್ಯವಿಲ್ಲದಿದ್ದರೂ ತಾನು ಹಿಡಿದಿದ್ದ ಹೋತದ ಆರೋಗ್ಯಕ್ಕಾಗಿ ಹೆಮ್ಮೆಪಡುತ್ತಿದ್ದ ನಿಂಗ ಉತ್ಸಾಹದಿಂದ ಮುಂದುವರಿದನು. ಹೋತ ಕದಲಲೊಲ್ಲದೆ ಹೋಯಿತು. ವಾಸ್ತವವಾಗಿಯೂ ಶಕ್ತಿಯಲ್ಲಾಗಲಿ ತೂಕದಲ್ಲಾಗಲಿ ನಿಂಗನಿಗೇನೂ ಅದು ಕಡಮೆಯಾಗಿರಲಿಲ್ಲ! ನಿಂಗ ಜಗ್ಗಿಸಿ ಎಳೆದನು. ಹೋತವೂ ಎಳೆಯಿತು. ನಿಂಗ ಒಂದು ಹೆಜ್ಜೆ ಅದರ ಕಡೆಗೇ ಸರಿಯಬೇಕಾಯಿತು! 'ಹ ಹ ಹ ಹ! ಹಿ ಹಿ ಹಿ ಹಿ! ಹೊ ಹೊ ಹೊ ಹೊ!' ಎಂದು ನೋಡುತ್ತಿದ್ದವರೆಲ್ಲ ಮತ್ತೆ ನಕ್ಕರು. ಅಷ್ಟರಲ್ಲಿ ಮತ್ತೊಬ್ಬನು ತಾನು ಹಿಡಿದಿದ್ದ ಮೇಕೆಯನ್ನು ತಿಮ್ಮನಿದ್ದ ಬಲಿಪೀಠದ ಬಳಿಗೆ ಕೊಂಡೊಯ್ದುದರಿಂದ ನಿಂಗ ಸುಮ್ಮನಾದನು. ಆ ಮೇಕೆಯೂ ಗಡಗಡನೆ ನಡುಗುತ್ತಿತ್ತು. ಅರಚಿಕೊಳ್ಳುತ್ತಿತ್ತು! ಅದನ್ನು ಹಿಡಿದಿದ್ದವನು ಒಂದು ಸೊಪ್ಪಿನ ತುಂಡೆಯನ್ನು ಅದರ ಮುಖದ ಬಳಿಗೆ ಚಾಚಿದನು. ಪಾಪ! ಆ ಪ್ರಾಣಿ ಹಿಂದೆ ಎಷ್ಟೋ ಸಾರಿ ತನ್ನನ್ನು ಸಾಕಿ ಸಲಹಿದವರಿಂದ ಹಾಗೆಯೇ ಸೊಪ್ಪನ್ನು ತಿಂದಿತ್ತು! ಆದ್ದರಿಂದ ಇಂದೂ ಆ ಸೊಪ್ಪನ್ನು ಸಾಕುವವನ ಕರುಣೆ, ಮಾತೃಭಾವದ ಚಿಹ್ನೆ ಎಂದು ಭಾವಿಸಿಯೋ ಅಥವಾ ಅದನ್ನು ತಿಂದರೆ ತನ್ನನ್ನು ಕ್ಷಮಿಸಿ ಬಿಟ್ಟುಬಿಡುತ್ತಾರೆಂದೋ ಅದಕ್ಕೆ ಬಾಯಿ ಹಾಕಿತು. ಒಡನೆಯೆ ತಿಮ್ಮನ ಕತ್ತಿ ಕತ್ತಿನಮೇಲೆ ಬಿದ್ದು, ಚಕ್ಕನೆ ಮಂಡೆ ನೆಲಕ್ಕುರುಳಿತು. ದೇಹವೂ ಬಿದ್ದು ಒದ್ದಾಡಿಕೊಂಡಿತು. ರಕ್ತ ಬುಗ್ಗೆಯಂತೆ ಚಿಮ್ಮಿ ತಿಮ್ಮನ ದೇಹ ಭಾಗಗಳು ಕೆಂಪಾದುವು. "ಬೇಗ ತಗೊಂಡು ಬಾರೋ!" ಎಂದು ಕೂಗಲು ಒಬ್ಬನು ಬೋಗುಣಿಯನ್ನು ತಂದು, ನೆತ್ತರು ನೆಲಕ್ಕೆ ಬಿದ್ದು ಹಾಳಾಗದಂತೆ ಹಿಡಿದನು.

ಇದನ್ನೆಲ್ಲ ಪ್ರತ್ಯಕ್ಷವಾಗಿ ನೋಡುತ್ತಿದ್ದ ನಿಂಗನ ಕೈಲಿದ್ದ ಕರಿಯ ಹೋತ

ಅರಚಲೂ ಆರದೆ ಥರಥರನೆ ಕಂಪಿಸತೊಡಗಿತು. "ಅಲ್ನೋಡ್ರೋ! ಹ್ಯಾಂಗೆ ನಡುಗ್ತದೆ ಅದು?" ಎಂದೊಬ್ಬನು ಪ್ರಶಂಸಿಸಿದನು. "ಅದಕ್ಕೂ ಭಯ ವಲ್ಲವೇ?" ಎಂದನು ಮತ್ತೊಬ್ಬ.

"ನಿಂಗಯ್ಯ, ಎಳಕೊಂಡು ಬನ್ರೋ!" ಎಂದು ಒಕ್ಕಲಿಗನಿಗೆ ಹಳೆಪೈಕದ ತಿಮ್ಮ ಕೂಗಿ ಹೇಳಿದನು.

ನಿಂಗ ಎಳೆದನು. ನಡುಗುತ್ತ ನಿಂತಿದ್ದ ಹೋತ ಜೀವರಕ್ಷಣೆಮಾಡಿಕೊಳ್ಳಲು ಕಟ್ಟಕಡೆಗೊದಗುವ ಧೈರ್ಯ ಸಾಹಸ ಶಕ್ತಿಗಳಿಂದ ಹಗ್ಗವನ್ನು ಬಲವಾಗಿ ಝಗ್ಗಿ ಸೆಳೆಯಲು, ನಿಂಗ ಮುಗ್ಗುರಿಸಿ ಬಿದ್ದನು.

"ಹಿಡೀರ್ರೋ! ಹಿಡೀರ್ರೋ! ಹಿಡೀರ್ರೋ!" ಎಂದು ಎಲ್ಲರೂ ಕೂಗಿ ನುಗ್ಗುವುದರಲ್ಲಿಯೆ ಕೊರಳ ಹಗ್ಗದೊಡನೆ ಹೋತ ಕಾಡಿನ ಕಡೆಗೆ ಓಡತೊಡಗಿತು.

ಶಕ್ತರು ಬೆನ್ನಟ್ಟಿದರು, ಅಶಕ್ತರು ಕೂಗಿಕೊಂಡರು. ಕೆಲವರು 'ಕ್ರೂ ಕ್ರೂ ಕ್ರೂ!' ಎಂದು ನಾಯಿಗಳನ್ನು ಕರೆದು ಛೂ ಬಿಟ್ಟರು. ಅಂತೂ ಮನುಷ್ಯರೆಂಬುವರೂ ನಾಯಿಗಳೂ ಒಟ್ಟು ಸೇರಿ, ಕಾಡೆಲ್ಲ ಬೊಬ್ಬೆಗೊಡುವಂತೆ ಅಬ್ಬರಿಸಿ ಹೋತನನ್ನು ಬೇಟೆಯಾಡಿದರು. ಹೋತ ಒಂದೇ ಸಮನೆ ಮರಗಳ ನಡುವೆ, ಹಳುವಿನಲ್ಲಿ ಉಬ್ಬನೇರಿ, ತಗ್ಗನಿಳಿದು, ಹಾರಿ ನೆಗೆದು, ಮನುಷ್ಯರಿಂದಲೂ ನಾಯಿಗಳಿಂದಲೂ ನುಣುಚಿಕೊಂಡು ಮೃತ್ಯುವೇಗದಿಂದ ಧಾವಿಸಿತು. ಗಲಭೆ ಎಲ್ಲೆಲ್ಲಿಯೂ ಹಬ್ಬಿ, ಅನೇಕರು ರಣರಂಗಕ್ಕೆ ನುಗ್ಗಿದರು.

ನಿಜವಾದ ವಾರ್ತೆ ತಿಳಿಯದವರು ತಮಗೆ ಇಷ್ಟಬಂದ ಸುದ್ದಿಗಳನ್ನೆಲ್ಲ ಹಬ್ಬಿಸಿದರು. ಅಡುಗೆಮನೆಯೊಂದರಲ್ಲಿಯೇ ವಿವಿಧವಾರ್ತೆಗಳು ಪ್ರಚುರವಾಗಿ ಭೀತಿ ಹಬ್ಬಿತು. ಪುಟ್ಟಮ್ಮ ಓಡಿಬಂದು ನಾಗಮ್ಮನವರ ಹತ್ತಿರ "ದೊಡ್ಡಮ್ಮಾ! ಹುಲಿ ಬಂದು ಹಳೇಪೈಕದ ತಿಮ್ಮನ್ನ ಹಿಡ್ಕೊಂಡ್ಹೋಯ್ತಂತೆ!" ಎಂದು ನಡುಗತೊಡಗಿದಳು. ಅಲ್ಲಿಗೆ ಅಳುತ್ತ ಓಡಿಬಂದ ನಿಂಗನ ಮಗ ಪುಟ್ಟ "ಅಲ್ಲಂತೆ! ನಮ್ಮಪ್ಪನ್ನಂತೆ ಹಿಡ್ಕೊಂಡ್ಹೋಗಿದ್ದು!" ಎಂದು ರೋದಿಸಲಾರಂಭಿಸಿದನು. ಅವರೆಲ್ಲ ಜಗಲಿಗೆ ನುಗ್ಗಿ ಬರುತ್ತಿದ್ದಾಗ ವಾಸು ಎದುರಿಗೆ ಓಡಿಬಂದು ಸುಬ್ಬಮ್ಮಗೆ ಢಿಕ್ಕಿ ಹೊಡೆದು "ತಿಮ್ಮನಿಗೆ ದೆಯ್ಯ ಬಡಿದು ಹುಚ್ಚು ಹಿಡೀತಂತೆ! ಕುರಿ ಕಡಿಯಾ ಬದ್ಲು ಕುರಿ ಹಿಡ್ಕೊಂಡವನನ್ನೇ ಕಡಿದುಬಿಟ್ನಂತೆ!" ಎಂದು ಅಲ್ಲಿ ನಿಲ್ಲದೆ ಉಪ್ಪರಿಗೆಗೋಡಿದನು. ದೊಣ್ಣೆ ಹಿಡಿದುಕೊಂಡು ಓಡುತ್ತಿದ್ದ ಸೇರೆಗಾರರು "ಭೂತರಾಯನೇ ರಾಕ್ಷಸನಾಗಿ ಬಂದು ಕುರಿ ಕಚ್ಚಿಕೊಂಡು ಹಾರಿಹೋಗಿದ್ದಾನಂತೆ! ನೋಡೋರೆಲ್ಲಾ ಬನ್ನಿ" ಎಂದು ಗಟ್ಟಿಯಾಗಿ

ಕೂಗುತ್ತಿದ್ದರು. ವಾಸುವಿನಿಂದ ಭಯಂಕರ ವಾರ್ತೆಯನ್ನು ಕೇಳಿದ ಹೂವಯ್ಯ ರಾಮಯ್ಯ ಚಿನ್ನಯ್ಯರು ಉಪ್ಪರಿಗೆಯಿಂದಿಳಿದು ಬೊಬ್ಬೆ ಕೇಳಿಬಂದ ದಿಕ್ಕಿಗೆ ನಡೆದೋಡಿದರು. ಹತ್ತಾರು ಜನರಿಂದ ಹತ್ತಾರು ತೆರನಾದ ಸುದ್ದಿ ಕೇಳಿದ ಚಂದ್ರಯ್ಯಗೌಡರು ಕಂಗೆಟ್ಟು 'ಹೂವಯ್ಯಾ! ರಾಮೂ! ಬನ್ರೋ!' ಎಂದು ಕರೆಯುತ್ತ, ಭೂತದ ಬನದ ಕಡೆಗೆ ಕೈಲಾದಷ್ಟು ಮಟ್ಟಿಗೆ ವೇಗವಾಗಿ ನಡೆದರು. ಆ ದಿನದ ಹಬ್ಬಕ್ಕಾಗಿ ಬಂದು ನೆರೆದಿದ್ದ ಕಾಗೆಗಳಂತೂ "ಕಾ! ಕಾ! ಕಾ! ಕಾ! ಕಾ! ಕಾ!" ಎಂದು ಗದ್ದಲಕ್ಕೆ ಗದ್ದಲ ಪೇರಿಸುತ್ತಿದ್ದುವು.

ಅಂತೂ "ನಿಂಗನನ್ನು ಎಳೆದು ಕೆಡವಿ ಕುರಿ ಓಡಿಹೋಯಿತಂತೆ!" ಎಂಬ ಅವಸರದ ಮಾತು "ನಿಂಗನನ್ನು ಎಳೆದುಕೊಂಡು ಹುಲಿ ಓಡಿಹೋಯಿತಂತೆ!" ಎಂದಾಗಿ, ಕಡೆಗೆ ಚಿತ್ರ ವಿಚಿತ್ರ ವಿಕಟ ವಿಕಾರ ರೂಪಗಳನ್ನು ತಳೆದು ಅಷ್ಟೊಂದು ಗಲಭೆಗೆ ಕಾರಣವಾಯಿತು.

ನಾಯಿಗಳಿಂದಲೂ ಮನುಷ್ಯರಿಂದಲೂ ಕಿರಾತೀಯವಾಗಿ ಅಟ್ಟಲ್ಪಟ್ಟ ಆ ಹೋತ ಬೆದರಿ ದಣಿದು ಕಟ್ಟಕಡೆಗೆ, ಹೂವಯ್ಯ ಮೊದಲಾದವರು ಅಲ್ಲಿಗೆ ಹೋಗುವ ವೇಳೆಗೆ, ಮನೆಗೆ ತುಸು ದೂರದಲ್ಲಿದ್ದ ಕೆರೆಗೆ ಹಾರಿತ್ತು. ಜನರೆಲ್ಲರೂ ತಂಡ ತಂಡವಾಗಿ ಕೆರೆಯ ಸುತ್ತಲೂ ಕಾಕು ಕೇಕೆ ಹಾಕುತ್ತ, ಕಲ್ಲು ಬಡಿಗೆಗಳನ್ನೆಸೆಯುತ್ತ ಆಸನ್ನ ವಿಜಯಿಗಳಾಗಿ ನಿಂತಿದ್ದರು; ಅಥವಾ ಕುಣಿದಾಡುತ್ತಿದ್ದರು. ಹೋತದ ತಲೆಮಾತ್ರ ಕೆರೆಯ ನಡುವೆ ಈಜುತಿತ್ತು. ನಿಂತಿದ್ದವರ ಉತ್ತೇಜಕ ವಾಣಿಯಿಂದ ಪ್ರೇರಿತವಾಗಿ ಒಂದೆರಡು ನಾಯಿಗಳು ಈಜು ಬಿದ್ದುವು. ಹೋತ ಬೆದರಿ ಮತ್ತೆ ದಡವೇರಲೆಳಸಿತು. ಆದರೆ ದಡದಲ್ಲಿ ನಿಂತವರನ್ನು ನೋಡಿ ನೀರಿಗೆ ಮರಳಿತು. ಅಷ್ಟರಲ್ಲಿ ನಾಯಿಗಳೂ ಬಳಿಗೆ ಹೋಗಿ ಅದನ್ನು ತುಡುಕಿದುವು. ಹೋತವೂ ನಾಯಿಗಳೂ ಎರಡು ಮೂರುಸಾರಿ ಮುಳುಮುಳುಗೆದ್ದುವು. ದಡದಲ್ಲಿದ್ದವರು ಕೈಚಪ್ಪಾಳೆ ಹೊಡೆಯುತ್ತ ಜಯಧ್ವನಿಗೈಯುತ್ತಿದ್ದರು.

ಹೂವಯ್ಯ "ಏ ಪುಟ್ಟಣ್ಣಾ, ಈಜಿಹೋಗಿ ಅದನ್ನು ಹಿಡಿದುಕೊಂಡು ಬಾ" ಎಂದು ಕಠಿನವಾಗಿ ಕೂಗಿ ಹೇಳಿದನು.

ಸಾಹಸಪ್ರೇಮಿಯಾಗಿದ್ದ ಪುಟ್ಟಣ್ಣ ಅಷ್ಟು ಜನರು ನೋಡುತ್ತಿರುವಾಗಲೆ ಲಭಿಸಿದ್ದ ಸಂದರ್ಭವನ್ನು ಕಳೆದುಕೊಳ್ಳುತ್ತಾನೆಯೆ? ಅಂಗಿ ಬಿಚ್ಚಿ, ಪಂಚೆ ಸುತ್ತಿಕಟ್ಟಿ, ಕೆರೆಯೆಲ್ಲ ಅಲ್ಲೋಲಕಲ್ಲೋಲವಾಗುವಂತೆ ನೀರಿಗೆ ದುಡುಮ್ಮನೆ ಧುಮುಕಿದನು. ನೋಡುತ್ತಿದ್ದ ಹಾಗೆಯೆ, ಹೋರಾಡುತ್ತಿದ್ದ ಹೋತನನ್ನು ನಾಯಿಗಳಿಂದ ಬಿಡಿಸಿ, ಅದರ ಕೊರಳ ಹಗ್ಗವನ್ನು ಬಾಯಲ್ಲಿ ಕಚ್ಚಿಕೊಂಡು ನೀರಿನ ಹೊರಗೆ ಕೈಕಾಲು ಬಡಿದು ಹೋತಕ್ಕೆ ಗಾಬರಿಮಾಡದಂತೆ ಈಜಿ ದಡ

ಸೇರಿದನು. ಚೆನ್ನಾಗಿ ದಣಿದಿದ್ದ ಆ ಬಡ ಜಂತು ಒಂದಿನಿತೂ ಪ್ರತಿಭಟಿಸದೆ ಪುಟ್ಟಣ್ಣನ ಸಂಗಡವೆ ದಡವೇರಿತು. ಒಡನೆಯೆ ಜನರೆಲ್ಲ ಅಲ್ಲಿಗೆ ನುಗ್ಗಿದರು. ತಿಮ್ಮ, ಓಬಯ್ಯ, ನಿಂಗ ಮೂವರೂ ಒಬ್ಬರ ಮೇಲೊಬ್ಬರು ನುಗ್ಗಿಬಂದು ಕೊರಳ ಹಗ್ಗಕ್ಕೆ ಕೈಹಾಕಿದರು.

"ನಡೀರೊ ದೂರ!" ಎಂಬ ಹೂವಯ್ಯನ ಅಧಿಕಾರ ವಾಣಿಯನ್ನು ಕೇಳಿ ಮತ್ತೆ ಎಲ್ಲರೂ ಹಿಂಜರಿದರು. ಹೂವಯ್ಯ ಹೋತನ ಕೊರಳ ಹಗ್ಗವನ್ನು ಕೈಯಲ್ಲಿ ಹಿಡಿದು, ಮನೆಯ ಕಡೆಗೆ ಹೊರಟನು. ಹೋತವು ಕುರಿಮರಿಯಂತೆ ಅವನನ್ನು ಹಿಂಬಾಲಿಸಿತು.

"ಅಯ್ಯಾ, ಕೊಡಿ, ಹೊತ್ತಾಯ್ತು! ಭೂತಕ್ಕೆ ಆಯಾರಕೊಡ್ಬೇಕು" ಎಂದು ತಿಮ್ಮ ಹೇಳಲು, ಹೂವಯ್ಯ ನಿಂತು, ಹಿಂತಿರುಗಿ, ತನ್ನ ಹಿಂದೆ ಬರುತ್ತಿದ್ದ ಗುಂಪನ್ನು ಕಠೋರವಾಗಿ ನೋಡಿದನು. ಆ ದೃಷ್ಟಿಯಲ್ಲಿ ಭೀಷಣತೆ ಇದ್ದುದರಿಂದ ಯಾರೂ ಮಾತಾಡಲಿಲ್ಲ.

ಅಂತೂ ಆ ದಿನ ಆ ಹೋತ ಉಳಿದುಕೊಂಡಿತು. ಭೂತಕ್ಕೆ ಮೀಸಲಾದುದನ್ನು ಇಟ್ಟುಕೊಳ್ಳಬಾರದು ಎಂದು ಚಂದ್ರಯ್ಯಗೌಡರು ವಾದಿಸಿದರು. ಅನೇಕರು ಅನೇಕ ವಿಧವಾಗಿ ಹೇಳಿದರು. ಅನಿಷ್ಟವಾಗುತ್ತದೆ ಎಂದರು. ಹೂವಯ್ಯ "ಕರುಣೆ ಮೂಕಪ್ರಾಣಿಯ ಬಲಿದಾನಕ್ಕಿಂತಲೂ ಹೆಚ್ಚಿನ ಪೂಜೆ" ಎಂದು ಹೇಳಿ, ಯಾರ 'ಬುದ್ಧಿವಾದ'ವನ್ನೂ ಲಕ್ಷಿಸಲಿಲ್ಲ.

* * * *

ಸಾಯಂಕಾಲ ಸುಬ್ಬಮ್ಮ ಸೇರೆಗಾರರೊಡನೆ, ತಾನು ಕೊಟ್ಟಿದ್ದ ಹಣವನ್ನು ವಾಪಸು ಕೊಡುವಂತೆ ಓಬಯ್ಯನಿಗೆ ತಿಳಿಸಬೇಕೆಂದು ಗುಟ್ಟಾಗಿ ಹೇಳುತ್ತಿದ್ದಾಗ ಚಂದ್ರಯ್ಯಗೌಡರು ನೋಡಿದರು. ಅವರು ಸೇರೆಗಾರರನ್ನು ಕರೆದು ಅದೇನೆಂದು ಕೇಳಿದರು. ಸೇರೆಗಾರರು "ಏನೂ ಇಲ್ಲ. ಬಾಳೆಯೆಲೆ ಬೇಕಂತೆ!" ಎಂದು ಹೇಳಿ, ಕೆರೆಯ ಬಳಿ ಕುರಿಕೋಳಿಗಳ ಹಸುಗೆಯ ಕಾರ್ಯದಲ್ಲಿದ್ದ ಓಬಯ್ಯನೆಡೆಗೆ ಹೋದರು. ಗೌಡರು ಅದನ್ನು ನಂಬಲಾರದೆ ಸೇರೆಗಾರರನ್ನು ಮೆಲ್ಲನೆ ಹಿಂಬಾಲಿಸಿದರು.

ಅಲ್ಲಿ ಕಳ್ಳಂಗಡಿಯವನಿಗೂ ಓಬಯ್ಯನಿಗೂ ಮಾತಿನ ಜಗಳವಾಗುತ್ತಿತ್ತು. "ನಿಮ್ಮ ಲೋಟು ನೀವು ತಗೊಳ್ಳಿ. ಅದು ನಡೆಯೂದಿಲ್ಲಂತೆ!" ಎಂದು ಹೇಳುತ್ತಿದ್ದ ಕಳ್ಳಂಗಡಿಯವನು ಎರಡು ಕಾಗದದ ತುಂಡುಗಳನ್ನು ಓಬಯ್ಯನ ಕಡೆಗೆ ಚಾಚಿದನು.

ಓಬಯ್ಯ "ಅದೊಂದೂ ನನಗೆ ಗೊತ್ತಿಲ್ಲ. ನಾನು ಕೊಟ್ಟಾಗ ಸರಿಯಾಗಿತ್ತು.

ಅಂಥಾ ಖೋಟಾ ಲೋಟಾಗಿದ್ದರೆ ಆವಾಗ಼್ಲೆ ವಾಪಾಸ್ ಮಾಡ್ಬೇಕಾಗಿತ್ತು! ಇಷ್ಟು ದಿನ ಇಟ್ಟುಕೊಂಡು ಈಗ ಕೊಟ್ರೆ ಯಾರು ತಗೊಳ್ತಾರೆ?" ಎಂದು ಕೆಂಪು ಮಾಂಸದ ಕುರಿಯ ಕಾಲೊಂದನ್ನು ಬೆಂಕಿಯಲ್ಲಿ ಬಾಡಿಸುತ್ತಿದ್ದನು.

"ನಾನೇನು ನಿಮ್ಮ ಲೋಟು ಬದ್ಲಾಯಿಸ್ಲಿಲ್ಲ!"

"ಬದ್ಲಾಯಿಸೀಯೋ ಬಿಟ್ಟೀಯೋ ಯಾರೀಗೆ ಗೊತ್ತು?"

"ಹಾಂಗಾರೆ ನೀವು ಖಂಡಿತ ತಗೊಳ್ಳೋದಿಲ್ಲೇನು?"

"ನನಗೇನು ಬುದ್ಧಿ ಹೆಚ್ಚಾಗಿ ತಗೊಳ್ಲೇನು?"

"ಹಾಂಗಾದ್ರೆ ಗೌಡ್ರ ಹತ್ರಕ್ಕೆ ಹೋಗ್ತೀನಿ. ಅವರೇ ಇಚಾರಣೆ ಮಾಡ್ಲಿ!"

"ಹೋಗು! ನಾನೇನು ಬ್ಯಾಡ ಅಂತೀನೇನು?"

ಕಳ್ಳಂಗಡಿಯವನು ಇದ್ದಕ್ಕಿದ್ದಹಾಗೆ ರೇಗಿ "ಒಬ್ಬ ತಂದೆಗೆ ಹುಟ್ಟಿದವರಾಗಿದ್ರೆ ಸುಳ್ಳು ಹೇಳ್ತಿರ್ಲಿಲ್ಲ" ಎಂದನು.

"ಏನಂದೆ, ಬೋಳೀಮಗ್ನೆ" ಎಂದ ಓಬಯ್ಯ ಕೈಯಲ್ಲಿದ್ದ ಹಸಿಮಾಂಸದ ಕುರಿಯ ತೊಡೆಯಿಂದಲೆ ಕಳ್ಳಂಗಡಿಯವನ ಮುಖಕ್ಕೆ ರಪ್ಪನೆ ಹೊಡೆದನು.

ಅಲ್ಲಿದ್ದವರೆಲ್ಲರೂ ಸೇರಿ ಇಬ್ಬರಿಗೂ ನಡುವೆ ಬಂದು ಕೈ ಕೈ ಮಿಲಾಯಿಸು ವುದನ್ನು ನಿಲ್ಲಿಸುತ್ತಿದ್ದರು. ಅಷ್ಟರಲ್ಲಿ ಸೇರೆಗಾರರೂ ಅವರ ಹಿಂದೆ ಚಂದ್ರಯ್ಯ ಗೌಡರೂ ಅಲ್ಲಿಗೆ ಬಂದರು. ವಿಚಾರಣೆಯಾಯಿತು. ಓಬಯ್ಯ ತನಗೆ ಕೊಡ ಬೇಕಾಗಿದ್ದ ಐವತ್ತುಮೂರು ರೂಪಾಯಿ ಎಂಟಾಣೆ ಮೂರು ಕಾಸಿಗೆ ಒಂದು ನೂರು ರೂಪಾಯಿನ ನೋಟು ಕೊಟ್ಟಿದ್ದಾನೆಂದೂ, ಆ ನೋಟನ್ನು ತಾನು ಕೊಪ್ಪಕ್ಕೆ ಮುರಿಸಲು ತೆಗೆದುಕೊಂಡುಹೋಗಿದ್ದಾಗ 'ಚಾಪಿ' (ಷಾಪ್) ನವರು "ನಡೆಯೂದಿಲ್ಲ" ಎಂದು ಹೇಳಿದರೆಂದೂ, ಈಗ ವಾಪಸು ಕೊಟ್ಟರೆ ತೆಗೆದು ಕೊಳ್ಳುವುದಿಲ್ಲವೆಂದೂ ಕಳ್ಳಂಗಡಿಯವನು ನಡೆದ ಸಂಗತಿಯೆಲ್ಲವನ್ನೂ ಹೇಳಿ ತಾನು ಹಿಡಿದಿದ್ದ ನೋಟಿನ ತುಂಡುಗಳನ್ನು ಗೌಡರ ವಶಕ್ಕೆ ಕೊಟ್ಟನು.

ಅವುಗಳನ್ನು ನೋಡಿದೊಡನೆಯೆ ಗೌಡರು "ಎಲ್ಲಿ ಸಿಕ್ಕಿತೋ ಈ ನೋಟು ನಿನಗೆ?" ಎಂದು ಓಬಯ್ಯನ ಕಡೆ ನೋಡಿದರು.

ತಾನು ಒಂದು ರಾತ್ರಿ ರಸ್ತೆಯಲ್ಲಿ ಬರುತ್ತಿದ್ದಾಗ ಭೂತರಾಯ ಕಾಣಿಸಿ ಕೊಂಡನೆಂದೂ, ತಾನು ಮೂರ್ಛೆಹೋದೆನೆಂದೂ, ಎಚ್ಚತ್ತು ಜೇಬಿಗೆ ಕೈಹಾಕಿ ಕೊಂಡಾಗ ಅದರಲ್ಲಿ ನೋಟಿನ ತುಂಡುಗಳಿದ್ದುವೆಂದೂ ಸ್ವಲ್ಪವೂ ಅಪ್ರತಿಭ ನಾಗದೆ ಓಬಯ್ಯ ಹೇಳಿಬಿಟ್ಟನು.

ಚಂದ್ರಯ್ಯಗೌಡರು ನೇರವಾಗಿ ತಮ್ಮ ಕೋಣೆಗೆ ಹೋಗಿ ಒಂದು ಕೋಟಿನ ಜೇಬಿಗೆ ಕೈಹಾಕಿದರು. ಅಲ್ಲಿ ನೋಟಿನ ತುಂಡುಗಳಿರಲಿಲ್ಲ. ಒಂದು ಕೈಬುಕ್ಕನ್ನು

ಬಿಚ್ಚಿ ನೋಡುತ್ತಾರೆ: ತಮ್ಮ ಕೈಲಿದ್ದ ನೋಟಿನ ತುಂಡುಗಳ ನಂಬರುಗಳನ್ನೇ ಅಲ್ಲಿಯೂ ಬರೆದಿದ್ದಾರೆ!

ಹೆಂಡತಿಯನ್ನು ಕರೆದು ವಿಚಾರಿಸಿದರು. ಸುಬ್ಬಮ್ಮ ಅಳುತ್ತಾ ತನಗೇನೊಂದೂ ಗೊತ್ತಿಲ್ಲ ಎಂದಳು. ಮಗಳು ಪುಟ್ಟಮ್ಮನನ್ನು ಕೇಳಿದರು; ವಾಸುವನ್ನೂ ಕೇಳಿದರು. ಎಲ್ಲರೂ ತಮಗೆ ಗೊತ್ತಿಲ್ಲ, ತಮಗೆ ಗೊತ್ತಿಲ್ಲ, ಎಂದು ಬಿಟ್ಟರು. ಹಾಗಾದರೆ, ತಾವು ಮಲಗುವ ಕೋಣೆಗೆ ಹೊರಗಿನವರಾರು ಬರಬೇಕು? ಕೋಟಿನಲ್ಲಿ ನೋಟಿದ್ದುದು ಓಬಯ್ಯನಿಗೆ ತಿಳಿಯುವುದಾದರೂ ಹೇಗೆ? ತಿಳಿದರೂ ಅವನು ಕದಿಯುವುದಾದರೂ ಹೇಗೆ? ಗೌಡರ ಗುಮಾನಿ ನಾಗಮ್ಮನವರ ಕಡೆ ತಿರುಗಿತು. ಆದರೆ ಅವರನ್ನು ಕೇಳುವುದೆಂತು? ಹೂವಯ್ಯ ಬೇರೆ ಮನೆಯಲ್ಲಿದ್ದಾನೆ!

ದೆಯ್ಯದ ಹರಕೆಯ ದಿನ ನೆರೆದಿದ್ದ ನಂಟರಿಷ್ಟರ ಮುಂದೆ ಗಲಾಟೆ ಮಾಡಬಾರದೆಂದು ಸುಮ್ಮನಾದರು. ಕಳ್ಳಂಗಡಿಯವನಿಗೆ ಇನ್ನೊಂದು ದಿನ ವಿಚಾರಣೆ ಮಾಡುತ್ತೇನೆಂದು ಸಮಾಧಾನ ಹೇಳಿದರು.

## ೩೧

## ಸೀತೆಯ ರೋಗದ ರಹಸ್ಯ

ಸಂಜೆಯಾಗುತ್ತಿದೆ. ನೆತ್ತರಿನ ಬಣ್ಣದ ಕೆಂಪು ಕಿರಣದ ಸೂರ್ಯಬಿಂಬ ಪಶ್ಚಿಮ ಪರ್ವತದ ಅರಣ್ಯದ ಹಿಂಗಡೆ ಪ್ರಜ್ವಲಿಸುತ್ತ ಮೆಲ್ಲಮೆಲ್ಲನೆ ಮುಳುಗುತ್ತಿದೆ. ನೋಡೆ ನೋಡೆ ಕಾಲುಭಾಗ ಮರೆಯಾಯ್ತು; ಅರ್ಧ ಮರೆಯಾಯ್ತು; ಪೂರ್ಣವೂ ಮರೆಯಾಯ್ತು; ಸಂಧ್ಯಾಕಾಂತಿ ಕಾಡು ಬೆಟ್ಟಗಳ ಮೇಲೆ ಕೆಂಗಾವಿಯೆರಚಿತ್ತು.

"ಇದಾವ ಪ್ರದೇಶ? ಇದಾವ ಬೆಟ್ಟ? ಇದಾವ ಕಾಡು? ನಾನೆಲ್ಲಿದ್ದೇನೆ? ಎಲ್ಲಿಗಾಗಿ ಹೊರಟಿದ್ದೇನೆ? ಏಕೆ? ಇದೇನಿದು ನನ್ನ ಸಂಗಡ ಯಾರೂ ಇಲ್ಲವಲ್ಲ!"

ಸೀತೆಗೆ ಯಾವುದೂ ಬಗೆಹರಿಯಲಿಲ್ಲ. ಭಯದೃಷ್ಟಿಯನ್ನು ಬೀರಿ ನೋಡುತ್ತಾಳೆ: ಇನ್ನೇನು ಕತ್ತಲೆಯೂ ನುಣ್ಣನುಣ್ಣನೆ ಮುತ್ತಿಬರುತ್ತಿದೆ! ಹೃದಯ ಹೊಡೆದುಕೊಳ್ಳಲಾರಂಭಿಸಿತು. ಸೀತೆ ತುಸು ದೂರ ಬಿರುಬಿರನೆ ಓಡಿ ನೋಡಿದಳು. ಯಾರೂ ಕಾಣಿಸಲಿಲ್ಲ! ಏನೊಂದೂ ಸದ್ದಿಲ್ಲ. ಭಯಾತಿಶಯದಿಂದ ನಿಡುಸುಯ್ಯತೊಡಗಿದಳು; ಕಣ್ಣೀರೂ ಇಳಿದುವು. ಯಾವ ಊರೋ?

ಯಾವ ಹಾದಿಯೋ? ಎಲ್ಲಿಗೆ ಹೋಗಬೇಕೋ? ಏನೊಂದೂ ಅವಳಿಗೆ ಗೊತ್ತಾಗಲಿಲ್ಲ. ಅಯ್ಯೋ, ನಾನೇಕೆ ಇಲ್ಲಿಗೆ ಬಂದೆ? ನನ್ನನ್ನಿಲ್ಲಿಗೆ ಕರೆದು ತಂದವರಾರು? ಅಪ್ಪಯ್ಯನೆಲ್ಲಿ? ಅವ್ವನೆಲ್ಲಿ? ಅಣ್ಣಯ್ಯನೆಲ್ಲಿ? ಲಕ್ಷ್ಮಿಯೂ ಕಾಣಿಸುವುದಿಲ್ಲವಲ್ಲ! ಇದೇನಿದು? ಇದ್ದಕ್ಕಿದ್ದಹಾಗೆ ದಿಕ್ಕಿಲ್ಲದ ಅನಾಥೆಯಂತೆ ಕಾಡುಪಾಲಾಗಿರುವೆನಲ್ಲಾ!

"ಅಣ್ಣಯ್ಯಾ!" ಎಂದು ಕರೆದಳು!

ಯಾರೂ ಓ ಕೊಳ್ಳಲಿಲ್ಲ. ಸೀತೆ ಅಳುತ್ತ ತಂದೆತಾಯಿಗಳನ್ನು ಕರೆದಳು. ಉತ್ತರ ಬರದಿರಲು "ಅಯ್ಯೋ ನನ್ನನ್ನೇಕೆ ಕಾಡುಪಾಲು ಮಾಡಿದಿರಿ? ನಾನೇನು ತಪ್ಪು ಮಾಡಿದೆ? ನನ್ನನ್ನು ಕ್ಷಮಿಸಿ! ನೀವು ಹೇಳಿದ ಹಾಗೆ ಕೇಳುತ್ತೇನೆ! ಇನ್ನುಮೇಲೆ ತಪ್ಪುಮಾಡುವುದಿಲ್ಲ" ಎಂದು ರೋದಿಸಿದಳು. ಪ್ರತ್ಯುತ್ತರವಾಗಿ ಕತ್ತಲೆ ಹೆಚ್ಚಿತು! ಸೀತೆ ಕಿವಿಗೊಟ್ಟಳು: ಹಠಾತ್ತಾಗಿ ಭಯಂಕರವಾದ ಗರ್ಜನೆಯೂ ಅದರ ಜೊತೆಗೆ ಆರ್ತನಾದವೂ ಕೇಳಿಬಂದುವು! ಆ ಗರ್ಜನೆಗೆ ಭೂಮಿ ಕಂಪಿಸಿದಂತಾಯ್ತು. ಸೀತೆ ಕಂಗಾಲಾಗಿ ದಿಕ್ಕುದಿಕ್ಕಿಗೆ ನೋಡತೊಡಗಿದಳು. ಯಾರನ್ನಾದರೂ ಕೂಗುವುದಕ್ಕೂ ಅವಳಿಂದಾಗಲಿಲ್ಲ. ಅಷ್ಟು ಭಯಂಕರವಾಗಿತ್ತು ಆ ಗರ್ಜನೆ! ಅಷ್ಟು ಕರುಣಾಕರವಾಗಿತ್ತು ಆ ಆರ್ತನಾದ!

ನಿಂತಿದ್ದ ಹಾಗೆಯೆ ಗರ್ಜನೆಯೂ ಆರ್ತನಾದವೂ ಸಮೀಪವಾದುವು. ಸೀತೆಯ ಹೃದಯ ಬಾಯಿಗೆ ಬಂದಂತಾಗಿ ನೋಡುತ್ತಾಳೆ: ಭೀಷಣವಾದ ಭೀಮಾಕಾರದ ಹೆಬ್ಬುಲಿಯೊಂದು ಮನುಷ್ಯನೊಬ್ಬನನ್ನು ಅರೆಯಟ್ಟಿ ಬರುತ್ತಿದೆ. ಹೆಬ್ಬುಲಿ ಆರ್ಭಟಿಸುತ್ತಿದೆ, ಅಟ್ಟುತ್ತಿದೆ. ಮನುಷ್ಯ ನಿಸ್ಸಹಾಯನಾಗಿ ಕೂಗುತ್ತ ಓಡುತ್ತಿದ್ದಾನೆ. ಸೀತೆ ಕಲ್ಲಾಗಿ ನಿಂತು ರೆಪ್ಪೆಹಾಕದೆ ನೋಡುತ್ತಿದ್ದಾಳೆ: ಹಾ! ಓಡುತ್ತಿರುವವನು ಸೀತೆಮನೆ ಸಿಂಗಪ್ಪಗೌಡರ ಮಗ ಕೃಷ್ಣಪ್ಪನಲ್ಲವೆ! ಅಯ್ಯೋ, ಆಗಿಹೋಯಿತು! ಇನ್ನೇನು ಹುಲಿ ಹಿಡಿದು ಬಿಡುತ್ತದೆ! ಇಲ್ಲ! ಕೃಷ್ಣಪ್ಪ ಪಕ್ಕಕ್ಕೆ ಬಳುಕಿ ನೆಗೆದು ತಪ್ಪಿಸಿಕೊಂಡು ಓಡುತ್ತಿದ್ದಾನೆ! ಅಯ್ಯಯ್ಯೋ ಸೀತೆಯ ಕಡೆಗೇ ಬರುತ್ತಿದ್ದಾನೆ! ಮತ್ತೆ ನೋಡಿದಳು ಸೀತೆ; ಅಯ್ಯೋ, ಇದೇನಿದು? ಓಡುತ್ತಿರುವವನು ಕೃಷ್ಣಪ್ಪನಲ್ಲ! ಮತ್ತಾರು? ಕಾನೂರು ಚಂದ್ರಯ್ಯ ಗೌಡರ ಮಗ ರಾಮಯ್ಯ! ಸೀತೆ ಇದ್ದಕ್ಕಿದ್ದ ಹಾಗೆ "ರಾಮಯ್ಯ ಬಾವ!" ಎಂದು ಕೂಗಿಬಿಟ್ಟಳು.

ಅವಳ ಕೂಗಿಗೋ ಏನೋ ಎನ್ನುವಂತೆ ರಾಮಯ್ಯ ನೆಟ್ಟಗೆ ಅವಳಿದ್ದ ಕಡೆಗೇ ಧಾವಿಸಿದನು: ಹೆಬ್ಬುಲಿಯಂತೂ ಬಣ್ಣಬಣ್ಣದ ಸಿಡಿಲಿನಂತೆ ನುಗ್ಗಿಬರುತ್ತಿದೆ!

ಸೀತೆ ಓಡಲೆಳಸಿದಳು. ಆಗಲಿಲ್ಲ! ಮತ್ತೆ ನೋಡಿದಳು: ಹುಲಿ ನೆಗೆದು ರಾಮಯ್ಯನ ಮೇಲೆ ಹಾರಿತು!

ಆದರಿದೇನು? ರಾಮಯ್ಯನೆಲ್ಲಿ ಮಾಯವಾದನು? ಯಾರೂ ಇಲ್ಲ! ಹುಲಿ ಮಾತ್ರ ಸೀತೆಯ ಕಡೆಗೆ ಬಾಯ್ದೆರೆದು ಕೋರೆದಾಡೆಗಳನ್ನು ತೋರಿ ಗರ್ಜಿಸುತ್ತ ಭಯಂಕರವಾಗಿ ಬರುತ್ತಿದೆ! ಸೀತೆ ತನ್ನ ಇಚ್ಛಾಶಕ್ತಿ ಸಾಹಸಗಳ ನ್ನೆಲ್ಲ ವೆಚ್ಚಮಾಡಿ ಮತ್ತೆ ಓಡಲೆಳಸಿದಳು. ಕಾಲು ಕೀಳಲಾಗಲಿಲ್ಲ! ಹುಲಿ ಬಂದಿತು! ಬಂದಿತು! ಬಂದಿತು! 'ಅಯ್ಯೋ, ಅವ್ವಾ, ಹುಲಿ! ಹುಲಿ!' ಎಂದು ಕೂಗಿಕೊಂಡಳು ಸೀತೆ! ಇದೇನಿದು! ಹುಲಿ ಮಾಯವಾಗಿ, ಅದಕ್ಕೆ ಬದಲಾಗಿ ಹೂವಯ್ಯ ನಗುತ್ತ "ಹೆದರಬೇಡ, ಸೀತೆ! ನಾನು! ಯಾಕೆ ಕೂಗಿಕೊಳ್ತೀಯಾ?" ಎಂದು ಬರುತ್ತಿದ್ದಾನೆ!

ಸೀತೆ ಥಟ್ಟನೆ ಎಚ್ಚರವಾಗಿ ಕಣ್ಣು ತೆರೆದಳು. ಹಾಸಗೆಯ ಪಕ್ಕದಲ್ಲಿ ಕುಳಿತು ಗೌರಮ್ಮನವರು ಮಗಳನ್ನು ಮುಟ್ಟಿ ಸಂತೈಸುತ್ತಾ "ಸೀತೆ! ಸೀತೆ! ಹೆದರಿದೆ ಯೇನೆ? ಯಾಕೆ ಕೂಗಿಕೊಂಡೆ?" ಎನ್ನುತ್ತಿದ್ದರು. ಸೀತೆಯ ಕಣ್ಣು ಬೆದರಿತ್ತು; ಮೈ ಬೆವರಿತ್ತು; ಉಸಿರು ವೇಗವಾಗಿತ್ತು; ಮೈ ಬಿಸಿಯನ್ನು ನೋಡಿದರೆ ಜ್ವರವೂ ಬಂದಂತಿತ್ತು!

ಮನುಷ್ಯನ ಜಾಗ್ರದವಸ್ಥೆಯ ಜೀವನ ಮಹಾದ್ಭುತವಾಗಿದೆ. ಆದರೆ ಸ್ವಪ್ನ ಜಗತ್ತು ಅದ್ಭುತತರವಾದುದು. ಕೋಟ್ಯನುಕೋಟಿ ಮಾನವರು ಪ್ರತಿ ದಿವಾ ರಾತ್ರಿಗಳಲ್ಲಿಯೂ ನಿದ್ದೆಮಾಡುವಾಗಲೆಲ್ಲ ಗಣನೆಯಿಲ್ಲದಷ್ಟು ಕನಸುಗಳನ್ನು ಕಾಣುತ್ತಾರೆ. ಅವುಗಳಾದರೂ ಎಷ್ಟು ಚಿತ್ರವಿಚಿತ್ರವಾಗಿರುತ್ತವೆ? ಕಲ್ಪನೆಗೂ ಅಸಾಧ್ಯವಾಗುವಂತಹ ಸನ್ನಿವೇಶಗಳೂ ಚಿತ್ರಗಳೂ ಘಟನೆಗಳೂ ಸ್ವಪ್ನರಾಜ್ಯ ದಲ್ಲಿ ನಿರಂಕುಶವಾಗಿ ನಿಯಮಾತೀತವಾಗಿ ಅಥವಾ ನಿಯಮ ವಿರೋಧವಾಗಿ ಸಾಗಿಹೋಗುತ್ತವೆ. ಎಲ್ಲ ದೇಶದ ಕವಿಗಳೂ ತಮ್ಮ ತಮ್ಮ ಕಾವ್ಯ ಪುರಾಣ ಕಟ್ಟುಕಥೆಗಳಲ್ಲಿ ಚಿತ್ರಿಸಿರುವ ಯಕ್ಷ, ರಾಕ್ಷಸ, ದೇವತೆ, ಕಿನ್ನರ, ಪಿಶಾಚಿ, ಭೂತ, ಸ್ವರ್ಗ, ನರಕ ಮೊದಲಾದ ವಿಷಯಗಳಿಗೆ ಸ್ವಪ್ನವೇ ಬಹುಮಟ್ಟಿಗೆ ಕಾರಣ ವಾಗಿದೆ ಎಂದರೆ ತಪ್ಪಾಗುವುದಿಲ್ಲ.

ಜಾಗ್ರಜ್ಜೀವನದ ಬಯಕೆಗಳೂ ಭಯಗಳೂ ನಿದ್ದೆಯ ಲೋಕದಲ್ಲಿ ಕನಸುಗಳ ರೀತಿಯಲ್ಲಿ ಜರುಗಿ ಕೈಗೂಡುತ್ತವೆ ಎಂದು ಮನಶ್ಶಾಸ್ತ್ರಜ್ಞರ ಅಭಿಪ್ರಾಯ ವಿದೆ. ವಿರಹಿ ಪ್ರೇಯಸಿಯನ್ನೂ, ದರಿದ್ರನು ಧನವನ್ನೂ, ಹೊಟ್ಟೆಗಿಲ್ಲದವನು ಭಕ್ಷ್ಯಭೋಜ್ಯಗಳ ರಾಶಿಯನ್ನೂ ಸ್ವಪ್ನದಲ್ಲಿ ಕಂಡು ಕುಣಿದಾಡಬಹುದು. ತಿರುಕನ ಸ್ವಪ್ನವೂ ಅಂತಹುದೆ ಆಗಿದೆ. ಆದರೂ ಎಲ್ಲ ಕನಸುಗಳನ್ನೂ ಅಭೀಷ್ಟ

ಸಾಫಲ್ಯದ ಚಿತ್ರಗಳೆಂದು ಸಾಧಿಸಲಾಗುವುದಿಲ್ಲ. ಕೆಲವು ಹಿಂದಾದುದನ್ನಾಗಲಿ ಮುಂದಾಗುವುದನ್ನಾಗಲಿ ಸೂಚಿಸಬಹುದು. ಕೆಲವು ಕನಸುಗಳಂತೂ ರೂಪಕಗಳಾಗಿರುತ್ತವೆ. ಪರೀಕ್ಷೆಯಲ್ಲಿ ತೇರ್ಗಡೆ ಹೊಂದುತ್ತೇನೆಯೊ ಇಲ್ಲವೊ ಎಂದು ಭಯಗ್ರಸ್ತನಾದ ವಿದ್ಯಾರ್ಥಿ ಕನಸಿನಲ್ಲಿ ಪರೀಕ್ಷಾ ಮಂದಿರಕ್ಕೆ ಬಹಳ ತಡವಾಗಿ ಹೋದಂತೆ ಕನಸು ಕಾಣಬಹುದು; ಅಥವಾ ಒಂದು ಪ್ರಶ್ನೆಗೆ ಉತ್ತರ ಬರೆಯುವಷ್ಟರಲ್ಲಿಯೆ ಘಂಟೆ ಹೊಡೆದಂತೆ ಕನಸಾಗಬಹುದು; ಅಥವಾ ತಾನೊಂದು ಕಡಿದಾದ ಬೆಟ್ಟವನ್ನು ಬಹಳ ಶ್ರಮದಿಂದ ಏರುತ್ತಿರುವವನಂತೆಯೂ ಅರ್ಧ ಏರುವಷ್ಟರಲ್ಲಿ ಕಾಲು ತಪ್ಪಿ ತಪ್ಪಲಿನಲ್ಲಿರುವ ಸರೋವರಕ್ಕೆ ಬೀಳುತ್ತಿರುವಂತೆಯೂ ಕನಸು ಕಾಣಬಹುದು. ಹಾಗೆಯೆ ನಮಗೆ ಒಲ್ಲದವನು ಮಹಾಕಷ್ಟಕ್ಕೀಡಾದಂತೆಯೊ ಅಥವಾ ನಾಶವಾದಂತೆಯೊ ಕನಸು ಬೀಳಬಹುದು. ಅಷ್ಟೇ ಅಲ್ಲದೆ, ದೈಹಿಕ ವ್ಯಾಪಾರಗಳಿಂದಲೂ ಅದ್ಭುತ ಸ್ವಪ್ನಗಳು ಪ್ರೇರಿತವಾಗುತ್ತವೆ. ಎದೆಯ ಮೇಲೆ ಕೈಯಿಟ್ಟುಕೊಂಡು ಮಲಗಿದವನಿಗೆ ಯಾವುದೋ ಒಂದು ಪಿಶಾಚ ತನ್ನ ಎದೆಯ ಮೇಲೆ ಕೂತು, ಮೂಗು, ಬಾಯಿಗಳನ್ನು ಒತ್ತಿ ಹಿಡಿದಂತೆ ಕನಸಾಗಬಹುದು. ಹೊದೆದುಕೊಂಡ ಶಾಲಿನ ಕರೆ ಕುತ್ತಿಗೆಯ ಮೇಲೆ ಬಿದ್ದವನಿಗೆ ತನ್ನನ್ನು ಯಾರೋ ಗಲ್ಲಿಗೇರಿಸುವಂತೆ ಕನಸಾಗಬಹುದು.

ಅಂತೂ ಸೀತೆಯ ಕನಸನ್ನು ಆಕೆಯ ಬಯಕೆ ಬೆದರಿಕೆಗಳನ್ನು ಸೂಚಿಸುವ ಒಂದು ರೂಪಕಾಲಂಕಾರವೆಂದು ಇಟ್ಟುಕೊಂಡರೆ, ಆಕೆಯ ಚಿತ್ತದಲ್ಲಿ ಗುಪ್ತವಾಗಿ ನಡೆಯುತ್ತಿದ್ದ ಮನೋವ್ಯಾಪಾರಗಳನ್ನು ಸ್ವಲ್ಪಮಟ್ಟಿಗಾದರೂ ಊಹಿಸಬಹುದು. ಒಂದು ವಿಷಯವಂತೂ ಚೆನ್ನಾಗಿ ಸ್ಪಷ್ಟವಾಗುತ್ತದೆ. ಆಕೆಗೆ ಕೃಷ್ಣಪ್ಪನ ಪರವಾಗಿದ್ದ ಭಾವನೆ ಮತ್ತು ಹೂವಯ್ಯನಲ್ಲಿದ್ದ ನೆಚ್ಚು!

ಸ್ವಪ್ನಕ್ಕೂ ಉನ್ಮಾದಕ್ಕೂ ಹೆಚ್ಚೇನೂ ವ್ಯತ್ಯಾಸವಿಲ್ಲ. ಅವೆರಡಕ್ಕೂ ಆಧಾರ ಸಾಮಾನ್ಯವಾಗಿದೆ. ಜೀವನದಲ್ಲಿ ಮಹಾ ದರಿದ್ರನಾಗಿರುವವನು ಕನಸಿನಲ್ಲಿ ಶ್ರೀಮಂತನಾಗಿ ಸುಖಪಡುತ್ತಾನೆ. ಅವನು ಎಚ್ಚತ್ತಮೇಲೆ ಅದನ್ನು ಕನಸೆಂದು ತಿಳಿದು ಮತ್ತೆ ದರಿದ್ರನಂತೆಯೆ ವರ್ತಿಸುತ್ತಾನೆ. ಆದರೆ ಹಾಗೆ ವರ್ತಿಸುವುದರ ಬದಲು ಎಚ್ಚತ್ತಮೇಲೂ ಶ್ರೀಮಂತನಂತೆ ನಡೆದರೆ ಅವನನ್ನು ಹುಚ್ಚರ ಆಸ್ಪತ್ರೆಗೆ ಸಾಗಿಸುತ್ತಾರೆ. ಅಂಥವನು ತಾನು ನಿಜವಾಗಿಯೂ ಶ್ರೀಮಂತನಾಗಿದ್ದೇನೆ, ಆಸ್ಪತ್ರೆ ತನ್ನ ಸ್ವಂತ ಮನೆ, ಡಾಕ್ಟರು ನರ್ಸುಗಳೆಲ್ಲರೂ ತನ್ನ ಪರಿವಾರದವರೆಂದೂ ಅವರು ಮಾಡುವ ಕಾರ್ಯಗಳೆಲ್ಲ ತನ್ನ ಪರಿಚರ್ಯೆ ಎಂದೂ ಭಾವಿಸಬಹುದು. ಅಥವಾ ಎಲ್ಲರೂ ಸೇರಿ ತನ್ನ ಸಂಪತ್ತನ್ನೆಲ್ಲ ಅಪಹರಿಸಿ, ತನ್ನನ್ನು ಮೋಸಮಾಡಲೋಸ್ಕರ ಈ ಹೂಟ ಹೂಡಿದ್ದಾರೆಂದು ವ್ಯಾಖ್ಯಾನ

ಮಾಡಿ ಭ್ರಾಂತಿಯಿಂದ ವರ್ತಿಸಬಹುದು. ಅಂತೂ ಶಾಶ್ವತವಾದ ಅಸಾಮಂಜಸ್ಯವೆ ಹುಚ್ಚಿಗೆ ಕಾರಣವಾಗುತ್ತದೆ. ಹುಚ್ಚಿನಲ್ಲಿ ಅನೇಕ ತೆರವಿರುತ್ತದೆ. ಕೈಗೂಡದ ಬಯಕೆ ಬೆದರಿಕೆಗಳೂ ಸಮಾಜಮರ್ಯಾದೆಗಾಗಿ ವ್ಯಕ್ತಿ ಮನಸ್ಸಿನೊಳಗೆ ಅದುಮಿದ ಬಯಕೆ ಬೆದರಿಕೆಗಳೂ ಉಲ್ಬಣಾವಸ್ಥೆಯನ್ನು ಮುಟ್ಟಿದರೆ ಹುಚ್ಚಾಗಿ ಪರಿಣಮಿಸುತ್ತವೆ. ಅವುಗಳು ತಾಳುವ ವೇಷಗಳನ್ನು ಲೆಕ್ಕ ಮಾಡುವುದಕ್ಕೂ ಸಾಧ್ಯವಿಲ್ಲ. ಸಾಧಾರಣ ತಲೆನೋವಿನಿಂದ ಹಿಡಿದು ಮೂರ್ಛೆರೋಗ, ಮೈ ಮೇಲೆ ಬರುವುದು, ದೆವ್ವಹಿಡಿಯುವುದು, ನಿರಂತರ ಭ್ರಾಂತಿ—ಇತ್ಯಾದಿಗಳಾಗಿ, ಆತ್ಮಹತ್ಯದವರೆಗೂ ಹೋಗಬಹುದು.

ಪ್ರೇಮಭಂಗವು ಅನೇಕಸಾರಿ ತೆರತೆರನಾದ ಉನ್ಮಾದಗಳಲ್ಲಿ ಪರ್ಯವಸಾನವಾಗುತ್ತದೆ. ಅಥವಾ ರೋಗಗಳಲ್ಲಿಯೂ ಕೊನೆಗಾಣಬಹುದು. ತರುಣನೊಬ್ಬನಲ್ಲಿ ನೈಸರ್ಗಿಕವಾಗಿ ಪ್ರೇಮವಿಟ್ಟಿರುವ ಹುಡುಗಿಯನ್ನು ಆಕೆಯ ತಂದೆ ತಾಯಿಗಳು ಹಣಕ್ಕಾಗಿಯೋ ಕುಲಕ್ಕಾಗಿಯೋ ಸಮಾಜ ಮರ್ಯಾದೆಗಾಗಿಯೋ ಅಥವಾ ಮಾತು ಕೊಟ್ಟಿದ್ದಕ್ಕಾಗಿಯೋ ಬೇರೊಬ್ಬನಿಗೆ ವಿವಾಹ ಮಾಡಿದರೆ ಆಕೆಯಲ್ಲಿ ಉತ್ಪನ್ನವಾಗುವ ಜುಗುಪ್ಸೆ ದುಃಖ ನಿರಾಶೆಗಳು ನಾನಾ ವೇಷಗಳನ್ನು ತಾಳಿ ತಮ್ಮ ಇಚ್ಛೆಯನ್ನು ನೆರವೇರಿಸಿಕೊಳ್ಳಬಹುದು. ಆಕೆಯ ನಿಜವಾದ ಪ್ರೇಮ ಪ್ರೀತಿಸಿದವನಲ್ಲಿ ಇರುತ್ತದೆಯೇ ಹೊರತು ಮದುವೆಮಾಡಿಕೊಂಡವನಲ್ಲಿ ಇರುವುದಿಲ್ಲ. ಅಂತಹ ಸಮಯಗಳಲ್ಲಿ ಹುಡುಗಿಯ ಸುಪ್ತಚಿತ್ತ ಮದುವೆಯಾದವನ ಸಂಗದಿಂದ ತಪ್ಪಿಸಿಕೊಳ್ಳಲು ವಿವಿಧೋಪಾಯಗಳನ್ನು ಹೂಡಬಹುದು. ಅದು ಅನೈಚ್ಛಿಕವಾಗಿಯೆ ನಡೆಯುತ್ತದೆ. ಹುಡುಗಿಗೆ ಅದು ಗೊತ್ತಿರುವುದಿಲ್ಲ. ಗಂಡನ ಸಾನ್ನಿಧ್ಯದ ಸೂಚನೆಯ ಮಾತ್ರದಿಂದಲೆ ಹುಡುಗಿ ದೆವ್ವಹಿಡಿದವಳಾಗಿ ಭಯಂಕರವಾಗಿ ವರ್ತಿಸಬಹುದು. ಅಥವಾ ಉನ್ಮಾದ ಶಾಶ್ವತವಾದರೂ ಆಗಬಹುದು. ಅಥವಾ ಯಾವುದಾದರೂ ಭಯಂಕರ ವ್ಯಾಧಿ ನಿರ್ಮಾಣವಾಗುವುದೂ ಉಂಟು. ಆತ್ಮಹತ್ಯ ಮಾಡಿಕೊಳ್ಳುವುದೂ ಅಪೂರ್ವವಲ್ಲ.

ಹುಡುಗಿ ಸೂಕ್ಷ್ಮಪ್ರಕೃತಿಯ ಬಾಲೆಯಲ್ಲದಿದ್ದರೆ, ಕಾನೂರಿನ ಸುಬ್ಬಮ್ಮನಂತೆ ತನಗಾಗುವ ಪ್ರೇಮಭಂಗವನ್ನೂ ನಿರಾಶೆಯನ್ನೂ ಪದ್ಧತಿ ಮತ್ತು ಅಭ್ಯಾಸಗಳ ಕಗ್ಗಲ್ಲಿನಲ್ಲಿ ತಿಕ್ಕಿ ತಿಕ್ಕಿ, ಮೊಂಡಮಾಡಿ, ಮರೆತು, ಕೆಲದಿನಗಳಲ್ಲಿಯೆ ಹೊಸ ಸನ್ನಿವೇಶಕ್ಕೆ ತಕ್ಕಹಾಗೆ ವರ್ತಿಸಲು ತೊಡಗಿ, ಜೀವನವನ್ನು ತಕ್ಕ ಮಟ್ಟಿಗೆ ನೆಮ್ಮದಿಯಾಗಿ ನಡೆಸುತ್ತಾಳೆ. ಆದರೆ ತರಳೆ ಭಾವಜೀವಿಯಾಗಿ ಸೂಕ್ಷ್ಮ ಹೃದಯದವಳಾಗಿದ್ದರೆ ಯಾವ ಪದ್ಧತಿಯಾಗಲಿ, ಯಾವ ಅಭ್ಯಾಸವಾಗಲಿ ಯಾವ ಸಮಾಜದ ಕಟ್ಟುನಿಟ್ಟುಗಳಾಗಲಿ, ಯಾವ ವಿವಾಹದ ಶಾಸ್ತ್ರೋಕ್ತ

ಕರ್ಮಗಳಾಗಲಿ ಆಕೆಯ ಪ್ರಥಮ ಪ್ರಣಯದ ವಿದ್ಯುನ್ಮುದ್ರೆಯನ್ನು ಅಳಿಸ ಲಾರದೆ ಹೋಗುತ್ತವೆ. ಅದಕ್ಕೆ ಬದಲಾಗಿ ಒದಗುವ ವಿಘ್ನದಿಂದ ಪ್ರಥಮ ಪ್ರೇಮದ ಮೊನೆ ಮತ್ತೂ ತೀಕ್ಷ್ಣವಾಗುತ್ತದೆ. ಹೂವಯ್ಯ ಬೆನ್ನುನೋವಾಗಿ ಮುತ್ತಳ್ಳಿಯಲ್ಲಿ ಕೆಲವು ದಿನಗಳು ಉಳಿದು ಸೀತೆಯೊಡನೆ ಅಷ್ಟೊಂದು ಮಾತು ಕತೆಯಾಡದಿದ್ದಿದ್ದರೆ, ಅವಳು ಬಹುಶಃ ಸ್ಥೂಲಹೃದಯದ ಬಾಲೆಯಾಗಿಯೆ ಇದ್ದುಕೊಂಡು, ತನ್ನ ತಂದೆತಾಯಿಯರು ತನ್ನನ್ನು ಯಾರಿಗೆ ಕೊಟ್ಟು ಮದುವೆ ಮಾಡುತ್ತಿದ್ದರೂ ಆತನನ್ನೆ ಗಂಡನನ್ನಾಗಿ ತಿಳಿದು, ನೆಮ್ಮದಿಯಾಗಿ ಬಾಳುತ್ತಿದ್ದ ಳೆಂದು ತೋರುತ್ತದೆ. ಆದರೆ ವಿಧಿ ಹಾಗಾಗಲು ಬಿಡಲಿಲ್ಲ. ಹೂವಯ್ಯನ ದೆಸೆಯಿಂದ ಅವಳು ಸೂಕ್ಷ್ಮಹೃದಯದ ಭಾವಜೀವಿಯಾದ ಕುಮಾರಿಯಾಗಿ ಬಿಟ್ಟಿದ್ದಳು.

ಹಾಗಾದುದು ಇತರರಾರಿಗೂ ತಿಳಿದಿರಲಿಲ್ಲ. ತಿಳಿದಿದ್ದರೆ ಕಥೆ ಬೇರೆಯಾಗು ತ್ತಿತ್ತು. ಸೀತೆಯಂತೂ ಅದನ್ನು ಅತ್ಯಂತ ಗೋಪ್ಯವಾಗಿಟ್ಟಿದ್ದಳು. ಶ್ಯಾಮಯ್ಯ ಗೌಡರಾಗಲಿ ಗೌರಮ್ಮನವರಾಗಲಿ ಈ ಸ್ವಯಂವರ ಸ್ವಾರಸ್ಯವನ್ನು ಇಂಗಿತದಿಂದ ತಿಳಿಯುವಷ್ಟು ನವೀನರಾಗಿರಲಿಲ್ಲ. ಅವರೂ ಅವರಂತಹ ಇತರ ನಾಡಿನ ಹಿರಿಯರೂ ತಮ್ಮ ಹಿರಿಯರಾದ ಸಮಾಜದ ಮುಖ್ಯಸ್ಥರು ನಿರ್ಣಯಿಸಿದಂತೆ ಮದುವೆಯಾಗಿ ಸಂಸಾರಮಾಡುತ್ತಿದ್ದವರಾಗಿದ್ದರು. ಅವರೆಲ್ಲರ ಸಿದ್ಧಾಂತವೂ ಅನುಭವವೂ ವಿವಾಹಾನಂತರ ಪ್ರೇಮ ಎಂಬುದಾಗಿದ್ದಿತೇ ಹೊರತು ಪ್ರೇಮಾ ನಂತರ ವಿವಾಹ ಎಂಬುದಾಗಿರಲಿಲ್ಲ. ಆದ್ದರಿಂದ ಶ್ಯಾಮಯ್ಯಗೌಡರು ಕೃಷ್ಣಪ್ಪನಿಗೆ ಮಗಳನ್ನು ಕೊಡುತ್ತೇನೆ ಎಂದು ಮಾತು ಕೊಟ್ಟುದರಲ್ಲಿ ಅಜ್ಞಾನವಿದ್ದಿತೆ ಹೊರತು ಅನ್ಯಾಯವಿರಲಿಲ್ಲ.

ಯಾವ ಸ್ತ್ರೀಸಹಜ ಲಜ್ಜೆಯಿಂದ ಸೀತೆ ತನಗೆ ಹೂವಯ್ಯನಲ್ಲಿದ್ದ ಅನುರಾಗ ವನ್ನು ಮುಚ್ಚುಮರೆಮಾಡಿದ್ದಳೋ ಅಂತಹ ಪುರುಷಸಹಜವಾದ ಸಂಕೋಚ ದಿಂದಲೇ ಹೂವಯ್ಯನೂ ತನಗೆ ಸೀತೆಯಲ್ಲಿದ್ದ ಒಲುಮೆಯನ್ನು ತನ್ನ ಹೃದಯ ಗಹ್ವರದಲ್ಲಿ ಯಾರಿಗೂ ಅರಿಯದಂತೆ ಸೆರೆಹಾಕಿದ್ದನು. ತನ್ನ ಧೀರತೆಗೂ ಗೌರವ ಗಾಂಭೀರ್ಯಗಳಿಗೂ ಕುಂದುಬರಬಾರದೆಂದು ಅವನು ತನ್ನ ಅಂತರಂಗದಲ್ಲಿದ್ದ ಕಿಡಿಯನ್ನು ಬಹಿರಂಗಗೊಳಿಸದೆ, ಪ್ರಕೃತಿಯನ್ನು ವಂಚಿಸುವ ಸಾಹಸದಲ್ಲಿ ಆತ್ಮ ವಂಚನೆಮಾಡಿಕೊಳ್ಳುತ್ತಿದ್ದನು. ಆದರೆ ಪ್ರಕೃತಿ ತನ್ನನ್ನು ವಂಚಿಸಲೆಳಸುವವರ ಮೇಲೆ ಮುಯ್ಯಿ ತೀರಿಸಿಕೊಳ್ಳದೆ ಬಿಡುವುದಿಲ್ಲ. ಹೀಗೆ ಪ್ರಕೃತಿಯ ಪ್ರತಿ ಶೋಧಕ್ಕೆ ಸಿಲುಕಿದ ಆತ್ಮವು ಪ್ರಕೃತಿಯನ್ನು ಗೆದ್ದು ಉದ್ಧಾರವಾಗಬೇಕು; ಇಲ್ಲದಿದ್ದರೆ ಆದರ್ಶಚ್ಯುತವಾಗಿ ಪತಿತವಾಗಿ ವಿನಾಶಹೊಂದಬೇಕು; ಇಲ್ಲದಿದ್ದರೆ

ಕೋಟಿ ಕೋಟಿ ಮಾನವರು ಹಿಡಿದಿರುವ ಸಾಧಾರಣ ಪಥವನ್ನು ಹಿಡಿಯಬೇಕು.

ನಾಡಿನ ರೂಢಿಯಂತೆ, ಮದುವೆಮಾಡುವವರು ಮದುವೆಯಾಗುವವರ (ಅದರಲ್ಲಿಯೂ ಹೆಣ್ಣಿನ) ಇಚ್ಛೆಯನ್ನು ಕೇಳುವುದಿಲ್ಲ. ಪುತ್ರ ಪುತ್ರಿಯರ ಯೋಗಕ್ಷೇಮಕಾತರರಾದ ತಂದೆ ತಾಯಿಗಳೂ ಬಂಧುಗಳೂ ಅವರ ಕಲ್ಯಾಣಕ್ಕೆ ಭಂಗಬರುವಂತೆ ಲಗ್ನ ನಿಶ್ಚಯಮಾಡುತ್ತಾರೆಯೇ? ಅಲ್ಲದೆ ಮದುವೆ ಮಾಡುವ ಅನುಭವಶಾಲಿಗಳಾದ ಹಿರಿಯರಿಗಿಂತ ಮದುವೆಯಾಗುವ ಕಿರಿಯರಿಗೇನು ಹೆಚ್ಚು ತಿಳಿದಿರುತ್ತದೆಯೇ?

ಆದರೆ ಒಲ್ಮೆ ಜಾಣ್ಮೆಯಲ್ಲ. ಒಲ್ಮೆಯ ಭಾವಾವೇಶದ ನೀತಿಯೇ ಬೇರೆ; ಜಾಣ್ಮೆಯ ಲೆಕ್ಕಾಚಾರದ ರೀತಿಯೇ ಬೇರೆ. ಬಹುಶಃ ತುತ್ತತುದಿಯಲ್ಲಿ ಜಾಣ್ಮೆ ಒಲ್ಮೆಗೆ ಅಡಿಯಾಳಾಗಿ ಕಲಿಯಬೇಕಾಗುತ್ತದೆಂದೂ ತೋರುತ್ತದೆ.

ಮದುವೆ ನಿಶ್ಚಯವಾದಂದಿನಿಂದ ಸೀತೆ ಹಾಸಗೆ ಹಿಡಿದಳು. ದಿನದಿನವೂ ಜ್ವರ ಬಿಟ್ಟು ಬಿಟ್ಟು ಬಂದು, ಪ್ರಾತಃಕಾಲದ ಗುಲಾಬಿ ಗಿಡದ ಹಸುರೆಲೆಗಳ ನಡುವೆ ಅರೆಯರಳಿ ನಲಿವ ಬಿರಿಮುಗುಳಿನಂತಿದ್ದ ಲಲನೆ ಮುಡಿದು ಧೂಳಿಯಲ್ಲಿ ಬಿಸಾಡಿದ ಹೂವಿನಂತೆ ಬಾಡಿದಳು. ಕೆಲವುಸಾರಿ ಏನೇನೋ ಭಯಂಕರ ಸ್ವಪ್ನಗಳನ್ನು ಕಂಡು ಕೂಗಿಕೊಳ್ಳುತ್ತಿದ್ದಳು. ಇನ್ನೊಮ್ಮೆ ಎಚ್ಚತ್ತಿರುವಾಗಲೆ ಭ್ರಾಂತಿಯಿಂದ ಭಯುಗೊಂಡು ನಡುಗುತ್ತಿದ್ದಳು. ಕಡೆ ಕಡೆಗೆ ಕೆಲವರ ಗುರುತೂ ಕೂಡ ಆಕೆಗೆ ಸಿಕ್ಕುತ್ತಿರಲಿಲ್ಲ. ಸೀತೆಮನೆ ಸಿಂಗಪ್ಪಗೌಡರಂತೂ ಆಕೆಯ ಸ್ಮೃತಿಯಿಂದ ಕಳಚಿಬಿದ್ದು ಹೋಗಿದ್ದರು. ಅವರು ಹತ್ತಿರ ಕುಳಿತು ಮಾತಾಡಿಸಿದರೂ ಗುರುತು ಸಿಕ್ಕುತ್ತಿರಲಿಲ್ಲ. ಸ್ವಲ್ಪ ಆರೋಗ್ಯಾವಸ್ಥೆಯಲ್ಲಿದ್ದಾಗ ಕೇಳಲು ನಾಚುತ್ತಿದ್ದರೂ ಸಂಭ್ರಾಂತ ಸಮಯಗಳಲ್ಲಿ 'ಹೂವಯ್ಯ ಬಾವ' ನನ್ನು ಕರೆಯುತ್ತಿದ್ದಳು.

ಶ್ಯಾಮಯ್ಯಗೌಡರು ಹಳ್ಳಿಯ ವೈದ್ಯರಿಂದ ಮದ್ದು ಕೊಡಿಸಿದರು. ಅಗ್ರಹಾರದ ವೆಂಕಪ್ಪಯ್ಯ ಜೋಯಿಸರು ನಿಮಿತ್ತ ನೋಡುವುದು, ತಾಯಿತಿ ಕಟ್ಟುವುದು, ದಾನ ತೆಗೆದುಕೊಳ್ಳುವುದು, ಸತ್ಯನಾರಾಯಣವ್ರತ ಮಾಡಿಸುವುದು, ಭೂತಾದಿಗಳಿಗೆ ಬಲಿ ಕೊಡಿಸುವುದು — ಇತ್ಯಾದಿ ಕರ್ಮ ಕ್ರಿಯೆಗಳಿಂದ ಸೀತೆಯ ಕ್ಷೇಮದ ಸಲುವಾಗಿ ಬಹಳ ಪ್ರಯತ್ನ ಮಾಡಿದರು. ಯಾವುದೂ ಸಫಲವಾಗಲಿಲ್ಲ. ಆದರೂ ಆ ಸಮರ್ಥ ಜೋಯಿಸರು ರೋಗಿಯ ಕೇಡನ್ನೆಲ್ಲಾ ತಾವೇ ಹೊತ್ತುಕೊಳ್ಳುವ ಧರ್ಮಬುದ್ಧಿಯಿಂದ ವಿಧವಿಧವಾದ ದಾನಗಳನ್ನು ಸ್ವೀಕಾರಮಾಡುವ ಸೇವಾಕಾರ್ಯಕ್ಕೆ ಕೈ ಹಾಕಿದರು.

ಒಂದು ದಿನ ರಾಮಯ್ಯ ಸೀತೆಯ ಕಾಯಿಲೆಯನ್ನು ವಿಚಾರಿಸುವ ಸಲುವಾಗಿ ಮುತ್ತಳ್ಳಿಗೆ ಹೋಗಿದ್ದಾಗ ಸೀತೆ ಕಣ್ಣೀರು ಸುರಿಸುತ್ತ ನಿಃಶಕ್ತಕಂಠದಿಂದ ಬಹು

ಮೆಲ್ಲಗೆ "ಹೂವಯ್ಯ ಬಾವ ಬರಲಿಲ್ಲೇನು?" ಎಂದು ಕೇಳಿದಳು. ಅವಳ ಕಣ್ಣುಗಳಲ್ಲಿ ಅನಂತ ಅಭೀಷ್ಟವೂ ವಾಣಿಯಲ್ಲಿ ಅಸೀಮ ರೋದನವೂ ತುಳುಕುತ್ತಿದ್ದುವು.

ರಾಮಯ್ಯನು "ಇಲ್ಲ. ಅವನು ಬರಲಿಲ್ಲ. ಏನೋ ಕೆಲಸದ ಮೇಲಿದ್ದಾನೆ" ಎಂದು ಹುಸಿಯಾಡಿ ಸಮಾಧಾನ ಮಾಡಲೆಳಸಿದನು. ಸೀತೆ ಮಾತಾಡಲಿಲ್ಲ. ಇದ್ದಕ್ಕಿದ್ದಹಾಗೆ ಬಿಕ್ಕಿ ಬಿಕ್ಕಿ ಅಳತೊಡಗಿದಳು. ಹಾಸಗೆಯ ಮೇಲೆ ಒರಗಿದ್ದ ಆಕೆಯ ಕೃಶ ಮಲಿನ ಶರೀರ ಯಾತನೆಯ ಮಿಂಚು ಮುಟ್ಟಿದಂತೆ ನಡುಗತೊಡಗಿತು.

ಸೀತೆ ವಿಚಿತ್ರ ರೋಗದಿಂದ ಹಾಸಗೆ ಹಿಡಿದು ನರಳುತ್ತಿದ್ದ ವರ್ತಮಾನವನ್ನು ಕೇಳಿದರೂ ಹೂವಯ್ಯ ಮುತ್ತಳ್ಳಿಗೆ ಹೋಗಿ ಆಕೆಯನ್ನು ನೋಡಿರಲಿಲ್ಲ. ಚಿನ್ನಯ್ಯನ ಬಾಯಿಂದ ಸೀತೆಯನ್ನು ಕೃಷ್ಣಪ್ಪನಿಗೆ ಕೊಟ್ಟು ಲಗ್ನಮಾಡುವುದು ನಿಶ್ಚಯವಾಗಿದೆ ಎಂದು ತಿಳಿದಮೇಲೆ ಅವನ ಮನಸ್ಸು ಕೆಟ್ಟುಹೋಗಿತ್ತು. ಅತಿಭಾವ ಜೀವಿಯಾಗಿದ್ದ ಅವನಿಗೆ ಪ್ರಪಂಚದ ವ್ಯವಹಾರದ ಒರಟುತನವಿನ್ನೂ ಅನುಭವಕ್ಕೆ ಬಂದಿರಲಿಲ್ಲ. ಅದರಲ್ಲಿಯೂ ಅವನಿಗೆ ತಿಳಿದಿದ್ದ ಪ್ರಣಯ ಪ್ರಪಂಚವೆಂದರೆ ಕಾವ್ಯದ ಕಿನ್ನರ ಜಗತ್ತು. ಸೀತೆಯ ಪ್ರೇಮ ತನ್ನೊಬ್ಬನಿಗೇ ಮೀಸಲು ಎಂದು ಭಾವಿಸಿದ್ದ ಆತನ ಅಭಿಮಾನಕ್ಕೆ ಲಗ್ನನಿಶ್ಚಯವಾರ್ತೆ ಒಂದು ಆಘಾತವಾಗಿ ಪರಿಣಮಿಸಿತ್ತು. ಆಕೆಯ ಮದುವೆಯನ್ನು ನಿಶ್ಚಯಿಸಿದವರು ಆಕೆಯ ಪಿತೃಗಳಾಗಿದ್ದರೂ ಸೀತೆಯ ಸಮ್ಮತಿಯೇ ಅದಕ್ಕೆ ಕಾರಣವೆಂದು ಹೂವಯ್ಯ ಹೇಗೋ ಕುತರ್ಕ ಮಾಡಿ, ತನ್ನ ಪರವಾಗಿದ್ದ ಆಕೆಯ ಪ್ರೇಮ ಹುಸಿ ಎಂದೂ, ಆಕೆ ಇನ್ನುಮೇಲೆ ತನಗೆ ಪರಸ್ತ್ರೀಯಾಗಿಬಿಟ್ಟಳೆಂದೂ ಸಿದ್ಧಾಂತ ಮಾಡಿದ್ದನು.

ಹಾಗೆ ಸಿದ್ಧಾಂತಮಾಡಿದ್ದರಿಂದ ಅವನಿಗೇನೂ ನೆಮ್ಮದಿಯಿರಲಿಲ್ಲ. ಅವನ ಎದೆಯ ಉದ್ಯಾನಕ್ಕೆ ಕಿಡಿ ಕೂತು ಹೊತ್ತಿ ಹೋಗೆಯುತ್ತಿದ್ದಿತು. ಅವನ ಹಿಂದಿನ ತತ್ತ್ವದೃಷ್ಟಿ ಮೆಲ್ಲಮೆಲ್ಲನೆ ಮಾರ್ಪಡಲು ತೊಡಗಿತ್ತು. ಲೋಕವೂ ಜೀವನವೂ ಮಾಯೆ, ನಶ್ವರ, ಮೋಸ, ದುಃಖಮಯ ಎಂಬ ಭಾವ ಮೊಳೆದೋರುತ್ತಿತ್ತು. ಒಂದು ಮಾತಿನಲ್ಲಿ ಹೇಳುವುದಾದರೆ ಮೊದಲು ಸಮುಲ್ಲಸಿತ ಆಶಾವಾದಿಯಾಗಿದ್ದವನು ಹತಾಶೆಯಿಂದ ಮೆಲ್ಲಮೆಲ್ಲಗೆ ನಿರಾಶಾವಾದಿಯಾಗುತ್ತಿದ್ದನು. ಬಾಳಿನಲ್ಲಿ ಜುಗುಪ್ಸೆ ಕಾಲಿಡುತ್ತಿತ್ತು. ಮನಸ್ಸಿನ ಮನೆಯಲ್ಲಿ ಹೊಗೆ ತುಂಬುತ್ತಿತ್ತು.

ಸೀತೆ ತನ್ನ ಉದಾರ ಪ್ರೇಮಕ್ಕೆ ವಂಚನೆಮಾಡಿದಳೆಂದು ಭಾವಿಸಿದ್ದ ಹೂವಯ್ಯ ಸ್ವಲ್ಪ ನಿಷ್ಪಕ್ಷಪಾತವಾಗಿ ವಿಚಾರಮಾಡಿದ್ದರೆ ನಿಜವಾಗಿಯೂ ಔದಾರ್ಯದಿಂದ

ವರ್ತಿಸಬಹುದಾಗಿತ್ತು. ಅಲ್ಲದೆ ಭವಿಷ್ಯತ್ತಿನ ಗರ್ಭದಲ್ಲಿ ತನ್ನ ಇಂದ್ರಭವನವನ್ನು ನಿರುತಗೊಳಿಸಬಹುದಾಗಿತ್ತು. ಆದರೆ ಅವನ ಹೃದಯದಲ್ಲಿ ಪ್ರೇಮ ಔದಾರ್ಯದ ಹೆಸರಿನಲ್ಲಿ ಮಾತ್ಸರ್ಯವನ್ನು ಮುಚ್ಚುಮರೆಮಾಡಿಕೊಂಡು ಕೃಪಣವಾಗಿತ್ತು.

## ೩೨

## ಬಾಳಿನ ಬಲೆ

'ದೆಯ್ಯದ ಹರಕೆ'ಯಾದ ಮರುದಿನ ಕಾನೂರು ಚಂದ್ರಯ್ಯಗೌಡರು ಓಬಯ್ಯನನ್ನು ವಿಚಾರಣೆಮಾಡಿದರು. ಅವನು ಎಲ್ಲರೊಡನೆಯೂ ಹೇಳುತ್ತಿದ್ದ (ಭೂತರಾಯ ಪ್ರತ್ಯಕ್ಷವಾಗಿ ತನಗೆ ನೋಟು ಕೊಟ್ಟಿದ್ದ) ಕಥೆಯನ್ನೇ ಮತ್ತೂ ವಿವರವಾಗಿ ಹೇಳಿಬಿಟ್ಟನು. ದೆವ್ವ ಭೂತಾದಿಗಳಲ್ಲಿ ಅಪಾರ ಶ್ರದ್ಧೆಯನ್ನಿಟ್ಟಿದ್ದ ಗೌಡರಿಂದಲೂ ಕೂಡ ಅದನ್ನು ನಂಬಲಾಗಲಿಲ್ಲ. ಎಷ್ಟು ಪರಿಯಿಂದ ಕೇಳಿದರೂ ಓಬಯ್ಯ ನಿಜಸ್ಥಿತಿಯನ್ನು ಹೊರಗೆಡಹಲಿಲ್ಲ. ಗೌಡರಿಗೆ ನಿಜಸ್ಥಿತಿ ಅತ್ಯಂತ ಅವಶ್ಯವಾಗಿತ್ತು. ಏಕೆಂದರೆ ಅವರು ಊಹಿಸಿದ್ದಂತೆ ನಾಗಮ್ಮನವರು ಅಪರಾಧಿಗಳಾಗಿದ್ದರು. ಓಬಯ್ಯನಿಂದ ನಾಗಮ್ಮನವರು ನೋಟು ಕೊಟ್ಟರು ಎಂದು ತಿಳಿದುಬಂದರೆ ಆದಷ್ಟು ಜಾಗ್ರತೆಯಾಗಿ ಹಿಸ್ಸೆ (ಪಾಲು) ಮಾಡಿ, ತಾಯಿಮಕ್ಕಳನ್ನು ಬೇರೆ ಹಾಕಬಹುದೆಂದು ಅವರ ಬಯಕೆಯಾಗಿತ್ತು. ಆದ್ದರಿಂದ ನಿಜಸ್ಥಿತಿಯನ್ನು ಹೊರಡಿಸಲೇಬೇಕೆಂದು ಮನಸ್ಸುಮಾಡಿದರು.

"ಸತ್ಯ ಹೇಳ್ತಿಯೋ ಇಲ್ಲವೋ?" ಎಂದರು ಗೌಡರು.

"ನಾನಿಷ್ಟೊತ್ತಂಕ ಹೇಳಿದ್ದು ಮತ್ತೇನು?"

"ಅದೆಲ್ಲಾ ಇರಲಿ. ನಿನ್ನ ಠಕ್ಕು ನನ್ನ ಹತ್ರ ನಡೆಯೋದಿಲ್ಲಾ."

"ಠಕ್ಕು ಮಾಡಾಕೆ ನಾನೇನು ಕದ್ದೀನಾ?"

"ಇದ್ದದ್ದು ಇದ್ದಹಾಗೆ ಹೇಳಿಬಿಡೀನಿ, ಓಬೇಗೌಡ್ರೆ; ಅದರಲ್ಲಿ ಮೋಸವೇತಕ್ಕೆ? ಹೌದಾ?" ಎಂದರು ಸೇರೆಗಾರರು.

"ಏನ್ಮಾತಿದು, ಸೇರೆಗಾರ್ರೆ? ದೇವ್ರಾಣೆಗೂ ನಾ ಹೇಳೋದು ಸುಳ್ಳಾಗಿದ್ರೆ ನನ್ನ ಕುತ್ತಿಗೆ ಚೆಂಡು ನಿಂತಲ್ಲೇ ಕೆಳಗೆ ಬೀಳ್ಬೇಕು?" ಎಂದು ಓಬಯ್ಯ ಅಂಗಳದ ನಡುವೆಯಿದ್ದ ತುಲಸಿಯ ಪೀಠಕ್ಕೆ ನಮಸ್ಕಾರ ಮಾಡಿದನು.

"ಹಾಗಾದರೆ, ನೀನು ಒಳ್ಳೇ ಮಾತಿಗೆ ಹೇಳೂದಿಲ್ಲಾ?" ಎಂದು ಗೌಡರು ರುದ್ರವಾಗಿ ಕೇಳಿದರು.

ಓಬಯ್ಯ "ಒಳ್ಳೇ ಮಾತೀಗೆ ಹೇಳೂ'ದೂ ಅಷ್ಟೇ! ಕೆಟ್ಟ ಮಾತೀಗೆ ಹೇಳೂ'ದೂ, ಅಷ್ಟೇ! ಇಲ್ದಿದ್ದನ್ನು ಹೇಳೂ'ದು ಹ್ಯಾಂಗೆ?" ಎಂದನು ರಾಗವಾಗಿ. 'ಹೇಳೂದಿಲ್ಲಾ?' ಎಂಬ ಗೌಡರ ಮಾತನ್ನು ಸ್ವಲ್ಪಮಟ್ಟಿಗೆ ಅಣಕಿಸುವಂತೆ ಅನುಕರಿಸಿದ್ದನು.

ಕುಪಿತರಾದ ಗೌಡರು ಬೆತ್ತವೊಂದನ್ನು ತುಡುಕಿ ಓಬಯ್ಯನ ಬಳಿಗೆ ಕರಾಳವಾಗಿ ನಡೆದರು. ಅವನು ಕಗ್ಗಲ್ಲಿನಂತೆ ನಿಂತಲ್ಲಿಂದ ಕದಲದೆ ನೆಲವನ್ನು ನೋಡುತ್ತಿದ್ದನು.

"ನಿಜಾ ಹೇಳ್ತೀಯೋ ಇಲ್ಲೋ?" ಎಂದು ಗೌಡರು ಆರ್ಭಟಿಸಲು ಸುತ್ತಲಿದ್ದವರೆಲ್ಲ ಭಯಗ್ರಸ್ತರಾಗಿ ನೀರವವಾಗಿ ನಿಂತು ಮಿಳ್ಮಿಳನೆ ನೋಡತೊಡಗಿದರು. ಓಬಯ್ಯ ತಲೆ ಮೇಲೆತ್ತಲಿಲ್ಲ.

"ಹೇಳಿನಿ, ಓಬೇಗೌಡ್ರೇ, ಹೇಳಿನಿ" ಎಂದು ಸೇರೆಗಾರರು ಉಪದೇಶ ಮಾಡಿದರು.

ಓಬಯ್ಯನ ಒರಟು ಮೌನದಿಂದ ಮತ್ತೂ ಕೋಪವೇರಿದ ಗೌಡರು ಹಿಂದು ಮುಂದು ನೋಡದೆ ಕೈಲಿದ್ದ ಬೆತ್ತದಿಂದ ಬಡಲ್ ಬಡಲ್ ಬಡಲ್ಲನೆ ಹೊಡೆಯತೊಡಗಿದರು. ಓಬಯ್ಯ ನಾಲ್ಕೈದು ಪೆಟ್ಟು ಬೀಳುವವರೆಗೂ ಕಲ್ಲು ನಿಂತಂತೆ ನಿಂತಿದ್ದವನು ಇದ್ದಕ್ಕಿದ್ದಹಾಗೆ 'ಅಯ್ಯೋ' ಎಂದು ಎದೆಬಿರಿಯುವಂತೆ ಕೂಗಿಕೊಂಡು, ಗೌಡರ ಕೈಲಿದ್ದ ಬೆತ್ತವನ್ನು ಭದ್ರಮುಷ್ಟಿಯಿಂದ ತುಡುಕಿ ಹಿಡಿದನು. ಗೌಡರು ಎಷ್ಟು ಜಗ್ಗಿಸಿ ಎಳೆದರೂ ಬೆತ್ತವನ್ನು ಕಸಿದುಕೊಳ್ಳಲಾರದೆ ಕ್ರೋಧದಿಂದಲೂ ಆಯಾಸದಿಂದಲೂ ಏದತೊಡಗಿದರು.

ಪುಟ್ಟಣ್ಣನೂ ಸೇರೆಗಾರರೂ ಮುಂದೆ ನುಗ್ಗಿ ಓಬಯ್ಯನ ಕೈಲಿದ್ದ ಬೆತ್ತವನ್ನು ಬಿಡಿಸಿದರು. ಗೌಡರು ಮತ್ತೆ ಹೊಡೆಯತೊಡಗಿದರು. ಓಬಯ್ಯ ಹಲ್ಲು ಮಟ್ಟೆ ಕಚ್ಚಿಕೊಂಡು ಸುಮ್ಮನೆ ಮೊಗಬಿಗಿದು ನಿಂತನು. ಬೇರೆ ಯಾರೂ ಇಲ್ಲದಿದ್ದರೆ ಅವನು ಸ್ಥಾನ ಮಾನಗಳನ್ನು ಲೆಕ್ಕಿಸದೆ, ಗೌಡರಿಗೆ ಪ್ರತಿಹಿಂಸೆ ಮಾಡಲು ಹಿಂಜರಿಯುತ್ತಿರಲಿಲ್ಲವೋ ಏನೋ? ಆದರೆ ಗೌಡರಿಗೆ ಅನೇಕ ಸೇವಕರ ಸಹಾಯವಿದ್ದಾಗ ಯಾವ ಸಾಹಸಕ್ಕೂ ಕೈಯಿಡಲು ಅಂಜಿ, ಪೆಟ್ಟುಗಳನ್ನು ಸಹಿಸಲಾರದೆ ನಡೆದುದನ್ನೆಲ್ಲ ಹೊರಗೊದರಿಬಿಟ್ಟನು.

"ಅಯ್ಯೋ ಸತ್ತೇ! ಹೊಡೀಬ್ಯಾಡೀ! ಹೇಳ್ತೀನಿ!"

"ಹೇಳು ಮತ್ತೆ!" ಎಂದು ಗೌಡರು ಕೈ ತಡೆದು ನಿಂತರು.

"ಅಮ್ಮ ಕೊಟ್ಟರು! ನಾ ಕದೀಲಿಲ್ಲ!"

"ಯಾವಮ್ಮನೋ?"

"ಸುಬ್ಬಮ್ಮ!"

"ಆ್ಞ! ಯಾರಂದೆ?" ನಾಗಮ್ಮನಿರಬೇಕೆಂದು ಹಿಗ್ಗಿ ಪ್ರಶ್ನೆಮಾಡಿದ್ದ ಗೌಡರು ಅಪ್ರತಿಭರಾಗಿದ್ದರು.

"ಸುಬ್ಬಮ್ಮ!"

ಹೆಂಡತಿಯ ಮೇಲೆ ಕೋಪವೂ ಛಲವೂ ಕಾರ್ಮುಗಿಲು ಕವಿವಂತೆ ಕವಿದುವು. ಅದುವರೆಗೆ ಹೆಂಡತಿಯ ಪರವಾಗಿ ಮಬ್ಬುಮಬ್ಬಾಗಿದ್ದ ಸಂಶಯಗಳೆಲ್ಲವೂ ಈಗ ಸ್ಪಷ್ಟವೂ ಸ್ವತಃಸಿದ್ಧವೂ ಆಗಿ ತೋರಿದುವು. ಸುಳ್ಳು ಹೇಳಿ ತನ್ನನ್ನು ವಂಚಿಸಲು ಬಯಸಿದವಳು ಇನ್ನೇನನ್ನು ತಾನೆ ಮಾಡಲಾರಳು? ಮತ್ತು ಮಾಡಿಲ್ಲ?

ಗೌಡರ ಜುಟ್ಟು ಬಿಚ್ಚಿ ಕೂದಲು ಕೆದರಿಕೊಂಡಿತ್ತು. ಹೊದ್ದುಕೊಂಡಿದ್ದ ಶಾಲು ಓರೆಯಾಗಿ ಜೋಲಾಡುತ್ತಿತ್ತು. ಕಣ್ಣುಗಳು ಕೆಂಪೇರಿದ್ದುವು. ಮೂಗಿನ ಸೊಳ್ಳೆ ಹಿಗ್ಗಿ ಹಿಗ್ಗಿ ಬೀಳುತ್ತಿತ್ತು. ಹುಬ್ಬು ಗಂಟುಹಾಕಿ ಸುಕ್ಕಾಗಿದ್ದ ಹಣೆಯ ಮೇಲೆ ಬೆವರಿನ ಹನಿಗಳು ಹೊಮ್ಮಿದ್ದುವು. ಹೊತ್ತ ಬೆತ್ತದೊಡನೆ ನೆಟ್ಟನೆ ಅಡುಗೆಮನೆಗೆ ನುಗ್ಗಿದರು.

ಹೊರಗೆ ಅಂಗಳದಲ್ಲಿ ಆಗುತ್ತಿದ್ದ ಪ್ರಸಂಗಗಳನ್ನೆಲ್ಲ ಬಾಗಿಲು ಸಂದಿಯಲ್ಲಿ ಮರೆಯಾಗಿ ನಿಂತು ನೋಡಿ ಆಲಿಸುತ್ತಿದ್ದ ನಾಗಮ್ಮ ಪುಟ್ಟಮ್ಮ ಸುಬ್ಬಮ್ಮ ಮತ್ತು ಒಂದಿಬ್ಬರು ನೆಂಡತಿಯರು, ಓಬಯ್ಯ ಸತ್ಯವನ್ನು ಹೇಳಿದೊಡನೆಯೆ ಮುಂದೇನಾಗುವುದೋ ಎಂದು ಬೆದರಿ, ಅಡುಗೆಮನೆಗೆ ಹೋಗಿದ್ದರು. ನಾಗಮ್ಮ ಪುಟ್ಟಮ್ಮ ಇಬ್ಬರೂ ಕೆಲಸದಲ್ಲಿ ತೊಡಗಿದ್ದವರಂತೆ ನಟಿಸುತ್ತಿದ್ದರು.

ನಾಗಮ್ಮನವರು ಕನಿಕರದಿಂದ "ಸುಬ್ಬೂ, ನಿನ್ನ ಹೊಡೆದು ಕೊಂದುಹಾಕ್ತಾರೆ ಕಣೇ! ಬೇಗ ಹೋಗಿ ಅಡಗಿಕೊಳ್ಳೇ" ಎಂದು ಸೂಚಿಸಿದೊಡನೆಯೆ ಸುಬ್ಬಮ್ಮ ಬೇಗಬೇಗನೆ ಓಡಿಹೋಗಿ, ಕತ್ತಲೆಯ ಮೂಲೆಯಲ್ಲಿದ್ದ ಒಂದು ದೊಡ್ಡ ಕಡಾಯಿ ಹಿಂದೆ ಅವಿತುಕೊಂಡಳು.

ಚಂದ್ರಯ್ಯಗೌಡರು ಅಡುಗೆಮನೆಗೆ ಬಂದು ಸುತ್ತಲೂ ನೋಡಿ ಸುಬ್ಬಮ್ಮನನ್ನು ಕಾಣದೆ ಮಗಳನ್ನು ನಿರ್ದೇಶಿಸಿ "ಎಲ್ಲಿ ಹೋದಳೆ ಅವಳು?" ಎಂದು ಕೂಗಿದರು.

ಪುಟ್ಟಮ್ಮ ಮಾತಾಡಲಾರದೆ ನಾಗಮ್ಮನವರ ಕಡೆ ನೋಡಿದಳು. ಅವರು "ಹಟ್ಟೀಗೆ ಹೋಗಿರ್ಬೇಕು" ಎಂದರು.

ಗೌಡರು ಹಸುಗಳ ಕೊಟ್ಟಿಗೆಗೆ ಹೋಗಿ ನೋಡಿ ಹಿಂತಿರುಗಿ ಬಂದರು. ಎರಡು ಮೂರು ಕೋಣೆಗಳಲ್ಲಿ ಅರಸಿದರು. ಸುಬ್ಬಮ್ಮನನ್ನು ಎಲ್ಲಿಯೂ

ಕಾಣದೆ ಮತ್ತೆ ಅಡುಗೆ ಮನೆಗೆ ಬಂದು "ಅವಳೆಲ್ಲಿದ್ದಾಳೆ? ಹೇಳ್ತೀಯೋ ಇಲ್ಲೋ?" ಎಂದು ಬೆತ್ತದಿಂದ ಪುಟ್ಟಮ್ಮನ ಬೆನ್ನಿಗೆ ಒಂದು ಬಿಗಿತ ಬಿಗಿದರು. ಅವಳು ತಟ್ಟನೆ ಕಿರಿಚಿಕೊಂಡು "ದಮ್ಮಯ್ಯಾ, ದಮ್ಮಯ್ಯಾ ಹೇಳ್ತೀನಿ! ಅಲ್ಲಿ! ಅಲ್ಲಿ!" ಎಂದು ಕೈ ತೋರಿಸಿದಳು.

ಗೌಡರು ಕಡಾಯಿಯ ಹಿಂದುಗಡೆ ಕತ್ತಲೆಯಲ್ಲಿ ಸುಬ್ಬಮ್ಮನ ಆಕೃತಿಯನ್ನು ಕಂಡೊಡನೆ, ಬಾಯಿಗೆ ಬಂದಹಾಗೆ ಅಶ್ಲೀಲವಾಗಿ ಬೈಯುತ್ತ, ರಪ್ಪ ರಪ್ಪನೆ ಹೊಡೆಯತೊಡಗಿದರು. ಸುಬ್ಬಮ್ಮನ ಮೂಗುತಿ ಕಳಚಿಬಿದ್ದಿತು. ಕಿವಿಗೆ ಪೆಟ್ಟುಬಿದ್ದು ಬುಗುಡಿಯೆಲ್ಲ ರಕ್ತವಾಯಿತು. "ದಮ್ಮಯ್ಯಾ ತಪ್ಪಾಯ್ತು! ಕಾಲಿಗೆ ಬೀಳ್ತೀನಿ" ಎಂದು ರೋದಿಸುತ್ತ ಎದ್ದು ನಿಂತಳು. ಗೌಡರು ಆಕೆಯ ಜುಟ್ಟು ಹಿಡಿದು ಬಯಲಿಗೆ ಎಳೆದುಕೊಂಡು ದನವನ್ನು ಹೊಡೆಯುವಂತೆ ಬಡಿದರು. ಅವರನ್ನು ತಡೆಯಲು ಮತ್ತೆ ಯಾರಿಗೂ ಧೈರ್ಯ ಬರಲಿಲ್ಲ. ಹೂವಯ್ಯನೊಬ್ಬನೆ ಮುಂದುವರಿದು "ಚಿಕ್ಕಯ್ಯ, ಸಾಕು! ಬಿಡಿ! ಬಿಡಿ!" ಎಂದು ಕೈಚಾಚಿದನು. ಅವನ ಕೈಗೂ ಪೆಟ್ಟುಬಿದ್ದಿತು. ಆದರೆ ಅದಕ್ಕಿಂತಲೂ ಕಠಿನವಾಗಿ ಗೌಡರ ಬಾಯಿಂದ ಕಠೋರವಾಕ್ಯಗಳ ಪ್ರಹಾರವಾಯಿತು. ಸುಬ್ಬಮ್ಮನನ್ನು ಹೊಡೆಯುವುದನ್ನು ನಿಲ್ಲಿಸಿ ಹೂವಯ್ಯನನ್ನು ನಿಂದಿಸತೊಡಗಿದರು. ಆ ವ್ಯಂಗ್ಯ ನಿಂದೆಯ ಒಂದೊಂದು ಮಾತೂ ಒಂದೊಂದು ಬಾಣದಂತೆ ಎದೆ ಹೊಕ್ಕು ಹೂವಯ್ಯನನ್ನು ಹಿಂಡಿಬಿಟ್ಟಿತು. ಕೆಲವು ಪದಪ್ರಯೋಗಗಳಂತೂ ಹೂವಯ್ಯನು ಸುಬ್ಬಮ್ಮನ ಪ್ರಣಯಿ ಎಂಬರ್ಥವನ್ನು ಸ್ಪಷ್ಟವಾಗಿ ಸೂಚಿಸುವಂತಿದ್ದುವು. ಸೀತೆಯ ವಿವಾಹ ನಿಶ್ಚಯದ ಸಮಾಚಾರವನ್ನು ಕೇಳಿ ಮೊದಲೇ ದುಃಖಿತನಾಗಿದ್ದ ಅವನು ಜಜ್ಜರಿತನಾಗಿ, ಕುಪಿತ ವಾಣಿಯಿಂದ "ಏನಿದು? ನೀವು ಹೇಳುವಮಾತು? ನಿಮಗೇನು ಹುಚ್ಚುಗಿಚ್ಚು ಹಿಡಿದಿದೆಯೇನು?" ಎಂದನು.

"ನನ್ನ ಹೆಂಡತಿಗೆ ನಾ ಹೊಡೆದರೆ ನೀನು ಯಾರೋ ಕೇಳೋಕೆ?"

"ಮನುಷ್ಯರಿಗೆ ಮನುಷ್ಯರು ಸಹಾಯವಾಗದೆ ಇನ್ನಾರಾಗ್ತಾರೆ? ನಿಮ್ಮ ಹೆಂಡತಿ ಅಂತಾ ಹೇಳಿ ನೀವು ಖೂನಿ ಮಾಡ್ತೀರೇನು? ಅದನ್ನು ನಾವು ನೋಡುತ್ತಾ ನಿಂತಿರಬೇಕೇನು? ಹೊಡೆಯುವುದೆಂದರೆ ಅದಕ್ಕೂ ಮೇರೆ ಇಲ್ಲವೇನು? ಬುದ್ಧಿಯಿದ್ದವರು ದನಗಳಿಗೂ ಕೂಡ ಹೀಗೆ ಹೊಡೆಯುವುದಿಲ್ಲ. ಸ್ವಲ್ಪ ಶಾಂತರಾಗಿ ಆಲೋಚನೆ ಮಾಡಿ, ಆಗ ಗೊತ್ತಾಗುತ್ತದೆ."

"ಸಾಕೋ ನಿನ್ನುಪದೇಶ! ನನಗೆಲ್ಲಾ ಗೊತ್ತು. ನೀವೆಲ್ಲ ಸೇರಿ ಒಳಗೊಳಗೆ ಸಂಚುಮಾಡ್ತಿದ್ದೀರಿ. ಇನ್ನು ಈ ಮನೇಲಿ ನಾನೂ ನೀನೂ ಒಟ್ಟಿ

ಗಿರಬಾರದು. ನಿನ್ನ ಹಿಸ್ಸೆ ನೀ ತಗೊಂಡು ಹೋಗು. ನಿನ್ನ ಜೊತೆ ಇದ್ದರೆ ನನ್ನ ಮಾನಕ್ಕೂ ಸಂಚಕಾರ ಆಗ್ತದೆ" ಎಂದು ಚೀರಿದರು.

"ನನ್ನಿಂದ ನಿಮ್ಮ ಮಾನ ಹೋಗ್ತದೆ ಅಂತಾ ಕಂಡರೆ ಹಿಸ್ಸೆ ಮಾಡಿಕೊಡಿ, ನಾನು ಬೇರೆ ಹೋಗ್ತೀನಿ. ಅಂತೂ ನೀವು ಮಾಡೋದನ್ನೆಲ್ಲಾ ನಾ ನೋಡ್ತಾ ಸುಮ್ಮನಿರಲಾರೆ" ಎಂದ ಹೂವಯ್ಯ ಅಲ್ಲಿ ನಿಲ್ಲಲಿಲ್ಲ.

ಇತ್ತ ಪೆಟ್ಟು ತಿಂದ ಓಬಯ್ಯ ಕಾನೂರಿನಲ್ಲಿ ಕ್ಷಣಮಾತ್ರವೂ ನಿಲ್ಲದೆ, ಚಂದ್ರಯ್ಯ ಗೌಡರು ಕ್ರೋಧದಿಂದ ಅಡುಗೆ ಮನೆಗೆ ನುಗ್ಗಿದ ಕೂಡಲೆ ಹೆಬ್ಬಾಗಿಲಿಂದ ಹೊರ ಹೊರಟನು. ಕಳ್ಳಂಗಡಿಯವನೂ ಬಿರುಬಿರನೆ ಅವನ ಹಿಂಗಡೆ ಹೋಗಿ "ನನ್ನ ದುಡ್ಡಿಗೆ ಏನ್ಮಾಡ್ತೀರಿ?" ಎಂದನು.

"ದುಡ್ಡು! ನಿಮ್ಮಪ್ಪನ್ಮನೆ ಗಂಟು! ನೇಣ್ಹಾಕ್ಕ ಹೋಗಿ!" ಎನ್ನುತ್ತ ಓಬಯ್ಯ ಮುಖ ತಿರುಗಿಸದೆ ಕೆಳಕಾನೂರಿಗೆ ನಡೆದನು.

ಓಬಯ್ಯ ತನಗೊದಗಿದ ಶಿಕ್ಷೆಯೇ ತನ್ನ ಸಾಲದ ಹೊರೆಯನ್ನೆಲ್ಲ ತೀರಿಸಿ ಬಿಟ್ಟಿತೆಂದೂ, ಇನ್ನು ಮೇಲೆ ಯಾರಿಗೂ ತನ್ನ ಸಾಲದ ಹಣವನ್ನು ಕೇಳಲು ಹಕ್ಕಿಲ್ಲವೆಂದೂ ನಿರ್ಧರಿಸಿಬಿಟ್ಟಿದ್ದಂತೆ ತೋರುತ್ತಿತ್ತು.

ಕೆಳಕಾನೂರಿನ ಹುಲ್ಲುಮನೆಯನ್ನು ಪ್ರವೇಶಿಸಿದ ಓಬಯ್ಯ ತನ್ನ ತಂದೆ ಯನ್ನು ಹುಡುಕಿದನು. ಮನೆ ಬಿಟ್ಟಮನೆಯಂತೆ ಭಾಳ್ ಎನ್ನುತ್ತಿತ್ತು. ಅನೇಕ ದಿನಗಳಿಂದ ಕಸವನ್ನೆ ಗುಡಿಸಿದ್ದಂತೆ ತೋರುತ್ತಿರಲಿಲ್ಲ. ಪದಾರ್ಥ ಗಳೂ ಅಸ್ತವ್ಯಸ್ತವಾಗಿ ಹರಡಿಬಿದ್ದಿದ್ದುವು. ಜಗಲಿಯಮೇಲೆ ಅಲ್ಲಲ್ಲಿ ಕೋಳಿಯ ಪಿಚಿಗೆಯೂ ಪುಕ್ಕ ತಿಪ್ಪುಳಗಳೂ ಬಿದ್ದಿದ್ದುವು. ಯಾರನ್ನೂ ಕಾಣದೆ ಓಬಯ್ಯ ಅಡುಗೆ ಮನೆಗೆ ಹೋದನು. ಅಲ್ಲಿ ಅವನ ಮಲತಂಗಿ ಕತ್ತಲೆಯಲ್ಲಿ ಕತ್ತಲೆ ಯಾಗಿ ದರಿದ್ರಪಾಕಕಾರ್ಯದಲ್ಲಿ ತೊಡಗಿದ್ದಳು.

"ಅಪ್ಪಯ್ಯ ಎಲ್ಲೇ?" ಎಂದನು ಓಬಯ್ಯ.

ಹುಡುಗಿ ಬೆಚ್ಚಿಬಿದ್ದು ಹಿಂತಿರುಗಿ ಕಳೆಗೆಟ್ಟ ಕಣ್ಣುಗಳಿಂದ ಅಣ್ಣನನ್ನು ನೋಡಿ ಗಾಬರಿಗೊಂಡು, ಎಡಗೈಯಿಂದ ಮುಸಿಹಿಡಿದಿದ್ದ ಮೂಗಿನ ಸಿಂಬಳವನ್ನು ತೆಗೆದು ಒಲೆಯ ತೋಳಿಗೂ ಚಿಂದಿ ಸೀರೆಯ ಸೆರಗಿಗೂ ಉಜ್ಜುತ್ತ, ಪಾತಾಳ ಸ್ವರದಿಂದ "ಹೊರಗಿದ್ನಪ್ಪಾ!" ಎಂದಳು.

"ಜಗ್ಲೀಲಿಲ್ಲ. ಮತ್ತೆಲ್ಲಿಗೆ ಹೋಗ್ಯಾನೇ?"

"ಹಟ್ಟೀಗೇ ಹೋದ್ನೋ ಏನೋ?"

ಓಬಯ್ಯ ನೆಟ್ಟಗೆ ಕೊಟ್ಟಿಗೆಗೆ ಹೋದನು. ಅಣ್ಣಯ್ಯಗೌಡರ ವೃದ್ಧ ಶರೀರವು ಕೊಟ್ಟಿಗೆಯ ಒಂದು ಮೂಲೆಯಲ್ಲಿ ಬಾಗಿ, ಕೈಯಿಂದ ಸೆಗಣಿಯನ್ನು

ಬಾಚಿ ಬಾಚಿ ಒಂದು ಹೆಡಗೆಗೆ ತುಂಬುತಿತ್ತು. ಮಗನನ್ನು ಕಂಡ ಕೂಡಲೆ ಪ್ರಶ್ನೆದೃಷ್ಟಿಯನ್ನು ಬೀರಿ, ಉಸ್ಸೆಂದು ನೆಟ್ಟಗೆ ನಿಂತರು. ಸೆಗಣಿಯ ಸಿನುಗು ವಾಸನೆ ತುಂಬಿತ್ತು.

"ಇಲ್ಲೇನ್ಮಾಡ್ತೀಯಾ?" ಎಂದನು ಓಬಯ್ಯ.

"ಕಣ್ ಕಾಣಾದಿಲ್ಲೇನು?" ಎಂದರು ಅಣ್ಣಯ್ಯಗೌಡರು.

"ನೀನೀ ಹಾಳೂರಾಗೇ ಇರ್ತೀಯೋ? ನನ್ನೊಜ್ತೆ ಬರ್ತೀಯೋ?"

"ಎಂಥದೋ?" ಎಂದರು ದೀರ್ಘಸ್ವರದಿಂದ.

"ಎಂಥದೂ ಇಲ್ಲ! ನಾನಿನ್ನು ಈ ಸುಡುಗಾಡೂರಿಗೆ ಕಾಲು ಹಾಕೋದಿಲ್ಲ. ನೀನಿಲ್ಲೇ ಇದ್ಕೊಂಡು ಸಾಯ್ತೀಯೋ? ನನ್ನೊಜ್ತೆ ಬಂದು ಬಾಳ್ತೀಯೊ?"

"ಎಲ್ಲಿಗೆ ಹೋಗ್ತೀಯೋ?"

"ಎಲ್ಲಿಗಾದ್ರೂ ಆಗ್ಲಿ! ನೀ ಬರ್ತಿಯೇನು ಹೇಳು!"

"ಇವರ ರುಣ ತೀರಿಸದೆ ಹೋಗಾದ್ಹೇಂಗಪ್ಪಾ? ಹೋಗಾಕಾದ್ರೂ ಬಿಡ್ತಾರೇನು?"

"ಹಾಂಗಾದ್ರೆ ನೀನು ರುಣ ತೀರಸ್ತಾ ಕೂತ್ಗಾ ಇಲ್ಲಿ! ನಾನು ಹೋಗಿ ಬ್ಯಾರೆ ಕಡೆ ಜಮೀನು ಮಾಡ್ತೀನಿ!"

"ಯಾರು ಕೊಡ್ತಾರೋ ಜಮೀನ್ನಾ?"

"ಸಿಂಗಪ್ಪಗೌಡ್ರು ಕೊಡ್ತೀನಿ ಅಂದಾರೆ. ನೀ ಬರೋದಾದ್ರೆ ಬಾ!"

"ನಮ್ಮ ಸಾಲಾನೂ ಕೊಡ್ತಾರಂತೇನು?"

"ಸಾಲಾ, ಸಾಲಾ, ಸಾಲಾ! ಮತ್ತೆ ಸಾಲದ ಮಾತು ಎತ್ತೀಯಲ್ಲಾ! ಸಾಲ ಪೂರ ತೀರಿಸಿಬಿಟ್ಟೆ!"

ಅಣ್ಣಯ್ಯಗೌಡರಿಗೆ ಅದನ್ನು ಕೇಳಿ ಅದ್ಭುತ ಆನಂದವಾಗಿ ಮಾತಾಡಲೂ ಕೂಡ ಬಾಯಿ ಬರದೆ ನಿಂತರು.

ಓಬಯ್ಯ "ಸಾಲ ಪೂರ ತೀರಿಸಿಬಿಟ್ಟೆ! ಇಲ್ಲಿ ನೋಡು!" ಎಂದು ಮೈ ತೋರಿಸಿದನು. ಅವನ ಕಣ್ಣಿನಲ್ಲಿ ನೀರು ಸುರಿಯುತ್ತಿತ್ತು. ಕಂಠ ಗದ್ಗದ ವಾಗಿತ್ತು.

ಅಣ್ಣಯ್ಯಗೌಡರು ಮುಂದುವರಿದು, ಮಗನ ಬಳಿಗೆ ಬಂದು ಬಾಗಿ, ದೇಹದ ನಾನಾ ಭಾಗಗಳಲ್ಲಿ ಕೆಂಪಗೆ ಎದ್ದಿದ್ದ ಬೆತ್ತದೇಟಿನ ಬಾಸುಂಡೆಗಳನ್ನು ನೋಡಿ ಮರುಕದಿಂದ "ಯಾರು ಹೊಡೆದ್ರೋ ನಿಂಗೆ?" ಎಂದರು. ಆ ಸಮಯ ದಲ್ಲಿ ಅಣ್ಣಯ್ಯಗೌಡರ ಮನದಿಂದ ಮಗನ ಅವಿಧೇಯತೆ ಅನ್ಯಾಯ ಧೂರ್ತತನ ಗಳೆಲ್ಲ ಅಳಿಸಿಹೋಗಿ, ಪಿತೃಸಹಜವಾದ ವಾತ್ಸಲ್ಯಭಾವವೊಂದೇ ಪರಿಶುದ್ಧವಾಗಿ

ಹೊರಹೊಮ್ಮಿತ್ತು. ಓಬಯ್ಯ ನಡೆದುದನ್ನೆಲ್ಲ ಹೇಳಿದನು. ಮೊದಲು ಚಂದ್ರಯ್ಯಗೌಡರ ಋಣ ತೀರಿಸದೆ ಮೋಸಮಾಡಿ ಹೋಗುವುದು ಹೇಗೆ ಎಂದಿದ್ದ ಅಣ್ಣಯ್ಯಗೌಡರು ಮಗನಿಗೊದಗಿದ ದುಃಖದ ಕಥೆಯನ್ನು ಕೇಳಿದಮೇಲೆ ಅವನ ಆಸೆಯಂತೆ ಆಚರಿಸಲು ಒಪ್ಪಿಗೆಕೊಟ್ಟರು. ಬಹುಶಃ ಅವರ ಸತ್ಯವ್ರತಕ್ಕೆ ಅದರಿಂದ ತಪ್ಪಿಸಿಕೊಳ್ಳುವ ಅವಕಾಶದ ಅಭಾವವೇ ಪ್ರಬಲಕಾರಣವಾಗಿದ್ದಿತೆಂದು ತೋರುತ್ತದೆ. ಸೀತೆಮನೆ ಸಿಂಗಪ್ಪಗೌಡರು ಜಮೀನು ಕೊಡುತ್ತಾರೆ ಎಂದು ಕೇಳಿದೊಡನೆ ಅರ್ಧ ಮನಸ್ಸು ಆ ಕಡೆಗೆಳೆದಿತ್ತು.

ತಂದೆಮಕ್ಕಳಿಬ್ಬರೂ ಸೇರಿ ಮರುದಿನ ರಾತ್ರಿ ಗುಟ್ಟಾಗಿ ದನ ಕರು ಪಾತ್ರೆ ಸಾಮಾನು ಸರಕುಗಳನ್ನೆಲ್ಲ ಸೀತೆಮನೆಗೆ ಸಾಗಿಸಿಬಿಡುವುದೆಂದು ಗೊತ್ತುಮಾಡಿ ಕೊಂಡರು. ಓಬಯ್ಯ ಈ ವಿಚಾರವನ್ನು ಸಿಂಗಪ್ಪಗೌಡರಿಗೆ ತಿಳಿಸಿ, ಅವರಿಂದ ಗಾಡಿ ಮತ್ತು ಜನಗಳ ಸಹಾಯವನ್ನು ಪಡೆಯಲೋಸುಗ ಹೊರಟುಹೋದನು.

ಅದೇ ದಿನ ಸಾಯಂಕಾಲ ಕಾನುಬೈಲಿನಲ್ಲಿ ಹೂವಯ್ಯನೊಬ್ಬನೆ ಒಂದು ಎತ್ತರವಾದ ಅರೆಯಮೇಲೆ ಕುಳಿತಿದ್ದನು. ಅವನ ಕಣ್ಣು ಹನಿತುಂಬಿತ್ತು. ಮುಖದಲ್ಲಿ ಖಿನ್ನತೆಯಿತ್ತು. ಹೃದಯ ಅಧೀರವಾಗಿತ್ತು. ಆ ದಿನ ಪೂರ್ವಾಹ್ನ ದಲ್ಲಿ ನಡೆದ ಘಟನೆ ಅವನ ಜೀವವನ್ನು ಕಲಕಿಬಿಟ್ಟಿತ್ತು. ಚಂದ್ರಯ್ಯಗೌಡರು ಅದುವರೆಗೆ ತೋರಿಸುತ್ತಿದ್ದ ಯಾವ ಕ್ರೌರ್ಯವಾಗಲಿ ನಿಷ್ಕರುಣೆಯಾಗಲಿ ಆ ದಿನ ಅವರಾಡಿದ ಕಠಿನವಾಕ್ಕುಗಳಷ್ಟು ಹೀನವಾಗಿರಲಿಲ್ಲ. ತನಗೆ ಮಾತ್ರ ಸದೃಶಳಾಗಿದ್ದ ಸುಬ್ಬಮ್ಮನಿಗೂ ತನಗೂ ಗುಟ್ಟಾಗಿ ಪ್ರಣಯ ಸಂಬಂಧವಿದೆ ಎಂಬರ್ಥವನ್ನು ವ್ಯಂಗ್ಯವಾಗಿ ಸೂಚಿಸಿದ ಚಿಕ್ಕಯ್ಯನ ಬಿರುನುಡಿ ಅವನ ಎದೆ ಯನ್ನು ಒದ್ದೆಯರುವೆ ಹಿಂಡುವಂತೆ ಹಿಂಡುತ್ತಿತ್ತು. ಹಿಂದೆ ಮನೆ ಪಾಲಾಗು ವುದರಲ್ಲಿ ಅವನಿಗೆ ಎಷ್ಟು ಜುಗುಪ್ಸೆಯಿದ್ದಿತೋ ಈಗ ಅದರಲ್ಲಿ ಅಷ್ಟು ಆಸಕ್ತಿ ಯುಂಟಾಗಿತ್ತು. ಚಂದ್ರಯ್ಯಗೌಡರ ಸಂಶಯವೆಂಬ ಭಯಂಕರ ಭೂತದಿಂದ ಎಷ್ಟು ಬೇಗ ಪಾರಾದರೆ ಅಷ್ಟೂ ಒಳ್ಳೆಯದು ಎಂದು ತೋರಿತ್ತು ಆತನಿಗೆ. ಜೊತೆಗೆ ಹತಾಶವಾದ ಪ್ರೇಮದ ಬೆಂಕಿಯೂ ಕೂಡಿ, ಅವನ ಜೀವನವನ್ನು ದಹಿಸುತ್ತಿತ್ತು. ಸೀತೆಯನ್ನು ನೆನೆದು ಕಣ್ಣೀರು ಕರೆದನು. ನಿಜವಾಗಿಯೂ ಸೀತೆ ಕೃಷ್ಣಪ್ಪನನ್ನು ಪ್ರೀತಿಸಿ ತನ್ನನ್ನು ವಂಚಿಸಿಬಿಟ್ಟಳೇ? ಅವಳು ಗೋಡೆಯ ಮೇಲೆ ಬರೆದಿದ್ದ ಮಾತುಗಳು ನೆನಪಿಗೆ ಬಂದು ಹೂವಯ್ಯ ವಿಕಟವಾಗಿ ನಕ್ಕನು. ಚಿಂತಿಸುತ್ತಿದ್ದ ಹಾಗೆಯೆ ಪ್ರಪಂಚದಲ್ಲಿ ಎಲ್ಲವೂ ನಶ್ವರ, ಎಲ್ಲವೂ ದುಃಖಮಯ ಎಂಬ ಭಾವ ಮನಸ್ಸಿನಲ್ಲಿ ಮೊಳೆತು ಬೆಳೆಯತೊಡಗಿತು. ಇನ್ನು ಸೀತೆಯ ಆಲೋಚನೆಯನ್ನು ಬಿಡುತ್ತೇನೆ; ಅವಳು ತನ್ನನ್ನು ವಂಚಿಸಿದ್ದಾಳೆ; ಎಷ್ಟಾದರೂ

ಅವಳು ಇನ್ನುಮೇಲೆ ವಿವಾಹಿತಳಾದ ಪರಸ್ತ್ರೀ; ಅವಳು ಅಸ್ವಸ್ಥಳಾಗಿದ್ದಾಳಂತೆ; ಆದರೂ ನಾನೇಕೆ ಈಗ ಹೋಗಿ ನೋಡುವುದು; ನಾನು ಬರಿಯ ಪ್ರೇಮಭಿಕ್ಷುಕ ನಲ್ಲ ಎಂಬುದು ಆಕೆಗೆ ತಿಳಿಯಲಿ; ಆಕೆಯ ಭಾಗಕ್ಕೆ ನಾನೊಬ್ಬ ಯಃಕಶ್ಚಿತನಾದರೆ ನನಗೂ ಆಕೆ ಯಃಕಶ್ಚಿತಳಲ್ಲದೆ ಮತ್ತೇನು!

ದೃಷ್ಟಿಸೀಮಾಪರ್ಯಂತ ತರಂಗತರಂಗವಾಗಿ ಹಬ್ಬಿದ್ದ ಕಾಡುತುಂಬಿದ ಪರ್ವತಶ್ರೇಣಿಗಳ ದಿಗಂತದಲ್ಲಿ ಮುಳುಗುತ್ತಿದ್ದ ಸೂರ್ಯನ ಕೆಂಪುಬಿಂಬ ರಮಣೀಯವಾಗಿದ್ದರೂ ಹೂವಯ್ಯನಿಗೆ ಸೀತೆಯ ಪ್ರೇಮದಂತೆ ಚಂಚಲವೂ ನಶ್ವರವೂ ಕ್ಷಣಿಕವೂ ಆಗಿ ತೋರಿತು. ಹಿಂದೆ ಅಂತಹ ದೃಶ್ಯವನ್ನು ಕಂಡಾಗ ಯಾವ ಆನಂದಾವೇಶಗಳು ಹೃದಯದಲ್ಲಿ ತಾಂಡವವಾಡುತ್ತಿದ್ದವೊ ಅವುಗಳಿಂದು ಸತ್ತ ಬೆಂಕಿಯಂತೆ ಬೂದಿಯಾಗಿದ್ದುವು.

ಹೂವಯ್ಯ ಮತ್ತೆ ಆಲೋಚಿಸಿದನು. ತಾನು ಅವಿವಾಹಿತನಾಗಿಯೆ ಇದ್ದು ಕೊಂಡು ಮಹಾಪುರುಷರ ಜೀವನವನ್ನು ಅನುಸರಿಸಿ ಜನಾಂಗಕ್ಕೆ ಸೇವೆಮಾಡಿ ಕೀರ್ತಿ ಸಂಪಾದಿಸಬೇಕೆಂದಿದ್ದ ಹಿಂದಿನ ಆದರ್ಶ ಮತ್ತೆ ಮನದಲ್ಲಿ ಹೆಡೆಯೆತ್ತಿತು. ನಾನೆಂತಹ ಅಚಾತುರ್ಯಕ್ಕೆ ಕೈ ಹಾಕಿದ್ದೆ? ಎಂತಹ ಮೋಹಕ್ಕೆ ಸಿಲುಕುವುದರ ಲ್ಲಿದ್ದೆ? ಆ ಪ್ರಲೋಭನ ಜಾಲದಿಂದ ಭಗವಂತನೆ ನನ್ನನ್ನು ಬಲಾತ್ಕಾರವಾಗಿ ಪಾರುಮಾಡಿದ್ದಾನೆ! ಯಾವಳೊ ಒಬ್ಬ ಹಳ್ಳಿಯ ಹೆಣ್ಣಿನ ಚೆಲುವಿಗೆ ಸೆರೆ ಯಾಗಿ ಉತ್ತಮ ಆದರ್ಶಸಾಧನೆಗೆ ತಿಲಾಂಜಲಿ ಕೊಡುವುದರಲ್ಲಿದ್ದೆ. ಇನ್ನು ಮೇಲೆ ಅಂತಹ ಹವ್ಯಾಸಗಳನ್ನೆಲ್ಲ ಎಚ್ಚರಿಕೆಯಿಂದ ದೂರಮಾಡುತ್ತೇನೆ. ದೃಢ ಚಿತ್ತದಿಂದಲೂ ಏಕಾಗ್ರತೆಯಿಂದಲೂ ಜ್ಞಾನ ಭಕ್ತಿ ವೈರಾಗ್ಯಗಳನ್ನು ಸಂಪಾದಿಸಿ, ಈಶ್ವರ ಕೃಪೆಯಿಂದ ನಾಡಿನ ಜನರಿಗೆ ಬೆಳಕನ್ನು ನೀಡಿ, ಜೀವನವನ್ನು ಸಾರ್ಥಕ ಮಾಡಿಕೊಳ್ಳುತ್ತೇನೆ.

ಆಲೋಚಿಸುತ್ತಿದ್ದಂತೆ ರಾತ್ರಿಯಾಯಿತು. ಅರ್ಧ ಚಂದ್ರನ ಬೆಳಕು ಮಾಯಾ ಮೋಹಕವಾಗಿ ಹಬ್ಬಿತ್ತು. ಆಕಾಶದಲ್ಲಿದ್ದ ಒಂದೆರಡು ನಕ್ಷತ್ರಗಳು ಬರಬರುತ್ತ ಹತ್ತು, ನೂರು, ಸಾವಿರವಾಗತೊಡಗಿದುವು. ಕುರುಡುಗಪ್ಪಟೆ ಹಕ್ಕಿ ಕೂಗಿ ಹಾರಾಡತೊಡಗಿತು. ದೂರದಲ್ಲಿ ತೇನೆಹಕ್ಕಿ ಹಾಡುತ್ತ ಹಾರುತ್ತಿತ್ತು. ಮರ ಗಿಡ ಕಾಡುಗಳು ಆಕಾರ ಮಾತ್ರವಾದುವು.

ದೂರದಲ್ಲಿ ಕಳ್ಳುಗೊತ್ತಿಗೆ ಹೋಗುತ್ತಿದ್ದ ಚಂದ್ರಯ್ಯಗೌಡರ ಧ್ವನಿ ಕೇಳಿಸಿತು. ಅವರ ಹಿಂದೆ ಸೇರೆಗಾರರಿದ್ದರು.

ಚಂದ್ರಯ್ಯಗೌಡರು "ಏನಾದ್ರಾಗ್ಲಿ, ನಾಳೆ ರಾತ್ರೀನೆ ಪತ್ತೆಮಾಡಿ ಬಿಡ್ಬೇಕ್ರಿ. ನಮ್ಮ ಬೇಲರನ್ನೆಲ್ಲ ಕರಕೊಂಡುಹೋಗಾನ. ಆ ಉಂಡಾಡಿ ಭಟ್ಟ ಪುಟ್ಟಣ್ಣನ್ನೂ

ಬರಾಕ್ದೇಳ್ತೀನಿ. ರಾಮೂನೂ ಬರ್ತಾನೆ. ಆ ನಾಟಾ ಪತ್ತೆಮಾಡ್ಡಿದ್ಮೇಲೆ ನಾವು ಅಪ್ಪಗೆ ಹುಟ್ಟಿದ ಮಕ್ಕಳೇನ್ರಿ?" ಎನ್ನುತ್ತಿದ್ದರು.

ಸೇರೆಗಾರರು ಆಡುತ್ತಿದ್ದ ಮಾತು ಸರಿಯಾಗಿ ಕೇಳಿಸುತ್ತಿರಲಿಲ್ಲ.

ಹೂವಯ್ಯ ಮನೆಗೆ ಬಂದಮೇಲೆ ರಾಮಯ್ಯನಿಂದ ಎಲ್ಲವೂ ವಿಶದವಾಗಿ ಗೊತ್ತಾಯಿತು. ಚಂದ್ರಯ್ಯಗೌಡರು ತೀರ್ಥಹಳ್ಳಿಯ ಫಾರೆಸ್ಟ್ ರೇಂಜಿಗೆ ಸೀತೆಮನೆ ಸಿಂಗಪ್ಪಗೌಡರು ಕಳ್ಳನಾಟಾ ಕಡಿಸಿದುದನ್ನು ಅರ್ಜಿ ಮೂಲಕ ತಿಳಿಸಿದ್ದರು. 'ರೇಂಜರು' ಒಬ್ಬ 'ಗಾರ್ಡ'ನನ್ನು ಸೀತೆಮನೆಗೆ ಕಳುಹಿಸಿದ್ದರು. ಆದರೆ ಸಿಂಗಪ್ಪಗೌಡರ ಮನೆಯಲ್ಲಿ ಯಾವ ಹೊಸ ನಾಟಾಗಳೂ ದೊರೆಯಲಿಲ್ಲ. ಗಾರ್ಡನು ಕಾನೂರು ಚಂದ್ರಯ್ಯ ಗೌಡರಲ್ಲಿಗೆ ಬಂದು ನಡೆದುದನ್ನು ಹೇಳಿದ್ದನು. ಚಂದ್ರಯ್ಯಗೌಡರು ಸಿಂಗಪ್ಪಗೌಡರು ಅಡಗಿಸಿಟ್ಟ ನಾಟಾಗಳನ್ನು ಮರುದಿನವೆ ಪತ್ತೆ ಹಚ್ಚಿಕೊಡುತ್ತೇನೆ ಎಂದು ಗಾರ್ಡನಿಗೆ ಸಮಾಧಾನ ಹೇಳಿದ್ದರು.

## ೩೩

## ಅಣ್ಣಯ್ಯಗೌಡರನ್ನು ಊರು ಬಿಡಿಸಿದ್ದು

ಬೆಳಿಗ್ಗೆ ಸುಮಾರು ಎಂಟುಗಂಟೆಯ ಸಮಯ. ಓರೆಬಿಸಿಲು ಸೀತೆಮನೆ ಸಿಂಗಪ್ಪಗೌಡರ ಮಂಗಳೂರು ಹೆಂಚಿನ ಮನೆಯ ಮುಂದಿದ್ದ ತೋಟದ ಅಡಕೆ ಮರಗಳ ಹಚ್ಚನೆ ಹಸುರಿನ ನೆತ್ತಿಗಳನ್ನು ಚುಂಬಿಸಿತ್ತು. ಬಿಸಿಲು ತೋಟದ ನಡುವೆ ತೂರಿಬಂದು ಅಡಕೆಯ ಸೋಗೆಗಳ ಹಸುರುಗರಿಗಳ ಮೇಲೆಯೂ ಬಾಳೆಯ ಮರಗಳ ಹೆಡಲುಗಳ ಮೇಲೆಯೂ ಕೋಲುಕೋಲಾಗಿ ಬಿದ್ದು ಬಣ್ಣದ ಚಿತ್ರಗಳನ್ನು ಬರೆಯುತ್ತಿತ್ತು. ತೋಟದ ನೆಲವಂತೂ ಮೇಲುಸೊಪ್ಪು, ಮೇಲುಸೊಪ್ಪಿನ ಜಿಗ್ಗು, ಗೊಬ್ಬರ, ಕೆಮ್ಮಣ್ಣು ಇವುಗಳಿಂದ ಕಿಕ್ಕಿರಿದು ಸರಾಗ ವಾಗಿ ನಡೆಯುವುದಕ್ಕೂ ಕೂಡ ಅಡಚಣೆಯಾಗುತ್ತಿತ್ತು. ಕೆಲಮಂದಿ ಆಳು ಗಳು ಮುದಿಯಾಗಿದ್ದ ಅಡಕೆ ಮರಗಳನ್ನು ಕೊಡಲಿಯಿಂದ ಕಡಿದುರುಳಿಸುವ ಕಾರ್ಯದಲ್ಲಿ ತೊಡಗಿದ್ದರು. ಕಡಿಯುವ ಸದ್ದು ಧ್ವನಿಪ್ರತಿಧ್ವನಿಯಾಗಿ ಆ ಪ್ರದೇಶ ವನ್ನೆಲ್ಲ ಶಬ್ದಮಯವನ್ನಾಗಿ ಮಾಡಿತ್ತು. ಆಯುಸ್ಸು ಪೂರೈಸಿದ ಆ ಮುದಿ ಯಡಕೆಯ ಮರಗಳು ಒಂದೊಂದು ಕೊಡಲಿಯ ಪೆಟ್ಟಿಗೂ ನಡುನಡುಗಿ ಹಸುರುಗರಿಗೆದರಿದ ತಮ್ಮ ತಲೆಗಳನ್ನು ತೂಗಾಡುತ್ತಿದ್ದುವು.

ಕೆಲಸಮಾಡುತ್ತಿದ್ದ ಆಳುಗಳಿಗೆ ತುಸು ದೂರದಲ್ಲಿ ಕೃಷ್ಣಪ್ಪ ಕುಳಿತು ಸಲಹೆ

ಗಳನ್ನು ಕೂಗಿ ಹೇಳುತ್ತಿದ್ದನು. ಅವನ ಸುತ್ತಲೂ ನಾಲ್ಕೈದು ನಾಯಿಗಳು ನಾನಾ ಭಂಗಿಯಲ್ಲಿ ವಿಶ್ರಾಂತಿ ತೆಗೆದುಕೊಳ್ಳುತ್ತಿದ್ದುವು.

ಒಂದು ಅಡಕೆಯ ಮರದ ಬುಡ ಲಟ್ ಲಟ್ ಲಟ್ ಎಂದು ಸದ್ದುಮಾಡ ತೊಡಗಿತ್ತು. ಹತ್ತಿರ ಇದ್ದವರೆಲ್ಲ ಎಚ್ಚರಿಕೆಯಿಂದ ದೂರ ಸರಿದು ನಿಂತರು.

ಕೃಷ್ಣಪ್ಪ "ಅಡಕೆ ಸಸಿ ಮೇಲೆ ಬೀಳದ ಹಾಂಗೆ ನೋಡ್ಕೊಳ್ಳಿ! ಹುಷಾರ್!" ಎಂದು ಕೂಗಿಹೇಳಿ, ಕೆಳಗುರುಳಲು ಹವಣಿಸುತ್ತಿದ್ದ ಮೇಘ ಚುಂಬಿಯಾದ ಅಡಕೆಯ ಮರವನ್ನೇ ನೋಡುತ್ತಿದ್ದನು.

ಮರ ಲಟಿ ಲಟಿ ಲಟಿ ಎಂದು ಓರೆಯಾಗತೊಡಗಿ ಮಹಾರವದೊಡನೆ ತೋಟವೆಲ್ಲ ಬೆಚ್ಚಿಬೀಳುವಂತೆ ನೆಲಕ್ಕುರುಳಿತು. ಅಕ್ಕಪಕ್ಕದಲ್ಲಿ ನಿಂತಿದ್ದ ಅಡಕೆಯ ಮರಗಳಿಗೆ ಅದರ ದಿಂಡು ತಗಲಿ ಅವುಗಳೂ ಹಿಂದಕ್ಕೂ ಮುಂದಕ್ಕೂ ತೂಗಾಡತೊಡಗಿದುವು. ಜಾಕಿ "ಅಯ್ಯಯ್ಯೋ, ಒಂದಡಕೆಸಸಿ ತಲೆ ಮುರಿದೇ ಹೋಯ್ತು!" ಎಂದು ಕೂಗಿಕೊಂಡನು.

"ನಿಮ್ಮ ಕೆಲಸಕ್ಕೆ ಕಲ್ಲುಹಾಕೇ ಹೋಗ್ಲಿ! ತೆಗೆದ್ರೇನೋ ಒಂದು ಸಸೀನ?" ಎನ್ನುತ್ತ ಕೃಷ್ಣಪ್ಪ ತಲೆ ಮುರಿದ ಅಡಕೆಸಸಿ ಇದ್ದಲ್ಲಿಗೆ ಓಡಿದನು.

ಬೇರೆಯ ಸಮಯದಲ್ಲಾಗಿದ್ದರೆ ಕೃಷ್ಣಪ್ಪ ಆಳುಗಳಿಗೆ ಚೆನ್ನಾಗಿ ಬೈಯುತ್ತಿದ್ದನು. ಆದರೆ ತನ್ನ ಮದುವೆಯ ಮಂಟಪದ ಚಪ್ಪರಕ್ಕಾಗಿ ಮರಗಳನ್ನು ಉಲ್ಲಾಸದಿಂದ ಉರುಳಿಸುತ್ತಿದ್ದ ಆಳುಗಳನ್ನು ಬೈಯಲು ಮನಸ್ಸು ಬರಲಿಲ್ಲ.

ಸಿಂಗಪ್ಪಗೌಡರು ಮದುವೆ ಚಪ್ಪರಕ್ಕಾಗಿ ಮರಗಳನ್ನು ಕಡಿಸಲು ಮಗನಿಗೆ ಬೆಸಸಿ, ಅಸ್ವಸ್ಥಳಾಗಿದ್ದ ಸೀತೆಯನ್ನು ನೋಡಿಕೊಂಡು ಬರಲು ಮುತ್ತಳ್ಳಿಗೆ ಹೋಗಿದ್ದರು. ಕೃಷ್ಣಪ್ಪ ಸವಿಮನಸ್ಸಿನಿಂದ ಕರ್ತವ್ಯ ತತ್ಪರನಾಗಿದ್ದನು.

ಇನ್ನೂ ಮೂರು ನಾಲ್ಕು ಮರಗಳೂ ಉರುಳಿರಲಿಲ್ಲ. ದನ ಕಾಯುವನೊಬ್ಬನು ಏದುತ್ತ ಓಡಿಬಂದು "ಒಂದು ದನ ಹುಲಿ ಹಿಡ್ದದೆ" ಎಂದನು.

"ಯಾವಗಲೋ ಹಿಡ್ದಿದ್ದು?" ಎಂದು ಕೃಷ್ಣಪ್ಪ ಕೇಳಿದನು.

"ನಿನ್ನೆ ಬೈಗಿನ ಹೊತ್ತು ಅಂತಾ ಕಾಣ್ತದೆ. ರಾತ್ರಿ ಕೊಟ್ಟಿಗೀಗೇ ಬರಲಿಲ್ಲ."

"ಅಂತೂ ನಿಮ್ಮ ದೆಸೆಯಿಂದ ದನಾ ಒಂದೂ ಉಳಿಯೋ ಹಾಂಗಿಲ್ಲ. ಏನು ದನಾ ಕಾಯ್ತೀರೋ ಏನೋ? ದೇವರಿಗೇ ಗೊತ್ತು!"

ಕೃಷ್ಣಪ್ಪನಿಗೆ ಬೇಟೆ ಎಂದರೆ ಹುಚ್ಚು. ಅನೇಕ ಪ್ರಾಣಿಗಳನ್ನು ಬೇಟೆಯಾಡಿ ಕೊಂದಿದ್ದನು. ಆದರೆ ಹುಲಿಯನ್ನು ಕೊಲ್ಲುವ ಸುಯೋಗವಿನ್ನೂ ಲಭಿಸಿರಲಿಲ್ಲ. ಆದ್ದರಿಂದ 'ಹುಲಿ ದನಾ ಹಿಡಿದಿದೆ' ಎಂಬ ಸುದ್ದಿಯನ್ನು ಕೇಳಿ, ಒಂದು ಕಾಲ್ನಡೆ ಹೋದುದಕ್ಕಾಗಿ ವ್ಯಸನವಾದರೂ, ಹುಲಿಯನ್ನು ಷಿಕಾರಿ ಮಾಡುವ ಅವಕಾಶ

ದೊರೆತುದಕ್ಕಾಗಿ [ಒಳಗೊಳಗೆ [ಹಿಗ್ಗಿದನು. ಕೆಲಸಮಾಡುತ್ತಿದ್ದ ಆಳುಗಳಿಗೆ ಅಡಕೆಯ ಮರಗಳನ್ನು ಕಡಿಯುವಂತೆ ಹೇಳಿ, ಜಾಕಿ ಓಬಯ್ಯ ಇಬ್ಬರನ್ನೂ ಜೊತೆಗೆ ಕರೆದುಕೊಂಡು ಕೋವಿಗಳೊಡನೆ 'ಬಡು' (ದನದ ಹೆಣ) ಬಿದ್ದಲ್ಲಿಗೆ ಹೊರಟನು. ನಾಯಿಗಳನ್ನು ಜೊತೆಗೆ ಬರಗೊಡಲಿಲ್ಲ.

ದನ ಕಾಯುವವನು ಮೂವರನ್ನೂ ಕರೆದುಕೊಂಡು ಕಾಡು ಹತ್ತಿದನು. ಸ್ವಲ್ಪ ದೂರ ಹೋದಮೇಲೆ "ಅಯ್ಯಾ ಇಲ್ನೋಡಿ" ಎಂದು ಹುಲಿ ದನವನ್ನು ಹಿಡಿದ ಸ್ಥಳವನ್ನು ತೋರಿದನು. ಹುಲಿ ಹಸುವನ್ನು ಹಿಡಿದಾಗ ನಡೆದಿದ್ದ ಹೋರಾಟದಿಂದ ನೆಲದ ಹುಲ್ಲೆಲ್ಲ ನುಗ್ಗುನುರಿಯಾಗಿ ಜಜ್ಜಿಹೋಗಿತ್ತು. ಸಣ್ಣ ಸಣ್ಣ ಪೊದೆಗಳೂ ಕೂಡ ಮುರಿದಿದ್ದುವು. ಸೆಗಣಿ ನೀರುನೀರಾಗಿ ಬಿದ್ದಿತ್ತು. ಚೆಲ್ಲಿದ್ದ ನೆತ್ತರು ಹೆಪ್ಪುಗಟ್ಟಿ ಇನ್ನೂ ಹಸಿಹಸಿಯಾಗಿತ್ತು.

"ಇಲ್ಲೇ ನೆತ್ತರು ಕುಡ್ಕೊಂಡು ಆ ಮೇಲೆ ಕಚ್ಚಿಕೊಂಡು ಹೋಗ್ಯಾದೆ" ಎಂದನು ಓಬಯ್ಯ.

"ಹುಲಿಯೇನು ಸಣ್ಣದಲ್ಲ! ಇಲ್ಲಿ ನೋಡಿ ಅದರ ಹೆಜ್ಜೆ!" ಎಂದು ಜಾಕಿ ಅಷ್ಟೇನೂ ಸ್ಪಷ್ಟವಲ್ಲದ ಪದಚಿಹ್ನೆಯನ್ನು ತೋರಿದನು.

ನೆಲ ಗಟ್ಟಿಯಾಗಿದ್ದುದರಿಂದ ಹೆಜ್ಜೆ ಸ್ಫುಟವಾಗಿರಲಿಲ್ಲ.

"ಅದರ ಚಮಡ ಸುಲೀದೆ ಬಿಡ್ಬಾರ್ದು" ಎಂದು ಕೃಷ್ಣಪ್ಪ ಜಾಡು ಹುಡುಕುತ್ತ ಮುಂಬರಿದನು. ಹುಲಿ ಹಸುವನ್ನು ಎಳೆದುಕೊಂಡು ಹೋಗಿದ್ದ ಜಾಡು ಸುಲಭವಾಗಿ ಗೊತ್ತಾಗುವಂತಿತ್ತು.

ಜಾಡು ಹಿಡಿದು ಮುಂದೆ ಹೋಗುತ್ತಿರಲು, ಬತ್ತಿಹೋಗಿದ್ದ ಒಂದು ಕಿರು ತೊರೆಯ ಪಾತ್ರ ಸಿಕ್ಕಿತು. ಅದರಲ್ಲಿ ನೀರು ಒಂದು ಹನಿಯೂ ಇರದಿದ್ದರೂ ಮರಳು ಬೇಕಾದಷ್ಟಿತ್ತು. ಆ ಮರಳಿನಲ್ಲಿ ಹುಲಿ ಹಸುವನ್ನು ಎಳೆದುಕೊಂಡು ಹೋಗಿದ್ದ ಗುರುತು, ಸಾರಿಹೇಳುವಷ್ಟರಮಟ್ಟಿಗೆ ಸ್ಪಷ್ಟವಾಗಿತ್ತು. ಅದುವರೆಗೆ ಚೆನ್ನಾಗಿ ಕಾಣಿಸದಿದ್ದ ಹುಲಿಯ ಹೆಜ್ಜೆ ಆ ಮರಳಿನಲ್ಲಿ ಚೆನ್ನಾಗಿ ಕಾಣಿಸುತ್ತಿತ್ತು.

"ಇಲ್ಲಿ ನೋಡಿ, ಒಂದೊಂದು ಉಗುರು ಎಂದರೆ ಒಂದೊಂದು ನಿಂಬೇ ಕಾಯಿ ಗಾತ್ರ ಇದೆ!"

"ಇಲ್ಲಿ ನೋಡ್ರೋ! ಒಂದು ಸಣ್ಣ ಹೆಜ್ಜೆ ಬೇರೆ ಇದೆ! ಮರೀ ಹುಲಿ ಅಂತಾ ಕಾಣ್ತಾದೆ."

ತಾಯಿ ಹೆಬ್ಬುಲಿಯ ಹೆಜ್ಜೆಯೊಂದಿಗೆ ತುಸು ಬಳಿಯಲ್ಲಿ ಅದರ ಮರಿಯ ಹೆಜ್ಜೆಯೂ ಸ್ಪಷ್ಟವಾಗಿ ಗೋಚರಿಸುತ್ತಿತ್ತು.

"ಮಾರಾಯ್ರಾ, ಇದರ ಸಾವಾಸ ಬ್ಯಾಡ. ಮರೀ ಹುಲಿ!" ಎಂದ

ಓಬಯ್ಯನ ಕಡೆಗೆ ಸಿಟ್ಟಿನಿಂದಲೂ ತಿರಸ್ಕಾರದಿಂದಲೂ ನೋಡಿದ ಕೃಷ್ಣಪ್ಪ "ನಿನ್ನ ತಲೆ! ಮರೀ ಹುಲಿ ಆದ್ರೇನಂತೆ! ಕೋವಿ ಈಡು ಬಡಿಯೋದಿಲ್ಲೇನು? ನಿಂಗೆ ಹೆದರಿಕೆಯಾದ್ರೆ ಮನೀಗ್ಹೋಗು!" ಎಂದನು.

"ಹೆದರಾಕೆ ನಾನೇನು ಹೆಂಗ್ಸೇನು? ಮರೀ ಹುಲಿ ಸ್ವಲ್ಪ ಅಪಾಯ ಅಂತಾ ಹೇಳ್ದೆ ಅಷ್ಟೆ!" ಎಂದು ಓಬಯ್ಯ ಎಲ್ಲರಿಗಿಂತಲೂ ಮುಂದಾಗಿ ಧೈರ್ಯ ಪ್ರದರ್ಶನಕ್ಕಾಗಿ ನಡೆದನು.

ಕಾಡಿನ ಅಂಚಿನಲ್ಲಿ ಹಸುವನ್ನು ಹಿಡಿದಿದ್ದ ಹೆಬ್ಬುಲಿ ಅದನ್ನು ನಡುಗಾಡಿಗೆ ಎಳೆದೊಯ್ದು, ಹಿಂಗಾಲು ಮತ್ತು ಹಿಂದೊಡೆಗಳನ್ನು ತಿಂದು, ಉಳಿದುದನ್ನು ಮರುಹಸಿವೆಯ ತೃಪ್ತಿಗಾಗಿ ಹಳುವಿನಲ್ಲಿ ಹುದುಗಿಟ್ಟಿತ್ತು.

ಅದನ್ನು ನೋಡಿದ ಕೃಷ್ಣಪ್ಪ ಸುತ್ತಣ ಹೆಮ್ಮರಗಳನ್ನು ಸಂವೀಕ್ಷಿಸಿ "ಇವತ್ತು ರಾತ್ರೆ ಮರಸೀಗೆ ಕೂತ್ರೆ ಹುಲೀಗೆ ಒಂದು ಗುಂಡು ತಗುಲಿಸಬಹುದು—ಆ ಮರದಲ್ಲಿ ಒಬ್ಬ, ಅಲ್ಲೊಬ್ಬ, ಓ ಅಲ್ಲೊಬ್ಬ. ಹುಲಿ ಬಂದರೆ ಬಹುಶ ಈ ದಿಕ್ಕಿನಿಂದ ಬರಬಹುದು. ಬಂದೇ ಬರ್ತ್ತದೆ! ಬರದೇ ಎಲ್ಲಿಗೆ ಹೋಗ್ತದೆ. ಅದರಲ್ಲಿಯೂ ಮರೀ ಹುಲಿ, ಕತ್ತಲೆ ಆಗಬೇಕಾದ್ರೆ ಬಂದ್ರೂ ಬಂತೆ!"

ಜಾಕಿಯೂ ಮರಗಳನ್ನು ನೋಡಿ "ಹೌದೂ?... ಈ ಮರಗತ್ತಲೇಲಿ ಹುಲೀಗೆ ಗುಂಡು ತಗಲಿಸೋದಾದ್ರೂ ಹ್ಯಾಂಗೆ? ತಿಂಗಳ ಬೆಣಕೇನು ಸೊಲ್ಪಾನೂ ಬರಾದಿಲ್ಲ ಅಂತಾ ಕಾಣ್ತದೆ."

ಆ ದಿನ ಕತ್ತಲೆಯಾದ ಮೇಲೆ ಕೆಳಕಾನೂರಿನಿಂದ ಸಾಮಾನು ಸರಕು ದನ ಕರುಗಳನ್ನು ಸೀತೆಮನೆಗೆ ಸಾಗಿಸಬೇಕೆಂದಿದ್ದ ಓಬಯ್ಯ "ಅದೆಲ್ಲಿ? ಆಗದ ಹೋಗದ ಮಾತು—ಸುಮ್ಮನೆ ಕೋವಿ ಕಟ್ಟಿದ್ರೆ ಸಾಕು; ಬೆಳಗಾಗಬೇಕಾದ್ರೆ ಲೌಡಿ ಹಲ್ ಚಿಲ್ದ್ ಹೋಗಿರ್ತ್ತಾಳೆ!" ಎಂದನು.

ಕೃಷ್ಣಪ್ಪನಿಗೆ ಮತ್ತೆ ಮುನಿಸಾಗಿ "ನಿಮಗೆಲ್ಲ ಮೈಗಳ್ಳತನ! ಉಂಡ್ರಿ, ಮಲಗಿದ್ರಿ! ನಿಮಗೆ ಬರೋಕೆ ಆಗೋದಿಲ್ಲೇನು ಹೇಳಿ, ನಾನೊಬ್ಬನೇ ಬರ್ತೀನಿ. ಕತ್ತಲಾದ್ರೇನಂತೆ? ಹಾಂಗಾದ್ರೇನು ತಿಂಗಳ ಬೆಳಕು ಸ್ವಲ್ಪವೂ ಬರೋದಿಲ್ಲೇನು? ಒಂದು ವೇಳೆ ಕತ್ತಲೇನೆ ಆದ್ರೂ, ಹುಲೀಗೆ ಹೊಡೆಯೋಕೆ ಏನು ತೊಂದ್ರೆ? ಹೋದ್ವರ್ಷ ನಾನು ನಮ್ಮ ತೋಟದ ಮೇಲ್ಗಡೆ ಕಾಡಿನಲ್ಲಿ ಒಂದು ಚಿರತೆ ಹೊಡೆದಾಗ ಬೆಳ್ದಿಂಗಳಿತ್ತೇನು? ಕದ್ದಿಂಗಳಾಗಿತ್ತು. ಕತ್ತಲೇಲಿ ಅದರ ಕಣ್ಣೇನು ಪಳಗುಡೀತ ಹೊಳೀತಿತ್ತು. ಅದನ್ನೇ ನೋಡಿ ಗುರಿ ಹೊಡೆದಿದ್ದೆ. ಗುಂಡು ಸಮಾ ತಲೀಗೆ ಬಿದ್ದಿತ್ತು" ಎಂದು ಮರಗತ್ತಲೆಯಲ್ಲಿಯೂ ಕೂಡ ಹುಲಿಯನ್ನು

ಹೊಡೆಯಲು ಸಾಧ್ಯವೆಂಬುದನ್ನು ಹೇಳಿದಮೇಲೆ ಜಾಕಿ ಮರಸು ಕೂರಲು ಬೇಕಾಗಿದ್ದ ಅಟ್ಟಣೆಗಳನ್ನು ಕಟ್ಟುವ ಮಾತೆತ್ತಿದನು.

ಓಬಯ್ಯ "ಇವತ್ತು ರಾತ್ರಿ ಗಾಡಿ ಮೇಲೆ ಕೆಳಕಾನೂರಿಂದ ಸಾಮಾನು ಸಾಗಿಸೋಕೆ ಹೇಳಿದ್ರು ಸಿಂಗಪ್ಪಗೌಡ್ರು. ಆಮೇಲೆ ಬಂದು ಮರಸುಕೂರೋಕೆ ಆಗ್ತದೇನು?" ಎಂದು ಕೃಷ್ಣಪ್ಪನ ಕಡೆಗೆ ನೋಡಿದನು.

"ಆಗೊಳ್ರಪ್ಪಾ! ಇದೊಂದು ಬೇರೆ ಇದೆಯಲ್ಲಾ!" ಎಂದನು ಜಾಕಿ.

"ಹಾಳಾಗಿ ಹೋಗ್ಲಿ!—ಮತ್ತೇನ್ಮಾಡಾನ ಹೇಳಿ?" ಎಂದನು ಕೃಷ್ಣಪ್ಪ.

ಓಬಯ್ಯ "ಕೋವಿ ಕಟ್ಟಿದರೆ ಏನಾಗ್ತದೆ?" ಎಂದನು.

ಕೃಷ್ಣಪ್ಪ "ಆಗೋದೇನೂ..." ಎಂದು ಅರ್ಧದಲ್ಲಿಯೆ ಅಸಮಾಧಾನ ದಿಂದ ನಿಲ್ಲಿಸಿದನು.

ಜಾಕಿ "ಎರಡುಮೂರು ಕಡೆ ಕೋವಿ ಕಟ್ಟಾನ. ಒಂದಕ್ಕೆ ತಪ್ಪಿಸಿಕೊಂಡ್ರೆ ಮತ್ತೊಂದಕ್ಕೆ ನುಗ್ಗಲಿ!"

ಕಡೆಗೂ ಮರಗಳ ಮೇಲೆ ಅಟ್ಟಣೆ ಕಟ್ಟಿ ರಾತ್ರಿ ಮರಸುಕೂರುವ ಆಲೋಚನೆ ಯನ್ನು ತ್ಯಜಿಸಿ, ಮೂವರೂ ಮನೆಗೆ ಹಿಂತಿರುಗಿ ಬಂದರು. ಮಧ್ಯಾಹ್ನ ಮೂರು ಗಂಟೆಯ ಹೊತ್ತಿಗೆ ಪಶುಶವವಿದ್ದ ಜಾಗಕ್ಕೆ ಹೋಗಿ ಕೋವಿ ಕಟ್ಟಿದರು.

* * * *

ಸಾಯಂಕಾಲ ಕತ್ತಲಾಗುತ್ತಿದ್ದಾಗ ಎತ್ತಿನ ಗಾಡಿಯೊಂದು ಸೀತೆಮನೆಯಿಂದ ಹೊರಟು ಕೆಳಕಾನೂರಿಗೆ ಹೋಗುವ ಹೆದ್ದಾರಿಯಲ್ಲಿ ಹೋಗುತ್ತಿತ್ತು. ಚಕ್ರಗಳು ಉರುಳುವ ಸದ್ದಲ್ಲದೆ ಬೇರೆ ಸದ್ದಿರಲಿಲ್ಲ. ಎತ್ತುಗಳ ಕೊರಳಲ್ಲಿ ಗಂಟೆಯ ಸರಗಳಿರಲಿಲ್ಲ. ಗಾಡಿ ಹೊಡೆಯುವವನು ಶಬ್ದವಾಗಬಾರದೆಂದು ಪ್ರಯತ್ನ ಪೂರ್ವಕವಾಗಿಯೆ ಅವುಗಳನ್ನು ಬಿಚ್ಚಿ ಮನೆಯಲ್ಲಿಟ್ಟಿದ್ದನು. ಕೀಲುಗಳು ಹೆಚ್ಚು ಸದ್ದಾಗಬಾರದೆಂದು ಬೇಕಾದಷ್ಟು ಗಾಡಿಯೆಣ್ಣೆ ಹಾಕಿದ್ದನು.

ಸ್ವಲ್ಪಹೊತ್ತಿನಲ್ಲಿಯೆ ಹಿಂದಿನಿಂದ ಮತ್ತೆ ಮೂವರು ಬಂದು ಗಾಡಿ ಹತ್ತಿದರು. ಎಲ್ಲರೂ ತಮ್ಮ ತಮ್ಮೊಳಗೆ ಪಿಸುಮಾತಾಡಿಕೊಳ್ಳುತ್ತಿದ್ದರು. ಆ ಕಾಡು ರಸ್ತೆಯಲ್ಲಿ ಅವರ ಮಾತುಗಳನ್ನು ಆಲಿಸಲು ಬೇರೆ ಯಾರೂ ಇರದಿದ್ದರೂ ಅವರು ಗುಟ್ಟಾಗಿ ಮಾತಾಡಿಕೊಳ್ಳುತ್ತಿದ್ದುದನ್ನು ನೋಡಿದರೆ ಯಾವುದೋ ಕಳ್ಳ ಕೆಲಸಕ್ಕೆ ಹೊರಟಿದ್ದಾರೆಂದು ಗೊತ್ತಾಗುತ್ತಿತ್ತು.

ಗಾಡಿ ನೆಟ್ಟಗೆ ನಡೆದು ಕೆಳಕಾನೂರು ಅಣ್ಣಯ್ಯಗೌಡರ ಹುಲ್ಲುಮನೆಯ ಅಂಗಳದಲ್ಲಿ ನಿಂತಿತು. ಓಬಯ್ಯ ಕೆಳಗೆ ನೆಗೆದು ಪಿಸುದನಿಯಲ್ಲಿ "ಕೃಷ್ಣಪ್ಪ ಗೌಡ್ರೇ, ಒಳಗೆ ಬನ್ನಿ" ಎಂದನು. ಕೃಷ್ಣಪ್ಪನೂ ಗಾಡಿಯಿಂದಿಳಿದು ಓಬಯ್ಯ

ನೊಡನೆ ಒಳಗೆ ಹೋದನು. ಗಾಡಿಯವನು ಎತ್ತುಗಳ ಕೊರಳು ಬಿಚ್ಚಿ ಮೂಕಿಯನ್ನು ನೆಲಕ್ಕಿಟ್ಟಮೇಲೆ ಜಾಕಿ ಅವನನ್ನು ಕುರಿತು "ಚಂದ್ರೇಗೌಡರ ಮನೆ ಇಲ್ಲಿಗೆ ಎಷ್ಟು ದೂರ ಆಗ್ತದೋ?" ಎಂದು ಕೇಳಿದನು.

ಗಾಡಿ ಹೊಡೆಯುವವನು "ಹೆಚ್ಚಿಲ್ಲ, ಒಂದು ಅಡಿಕೆ ಅಗಿಯೋ ಅಷ್ಟುದೂರ ಇರಬೈದು" ಎಂದು ಎತ್ತುಗಳಿಗೆ ಗಾಡಿಯಲ್ಲಿದ್ದ ಒಣಗಿದ್ದ ನೆಲ್ಲು ಹುಲ್ಲನ್ನು ಹಾಕಿದನು. ಅವು ಸಶಬ್ದವಾಗಿ ಅದನ್ನು ಮೇಯತೊಡಗಿದವು.

ಅಣ್ಣಯ್ಯಗೌಡರು ಹೊರಗೆ ಬಂದು ಕರೆಯಲು ಗಾಡಿ ಹೊಡೆಯುವವನೂ ಜಾಕಿಯೂ ಅವರ ಹಿಂದೆ ಹೋದರು. ಜಗಲಿಯಲ್ಲಿ ಒಂದು ಹರಳೆಣ್ಣೆಯ ಹಣತೆಯ ಬೆಳಕಿನಲ್ಲಿ ಓಬಯ್ಯ ಕೃಷ್ಣಪ್ಪನಿಗೆ ಕಳ್ಳು ಬೊಗ್ಗಿಸುತ್ತ ಉಪಚಾರ ಮಾಡುತ್ತಿದ್ದನು. ಉಳಿದವರು ಅಲ್ಲಿಗೆ ಬರಲು ಅವರಿಗೂ ನೀಡಿದನು. ಎಲ್ಲರೂ ಚೆನ್ನಾಗಿ ಹೀರಿದರು.

ಮೊದಲು ಮೆಲ್ಲಗೆ ಪಿಸುಮಾತಾಡುತ್ತಿದ್ದವರು ಕ್ರಮೇಣ ಸ್ವಲ್ಪ ಗಟ್ಟಿಯಾಗಿ ಮಾತಾಡತೊಡಗಿದರು. ಕಡೆಕಡೆಗೆ ಗಟ್ಟಿಯಾಗಿ ನಗಲೂ ಆರಂಭಿಸಿದರು. ಇನ್ನೂ ಹೆಚ್ಚಾಗಿ ಕಳ್ಳು ಕುಡಿಯಲು ಬಿಟ್ಟರೆ ಆ ದಿನದ ಕೆಲಸ ಕೆಡುವುದೆಂದು ತಿಳಿದ ಅಣ್ಣಯ್ಯಗೌಡರು ತಮ್ಮ ಮಗಳನ್ನು ಕರೆದು ಕಳ್ಳಿನ ಕೊಡವನ್ನು ಒಳಗೊಯ್ಯುವಂತೆ ಹೇಳಿದರು. ಆದರೆ ಜಾಕಿ ಹುಚ್ಚನಂತೆ ನಗುತ್ತ "ಬಾಳ ಲಾಯ್ಕಾಗಿದೆ ಕಣ್ರೋ ಕಳ್ಳು! ಇನ್ನೊಂಡೀಟು ಕೊಡಿ! ರಾತ್ರೆಲ್ಲಾ ನಿದ್ದೆಗೆಡ್ಬೇಕಲ್ಲಾ!" ಎಂದು ಕೊಡಕ್ಕೆ ಕೈಹಾಕಿ ಕಸಿದುಕೊಂಡು ಬೊಗಸಿ ಬೊಗಸಿ ಕುಡಿಯತೊಡಗಿದನು.

ಕಳ್ಳಿನ ಕೊಡದ ತಳಭಾಗದ ಕಡೆಯಹನಿ ಮುಗಿಯುವವರೆಗೂ ಜಾಕಿ ಮೇಲೇಳಲಿಲ್ಲ. ತರುವಾಯ ಮೇಲೆದ್ದು ತೂರಾಡುತ್ತ ಗಾಡಿಗೆ ಸರಕು ಸಾಮಾನು ತುಂಬುತ್ತಿದ್ದ ಇತರರಿಗೆ ನೆರವಾದನು. ಅನೇಕಸಾರಿ ಅವನ ಸಹಾಯ ಅಡಚಣೆಯಾಗಿ ಪರಿಣಮಿಸುತ್ತಿತ್ತು.

ಗಾಡಿಗೆ ಸಾಮಾನು ಭರ್ತಿಯಾದಮೇಲೆ ಅಣ್ಣಯ್ಯಗೌಡರು ಎಲೆಯಡಕೆ ಅಗಿಯುತ್ತಾ ಅದರ ರಸ ಕೆಳಗೆ ಬೀಳದಂತೆ ಮುಖವನ್ನು ಸ್ವಲ್ಪ ಮೇಲಕ್ಕೆ ನೆಗಹಿ, "ಣೀವು ಉಂಡಾರಿ ಹೋಗ್ಬಣ್ಣಿ, ಮಟ್ಟೊಂಡಾರಿಗೆ ಸಾಮಾಣೆಲ್ಲ ಮುಗಿಟಡೆ. ಆಮೇಳೆ ಜಾಣುವಾರು ಹೊಡಕೊಂಡ್ಹೋಗ್ಬೈಟ್ಲಡು" ಎಂದರು.

ಅಂಗಳದಲ್ಲಿ ಕಂಬಳಿಯ ಮೇಲೆ ಕುಳಿತು ಆಕಾಶ ನೋಡುತ್ತಿದ್ದ ಜಾಕಿ "ತಿ... ತಿ... ತಿಂಗಳ ಬೆಣಕು ಏನು ಪಸಂದಾಗಿದೆ" ಎಂದು ಮೊದಲೇ ತುಟಿ ಮೀರಿ ಕೋರೆದಾಡೆಗಳಂತಿದ್ದ ಹಲ್ಲುಗಳನ್ನು ಮತ್ತಷ್ಟು ಪ್ರದರ್ಶಿಸಿ ನಗತೊಡಗಿದನು.

"ಗಾಡಿ ಹಿಂದಕ್ಕೆ ಒಂದೆರಡ್ಮೂರು ಜಾನ್ವಾರು ಕಟ್ಟಿಬಿಡಾನ ಈಗ್ಲೆ. ಈಗ್ಲೆ ಹೋದಷ್ಟು ಹೋಗ್ಲಿ. ಆಮೇಲೆ ಸುಲಭಾಗ್ತದೆ" ಎಂದನು ಕೃಷ್ಣಪ್ಪ.

"ಹೌದಪ್ಪಯ್ಯಾ, ಅದೂ ಒಂದು ಹುನಾರೇ!" ಎಂದು ಓಬಯ್ಯ ಕೊಟ್ಟಿಗೆಗೆ ಹೋಗಿ ಮೂರು ದನಗಳನ್ನು ತಂದು ಅವುಗಳ ಕೊರಳ ಕಣ್ಣಿಗಳನ್ನು ಉದ್ದಮಾಡಿ ಗಾಡಿಯ ಗೂಟಕ್ಕೆ ಕಟ್ಟಿದನು.

ಗಾಡಿ ಸೀತೆಮನೆಯ ಕಡೆಗೆ ಹೊರಟಿತು. ಪರ್ವತ ಕಂದರ ಕಾನನಗಳೆಲ್ಲ ಬೆಳ್ದಿಂಗಳಲ್ಲಿ ಮಿಂದು ಮೂರ್ಛೆಹೋದಂತೆಯೋ ಅಥವಾ ಆನಂದ ಸಮಾಧಿ ಮಗ್ನವಾದಂತೆಯೋ ಮೌನವಾಗಿದ್ದುವು. ತೇನೆ ಹಕ್ಕಿಗಳ ಉಲಿಯೂ ಕಾನೂರಿನ ನಾಯಿಗಳ ಕೂಗಾಟವನ್ನು ಕೇಳಿ ಆಗಾಗ ಪ್ರತ್ಯುತ್ತರವಾಗಿ ಕೂಗುತ್ತಿದ್ದ ಅಣ್ಣಯ್ಯಗೌಡರ ಕಂತ್ರಿನಾಯಿಯ ಬೊಗಳುವಿಕೆಯೂ ಗಾಡಿಯ ಹಿಂದೆ ಹೋಗುತ್ತಿದ್ದ ಕೃಷ್ಣಪ್ಪ ಓಬಯ್ಯ ಜಾಕಿಯರಿಗೆ ತಮ್ಮ ದಿಗ್ವಿಜಯದ ಜಯಧ್ವನಿಯಂತೆ ಕೇಳಿಸುತ್ತಿದ್ದುವು. ಸ್ವಲ್ಪ ಹೊತ್ತಿನಲ್ಲಿ ಗಾಡಿಯೂ ಗಾಡಿಯ ಸದ್ದೂ ಕಾನನಾಂತರದಲ್ಲಿ ಮರೆಯಾದುವು.

ಆದರೂ ಅಣ್ಣಯ್ಯಗೌಡರ ಕಂತ್ರಿನಾಯಿ ಬೊಗಳುವುದನ್ನು ಬಿಡಲಿಲ್ಲ. ಅಣ್ಣಯ್ಯಗೌಡರು ಆಲಿಸುತ್ತಾರೆ: ಕಾನೂರಿನಲ್ಲಿ ನಾಯಿಗಳ ಬೊಬ್ಬೆ ಎದ್ದಿದೆ! ಚೆನ್ನಾಗಿ ಕೇಳಿಸುತ್ತಿದೆ!

ಅದೇ ಸಮಯದಲ್ಲಿ ಅಣ್ಣಯ್ಯಗೌಡರು ಕಾನೂರಿಗೆ ಹೋಗಿ ನೋಡಿದ್ದರೆ ವಿಸ್ಮಿತರಾಗುತ್ತಿದ್ದರು: ಚಂದ್ರಯ್ಯಗೌಡರು, ರಾಮಯ್ಯ, ಪುಟ್ಟಣ್ಣ, ಸೇರೆಗಾರರು, ಹಳೇಪೈಕದ ತಿಮ್ಮ, ಬೈರ, ಸಿದ್ದ ಮೊದಲಾದ ಬೇಲರು, ಸೋಮನೇ ಮೊದಲಾದ ಗಟ್ಟದಾಳುಗಳು ಎಲ್ಲರೂ ದಂಡು ಕಟ್ಟಿಕೊಂಡು ಅದೆಲ್ಲಿಗೋ ಹೊರಡಲು ಸಿದ್ಧರಾಗಿದ್ದಾರೆ! ಅವರ ಜೊತೆಯಲ್ಲಿ ಕಾಡಿನ ಇಲಾಖೆಯ ಅಧಿಕಾರಿಯಾದ 'ಗಾರ್ಡ'ನೂ ಇದ್ದಾನೆ! ಬೆಳ್ದಿಂಗಳಲ್ಲಿ ಬೇಟೆಗೆ ಹೊರಟಿದ್ದಾರೆಯೇ ಎಂದರೆ ಹಾಗೆ ತೋರುವುದಿಲ್ಲ. ಏಕೆಂದರೆ ಪ್ರಯತ್ನಪೂರ್ವಕವಾಗಿ ನಾಯಿಗಳು ತಮ್ಮೊಡನೆ ಬರದಂತೆ ಅಟ್ಟುತ್ತಿದ್ದಾರೆ. ಚಂದ್ರಯ್ಯಗೌಡರು ಗಾಡಿನಿಂಗನಿಗೆ "ನಾಯಿನೆಲ್ಲ ಒಳಗೆ ಕೂಡೋ ಇವತ್ತು" ಎಂದು ಅಪ್ಪಣೆ ಮಾಡುತ್ತಿದ್ದಾರೆ. ಪುಟ್ಟನೂ ವಾಸುವೂ ಗಲಭೆಮಾಡುತ್ತಿದ್ದ ನಾಯಿಗಳಿಗೆ ಹಗ್ಗ ಸರಪಣಿಗಳನ್ನು ಹಾಕಿ ಕಟ್ಟಿ, ಕಂಬಗಳಿಗೆ ಬಿಗಿಯುತ್ತಿದ್ದಾರೆ! ಕೆಲವರು ಉದ್ದವಾದ ಕಬ್ಬಿಣದ ಹಾರೆಗೋಲುಗಳನ್ನೂ ಮತ್ತೆ ಕೆಲವರು ಗುದ್ದಲಿಗಳನ್ನೂ ಹೊತ್ತುಕೊಂಡಿದ್ದಾರೆ. ಪುಟ್ಟಣ್ಣನೊಬ್ಬನ ಕೈಯಲ್ಲಿ ಮಾತ್ರ ಒಂದು ಜೋಡು ನಳಿಗೆಯ ತೋಟಾಕೋವಿಯಿದೆ!

ಸಿಂಗಪ್ಪಗೌಡರು ಲೈಸನ್ಸಿಲ್ಲದೆ ತಾವು ಕಡಿಸಿದ್ದ ಕಳ್ಳನಾಟಾಗಳನ್ನು ಚಂದ್ರಯ್ಯ ಗೌಡರು ತಮ್ಮ ಮೇಲೆ ಫಿರ್ಯಾದು ಮಾಡಿಯಾರು ಎಂಬ ಭೀತಿಯಿಂದಲೂ ದೂರದರ್ಶಿತೆಯಿಂದಲೂ ತಮ್ಮ ಗದ್ದೆಯಂಚಿನಲ್ಲಿ ಮನೆಯಿಂದ ದೂರವಾಗಿ ಹರಿಯುತ್ತಿದ್ದ ಒಂದು ತೊರೆಯ ಉಸುಬಿನಲ್ಲಿ ಹೂಳಿಸಿಟ್ಟಿದ್ದರು. ಆದ್ದರಿಂದಲೆ ಚಂದ್ರಯ್ಯಗೌಡರು ಕೊಟ್ಟಿದ್ದ ಅರ್ಜಿಯ ಪ್ರಕಾರ ತೀರ್ಥಹಳ್ಳಿಯ ಫಾರೆಸ್ಟ್ ರೇಂಜರು ಒಬ್ಬ 'ಗಾರ್ಡ್'ನನ್ನು ಸೀತೆಮನೆಗೆ ಅಜಮಾಯಿಸಿಮಾಡಲು ಕಳುಹಿದಾಗ ಅವನಿಗೆ ಕಳ್ಳನಾಟಾಗಳ ಯಾವ ಕುರುಹೂ ದೊರೆತಿರಲಿಲ್ಲ. 'ಗಾರ್ಡ'ನು ಚಂದ್ರಯ್ಯಗೌಡರಿಗೆ ಆ ವಿಷಯವನ್ನು ತಿಳಿಸಲು ಅವರು ಕಳ್ಳ ನಾಟಾಗಳನ್ನು ಪತ್ತೆಹಚ್ಚಿಕೊಡುವುದಾಗಿ ಭರವಸೆಯಿತ್ತು ಪುಟ್ಟಣ್ಣನನ್ನು ಬೇಹಿನ ಮೇಲೆ ಕಳುಹಿದರು. ಅವನು ಸುದ್ದಿಗಳಿಗೆಲ್ಲ ಮಾರ್ಕೆಟ್ಟಿನಂತಿದ್ದ ಕಳ್ಳಂಗಡಿಗೆ ಹೋಗಿ, ಅಂಗಡಿಯ ಯಜಮಾನನನ್ನು ಪುಸಲಾಯಿಸಿ ಕೇಳಿದನು. ಕಳ್ಳಂಗಡಿ ಯವನಿಗೆ ಓಬಯ್ಯನ ಮೇಲೆ ಮೊದಲೇ ಸಿಟ್ಟಿತ್ತು. ಅದೂ ಅಲ್ಲದೆ ಚಂದ್ರಯ್ಯ ಗೌಡರಿಂದ ಓಬಯ್ಯ ತನಗೆ ಕೊಡಬೇಕಾಗಿದ್ದ ಹಣವೂ ಲಭಿಸಬಹುದೆಂಬ ಆಸೆಯೂ ಇತ್ತು. ಏಕೆಂದರೆ ಓಬಯ್ಯ ಅವರ ಒಕ್ಕಲಲ್ಲವೆ ? ಅಂಗಡಿಯವನು ತನಗೆ ತಿಳಿದುಬಂದಿದ್ದ ಸಂಗತಿಗಳನ್ನೆಲ್ಲ ಹೇಳಿದನು. ಆದರೆ ನಾಟಾಗಳನ್ನು ಯಾವ ಸ್ಥಳ ಗಳಲ್ಲಿ ಹೂಳಿಟ್ಟಿದ್ದಾರೆ ಎಂಬುದು ನಿಷ್ಕೃಷ್ಟವಾಗಿ ಗೊತ್ತಾಗಲಿಲ್ಲ. ಅಂತೂ ಹಳ್ಳದ ಕೆಸರಿನಲ್ಲಿ ಹೂತಿಟ್ಟಿದ್ದಾರೆ ಎಂಬುದೇನೊ ಗೊತ್ತಾಯಿತು. ಅದನ್ನೇ ಪತ್ತೆಹಚ್ಚಲು ಚಂದ್ರಯ್ಯಗೌಡರು ಆ ದಿನ ರಾತ್ರಿ ಪರಿವಾರಸಮೇತರಾಗಿ ಗುಟ್ಟಾಗಿ ಹೊರಟಿದ್ದರು.

ಚಂದ್ರಯ್ಯಗೌಡರೂ ಅವರ ಪರಿವಾರವೂ ಸೀತೆಮನೆಗೆ ಹೋಗುವ ರಸ್ತೆ ಯಲ್ಲಿ ಸ್ವಲ್ಪ ದೂರ ನಡೆದಿರಲು ಮುಂದೆ ಯಾವನೋ ಒಬ್ಬ ವ್ಯಕ್ತಿ ದಾರಿಯ ಒಂದು ಪಕ್ಕದಿಂದ ಮತ್ತೊಂದು ಪಕ್ಕಕ್ಕೆ ಸರ್ಪಗಮನದಂತೆ ವಕ್ರವಾಗಿ ತೂರಾಡಿ ನಡೆಯುತ್ತಿದ್ದುದು ಕಣ್ಣಿಗೆ ಬಿತ್ತು. ಚಂದ್ರನ ಬೆಳಕು ಉಜ್ವಲವಾಗಿದ್ದು, ಕೆಂಪು ಹೆದ್ದಾರಿಯ ಮೇಲೆ ಮಸಿ ಚೆಲ್ಲಿದಂತೆ ಅಲ್ಲಲ್ಲಿ ಬಿದ್ದಿದ್ದ ಮರಗಳ ನೆಳಲಿನಲ್ಲಿ ಆ ಮನುಷ್ಯ ವ್ಯಕ್ತಿಯ ವಿಚಿತ್ರಕರ್ಮ ಪೈಶಾಚಿಕವಾಗಿತ್ತು. ಡೊಳ್ಳು ಹೊಟ್ಟೆ ಯನ್ನು ಹೊತ್ತುಕೊಂಡು ಎಲ್ಲರಿಗಿಂತಲೂ ಹಿಂದೆ ಬರುತ್ತಿದ್ದ ಸೋಮನಿಗೆ ಅದನ್ನು ಕಂಡು ಮೈ ಜುಮ್ಮೆಂದಿತು.

ಎಲ್ಲರಿಗಿಂತಲೂ ಮುಂದಾಗಿ ಕೋವಿಯನ್ನು ಹೆಗಲ ಮೇಲೆ ಹೊತ್ತು ನಡೆಯು ತ್ತಿದ್ದ ಪುಟ್ಟಣ್ಣ "ಯಾರದು ?" ಎಂದು ಕೂಗಿದನು. ಉತ್ತರ ಬರಲಿಲ್ಲ.

ಪುಟ್ಟಣ್ಣ ಮತ್ತೆ ಕೂಗಲು "ನಿ-ನ್ನ-ಪ್ಪ !" ಎಂದು ಉತ್ತರಕೊಟ್ಟ ಆ ವ್ಯಕ್ತಿ, ಹಿಂತಿರುಗಿ ಕೂಡ ನೋಡದೆ, ತತ್ತರಿಸುತ್ತ ನಡೆಯತೊಡಗಿತ್ತು.

ಪುಟ್ಟಣ್ಣ ಬೇಗಬೇಗನೆ ಬಳಿಸಾರಿ "ಯಾರೋ ಅದು? ನಿಲ್ಲೋ!" ಎಂದು ಅಪ್ಪಣೆ ಮಾಡಿದನು.

ಆ ವ್ಯಕ್ತಿ ತೊದಲುತೊದಲಾಗಿ "ನಿನ್ನ ಹೆಡ್ತಿ ಮಿಂಡ ಕಣೋ!" ಎಂದು ಹಿಂತಿರುಗಿ ನಿಲ್ಲಲು ಪ್ರಯತ್ನಿಸಿ, ನಿಲ್ಲಲಾರದೆ ತೂರಾಡುತ್ತಿದ್ದನು. ಪುಟ್ಟಣ್ಣ ಕೋಪದಿಂದ ಬಳಿಗೆ ಹೋಗಿ ನೋಡುತ್ತಾನೆ: ಸೀತೆಮನೆ ಸಿಂಗಪ್ಪಗೌಡರ ಧೂರ್ತ ಸೇವಕ ಜಾಕಿ! ತನ್ನ ನಚ್ಚಿನ ನಾಯಿಯಾಗಿದ್ದ ಟೈಗರನ್ನು ಖೂನಿ ಮಾಡಿದ ರಾಕ್ಷಸ! ಪುಟ್ಟಣ್ಣನಿಗೆ ಮದುವೆಯಾಗಿರಲಿಲ್ಲ. ಆದರೂ "ನಿನ್ನ ಹೆಡ್ತಿ ಮಿಂಡ ಕಣೋ!" ಎಂದ ಜಾಕಿಯ ಮೂಗಿಗೆ ಸರಿಯಾಗಿ ಬಲಗೈ ಮುಷ್ಟಿಯಿಂದ ಧಿಡ್ಡನೆ ಗುದ್ದಿದನು. ಕುಡಿದು ಹಣ್ಣುಹಣ್ಣಾಗಿದ್ದ ಜಾಕಿ ವಿಕಾರ ವಾಗಿ ಕೂಗಿಕೊಂಡು ನೆಲಕ್ಕುರುಳಿದನು. ಆ ಕೂಗನ್ನು ಕೇಳಿ ಮುಂದೆ ತುಸು ದೂರದಲ್ಲಿ ಗಾಡಿಯ ಹಿಂದೆ ಹೋಗುತ್ತಿದ್ದ ಕೃಷ್ಣಪ್ಪ ಓಬಯ್ಯರು ಏನಾಯಿತೊ ಎಂದು ಬೆದರಿ ಓಡಿಬಂದು ನೋಡುತ್ತಾರೆ: ಜಾಕಿ ಕೆಳಗೆ ಬಿದ್ದಿದ್ದಾನೆ! ಚಂದ್ರಯ್ಯಗೌಡರೂ ಇತರರೂ ಸುತ್ತಲೂ ನಿಂತಿದ್ದಾರೆ!

ಕೃಷ್ಣಪ್ಪನಿಗೆ ಚಂದ್ರಯ್ಯಗೌಡರು ತಮ್ಮ ಜನರೊಡನೆ ಆ ರಾತ್ರಿ ಹೊರಟಿದ್ದ ನಿಜವಾದ ಉದ್ದೇಶ ತಿಳಿಯದೆ ತಮ್ಮ ಒಕ್ಕಲು ಕಳ್ಳತನದಿಂದ ಓಡಿ ಹೋಗುವು ದನ್ನು ತಡೆಯುವ ಸಲುವಾಗಿಯೇ ಬಂದಿದ್ದಾರೆಂದು ಬಗೆದು "ನಿಮ್ಮ ಒಕ್ಕಲು ಅವನಿಷ್ಟದಂತೆ ನಮ್ಮಲ್ಲಿಗೆ ಬಂದರೆ ನಮ್ಮಾಳನ್ನೇಕೆ ನೀವು ಹೊಡೆದಿದ್ದು?" ಎಂದು ಸಿಟ್ಟಿನಿಂದ ನುಡಿದನು.

ಚಂದ್ರಯ್ಯಗೌಡರಿಗಾಗಲಿ ಅವರ ಕಡೆಯ ಇತರರಿಗಾಗಲಿ ಆ ಪ್ರಶ್ನೆ ಅರ್ಥ ವಾಗಲಿಲ್ಲ.

ಪುಟ್ಟಣ್ಣ "ಮತ್ತೆ ಅವನ್ಯಾಕೆ ಕಂಡಾಬಟ್ಟೆ ಬಯ್ಬೇಕು?" ಎಂದು ಮೂದಲಿಸಿದನು.

ಮಾತಿಗೆ ಮಾತು ಆಗುತ್ತಿದ್ದಾಗಲೆ ಜಾಕಿ ಮೇಲೆದ್ದು "ಯಾವ ಸೂಳೇಮಗ ಬರ್‍ತಾನೆ ನೋಡ್ತೀನಿ ನಮ್ಮ ಗೌಡರ ಗಾಡಿ ತಡಿಯೋಕೆ: ಹೆಣ ಉರುಳಿಸಿ ಬಿಡ್ತೀನಿ! ಓಬೇಗೌಡ್ರೇ ನಡೀರ್‍ರಿ" ಎಂದು ಒಂದೇ ಸಮನೆ "ಏ ಸುಕ್ರಾ! ಸುಕ್ರಾ! ಸುಕ್ರಾ!" ಎಂದು ಗಾಡಿಯವನನ್ನು ಕೂಗಿ ಕರೆಯುತ್ತ ರಸ್ತೆಯಲ್ಲಿ ಹುಚ್ಚು ಹಿಡಿದವನಂತೆ ಮುಂದುವರಿದನು. ಅಲ್ಲಿಯೆ ತಳುವಿದರೆ ಗಾಡಿಯಾ ದರೂ ಆದಷ್ಟು ಮುಂದುವರಿಯಲಿ ಎಂದು ಉಪಾಯ ಯೋಚಿಸಿದ ಕೃಷ್ಣಪ್ಪ ಎಷ್ಟು ಕರೆದರೂ ಜಾಕಿ ಸ್ವಲ್ಪವೂ ಕೇಳದೆ "ಏ ಸುಕ್ರಾ! ಸುಕ್ರಾ! ಸುಕ್ರಾ!" ಎಂದು ಗಟ್ಟಿಯಾಗಿ ಒರಲುತ್ತ ಓಡತೊಡಗಿದನು. ಗಾಡಿ ಹೊಡೆಯುತ್ತಿದ್ದ

ಶುಕ್ರನೆಂಬ ಆಳು ಈ ಗಲಭೆಯನ್ನು ಕೇಳಿ ದಿಗ್ಭ್ರಾಂತನಾಗಿ ಗಾಡಿ ನಿಲ್ಲಿಸಿ ನೋಡುತ್ತಿದ್ದಂತೆಯೆ ಜನಗಳ ಗುಂಪು ಕಾಣಿಸಿತು.

ಗಾಡಿಯೊಳಗಿದ್ದ ಸರಕು ಸಾಮಾನುಗಳನ್ನೂ ಗಾಡಿಯ ಹಿಂದೆ ನಡೆಯುತ್ತಿದ್ದ ಜಾನುವಾರುಗಳನ್ನೂ ನೋಡಿದ ಚಂದ್ರಯ್ಯಗೌಡರಿಗೆ ಕೃಷ್ಣಪ್ಪನ ಮಾತಿನ ಅರ್ಥ ಫಕ್ಕನೆ ಸ್ಫುರಿಸಿತು: ಸಿಂಗಪ್ಪಗೌಡರು ತಮ್ಮ ಒಕ್ಕಲನ್ನು ರಾತ್ರಿ ಕಳ್ಳತನದಿಂದ ಹಾರಿಸುತ್ತಿದ್ದಾರೆ!

ಗೌಡರು ಗಾಡಿಯನ್ನು ತಡೆದು ಅದನ್ನು ತಮ್ಮ ಮನೆಯ ಕಡೆಗೆ ತಿರುಗಿಸಿದರು. ಕೃಷ್ಣಪ್ಪ "ನಮ್ಮ ಗಾಡಿ ನಾ ಹೊಡೆಸಿಕೊಂಡು ಹೋಗ್ತೇನೆ. ನಿಮ್ಮ ಒಕ್ಕಲ ಸಾಮಾನು ನೀವು ಬೇಕಾ'ರೆ ತಗೊಂಡು ಹೋಗಿ" ಎಂದನು. ಪರಿವಾರದಿಂದ ಬಲಿಷ್ಠರಾಗಿದ್ದ ಗೌಡರು ಅದನ್ನು ನಿರಾಕರಿಸಿದರು. ಅಷ್ಟೊಂದು ಜನರನ್ನು ಕಂಡು ಜಾಕಿಯೂ ಕೂಡ ಬಾಯಿಮಾಡುತ್ತಿದ್ದನೆ ಹೊರತು ಕೈ ಮಾಡುತ್ತಿರಲಿಲ್ಲ. ಕೃಷ್ಣಪ್ಪ ಮತ್ತೇನನ್ನೂ ಮಾಡಲಾರದೆ ಶುಕ್ರನಿಗೆ "ಸಾಮಾನ್ನೆಲ್ಲ ಅವರ ಮನೇಗೆ ಹಾಕಿ ಗಾಡಿ ಹೊಡ್ಕೊಂಡು ಬಾರೊ" ಎಂದು ಹೇಳಿ ಜಾಕಿಯೊಡನೆ ಸೀತೆಮನೆಯ ಕಡೆಗೆ ನಡೆದನು. ಗೌಡರು ಓಬಯ್ಯನನ್ನು ಬಲಾತ್ಕಾರವಾಗಿ ಕಾನೂರಿಗೆ ಕೊಂಡೊಯ್ದರು. ಅಂತೂ ಚಂದ್ರಯ್ಯಗೌಡರೂ ಅವರ ಪರಿವಾರವೂ ಗಾಡಿಯ ಸಂಗಡವೆ ಹಿಂತಿರುಗಿದರು. ಓಬಯ್ಯನೂ ಸೆರೆಯಾಳಾದನು.

ಸ್ವಲ್ಪ ದೂರ ಹಿಂತಿರುಗಿ ಹೋದ ಮೇಲೆ ಚಂದ್ರಯ್ಯಗೌಡರು ಸೇರೆಗಾರರನ್ನೂ ಪುಟ್ಟಣ್ಣನನ್ನೂ ಕರೆದು ಪಿಸುಮಾತಿನಲ್ಲಿ, "ನೀವು ನಾಲ್ಕೈದು ಜನ ಕರಕೊಂಡು ಹೋಗಿ ನಾಟಾ ಪತ್ತೆಮಾಡಿ. ನಾನು ಹೋಗಿ ಅಣ್ಣೇಗೌಡನ ಮನೇ ಸಾಮಾನು ಜಾನುವಾರು ಎಲ್ಲಾ ಬಂದೋಬಸ್ತು ಮಾಡ್ತೀನಿ" ಎಂದರು.

ಪುಟ್ಟಣ್ಣ, ಸೇರೆಗಾರರು ಆಳುಗಳೊಡನೆ ಆ ರಾತ್ರಿ ಎಲ್ಲೆಲ್ಲಿ ಅರಸಿದರೂ ನಾಟಾ ಹೂಳಿಟ್ಟ ಸ್ಥಳ ಗೊತ್ತಾಗಲಿಲ್ಲ. ಗುಮಾನಿ ಬರುವಂತಿದ್ದ ಜಾಗಗಳಲ್ಲೆಲ್ಲ ಹಾರೆಗೋಲುಗಳಿಂದ ತೂತು ಹೊಡೆದು ನೋಡಿದರು. ಆದರೆ ಕಲ್ಲು ಮಣ್ಣು ಕೆಸರು ವಿನಾ ನಾಟಾದ ಕುರುಹು ಕೂಡಾ ದೊರೆಯಲಿಲ್ಲ.

ಮರುದಿನ ಬೆಳಿಗ್ಗೆ 'ಗಾರ್ಡ'ನು ಪೆಚ್ಚುಮೋರೆ ಹಾಕಿಕೊಂಡು ತೀರ್ಥಹಳ್ಳಿಗೆ ಹೋದನು.

ಆ ದಿನವೆ ಚಂದ್ರಯ್ಯಗೌಡರು ಕೆಳಕಾನೂರು ಅಣ್ಣಯ್ಯಗೌಡರ ಪಾತ್ರೆ ಪರಟಿ ಸರಕು ಸಾಮಾನು ದನಕರು ಜಾನುವಾರುಗಳನ್ನೆಲ್ಲ ತಮ್ಮ ಸಾಲಕ್ಕೆ ಮುಟ್ಟುಗೋಲು ಹಾಕಿಕೊಂಡು, ಅಣ್ಣಯ್ಯಗೌಡರನ್ನು ಅವರ ಮಗ ಮತ್ತು ಮಗಳು

ಸಮೇತವಾಗಿ ಊರಿನಿಂದ ಹೊರಡಿಸಿದರು. ಅವರ ಕೋಳಿಗಳನ್ನು ಕೂಡ ಅವರಿಗೆ ಬಿಡಲಿಲ್ಲ. ಅವರಿಗೆ ಉಳಿದುದೆಂದರೆ ಕರಿಯ ಬಣ್ಣದ ಕುರೂಪಿಯಾದ ಅವರ ಕಂತ್ರಿ ನಾಯಿ.

## ೩೪

## ಆ ಹುಲಿ

ಚಂದ್ರಯ್ಯಗೌಡರು ಸಾಮಾನು ಸಮೇತ ಗಾಡಿಯನ್ನು ಹಿಂದಕ್ಕೆ ಹೊಡೆಯಿಸಿ ಕೊಂಡು ಹೋದಮೇಲೆ ಕೃಷ್ಣಪ್ಪನು, ದಿಕ್ಕುದಿಕ್ಕಿಗೆ ಕೈಕಾಲು ಬೀಸಿ ಬಾಯಿಗೆ ಬಂದಂತೆ ಒದರುತ್ತಿದ್ದ ಜಾಕಿಯನ್ನು ಬಹುಪ್ರಯಾಸದಿಂದ ಸೀತೆಮನೆಗೆ ನಡೆಸಿ ಕೊಂಡು ಹೋದನು. ಮನೆಯಲ್ಲಿ ಎಲ್ಲರೂ ಮಲಗಿದ್ದರು. ಬೊಗಳುತ್ತಿದ್ದ ನಾಯಿಗಳನ್ನು ಗದರಿಸಿ ಸುಮ್ಮನಿರಿಸಿ, ಮಲಗಲೆಂದು ಜಗುಲಿಯ ಮೇಲೆ ಹಾಸಗೆ ಹಾಸುತ್ತಿದ್ದಾಗ 'ಢಾಂ' ಎಂದು ಒಂದು ಕೋವಿಯ ಈಡು ಮೊಳಗಿ ಕೇಳಿಸಿತು. ಕೃಷ್ಣಪ್ಪನ ಹೃದಯದಲ್ಲಿ ನೆತ್ತರು ಬಿಸಿಬಿಸಿಯಾಗಿ ನುಗ್ಗಿತು. ಅಷ್ಟರಲ್ಲಿಯೆ ಕಾಡಿನಿಂದ ರಾತ್ರಿಯ ನಿಶ್ಶಬ್ದತೆಯನ್ನು ಕಡೆಯುವಂತೆ ಹೆಬ್ಬುಲಿಯ ಅಬ್ಬರವೂ ಕೇಳಿಸಿತು. ಮನೆಯ ನಾಯಿಗಳೆಲ್ಲ ಒಡನೆಯೆ ರೌರವವಾಗಿ ಬೊಗಳ ತೊಡಗಿದುವು. ತಾವು ಕೋವಿ ಕಟ್ಟಿದ್ದು ಸಾರ್ಥಕವಾಯಿತೆಂದು ಕೃಷ್ಣಪ್ಪ ಹಿಗ್ಗಿ ಬೆಳಗಾಗುವುದನ್ನೆ ಕಾತರನಾಗಿ ಕಾಯುತ್ತ ಮಲಗಿ ನಿದ್ದೆಹೋದನು.

ನಿದ್ದೆಯಲ್ಲಿ ನೂರಾರು ಕನಸುಗಳು. ಕೆಲವು ಸವಿಯಾದುವು; ಮತ್ತೆ ಕೆಲವು ಕಹಿಯಾದುವು. ಕೆಲವು ಮನೋಹರವಾದುವು; ಮತ್ತೆ ಕೆಲವು ಭಯಂಕರ ವಾದುವು: ತನಗೆ ಮದುವೆಯಾಗುತ್ತಿದೆ; ಸೀತೆಯ ಕೈಹಿಡಿದಿದ್ದಾನೆ! ಏನು ಸ್ವರ್ಗವೆ ಸೂರೆಯಾದಂತಿದೆ! ಏನು? ಮದುವೆಗೆ ನೆರೆದ ಜನರ ಕೋಲಾ ಹಲ! ಅಲ್ಲ!...ಮದುವೆಗೆ ನೆರೆದ ಜನರ ಕೋಲಾಹಲವಲ್ಲ! ಗಾಯ ಗೊಂಡ ಹೆಬ್ಬುಲಿಯ ಅಬ್ಬರ! ಹುಲಿ ಬಾಯ್ದೆರೆದು ಅಟ್ಟಿಬರುತ್ತಿದೆ! ಸುತ್ತಲೂ ಭಯಂಕರ ಅರಣ್ಯ! ಮದುವೆಯ ಮಂಟಪ ಮಹಾರಣ್ಯವಾಗಿದೆ! ಕೃಷ್ಣಪ್ಪ ಗುಂಡುಹೊಡೆದನು! ಹುಲಿಗೆ ಏಟು ಬಿದ್ದರೂ ಮೈಮೇಲೆ ಹಾರು ತ್ತಿದೆ! ಅಯ್ಯೋ ಹಾರಿತು ಮೈಮೇಲೆ! ಹಾ! ನಖಾಘಾತ! ಕೃಷ್ಣಪ್ಪ ನಿದ್ದೆಯಲ್ಲಿ ನರಳಿ, ದಿಗಿಲುಬಿದ್ದು ಎಚ್ಚತ್ತನು. ಎಲ್ಲ ಮೌನವಾಗಿತ್ತು. ಬೆಳ್ದಿಂಗಳು ಹಾಲು ಚೆಲ್ಲಿದಂತೆ ಹಬ್ಬಿತ್ತು. ಮತ್ತೊಂದು ಪಕ್ಕಕ್ಕೆ ಹೊರಳಿ ಮಲಗಿದನು.

ಮತ್ತೆ ಕನಸುಗಳು: ಸಾಮಾನು ಹೇರಿಕೊಂಡು ಗಾಡಿ ಬರುತ್ತಿದೆ! ಹೂವಯ್ಯ ಜನರೊಡನೆ ಬಂದು ಗಾಡಿಯನ್ನು ತಡೆದಿದ್ದಾನೆ! ಕೃಷ್ಣಪ್ಪನಿಗೂ ಹೂವಯ್ಯನಿಗೂ ಮಾತುಮಾತಾಗಿ ಕೈಕೈಯಾಗುತ್ತಿದೆ! ಸೀತೆ ನಡುವೆ ಬಂದು ಜಗಳವನ್ನು ನಿಲ್ಲಿಸುತ್ತಾಳೆ!... ಆಳುಗಳು ಅಡಕೆಯ ಮರಗಳನ್ನು ಕಡಿಯುತ್ತಿದ್ದಾರೆ. ಒಂದು ಮರ ತನ್ನ ಮೈಮೇಲೆಯೆ ಬೀಳುತ್ತಿದೆ! ಕೃಷ್ಣಪ್ಪ ಓಡಲು ಎಳಸುತ್ತಾನೆ! ಆದರೆ ಆಗುವುದಿಲ್ಲ. ಯಾರೊ ಹಿಡಿದು ಕಟ್ಟಿಹಾಕಿದಂತಿದೆ. ಅಡಕೆಯ ಮರ ಬಿದ್ದೇ ಬಿದ್ದಿತು. ಕೃಷ್ಣಪ್ಪ ಹಾಸಗೆಯಲ್ಲಿ ಕುಮುಟಿಬಿದ್ದು ಕಣ್ದೆರೆದನು. ಎಂತಹ ದಿವ್ಯ ಮೌನದ ಶಾಂತಿ! ಎಂತಹ ಪ್ರಶಾಂತ ನಿಶಾಕಾಂತನ ರಾಮಣೀಯಕ ಕಾಂತಿ!

ಬೆಳಿಗ್ಗೆ ಸಿಂಗಪ್ಪಗೌಡರು ಹಿಂದಿನ ರಾತ್ರಿ ನಡೆದುದನ್ನೆಲ್ಲ ಕೇಳಿ ಕಿಡಿಕಿಡಿಯಾಗಿ ಮಗನನ್ನು ಬಾಯಿಗೆ ಬಂದಂತೆ ಬಯ್ದರು. "ಥೂ, ನಿನ್ನ ಗಂಡಸ್ತನಕ್ಕೆ ಬೆಂಕಿ ಹಾಕ! ಅವರಿಗೆ ಗಾಡಿ ಹೊಡೆಸಿಕೊಂಡು ಹೋಗೋಕೆ ಬಿಟ್ಟೆಯಾ? ಇವನು ಮತ್ತೆ ಮದುವೆಯಾಗೋ ಗಂಡಂತೆ! ನಿನಗ್ಯಾಕೋ ಮದುವೆ? ಹೆಂಗಸಿಗೆ? ಮಾನ ಮರ್ಯಾದೆಯಿಲ್ಲ? ನಾನಾಗಿದ್ದರೆ ಪ್ರಾಣ ಕಳಕೊಳ್ತಿದ್ದೆ! ನಿನಗ್ಯಾರೋ ಹೆಣ್ಣು ಕೊಡ್ತಾರೆ? ನಪುಂಸಕನಿಗೆ? ಕೈಬಳೆ ತೊಟ್ಕೊಂಡು ಸೀರೆ ಉಟ್ಕೊಳ್ಳೊ!..."

ಕೃಷ್ಣಪ್ಪ ತಂದೆಯ ನಿಷ್ಠುರ ವಾಕ್ಯಗಳನ್ನು ತಲೆಬಾಗಿ ಕೇಳಿದನು. ಪ್ರತ್ಯುತ್ತರ ಕೊಡಲಿಲ್ಲ. ಕಣ್ಣೀರೂ ಬಂದಿತು. ಮಾತು ಮಾತಿಗೂ ಮಾನಭಂಗವಾಗಿ ಎದೆ ಹಿಂಡಿದಂತಾಯಿತು. ಮೂಕರೋಷವೇರಿತು. ಅಲ್ಲಿ ನಿಲ್ಲದೆ ಅಡುಗೆ ಮನೆಗೆ ಹೋಗಿ ಅವ್ವನ ಹತ್ತಿರ ಕಾಫಿ ತಿಂಡಿ ಕೊಡುವಂತೆ ಹೇಳಿದನು. ತಾಯಿಯೊಡನೆ ಇನ್ನಾವ ಮಾತುಗಳನ್ನೂ ಆಡಲಿಲ್ಲ.

ತಿಂಡಿ ತಿನ್ನುತ್ತಿದ್ದ ಮಗನ ಮುಂದೆ ತಾಯಿ ಕುಳಿತು ನಾನಾಪ್ರಕಾರವಾಗಿ ಮಾತಾಡಿಸಿದಳು. ಮಗನು ಒಂದು ಮಾತನ್ನೂ ಆಡಲಿಲ್ಲ.

"ಅವರಲ್ಲದೆ ನಿನಗಿನ್ನಾರಪ್ಪಾ ಹೇಳೋರು? ಅದಕ್ಯಾಕೆ ಸಿಟ್ಟುಮಾಡ್ತೀಯ?" ಎಂದಳು ತಾಯಿ.

ಕಾಫಿ ಕುಡಿದು ಹೊರಗೆ ಹೋದ ಕೃಷ್ಣಪ್ಪ ಅಂಗಿ ಟೋಪಿ ಹಾಕಿಕೊಂಡು, ಕೈಲೊಂದು ತೋಟಾಕೋವಿ ಹಿಡಿದು, ಮತ್ತೆ ಅಡುಗೆ ಮನೆಗೆ ಬಂದನು. ಒಲೆಯ ಮೇಲುಗಡೆ ನಾಗಂದಿಗೆಯಲ್ಲಿಟ್ಟಿದ್ದ ತೋಟಾ ಪೆಟ್ಟಿಗೆಯನ್ನು ತೆಗೆದು ಕೆಲವು ತೋಟಾಗಳನ್ನು ಜೇಬಿಗೆ ಇಳಿಬಿಟ್ಟನು!

"ಎತ್ತಲಾಗಿ ಹೊರಟೆಯೋ, ತಮ್ಮಾ?" ಎಂದಳು ತಾಯಿ. ಮಗನು ಮಾತಾಡಲಿಲ್ಲ.

"ನನ್ನತ್ರಾನೂ ನಿಂಗೆ ಸಿಟ್ಟೇನೋ?" ಎಂದ ತಾಯಿಯ ಮರುಕದನಿಯನ್ನು ಕೇಳಿ,

ಕೃಷ್ಣಪ್ಪ "ಎತ್ತಲಾಗಿಲ್ಲವ್ವಾ; ನಿನ್ನೆ ಹುಲೀಗೆ ಕೋವಿ ಕಟ್ಟಿದ್ದೆ; ನೋಡಿಕೊಂಡು ಬರ್ತೀನಿ. ರಾತ್ರೆ ಈಡು ಕೇಳ್ತು" ಎಂದು ತಾಯಿಯ ಮುಖವನ್ನು ನೋಡಿದನು. ಆಕೆಯ ಕಣ್ಣುಗಳಲ್ಲಿ ನೀರೂ ಮುಖದಲ್ಲಿ ಉದ್ವೇಗವೂ ಇದ್ದುವು.

"ನೀ ಒಬ್ಬನೆ ಹೋಗ್ತೀಯೇನೋ?"

"ಇಲ್ಲ; ಜಾಕಿ ಕರಕೊಂಡು ಹೋಗ್ತೀನೀ"

"ಜೋಕೆ ಕಣಪ್ಪಾ! ಹುಲೀ ಸಾವಾಸ ಕೆಟ್ಟದ್ದು!"

ಕೃಷ್ಣಪ್ಪ ಅಡುಗೆಮನೆ ದಾಟುತ್ತಿದ್ದಾಗ ಹೊಸ್ತಿಲು ಎಡವಿದ್ದನ್ನು ನೋಡಿ ತಾಯಿ ಅವನನ್ನು ಮತ್ತೆ ಹಿಂದಕ್ಕೆ ಕರೆದು "ಹುಷಾರ್ ಕಣೋ! ಹುಲಿ ಸಾವಾಸ ಕೆಟ್ಟದ್ದು. ಇನ್ಯಾರನ್ನಾರೂ ಕರಕೊಂಡು ಹೋಗ್ಬಾರ್ದೇನೊ" ಎಂದಳು.

"ನಾವೇನು ಹುಲೀ ಷಿಕಾರಿಗೆ ಹೋಗ್ತೀವೇನವ್ವಾ? ಕೋವಿ ಕಟ್ಟಿದ್ದು ಈಡು ಹಾರ್ತು. ಏನಾಗಿದೆ ನೋಡ್ಕೊಂಡು ಬರ್ತೀವಷ್ಟೆ."

ಸೂರ್ಯ ಆಗತಾನೆ ಬೆಟ್ಟಗಾಡುಗಳ ಮೇಲೆ ತನ್ನ ಕಿರಣವರ್ಷದ ಹೊಂಬನಿಗಳನ್ನು ಸೂಸತೊಡಗಿದ್ದನು. ತೀಡುತ್ತಿದ್ದ ತಂಬೆಲರಿನಲ್ಲಿ ನೂರಾರು ವಿಧವಿಧ ಪಕ್ಷಿಗಳ ಗಾನ ತೇಲಿ ಬರುತಿತ್ತು. ಕೃಷ್ಣಪ್ಪ ತೋಟಾಕೋವಿಯನ್ನೂ ಜಾಕಿ ಕೇಪಿನ ಕೋವಿಯನ್ನೂ ಹೆಗಲ ಮೇಲೆ ಹೊತ್ತುಕೊಂಡು ಮರ ಗಿಡ ಪೊದೆ ಬಳ್ಳಿಗಳ ನಡುವೆ ನುಸಿದು ಬೆಟ್ಟವೇರುತ್ತಿದ್ದರು. ನಾಯಿಗಳು ಅವರ ಸುತ್ತಲೂ ನೂರಾರು ಮಾರುಗಳಲ್ಲಿ ನೆಲವನ್ನು ಮೂಸಿ ಗಾಳಿ ಹಿಡಿಯುತ್ತಲೂ ಅಲ್ಲಲ್ಲಿ ನಿಂತು ಹಿಂಗಾಲೆತ್ತಿ ಪೊದೆಗಳಿಗೆ ನೀರು ಹುಯ್ಯುತ್ತಲೂ ಉತ್ಸಾಹದಿಂದ ಓಡಾಡುತ್ತಿದ್ದುವು.

ಕೋವಿಕಟ್ಟಿದ್ದ ಜಾಗಕ್ಕೆ ಹೋಗಿ ನೋಡಲು ದೃಶ್ಯವು ಭಯಗರ್ಭಿತ ನೀರವವಾಗಿತ್ತು. ಕೃಷ್ಣಪ್ಪ ಬೇಗಬೇಗನೆ ಗುಂಡು ಹಾರದಿದ್ದ ಕೋವಿಗಳನ್ನು ಬಿಚ್ಚಿದನು. ಇಲ್ಲದಿದ್ದರೆ ನಾಯಿಗಳು ಸೂತ್ರದ ಮೇಲೆ ಹಾದು ಸಾಯುತ್ತಿದ್ದುವು.

ಪಶುಶವ ಹಿಂದಿನ ದಿನ ಇದ್ದಂತೆಯೆ ಬಿದ್ದಿತ್ತು. ನೊಣಗಳು ಮಾತ್ರ ಹೆಚ್ಚಾಗಿ ಹಾರಾಡುತ್ತಿದ್ದುವು. ಸ್ವಲ್ಪ ದುರ್ವಾಸನೆಯೂ ಹುಟ್ಟಿತ್ತು. ಹುಲಿಗೆ ಗುಂಡಿನೇಟು ಬಿದ್ದಿದೆ ಎಂಬುದೇನೊ ಅಲ್ಲಿ ಬಿದ್ದಿದ್ದ ರಕ್ತದಿಂದಲೂ ಬಣ್ಣಗೂದಲುಗಳಿಂದಲೂ ಗೊತ್ತಾಯಿತು. ಆದರೆ ಹುಲಿ ಅಲ್ಲೆಲ್ಲಿಯೂ ಸಮೀಪದಲ್ಲಿ ಸತ್ತಿರಲಿಲ್ಲ. ಅದಕ್ಕೆ ಬಲವಾದ ಗಾಯವಾಗಿದ್ದಿತೆ ಹೊರತು ಪ್ರಾಣಾಪಾಯ

ವಾಗಿರಲಿಲ್ಲ. ನಾಯಿಗಳಲ್ಲಿ ಕೆಲವಂತೂ ಹುಲಿಯ ವಾಸನೆ ಸಿಕ್ಕಿ ಬೆದರುಗಣ್ಣಾಗಿ ನೋಡಹತ್ತಿದುವು.

"ಈಗೇನು ಮಾಡಾನೋ, ಜಾಕಿ?" ಎಂದನು ಕೃಷ್ಣಪ್ಪ.

"ಮಾಡೂದೇನು? ಮನೀಗೇ ಹೋಗಾನ. ಗಾಯದ ಹುಲೀ ಸಾವಾಸ ಬ್ಯಾಡ. ಮುಂಡಗದ್ದೇಲಿ ಒಬ್ಬ ದೊರೆ (ಯೂರೋಪಿಯನ್) ಗಾಯದ ಹುಲಿ ಹೊಡ್ಯಾಕೆ ಹೋಗಿ ಹಿಂದಕ್ಕೆ ಬರ್ಲೇ ಇಲ್ಲಂತೆ!"

ಪುಟ್ಟಣ್ಣನಂತಹ ಅನುಭವಶಾಲಿಗಳಾಗಿದ್ದರೆ ಹೆಚ್ಚು ಜನರ ಸಹಾಯ ಧೈರ್ಯಗಳಿಲ್ಲದೆ ಗಾಯದ ಹುಲಿಯನ್ನು ಅರಸುವ ಸಾಹಸಕ್ಕೆ ಎಂದಿಗೂ ಕೈಹಾಕುತ್ತಿರಲಿಲ್ಲ. ಆದರೆ ಕೃಷ್ಣಪ್ಪ ಕೆಚ್ಚೆದೆಯ ತರುಣ. ಅಲ್ಲದೆ ಆ ದಿನ ಬೆಳಿಗ್ಗೆ ಅವನ ತಂದೆ ಅವನನ್ನು ಹೇಡಿ, ನಪುಂಸಕ, ಹೆಂಗಸು ಎಂದು ಮೊದಲಾಗಿ ಬೈದಿದ್ದು, ಅವನಲ್ಲಿ ಇನ್ನೂ ರೋಷವಡಗಿರಲಿಲ್ಲ. ತಾನು ಸಾಹಸಿ, ಸೀತೆಯನ್ನು ಆಳಲು ಸಮರ್ಥನಾದ ಗಂಡು ಎಂಬುದನ್ನು ನಿದರ್ಶಿಸಬೇಕೆಂದು ಅವನ ಅಂತ ರಂಗದಲ್ಲಿ ಅವನಿಗೇ ಅರಿಯದಂತೆ ಹುರುಡು ಮೊಳೆಯುತ್ತಿತ್ತು.

"ಮನೆಗೆ ಹೋಗಾದೆ ಸೈಯ್ಯಾ! ಇಷ್ಟು ರಕ್ತ ಬಿದ್ದ ಹುಲಿ ಇಷ್ಟೊತ್ತಿನಕ ಬದುಕಿರೋದು ಸುಳ್ಳು! ಸ್ವಲ್ಪ ದೂರ ಹೋಗಿ ಹುಡುಕಿ ನೋಡಾನ. ನಾಯಿ ಇವೆ! ನಿನಗ್ಯಾಕೆ ಹೆದರಿಕೆ? ನನ್ನ ಹಿಂದೇನೇ ಬಾ."

ಜಾಕಿ ಭಯಪ್ರೇರಿತ ವಿವೇಕದಿಂದ "ಬ್ಯಾಡ ಮಾರಾಯ್ರಾ, ಗಾಯದ ಹುಲಿ ಹುಡಿಕ್ಕೊಂಡು ಹೋಗೋದೂ ಒಂದೇ, ನಾಗರಹಾವಿನ ಹೆಡೆ ಹಿಡಿಯೋದೂ ಒಂದೇ! ಮತ್ತೆ ಬೈಸಿಕೊಳ್ತೀರಿ ಗೌಡ್ರ ಕೈಲಿ" ಎಂದನು.

"ಹಾಂಗಾದರೆ ನೀನಿಲ್ಲೇ ನಿಂತಿರು. ನಾ ನಾಯಿ ಕರ್ಕೊಂಡು ಹೀಂಗೆ ಹೋಗಿ ಬರ್ತೀನಿ" ಎಂದ ಕೃಷ್ಣಪ್ಪ ಮೆಲುದನಿಯಿಂದ "ಬಾ, ಕ್ರ್ರಾ" ಎಂದು ನಾಯಿ ಗಳನ್ನು ಜೊತೆಗೆ ಕರೆದುಕೊಂಡು ರಕ್ತದ ಜಾಡಿನಲ್ಲಿ ಮುಂದುವರಿದನು. ಜಾಕಿ ನಿಲ್ಲಲಿಲ್ಲ; ಮನಸ್ಸಿಲ್ಲದ ಮನಸ್ಸಿನಿಂದ ಅವನ ಹಿಂದೆಯೆ ನಡೆದನು.

ಇಬ್ಬರೂ ಹೆಜ್ಜೆಹೆಜ್ಜೆಗೂ ನಿಂತು ಮೈಯೆಲ್ಲ ಕಣ್ಣಾಗಿ ನೋಡುತ್ತ, ನಾಯಿ ಗಳಿಗೆ ಮೃದುಧ್ವನಿಯಲ್ಲಿ ಉತ್ತೇಜನವೀಯುತ್ತ, ಹಳುವಿನಲ್ಲಿ ನುಸಿಯತೊಡ ಗಿದರು. ನಾಯಿಗಳೂ ಬೆದರಿ ಬೆದರಿ ಬಹಳ ಜಾಗರೂಕತೆಯಿಂದ ಮನುಷ್ಯರಿಗೆ ಸ್ವಲ್ಪ ದೂರದಲ್ಲಿಯೆ ಸಂಚರಿಸುತ್ತಿದ್ದುವು.

ಒಮ್ಮೆ ನಾಯಿಯೊಂದು ಬೆಚ್ಚಿಬಿದ್ದುದನ್ನು ಕಂಡು ಕೃಷ್ಣಪ್ಪ ತನ್ನ ಬೆನ್ನು ಮುಟ್ಟಿಕೊಂಡೆ ಬರುತ್ತಿದ್ದ ಜಾಕಿಗೆ "ಯಾಕೋ? ನಾಯಿ ಬೆಚ್ಚಿಬೀಳ್ತದೆ? ಇಲ್ಲೇ ಎಲ್ಲಾದರೂ ಸತ್ತುಬಿದ್ದಿದೆಯೋ?" ಎಂದು ನಾಯಿಗಳಿಗೆ ಮೆಲ್ಲಗೆ

"ಥೂ! ಥೂ! ಹಿಡಿ! ನುಗ್ಗು" ಎಂದು ಕೈ ಚುಟಿಗೆ ಹೊಡೆದು ಮುಂದಿನ ಹಳುವನ್ನು ತೋರಿಸಿದನು.

ನಾಯಿಗಳು ಸ್ವಲ್ಪ ಮುಂಬರಿದು ಮತ್ತೆ ನಿಂತುವು. ಕೃಷ್ಣಪ್ಪ ಕೋವಿಯನ್ನು ಸಿದ್ಧಮಾಡಿಕೊಂಡು ಎರಡು ಹೆಜ್ಜೆ ಮುಂದೆ ನಡೆದು, ಮುಂದಿನ ಹಳುವನ್ನೂ ತನ್ನ ಮುಖವನ್ನೂ ಸರದಿಯ ಮೇಲೆ ನೋಡುತ್ತಿದ್ದ ನಾಯಿಗಳನ್ನು ನೋಡಿ "ಥೂ! ನಡಿ! ನುಗ್ಗು! ಪಾಟ್‌ರೈಟ್!" ಎಂದನು.

ಪಾಟ್‌ರೈಟ್ ಎಂಬ ನಾಯಿ ಒಳ್ಳೆಯ ಬೇಟೆ ನಾಯಿ. ಆದರೆ ಹುಲಿಯ ವಿಷಯದಲ್ಲಿ ಮಾತ್ರ ಅಳುಕುತ್ತಿತ್ತು. ಕಾರಣವೇನೆಂದರೆ, ಒಂದುಸಾರಿ ರಾತ್ರಿ ಅದು ಮನೆಯ ಬಳಿ ನಿದ್ದೆಯಲ್ಲಿ ಮಲಗಿದ್ದಾಗ ದೊಡ್ಡ ಚಿರತೆಯೊಂದು ಅದನ್ನು ಎತ್ತಿಕೊಂಡು ಹೋಗಲು ಪ್ರಯತ್ನಿಸಿತ್ತು. ಪಾಟ್‌ರೈಟ್ ಅದರೊಡನೆ ಹೋರಾಡಿ ತಪ್ಪಿಸಿಕೊಂಡಿತ್ತು. ಆಮೇಲೆ ಅದಕ್ಕೆ ಹುಲಿ ಚಿರತೆಗಳ ವಿಚಾರದಲ್ಲಿ ಹೆದರಿಕೆ ನಿಂತುಬಿಟ್ಟಿತು.

ಯಜಮಾನನು ತನ್ನ ಹೆಸರನ್ನು ಹೇಳಿ "ಥೂ! ನುಗ್ಗು" ಎನ್ನಲು ಪಾಟ್‌ರೈಟ್ ಒಂದೇ ಮನಸ್ಸುಮಾಡಿ ಮುಂದುವರಿಯಿತು. ಒಡನೆಯೆ ಬಳಿಯಿದ್ದ ದಟ್ಟವಾದ ಪೊದೆಯಿಂದ ಸಣ್ಣ ಗರ್ಜನೆ ಕೇಳಿಸಿದಂತಾಯಿತು. ಕೃಷ್ಣಪ್ಪ ಜಾಕಿ ಇಬ್ಬರೂ ಕೂದಲು ನೆಟ್ಟಗಾಗಿ ಎರಡು ಹೆಜ್ಜೆ ಹಿಂದಕ್ಕೆ ಹಾರಿಹೋಗಿ ನಿಂತರು! ನಾಯಿಗಳೂ ಬೆಚ್ಚಿ ಬೆದರಿ ಹಳುವಿನಲ್ಲಿ ದಡದಡನೆ ಹಿನ್ನುಗ್ಗಿ, ನಿಂತು, ತೀಕ್ಷ್ಣವಾಗಿ ಬೊಗಳಲಾರಂಭಿಸಿದುವು. ಕೃಷ್ಣಪ್ಪ ಎಷ್ಟು ಉತ್ತೇಜನ ಕೊಟ್ಟರೂ ಒಂದಾದರೂ ಮುಂಬರಿಯಲಿಲ್ಲ. ಹುಲಿ ಅಲ್ಲಿದ್ದುದಂತೂ ನಿಶ್ಚಯವಾಯಿತು.

ಸೊಂಟಕ್ಕೆ ಗುಂಡು ತಗುಲಿ ಯಾತನೆಯಿಂದ ಬಿದ್ದಿದ್ದ ಹುಲಿ ನಾಯಿಗಳನ್ನೂ ಮನುಷ್ಯರ ಸಾಮೀಪ್ಯವನ್ನೂ ಅರಿತು ಪ್ರತಿಹಿಂಸೆಗಾಗಿ ರೋಷಭೀಷಣವಾಗುತ್ತಿತ್ತು.

"ಖಂಡಿತ ಬ್ಯಾಡ, ಕೃಷ್ಣಪ್ಪಗೌಡ್ರೆ; ಮನೀಗೆ ಹೋಗಿ ಜನ ಸೇರಿಸಿಕೊಂಡು ಬರಾನ" ಎಂದನು ಜಾಕಿ.

"ನಿನ್ನ ಹಾಂಗಿದ್ದವರೇ ಅಷ್ಟೇ ಆಮೇಲೂ ಬರೋದು? ಅವರು ಬಂದು ಮಾಡೋದು ಇಷ್ಟೇ! ಹುಲಿಗೆ ಬಲವಾಗಿ ಏಟು ಬಿದ್ದಿರಬೇಕೋ! ಯಾವುದಾದರೂ ಕಂಡೀಲಿ ಇನ್ನೊಂದು ಗುಂಡು ಹೊಡೆದರೆ ನೆಗೆದುಬಿದ್ದು ಹೋಗ್ತದೆ." ಎಂದು ಕೃಷ್ಣಪ್ಪ ಮೆಲ್ಲಗೆ ಮುಂಬರಿದನು. ಜಾಕಿ ಅಲ್ಲಿಯೆ ನಿಂತು ನೋಡುತ್ತಿದ್ದನು ಅತಿ ಕಾತರತೆಯಿಂದ!

ಜಾಕಿ ನೋಡುತ್ತಿದ್ದ ಹಾಗೆ ಕೃಷ್ಣಪ್ಪನ ಬಾಗಿದ ದೇಹ ಹಳುವಿನಲ್ಲಿ

ಮರೆಯಾಯಿತು. ತಾನೂ ಒಂದೆರಡು ಹೆಜ್ಜೆ ಮುಂದುವರಿದು ಅವನನ್ನು ಹಿಂಬಾಲಿಸಲೆಳಸಿದನು. ಆದರೆ ಎದೆಯಾಗಲಿಲ್ಲ. ಮತ್ತೆ ನಿಂತು ನಾಯಿಗಳಿಗೆ "ಛೂ! ಛೂ! ನುಗ್ಗು! ಹಿಡಿ!" ಎಂದನು.

ಇದ್ದಕ್ಕಿದ್ದಹಾಗೆ ನೆತ್ತರು ಹೆಪ್ಪುಗಡುವಂತೆ, ಕೈಕಾಲು ಮರಗಟ್ಟುವಂತೆ, ಪ್ರಜ್ಞೆ ತಪ್ಪುವಂತೆ ಹೆಬ್ಬುಲಿಯ ಮಹಾಭೀಷಣದಬ್ಬರ ಅರಣ್ಯಮೌನವನ್ನು ನುಚ್ಚುನೂರಾಗುವಂತೆ ಅಪ್ಪಳಿಸಿ, ಜಾಕಿಯನ್ನು ನಡುಗಿಸಿತು. ಹಳುವಿನಲ್ಲಿ ದೊಡ್ಡ ಪ್ರಾಣಿ ಭರದಿಂದ ಚಲಿಸುವಂತೆ ಸದ್ದಾಯಿತು. ಹಳುವೂ ರಭಸದಿಂದ ಅಲುಗಾಡಿತು. ನಾಯಿಗಳು ಗಂಟಲು ಬಿರಿಯುವಂತೆ ಕೂಗತೊಡಗಿದವು. ಒಡನೊಡನೆ "ಠಳ್" ಎಂದು ತೋಟಾ ಬಂದೂಕು ಹಾರಿದ ಶಬ್ದವೂ "ಅಯ್ಯೋ ಜಾಕೀ!" ಎಂಬ ಕೃಷ್ಣಪ್ಪನ ಆರ್ತನಾದವೂ ಕೇಳಿಸಿದುವು. ಜಾಕಿ ಮರುಳಮರಿದವನಂತೆ ನಡುಗುತ್ತ ಕೂಗುತ್ತ ಆರ್ತನಾದ ಕೇಳಿಬಂದ ತಾಣಕ್ಕೆ ನುಗ್ಗಿದನು.

ನೋಡುತ್ತಾನೆ: ಹಳುವಿನಲ್ಲಿ ಕೆಳಗುರುಳಿದ್ದ ಕೃಷ್ಣಪ್ಪನ ಮೇಲೆ ಭೀಷಣಾಕೃತಿಯ ಹೆಬ್ಬುಲಿ! ಜಾಕಿಗೆ ತಲೆ ಕದಡಿಹೋಯಿತು. ವಸ್ತುಗಳೆಲ್ಲ ಬರಿಯ ಬಣ್ಣಗಳಾಗಿ ಕಣ್ಣೆದುರು ಸುಳಿಯತೊಡಗಿದುವು. ಹಸುರು, ಹಳದಿ, ಕಪ್ಪು, ಕೆಂಪು, ಬಿಳಿ! ಹಳುವಿನ ಹಸುರು; ಹುಲಿಯ ಮೈಪಟ್ಟೆಗಳ ಹಳದಿ, ಕಪ್ಪು; ರಕ್ತದ ಕೆಂಪು; ಹಲ್ಲು ಮತ್ತು ದಾಡೆಗಳ ಬಿಳಿ! ಜಾಕಿಯನ್ನು ಕಂಡ ಹುಲಿ ಒಂದೇ ನೆಗೆತಕ್ಕೆ ಅವನ ಮೇಲೆ ಹಾರಿತು. ಜಾಕಿಗೆ ಮೈಮೇಲೆ ಕುದಿನೀರು ಎರಚಿದಂತಾಗಿ, ಕಣ್ಣು ಕತ್ತಲೆಗಟ್ಟಿ, ಏತಕ್ಕೋ ಏನೋ ಕೈಲಿದ್ದ ಕೋವಿಯನೆತ್ತಿ ಗುಂಡುಹಾರಿಸಿದನು. ಅಷ್ಟರಲ್ಲಿ ತನ್ನ ಮೈಗೆ ಏನೋ ತಾಗಿದಂತಾಗಿ ಮೂರ್ಛೆಯಿಂದ ಕೆಳಗುರುಳಿದನು. ಕೋವಿಯ ಈಡು ಕೇಳಿ ಆವೇಶಬಲದಿಂದ ನಾಯಿಗಳೆಲ್ಲ ನುಗ್ಗಿ ಬಂದು ಹುಲಿಯ ಮೇಲೆ ಬಿದ್ದುವು. ಹುಲಿ ಜಾಕಿಯ ಪಕ್ಕದಲ್ಲಿ ಸತ್ತುಬಿದ್ದಿತು. ಅದಕ್ಕೆ ಕೃಷ್ಣಪ್ಪ ಹಾರಿಸಿದ ಗುಂಡೂ ಜಾಕಿ ಹಾರಿಸಿದ ಗುಂಡೂ ಎರಡೂ ತಗುಲಿದ್ದುವು. ಆದ್ದರಿಂದ ಅದು ಹಾರಿದ್ದ ವೇಗಕ್ಕೆ ಜಾಕಿಯ ಮೈ ಪರಚಿ ಗಾಯವಾಗಿತ್ತೇ ಹೊರತು ಅವನು ಸಾಯಲಿಲ್ಲ.

ಅಡುಗೆ ಮಾಡುತ್ತಿದ್ದ ಕೃಷ್ಣಪ್ಪನ ಮಾತೆ ಈಡಿನ ಸದ್ದು ಕೇಳಿ ಕರುಳು ಮರುಗಿದಂತಾಗಿ, ಜಗಲಿಗೆ ಓಡಿ ಬಂದು, ಗಂಡನ ಹತ್ತಿರ ಉದ್ವೇಗದಿಂದ "ತಮ್ಮ ಹುಲಿ ಹೊಡಿಯಾಕೆ ಹೋಗಿದ್ದ! ಎರಡು ಈಡು ಕೇಳಿಸ್ತು! ಏನಾಯ್ತೊ ಏನೋ! ಜನ ಕರಕೊಂಡು ಹೋಗಿ ನೋಡಿ" ಎಂದಳು.

ಸಿಂಗಪ್ಪಗೌಡರಿಗೂ ಹಠಾತ್ತಾಗಿ ಭಯವಾಗಿ ಕೆಲವು ಜನರನ್ನು ಕರೆದುಕೊಂಡು ಬೇಗ ಬೇಗನೆ ಕಾಡಿನ ಕಡೆಗೆ ಓಡಿ ನಡೆದರು.

ಸ್ವಲ್ಪ ಹೊತ್ತಿನ ಮೇಲೆ ಜಾಕಿಗೆ ಪ್ರಜ್ಞೆಯಾಯಿತು. ನೋಡುತ್ತಾನೆ: ಹುಲಿ ಪಕ್ಕದಲ್ಲಿ ಬಿದ್ದಿದೆ, ನಾಯಿ ಕೂಗುತ್ತಿವೆ. ಕೃಷ್ಣಪ್ಪ ಅಲುಗಾಡದೆ ಬಿದ್ದಿದ್ದಾನೆ. ತನ್ನ ಮೈಯೆಲ್ಲ ಹುಲಿಯುಗುರುಗಳ ಗಾಯದಿಂದ ಕೆಂಪಾಗಿದೆ; ರಕ್ತಮಯವಾಗಿದೆ; ಭಯಾನಕವಾಗಿದೆ. ಏಳಲು ಪ್ರಯತ್ನಿಸಿದನು; ಆಗಲಿಲ್ಲ. ಕೈಯೂರಿಕೊಂಡು ಮೆಲ್ಲನೆ ಕೃಷ್ಣಪ್ಪನ ಬಳಿಗೆ ಅಂಬೆಗಾಲಿಟ್ಟುಕೊಂಡು ಸರಿದನು.

ಕೃಷ್ಣಪ್ಪನ ಶವ ರಕ್ತದಲ್ಲಿ ಅದ್ದಿಹೋಗಿತ್ತು. ಮುಖದ ಗುರುತು ಕೂಡ ಸಿಕ್ಕದಷ್ಟು ಗಾಯವಾಗಿತ್ತು. ಹುಲಿಯುಗುರಿನಿಂದ ಒಂದು ಕಣ್ಣೊ ಬೆದಕಿ ಆದರ ಪಾಪೆ ಹೊರಗೆ ಬಂದಿತ್ತು. ತಲೆ ಎರಡು ಮೂರೆಡೆಗಳಲ್ಲಿ ಕೊಡಲಿ ಯಿಂದ ಕಡಿದಂತಾಗಿ ರಕ್ತಮಿಶ್ರವಾದ ಬಿಳಿಮೆದುಳು ಕರಿಯ ಕೂದಲುಗಳಲ್ಲಿ ಹೊರಹೊಮ್ಮಿತ್ತು. ಎಡಗೈ ಕೋವಿಯನ್ನಿನ್ನೂ ಬಲವಾಗಿಯೆ ಹಿಡಿದು ಕೊಂಡಂತಿತ್ತು. ಆ ಭಯಾನಕ ಬೀಭತ್ಸ ದೃಶ್ಯವನ್ನು ಕಂಡ ಜಾಕಿಗೆ ಅಳು ವುದಕ್ಕೂ ಕೂಡ ಆಗಲಿಲ್ಲ, ಮರವಟ್ಟನು.

ಸಿಂಗಪ್ಪಗೌಡರು ರೋದನದ ಪ್ರವಾಹದಲ್ಲಿ ಮುಳುಗಿ ತೇಲಿ ಮಗನ ಶವವನ್ನೂ ವ್ಯಾಘ್ರನಖದ ವಿಷವೇರಿ ಸಹಿಸಲಾರದ ನೋವಿನಿಂದ ಭಯಂಕರ ವಾಗಿ ನರಳುತ್ತಿದ್ದ ಜಾಕಿಯನ್ನೂ ಹೊರಿಸಿಕೊಂಡು ಮನೆಗೆ ಬಂದರು. ತಾಯಿ ಎದೆ ಬಿರಿಯುವಂತೆ ಹೋ ಎಂದು ಅಳುತ್ತ, ಎದೆ ತಲೆ ಹೊಟ್ಟೆಗಳನ್ನು ಬಡಿದು ಕೊಳ್ಳುತ್ತ, ತಲೆಕೂದಲನ್ನು ಕಿತ್ತುಕೊಳ್ಳುತ್ತ, ಮುಖವನ್ನು ಪರಚಿಕೊಳ್ಳುತ್ತ ರಕ್ತಮಯವಾಗಿದ್ದ ಮಗನ ಛಿದ್ರಶವದ ಮೇಲೆ ಬಿದ್ದು ಬಿದ್ದು ಹೊರಳಾಡತೊಡ ಗಿದಳು. ಆಳುಗಳೂ ನೆರೆಹೊರೆಯವರೂ ಮನೆಯವರೂ ಎಲ್ಲರೂ ಸೇರಿ, ಸೀತೆಮನೆ ರೋದನದ ರೌರವ ನರಕವಾಗಿ ಪರಿಣಮಿಸಿತು.

ಸಾಯಂಕಾಲದೊಳಗೆ ಸುದ್ದಿಹಬ್ಬಿ, ಮುತ್ತಳ್ಳಿಯಿಂದ ಶ್ಯಾಮಯ್ಯಗೌಡರೂ ಚಿನ್ನಯ್ಯನೂ ಕಾನೂರಿನಿಂದ ಚಂದ್ರಯ್ಯಗೌಡರೂ ರಾಮಯ್ಯ ಹೂವಯ್ಯ ಮೊದಲಾದವರೂ ಇನ್ನೂ ಇತರ ಹಳ್ಳಿಗಳಿಂದ ಇತರ ಬಂಧುಗಳೂ ಸೀತೆಮನೆ ಯಲ್ಲಿ ನೆರೆದರು. ಬಂದವರೆಲ್ಲರೂ ಆ ರುದ್ರದೃಶ್ಯವನ್ನೂ ತಂದೆ ತಾಯಿಗಳ ಅತಿದಾರುಣವಾದ ಶೋಕವನ್ನೂ ನೋಡಿ ಅತ್ತು ಅತ್ತು ಬೆಂಡಾದರು. ಯಾರು ಏನು ಹೇಳಿದರೂ ಕೃಷ್ಣಪ್ಪನ ತಾಯಿ ಪುತ್ರಶವವನ್ನು ಕೈಬಿಡಲಿಲ್ಲ. ಆಕೆಯ ಸೀರೆಯೆಲ್ಲ ಮಗನ ನೆತ್ತರಿನಲ್ಲಿ ತೊಯ್ದುಹೋಗಿತ್ತು!

ಅದನ್ನೆಲ್ಲಾ ನೋಡಿದ ಹೂವಯ್ಯನ ಮನದಲ್ಲಿ ಕೆಲವು ದಿನಗಳಿಂದ ಮೂಡಿದ್ದ ನಿರಾಶಾಭಾವ ಮತ್ತೂ ಪ್ರಬಲತರವಾಯಿತು. ಹಿಂದೆ ಅವನ ದೃಷ್ಟಿಗೆ ಸೌಂದರ್ಯದ ಬೀಡಾಗಿ ತೋರುತ್ತಿದ್ದ ವಿಶ್ವವು ಕ್ರೂರ ಪಿಶಾಚಿಯ ಕರ್ಮ

ಶಾಲೆಯಂತೆ ಕುರೂಪವಾಗಿ ತೋರತೊಡಗಿತು. ಸರ್ವಂ ಕ್ಷಣಿಕಂ ಕ್ಷಣಿಕಂ, ಸರ್ವಂ ದುಃಖಂ ದುಃಖಂ, ಸರ್ವಂ ಶೂನ್ಯಂ ಶೂನ್ಯಂ, ಎಂಬುದಾಗಿ ಆತನೋದಿದ್ದ ಬೌದ್ಧಮತದ ಮೂಲ ಸಿದ್ಧಾಂತಗಳು ಇಂದು ಸತ್ಯವಾಗಿ ಪ್ರತ್ಯಕ್ಷವಾಗಿ ತೋರಿದುವು. ಹಿಂದೆ ಆ ಕ್ಷಣಿಕವಾದವನ್ನೂ ದುಃಖವಾದವನ್ನೂ ಶೂನ್ಯವಾದವನ್ನೂ ಕೈಲಾಗದೆ ಸೋತವರ ಅಥವಾ ಚಿರರೋಗಿಗಳ ಸಿದ್ಧಾಂತಗಳೆಂದು ತಿರಸ್ಕರಿಸಿ ನಗುತ್ತಿದ್ದನು. ಮೊದಲು ತಾನು ಹೆಮ್ಮೆಯಿಂದ ಹೇಳಿಕೊಳ್ಳುತ್ತಿದ್ದ

"ದೇವನಿಹನು ವ್ಯೋಮದಲ್ಲಿ,
ಎಲ್ಲ ಕ್ಷೇಮ ಭೂಮಿಯಲ್ಲಿ!"

ಎಂಬರ್ಥದ ಆಶಾವಾದಿ ಬ್ರೌನಿಂಗ್ ಕವಿಯ ಪದ್ಯದ ಚರಣಗಳು ಎಷ್ಟು ಜಳ್ಳು ಎಂಬುದು ಸಾಕ್ಷಾತ್ತಾಗಿ ಗೊತ್ತಾಯಿತು.

ಜಾಕಿಯನ್ನು ಗಾಡಿಯ ಮೇಲೆ ಹಾಕಿ ತೀರ್ಥಹಳ್ಳಿಯ ಆಸ್ಪತ್ರೆಗೆ ಕಳುಹಿಸಿದರು. ಅವನ ಶುಶ್ರೂಷೆಗೆ ಪುಟ್ಟಣ್ಣನೇ ಗಾಡಿಯ ಜೊತೆ ಹೋದನು. ಜಾಕಿಯ ದುರದೃಷ್ಟಕ್ಕೆ ತಕ್ಕಹಾಗೆ ದಾರಿಯಲ್ಲಿ ಮುಗಿಲೆದ್ದು ಮಿಂಚಿಸೆದು ಗುಡುಗಿ ಸಿಡಿಲೆರಗಿ ಮುಂಗಾರು ಮಳೆ ದನಗೋಳಾಗಿ ಸುರಿಯಿತು.

## ೩೫

## ಮುತ್ತಳ್ಳಿಯಲ್ಲಿ ಒಂದು ಮಧ್ಯಾಹ್ನ

"ಲಕ್ಷ್ಮೀ!"

"ಆ್ಞೀ!" ಎಂದು ರಾಗವಾಗಿ ಪ್ರತ್ಯುತ್ತರ ಬಂತು.

"ಇಲ್ಲಿ ಬಾರೇ."

"ಯಾಕೇ?" ರಾಗ ಇನ್ನೂ ನೀಳವಾಗಿತ್ತು.

"ಇಲ್ಲಿ ಬಾ ಅಂತೀನೀ."

"ಯಾಕವ್ವಾ?" ರಾಗ ಆಲಾಪನೆಯವರೆಗೂ ಏರಿತ್ತು.

"ನೀ ಬರ್ತೀಯೋ? ನಾನೇ ಬರ್ಲೋ?"

ತಲೆ ಬಾಚಲೆಂದು ಕಿರಿಯ ಮಗಳನ್ನು ಕರೆದು, ಗೌರಮ್ಮನವರು ಪಕ್ಕದಲ್ಲಿ ರೋಗಶಯ್ಯೆಯ ಮೇಲೆ ಕೃಶಳಾಗಿ ಮಲಗಿದ್ದ ತಮ್ಮ ದೊಡ್ಡ ಮಗಳು ಸೀತೆಯ ಕಡೆಗೆ ಕರುಣಾಕರವಾಗಿ ನೋಡಿದರು.

ಸೀತೆ ಕುತ್ತಿಗೆಯವರೆಗೂ ನೀಲಿಬಣ್ಣದ ಶಾಲೊಂದನ್ನು ಹೊದೆದುಕೊಂಡು

ಮಲಗಿದ್ದಳು. ಬಿಳುಪೇರಿದ್ದ ಅವಳ ಮುಖದಲ್ಲಿ ಕಣ್ಣುಗಳು, ಪಂಜರದಲ್ಲಿ ಹೊಸದಾಗಿ ಸೆರೆಯಾದ ಹಾಡುಹಕ್ಕಿಗಳಂತೆ, ಅತ್ತಣಿತ್ತ ತೊಳಲುತ್ತ ವ್ಯಸನ ಪೂರ್ಣವಾಗಿದ್ದುವು. ಕೆಲವು ದಿನಗಳಿಂದಲೂ ಬಾಚದೆ ಇದ್ದ ತಲೆಯಲ್ಲಿ ಕೂದಲು ಕೆದರಿಕೊಂಡಿತ್ತು. ಹಾಸಗೆಯ ಸುತ್ತಲೂ ಜ್ವರದ ವಾಸನೆಯ ಮಂಡಲವೊಂದು ಹಸರಿಸಿತ್ತು. ಪಕ್ಕದಲ್ಲಿ ಔಷಧಿಯ ಸೀಸೆಗಳೂ ನಿಂಬೆಯ ಹಣ್ಣಿನ ಹೋಳು ಗಳೂ ಇದ್ದುವು. ಆ ಹೋಳುಗಳ ಮೇಲೆ ಸಣ್ಣ ಗುಂಗುರಗಳು ಹಾರಾಡು ತ್ತಿದ್ದುವು. ಆಕೆ ಉಸಿರಾಡಿದಂತೆಲ್ಲ ಶಾಲು ಮೇಲಕ್ಕೂ ಕೆಳಕ್ಕೂ ಸ್ವಲ್ಪ ಮಾತ್ರ ಚಲಿಸುತ್ತಿತ್ತು. ಗೌರಮ್ಮನವರಿಗೆ ಮಗಳು ಉಸಿರಾಡುವ ಸದ್ದು ಕೇಳಿಸಿದಂತೆಲ್ಲ ನಿಡುಸುಯ್ಯುವಂತಾಗುತ್ತಿತ್ತು.

ಸೀತೆಯ ದೃಷ್ಟಿ ಬಹುದೂರಗಾಮಿಯಾಗಿ ಇದ್ದುದರಿಂದ ಕೊಠಡಿಯ ಒಂದು ಮೂಲೆಯಲ್ಲಿ ಬಿದಿರು ಗಳುಗಳಿಗೆ ತೂಗುಹಾಕಿದ್ದ ಬಣ್ಣದ ಸೌತೆಕಾಯಿ ಗಳಾಗಲಿ, ತನ್ನ ಹಾಸಗೆಯ ಮೇಲುಗಡೆಯೆ ಬಟ್ಟೆಯಲ್ಲಿ ಸುತ್ತಿ ನೇತುಹಾಕಿದ್ದ ಅಗ್ರಹಾರದ ಜೋಯಿಸರು ವೆಂಕಪ್ಪಯ್ಯನವರು ಮಂತ್ರಿಸಿ ಕೊಟ್ಟಿದ್ದ ತೆಂಗಿನ ಕಾಯಿಯಾಗಲಿ ಆಕೆಯ ಕಣ್ಣಿಗೆ ಬೀಳುತ್ತಿರಲಿಲ್ಲ.

ಮಗಳ ಶೋಚನೀಯ ಸ್ಥಿತಿಯನ್ನು ಕಂಡ ತಾಯಿಯ ಮನದಲ್ಲಿ ಮರುಕವೂ ಭಯವೂ ಮೂಡಿದ್ದುವು. ಇನ್ನೇನು ಕೆಲದಿನಗಳಲ್ಲಿಯೆ ಮದುವೆಯಾಗಿ ಸಂಸಾರದ ಸುಖಸಂತೋಷಗಳನ್ನು ಅನುಭವಿಸುತ್ತಾಳೆ ಎಂದು ಹಾರೈಸಿದ್ದ ತಮ್ಮ ನಚ್ಚಿನ ಕುವರಿಗೆ ಏನು ಅಮಂಗಳವೊದಗುವುದೋ ಎಂದು ಗೌರಮ್ಮನ ವರಿಗೆ ಆಶಂಕೆ. ತಾಯಿತಂದೆಗಳಿಬ್ಬರೂ ತಮ್ಮ ಕೈಲಾದಮಟ್ಟಿಗೆ ಮಗಳ ರೋಗ ನಿವಾರಣೆಗಾಗಿ ಮಾಡುವ ಕಾರ್ಯಗಳನ್ನೆಲ್ಲ ಮಾಡಿದ್ದರು. ವೈದ್ಯರಿಂದ ಔಷಧಿ ಕೊಡಿಸಿದ್ದರು; ಜೋಯಿಸರಿಂದ ಮಂತ್ರ ಹಾಕಿಸಿದ್ದರು; ಗಣಮಗನನ್ನು ಕೇಳಿ ಭೂತಕ್ಕೆ ರಕ್ತಬಲಿ ಹಾಕಿಸಿದ್ದರು; ಧರ್ಮಸ್ಥಳ, ತಿರುಪತಿ, ಸಿಬ್ಬಲುಗುಡ್ಡೆ ಮೊದಲಾದ ಪವಿತ್ರ ಸ್ಥಾನಗಳ ದೇವರುಗಳಿಗೆ ಮುಡಿಪು ಕಟ್ಟಿದ್ದರು. ಏನು ಮಾಡಿದರೂ ಮಗಳ ರೋಗ ಕಡಮೆಯಾದಂತೆ ತೋರಲಿಲ್ಲ.

ಗೌರಮ್ಮನವರು ಪ್ರತಿದಿನವೂ ಅನೇಕಸಾರಿ ಕೇಳುತ್ತಿದ್ದಂತೆ ಇಂದೂ ಮಗಳನ್ನು ಕುರಿತು ದುಃಖದಮನಮಾಡಿಕೊಳ್ಳುವ ಧ್ವನಿಯಿಂದ, ಅವಳ ಹಣೆ ಕೆನ್ನೆಗಳ ಮೇಲೆ ಕೈಸವರುತ್ತ, ಕೆದರಿದ್ದ ಕೂದಲನ್ನು ನೀವಿ ಸರಿಮಾಡುತ್ತ "ಈಗ ಹ್ಯಾಂಗದೆ?" ಎಂದು ಮೃದುವಾಗಿ ಪ್ರಶ್ನಿಸಿದರು.

ಸೀತೆಯೂ ಪ್ರತಿಸಾರಿ ಹೇಳುತ್ತಿದ್ದಂತೆ "ಈಗ ಸ್ವಲ್ಪ ಗುಣ ಅಂತಾ ಕಾಣ್ತದೆ" ಎಂದು ಜನನಿಯ ಹನಿಯಾಡುತ್ತಿದ್ದ ಕಣ್ಣುಗಳನ್ನು ನೋಡಿದಳು.

ಆದರೆ ತಾಯಿಗಾಗಲಿ ಮಗಳಿಗಾಗಲಿ ಆ ಉತ್ತರದಲ್ಲಿ ನಿಜವಾಗಿಯೂ ನಂಬುಗೆಯಿರಲಿಲ್ಲ. ಒಬ್ಬರ ಸಮಾಧಾನಕ್ಕಾಗಿ ಇನ್ನೊಬ್ಬರು ನಂಬುಗೆಯನ್ನು ನಟಿಸುತ್ತಿದ್ದರು.

ತಾಯಿ ಮತ್ತೆ ಮಗಳ ಹಣೆಯನ್ನು ಮುಟ್ಟಿದಳು. ಬಿಸಿಯಿಂದ ಜ್ವರದ ತಾಪ ಬಲವಾಗಿದ್ದಂತೆ ತೋರಿತು.

ತಾಯಿ ತನ್ನ ಮಲಗುವ ಕೋಣೆಗೆ ಹೋಗಿ, ಸಂದುಕದಿಂದ ಬೆಳ್ಳಿಯ ಎರಡಾಣೆಯೊಂದನ್ನು ತಂದು, ತೊಳೆದು, ಸೀತೆಗೆ 'ಸುತ್ತುಬರಿಸಿ' (ಪ್ರದಕ್ಷಿಣೆ ಬರಿಸಿ) ಮಗಳಿಗೆ ಬೇಗ ಗುಣವಾದರೆ ಒಂದು ಬೆಳ್ಳಿಯ ತ್ರಿಶೂಲವನ್ನು ಮಾಡಿಸಿ ಹಾಕುವೆ (ನಿವೇದಿಸುವೆ) ನೆಂದು ತಿರುಪತಿ ತಿಮ್ಮಪ್ಪನಿಗೆ ಕೈಮುಗಿದು ಹೇಳಿ ಕೊಂಡು, ಆ ಎರಡಾಣೆಯನ್ನು ಒಂದು ಬಟ್ಟೆಯಲ್ಲಿ ಸುತ್ತಿ ಮೇಲಿದ್ದ ಗಳುವಿಗೆ ಬಿಗಿದಳು. ಆ ಗಳುವಿನಲ್ಲಿ ಆಗಲೇ ಅಂತಹ ಮುಡಿಪುಗಳು ಅನೇಕವಾಗಿದ್ದುದನ್ನು ಕಂಡು, ತಾಯಿಯ ಮನಸ್ಸಿಗೆ ಸ್ವಲ್ಪ ನೆಮ್ಮದಿಯಾಯಿತು. ತಾಯಿ ಮಾಡುತ್ತಿ ದ್ದುದನ್ನೆಲ್ಲ ಮಗಳು ಸಾಕ್ಷಿಯೋಪಾದಿಯಲ್ಲಿ ಮಿಳ್ಮಿಳನೆ ನೋಡುತ್ತಿದ್ದಳು.

ಮುಡಿಪುಕಟ್ಟಿ ಮುಗಿಯಲು ಗೌರಮ್ಮನವರು ಮತ್ತೆ "ಈಗ ಹ್ಯಾಂಗದೆ?" ಎಂದರು.

ಸೀತೆ ನಿಡುಸುಯ್ಯುತ್ತ "ಈಗ ಸ್ವಲ್ಪ ಜ್ವರ ಬಿಟ್ಟಹಾಂಗೆ ಕಾಣ್ತದೆ" ಎಂದಳು.

ತಾಯಿ ಮರಳಿ ಮಗಳ ಹಣೆಯನ್ನು ಮುಟ್ಟಿನೋಡಿ "ಹೌದು ಕಣೇ ಈಗ ಎಷ್ಟೋ ತಣ್ಣಗಾಗಿದೆ!" ಎಂದಳು. ಮಗಳಿಗೂ ಹಾಗೆಯೆ ತೋರಿತು.

ತರುವಾಯ ಗೌರಮ್ಮನವರು ಹಿಂದೆ ಒಂದು ಸಾರಿ ತಮ್ಮ ಯಜಮಾನರಿಗೆ ಜೋರು ಕಾಯಿಲೆಯಾಗಿದ್ದಾಗ ಯಾವ ಔಷಧಿಯಿಂದಲೂ ಗುಣವಾಗದೆ ಇದ್ದುದನ್ನು ನೋಡಿ ತಿರುಪತಿ ತಿಮ್ಮಪ್ಪನಿಗೆ ಹೇಳಿಕೊಂಡ ಕೂಡಲೆ ಜ್ವರ ಬಿಟ್ಟು ಕಾಯಿಲೆ ಗುಣವಾದ ಸಂಗತಿಯನ್ನು ಎದೆತುಂಬಿ ಮಗಳಿಗೆ ವರ್ಣಿಸಿದರು.

ಇಷ್ಟಾದರೂ ಲಕ್ಷ್ಮಿ ಮಾತ್ರ ಬರಲಿಲ್ಲ. ಗೌರಮ್ಮನವರು ತೆಂಗಿನೆಣ್ಣೆಯ ಕುಡಿಕೆ, ಮರದ ಬಾಚಣಿಗೆಗಳನ್ನು ತಂದು ಮುಂದಿಟ್ಟುಕೊಂಡು ಒಂದಿನಿತು ರಭಸದಿಂದ "ಲಕ್ಷ್ಮೀ!" ಎಂದು ಕರೆದರು.

ಲಕ್ಷ್ಮಿ ಹೊರಗಿನಿಂದ ಮೊದಲಿನಂತೆಯೆ ನಿರುದ್ವಿಗ್ನ ಧ್ವನಿಯಲ್ಲಿ ಸ್ವಲ್ಪ ರಾಗ ವಾಗಿ "ಆ್ಞೀಇ!!" ಎಂದು ಕೂಗಿದಳು.

ಗೌರಮ್ಮನವರು ರೇಗಿ "ಬರ್ತೀಯೇ ಇಲ್ಲೇ? ಬಜಾರಿ!" ಎಂದು ಕಿಟಕಿಯ ಬಳಿಗೆ ಹೋಗಿ, ಹೊರಗೆ ನೋಡಿದರು.

ಲಕ್ಷ್ಮಿ ಉರಿಬಿಸಿಲಿನಲ್ಲಿ ಮಣ್ಣಿನ ರೊಟ್ಟಿಗಳನ್ನು ಮಾಡಿ ಒಣಗಲು ಹರಡುತ್ತಿದ್ದಳು. ಅವಳ ಬಳಿ, ಮಾಡಿನ ನೆಳಲು ಕರ್‍ರಗೆ ಬಿದ್ದಿದ್ದ ತಾಣದಲ್ಲಿ ಅವಳೇ ರಚಿಸಿದ್ದ ಮಣ್ಣಿನ ಸಣ್ಣ ಒಲೆಯೂ ಆ ಒಲೆಯಮೇಲೆ ಅಂತಹ ಕುಶಲ ಕಲೆಯ ಜಾತಿಗೇ ಸೇರಿದ್ದ ಒಂದು ಸೊಟ್ಟ ಮೂತಿಯ ಆಟದ ಮಡಕೆಯೂ, ಬಹಿರಂಗಕ್ಕೆ ಬಂದ ಸ್ವಯಂಕೃತಾಪರಾಧಗಳಂತೆ, ನಾಚಿ ಮುದುಗಿದ್ದುವು. ಬಾಲೆಯ ಮುಖವೆಲ್ಲ ಬೆವರಿ ಕೆಂಪಾಗಿತ್ತು. ಕೈಯೆಲ್ಲ ಕೆಮ್ಮಣ್ಣು ಕೆಸರಾಗಿದ್ದು, ಉಟ್ಟಿದ್ದ ಪರಿಕಾರದ ಮೇಲೆ ಕಲಸಿದ ಮಣ್ಣಿನ ಮುದ್ರಾಪ್ರಭಾವ ಚೆನ್ನಾಗಿ ತೋರುತ್ತಿತ್ತು. ಲಕ್ಷ್ಮಿಯ ನೆರಳು ಅವಳ ಕಾಲಡಿಯಲ್ಲಿ ಕರ್‍ರಗೆ ಮಸಿ ಚೆಲ್ಲಿದಂತೆ ಮುದ್ದೆಯಾಗಿತ್ತು.

"ಅಯ್ಯೋ, ಇವಳಿಗೇನು ಮಾಡಬೇಕಾಯ್ತು? ಮಣ್ಣಾಡ್ತೀಯೇನೇ ಬಿಸಿಲಿನಲ್ಲಿ!! ಆಗೇಹೋಯ್ತು ಪರಿಕಾರದ ಗತಿ! ಇವತ್ತು ಒಗೆದ್ಹಾಕಿದ್ದಲ್ಲೇ!! ಅಯ್ಯೋ ನಿನ್ನ ಸೊಡ್ಡೊತ್ತಿಹೋಗಾ! ಇಲ್ಲಿ ಬಾರೆ ಇಲ್ಲಿ!"

ತಾಯಿಯ ಕೂಗಾಟವನ್ನು ಕೇಳಿ ಬಾಲೆ ಬೆವರಿದ್ದ ಕೆಂಪು ಮುಖವನ್ನು ಮೇಲೆತ್ತಿ ನೋಡಿ ನಗುತ್ತ ನೀಳವಾದ ರಾಗಧ್ವನಿಯಲ್ಲಿ "ರೊಟ್ಟೀ ಮಾಡ್ತೀನ್ಕಣೇ!" ಎಂದಳು.

"ಹ್ಹುಂ! ನಿನ್ನ ಮಿಂಡ ಬತ್ತಾನೆ ಅಂತಾ ರೊಟ್ಟಿ ಮಾಡ್ತೀಯೇನೇ? ಬತ್ತೀಯೆ ಇಲ್ಲೇ ಒಳಗೇ? ನಿನಗೆ ಮೈ ಮೇಲೆ ಕೈಯಾಡಿಸದೆ ಬಹಳ ದಿನಾಯ್ತು! ಸೊಕ್ಕಿ ಸೊಲಗೆ ನೀರು ಕುಡೀತೀಯಾ!"

ಲಕ್ಷ್ಮಿ ಮನಸ್ಸಿಲ್ಲದ ಮನಸ್ಸಿನಿಂದ ಆಟವನ್ನು ಬಿಟ್ಟು ಒಳಗೆ ಹೋಗಿ ಹಂಡೆಯಲ್ಲಿದ್ದ ಸ್ವಚ್ಛವಾದ ನೀರಿಗೆ ಮಣ್ಣುಮಯವಾಗಿದ್ದ ಎರಡು ಕೈಗಳನ್ನೂ ಅದ್ದಿ ತೊಳೆದುಕೊಂಡು, ಅಕ್ಕ ಮಲಗಿದ್ದ ಕೊಠಡಿಗೆ ಹೋದಳು.

ತಾಯಿ ಎಣ್ಣೆಕುಡಿಕೆ ಬಾಚಣಿಗೆಗಳನ್ನು ಮುಂದಿಟ್ಟುಕೊಂಡು ಕುಳಿತಿದ್ದುದು ಕಣ್ಣಿಗೆ ಬಿದ್ದೊಡನೆ ಲಕ್ಷ್ಮಿ ಮುಖವನ್ನು ಮುಸುಡನ್ನಾಗಿ ಮಾಡಿಕೊಂಡು ದೂರದಲ್ಲಿಯೇ ಗೋಡೆಗೊರಗಿ ನಿಂತುಬಿಟ್ಟಳು.

ತಲೆ ಬಾಚಿಸಿಕೊಳ್ಳುವುದೆಂದರೆ ಅವಳಿಗೊಂದು ಮಹಾಕ್ಲೇಶವಾಗಿತ್ತು. ಅದರಲ್ಲಿಯೂ ಪ್ರಶಸ್ತವಾದ ಮಣ್ಣಾಟವನ್ನು ತ್ಯಜಿಸಿ ತಲೆ ಬಾಚಿಕೊಳ್ಳುವಂತಹ ಕೆಲಸಕ್ಕೆ ಬಾರದ ಕೆಲಸದಲ್ಲಿ ಕಾಲಹರಣ ಮಾಡಬೇಕಲ್ಲಾ ಎಂದು ಎದೆ ಕುದಿಯತೊಡಗಿತ್ತು.

"ಇಲ್ಲಿ ಬಾರೆ ಇಲ್ಲಿ."

ತಾಯಿ ಕರೆದಳು. ಮಗಳು ನಿಂತ ಜಾಗದಿಂದ ಒಂದಿನಿತೂ ಅಲುಗಾಡಲಿಲ್ಲ. ಅವಳ ಕಣ್ಣುಗಳಲ್ಲಿ ಆಗಲೇ ನೀರಾಡತೊಡಗಿತ್ತು.

"ಬಾರೇ, ತಲೆ ಬಾಚ್ತೀನಿ."

"ಬ್ಯಾಡ; ನಾನೊಲ್ಲೆ" ಎಂದು ಲಕ್ಷ್ಮಿ ಅಳುಮೊಗವಾದಳು.

"ನೆಂಟರು ಬತ್ತಾರೆ ಕಣೇ. ತಲೆ ಬಾಚ್ಕೊಂಡು ಹೂ ಮುಡ್ಕೊಂಡು" ಎಂದು ತಾಯಿ ಸುಳ್ಳಿನ ಸಮ್ಮೋಹನವನ್ನು ಬೀಸುತ್ತಿರುವುದನ್ನು ತಿಳಿದ ಮಗಳು "ಬ್ಯಾಡ, ನಾನೊಲ್ಲೆ. ನಂಗೆಲ್ಲ ಗೊತ್ತದೆ, ಬರೀ ಸುಳ್ಳು!" ಎಂದು ಅಳುವಿನ ಮೇಲೆ ನಗುವೇರಿದ ಮೊಗವನ್ನು ಕೊಂಕಿಸಿ ಸೊಟ್ಟಗೆ ಮಾಡಿದಳು.

"ನೀ ಬತ್ತೀಯೋ? ಬೆನ್ನು ಮೇಲೆ ಬೀಳಬೇಕೋ?"

"ಉ್ಞ ಉ್ಞ ಉ್ಞ ಉ್ಞ" ಎಂದು ಲಕ್ಷ್ಮಿ ಅತ್ತಳೇ ಹೊರತು ನಿಂತಲ್ಲಿಂದ ಕದಲಲಿಲ್ಲ.

ಗೌರಮ್ಮನವರಿಗೆ ಸಿಟ್ಟುಬಂದು ದಡಕ್ಕನೆ ಎದ್ದುಹೋಗಿ ಬೆನ್ನಿನ ಮೇಲೆ ದಿಡ್ಡನೆ ಒಂದು ಗುದ್ದು ಗುದ್ದಿ, ದರದರನೆ ಎಳೆದು ತಂದು ಕುಳ್ಳಿರಿಸಿದರು. ಲಕ್ಷ್ಮಿ ಗಟ್ಟಿಯಾಗಿ ರೋದಿಸುತ್ತ, ಕಣ್ಣೀರು ಸುರಿಸುತ್ತ ಶರಣಾಗತಳಾದಳು.

"ಸಲುಗೆ ಕೊಟ್ಟ ನಾಯಿ ಸಟ್ಟುಗ ನೆಕ್ಕಿತಂತೆ! ಒಳ್ಳೇ ಮಾತಿನಾಗೆ ಹೇಳಿದ್ರೆ ನೀ ಕೇಳ್ತಿಯೇನು?" ಎನ್ನುತ್ತ ತಾಯಿ ಮಗಳ ತಲೆಯನ್ನು ಬಾಚುವ ಕೆಲಸಕ್ಕೆ ಕೈ ಹಾಕಿದರು.

ಹಿಂದಿನ ದಿನ ಹೆಣೆದಿದ್ದ ಜಡೆಯನ್ನು ಬಿಚ್ಚಿ, ಕೂದಲಿಗೆ ಎಣ್ಣೆ ಸವರಿ, ಬಾಚಣಿಗೆಯಿಂದ ಸಿಕ್ಕು ಬಿಡಿಸತೊಡಗಿದರು. ಕೂದಲು ಅಸ್ತವ್ಯಸ್ತವಾಗಿ ಬಹಳ ಸಿಕ್ಕು ಸಿಕ್ಕಾಗಿದ್ದುದರಿಂದ ಒಂದೆರಡು ಸಾರಿ ಲಕ್ಷ್ಮಿಗೆ ಬಹಳ ನೋವಾಗಿ ರೋದನವನ್ನು ಮತ್ತೂ ಹೆಚ್ಚಿಸಿದಳು.

"ಸುಮ್ಮನಿರ್ತೀಯೋ ಇಲ್ಲೆ?"

"ಉ್ಞ ಉ್ಞೂ ಉ್ಞೂ! ಅ್ಞ ಅ್ಞ ಅ್ಞ!" ಎಂದು ಲಕ್ಷ್ಮಿ ತಾಯಿಯ ಕೈಯಿಂದ ತನ್ನ ಕೇಶಪಾಶಗಳನ್ನು ಬಿಡಿಸಿಕೊಳ್ಳಲು ಪ್ರಯತ್ನಿಸಿ ಒರಟು ಮಾಡಿದಳು.

ಗೌರಮ್ಮನವರಿಗೆ ಸಿಟ್ಟುಬಂದು ಮತ್ತೊಂದು ಗುದ್ದು ಬಲವಾಗಿ ಗುದ್ದಿದರು. ಲಕ್ಷ್ಮಿ ಗೋಳೋ ಎಂದು ಅಳತೊಡಗಿದಳು.

ಸೀತೆ ಕ್ಷೀಣಧ್ವನಿಯಿಂದ "ಯಾಕೆ ಹೊಡೀತೀಯವ್ವಾ?" ಎಂದಳು. ತಮ್ಮ ಮುದ್ದಿನ ಪುಟ್ಟಮಗಳು ಅಳುವುದನ್ನು ಆಲಿಸಿ ಗೌರಮ್ಮನವರಿಗೆ ಆಗಲೇ ಮನಸ್ಸು ನೋಯತೊಡಗಿತ್ತು. ಸೀತೆ ಮರುಕದಿಂದ "ಯಾಕೆ ಹೊಡೀತೀ ಯವ್ವಾ?" ಎಂದ ಕೂಡಲೆ ಅವರ ತಾಯ್ತನದ ಅಕ್ಕರೆ ಮೇರೆದಪ್ಪಿ ಉಕ್ಕಿ ಬಂದು, ಲಕ್ಷ್ಮಿಯನ್ನು ಬಾಚಿ ತಬ್ಬಿಕೊಂಡು ಅವಳ ಕೆನ್ನೆ ತುಟಿಗಳನ್ನು ತಮ್ಮ

ಕೆನ್ನೆಗಳಿಗೆ ಒತ್ತಿಕೊಳ್ಳುತ್ತ, ಹಣೆಗೆ ಹಣೆಯನ್ನು ಮೃದುವಾಗಿ ಉಜ್ಜುತ್ತ, ಮಗಳ ಮೂಗು ಬಾಯಿಗಳ ಬಳಿಯಿದ್ದ ತಮ್ಮ ಮೂಗಿನಿಂದ ಅವಳ ಮೈಗಂಪು ಬಾಯ್ಗಂಪುಗಳನ್ನು ಸವಿಯುತ್ತ, "ಅಳಬೇಡ ನನ್ನ ಚಿನ್ನಾ! ನನ್ನ ಕಂದಾ! ನನ್ನ ಕೈ ಬೆಂದೇಹೋಗಲಿ!... ಅಪ್ಪು ಕೊಡ್ತೀನಿ ಅಳ್ಬೇಡ! ನನ್ನ ಕೈ ಕುಸಿದು ಬಿದ್ದು ಹೋಗಲಿ!... ಕರೆದರೆ ಬರಬಾರದೇನು ಹೇಳು! ಸುಮ್ಮನೆ ಹಟಾ ಮಾಡಿ ಪೆಟ್ಟು ತಿಂತೀಯಲ್ಲಾ!... ಇಲ್ಲ, ನನ್ನ ತಪ್ಪಾಯ್ತು! ಅಳ ಬೇಡಾ, ನನ್ನ ಚಿನ್ನಾ! ನನ್ನ ಕೈಗೆ ಒರಲೆ ಹಿಡಿದೇ ಹೋಗಲಿ!..." ಎಂದು ಮೊದಲಾಗಿ ತಮ್ಮನ್ನು ತಾವೇ ಶಪಿಸಿಕೊಳ್ಳುತ್ತ, ಮಗಳನ್ನು ನಾನಾವಿಧವಾಗಿ ಸಂತೈಸಿ ಬಿಗಿದಪ್ಪಿಕೊಂಡು ಮುಂಡಾಡಿ ಲಲ್ಲೆಗೈದರು.

ಲಕ್ಷ್ಮಿ ಅಳುವುದನ್ನು ನಿಲ್ಲಿಸಿದಮೇಲೆಯೂ ಊ್ಹ ಊ್ಹ ಊ್ಹ ಎಂದು ಸ್ವರ ವೆತ್ತುವುದನ್ನು ಮಾತ್ರ ಬಿಡಲಿಲ್ಲ. ಅದು ರಸಭಾವಗಳನ್ನು ಕಳೆದುಕೊಂಡು ಹಳಸಿಹೋದ ಅಲಂಕಾರದಂತೆ ಶುಷ್ಕವಾಗಿದ್ದಿತೆ ಹೊರತು ಅದರಲ್ಲಿ ಬನಿ ಇನಿತೂ ಇರಲಿಲ್ಲ. ತಾಯಿ ತಲೆ ಬಾಚುತ್ತಿದ್ದಾಗ ನಡುನಡುವೆ ಮನಸ್ಸಿನಲ್ಲಿ ಬೇರೆಯ ಆಲೋಚನೆಗಳು ಸುಳಿದು ಊ್ಹ ಊ್ಹ ಎನ್ನುವುದನ್ನು ಮರೆಯುತ್ತಿದ್ದರೂ ಥಕ್ಕನೆ ನೆನಪಾದಾಗಲೆಲ್ಲ ಮರಳಿ ಊ್ಹ ಊ್ಹ ಊ್ಹ ಪ್ರಾರಂಭಿಸುತ್ತಿದ್ದಳು.

ಜಡೆ ಹಾಕುವುದು ಕೊನೆಗಾಣುವುದರಲ್ಲಿತ್ತು. ಅಡುಗೆಮನೆಯಲ್ಲಿ ಕಾಳ ಭೀತಿದಾಯಕ ಧ್ವನಿಯಿಂದ "ಅಮ್ಮಾ! ಅಮ್ಮಾ! ಓ ಅಮ್ಮಾ!" ಎಂದು ಕೂಗಿದನು.

ಗೌರಮ್ಮನವರು ಓಕೊಳ್ಳುವುದರೊಳಗೆ ಕಾಳ ಅವರಿದ್ದಲ್ಲಿಗೆ ಓಡಿ ಬಂದನು. ಅವನ ಕಣ್ಣು ಮುಖ ಕಂಠ ಒಂದೊಂದರಲ್ಲಿಯೂ ಭೀತಿ ಪ್ರಸ್ಫುಟವಾಗಿತ್ತು.

ಗೌರಮ್ಮನವರು ಲಕ್ಷ್ಮಿಯ ಜಡೆಯನ್ನು ಹಿಡಿದುಕೊಂಡೇ ಗಾಬರಿಯಿಂದ "ಏನೋ?" ಎಂದರು.

"ಕೃಷ್ಣಪ್ಪಗೌಡ್ರನ್ನ ಹುಲೀ ಹಿಡೀತಂತೆ!"

"ಏನು?" ಎಂದ ಗೌರಮ್ಮನವರ ಮೈಮೇಲೆ ಕುದಿನೀರು ಚೆಲ್ಲಿದಂತಾ ಯಿತು. ಕೈಯಿಂದ ಜಡೆ ನುಣುಚಿಹೋಯಿತು.

ಕಾಳ ದೀರ್ಘವಾಗಿ ಸುಯ್ಯುತ್ತಾ ಹೇಳಿದನು; "ಸಿಂಗಪ್ಪಗೌಡರು ಜನಾ ಕಳಿಸ್ಯಾರೆ... ನಿನ್ನೆ ಕೋವಿ ಕಟ್ಟಿದ್ರಂತೆ! ಇವತ್ತು ಬೆಳಿಗ್ಗೆ ಗಾಯದ ಹುಲೀ ಹುಡುಕಾಕೆ ಹೋಗಿ... ಹುಲಿ ಹಿಡೀತಂತೆ!..."

ಗೌರಮ್ಮನವರು "ನಾರಾಯಣಾ" ಎಂದು ರೋದಿಸುತ್ತ ಸೀತೆಯ ಕಡೆಗೆ ತಿರುಗಿ ನೋಡಿದರು. ಲಕ್ಷ್ಮಿಯೂ ತಾಯಿ ಅಳುವುದನ್ನು ಕಂಡು ಅಳತೊಡಗಿದಳು.

ಸೀತೆಯ ದೇಹ ಆದ್ಯಂತವಾಗಿ ವಿಕ್ಷುಬ್ಧವಾಗಿತ್ತು. ಹಾಸಗೆಯ ಮೇಲೆ ಎದ್ದು ಕುಳಿತಿದ್ದಳು. ಎದೆ ಹಾರಿ ಹಾರಿ ಬೀಳುತ್ತಿತ್ತು. ಬಿಕ್ಕಿ ಬಿಕ್ಕಿ ಅಳುತ್ತಿದ್ದಳೋ ನಗುತ್ತಿದ್ದಳೋ ಗೊತ್ತಾಗುವಂತಿರಲಿಲ್ಲ. ಕಣ್ಣುಗಳಲ್ಲಿ ನೀರು ಹರಿಯುತ್ತಿದ್ದರೂ ಕಂಠದಲ್ಲಿ ಧ್ವನಿಯಿರಲಿಲ್ಲ.

ಆಕೆಯ ಮನಸ್ಸಿನ ಭಾವಸಮುದಾಯಗಳ ಹಾಸುಹೊಕ್ಕಿನ ಜಟಿಲತೆಯನ್ನು ಬಿಡಿಸಿ ರಹಸ್ಯವನ್ನು ಭೇದಿಸಲು ಎಂತಹ ಸಮರ್ಥನಾದ ಮನಃಶಾಸ್ತ್ರಜ್ಞನ ಪ್ರತಿಭೆಗೂ ದುಃಸಾಧ್ಯವಾಗಿದ್ದಿತೆಂದೇ ಹೇಳಬೇಕು.

ವಿದೇಶದಲ್ಲಿ ಕಗ್ಗತ್ತಲೆಯ ಗುಹಾಕಾರಾಗೃಹದಲ್ಲಿ ಬಹು ಕಾಲದಿಂದಲೂ ಬಂಧಿತನಾಗಿ ಮೃತಪ್ರಾಯನಾಗಿದ್ದವನನ್ನು ಸೆರೆಯಿಂದ ಬಿಡಿಸಿ ಸ್ವದೇಶದ ನಿರ್ಮಲವಾದ ವಾಯುಮಂಡಲದಲ್ಲಿ ಬಾನು ಬಿಸಿಲು ಕಾಡು ಹೊಳೆ ತೊರೆ ಕೆರೆ ಪೈರುಪಚ್ಚೆಗಳ ಹುಲುಸಾದ ಸನ್ನಿವೇಶದಲ್ಲಿ ಬಿಟ್ಟಂತೆ ಆಗಿದ್ದಳು ಸೀತೆ.

## ೩೬

## ದುಃಖಕ್ಕೆ ದೊಡ್ಡವರು ಬಡವರು ಎಂಬ ಭೇದವಿದೆಯೆ?

ಮರುದಿನ ಬೆಳಿಗ್ಗೆ ಹೂವಯ್ಯ ಕಾನೂರಿನ ಉಪ್ಪರಿಗೆಯಲ್ಲಿ ಎಚ್ಚತ್ತು ಕಣ್ಣು ತೆರೆದಾಗ ಸೂರ್ಯನಾಗಲೆ ಕಾಡುಬೆಟ್ಟಗಳ ನೆತ್ತಿಯಲ್ಲಿ ಮೂಡಿಬಿಟ್ಟಿದ್ದನು. ಹಿಂದಿನ ದಿನದ ಸಾಯಂಕಾಲದ ಬಿರುಮಳೆಯಿಂದ ಶುಭ್ರವಾಗಿದ್ದ ವಾಯುಮಂಡಲದಲ್ಲಿ ಬನಗಳ ಹಸುರೂ ಬಿಸಿಲಿನ ಹೊನ್ನೂ ಬಾನಿನ ನೀಲಿಯೂ ಮಿಲನವಾಗಿ ಚೇತೋಹರವಾಗಿತ್ತು.

ಏಳುವುದು ಎಷ್ಟು ತಡವಾಯಿತು? ಎಂದು ಮನದಲ್ಲಿಯೆ ಹೇಳಿಕೊಂಡು ಪಕ್ಕದಲ್ಲಿ ನೋಡಿದರೆ, ರಾಮಯ್ಯನಿನ್ನೂ ಮುಸುಗು ಹಾಕಿಕೊಂಡು ಮಲಗಿ ನಿದ್ರಿಸುತ್ತಿದ್ದಾನೆ!

ಹೂವಯ್ಯನಿಗೆ ಹಿಂದಿನ ದಿನದ ಭಯಂಕರ ಘಟನೆಗಳ ನೆನಪಾಯಿತು. ಕೃಷ್ಣಪ್ಪನ ಮರಣ, ಅವನ ತಂದೆತಾಯಿಗಳ ರೋದನ, ಜಾಕಿಯ ಗೋಳು, ಶ್ಮಶಾನದಲ್ಲಿ ಶವದಹನ! ಆ ಹುಲಿ! ಅದನ್ನೆಲ್ಲ ನೆನೆದು ಹೂವಯ್ಯ ಸ್ವಲ್ಪ ಕಂಪಿಸಿದನು.

ರಾಮಯ್ಯನನ್ನು ಎಬ್ಬಿಸಲಿಲ್ಲ. ಸ್ನಾನಮಾಡಿ, ಕಾಫಿ ತಿಂಡಿ ತೆಗೆದುಕೊಂಡು ಕಾನುಬೈಲಿನ ಕಡೆಗೆ ತಿರುಗಾಡಲು ಹೊರಟು ಏರಿದನು. ಅಡುಗೆ ಮನೆಯಲ್ಲಿ

ಸುಬ್ಬಮ್ಮನೂ ಪುಟ್ಟಮ್ಮನೂ ತನ್ನ ತಾಯಿಯೂ ಕೃಷ್ಣಪ್ಪನ ದುರ್ಮರಣದ ವಿಚಾರವಾಗಿ ಕೇಳಿದ ಪ್ರಶ್ನೆಗಳಿಗೆ ಒಂದೆರಡು ಮಾತುಗಳಲ್ಲಿ ಉತ್ತರ ಹೇಳಿ ಪೂರೈಸಿದ್ದನು. ಆದರೆ ಮನಸ್ಸಿನಲ್ಲಿ ಮಾತ್ರ ಆ ಭಯಂಕರ ದುರ್ಘಟನೆ, ಬಿಸಿಲೇರಿದ ಹಾಗೆಲ್ಲ ಹೆಚ್ಚು ಹೆಚ್ಚು ಪ್ರದೇಶವನ್ನು ಆಕ್ರಮಿಸುತ್ತಿದ್ದ ಕಣಿವೆಯ ಮಂಜು ಮುಗಿಲಿನಂತೆ, ವಿಸ್ತಾರವಾಗುತಿತ್ತು. ಸುಂದರ ಪ್ರಾತಃಕಾಲವಾಗಲಿ ಸುಮಧುರ ಪಕ್ಷಿಗಾಯನವಾಗಲಿ ಸುಖಶೀತಲ ಮಂದಮಾರುತವಾಗಲಿ ಸುಖೋಷ್ಣವಾದ ಬಾಲಾತಪವಾಗಲಿ ಹುಲ್ಲಿನಲ್ಲಿಯೂ ಗಿಡಗಳಲ್ಲಿಯೂ ಹಸುರು ಚಾಮರಗಳಂತಿದ್ದ ಬಿದಿರು ಮೆಳೆಗಳಲ್ಲಿಯೂ ಮಿರುಗುತ್ತಿದ್ದ ಲಕ್ಷೋಪಲಕ್ಷ ಹಿಮಮಣಿಗಳಾಗಲಿ ಅವನ ಮನಸ್ಸನ್ನು ಹೆಚ್ಚಾಗಿ ಆಕರ್ಷಿಸಲು ಸಮರ್ಥವಾಗಲಿಲ್ಲ.

ಒಂದೆರಡು ಸಾರಿ ಮನಸ್ಸನ್ನು ಸ್ವಲ್ಪ ಪ್ರಯತ್ನದಿಂದ ಪ್ರಕೃತಿಸೌಂದರ್ಯದ ಕಡೆಗೆ ತಿರುಗಿಸಿದನು. ಆದರೆ ವ್ಯಾಘ್ರನಖಾಘಾತದಿಂದ ಜರ್ಜರಿತವಾಗಿದ್ದ ಕೃಷ್ಣಪ್ಪನ ಕಳೇಬರ ಮರಳಿ ಮರಳಿ ಮನಸ್ಸಿನ ಮುಂದೆ ಬರುತ್ತಿತ್ತು. ಕೃಷ್ಣಪ್ಪ ತನಗಿಂತಲೂ ಚಿಕ್ಕವನು; ತನ್ನೊಡನೆ ಆಡಿದವನು; ಓದಿದವನು. ಎಲ್ಲ ಮೊನ್ನೆ ಮೊನ್ನೆ ನಡೆದಂತಿದೆ. ಮದುವೆಯೂ ನಿಶ್ಚಯವಾಗಿತ್ತು ! ಹಠಾತ್ತಾಗಿ ಏನಾಗಿಹೋಯಿತು ?

ಇದ್ದಕ್ಕಿದ್ದಹಾಗೆ ಹೂವಯ್ಯನ ಹೃದಯದಲ್ಲಿ ಏನೋ ಒಂದು ಪರಿವರ್ತನೆಯಾದ ಹಾಗಾಯಿತು. ಮದುವೆ ನಿಶ್ಚಯವಾಗಿತ್ತು; ಈಗ ಕೃಷ್ಣಪ್ಪ ಸತ್ತು ಹೋಗಿದ್ದಾನೆ ! ಮುಂದೆ ಸೀತೆ ?

ಹೂವಯ್ಯ ಒಂದು ದೊಡ್ಡ ಆಲದ ಮರದ ಬೇರಿನ ಮೇಲೆ ಕುಳಿತುಕೊಂಡನು. ಮುಂದೆ ಏನನ್ನೂ ಆಲೋಚನೆ ಮಾಡಲಾರದೆ ಮರವನ್ನೇ ನೋಡತೊಡಗಿದನು.

ಅದೊಂದು ಭೀಮಾಕಾರದ ಮರವಾಗಿತ್ತು. ನಾಲ್ದೆಸೆಗಳಿಗೂ ಸ್ವಚ್ಛಂದವಾಗಿ ಹರಡಿಕೊಂಡು ತನ್ನದೇ ಒಂದು ಸಂಸಾರ ಹೂಡಿತ್ತು. ಅದರ ಸಣ್ಣ ಸಣ್ಣ ಬಿಳಲುಗಳು ತಪಸ್ಸಿಗೆ ಕುಳಿತ ಮಹರ್ಷಿಯ ಗಡ್ಡವನ್ನೂ, ದಿಕ್ಕುದಿಕ್ಕಿಗೆ ಧೀರವಾಗಿ ಕೈಚಾಚಿದ್ದ ಹೆಗ್ಗೊಂಬೆಗಳು ಗರಡಿಸಾಧನೆ ಮಾಡಿದವನ ಅಂಗವಿನ್ಯಾಸವನ್ನೂ, ಭೂಮಿಗಿಳಿದು ಬೆಳೆದುನಿಂತ ಹೆಬ್ಬಿಳಲುಗಳು ದೊಡ್ಡ ದೇವಾಲಯದ ಕಂಭಗಳ ಸಾಲ್ಗಳನ್ನೂ ನೆನಪಿಗೆ ತರುತ್ತಿದ್ದುವು. ದಟ್ಟವಾಗಿ ಬೆಳೆದಿದ್ದ ದಪ್ಪವಾದ ಎಲೆಗಳು ಕೊಡೆ ಹಿಡಿದಂತಿದ್ದರೂ ಅಲ್ಲಲ್ಲಿ ಬಿಸಿಲು ತೂರಿಬಂದು ಹಸುರು ನೆಲದಮೇಲೆ ಕೋಲುಕೋಲಾಗಿ ಬೀಳುತ್ತಿತ್ತು. ಎಳಬಿಸಿಲು ಬಿದ್ದ ಎಲೆಗಳಿಂದ ಹಸುರಿನ ಚಿಲುಮೆ ನಳನಳಿಸಿ ಚಿಮ್ಮುತ್ತಿತ್ತು.

ಅಲ್ಲಲ್ಲಿ ದೊಡ್ಡ ಹಲಸಿನಕಾಯಿಯಷ್ಟು ಗಾತ್ರವಾಗಿ ಮರದೆಲೆಗಳನ್ನು ಜೋಡಿಸಿ ಬೆಸೆದು ಮಾಡಿದ್ದ ಚಗಳಿ ಇರುವೆಯ ಗೂಡುಗಳು ಕೊಟ್ಟೆ ಕೊಟ್ಟೆಯಾಗಿ ಕಾಣುತ್ತಿದ್ದುವು. ನಸುಗೆಂಪು ಬಣ್ಣದ ದೊಡ್ಡದೊಡ್ಡ ಚಗಳಿ ಇರುವೆಗಳು ಎಲೆಗಳ ಮೇಲೆಯೂ ಕೊಂಬೆಗಳ ಮೇಲೆಯೂ ಹರಿದಾಡುತ್ತಿದ್ದುವು. ಹಲ ಕೆಲವು ಹಕ್ಕಿಗಳೂ ಕೊಂಬೆಗಳಲ್ಲಿ ಹಾಡಿ ಹಾರಾಡುತ್ತಿದ್ದುವು. ಗಾಳಿ ಬೀಸಿದಂತೆಲ್ಲ ಮರದ ಹನಿಗಳು ಬಿದ್ದು ಪಟಪಟನೆ ಸದ್ದುಮಾಡುತ್ತಿದ್ದುವು. ಆ ಮರದಲ್ಲಿ ಪುರಾತನ ನೂತನಗಳೆರಡೂ ಸಂಗಮಿಸಿ ಮುದುಕನ ಗಾಂಭೀರ್ಯದೊಡನೆ ಹುಡುಗನ ಹರುಷ ಸೇರಿಕೊಂಡಂತಿತ್ತು. ಹೂವಯ್ಯನ ಮನಸ್ಸಿಗೆ ಆ ವೃಕ್ಷದಲ್ಲಿ ಏನೋ ಒಂದು ವ್ಯಕ್ತಿತ್ವವಿರುವಂತೆ ಭಾಸವಾಯಿತು. ಅದಕ್ಕೇ ಎಂದು ತೋರುತ್ತದೆ ಹಳ್ಳಿಯವರು ಆ ಮರದಲ್ಲಿ ಅತಿಮಾನುಷ ವ್ಯಕ್ತಿಗಳಿವೆಯೆಂದು ಹೇಳುತ್ತಿದ್ದುದು.

"ಇದೇನೊಡೆಯಾ, ಇಲ್ಲಿ ಕೂತೀರಿ?"

ಹೂವಯ್ಯ ತಿರುಗಿ ನೋಡಿದನು. ಡೊಳ್ಳುಹೊಟ್ಟೆಯ ಸೋಮ ಕಂಬಳಿ ಹೊದೆದುಕೊಂಡು, ಕೈಯಲ್ಲೊಂದು ಮೊರವನ್ನು ಹಿಡಿದು ಹಲ್ಲುಬಿಡುತ್ತ ನಿಂತಿದ್ದಾನೆ!

"ಅದೇನೋ ನಿನ್ನ ಕೈಲಿ?" ಎಂದನು ಹೂವಯ್ಯ.

"ಏನೂ ಇಲ್ಲಯ್ಯಾ... ಬಾಯಿಗೆ ಅನ್ನಾ ಸೇರುವುದಿಲ್ಲಾ ... ಅದಕ್ಕೇ ಚಗಳಿಗೆ ಬಂದೆ."

ಹೂವಯ್ಯನಿಗೆ ಆಗ ಅರ್ಥವಾಯಿತು. ಸೋಮನ ಕೈಯಲ್ಲಿದ್ದ ಮೊರದ ಮತ್ತು ಅದರಲ್ಲಿದ್ದ ಉಪ್ಪಿನ ಉದ್ದೇಶ. ಸೋಮನು ಗೂಡನ್ನು ಸೂರೆಮಾಡಿ ಚಗಳಿಯಿರುವೆಗಳನ್ನೂ ಅವುಗಳ ಮೊಟ್ಟೆಮರಿಗಳನ್ನೂ ಚಟ್ನಿಗೋಸ್ಕರ ಕೊಂಡೊಯ್ಯಲು ಬಂದಿದ್ದನು.

"ಏನು? ಜ್ವರಬಂದಿತ್ತೇನೋ?"

"ಜ್ವರಾ ಅಲ್ಲಾ, ಒಡಿಯಾ. ಆ ಬೋಸುಡಿಮಗ ಜಾಕಿ ದೊಣ್ಣೇಲಿ ಹೊಡೆದಮೇಲೆ ಹಿಂಗಾಗದೆ ಕಾಣಿ" ಎಂದು ಹೊದೆದಿದ್ದ ಕಂಬಳಿಯನ್ನು ಸ್ವಲ್ಪ ಓರೆಮಾಡಿ ಡೊಳ್ಳೇರಿದ ಹೊಟ್ಟೆಯನ್ನೂ ಚರ್ಮದಮೇಲೆ ಪಾತಿಪಾತಿಯಾಗಿ ಕಾಣುತ್ತಿದ್ದ ಪಕ್ಕೆಲುಬುಗಳನ್ನೂ ಸೊಂಟದಿಂದ ಪಾದದವರೆಗೂ ಒಂದೇ ಸಮನಾಗಿ ಗಳುವಿನಂತಿದ್ದ ಕಾಲುಗಳನ್ನೂ ಪ್ರದರ್ಶಿಸಿದನು.

"ಪಾಪ! ಅವನೂ ತೀರ್ಥಹಳ್ಳಿ ಆಸ್ಪತ್ರೇಲಿ ಸಾಯೋಕಾಗಿ ಬಿದ್ದಿದ್ದಾನೊ."

"ಅವನಿಗೆ ಹಾಗಾಗಬೇಕು, ನನ್ನೊಡೆಯಾ. ಏನು ಪುಂಡು! ಏನು

ಫುಂಡು! ನಿಮ್ಮ ಟೈಗರು ನಾಯಿಯನ್ನು ಕೊಂದುಹಾಕಿದ್ದು ಅವನೇ ಅಲ್ದಾ? ಭೂತಕ್ಕೆ ಹೇಳ್ಕೊಂಡಿದ್ದೆ ನಾನು; ಅದೇ ಹುಲಿಯಾಗಿ ಬಡಿಯಿತಲ್ದಾ!... ಅಂತೂ ಹೋದ. ಹಾಳುಮುಂಡೆಯ ಮಗ... ಲೌಡಿಮಗ ಏನು ಉರಿಯು ತ್ತಿದ್ದ!..."

ಸೋಮು ಜಾಕಿಯಮೇಲೆ ತನಗಿದ್ದ ರೋಷವನ್ನೆಲ್ಲ ಬೈದು ಪೂರೈಸುತ್ತ, ಮೊರದೊಡನೆ ಆಲದಮರವನ್ನೇರಿ, ಚಗಳಿಯ ಗೂಡಿದ್ದ ಕೊಂಬೆಗೆ ಹೋಗಿ, ಮೊರವನ್ನು ಗೂಡಿನ ಕೆಳಗಡೆಗೆ ಹಿಡಿದು, ಗೂಡುಕಟ್ಟಿದ್ದ ಸಣ್ಣ ಕೊಂಬೆಯನ್ನು ಕಡಿಯತೊಡಗಿದನು. ಚಗಳಿಯಿರುವೆಗಳು ಬಳಬಳನೆ ಮೊರಕ್ಕೆ ಉದುರಿದುವು. ಅವುಗಳೊಡನೆ ಹರಿದ ಗೂಡಿನಿಂದ ಗೋಧಿಯ ಗಾತ್ರದ ಬಿಳಿಯ ಮೊಟ್ಟೆಗಳೂ ಬಿದ್ದುವು. ಇರುವೆಗಳು ಮೊರದಿಂದ ಹರಿದೋಡದಂತೆ ಸೋಮು ಮೊರವನ್ನು ಹಿಂದಕ್ಕೂ ಮುಂದಕ್ಕೂ ಎಡಕ್ಕೂ ಬಲಕ್ಕೂ ಸರಸರನೆ ಅಲುಗಾಡಿಸುತ್ತಿದ್ದನು. ಮೊರದಲ್ಲಿದ್ದ ಉಪ್ಪು ಬರಬರನೆ ಸದ್ದಾಗುತ್ತಿದ್ದಿತು. ಚಗಳಿಯಿರುವೆಗಳು ಉಪ್ಪಿನ ದಸೆಯಿಂದ ಹುಳಿಯನ್ನು ಕಾರಿಕೊಂಡು ನಿಶ್ಚಲವಾಗತೊಡಗಿದುವು. ಆದರೂ ಹಲಕೆಲವು ಇರುವೆಗಳು ಸೋಮುನನ್ನು ಕಡಿಯತೊಡಗಿದುವು. ಸೋಮುನು 'ಆಯ್' 'ಅಯ್ಯ್' 'ಅಯ್ಯಯ್ಯಯ್ಯೋ' ಎನ್ನುತ್ತಾ ಮೈಯನ್ನು ಅಲ್ಲಿ ಇಲ್ಲಿ ಉಜ್ಜಿಕೊಂಡು, ಕಡೆಗೆ ಹೊದೆದಿದ್ದ ಕಂಬಳಿಯನ್ನೂ ಕೆಳಗೆ ಹಾಕಿದನು.

"ಕೆಳಗೆ ಬಿದ್ದೀಯಾ, ಜೋಕೆ!" ಎಂದ ಹೂವಯ್ಯ ನಗು ತಡೆಯಲಾರದೆ ಹೋದನು. ಸೋಮುನ ಅಭಿನಯ ಅಷ್ಟೊಂದು ಹಾಸ್ಯಪರಿಪೂರ್ಣವಾಗಿತ್ತು.

"ಇ... ಲ್ಲಾ... ಆಯ್! ಅಯ್ಯ್! ... ಅಯ್ಯಯ್ಯಯ್ಯೊ..." ಎಂದು ಕೂಗಿಕೊಳ್ಳುತ್ತಾ ಸೋಮುನು ತನ್ನ ಬೇಟೆಯೊಡನೆ ಬಿರಬಿರನೆ ಕೆಳಗಿಳಿದನು.

ಮೊರದಲ್ಲಿ ಲಕ್ಷಾಂತರ ಕೆಂಬಣ್ಣದ ಚಗಳಿಯಿರುವೆಗಳೂ ಅದಕ್ಕಿಂತಲೂ ಹೆಚ್ಚಾಗಿ ಬಿಳಿಯ ಕಿರುಮೊಟ್ಟೆಗಳೂ ತುಂಬಿದ್ದುವು. ಇರುವೆಗಳಲ್ಲಿ ಬಹು ಭಾಗಕ್ಕೆ ಇನ್ನೂ ಪ್ರಾಣ ಹೋಗಿರಲಿಲ್ಲ; ಒದ್ದಾಡಿಕೊಳ್ಳುತ್ತಿದ್ದುವು.

ಸೋಮು ಕಂಬಳಿಯನ್ನು ಹೆಗಲಮೇಲೆ ಹಾಕಿಕೊಂಡು ಹೂವಯ್ಯನ ಕಡೆಗೆ ತಿರುಗಿ "ಆ ಜಾಕಿ ಹೋಗಿದ್ದೇನೋ ಲೋಕಕ್ಕೆ ಒಳ್ಳೆಯದಾಯ್ತು! ಆದರೆ ಪಾಪ! ಕೃಷ್ಣಪ್ಪಗೌಡ್ರು! ಏನು ಗಿರಾಚಾರ! ಮದುವೆ ಗೊತ್ತಾಗಿತ್ತಂತೆ! ಹುಣ್ಣಿಮೆ ಕಳೆದಮೇಲೆ ಲಗ್ನ ಆಗುತ್ತಿತ್ತಂತೆ!..." ಎಂದು ಹೇಳುತ್ತಿದ್ದನು.

ಹೂವಯ್ಯ "ಹ್ಞೂ ಬಿಡು. ಅದನ್ನೆಲ್ಲ ಕಟ್ಟಿಕೊಂಡು ನೀನೇನು ಮಾಡ್ತೀಯ? ಹೋಗು!" ಎಂದನು.

ಸೋಮ 'ಗಳು' ಕಾಲುಗಳನ್ನು ಬೀಸಿಹಾಕುತ್ತ ಗಿಡಮರಗಳ ನಡುವೆ ಕಣ್ಮರೆಯಾದನು. ಹೂವಯ್ಯನ ಮನದಲ್ಲಿ ಮತ್ತೆ ಸೀತೆಯ ಆಲೋಚನೆ ಮೂಡಿತ್ತು. ಕಾಯಿಲೆಯಾಗಿದ್ದ ಆಕೆಯನ್ನು ಹೋಗಿ ನೋಡಿಕೊಂಡು ಬರ ಬೇಕೆಂಬ ಮನಸ್ಸೂ ಒಯ್ಯೊಯ್ಯನೆ ವೃದ್ಧಿಯಾಯಿತು.

ಅಲ್ಲಿಂದ ವೇಗವಾಗಿ ಮನೆಗೆ ನಡೆದುಬಂದು ಉಡುಪು ಬದಲಾಯಿಸಿದನು. ಕನ್ನಡಿಯ ಮುಂದೆ ನಿಂತು ಕ್ರಾಪು ಬಾಚಿಕೊಂಡನು. ಅಡುಗೆ ಮನೆಗೆ ಹೋಗಿ, ತಾಯಿಯೊಡನೆ ಮುತ್ತಳ್ಳಿಗೆ ಹೋಗಿಬರುತ್ತೇನೆಂದು ತಿಳಿಸಿ, ಹೊರಟನು.

ತನ್ನನ್ನು ಹಿಂಬಾಲಿಸುತ್ತಿದ್ದ ನಾಯಿಗಳನ್ನು ಹಿಂದಕ್ಕಟ್ಟಿ, ತೋಟದ ಮೇಲೆ ಹಾದುಹೋಗುತ್ತಿದ್ದ ಕಾಲುದಾರಿಯಲ್ಲಿ ನಡೆದನು. ಅವನ ಹೃದಯದಲ್ಲಿ ಏನೋ ಒಂದು ಮಹಾಪರಿವರ್ತನೆಯಾಗುತ್ತಿತ್ತು. ಉಲ್ಲಾಸದ ಬುಗ್ಗೆ ಮತ್ತೊಮ್ಮೆ ಕಣ್ಣು ಬಿಡುತ್ತಿತ್ತು. ಹಿಂದೆ ಕೃಷ್ಣಪ್ಪ ಸೀತೆಯರ ವಿವಾಹ ನಿಶ್ಚಯದಿಂದ ಭಗ್ನವಾಗಿದ್ದ ಆಸೆ ಮರಳಿ ಮೊಳೆಯುತಿತ್ತು. ಪೂರ್ವಾಹ್ಣದ ಸೌಂದರ್ಯ — ಹಸುರು, ಬಿಸಿಲು, ಹಕ್ಕಿಗಳ ಹಾಡು, ತಂಗಾಳಿ — ಅವನ ಪ್ರಾಣಕ್ಕೆ ಮತ್ತು ಏರುವಂತೆ ಮಾಡುತ್ತಿದ್ದಿತು. ನಡುನಡುವೆ ತನ್ನ ಕ್ರಾಪನ್ನು ಮುಟ್ಟಿನೋಡಿಕೊಳ್ಳುತ್ತಿದ್ದನು. ಕೆನ್ನೆಯಮೇಲೆ ಕೈಯಾಡಿಸಿಕೊಳ್ಳುತ್ತಿದ್ದನು. ತನ್ನ ಮುಖದಲ್ಲಿ ಏನೋ ಒಂದು ಹೊಸ ಹೊಳಪು ಬಂದಿದೆ ಎಂದು ಅವನಿಗೆ ತಿಳಿ ದಂತಾಗಿ, ಹಿಂದಿನ ದಿನದ ಮಳೆಯ ನೀರು ಸ್ವಲ್ಪ ಹೆಚ್ಚಾಗಿ ನಿಂತಿದ್ದ ಜಲದರ್ಪಣ ವೊಂದರಲ್ಲಿ ಬಾಗಿನೋಡಿದನು. ನೋಡಿ ತನ್ನ ಊಹೆ ಸರಿಯಾದುದೆಂಬ ಸಮಾಧಾನದಿಂದ ಹಿಗ್ಗಿ ಮತ್ತೆ ಜೋರಾಗಿ ನಡೆದನು.

ಕಾಲುಹಾದಿಯಿಂದ ಸರಕಾರಿ ರಸ್ತೆಗೆ ಸೇರಿ ಸ್ವಲ್ಪ ದೂರ ಹೋಗಿದ್ದನು. ಹಿಂದೆ ಕೊಪ್ಪದ ಕಡೆಯಿಂದ ಬರುತ್ತಿದ್ದ ಬೈಸಿಕಲ್ಲೊಂದರ ಗಂಟೆಯ ಗಲಾಟೆ ಹುಚ್ಚು ಹುಚ್ಚಾಗಿ, ಪ್ರಾಣಬಿಡುತ್ತಿದೆಯೊ ಎನ್ನುವಂತೆ, ಕಿರಿಚಿಕೊಂಡು ಕೇಳಿ ಸಿತು. ಹೂವಯ್ಯ "ಇಲ್ಲಿಗೆಲ್ಲಿಂದ ಬಂತಪ್ಪಾ ಬೈಸ್ಕಲ್ಲು ?" ಎಂದುಕೊಂಡು ತಿರುಗಿನೋಡಿ ಅರುಗಾಗುವಷ್ಟರಲ್ಲಿ, ಬಹಳ ಕಡಿದಾಗಿ, ಕೊರಕಲಾಗಿ, ಕೆಟ್ಟು, ಇಳಿಜಾರಾಗಿದ್ದ ರಸ್ತೆಯಲ್ಲಿ ಉನ್ಮತ್ತವೇಗದಿಂದ ಧಾವಿಸುತ್ತಿದ್ದ ಬೈಸಿಕಲ್ಲು, ಅವನನ್ನು ಕೀಸಿಕೊಂಡು ಹೋಯಿತೋ ಎನ್ನುವಷ್ಟರ ಮಟ್ಟಿಗೆ ಸಮೀಪದಲ್ಲಿ ಸುಸ್ಸೆಂದು ನುಗ್ಗಿಹೋಯಿತು.

"ಏನು ಹುಚ್ಚು ಮನುಷ್ಯ ! ಈ ಕೊರಕಲು ರಸ್ತೆಯಲ್ಲಿ ಇಷ್ಟು ಜೋರಾಗಿ ಹೋಗುತ್ತಿದ್ದಾನಲ್ಲಾ ? ಎಲ್ಲಾದರೂ ಬಿದ್ದು ಹಲ್ಲುಮುರಿದುಕೊಳ್ಳುತ್ತಾನೆ: ಇಲ್ಲದಿದ್ದರೆ ಯಾರಮೇಲಾದರೂ ಬಿಟ್ಟು ಪುಕಾರುಮಾಡುತ್ತಾನೆ" ಎಂದು

ಆಲೋಚಿಸುತ್ತ ಹೂವಯ್ಯ ನೋಡುತ್ತಿದ್ದಹಾಗೆಯೆ ರಸ್ತೆಯ ತಿರುಗಣೆಯಲ್ಲಿ ಬೈಸಿಕಲ್ಲು ಒಂದು ಹೊಂಡಕ್ಕೆ ಹಾರಿ, ಚಿಮ್ಮಿ, ಕುದುರೆಯಂತೆ ಎರಡುಮೂರು ನೆಗೆತ ನೆಗೆದು, 'ದರೆ'ಗೆ ಢಿಕ್ಕಿ ಹೊಡೆದು, ಕಣಕಣ ಶಬ್ದದೊಡನೆ ಮಗುಚಿ ಕೊಂಡಿತು. ಅದರಮೇಲಿದ್ದ ಷೋಕಿ ಸವಾರನೂ ತಿರಿಕಲ್ಲೆಸೆದಂತೆ ಮುಖ ಅಡಿಯಾಗಿ ಹೆದ್ದಾರಿಯ ಕಲ್ಲುಕಲ್ಲು ನೆಲದಮೇಲೆ ಅಪ್ಪಳಿಸಿಬಿದ್ದನು.

ಹೂವಯ್ಯ ಬಿದ್ದವನ ಸಹಾಯಕ್ಕೆಂದು ಓಡಿ ಬಳಿಸೇರುವಷ್ಟರಲ್ಲಿಯೆ ಆ ವ್ಯಕ್ತಿ ತೊಯ್ದು ಮಣ್ಣಿಡಿದಿದ್ದ ಅಂಗಿ ಪಂಚೆಗಳನ್ನು ಒದರಿಕೊಳ್ಳುತ್ತ ನಿಂತಿದ್ದನು. ಹಣೆಯೂ ಮೂಗಿನ ತುದಿಯೂ ಗಲ್ಲವೂ ಕೆರೆದುಹೋಗಿ ಮಣ್ಣು ಹಿಡಿದಿದ್ದ ಗಾಯಗಳಿಂದ ರಕ್ತ ಸ್ರವಿಸುತ್ತಿದ್ದಿತು.

ಹೂವಯ್ಯ ಸಕರುಣಧ್ವನಿಯಿಂದ ಸಹಾನುಭೂತಿ ತೋರಿಸುತ್ತ "ಪೆಟ್ಟಾಯಿತೇನ್ರೀ ?" ಎಂದು ಕೇಳಿದನು.

ಆ ವ್ಯಕ್ತಿ ಅಸ್ತವ್ಯಸ್ತವಾಗಿದ್ದ ತನ್ನ ಕ್ರಾಪನ್ನು ಒತ್ತಿ ಸರಿಮಾಡಿಕೊಳ್ಳುತ್ತ "ಇಲ್ಲ್ರೀ, ಹೆಚ್ಚು ಏಟಾಗಲಿಲ್ಲ. ಏನು ಹಾಳು ರೋಡ್‌ರೀ ಇದು ? — ಈ ತೀರ್ಥಹಳ್ಳಿ—ಕೊಪ್ಪಾ ರೋಡಿನಷ್ಟು ಡರ್ಟಿ ರೋಡ್ ನಾನೆಲ್ಲೂ ಕಾಣಲಿಲ್ಲ" ಎಂದು ಬೈಸಿಕಲ್ಲನ್ನು ಎತ್ತಿ ನಿಲ್ಲಿಸಿ ಅದನ್ನು ಪರೀಕ್ಷಿಸತೊಡಗಿದನು.

"ಮುಖದಮೇಲೆ ಗಾಯವಾದ ಹಾಗೆ ಕಾಣ್ತದಲ್ಲ್ರೀ !"

"ಏನು ಪರ್ವಾಇಲ್ಲ್ರೀ. ಅಷ್ಟೇನು ಸೀರಿಯಸ್ ಆಗಿಲ್ಲ" ಎನ್ನುತ್ತ ಷೋಕಿ ಸವಾರನು ಟ್ರಿಂ ಟ್ರಿಂ ಎಂದು ಗಂಟೆಮಾಡಿದನು.

"ಬೈಸಿಕಲ್ ಸರಿಯಾಗಿದೆಯೇ ?"

"ಸರಿಯಾಗಿಲ್ಲದೇ ? ಬಿ.ಎಸ್.ಎ. ಬೈಸಿಕಲ್ಲ್ರೀ. ಹಾಗೆಲ್ಲಾ ಡಿರೇಂಜ್ ಆಗೋದಿಲ್ಲ. ಮಡ್‌ಗಾರ್ಡ್ ಸ್ವಲ್ಪ ಬೆಂಡಾಗಿದೆ ಅಷ್ಟೇ !"

"ಈ ರಸ್ತೆ ಬಹಳ ಕೆಟ್ಟುಹೋಗಿದೆರೀ. ಅದಲ್ಲದೆ ತಿರುಗಣೆಗಳೂ ಬಹಳ. ಸ್ವಲ್ಪ ಮೆಲ್ಲಗೆ ಎಚ್ಚರಿಕೆಯಿಂದ ಹೋಗಿ."

"ಇಲ್ಲ್ರೀ, ನಾನು ಎಕ್ಸ್‌ಪರ್ಟು. ಸಾಧಾರಣವಾಗಿ ಯಾವಾಗಲೂ ಇಪ್ಪತ್ತೈದು ಮೂವತ್ತು ಮೈಲಿ ಸ್ಪೀಡ್‌ನಲ್ಲೇ ಹೋಗೋದು ! ಈ ಹಾಳು ರಸ್ತೆ...ನಾ ಬರ್ತೀನ್ರೀ ಕೆಲ್ಸ ಇದೆ" ಎಂದವನೇ ಅವಸರವಾಗಿ ಬೈಸಿಕಲ್ ಹತ್ತಿಕೊಂಡು ಮೊದಲಿನ ವೇಗದಿಂದಲೆ ಕಣ್ಮರೆಯಾದನು.

ಹೂವಯ್ಯ ಕೆಳಗೆ ಬಿದ್ದಿದ್ದ ಆತನ ಫೌಂಟನ್ ಪೆನ್ನನ್ನು ಕಂಡು ಎತ್ತಿಕೊಂಡು "ಏನ್ರೀ ರೀ !" ಎಂದು ಕೂಗುತ್ತ ಹಿಂದೆ ಓಡಿದುದೂ ವ್ಯರ್ಥವಾಯಿತು.

ಯಂತ್ರನಾಗರಿಕತೆ, ಇಂಗ್ಲೀಷು, ಚಾಂಚಲ್ಯ, ಉದ್ವೇಗ, ವೇಗ ! — ತಾನು

ಎಂದೋ ಹಿಂದಿಕ್ಕಿ ಬಂದ ಆ ಪ್ರಗತಿಗಾಮಿಯಾದ ಪ್ರಪಂಚ ಮತ್ತೆ ಬಹುದೂರದ ಮಲೆನಾಡಿನ ಕೊಂಪೆಯಲ್ಲಿ ತನಗೆ ಕ್ಷಣದರ್ಶನ ಕೊಟ್ಟಂತಾಯ್ತು. ನಿಲ್ಲದೆ ಮುಂಬರಿಯುತ್ತಿರುವ, ದಿನದಿನವೂ ಬದಲಾಯಿಸುತ್ತಿರುವ ಹೊರಗಣ ವಿಶಾಲ ಜಗತ್ತಿಗೆ ಪ್ರತಿಮೆಗಳಾದರು, ಆ ಬೈಸಿಕಲ್ ಮತ್ತು ಅದರ ಸವಾರ. ಹೂವಯ್ಯನ ಮನಸ್ಸು ಗವಾಕ್ಷದಿಂದೆಂಬಂತೆ ಕಾನೂರು ಮುತ್ತಳ್ಳಿಗಳ ಸಂಕುಚಿತ ಬದುಕಿನಿಂದ ಹೊರಲೋಕದ ಬಿತ್ತರಕ್ಕೆ ಹಾರಿತು. ಪಟ್ಟಣದ ಸಂದಣಿಯಲ್ಲಿ ಗಮನಕ್ಕೂ ಬಾರದ ಬೈಸಿಕಲ್ಲು ಕಾಡುಬೀಡಿನಲ್ಲಿ ವಿಶೇಷಾತಿಥಿಯಾಗಿ ತೋರಿತು. ಎಷ್ಟಾದರೂ ಆಕ್ರಮಣಶೀಲವಾದ ಆ ಚಂಚಲಮಾನ ನಾಗರಿಕ ಲೋಕವು ಮಲೆನಾಡಿಗೆ ದಾಳಿಯಿಡುವ ಮೊದಲು ಮುನ್ನಟ್ಟಿದ ರಣಚಾರನಲ್ಲವೆ ಆ ಬೈಸಿಕಲ್ ಸವಾರ!

ಹೂವಯ್ಯ ಪೆನ್ನನ್ನು ನೋಡುತ್ತ, ಅದರ ಮೇಲೆ ಹಂಸದ ಚಿತ್ರವೆಂದು ಬರೆದಿದ್ದ ಇಂಗ್ಲಿಷ್ ಲಿಪಿಯನ್ನು ಓದುತ್ತ, ಸ್ವಲ್ಪ ದೂರ ಹೋಗುವುದರಲ್ಲಿ ಎದುರಾಗಿ ಬರುತ್ತಿದ್ದ ನಂಜನನ್ನು ಕಂಡು, ಇತರ ವಿಷಯಗಳನ್ನೆಲ್ಲ ಮರೆತು, ಸೀತೆಯನ್ನು ನೆನೆದು, ಕಾತರನಾಗಿ ಮುಂದುವರಿದನು.

ದೂರದಿಂದಲೆ "ಏನೋ ಸಮಾಚಾರ?" ಎಂದು ಕೇಳಿದನು.

ನಂಜನು, ಹೇಳಬಾರದ ಸುದ್ದಿಯನ್ನು ಹೇಳಲು ಬಂದವನಂತೆ, ಮುಖ ಸಪ್ಪೆ ಮಾಡಿಕೊಂಡು ಅಳುಧ್ವನಿಯಿಂದ "ಏನಂತ ಹೇಳಾದು. ನನ್ನೊಡೆಯಾ? ಆಗಬಾರದ್ದು ಆಗಿಹೋಯ್ತು!" ಎಂದು ರೋದಿಸುತ್ತ ಕಣ್ಣೀರು ಸುರಿಸುತ್ತ "ಹೀಂಗಾಗ್ತದೆ ಅಂತಾ ಯಾರು ತಿಳಿದಿದ್ದರು?" ಎಂದು ಬಿಕ್ಕಿಬಿಕ್ಕಿ ಸುಯ್ಯ ತೊಡಗಿದನು.

ಹೂವಯ್ಯನ ಮೈಮೇಲೆ ಕುದಿನೀರು ಚೆಲ್ಲಿದಂತಾಯ್ತು. ನಾಡಿಗಳಲ್ಲಿ ಒಂದು ಸಾರಿ ಹಿಮದ ಪ್ರವಾಹ ನುಗ್ಗಿದಂತಾಗಿ ಮರಳಿ ಬೆಂಕಿಯ ಹೊನಲು ಹರಿಯತೊಡಗಿದಂತಾಗಿ ಮೈ ಬೆವರಿತು. ತುಟಿ ಅದುರಿದುವು. ಕೂಡಲೆ ಮಾತಾಡಿದ್ದರೆ ಕಂಠ ಗದ್ಗದವಾಗಿರುತ್ತಿದ್ದಿತು. ಉಸಿರು ರಭಸದಿಂದಾಡ ತೊಡಗಿತು. ಮಿದುಳು ಕದಡಿದಂತಾಯಿತು. ಕಾಲುಗಳು ಶರೀರದ ಭಾರ ವನ್ನು ಹೊರಲಾರದೆ ಕುಸಿದು ಬೀಳುತ್ತಿವೆಯೋ ಎನ್ನುವಂತಾದುವು.

ಉದ್ವೇಗದಿಂದಲೂ ಆಶಂಕೆಯಿಂದಲೂ "ಏ... ಏನೋ... ಏನೋ ... ಸೀತೆಗೆ ಕಾಯಿಲೆ ಹೇಗಿದೆಯೋ?" ಎಂದು ಕೇಳಿದ ಹೂವಯ್ಯನ ಪ್ರಶ್ನೆಗೆ ನಂಜ ಮಾರುತ್ತರ ಕೊಡದೆ ಗಟ್ಟಿಯಾಗಿ ಅಳತೊಡಗಿ ಕಂಬಳಿಯೊಳಗೆ ತುಸು ಹೊತ್ತು ತಡವಿ ಹುಡುಕಿ, ಒಂದು ಕಾಗದವನ್ನೀಚೆಗೆ ತೆಗೆದು ನೀಡಿದನು.

ನಡುಗುವ ಕೈಯಿಂದ ಹೂವಯ್ಯ ಅದನ್ನು ಕಸಿದುಕೊಂಡು ಬೇಗ ಬೇಗನೆ

ಬಿಚ್ಚಿ ಓದಿದನು. ಆಮೇಲೆ ಸ್ವಲ್ಪ ಶಾಂತವಾಗಿ ತಲೆಯೆತ್ತಿ ನಂಜನ ಕಡೆ ನೋಡಿ "ಏನೋ ಯಾತಕ್ಕೋ ಅಳ್ತೀಯಾ?" ಎಂದು ಸಿಟ್ಟಿನಿಂದ ಕೇಳಿದನು. ಏಕೆಂದರೆ, ಚಿನ್ನಯ್ಯ ತಾನು ಬರೆದಿದ್ದ ಪತ್ರದಲ್ಲಿ ಕೃಷ್ಣಪ್ಪನ ಮರಣದ ವಿಚಾರ ವಾಗಿ ಸಂತಾಪವನ್ನೂ ಸೀತೆಯ ರೋಗವು ಗುಣಮುಖವಾದುದಕ್ಕಾಗಿ ಸಂತೋಷವನ್ನೂ ಸೂಚಿಸಿ, ಹೂವಯ್ಯನು ಮುತ್ತಳ್ಳಿಗೆ ಅಗತ್ಯವಾಗಿ ಬಂದು ಹೋಗಬೇಕೆಂದು ಒತ್ತಾಯಮಾಡಿ ಬರೆದಿದ್ದನು.

"ಏನು ಹೇಳಾದು, ಒಡೆಯಾ? ಸೀತಮ್ಮನವರ ಮದುವೆ ಹೀಂಗೆ ನಿಂತು ಹೋಗ್ತದೆ ಅಂತಾ ಸಪ್ಪನ್ದಾಗೆ ಕೂಡ ಯಾರಿಗೆ ಗೊತ್ತಿತ್ತು?" . . . ಎಂದ ನಂಜ ಬಿಕ್ಕಿ ಬಿಕ್ಕಿ ಅಳುತ್ತ "ನಿನ್ನೆ ಸಾಯಂಕಾಲ ನನ್ನ ಮಗಾ ರಂಗೀನೂ ತೀರಿ ಹೋಯ್ತು, ಒಡೆಯಾ!" ಎಂದು ಎದೆಬಿರಿಯುವಂತೆ ಅಳುತ್ತ ಬೀದಿಯ ಮೇಲೆ ಕೂತುಬಿಟ್ಟನು.

"ಏನಾಗಿತ್ತೊ ಅದಕ್ಕೆ?"

ನಂಜ ಅಳುತ್ತಲೆ "ಬಾಲಗ್ರಹ ಚಾಷ್ಟೆ ಅಂದ್ರು . . . ಅಯ್ಯೋ ಸ್ವಾಮಿ, ನನಗೇಕೆ ಈ ಕಷ್ಟ ಕೊಟ್ನೋ ದೇವ್ರು? ಅವನ ಗುಡಿ ಜರಿದು ಬಿದ್ದುಹೋಗ!" ಎಂದು ಶಪಿಸತೊಡಗಿದನು.

ಹೂವಯ್ಯ ನಾನಾರೀತಿಯಿಂದ ಸಮಾಧಾನ ಹೇಳಿ, ಅವನನ್ನು ಕೈಹಿಡಿದೆತ್ತಿ ನಿಲ್ಲಿಸಿದನು.

ಇಬ್ಬರೂ ಮುತ್ತಳ್ಳಿಯ ಬಳಿಗೆ ಬರಲು, ನಂಜ ತನ್ನ ಗುಡಿಸಲನ್ನು ಕಂಡೊಡನೆ ಅಳುತ್ತ ಹುಚ್ಚನಂತೆ ಅದರೊಳಗೆ ನುಗ್ಗಿದನು. ಹೂವಯ್ಯನೊಬ್ಬನೆ ಮುಂಬ ರಿದು, ಮುಂದೆ ನಡೆಯಲಿದ್ದ ತಮ್ಮ ಮಗಳ ಮದುವೆಗಾಗಿ ಶ್ಯಾಮಯ್ಯಗೌಡರು ಮಾಡಿಸಿದ್ದ ಕಾಮಗಾರಿಗಳನ್ನು ನೋಡುತ್ತ, ಹೆಬ್ಬಾಗಿಲೊಳಗೆ ದಾಟಿದನು.

## ೩೭

# ಮದುವೆಯಾಗುವವನೇ ಹೆಣ್ಣು ಕೇಳುವುದೇ?

"ಅಕ್ಕಯ್ಯಾ, ರಂಗಿ ಸತ್ತುಹೋತಂತೇ ಕಣೇ" ಎಂದು ಲಕ್ಷ್ಮಿ ತನ್ನಿಂದ ಸಾಧ್ಯವಾದಷ್ಟು ಗಾಂಭೀರ್ಯ ಶೋಕಗಳನ್ನು ಪ್ರದರ್ಶಿಸುತ್ತ ಹೇಳಿದಳು.

ತನಗೆ ಆ ಸುದ್ದಿ ಮೊದಲೇ ತಿಳಿದಿದ್ದುದರಿಂದಲೂ ಮನಸ್ಸು ಬೇರೆಯ ಚಿಂತೆ ಗಳಲ್ಲಿ ತೊಡಗಿದ್ದುದರಿಂದಲೂ ಸೀತೆ ಮಾತಾಡಲಿಲ್ಲ. ಕಿಟಕಿಯ ಸರಳುಗಳಿಂದ

ವಿಭಾಗಿಸಲ್ಪಟ್ಟಿದ್ದಂತೆ ತೋರುತ್ತಿದ್ದ ಆಕಾಶದ ಕಡೆಗೆ ನೋಡುತ್ತ ರೋಗಶಯ್ಯೆಯ ಮೇಲೆ ಮಲಗಿದ್ದಳು.

ಹಿಂದಿನ ದಿನ ಕೃಷ್ಣಪ್ಪನ ಮರಣವಾರ್ತೆ ಬಂದ ಹೊಸತರಲ್ಲಿ ಆಕೆಯ ಮನಃಸ್ಥಿತಿ ಗಾಬರಿಹುಟ್ಟಿಸುವಂತಾಗಿತ್ತು. ಆದರೆ ಕ್ರಮೇಣ ಹಗುರವಾಯಿತು. ಅದಕ್ಕಿಂತಲೂ ಆಶ್ಚರ್ಯಕರವಾಗಿ ಶರೀರಸ್ಥಿತಿ ಉತ್ತಮಗೊಳ್ಳತೊಡಗಿತು. ಸಾಯಂಕಾಲವಾಗುವುದರೊಳಗೆ, ಅನೇಕ ದಿನಗಳಿಂದ ಏನೇನು ಮಾಡಿದರೂ ಬಿಡದಿದ್ದ ಜ್ವರ ಸಂಪೂರ್ಣವಾಗಿ ಬಿಟ್ಟುಹೋಯಿತು! ಗೌರಮ್ಮನವರಂತೂ ತಾವು ತಿರುಪತಿ ತಿಮ್ಮಪ್ಪನಿಗೆ ಹರಸಿಕೊಂಡದ್ದು ಸಾರ್ಥಕವಾಯಿತೆಂದು ತಮ್ಮ ಭಕ್ತಿಯ ಒಲುಮೆಗೆ ತಾವೇ ಹಿಗ್ಗಿ ಕಣ್ಣೀರು ಕರೆದರು. ಸೀತೆಯೂ ತಾಯಿಯ ಅಭಿಪ್ರಾಯವನ್ನೇ ಸಮರ್ಥಿಸಿ, ಅದನ್ನೇ ಸಂಪೂರ್ಣವಾಗಿ ನಂಬಿದಳು.

ತಾನು ತಿಳಿಸಿದ ಅಷ್ಟೊಂದು ಮುಖ್ಯವಾದ ಸುದ್ದಿಯನ್ನು ಕೇಳಿಯೂ ಸುಮ್ಮನಿದ್ದ ಅಕ್ಕನ ತಾಟಸ್ಥ್ಯವನ್ನು ಸಹಿಸಲಾರದೆ ಲಕ್ಷ್ಮಿ ಮತ್ತೆ “ಅಕ್ಕಯ್ಯ, ರಂಗಿ ಸತ್ಹೋತಂತಲ್ಲಾ ಎಲ್ಲಿಗೆ ಹೋ'ತು?” ಎಂದಳು. ಅವಳ ಕೈ ಬೆರಳೊಂದು ಹರಿದು ತೂತಾಗಿದ್ದ ಜೇಬಿನ ತಳಭಾಗದಲ್ಲಿ ಹೊರಗಿಣಿಕಿ, ತುಂಡಾದ ಹಲ್ಲಿಯ ಬಾಲದಂತೆ ನಾಟ್ಯವಾಡುತ್ತ, ತನ್ನ ಒಡತಿಯ ಪ್ರಶ್ನೆಯಲ್ಲಿ ಗಭೀರತೆಯಿದ್ದರೂ ಆಕೆಯ ಮನಸ್ಸಿನಲ್ಲಿ ಅದಿಲ್ಲ ಎನ್ನುವುದನ್ನು ಸಾರಿ ಹೇಳುವಂತಿತ್ತು.

“ಎಲ್ಲಿಗೆ ಹೋ'ತು ಅಂದ್ರೆ? ಸತ್ತುಹೋ'ತು!” ಎಂದಳು ಸೀತೆ.

“ಸತ್ತುಹೋ'ತೇನೂ!” ಎಂದು ಏನೋ ಮಹಾ ವಿಷಯವೆಲ್ಲ ಗೊತ್ತಾದವಳಂತೆ ನಟಿಸಲೆಳಸಿದ ಲಕ್ಷ್ಮಿ ಮತ್ತೆ ಸಂದೇಹಗ್ರಸ್ತಳಾದವಳಂತೆ “ಸತ್ತು ಎಲ್ಲೀಗೆ ಹೋ'ತು?” ಎಂದು ಕೇಳಿದಳು.

“ಸ್ವರ್ಗಕ್ಕೆ.”

ಅಕ್ಕನ ಮನಸ್ಸಿಗೆ ಆ ವಿಷಯಪ್ರಸ್ತಾಪದಿಂದ ನೋವಾಗುತ್ತದೆಂದು ಲಕ್ಷ್ಮಿಗೆ ಗೊತ್ತಾಗುವುದಾದರೂ ಹೇಗೆ?

“ಸೊರ್ಗ ಇರಾದೆಲ್ಲಿ?”

“ಮೋಡ ಆಕಾಶ ನಕ್ಷತ್ರ ಎಲ್ಲ ದಾಟಿಹೋದರೆ ಸಿಕ್ತದೆ.”

ಅಂಬೆಗಾಲಿಕ್ಕುವುದಕ್ಕೇ ಸರಿಯಾಗಿ ಬಾರದೆ ಇದ್ದ ರಂಗಿ ಅಷ್ಟು ದೂರ ಹೇಗೆ ಪ್ರಯಾಣಮಾಡಿದಳು ಎಂಬುದು ಲಕ್ಷ್ಮಿಗೆ ವಿಶದವಾಗಲಿಲ್ಲ.

“ರಂಗಿ ಹ್ಯಾಂಗೆ ಹೋ'ತೇ ಓಷ್ಟು ದೂರ?”

ಸೀತೆ ತನಗೆ ತಿಳಿದ ರೀತಿಯಲ್ಲಿ ಸ್ವರ್ಗದ ಸುಖಸೌಂದರ್ಯಗಳನ್ನೂ, ಸತ್ತವರನ್ನು ದೇವತೆಗಳು ಎತ್ತಿಕೊಂಡುಹೋಗುವ ವಿಚಾರವನ್ನೂ ತಂಗಿಗೆ ಹೇಳಿದಳು.

ಲಕ್ಷ್ಮಿಗೆ ಅದನ್ನೆಲ್ಲ ಕೇಳಿ ಬಹಳ ಸಂತೋಷವಾಯಿತು. ರಂಗಿ ಅಷ್ಟು ಸುಖದ ಸ್ಥಳಕ್ಕೆ ಹೋಗಿದ್ದರೆ ಅವಳ ತಂದೆತಾಯಿಗಳು ಎದೆಯೆದೆ ಬಡಿದು ಕೊಂಡು ಏಕೆ ಅತ್ತರೆಂಬುದು ಆಕೆಗೆ ಭಾವವಾಗಲಿಲ್ಲ. ಮತ್ತೆ ಕೇಳಿದಳು:

"ನಾವೂ ಹೋಗಾನೇನೆ ಅಲ್ಲಿಗೆ?"

"ಥೂ! ಹಾಳುಬಾಯಿ ನುಡೀಬೇಡ" ಎಂದಳು ಸೀತೆ.

ಲಕ್ಷ್ಮಿಗೆ ಬಹಳ ಆಶ್ಚರ್ಯವಾಯಿತು, ಅಷ್ಟು ಒಳ್ಳೆಯ ಜಾಗಕ್ಕೆ ಹೋಗೋಣ ಎಂದರೆ ಅಕ್ಕ 'ಹಾಳು ಬಾಯಿ ನುಡೀಬೇಡ' ಎನ್ನುತ್ತಾಳಲ್ಲಾ ಎಂದು.

ಆದರೂ ಶ್ರುತಿಗೆ ಮತಿ ಶರಣಾಗಿ, ವೇದಕ್ಕೆ ವಿಚಾರ ಶರಣಾಗಿ ಬಾಯಿ ಮುಚ್ಚಿಕೊಳ್ಳುವಂತೆ, ಸ್ವಲ್ಪಹೊತ್ತು ಸುಮ್ಮನಿದ್ದು "ರಂಗಿ ಹಿಂದಕ್ಕೆಂದು ಬತ್ತದೆ?" ಎಂದು ಬೇರೆ ವಿಷಯ ತೆಗೆದಳು.

ಸೀತೆ ನಸು ಕಿನಿಸಿಕೊಂಡು "ಹಿಂದಕ್ಕೆ ಬರೋದು ಇಲ್ಲ, ಏನೂ ಇಲ್ಲ" ಎಂದಳು.

ಲಕ್ಷ್ಮಿಯ ಮುಗ್ಧತೆ ಅಕ್ಕ ಕೊಟ್ಟ ಉತ್ತರದ ಆಘಾತದಿಂದ ತತ್ತರಿಸಿತು. ಹಿಂದಕ್ಕೆ ಬರಗೊಡಿಸದ ಆ ಸ್ವರ್ಗ ಹುಲಿಯ ಬಾಯಿಗಿಂತಲೂ ಭಯಾನಕವಾಗಿ ತೋರಿತು. ಜೇಬಿನ ತೂತಿನಲ್ಲಿ ಆಡುತ್ತಿದ್ದ ಕೈಬೆರಳು ಸ್ತಬ್ಧವಾಯಿತು. ಯಾವುದೋ ಒಂದು ಮಹಾ ಸಂಶಯ ದೃಷ್ಟಿಯಿಂದ ಸೀತೆಯ ಮುಖವನ್ನೇ ದುರುದುರನೆ ನೋಡತೊಡಗಿದಳು. ಕೆಲವು ನಿಮಿಷಗಳು ಹಾಗೆಯೇ ಕೂತಿದ್ದು ಮೆಲ್ಲನೆ ಎದ್ದು ಕೋಣೆಯಿಂದ ಜುಣುಗಿದಳು.

ಸೀತೆ ಕೃಷ್ಣಪ್ಪನನ್ನು ಮದುವೆಯಾಗುವ ಅನಿಷ್ಟ ತಪ್ಪಿತೆಂದು ಒಳಗೊಳಗೇ ಸುಳಿಯುತ್ತಿದ್ದ ಸುಖದಿಂದಲೂ, ಹೂವಯ್ಯಬಾವ ಕಾಯಿಲೆಯಾಗಿದ್ದ ತನ್ನನ್ನು ನೋಡುವುದಕ್ಕೆ ಬರದೇಹೋಗಿಬಿಟ್ಟರಲ್ಲಾ ಎಂಬ ದುಃಖದಿಂದಲೂ ಚಿಂತಾ ಕ್ರಾಂತಳಾಗಿ, ಹೆಚ್ಚು ಹೊತ್ತು ಒಬ್ಬಳೇ ಮಲಗಿರಲಿಲ್ಲ; ಚಿನ್ನಯ್ಯ ಹೂವಯ್ಯ ನೊಡಗೂಡಿ ಕೊಟಡಿಯನ್ನು ಪ್ರವೇಶಿಸಿದನು.

ಎದೆಯವರೆಗೂ ಶಾಲು ಹೊದೆದುಕೊಂಡು ಕಿಟಕಿಯಾಚೆಯ ಆಕಾಶದ ಕಡೆಗೆ ನೋಡುತ್ತಿದ್ದ ಸೀತೆ ಫಕ್ಕನೆ ತಿರುಗಿ ಅಣ್ಣನೊಡನೆ ತನ್ನೆಡೆಗೆ ಬರುತ್ತಿದ್ದ ಹೂವಯ್ಯನನ್ನು ಕಂಡಳು. ಒಡನೆಯೆ ಶಾಲನ್ನು ಕುತ್ತಿಗೆಯವರೆಗೂ ಎಳೆದು ಕೊಂಡು ರೆಪ್ಪೆಮುಚ್ಚಿಕೊಂಡಳು. ಮುಖದಲ್ಲಿ ಮುನಿಸು ದುಃಖಗಳು ತೋರದೆ ಇದ್ದಿದ್ದರೆ ಆಕೆ ನಿದ್ರೆ ಮಾಡುತ್ತಿದ್ದಳು ಎನ್ನಬಹುದಾಗಿತ್ತು.

ಹೂವಯ್ಯನನ್ನು ಕಂಡೊಡನೆ ಸೀತೆಯ ಹೃದಯದಲ್ಲಿ ಅನೇಕ ಭಾವಗಳು ಉದ್ರಿಕ್ತವಾದುವು: ಅವುಗಳಲ್ಲಿ ಮೊದಲನೆಯದೂ ಮುಖ್ಯವಾದುದೂ ಎಂದರೆ ಹರ್ಷ. ಆತನಿಗಾಗಿ ಬಹಳ ದಿನಗಳಿಂದಲೂ ಹಾತೊರೆಯುತ್ತಿದ್ದ

ಆಕೆ ತನ್ನ ಇಷ್ಟಮೂರ್ತಿಯನ್ನು ಕಂಡು ಆನಂದಪಡದೆ ಮತ್ತೇನುಮಾಡಿಯಾಳು? ಆದರೆ ಮನುಷ್ಯನಲ್ಲಿ ಅಭಿಮಾನ ಎಂಬುದೊಂದಿದೆಯಲ್ಲವೆ? ತನ್ನ ಮನದನ್ನನನ್ನು ಕಂಡು ಆಹ್ಲಾದವಾದರೂ ಸೀತೆ ಸ್ವಾಭಿಮಾನದಿಂದಲೂ ಬಿಗುಮಾನದಿಂದಲೂ ಅದನ್ನು ಪ್ರದರ್ಶಿಸಬಾರದೆಂದು ನಿಶ್ಚಯಿಸಿದಳು. ತರುವಾಯ ಇನಿಯನು ಇಷ್ಟು ದಿನವೂ ಬಾರದಿದ್ದುದಕ್ಕಾಗಿ ಮುನಿಸೂ ದುಃಖವೂ ಒಂದನ್ನೊಂದು ಹಿಂಬಾಲಿಸಿ ಬಂದುವು. ಆಮೇಲೆ "ಅಯ್ಯೋ, ನಾನು ಜ್ವರದಿಂದ ನರಳಿದುದನ್ನು ಇವರು ನೋಡಿ ನೋಯುವ ಅದೃಷ್ಟ ತಪ್ಪಿಹೋಯಿತಲ್ಲಾ!" ಎಂಬ ಸೂಕ್ಷ್ಮ ಪ್ರತಿಹಿಂಸೆಯ ಭಾವವೂ ಉತ್ಪನ್ನವಾಯಿತು. ಈ ಎಲ್ಲ ಭಾವಗಳ ಪರಸ್ಪರ ಕ್ರಿಯೆಗಳ ಪರಿಣಾಮವಾಗಿ ಎವೆಮುಚ್ಚಿಕೊಂಡಿದ್ದ ಆಕೆಯ ಕಣ್ಣುಗಳಲ್ಲಿ ನೀರು ನೀರವವಾಗಿ ಬಳಬಳನೆ ಸುರಿಯತೊಡಗಿತ್ತು.

ಹಾಸಗೆಯ ಪಕ್ಕದಲ್ಲಿ ಬಂದು ಕುಳಿತ ಹೂವಯ್ಯ ಚಿನ್ನಯ್ಯರು ಒಂದೆರಡು ನಿಮಿಷಗಳ ತನಕ ಮಾತಾಡಲಿಲ್ಲ. ಕೋಣೆಯ ನಿಶ್ಶಬ್ದ ಶಕುನಪೂರ್ಣವಾಗಿ ಭಾರವಾದಂತಿತ್ತು. ಹೂವಯ್ಯನ ಹೃದಯವೂ ಸೀತೆಯ ಪರವಾದ ಪ್ರೀತಿ ಕನಿಕರಗಳಿಂದಲೂ ತನ್ನ ಪರವಾದ ಕೋಪ ಭರ್ತ್ಸನೆಗಳಿಂದಲೂ ಭಾವಭರಿತವಾಗಿ, ಅವನಿಗೂ ಮೊದಲು ಮಾತಾಡಲು ಸಾಧ್ಯವಾಗಲಿಲ್ಲ. ಒಂದೆರಡುಸಾರಿ ಉಗುಳು ನುಂಗಿ, ಗಂಟಲಲ್ಲಿಯೆ ಕೆಮ್ಮಿ, ಸ್ಥಿರಚಿತ್ತನಾಗಲು ಪ್ರಯತ್ನಿಸಿದನು. ಆದರೂ ಕಣ್ಣು ಹನಿತುಂಬಿ, ದೃಷ್ಟಿ ಮಂಜಾಗತೊಡಗಿತ್ತು.

"ಈಗ ಹ್ಯಾಗಿದೆ, ಸೀತೆ?" ಎಂದು ಚಿನ್ನಯ್ಯನೆ ಮಾತು ಪ್ರಾರಂಭಿಸಿ, ತಂಗಿಯ ಹಣೆಯ ಮೇಲೆ ಕೈಯಿಟ್ಟನು.

ಸೀತೆ ಕಣ್ದೆರೆಯಲಿಲ್ಲ. ಆದರೆ ಕಣ್ಣೀರು ಮೊದಲಿಗಿಂತಲೂ ಹೆಚ್ಚು ಧಾರಾಕಾರವಾಗಿ ಹರಿಯತೊಡಗಿತು. ಹೂವಯ್ಯ ಚಿನ್ನಯ್ಯರಿಬ್ಬರೂ ಅದಕ್ಕೆ ತಪ್ಪು ವ್ಯಾಖ್ಯಾನಮಾಡಿದರು. ಕೃಷ್ಣಪ್ಪನಿಗೊದಗಿದ ದುರಂತ ಘಟನೆಗಾಗಿ ಅಳುತ್ತಿದ್ದಾಳೆ ಎಂದು ಬಗೆದರು.

ಚಿನ್ನಯ್ಯ ತಂಗಿಯನ್ನು ಸಂತವಿಸಲೆಂದು ಮತ್ತೆ "ಅಳೋದ್ಯಾಕವ್ವಾ? ಆಗೋದು ಆಗಿಹೋಯ್ತು! ಯಾರೇನು ಮಾಡೋಕೆ ಆಗ್ತದೆ? ಅವರವರ ಹಣೇಲಿ ಬರೆದಷ್ಟು ಅವರವರಿಗೆ ಲಭಿಸ್ತದೆ..." ಎಂದು ಮರುಕ ತೋರುವ ಧ್ವನಿಯಲ್ಲಿ ಹೇಳುತ್ತಿರಲು, ಸೀತೆ ತಡೆಯಲಾರದೆ ಬಿಕ್ಕಿಬಿಕ್ಕಿ ಅಳತೊಡಗಿದಳು. ಆ ಶೋಕದಲ್ಲಿ ಕೃಷ್ಣಪ್ಪನ ಅಕಾಲ ಘೋರ ಮರಣಕ್ಕಾಗಿ ಅನುತಾಪವಿರಲಿಲ್ಲ. ತನ್ನ ದುಃಖಕ್ಕೆ ತನಗಿಷ್ಟವಿಲ್ಲದ, ತನಗನಿಷ್ಟವಾದ, ವ್ಯಾಖ್ಯಾನವನ್ನು ಮಾಡುತ್ತಿದ್ದಾರಲ್ಲಾ ಎಂಬ ಸಂತಾಪಮಾತ್ರವಿತ್ತು.

ಹೂವಯ್ಯ ಮಾತಾಡದೆ ಅಲುಗಾಡದೆ ನಸು ತಲೆಬಾಗಿ ಕುಳಿತಿದ್ದನು. ಅವನ ಕಣ್ಣುಗಳಿಂದ ನೀರು ಸುರಿಯತೊಡಗಿತ್ತು.

ಚಿನ್ನಯ್ಯ ಸೀತೆಯ ಕೈಹಿಡಿದುಕೊಂಡು "ಛೆ! ಹಾಗೆ ಅಳಬೇಡ! ಮತ್ತೆಲ್ಲಾದ್ರೂ ಜ್ವರ ಬಂದಾತು!— ನಿನ್ನ ಹೂವಯ್ಯಬಾವ ಬಂದಾರೆ, ಕಣ್ಣು ಬಿಟ್ಟು ನೋಡು" ಎಂದನು.

ಸೀತೆ ಬಿಕ್ಕಿಬಿಕ್ಕಿ ಅಳುತ್ತಲೇ ಒಂದು ಸಾರಿ ಕಣ್ದೆರೆದು ಹೂವಯ್ಯನು ತಲೆಬಾಗಿ ಕಂಬನಿಗರೆಯುತ್ತಿದ್ದುದನ್ನು ನೋಡಿ, ಮತ್ತೆ ಕಣ್ಣು ಮುಚ್ಚಿಕೊಂಡಳು. ಆಕೆಯ ಮನಸ್ಸಿಗೆ ಸ್ವಲ್ಪ ನೆಮ್ಮದಿಯಾಯಿತು, ತನ್ನಿನಿಯನೂ ತನಗಾಗಿ ನೋಯುತ್ತಿದ್ದುದನ್ನು ಕಂಡು.

'ಇದೇನು ರಗಳೆಗಿಟ್ಟುಕೊಂಡಿತು' ಎಂದು ಭಾವಿಸಿ ಚಿನ್ನಯ್ಯನೂ "ಹೂವಯ್ಯ, ಗದ್ದೆ ಕಡೆ ಹೋಗಿ ಬರೋಣ ಬಾ" ಎಂದು ಮನಸ್ಸಿಲ್ಲದ ಅವನನ್ನೂ ಜೊತೆಗೆ ಕರೆದುಕೊಂಡು "ಈಗ ಮಾತಾಡಿಸಿದಷ್ಟೂ ಅವಳು ಅಳ್ತಾಳೆ! ಜ್ವರಗಿರ ಬಂದಾತು!" ಎಂದು ಪಿಸುಮಾತಿನಲ್ಲಿ ಹೇಳುತ್ತಾ ಬಾಗಿಲು ದಾಟಿದನು.

ಅಂತೂ ಹೂವಯ್ಯನಾಗಲಿ ಸೀತೆಯಾಗಲಿ ಒಂದು ಮಾತನ್ನೂ ಆಡಲಿಲ್ಲ. ಹೂವಯ್ಯನ ಮನಸ್ಸಿನಲ್ಲಿ ಮಾತ್ರ "ಸೀತೆ ನಿಜವಾಗಿಯೂ ಕೃಷ್ಣಪ್ಪನಿಗಾಗಿ ಅಳುತ್ತಿದ್ದಾಳೆ. ಅವನನ್ನೇ ಮನಃಪೂರ್ವಕವಾಗಿ ಪ್ರೀತಿಸಿದ್ದಳು; ಈಗಲೂ ಪ್ರೀತಿಸುತ್ತಿದ್ದಾಳೆ" ಎಂಬ ತಪ್ಪು ಭಾವ ಪ್ರಬಲತರವಾಗುತ್ತಿತ್ತು.

ಆ ಆಲೋಚನೆ ಬಲವಾದಂತೆಲ್ಲ ಅವನ ಮನಸ್ಸು ಹತಾಶೆಯಿಂದಲೂ ಉದ್ವೇಗದಿಂದಲೂ ವಿಕ್ಷುಬ್ಧವಾಗುತ್ತಿದ್ದಿತು. ಮುತ್ತಳ್ಳಿಗೆ ಬರುವುದು ಮೊದಲು ಎಷ್ಟು ಪ್ರಿಯಕರವಾಗಿದ್ದಿತೊ ಈಗ ಅಲ್ಲಿಂದ ಹೊರಡುವುದೂ ಅಷ್ಟೇ ಪ್ರಿಯಕರವಾಗಿ ತೋರಿತು.

ಗದ್ದೆ ತೋಟಗಳಲ್ಲಿ ಅಡ್ಡಾಡಿಕೊಂಡು ಹಿಂತಿರುಗಲೆಂದು ಹೊರಟ ಇಬ್ಬರೂ ಹೆಬ್ಬಾಗಿಲನ್ನು ದಾಟುತ್ತಿದ್ದಾಗ, ಇದ್ದಕ್ಕಿದ್ದ ಹಾಗೆ ಹೂವಯ್ಯನು "ಚಿನ್ನಯ್ಯ, ನಾನು ಮನೆಗೆ ಹೋಗ್ತೀನಿ" ಎಂದನು.

ಚಿನ್ನಯ್ಯನು ಆ ಹಠಾತ್ತನೆ ನಿರ್ಣಯಕ್ಕೆ ಬೆಚ್ಚಿ ಬೆರಗಾಗಿ "ಯಾಕೆ? ಈಗೆಲ್ಲಿ ಹೋಗೋದು? ಊಟದ ಹೊತ್ತಾಗ್ತಾ ಬಂತು" ಎಂದನು.

"ಪರ್ವಾಯಿಲ್ಲ. ಏನು ಅರ್ಧಗಂಟೆ ಮುಕ್ಕಾಲು ಗಂಟೇಲಿ ಮನೆ ಸೇರ್ತೀನಿ."

"ಅಷ್ಟೇನು ಅವಸರ? ಈಗ ತಾನೆ ಬಂದೀಯಾ! ಅಪ್ಪಯ್ಯನೂ ಇನ್ನೂ

ಸೀತೆಮನೆಗೆ ಹೋದವನು ಬಂದಿಲ್ಲ. ಮಧ್ಯಾಹ್ನದ ಮೇಲೆ ಬರ್ತಾನಂತಾ ಕಾಣ್ತದೆ. ಅವನ್ನ ಕಂಡು ಮಾತಾಡಿ ಹೋಗಬಹುದಂತೆ."

ಹೂವಯ್ಯ ಸ್ವಲ್ಪಹೊತ್ತು ಎವೆಯಿಕ್ಕದೆ ನಿಂತು ಆಲೋಚಿಸಿದನು: ಶ್ಯಾಮಯ್ಯಗೌಡರು ಸೀತೆಯ ವಿಚಾರವಾಗಿ ತನ್ನೊಡನೆ ಮಾತಾಡಬಹುದೇ? ಅಲ್ಲದೆ ಸೀತೆಯೊಡನೆ ಏನೊಂದು ಮಾತನ್ನೂ ಆಡದೆ ಹೋಗುವುದೂ ಸರಿಯಲ್ಲ. ಅವಳ ಮನಸ್ಸನ್ನು ಸರಿಯಾಗಿ ತಿಳಿದು ಹೋಗುವುದೇ ಉತ್ತಮ. ಕಡೆಗೆ ಏನಾದರೂ ಆಗಲಿ, ಮೊದಲು ದುಡುಕಬಾರದು, ಎಂದು ನಿರ್ಣಯಿಸಿ ಚಿನ್ನಯ್ಯನ ಇಷ್ಟಕ್ಕೆ ಒಪ್ಪಿ ಅವನೊಡನೆ ಗದ್ದೆಯ ಕಡೆಗೆ ಹೋದನು.

ಮಧ್ಯಾಹ್ನ ಊಟವಾದಮೇಲೆ ಹೂವಯ್ಯನ ಎಡಗೈಯನ್ನು ಹಿಡಿದು ಜಗ್ಗಿಸಿ ಎಳೆಯುತ್ತ, ಬುಡುಬುಡಿಕೆಯಂತೆ ಏನೇನನ್ನೊ ಗಳಹುತ್ತ ಬರುತ್ತಿದ್ದ ಲಕ್ಷ್ಮಿಯೊಡಗೂಡಿ ಸೀತೆಯನ್ನು ಮಾತಾಡಿಸಲು ಹೋದನು.

ಸ್ವಲ್ಪ ಸಮಯದಲ್ಲಿಯೆ ಬಾವ ಅಕ್ಕಯ್ಯರಿಬ್ಬರೂ ಏನೋ ಗಭೀರವಾದ ಮಾತುಕತೆಗಳಲ್ಲಿ ಮಗ್ನರಾಗಿ ತನ್ನನ್ನು ಸಂಪೂರ್ಣವಾಗಿ ನಿರ್ಲಕ್ಷಿಸಿಬಿಟ್ಟಿದ್ದರಿಂದ ಲಕ್ಷ್ಮಿ ಅಭಿಮಾನಭಂಗದಿಂದಲೂ ಅಸಮಾಧಾನದಿಂದಲೂ ಅಲ್ಲಿಂದೆದ್ದು, ತನಗೆ ಹೆಚ್ಚು ಪುರಸ್ಕಾರವೂ ಗೌರವ ಗಮನಗಳೂ ದೊರಕುವ ಸ್ಥಳಕ್ಕೆ ಎಂದರೆ ಕಾಳನ ಬಳಿಗೆ ಹೋದಳು.

ಮಾತು ಮುಂದುವರಿದ ಹಾಗೆಲ್ಲ ಸೀತೆ ಮನಸ್ಸು ಬಿಚ್ಚಿ ಕಾಯಿಲೆಯ ಕಾಲದಲ್ಲಿ ತಾನು ಕಂಡ ಕನಸುಗಳನ್ನೂ, ಪಟ್ಟ ಯಾತನೆಗಳನ್ನೂ, ತಾನು 'ಹೂವಯ್ಯ ಬಾವ'ನನ್ನು ನಿರೀಕ್ಷಿಸಿ ಹತಾಶಳಾದುದನ್ನೂ ಮುಚ್ಚುಮರೆಯಿಲ್ಲದೆ ಸರಳ ಹೃದಯದಿಂದ ಹೇಳಿದಳು. ಆದರೆ ಹೂವಯ್ಯ ಮಾತ್ರ ತನ್ನಲ್ಲಿ ಸೀತೆಗಿರುವ ಅನುರಾಗದ ಅಗಾಧತೆ ತಿಳಿದುಬಂದರೂ ಕೂಡ ತನ್ನ ಮನಸ್ಸನ್ನು ಸಂಪೂರ್ಣವಾಗಿ ಬಿಚ್ಚಲು ಸಮರ್ಥನಾಗಲಿಲ್ಲ. ತಾನು ಬರಲಾರದಿದ್ದುದಕ್ಕೆ ಹಲಕೆಲವು ನೆವಗಳನ್ನು ಹೇಳಿ, ಅನ್ಯವಿಷಯಗಳನ್ನು ಕುರಿತು ಪ್ರಸ್ತಾವಿಸತೊಡಗಿದನು. ಯಾರೊಬ್ಬರೂ ಕೃಷ್ಣಪ್ಪನ ವಿಷಯವಾಗಿ ಮಾತೆತ್ತಲಿಲ್ಲ.

ಹೂವಯ್ಯ ಸೀತೆ ಮಲಗಿದ್ದ ಕೊಟಡಿಯನ್ನು ಬಿಟ್ಟಾಗ ಅವನ ಮನಸ್ಸು ಮತ್ತೊಂದು ಆಲೋಚನೆಯಿಂದ ಬಿಸಿಯಾಗಿದ್ದಿತು: ಹಿಂದೆ ಸೀತೆಮನೆ ಸಿಂಗಪ್ಪಗೌಡರು ಸೀತೆಯನ್ನು ತಮ್ಮ ಮಗನಿಗೆ ಕೇಳುವ ಮೊದಲು ತಾನೇ ಶ್ಯಾಮಯ್ಯಗೌಡರನ್ನು ಕೇಳಿಬಿಟ್ಟಿದ್ದರೆ ಅವರು ಒಪ್ಪದೆ ಇರುತ್ತಿರಲಿಲ್ಲ. ಅಲ್ಲದೆ ಈಗ ನಡೆದುಹೋದ ಸಂದೇಹ ಸಂಕಟಗಳಿಗೂ ಅವಕಾಶವಿರುತ್ತಿರಲಿಲ್ಲ. ಅಂತೂ ಹೇಗೋ ವಿಧಿವಶದಿಂದ ಸೀತೆ ಅನ್ಯರ ಪಾಲಾಗುವ ಪ್ರಸಂಗ ತಪ್ಪಿತು! ಈಗ

ಲಾದರೂ ತಾನು ಎಚ್ಚರಿಕೆಯಿಂದ ಶೀಘ್ರವಾಗಿ ವರ್ತಿಸದಿದ್ದರೆ ಶ್ಯಾಮಯ್ಯಗೌಡರು ತಮ್ಮ ಮಗಳನ್ನು ಇನ್ನಾರಿಗಾದರೂ ಮದುವೆ ಮಾಡಿಕೊಡಲು ಒಪ್ಪಿಬಿಟ್ಟರೆ ಮತ್ತೆ ಅನಾಹುತವಾದೀತು! ಹಾಗೆಲ್ಲಿಯಾದರೂ ಆಗಿಬಿಟ್ಟರೆ ಸೀತೆಯ ಮತ್ತು ತನ್ನ ಜೀವನಗಳೆರಡೂ ನರಕವಾಗುವುದರಲ್ಲಿ ಸಂದೇಹವಿಲ್ಲ. ಆದ್ದರಿಂದ ಆ ದಿನವೇ ಶ್ಯಾಮಯ್ಯಗೌಡರು ಸೀತೆಮನೆಯಿಂದ ಹಿಂತಿರುಗಿದೊಡನೆ ತನ್ನ ಇಚ್ಛೆಯನ್ನು ಅವರಿಗೆ ತಿಳಿಸಿ, ಅವರನ್ನೊಪ್ಪಿಸಬೇಕೆಂದು ನಿಶ್ಚಯಿಸಿದನು.

ತರುವಾಯ ಹೂವಯ್ಯ ಕೂತಲ್ಲಿ ನಿಂತಲ್ಲಿ ಹೋದಲ್ಲಿ ಬಂದಲ್ಲಿ, ತನ್ನ ನಿರ್ಣಯವನ್ನು ಶ್ಯಾಮಯ್ಯಗೌಡರೊಡನೆ ಹೇಗೆ ಪ್ರಸ್ತಾವಿಸಬೇಕು? ಹೇಗೆ ಪ್ರಾರಂಭಿಸಬೇಕು? ಹೇಗೆ ಕೊನೆಗಾಣಿಸಬೇಕು? ಎಂಬ ಆಲೋಚನಾಪರಂಪರೆಗಳಲ್ಲಿ ತಲ್ಲೀನನಾಗಿ, ಇತರರು ತನ್ನನ್ನು ಮಾತಾಡಿಸಿದರೂ ಪುಸ್ತಕವನ್ನು ಓದುವ ನೆವದಿಂದ ಹೆಚ್ಚು ಮಾತಾಡದೆ, ಹಗಲುಗನಸು ಕಟ್ಟತೊಡಗಿದನು. ಅವನಿಗೆ ಒಂದೊಂದು ಸಾರಿ ಒಂದು ತರಹದ ಮೂರ್ಛೆ ರೋಗ ಬರುತ್ತದೆ ಎಂದು ಗಾಳಿಸುದ್ದಿ ಕೇಳಿದ್ದವರೆಲ್ಲರೂ ಅದು ಸತ್ಯವಾಗಿರಬೇಕೆಂದು ಒಳಗೊಳಗೇ ಭಾವಿಸಿ ಸುಮ್ಮನಾದರು. ಚಿನ್ನಯ್ಯನಿಗೂ ಕೂಡ ಶಂಕೆ ಹುಟ್ಟುವಂತಾಯಿತು.

ಮಧ್ಯಾಹ್ನ ನಾಲ್ಕು ಗಂಟೆಯ ಹೊತ್ತಿಗೆ ಹಿಂದಿನ ದಿನ ಜಾಕಿಯನ್ನು ತೀರ್ಥಹಳ್ಳಿಯ ಆಸ್ಪತ್ರೆಗೆ ಸಾಗಿಸಿಕೊಂಡು ಹೋಗಿದ್ದ ಪುಟ್ಟಣ್ಣ ಬಾಡಿದ ಮೋರೆ ಹಾಕಿಕೊಂಡು ಮುತ್ತಳ್ಳಿಗೆ ಬಂದನು. ಅವನನ್ನು ಕಂಡ ಹೂವಯ್ಯ ಕ್ಷಣಕಾಲ ದಿವಾಸ್ವಪ್ನದಿಂದ ಎಚ್ಚತ್ತವನಂತಾಗಿ "ಜಾಕಿ ಹೇಗಿದ್ದಾನೆ?" ಎಂದು ಕೇಳಿದನು.

ಚಿನ್ನಯ್ಯ, ಗೌರಮ್ಮನವರು, ಲಕ್ಷ್ಮಿ, ಕಾಳ ಮೊದಲಾದವರೆಲ್ಲರೂ ಪುಟ್ಟಣ್ಣನ ಸುತ್ತ ಕಾತರತೆಯಿಂದ ಆಲಿಸತೊಡಗಿದರು.

ಪುಟ್ಟಣ್ಣನೂ ಅರ್ಧಗಂಟೆಯ ಕಾಲ ನಡೆದುದನ್ನೆಲ್ಲ ಸವಿಸ್ತಾರವಾಗಿ, ನಡುನಡುವೆ ಪ್ರಯತ್ನವನ್ನು ಮೀರಿ ಉಕ್ಕಿಬರುತ್ತಿದ್ದ ಕಂಬನಿಗಳನ್ನು ಒರಸಿಕೊಳ್ಳುತ್ತ ಹೇಳಿದನು:

ದಾರಿಯ ಮೇಲೆ ಮಳೆ ಗಾಳಿ ಪ್ರಾರಂಭವಾಯಿತಂತೆ. ಮಳೆ ಬಹಳ ಜೋರಾಗಿ ಸುರಿಯಿತಂತೆ. ಆಗಲೇ ಜಾಕಿ ಹುಲಿ, ಕೃಷ್ಣಪ್ಪ, ಬೇಟೆ — ಇವುಗಳನ್ನು ಕುರಿತು ಹುಚ್ಚುಹುಚ್ಚಾಗಿ ಆಡತೊಡಗಿದನು. ಮಧ್ಯೆ ಮಧ್ಯೆ ಕೇಳಿದವರ ಎದೆ ಬೇಯುವಂತೆ ನೋವಿನಿಂದ ಗೋಳಿಡುತ್ತಿದ್ದನು. ಒಂದೊಂದು ಸಾರಿ "ಕೃಷ್ಣಪ್ಪಗೌಡ್ರೇ, ನಿಮ್ಮ ದಮ್ಮಯ್ಯಾ! ಬೇಡ, ಹೋಗಬ್ಯಾಡಿ! ಗಾಯದ ಹುಲಿ!" ಎಂದು ಮೊದಲಾಗಿ ತನ್ನ ಸಾಮರ್ಥ್ಯವನ್ನೆಲ್ಲ ವೆಚ್ಚ

ಮಾಡಿ ಕಾಕುಹಾಕಿ ಕೂಗಿ ಎದ್ದೋಡಲು ಪ್ರಯತ್ನಿಸುತ್ತಿದ್ದನು. ಏಳದಂತೆ ತಡೆಯುತ್ತಿದ್ದ ಪುಟ್ಟಣ್ಣನನ್ನು ಬಾಯಿಗೆ ಬಂದಂತೆ ಶಪಿಸಿದನು. ಅಂತೂ ಬಹುಕಷ್ಟದಿಂದ ತುಂಗಾನದಿಯ ದೋಣಿಗಂಡಿಯ ಮಳಲುದಿಣ್ಣೆಯಲ್ಲಿ ಗಾಡಿ ಬಿಟ್ಟು, ದೋಣಿಯವರಿಗೆ ದಮ್ಮಯ್ಯಗುಡ್ಡೆ ಹಾಕಿ, ಜಾಕಿಯನ್ನು ದೋಣಿಯಲ್ಲಿ ಮಲಗಿಸಿ ಹೊಳೆಯಾಚೆಗೆ ಸಾಗಿಸಿ, ಜವಳಿ ಅಂಗಡಿ ರಾಮರಾಯರ ಗಾಡಿಯ ಮೇಲೆ ಆಸ್ಪತ್ರೆಗೆ ಕೊಂಡೊಯ್ದರು . . . ಅಲ್ಲಿಗೆ ಹೋಗಿ ಸ್ವಲ್ಪ ಹೊತ್ತಿನಲ್ಲಿ ಅವನಿಗೆ ಪ್ರಜ್ಞೆ ತಪ್ಪಿತು. ಡಾಕ್ಟರು ಗಾಯಗಳಿಗೆ ಔಷಧಿ ಹಾಕಿದರು. ಸೂಜಿಮದ್ದನ್ನೂ ಹಾಕಿದರು. ಬಹಳ ಒಳ್ಳೇ ಡಾಕ್ಟರು ! ಆಸ್ಪತ್ರೆಯಲ್ಲಿಯೇ ಇಳಿದುಕೊಳ್ಳಲು ಸ್ಥಳ ಕೊಟ್ಟರು. ರಾತ್ರಿಯೆಲ್ಲ ಪುಟ್ಟಣ್ಣನಿಗೆ ನಿದ್ರೆಯಿಲ್ಲ. ಜಾಕಿಗೆ ಪ್ರಜ್ಞೆ ಹೋಗುತ್ತಿತ್ತು, ಬರುತ್ತಿತ್ತು. ಒಂದೊಂದು ಸಾರಿ ಹುಲಿಯ ಬೇಟೆಯ ವಿಚಾರವಾಗಿ ಅಸ್ಪಷ್ಟವಾಗಿ ಏನೇನನ್ನೋ ಕೂಗಿಕೊಂಡು ಕುಮುಟಿ ಬೀಳುತ್ತಿದ್ದನು. . . . ಎರಡು ಮೂರು ಸಾರಿ, ಹೋದ ಪ್ರಾಣ ಮತ್ತೆ ಬಂತು. "ಅಯ್ಯೋ ! ಆ ಗೋಳು, ಆ ರಂಪ. ರಾಮ ರಾಮ ! ನಮ್ಮ ವೈರಿಗೂ ಬೇಡ ! . . . ಬೆಳಗಿನಜಾವ ಪ್ರಾಣ ಹೋಯಿತು ! . . . ಆಮೇಲೆ ಪೋಲೀಸಿನ ವರು ಬಂದು ಏನೇನೋ ಹೇಳಿಕೆ ತೆಗೆದುಕೊಂಡರು . . ." ಆಮೇಲೆ ಅವನ ಜಾತಿಯವರು 'ಕಿಲಿಸ್ತರು' ಎಲ್ಲ ಸೇರಿ ಅವರ ದೇವಸ್ಥಾನಕ್ಕಂತೆ ಹೊತ್ತುಕೊಂಡು ಹೋದರು" . . . ನನಗಂತೂ ಅನ್ನ ಇಲ್ಲ ಇಷ್ಟು ಹೊತ್ತಾದರೂ. ಓಟ್ಲಾಗೆ ಕಾಫಿ ತಿಂಡಿ ತಿಂದುಕೊಂಡು ಬಂದೆ . . . ಪಾಪ ! ಮುಂಡೇಮಗ ದುಡುಕ್ತಿದ್ದ ಅಷ್ಟೇಹೊರ್ತೂ ! ಎಂಥ ಒಳ್ಳೆ ಮನುಷ್ಯ ! ಅನ್ನಾ ಕೊಟ್ಟ ಧಣಿಗಾಗಿ ಪ್ರಾಣ ಬಿಟ್ಟನಲ್ಲಾ . . ."

ಪುಟ್ಟಣ್ಣ ಹೇಳಿ ಮುಗಿಸಲು ಕುಳಿತಿದ್ದವರೆಲ್ಲರೂ ದೀರ್ಘವಾಗಿ ನಿಟ್ಟುಸಿರು ಬಿಟ್ಟರು. ಗೌರಮ್ಮನವರು ಪುಟ್ಟಣ್ಣನಿಗೆ ಕೈಕಾಲು ತೊಳೆದುಕೊಂಡು ಊಟಕ್ಕೆ ಬರುವಂತೆ ಹೇಳಿ "ಕಾಳ, ನಡಿಯೋ, ಬಳ್ಳೆಹಾಕೋ. ನಾನೀಗ ಬರ್‍ತೀನಿ" ಎಂದು ಸೀತೆಯ ಕೋಣೆಗೆ ಹೋದರು.

ಸಾಯಂಕಾಲ ಹೂವಯ್ಯ ನಿರೀಕ್ಷಿಸಿದ್ದಂತೆ ಶ್ಯಾಮಯ್ಯಗೌಡರು ಸೀತೆಮನೆ ಯಿಂದ ಬಂದರು. ಅವರ ಮನಸ್ಸು ಅಲ್ಲಿ ನಡೆದಿದ್ದ ದುರ್ಘಟನೆ ಶೋಕಗಳಿಂದ ವಿದೀರ್ಣವಾಗಿತ್ತು. ಅವರನ್ನು ನೋಡಿದರೆ ಆಳವಾದ ಹಾಳು ಬಾವಿಯನ್ನು ನೋಡಿದಂತೆ ಭಾಸವಾಗುತ್ತಿತ್ತು. ಮಾವನ ಆ ಸ್ಥಿತಿಯನ್ನು ಕಂಡೊಡನೆ ಹೂವಯ್ಯನಿಗೆ ಸ್ವಲ್ಪ ಆಧೈರ್ಯವಾಯಿತು. ತಾನು ನಿಶ್ಚಯಿಸಿದ್ದನ್ನು ತಿಳಿಸು ವುದು ಲಜ್ಜಾಕರವಾಗಿ ತೋರಿತು. ಸಮಯವೂ ಸರಿಯಾಗಿ ತೋರಲಿಲ್ಲ.

ಒಂದುಸಾರಿ ಮಾತಾಡಲು ಅವಕಾಶ ದೊರೆತಾಗ ಶ್ಯಾಮಯ್ಯಗೌಡರು ಚಂದ್ರಯ್ಯಗೌಡರಿಗೂ ಹೂವಯ್ಯನಿಗೂ ಕಾನೂರು ಮನೆ ಆಸ್ತಿ ಜಮೀನು ಪಾಲಾಗುವ ವಿಚಾರವನ್ನೆತ್ತಿ, ಅದನ್ನು ಹೇಗಾದರೂ ತಪ್ಪಿಸಬೇಕು ಎಂದು ಸೂಚಿಸಿದರು. ಕಾರಣವೇನೆಂದರೆ, ಕಾನೂರು ಮನೆತನ ಮುತ್ತಳ್ಳಿ ಮನೆತನದಷ್ಟೇ ಸಂಪದ್ಯುಕ್ತವಾಗಿದ್ದರೂ ಚಂದ್ರಯ್ಯಗೌಡರ 'ಅಂಧಕಾರ ದರ್ಬಾರಿ'ನ ದೆಸೆಯಿಂದ ಅವರಿಗೆ ಶ್ಯಾಮಯ್ಯಗೌಡರಲ್ಲಿ ಸಾಲವಾಗಿತ್ತು. ಆದ್ದರಿಂದ ಶ್ಯಾಮಯ್ಯಗೌಡರು ಬಂಧುಗಳ ಮನೆತನದ ಹಿತದ ದೃಷ್ಟಿಯಿಂದಲೂ ಮತ್ತು ತಮ್ಮ ಸಾಲದ ಕ್ಷೇಮದ ದೃಷ್ಟಿಯಿಂದಲೂ ಮಾತಾಡುತ್ತಿದ್ದರು.

ಹೂವಯ್ಯ ಪಾಲಾಗದಿರುವುದಕ್ಕೆ ಸಾಧ್ಯವಿಲ್ಲವೆಂಬುದನ್ನು ಸಕಾರಣವಾಗಿ ತಿಳಿಸಿ, ತಾನು ಮೈಸೂರಿನಿಂದ ಬಂದ ಮೇಲೆ ಮನೆಯಲ್ಲಿ ನಡೆದ ವಿದ್ಯಮಾನಗಳಲ್ಲಿ ಹೇಳಬಹುದಾದ ಕೆಲವು ಸಂಗತಿಗಳನ್ನು ವಿಸ್ತರಿಸಿದನು.

ಶ್ಯಾಮಯ್ಯಗೌಡರು "ಏನಾದರೂ ಮಾಡಿಕೊಳ್ಳಿ" ಎಂದು ಬೇಸರದ ಧ್ವನಿಯಿಂದ ಹೇಳಿ ಸುಮ್ಮನಾದರು.

ಆ ಮಾತು ನಡೆದ ಮೇಲೆ ಹೂವಯ್ಯನಿಗೆ ಸೀತೆಯನ್ನು ತನಗೆ ಕೊಡಬೇಕೆಂಬ ವಿಚಾರವನ್ನೆತ್ತಲು ಸಂಕೋಚವಾಯಿತು. ಅಷ್ಟೇ ಅಲ್ಲ; ಅಳಿಯನಾಗುತ್ತಿದ್ದವನು ಭಯಂಕರ ದುರ್ಘಟನೆಯಿಂದ ಮಡಿದ ಮರುದಿನವೇ ಆ ಮಾತನ್ನೆತ್ತುವುದು ಅವಿವೇಕವಾಗಿಯೂ ತೋರಿತು. ಆದರೆ ಸ್ವಲ್ಪಹೊತ್ತಿನಲ್ಲಿಯೇ ಹೂವಯ್ಯನು ಮತ್ತೆ ಜ್ವಾಲಾಗ್ರಸ್ತನಾದನು. ತಾನೀಗಲೇ ಒಂದು ಮಾತನ್ನು ಅವರ ಕಿವಿಯಮೇಲೆ ಹಾಕಿರದಿದ್ದರೆ ಶ್ಯಾಮಯ್ಯಗೌಡರು ಇನ್ನಾರಿಗಾದರೂ ಮಾತು ಕೊಟ್ಟರೆ ಎಂತಹ ಭೀಷಣ ಪ್ರಮಾದವಾಗಬಹುದು? ಎಂಬ ಆಲೋಚನೆ ಅವನನ್ನು ಎಂತಹ ಅವಿವೇಕಕ್ಕೂ ಪ್ರೇರಿಸುವಷ್ಟರಮಟ್ಟಿಗೆ ಉರಿಯತೊಡಗಿತು. ಏನಾದರಾಗಲಿ ತನ್ನ ಮನಸ್ಸನ್ನು ಮಾವನಿಗೆ ಹೇಳಿಯೇಬಿಡಬೇಕೆಂದು ದೃಢನಿಶ್ಚಯ ಮಾಡಿದನು. ಯಾವಾಗ ಹೇಳುವುದು? ಆ ಸಾಯಂಕಾಲವೇ? ತಾನು ಮುತ್ತಳ್ಳಿಯಿಂದ ಕಾನೂರಿಗೆ ಹೊರಡುವಾಗ! ಏಕೆಂದರೆ, ಹೇಳಿ ಒಡನೆಯೆ ಅಲ್ಲಿಂದ ಹೊರಟುಹೋಗಿಬಿಟ್ಟರೆ, ಎದುರಿಗಿದ್ದು ಪಡುವ ಲಜ್ಜೆಯಿಂದ ಸುಲಭವಾಗಿ ಪಾರಾದಂತಾಗುತ್ತದೆ!

ಹೀಗೆ ಆಲೋಚಿಸಿ, ಆಡಬೇಕಾದ ಮಾತುಗಳನ್ನೂ ಅವುಗಳ ಕ್ರಮ ವಿಧಾನಗಳನ್ನೂ ಮನದಲ್ಲಿಯೆ ಸರಿಮಾಡಿಕೊಂಡು ಕತ್ತಲೆಯಾಗುವ ಸಮಯಕ್ಕೆ ಸರಿಯಾಗಿ ಹೂವಯ್ಯ ಶ್ಯಾಮಯ್ಯಗೌಡರ ಬಳಿಗೆ ಸೋದ್ವೇಗದಿಂದ ಹೋದನು.

"ನಾನು ಹೋಗಿಬರ್ತೀನಿ, ಮಾವ."

"ಕತ್ತಲೆಯಾಯ್ತಲ್ಲೊ!"

"ಪರವಾಯಿಲ್ಲ. ತಿಂಗಳ ಬೆಳಕಿರ್ತದೆ. ಪುಟ್ಟಣ್ಣನೂ ಜೊತೆಯಲ್ಲಿರ್ತಾನೆ."

"ನಿಮ್ಮ ಮನೆಗೆ ಹೋಗೊ ಕಾಡುದಾರೀಲಿ ತಿಂಗಳ ಬೆಳಕು ಇದ್ರೇನು, ಇಲ್ದಿದ್ರೇನು? ನಾಳೆ ಬೆಳಿಗ್ಗೆ ಹೋದ್ರೇನಂತೆ?"

ಕಾನೂರಿಗೇ ಹೋಗಬೇಕೆಂದಿದ್ದ ಹೂವಯ್ಯ ಹಠಾತ್ತಾಗಿ "ಸೀತೆಮನೆಗೆ ಹೋಗಿ, ಇವತ್ತಲ್ಲಿದ್ದು ನಾಳೆ ಬೆಳಿಗ್ಗೆ ಮನೆಗೆ ಹೋಗ್ತೀನಿ. ಬಯಲುದಾರಿ. ಅಷ್ಟೇನು ಕಷ್ಟವಾಗೋದಿಲ್ಲ" ಎಂದನು.

"ನಿಮ್ಮ ಮನೆಗಿಂತ ದೂರ ಆಗ್ತದಲ್ಲೋ?"

"ಒಳದಾರೀಲಿ ಹೋಗ್ತೀನಿ."

"ಒಳದಾರಿ ಕಾಡಲ್ಲೇನು?"

"ಪರ್ವಾಯಿಲ್ಲ, ಪುಟ್ಟಣ್ಣಿದ್ದಾನೆ. ಅದೂ ಅಲ್ಲದೆ ಸಿಂಗಪ್ಪ ಕಕ್ಕಯ್ಯನ್ನ ಮಾತಾಡಿಸಿಕೊಂಡು ಹೋಗೋಣ ಅಂತಾ."

"ಹಾಂಗಾದರೆ ಹೊರಡಿ, ಹೊತ್ತಾಗ್ತದೆ."

ಹೂವಯ್ಯ ತಾನು ಹೇಳಬೇಕೆಂದಿದ್ದ ವಿಷಯದಲ್ಲಿ ಒಂದು ಕಣವನ್ನೂ ಹೊರಗೆಡಹದೆ ಶ್ಯಾಮಯ್ಯಗೌಡರನ್ನು ಬೀಳ್ಕೊಂಡು, ಸೀತೆ ಗೌರಮ್ಮ ಚಿನ್ನಯ್ಯ ಎಲ್ಲರಿಗೂ ಹೇಳಿ, ಪುಟ್ಟಣ್ಣನೊಡಗೂಡಿ ಸೀತೆಮನೆಗೆ ಹೊರಟನು.

ಆಗಲೆ ಬೈಗು ಕಪ್ಪಾಗುತ್ತಿತ್ತು. ಶಬ್ದವನ್ನೋಡಿಸಿ ನಿಃಶಬ್ದವು ಜಗತ್ತನ್ನಾಕ್ರಮಿಸುತ್ತಿತ್ತು. ಆಕಾಶದಲ್ಲಿ ರಾರಾಜಿಸುತ್ತಿದ್ದ ಸುಧಾಂಶು ಅಮೃತಕಿರಣಗಳ ವರ್ಷವನ್ನು ಕರೆಯತೊಡಗಿದ್ದನು.

## ೩೮

## ಕಳ್ಳಂಗಡಿಯವನ ಸಾಲಕ್ಕಾಗಿ ಸೋಮ ಹಳೆಪೈಕದ ತಿಮ್ಮನ ಕೋಳಿ ಹುಂಜವನ್ನು ಕದ್ದದ್ದು

ಕೃಷ್ಣಪ್ಪನ ಭಯಂಕರ ಮರಣವಾರ್ತೆ ಹಳ್ಳಿಹಳ್ಳಿಗಳಲ್ಲಿಯೂ ಹಬ್ಬಿ, ಅನೇಕರಿಗೆ ಬೇಟೆಯ ವಿಚಾರದಲ್ಲಿ ಜುಗುಪ್ಸೆ ಹುಟ್ಟುವಂತೆ ಮಾಡಿತು. ದಿನ ಬೆಳಗಾಯಿತೆಂದರೆ ಕೋವಿ ಹಿಡಿದುಕೊಂಡು ಕಾಡು ಹತ್ತುತ್ತಿದ್ದ ಮೃಗಯಾ ವ್ಯಸನಿಗಳೂ ಕೂಡ ಹೆದರಿ ಕಾಡಿಗೆ ಹೋಗುವುದನ್ನು ಕಡಮೆ ಮಾಡಿದರು. ತಾಯಿ ತಂದೆಗಳು ಮಕ್ಕಳಿಗೂ ಸತಿಯರು ಪತಿಯರಿಗೂ ಕೃಷ್ಣಪ್ಪನಿಗಾದ

ಘೋರ ಘಟನೆಯನ್ನು ದೃಷ್ಟಾಂತವಾಗಿ ವಿವರಿಸಿ, ಬೇಟೆಗೆ ಹೋಗುವುದೇ ಬೇಡ ಎಂದು ನಿರೋಧಿಸಿದರು. ಎಲ್ಲಿ ಕೇಳಿದರೂ ಅದೇ ವಾರ್ತೆ; ಎಲ್ಲಿ ಆಲಿಸಿದರೂ ಅದೇ ವರ್ಣನೆ; ಎಲ್ಲರ ಬಾಯಲ್ಲಿಯೂ ಅದೇ ಮಾತು. ಹೆಂಗಸರು ಅಡುಗೆಮಾಡುತ್ತ, ಬತ್ತ ಕುಟ್ಟುತ್ತ, ತರಗು ಕಟ್ಟಿಗೆಗಳನ್ನು ಒಟ್ಟುಮಾಡುತ್ತ ಕೃಷ್ಣಪ್ಪನ ತಾಯಿ ತಂದೆಯರ ಶೋಕವನ್ನೇ ಕುರಿತು ಶೋಕಪೂರ್ಣವಾಗಿ ಮಾತಾಡುತ್ತಿದ್ದರು: ಹಿರಿಯರಾದ ಗಂಡಸರು ಕೃಷ್ಣಪ್ಪನಿಗೆ ಬೇಟೆಯಲ್ಲಿ ಅತ್ಯಾಸೆಯಿದ್ದುದು ತಪ್ಪೆಂದೂ, ಎಂದಾದರೂ ಒಂದು ದಿವಸ ಹಾಗಾಗುತ್ತದೆಂಬುದು ಅವರಿಗೆ ಮೊದಲೇ ಗೊತ್ತಿತ್ತೆಂದೂ, ಬಾಳಲು ಮನಸ್ಸಿರುವವರು ಯಾರಾದರೂ ಗಾಯದ ಹುಲಿಯ ಹಿಂದೆ ಹೋಗುತ್ತಾರೆಯೇ ಎಂದೂ, ಸಿಂಗಪ್ಪಗೌಡರಿಗೆ ಆ ವಯಸ್ಸಿನಲ್ಲಿ ಅಂಥ ಕಷ್ಟ ಬರಬಾರದಾಗಿತ್ತೆಂದೂ ವ್ಯಾಖ್ಯಾನ ಟೀಕೆಗಳನ್ನು ಮಾಡಿದರು. ರಕ್ತಪುಷ್ಟಿಯುಳ್ಳ ತರುಣರು ಹೆಚ್ಚು ವಿಮರ್ಶೆಗೆ ಹೋಗದೆ, ಕೃಷ್ಣಪ್ಪನ ಕೆಚ್ಚೆದೆಯನ್ನೂ ಸಾಹಸವನ್ನೂ ಜಾಕಿಯ ಸ್ವಾಮಿಭಕ್ತಿಯನ್ನೂ ಕೋವಿ ಕಟ್ಟಿದ ರೀತಿಯನ್ನೂ ಹುಲಿ ಹಾರಿದ ರೀತಿಯನ್ನೂ, ಕೃಷ್ಣಪ್ಪ ಬದುಕಿದ್ದರೆ ಇಷ್ಟರಲ್ಲಿ ಮದುವಣಿಗನಾಗಿರುತ್ತಿದ್ದನೆಂಬುದನ್ನೂ, ಹೆಣ್ಣಿನ ಪುಣ್ಯವೇ ಪುಣ್ಯವಾಗಿರುತ್ತಿತ್ತು ಎಂಬುದನ್ನೂ, ಸಾಲಂಕಾರಿಕವಾಗಿ ಸ್ವಾರಸ್ಯವಾಗಿ ವರ್ಣಿಸಿ ವರ್ಣಿಸಿ ರಸಾಸ್ವಾದನೆ ಮಾಡಿದರು. ಚಿಕ್ಕ ಬಾಲಕರಂತೂ ಎಲ್ಲರ ಬಾಯಿಕಡೆಗೂ ಬಾಯಿ ತೆರೆದು ಆಲಿಸಿ ಆಲಿಸಿ, ಎಲ್ಲರಾಡಿದುದನ್ನೂ ತಮ್ಮ ಮನಬಂದಂತೆ ಮಿಶ್ರಮಾಡಿ, ತಮ್ಮದೇ ಒಂದು "ಭಾರತ ಕಥೆ" ಕಟ್ಟಿಬಿಟ್ಟರು.

ಅಂತೂ ಮೊದಮೊದಲು ಹಸಿ ಹೊಸನೆತ್ತರಿನಂತಿದ್ದ ಆ ವಾರ್ತೆ ದಿನ ಕಳೆದಂತೆ ಬರಬರುತ್ತ ಮಾಸಿ ಮೆಲ್ಲಗೆ ಹಳಸತೊಡಗುವುದರಲ್ಲಿಯೇ ಮತ್ತೊಂದು ಸುದ್ದಿ ಹಳ್ಳಿಗರ ಮನಸನ್ನಾಕ್ರಮಿಸಿ, ಕಾಡುಬೆಂಕಿಯಂತೆ ಒಬ್ಬರಿಂದೊಬ್ಬರಿಗೆ ನೆಗೆನೆಗೆದು ಹರಡಿಕೊಂಡಿತು: ಚಂದ್ರಯ್ಯಗೌಡರಿಗೂ ಹೂವಯ್ಯಗೌಡರಿಗೂ ಮನಸ್ತಾಪ ಬಂದಿದೆಯಂತೆ; ಹೂವಯ್ಯಗೌಡರು ಮೈಸೂರಿಗೆ ಹೋಗುವುದಿಲ್ಲವಂತೆ; ಓದು ನಿಲ್ಲಿಸುತ್ತಾರಂತೆ; ಕಾನೂರು ಮನೆ ಪಾಲಾಗುತ್ತದಂತೆ; ನಾಗಮ್ಮ ಹೆಗ್ಗಡಿತಿಯವರು ಒಬ್ಬರಾದುದರಿಂದ ಹೂವಯ್ಯಗೌಡರು ತಮ್ಮ ಹಿಸ್ಸೆಗೆ ಬಂದ ಜಮೀನನ್ನು ತಾವೇ ಸಾಗುವಳಿ ಮಾಡಿಸುತ್ತಾರಂತೆ! ಹಿಂದಿನಿಂದಲೂ ನಾಡಿಗೊಂದು ಭೂಷಣವಾಗಿ ನಡೆದುಕೊಂಡು ಬಂದಿದ್ದ ದೊಡ್ಡ ಕುಟುಂಬ ಈಗ ಒಡೆಯುತ್ತದಂತೆ! ಮುತ್ತಳ್ಳಿ ಶ್ಯಾಮಯ್ಯಗೌಡರು, ಬಾಳೂರು ಸಿಂಗಯ್ಯಗೌಡರು, ನೆಲ್ಲಹಳ್ಳಿ ಪೆದ್ದೇಗೌಡರು, ಬೈದೂರು ಬಸವೇಗೌಡರು — ಎಲ್ಲರೂ ಸೇರಿ ಪಂಚಾಯಿತಿ ಮಾಡಿ ಹಿಸ್ಸೆಯಾಗದಂತೆ ಸಮಾಧಾನಮಾಡಲು

"ಬಾ'ಳ ಪರ್‍ಯತ್ನಪಟ್ಟರಂತೆ." ಆದರೆ ಚಂದ್ರಯ್ಯಗೌಡರು "ಖಂಡಿತ ಆಗಾದಿಲ್ಲಾ! ನನಗೂ ಅವನಿಗೂ ಸರಿಹೋಗಾದಿಲ್ಲಾ! ಮಳೆ ಹಿಡಿಯಾಕೆ ಮೊದಲೇ ಹಿಸ್ಸೆ ಆಗೇಬೇಕು" ಅಂತಾ ಹಟ ಹಿಡಿದಿದ್ದಾರಂತೆ. ಮುಂದಿನ ವಾರವೋ ಆ ಮುಂದಿನ ವಾರವೋ "ಹಿಸ್ಸೆ ಆಗಿ ಪಾರಿಕತ್ತಾಗ್ತದಂತೆ!"

ಸುದ್ದಿ ಕೆಲವರಿಗಂತೂ ಕೃಷ್ಣಪ್ಪನ ಘೋರ ಮರಣಕ್ಕಿಂತಲೂ ಹೆಚ್ಚಾದ ಕಳವಳಕ್ಕೆ ಕಾರಣವಾಯಿತು. ಕಾನೂರು ಮತ್ತು ಅದರ ನೆರೆಯ ಹಳ್ಳಿಗಳಲ್ಲಂತೂ ಒಂದು ಸಣ್ಣ ಮರಿಕ್ರಾಂತಿಯೆ ಕಾಲಿಡುವಂತೆ ತೋರುತ್ತಿತ್ತು. ಅದರಲ್ಲಿಯೂ ಕಾನೂರು ಚಂದ್ರಯ್ಯಗೌಡರ ಒಕ್ಕಲುಗಳಿಗೂ ಮತ್ತು ಕೂಲಿಯಾಳುಗಳಿಗೂ ಪುಡಿಸಾಲ ಕೊಟ್ಟಿದ್ದ ಇತರರ ಒಕ್ಕಲು ಮತ್ತು ಕೂಲಿಯಾಳುಗಳಿಗೆ, ಬ್ಯಾಂಕು ಪಾಪರೇಳುತ್ತದೆ ಎಂಬ ಸುದ್ದಿಯನ್ನು ಕೇಳಿದ ವರ್ತಕರಿಗಾಗುವ ತಲ್ಲಣಕ್ಕಿಂತಲೂ ಇಮ್ಮಡಿಯಾದ ತಲ್ಲಣವುಂಟಾಯಿತು. ಯಾವ ಯಾವ ಆಳುಗಳು ಯಾವ ಯಾವ ಒಕ್ಕಲುಗಳು ಯಾರ ಯಾರ ಹಿಸ್ಸೆಗೆ ಹೋಗುತ್ತಾರೋ? ಏನೇನಾಗುತ್ತದೆಯೋ? ತಮ್ಮ ದುಡ್ಡು ಮುಳುಗಿಹೋಗುತ್ತದೆಯೋ ಏನೋ? ಹೀಗೆಂದು ಮೊದಲೇ ತಿಳಿದಿದ್ದರೆ ಸಾಲಕೊಡುವ 'ಪಂಚೇತಿ'ಗೆ ಹೋಗುತ್ತಲೇ ಇರಲಿಲ್ಲ; ಹೇಗಾದರೂ ಮಾಡಿ ಹಿಸ್ಸೆಯಾಗುವುದಕ್ಕೆ ಮೊದಲೇ ಸಾಲ ವಸೂಲ್ಮಾಡಿಕೊಂಡುಬಿಟ್ಟರೆ ಇನ್ನು ಜನ್ಮಜನ್ಮಾಂತರಕ್ಕೂ ಈ ಸಾಲ ಕೊಡುವ ಗೋಳುಬೇಡ; ಎಂದು ಮೊದಲಾಗಿ ಚಿಂತಿಸಿ ಕಾರ್ಯೋನ್ಮುಖರಾದರು.

ಹಾಗೆ ಕಾರ್ಯೋನ್ಮುಖರಾದವರಲ್ಲಿ ಕಳ್ಳಂಗಡಿಯುವನೇ ಮೊದಲನೆಯವನಾಗಿದ್ದನು. ಅವನಿಗೆ ಕಾನೂರಿನಲ್ಲಿ ಇತರ ಹಳ್ಳಿಗಳಲ್ಲಿ ಇದ್ದಂತೆಯೆ ಅನೇಕ ಸಾಲದ ಕುಳಗಳಿದ್ದರು. ಅವರಲ್ಲಿ ಡೊಳ್ಳುಹೊಟ್ಟೆಯ ಬಾಡುಗಳ್ಳ ಸೋಮನೂ ಬೇಲರ ಬೈರ, ಅವನ ಹೆಂಡತಿ ಸೇಸಿ, ಅವನ ಮಗ ಗಂಗ ಹುಡುಗ ಇವರು ಮೂವರೂ, ಬೇಲರ ಸಿದ್ದನೂ, ಗಾಡಿ ಹೊಡೆಯುವ ನಿಂಗನೂ, ಸೇರೆಗಾರ ರಂಗಪ್ಪಸೆಟ್ಟರ ಕಡೆಯ ಗಟ್ಟದಾಳುಗಳೂ ಸೇರಿದ್ದರು.

ಒಂದು ದಿನ ಕತ್ತಲೆಯಾಗುತ್ತಿದ್ದಾಗ ಕಳ್ಳಂಗಡಿಯುವನು ಸೋಮನ ಬಿಡಾರಕ್ಕೆ ಬಂದನು. ಆ ಸುದ್ದಿಯನ್ನು ಇತರರಿಂದ ಕೇಳಿ ತಿಳಿದ ಸೋಮು ರಾತ್ರಿ ಬಹಳ ಹೊತ್ತಾಗುವವರೆಗೂ ಬಿಡಾರಕ್ಕೆ ಹೋಗದೆ ಹೊರಗಡೆ ಅವಿತುಕೊಂಡಿದ್ದನು. ಕಳ್ಳಂಗಡಿಯುವನು ಸೋಮನನ್ನು ಅವನ ಬಿಡಾರದವರೆದುರು ಬಾಯಿಗೆ ಬಂದ ಹಾಗೆ ಶಪಿಸಿ, ಮರುದಿನ ಮತ್ತೆ ಬರುವುದಾಗಿ ಹೇಳಿ ಹೊರಟು ಹೋದನು. ಅವನು ಹೋದ ಸುದ್ದಿಯನ್ನು ಕೇಳಿ, ಸದ್ಯಕ್ಕೆ ಗೆದ್ದೆ ಎಂದು ಹಿಗ್ಗುತ್ತ, ಸೋಮು ಬಿಡಾರಕ್ಕೆ ಬಂದು ಇನ್ನೂ ಚಾಪೆಯಮೇಲೆ ಕೂತಿರಲಿಲ್ಲ; ಅಷ್ಟರಲ್ಲಿ ಹೊರಗಡೆ

ಪೊದೆಯಲ್ಲಿ ಅವಿತು ನಿರೀಕ್ಷಿಸುತ್ತಿದ್ದ ಕಳ್ಳಂಗಡಿಯವನು ಬಿಡಾರವನ್ನು ಪ್ರವೇಶಿಸಿ, "ನನ್ನ ಅಡಕೆ ಕತ್ತರಿ ಇಲ್ಲಿ ಬಿಟ್ಟುಹೋಗಿದ್ದೆ" ಎಂದು ಹುಡುಕುವವನಂತೆ ನಟಿಸಿ ಸೋಮನನ್ನು ಕಂಡು "ಇಷ್ಟೊಹೊತ್ತನಕ ಎಲ್ಲಿ ಹೋಗಿದ್ಯೊ? ಕಾದು ಕಾದು ಸಾಕಾಯ್ತಲ್ಲ ನನಗೆ! ನನ್ನ ಸಾಲ ತೀರಿಸ್ತೀಯೋ ಇಲ್ವೊ, ಒಳ್ಳೇಮಾತಿಗೆ ಹೇಳು!" ಎಂದು ಸೋಮನೆದುರು ಚಾಪೆಯಮೇಲೆ ಕೂತುಬಿಟ್ಟನು. ತನ್ನ ಉಪಾಯಕ್ಕೆ ಮಿೀರಿದ ಉಪಾಯಗಾರನನ್ನು ಕಂಡು ಸೋಮ ಬೆಪ್ಪಾಗಿ "ಮಾರಾಯ, ಇಷ್ಟು ದಿನ ತಡೆದೆ, ಇನ್ನೆರಡು ದಿನಗಳ ಮಟ್ಟಿಗೆ ತಡೆ. ನಿನ್ನ ಋಣ ನಾನು ಯಾಕೆ ಇಟ್ಟುಕೊಳ್ಳಲಿ? ತೀರಿಸಿಹೋಪ" ಎಂದನು.

"ಅದೆಲ್ಲಾ ಇರಲಿ. ಯಾವಾಗಲೂ ನೀನು ಹೀಂಗೇ ಹೇಳಾದು. ಇನ್ನು ಆಗೋದಿಲ್ಲ ಹಣಾ ನಿಲ್ಸಾಕೆ! ಗೌಡರ ಮನೇನೂ ಹಿಸ್ಸೆ ಆಗ್ತದಂತೆ!"

"ಆದರೇನಂತೆ ನನ್ನ ದುಡ್ಡು ನಾನು ಕೊಡುವುದಲ್ಲಾ?"

"ಅದೆಲ್ಲಾ ಇರ್ಲಿ. ಮೊದಲು ಕೊಟ್ಟು ಆಮೇಲೆ ಮಾತಾಡು."

ಅಂತೂ ಬಹಳ ಹೊತ್ತು ಚರ್ಚೆಯಾಗಿ ಸೋಮ "ನಾಳೆ ಖಂಡಿತ ಕೊಡುತ್ತೀನಿ" ಎಂದು ಹೇಳಿದ ಮೇಲೆ ಕಳ್ಳಂಗಡಿಯವನು ಅಲ್ಲಿಂದ ಎದ್ದು ಹೋದನು.

ಸೋಮ ರಾತ್ರಿ ಮೂರು ಮೂರುವರೆ ಗಂಟೆಯಲ್ಲೆದ್ದು ಬಿಡಾರದ ಬಾಗಿಲನ್ನು ಮೆಲ್ಲನೆ ತೆರೆದು ಹೊರಟನು. ಬೆಳ್ದಿಂಗಳಿನಲ್ಲಿ ಮೆಲ್ಲಗೆ ನಡೆದು ಹಳೆಪೈಕದ ತಿಮ್ಮನ ಹುಲ್ಲುಮನೆಯ ಬಳಿಗೆ ಬಂದನು. ತಿಮ್ಮನ ನಾಯಿ ಬೊಗಳುತ್ತ ಬಳಿಗೆ ಬಂದು, ತನಗೆ ಪರಿಚಿತನಾಗಿದ್ದವನನ್ನು ಕಂಡು ಬಾಲವಳ್ಳಾಡಿಸಿತು. ಸೋಮ ಸದ್ದಿಲ್ಲದೆ ಕೋಳಿಯೊಡ್ಡಿಯ ಬಳಿಗೆ ಹೋಗಿ, ಅದರ ಬಾಗಿಲು ತೆರೆದು, ಒಡ್ಡಿಯೊಳಗೆ ಕೈಹಾಕಿ, ಕೈಯಂದಾಜಿನ ಮೇಲೆ ಒಂದು ದೊಡ್ಡ ಹುಂಜವನ್ನು ಹೊರಗೆಳೆದನು. ಕೋಳಿಗಳು ಕೊರ್ ಕೊರ್ ಎಂದು ಸ್ವಲ್ಪ ಸದ್ದು ಮಾಡಿದುವು. ಆದರೆ ಆ ಸದ್ದು ಗಾಢನಿದ್ರೆಯಲ್ಲಿದ್ದವರನ್ನು ಎಚ್ಚರಗೊಳಿಸುವಷ್ಟು ಗಟ್ಟಿಯಾಗಿರಲಿಲ್ಲ. ಸೋಮ ಒಡ್ಡಿಯ ಬಾಗಿಲನ್ನೂ ಹಾಕದೆ ಹುಂಜವನ್ನು ಬಗಲಿನಲ್ಲಿ ಬೆಚ್ಚಗೆ ಅವುಚಿಕೊಂಡು, ಅದರ ಕುತ್ತಿಗೆಯನ್ನು ಉಸಿರಾಡಬೇಕು ಕೂಗಬಾರದು ಅಷ್ಟರಮಟ್ಟಿಗೆ ಒತ್ತಿ ಹಿಡಿದುಕೊಂಡು, ನೆಟ್ಟಗೆ ಕಳ್ಳಂಗಡಿಗೆ ನಡೆದುಹೋದನು.

ಅಂತಹ ಕಳ್ಳವ್ಯಾಪಾರಗಳಿಂದಲೆ ಹೆಚ್ಚಾಗಿ ಹಣ ಸಂಪಾದನೆಮಾಡುತ್ತಿದ್ದ ಕಳ್ಳಂಗಡಿಯವನು ಮರುದಿನ ಸೋಮನನ್ನು ಸಾಲಕ್ಕಾಗಿ ಪೀಡಿಸಲಿಲ್ಲ.

ಬೆಳಿಗ್ಗೆ ಹಳೆಪೈಕದ ತಿಮ್ಮ ಒಡ್ಡಿಯ ಬಾಗಿಲು ತೆರೆದಿದ್ದುದನ್ನೂ ಹುಂಜ ಮಾಯವಾಗಿದ್ದುದನ್ನೂ ನೋಡಿ ಯಾರೋ ಕೋಳಿ ಕದ್ದಿದ್ದಾರೆಂದು ಕೂಗೆಬ್ಬಿ

ಸಿದನು. ಸೋಮನೂ ಇತರರೂ ಅಲ್ಲಿಗೆ ಬಂದು ಯಾರೂ ಕದ್ದಿರಲಾರ ರೆಂದೂ ಹುಲಿಬೆಕ್ಕು ಮಾಡಿದ ಕೆಲಸವಿರಬೇಕೆಂದೂ ನಾನಾ ರೀತಿಯಾಗಿ ವಾದಿಸಿ ಬೋಧಿಸಿ ಸಮಾಧಾನಮಾಡಿದರು. ತಿಮ್ಮನ ಹೆಂಡತಿ ತನ್ನ ಕೊಬ್ಬಿದ ಹುಂಜ ಕ್ಕಾಗಿ ಅತ್ತು, ಕರೆದು, ಹುಲಿಬೆಕ್ಕನ್ನು ಬಾಯಿ ಸೋಲುವವರೆಗೂ ಶಪಿಸಿದಳು.

ಬೇಲರ ಬೈರನೂ, ತಾನು ಮತ್ತೆ ಬಗಿನಿ ಕಟ್ಟಿ ಕಳ್ಳುಮಾರಿ ಸಾಲ ತೀರಿಸು ವುದಾಗಿ ಮಾತುಕೊಟ್ಟು, ಕಳ್ಳಂಗಡಿಯವನನ್ನು ಸಮಾಧಾನಪಡಿಸಿದನು. ಅವನ ಹೆಂಡತಿ ಸೇಸಿಯೂ ತಾನು 'ಸರಿಪಾಲಿಗೆ' ಸಾಕಿದ್ದ ಒಂದೆರಡು ಹೇಂಟೆಗಳ ಮರಿಗಳನ್ನು ಕಳ್ಳಂಗಡಿಯವನಿಗೇ ಮೀಸಲಾಗಿಟ್ಟು, ಸಾಕಿ, ದೊಡ್ಡದುಮಾಡಿ, ಕೊಡುವುದಾಗಿ ಅಂಗಲಾಚಿ ಬೇಡಿಕೊಂಡು ಪಾರಾದಳು. ಗಂಗಹುಡುಗ ಮಾತ್ರ ಕಳ್ಳಂಗಡಿಯವನ ಕಣ್ಣಿಗೆ ಬೀಳದಂತೆ ತಪ್ಪಿಸಿಕೊಂಡು ತಿರುಗುತ್ತಿದ್ದನು. ಅವನು ಕಳ್ಳಂಗಡಿಯವನಿಗೆ ತಾನು ಕೊಡಬೇಕಾಗಿದ್ದ ಸಾಲದ ವಿಚಾರವಾಗಿ ತನ್ನ ಅಪ್ಪನಿಗೆ ತಿಳಿಯದಂತೆ ಸಂಚುಮಾಡಿಕೊಂಡಿದ್ದನು. ಅನೇಕ ಸಾರಿ ಅವರಿವರು ಬೆಳೆದಿದ್ದ ಹಿತ್ತಲು ಕೊಪ್ಪಲುಗಳಿಂದ ತರಕಾರಿ — ಬದನೆಕಾಯಿ, ಬಾಳೆಗೊನೆ, ಕುಂಬಳ ಕಾಯಿ, ತಿಂಗಳವರೆಕಾಯಿ ಇತ್ಯಾದಿಗಳನ್ನು ಕದ್ದು ಸಾಲ ತೀರಿಸಿದ್ದನು. ಕೆಲವು ಸಾರಿ ಗೌಡರ ಮನೆಯಿಂದ ಕತ್ತಿ ಗುದ್ದಲಿ ಮೊದಲಾದ ಹತಾರುಗಳನ್ನೂ ಕದ್ದು ಕಳ್ಳಂಗಡಿಗೆ ಸಾಗಿಸಿದ್ದನು. ಹೆಂಡ ಕುಡಿಯುವ ಚಪಲತೆ ಅವನನ್ನು ಅಷ್ಟು ಚಿಕ್ಕಂದಿನಲ್ಲಿಯೆ ಚೌರ್ಯದಲ್ಲಿ ಪ್ರವೀಣನನ್ನಾಗಿ ತರಬಿಯತ್ತು ಮಾಡಿದ್ದಿತು.

ಹುಡುಗ ತನ್ನ ಕಣ್ಣಿಗೆ ಬೀಳದೆ ತಪ್ಪಿಸಿಕೊಳ್ಳುತ್ತಿದ್ದಾನೆಂದು ತಿಳಿದಕೂಡಲೆ ಕಳ್ಳಂಗಡಿಯವನಿಗೆ ರೇಗಿ, ಆ ವಿಚಾರವನ್ನು ಬೈರನಿಗೆ ತಿಳಿಸಿದನು. ಅದನ್ನು ಕೇಳಿದ ಕೂಡಲೆ ಬೈರನಿಗೆ ಸಿಡಿಲು ಬಡಿದಂತಾಯಿತು. ತನ್ನ ಮಗನು ತನ ಗಿಂತಲೂ ಗಟ್ಟಿಗನಾಗಿ, ಕಳ್ಳಂಗಡಿಯಲ್ಲಿ ಸ್ವತಂತ್ರವಾಗಿ ಸಾಲಮಾಡಿದ್ದಾನೆಂದು ಅವನು ಕನಸಿನಲ್ಲಿಯೂ ಊಹಿಸಿರಲಿಲ್ಲ. ತನ್ನ ಮಗನನ್ನು ಹಿಡಿದುಕೊಂಡು ಬಂದು ಕಳ್ಳಂಗಡಿಯವನೆದುರು ಚೆನ್ನಾಗಿ ಹೊಡೆದನು. ಹಾಗೆ ಮಾಡುವು ದರಿಂದ ಅಂಗಡಿಯವನಿಗೆ ತೃಪ್ತಿಯಾಗಿ ಸುಮ್ಮನೆ ಹೋಗುವನೆಂದು ತಿಳಿದಿದ್ದನು. ಆದರೆ ಅದು ತಪ್ಪಾಯಿತು. ಅಂಗಡಿಯವನು ಸಾಲವನ್ನು ಕೇಳದೆ ಬಿಡಲಿಲ್ಲ. ಬೈರನಿಗೆ ರೇಗಿ "ಸಣ್ಣಸಣ್ಣ ಹುಡುಗರು ಮಕ್ಕಳಿಗೆಲ್ಲ ಸಾಲ ಕೊಡಾಕೆ ಹೇಳ್ದೋರು ಯಾರು ನಿಮಗೆ? ನೀವೆ ಏನಾದರೂಮಾಡಿ ಸಾಲ ವಸೂಲ್ಮಾಡಿಕೊಳ್ಳಿ. ನನ್ಹತ್ರ ಹೇಳ್ಬ್ಯಾಡಿ" ಎಂದುಬಿಟ್ಟನು.

ಕಳ್ಳಂಗಡಿಯವನು ಗಂಗನನ್ನು ಹಿಡಿದುಕೊಂಡು ಸಾಲ ಕೊಡುತ್ತೀಯೋ ಇಲ್ಲವೋ ಎಂದು ಜೋರುಮಾಡಿದನು. ಗಂಗ ಅವನನ್ನು ಬಾ ಎಂದು

ಕಾನೂರು ಮನೆಯ ಸಮೀಪದಲ್ಲಿದ್ದ ಒಂದು ಕಾಡಿಗೆ ಕರೆದುಕೊಂಡುಹೋಗಿ, ಮಣ್ಣು ಇನ್ನೂ ಹಸಿಹಸಿಯಾಗಿದ್ದ ಒಂದು ಸ್ಥಳವನ್ನು ತೋರಿದನು. ಇಬ್ಬರೂ ಸೇರಿ ಅಗೆದು ನೋಡಲು ನಾಲ್ಕಾರು ಕೆಲಸದ ಕತ್ತಿಗಳು, ಎರಡು ಹಿತ್ತಾಳೆ ಚೊಂಬುಗಳು, ಒಂದು ಹಾರೆ, ಒಂದು ಗುದ್ದಲಿ, ಕೆಲವು ನೇಗಿಲ ಕುಳಗಳು ಸಿಕ್ಕಿದುವು.

"ಯಾರೋ ಹುಗಿದಿಟ್ಟಿದ್ದು ಇವನ್ನ?" ಎಂದು ಕಳ್ಳಂಗಡಿಯವನು ಕೇಳಿದನು.

"ಗಾಡಿ ನಿಂಗಯ್ಯ ಕಣ್ರೋ!"

"ನಿಂಗೆ ಹ್ಯಾಂಗೆ ಗೊತ್ತಾಯ್ತು?"

"ನಾ ಚಿಟ್ಟುಕೋಳಿಗೆ ಸೆಬೆ ಒಡ್ಡಿದ್ದೆ. ನೋಡ್ಕೊಂಡು ಹೋಗಾನಾ ಅಂತ ಬಂದೆ. ನಿಂಗಯ್ಯ ಇಲ್ಲಿ ಮಣ್ಣು ಅಗೀತಿದ್ರು. ನಾನು ಅಡಕ್ಕೊಂಡು ನೋಡ್ದೆ!"

"ನೀ ನೋಡಿದ್ದು ಅವರೀಗೆ ಗೊತ್ತೇನು?"

"ಇಲ್ಲ"

"ಹಾಂಗಾದ್ರೆ ಸುಮ್ಮನಿರು. ಯಾರಿಗೂ ಹೇಳ್ಬೇಡ. ನಿಂಗೆಷ್ಟು ಬೇಕೋ ಅಷ್ಟು ಕಳ್ಳು ಕೊಡ್ತೀನಿ."

"ದೇವ್ರಾಣೆಗೂ ನಾ ಯಾರ ಹತ್ರಾನೂ ಪಸ್ತಾಪ ಎತ್ತಾದಿಲ್ಲ" ಎಂದು ಗಂಗಹುಡುಗ ಹಿಗ್ಗಿ ಹಿರಿಹಿರಿಯಾಗಿ ಹೇಳಿದನು.

ಅಂಗಡಿಯವನು ತಾನು ಕೆಲವು ಸಾಮಾನು ಹೊತ್ತುಕೊಂಡು, ಗಂಗನ ಹತ್ತಿರ ಕೆಲವನ್ನು ಹೊರಿಸಿಕೊಂಡು ಅಂಗಡಿಗೆ ಹೋದನು. ಅವತ್ತು ಗಂಗನಿಗೆ ಒಣಗಿದ ಮೀನು ಮತ್ತು ಕಳ್ಳುಹೆಂಡಗಳ ಹುಟ್ಟಿದ ಹಬ್ಬವಾಯಿತು!

ಗಾಡಿ ಹೊಡೆಯುವ ನಿಂಗ ಆ ಸಾಮಗ್ರಿಗಳನ್ನು ಹೂತಿಟ್ಟುದೇನೋ ನಿಜ. ಆದರೆ ಅವು ಕಳವು ಮಾಲಾಗಿರದೆ ಅವನವೇ ಆಗಿದ್ದುವು. ಅವನು ತನ್ನ ಹೆಂಡತಿ ಬದುಕಿದ್ದಾಗ ಬೇರೆ ಸಂಸಾರ ಹೂಡಿದ್ದ ಕಾಲದಲ್ಲಿ ಆ ಸಾಮಗ್ರಿಗಳನ್ನೆಲ್ಲ ಸ್ವತಃ ಸಂಪಾದಿಸಿದ್ದನು. ಹೆಂಡತಿ ತೀರಿಕೊಂಡ ಮೇಲೆ ಒಕ್ಕಲುತನವನ್ನು ಬಿಟ್ಟು ಮನೆಯ ಆಳಾಗಿ ಗಾಡಿಹೊಡೆಯಲು ನಿಂತನು. ಆದರೂ ತನ್ನ ಸಾಮಾನುಗಳನ್ನು ಮನೆಯ ಅಟ್ಟದ ಒಂದು ಮೂಲೆಯಲ್ಲಿ ಜೋಪಾನಗೊಳಿಸಿದ್ದನು. ಈಗ ಮನೆ ಪಾಲಾಗುವ ಗಲಾಟೆಯಲ್ಲಿ ತನ್ನ ವಸ್ತುವೊಡವೆಗಳೂ ಎಲ್ಲಿ ಹಂಚಿಕೆಗೆ ಸೇರಿಬಿಡುತ್ತವೆಯೋ ಎಂಬ ಭಯದಿಂದ ಅವುಗಳನ್ನು ಅಲ್ಲಿ ಇಲ್ಲಿ ಹೂಳಿಡ ತೊಡಗಿದ್ದನು.

ಮನೆ ಹಿಸ್ಸೆಯಾಗುತ್ತದೆ ಎಂಬುದನ್ನು ಕೇಳಿ ಆಳು ಒಕ್ಕಲುಗಳೆಲ್ಲ ಹೀಗೆ ನಾನಾ

ವ್ಯಾಪಸನ್ನಾಹಗಳಲ್ಲಿ ತೊಡಗಿದ್ದಾಗ ಮನೆಯ ಜನರೇನು ಸುಮ್ಮನಿರಲಿಲ್ಲ. ಅವರೂ ತಮ್ಮ ತಮ್ಮ 'ಸೊಂತ' ಒಡವೆ ವಸ್ತುಗಳನ್ನು ಮಾತ್ರವಲ್ಲದೆ ಎಲ್ಲರ ಪಾಲಿಗೂ ಸೇರಬೇಕಾಗಿದ್ದವುಗಳನ್ನೂ 'ಭದ್ರಪಡಿಸಿ'ಕೊಳ್ಳುವುದರಲ್ಲಿ ತೊಡಗಿದ್ದರು. ಸುಬ್ಬಮ್ಮ, ನಾಗಮ್ಮ ಇವರು ತಮ್ಮ ಮದುವೆಯ ಕಾಲದಲ್ಲಿ ಬಳುವಳಿಯಾಗಿ ತವರುಮನೆಯವರು ಕೊಟ್ಟವುಗಳೆಂದು ಹೇಳಿಕೊಂಡು ಅನೇಕ ಪಾತ್ರೆ ಪದಾರ್ಥಗಳನ್ನು ತಮ್ಮ ತಮ್ಮ ಸ್ವಂತ ಕೋಣೆಗಳಲ್ಲಿ ತುಂಬಿಕೊಂಡರು. ಅವರನ್ನು ಅನುಸರಿಸಿ ಪುಟ್ಟಮ್ಮ, ವಾಸು ಇಬ್ಬರೂ ತಮಗೆ ಬೇಕಾದ ವಸ್ತುಗಳನ್ನು 'ಸ್ವಂತ' ಮಾಡಿಕೊಂಡರು. ಚಂದ್ರಯ್ಯಗೌಡರೂ, ಸೇರೆಗಾರ ರಂಗಪ್ಪಸೆಟ್ಟರೊಡನೆ ಗುಟ್ಟಾಗಿ ಮಾತಾಡಿ, ಹಿಸ್ಸೆಯೆಲ್ಲ ಪೂರೈಸಿದ ಕೆಲವು ದಿನಗಳ ಮೇಲೆ ತಮಗೇ ವಾಪಸು ಕೊಡಬೇಕೆಂದು ಸಂಚುಮಾಡಿಕೊಂಡು, ಮನೆಯ ಆಸ್ತಿಗೆ ಸೇರಿದ್ದ ಕೆಲವು ಬೆಲೆಯುಳ್ಳ ಚಿನ್ನದಾಭರಣಗಳನ್ನೂ ಕೆಲವು ಎತ್ತು ದನಕರುಗಳನ್ನೂ ಅತ್ಯಂತ ಅಲ್ಪ ಕ್ರಯಕ್ಕೆ ಮಾರಿದರು.

ಈ ಗಡಿಬಿಡಿಯಲ್ಲಿ ಚಂದ್ರಯ್ಯಗೌಡರ ಮನಸ್ಸೆಲ್ಲಾ ಹಿಸ್ಸೆಯ ಕ್ರಮದ ಕಡೆಗೂ, ತಾನು 'ಸ್ವಯಾರ್ಜಿತ'ವಾಗಿ ಸಂಪಾದಿಸಿದ್ದೆಂದು ವಾದಿಸಿ ಯಾವ ಯಾವ ಉತ್ತಮವಾದ ಗದ್ದೆತೋಟಗಳನ್ನು ಲಬಟಾಯಿಸಿಕೊಳ್ಳಬೇಕೆಂಬ ಹಂಚಿಕೆಯ ಕಡೆಗೂ, ಹೇಗಾದರೂ ಮಾಡಿ ಗಟ್ಟಿಮುಟ್ಟಾದ ಜೀತದಾಳುಗಳನ್ನೆಲ್ಲ ತನ್ನ ಹಿಸ್ಸೆಗೆ ಸೇರಿಸಿಕೊಳ್ಳಬೇಕೆಂಬುದರ ಕಡೆಗೂ ಹೋಗಿದ್ದುದರಿಂದ ಸುಬ್ಬಮ್ಮನಿಗೆ ಅನುದಿನವೂ ಒದಗುತ್ತಿದ್ದ ಕೋಟಲೆ ಸ್ವಲ್ಪ ಕಡಮೆಯಾಗಿತ್ತು.

## ೩೪

## ವರ್ಡ್ಸ್‌ವರ್ತ್—ಮ್ಯಾಥ್ಯೂ ಆರ್ನಾಲ್ಡ್

ಮನೆ ಹಿಸ್ಸೆಯಾಗುವ ದಿನಕ್ಕೆ ಹಿಂದಿನ ದಿನದ ಪ್ರಾತಃಕಾಲ ಎಂಟು ಗಂಟೆಯ ಹೊತ್ತಿನಲ್ಲಿ ಕಾನೂರು ಮನೆಯ ಉಪ್ಪರಿಗೆಯ ಮೇಲೆ ಹೂವಯ್ಯ ಹಿಂದಿನ ಸಾಯಂಕಾಲ ಕೈಸೇರಿದ್ದ ಇಂಗ್ಲಿಷ್ ಪತ್ರಿಕೆಯೊಂದನ್ನು ಬಿಚ್ಚಿ ಹಿಡಿದುಕೊಂಡು ನೋಡುತ್ತಿದ್ದನು. ಅವನಿಗೆ ತುಸು ದೂರದಲ್ಲಿ ಗೋಡೆಗೆ ಒರಗಿಕೊಂಡು ಕುಳಿತಿದ್ದ ರಾಮಯ್ಯ ಪುಸ್ತಕ ಒಂದನ್ನು ಓದಿಕೊಳ್ಳುತ್ತಿದ್ದನು. ಪತ್ರಿಕೆ ಪುಸ್ತಕಗಳನ್ನು ಓದುವಂತೆ ತೋರುತ್ತಿದ್ದರೂ ಅವರಲ್ಲಿ ಯಾರೊಬ್ಬರಾಗಲಿ ಓದುತ್ತಿದ್ದ ವಿಷಯದ ಮೇಲೆ ಸಂಪೂರ್ಣವಾಗಿ ಗಮನವಿಟ್ಟಿರಲಿಲ್ಲ. ಇಬ್ಬರ ಮನಸ್ಸೂ

ಮರುದಿನ ನಡೆಯಲಿದ್ದ ಹಿಸ್ಸೆಯ ವಿಚಾರವಾಗಿಯೂ ತರುವಾಯ ತಮಗೊದಗಲಿರುವ ಜೀವನದ ವಿಚಾರವಾಗಿಯೂ ಆಶಂಕೆ ಆಲೋಚನಾ ಪರಂಪರೆಗಳಿಂದ ತುಂಬಿಹೋಗಿತ್ತು. ರಾಮಯ್ಯನ ಕಣ್ಣಿನಿಂದ ಆಗಾಗ್ಗೆ ತುಳುಕುತ್ತಿದ್ದ ಕಣ್ಣೀರು ಮನೆ ಪಾಲಾಗುವುದರಲ್ಲಿ ಅವನಿಗಿದ್ದ ಹೃದಯವೇದೆಯನ್ನು ವ್ಯಕ್ತಗೊಳಿಸುತ್ತಿತ್ತು. ಮುಖ ಖಿನ್ನವಾಗಿ ಶೋಕಭಾರದಿಂದ ಕುಗ್ಗಿದಂತಿತ್ತು. ಅದುವರೆಗಿನ ಆತನ ಸರಳ ಜೀವನವೂ ಮಹದಾಶೆಯಿಂದ ನಿರ್ಮಿಸಿಕೊಂಡಿದ್ದ ನಚ್ಚಿನ ಹೊಂಗನಸೂ ಬಿರಿಯತೊಡಗಿತ್ತು. ಅದುವರೆಗೆ ಒಟ್ಟಾಗಿ ನಡೆದುಕೊಂಡು ಬಂದಿದ್ದ ಮನೆತನ ನಾಳೆ ಇಬ್ಭಾಗವಾಗುತ್ತದೆ! ಮನೆ ಕಟ್ಟಿದಂದಿನಿಂದಲೂ ಒಂದೇ ಅಡುಗೆಮನೆಯಲ್ಲಿ ಉರಿಯುತ್ತಿದ್ದ ಬೆಂಕಿ ಇನ್ನುಮೇಲೆ ಎರಡು ಅಡುಗೆಮನೆಗಳಲ್ಲಿ ಉರಿಯುತ್ತದೆ. ಹುಟ್ಟಿದಂದಿನಿಂದಲೂ ಹೂವಯ್ಯನೊಡನೆ ಕುಳಿತು, ಆ ಚಿರಪರಿಚಿತವಾದ ಊಟದ ಮನೆಯಲ್ಲಿ, ಕಡೆಗೋಲು ಕಂಬದ ಸಾನಿಧ್ಯದಲ್ಲಿ ಊಟಮಾಡುತ್ತಿದ್ದವನು ಇನ್ನುಮುಂದೆ ಅಣ್ಣಯ್ಯನನ್ನು ಬಿಟ್ಟು ಊಟಮಾಡಬೇಕಾಗುತ್ತದೆ. ಭೋಜನಕಾಲದಲ್ಲಿ ನಡೆಯುತ್ತಿದ್ದ ರುಚಿಕರವಾದ ಸಂಭಾಷಣೆಗಳೆಲ್ಲ ನಿಂತುಹೋಗುತ್ತವೆ. ಒಬ್ಬರ ಮನೆಗೆ ನಂಟರು ಬಂದರೆ ಇನ್ನೊಬ್ಬರು ಅವರನ್ನು ಪರಕೀಯರಂತೆ ಉದಾಸೀನದಿಂದ ನೋಡಿದರೆ ಎಂತಹ ಅವಲಕ್ಷಣವಾಗುತ್ತದೆ! ಒಬ್ಬರ ಮನೆಯಲ್ಲಿ ಅಡುಗೆಯಾಗುವುದು ತಡವಾದರೆ ಇನ್ನೊಬ್ಬರು ಅವರನ್ನು ಬಿಟ್ಟು, ಹೇಗೆ ಊಟಕ್ಕೆ ಹೋಗುವುದು? ಒಂದೇ ಸ್ನಾನದ ಮನೆಯಲ್ಲಿ ಎರಡು ಕಡೆ ಒಲೆಗಳಾಗುತ್ತವೆ! ಒಂದೇ ಜಗಲಿಯಲ್ಲಿ ಎರಡು ಜಗಲಿಗಳಾಗಿ ಎರಡು ದೀಪಗಳುರಿಯುತ್ತವೆ! ಇವುಗಳನ್ನೆಲ್ಲ ಒಂದೊಂದನ್ನಾಗಿ ಆಲೋಚಿಸಿದಂತೆ ರಾಮಯ್ಯನ ಶೋಕ ಅತೀವವಾಗತೊಡಗಿತು. ಮತ್ತೆ ಕಣ್ಣೀರು ಕರೆದನು! ಏನುಮಾಡಬೇಕು ಎಂಬುದು ಆತನಿಗೆ ತೋರಲಿಲ್ಲ. ಮೆಲ್ಲಗೆ ಕತ್ತೆತ್ತಿ ಹೂವಯ್ಯನ ಕಡೆ ನೋಡಿದನು. ಅವನು ಓದುವುದರಲ್ಲಿ ತನ್ಮಯನಾಗಿದ್ದಂತೆ ತೋರಿತು.

ರಾಮಯ್ಯ "ಅಣ್ಣಯ್ಯಾ, ಪತ್ರಿಕೆಯಲ್ಲಿ ಏನು ವಿಶೇಷ?" ಎಂದು ಕೇಳಿದನು.

ಹೂವಯ್ಯ ಪತ್ರಿಕೆಯ ಕಡೆ ನೋಡುತ್ತಿದ್ದನೆ ಹೊರತು ಅವನ ಮನಸ್ಸು ಅದನ್ನು ಓದುವುದರಲ್ಲಿ ಇರಲಿಲ್ಲ. ಪತ್ರಿಕೆಯನ್ನು ಓದಲೆಂದು ಕೈಗೆ ತೆಗೆದುಕೊಂಡ ಮೊದಲಿನಲ್ಲಿ ಕೆಲವು ವಿಷಯಗಳನ್ನು ಕುತೂಹಲದಿಂದ ಗ್ರಹಿಸಿದನು. ಮುಖ್ಯವಾಗಿ ಭಾರತೀಯರ ಸ್ವರಾಜ್ಯ ಸಂಪಾದನೆಯ ಪ್ರಯತ್ನ ಸಂಕಟಗಳು, ರಾಷ್ಟ್ರನಾಯಕರ ಆಂದೋಲನಕಾರಕ ಉಪನ್ಯಾಸಗಳು, ಬ್ರಿಟಿಷರ ದಬ್ಬಾಳಿಕೆಯ

ನಡತೆಗಳು, ದಕ್ಷಿಣ ಆಫ್ರಿಕಾದಲ್ಲಿ ಭಾರತೀಯರ ಮೇಲೆ ನಡೆಯುತ್ತಿದ್ದ ಅತ್ಯಾಚಾರಗಳು, ಮುಖಂಡರ ದಸ್ತಗಿರಿಗಳು — ಇವುಗಳೆಲ್ಲವನ್ನೂ ಓದುತ್ತ ಓದುತ್ತ ಅವನ ಆತ್ಮ ಸಂಕಟಕ್ಕೀಡಾಯಿತು. ಆ ಮಲೆನಾಡಿನ ಮೂಲೆಯಲ್ಲಿ, ಗಗನ ಚುಂಬಿಗಳಾದ ಪರ್ವತಾರಣ್ಯ ಶ್ರೇಣಿಗಳಿಂದ ಪರಿವೃತವಾಗಿ, ಪ್ರಪಂಚಕ್ಕೆ ಸೇರದ ಬೇರೊಂದು ಪ್ರಪಂಚದಂತಿದ್ದ ಕಾನೂರಿನಲ್ಲಿ, ಪತ್ರಿಕೆಯೆ ಒಂದು ಮಾಯಾ ಗವಾಕ್ಷವಾದಂತಾಗಿ, ಹೂವಯ್ಯನ ಕಲ್ಪನೆಯ ಕಣ್ಣಿಗೆ ಹೊರಗಡೆಯ ವಿಸ್ತಾರ ವಾದ ಜಗತ್ತಿನ ಭವ್ಯಘಟನೆಗಳನ್ನೂ ಮಹದ್ವ್ಯಾಪಾರಗಳನ್ನೂ ಮಹಾ ವ್ಯಕ್ತಿ ಗಳನ್ನೂ ಪ್ರದರ್ಶಿಸಿತು ! ಹೂವಯ್ಯನಿಗೆ ಲಜ್ಜೆ, ಶೋಕ, ಜುಗುಪ್ಸೆ, ಮುನಿಸು, ಆಸೆ—ಎಲ್ಲವೂ ಉಂಟಾದುವು: ತನ್ನ ಮಹತ್ವಾಕಾಂಕ್ಷೆಯ ಜೀವನಾದರ್ಶ ಎಂತಹ ಕೆಸರಿನಲ್ಲಿ ಕಾಲಿಟ್ಟು ಹೂತುಕೊಂಡಿದೆ ! ಹೊರಗಡೆಯ ಜಗತ್ತು ಎಂತಹ ಮಹತ್ಕಾರ್ಯಗಳಲ್ಲಿ ತೊಡಗಿರುತ್ತದೆ ! ಕ್ಷುದ್ರಸಂಸಾರದ ಕೋಟಲೆಯಲ್ಲಿ ಸಿಕ್ಕಿ ತನ್ನಾತ್ಮವು ಮಹಾಜಗತ್ತಿನ ಆಮಂತ್ರಣವನ್ನು ತಿರಸ್ಕರಿಸುತ್ತಿದೆ ! ಹಿಂದೆ ಮಹಾಪುರುಷರ ಜೀವನ ಚರಿತ್ರೆಗಳನ್ನು ಓದಿದಾಗ ತಾನೂ ಅವರಂತಾಗ ಬೇಕೆಂದು ಕಟ್ಟಿದ್ದ ಹೊಂಗನಸಿನ ಹಡಗು ಯಾವುದೋ ಅಜ್ಞಾತವಾದ ಮರಳುದಿಣ್ಣೆಗೆ ಢಿಕ್ಕಿ ಹೊಡೆದು ನಡೆಗೆಟ್ಟು, ನಾಶವಾಗುವುದರಲ್ಲಿದೆಯಲ್ಲಾ ! ಹೇ ಜಗದೀಶ್ವರ, ಇದರಿಂದ ಪಾರಾಗುವ ಹೃದ್ಬಲವನ್ನೂ, ಮಹಾಕಾಂಕ್ಷೆ ಯನ್ನೂ, ಸಾಧಿಸುವ ದೃಢಮನಸ್ಸನ್ನೂ ದಯಪಾಲಿಸು !

ಇಂತಹ ಆಲೋಚನೆಗಳಲ್ಲಿ ತನ್ಮಯನಾಗಿದ್ದವನಿಗೆ ರಾಮಯ್ಯನ ಪ್ರಶ್ನೆ ಸ್ಫುಟವಾಗಿ ಕೇಳಲಿಲ್ಲ. "ಏನಂದೆ ?" ಎಂದು ಕೇಳಿದನು.

ರಾಮಯ್ಯ "ಏನೂ ಇಲ್ಲ. 'ಪತ್ರಿಕೆಯಲ್ಲಿ ಏನು ವಿಶೇಷ ?' ಎಂದು ಕೇಳಿದೆನಷ್ಟೆ !" ಎಂದು ಹೇಳುತ್ತ ಹೂವಯ್ಯನ ಬಳಿಗೆ ನಡೆದುಬಂದು ಎದುರು ಗಡೆ ಕುಳಿತನು.

ಇಬ್ಬರೂ ಸೇರಿ ಸ್ವಲ್ಪಹೊತ್ತು ಪತ್ರಿಕೆಯಲ್ಲಿದ್ದ ಸದಸದ್ವಿಚಾರಗಳೆಲ್ಲವನ್ನೂ ಓದಿದರು. ಟೀಕೆ, ವ್ಯಾಖ್ಯಾನ, ಪ್ರಶಂಸೆ, ಖಂಡನೆ ಎಲ್ಲವೂ ಸಾಗಿದುವು.

ಮಾತು ಮಾತಾಡುತ್ತಾ ಹೂವಯ್ಯನು ನಿಟ್ಟುಸಿರುಬಿಟ್ಟು "ಈ ಜಗತ್ತು ನಾವು ಊಹಿಸಿರುವಷ್ಟು ಆದರ್ಶಪ್ರಾಯವಾಗಿಲ್ಲ, ರಾಮು. ಅದರಲ್ಲಿಯೂ ಹುಡುಗರಾಗಿದ್ದಾಗ ಕಟ್ಟಿಕೊಂಡ ಕನಸುಗಳೆಲ್ಲ ವಾಸ್ತವವಾಗಬೇಕಾದರೆ ಬಹಳ ಕಷ್ಟ, ಅಸಾಧ್ಯ ! ಕಡೆಕಡೆಗೆ ಸತ್ಯ ಅಸತ್ಯದೊಡನೆ ರಾಜಿಮಾಡಿಕೊಂಡೂ ಮಾಡಿ ಕೊಂಡೂ ಎರಡಕ್ಕೂ ಇರುವ ಭೇದವೂ ಗೊತ್ತಾಗದಂತೆ ಆಗಿಬಿಡುತ್ತದೆ" ಎಂದು ಶುದ್ಧವಾದ ಇಂಗ್ಲಿಷಿನಲ್ಲಿಯೆ ಪ್ರಾರಂಭಿಸಿದನು. ರಾಮಯ್ಯನೂ

ಅವನನ್ನೆ ಅನುಸರಿಸಲು ಇಬ್ಬರೂ ಇಂಗ್ಲಿಷಿನಲ್ಲಿಯೆ ಬಹಳಕಾಲ ಮಾತಾಡಿದರು. ಅವರ ಸಂಭಾಷಣೆಯ ಮೆರವಣಿಗೆಯಲ್ಲಿ ಪ್ರಸಿದ್ಧರಾದ ಭಾರತೀಯರೂ ಪಾಶ್ಚಾತ್ಯರೂ ಪ್ರಾಚ್ಯಪಾಶ್ಚಾತ್ಯ ಮಹಾಗ್ರಂಥ ಸಮೂಹಗಳೂ ಕ್ರಮವಾಗಿ ಅಕ್ರಮವಾಗಿ ತುಮುಲವಾಗಿ ಸಾಗಿಹೋದುವು.

ಇಷ್ಟಾರ್ಥಗಳು ವಿಫಲವಾಗಿ, ಅತ್ಯಂತ ಉತ್ಸಾಹಿಗಳಾದ ತರುಣರೂ ಕೂಡ ಕಟ್ಟಕಡೆಗೆ ನಿರುತ್ಸಾಹಿಗಳಾಗಿ, ಜನಸಾಮಾನ್ಯ ಜೀವನಪಥದಲ್ಲಿ ನಡೆದು ಹೇಗೆ ಅಜ್ಞಾತರಾಗಿಬಿಡುತ್ತಾರೆ ಎಂಬ ವಿಚಾರ ಬಂದಾಗ ರಾಮಯ್ಯನು "ವರ್ಡ್ಸ್‌ವರ್ತ್ ಎಷ್ಟು ಚೆನ್ನಾಗಿ ಭವಿಷ್ಯ ಹೇಳಿಬಿಟ್ಟಿದ್ದಾನೆ ಆ 'ಇಮ್ಮಾರ್ಟ್ಯಾಲಿಟಿ ಓಡ್'ನಲ್ಲಿ! ಕ್ಲಾಸಿನಲ್ಲಿ ಮೇಷ್ಟರು ತಲೆ ಚಚ್ಚಿಕೊಂಡು ಪಾಠ ಹೇಳಿಕೊಟ್ಟಾಗ ನನಗೆ ಅದರ ಅರ್ಥ ಅನುಭವಕ್ಕೆ ಬಂದೇ ಇರಲಿಲ್ಲ. ಈಗೀಗ ಬರುತ್ತಾ ಇದೆ:

"Heaven lies about us in our infancy!
Shades of the prison-house begin to close
Upon the growing Boy,
But He beholds the light, and whence it flows,
He sees it in his joy;
The youth, who daily farther from the east
Must travel, still is Nature's Priest,
And by the vision splendid
Is on his way attended;
At length the Man perceives it die away,
And fade into the light of common day."

"ವರ್ಡ್ಸ್‌ವರ್ತ್ ಚೆನ್ನಾಗಿ ಹೇಳಿದ್ದಾನೆ. ಆದರೆ ಆ ರುದ್ರಚಿತ್ರ ಮನಸ್ಸಿಗೆ ಇನ್ನೂ ಚೆನ್ನಾಗಿ ನಾಟುವಂತೆ ಹೇಳಿರುವವನು ಮ್ಯಾಥ್ಯೂ ಆರ್ನಾಲ್ಡ್, ಆ 'ರಗ್ಬಿಚಾಪೆಲ್'ನಲ್ಲಿ! ನನಗಂತೂ ಕಣ್ಣಿಗೆ ಕಟ್ಟಿದಹಾಗಿದೆ ಆ ಚಿತ್ರ! ನೆನೆದಾಗಲೆಲ್ಲ ರೋಮಾಂಚವಾಗುತ್ತದೆ! ನಿನಗೆ ಆ ಭಾಗ ಬಾಯಿಗೆ ಬರುತ್ತದೇನು?"

"ಸ್ವಲ್ಪ ಸ್ವಲ್ಪ ಬರುತ್ತಿತ್ತು...."

"ಆ ಮೇಜಿನಮೇಲೆ ನನ್ನ 'ಗೋಲ್ಡನ್ ಟ್ರೆಜರಿ' ಇದೆ, ತಗೊಂಡು ಬಾ...."

ರಾಮಯ್ಯ ಕುತೂಹಲದಿಂದ ಅವಸರವಸರವಾಗಿ ಎದ್ದು ಹೋಗಿ, ಹೆಚ್ಚಾಗಿ ಉಪಯೋಗಿಸಿದ್ದರಿಂದ ಮಾಸಿ ಹರಿದಿದ್ದ ಆ ಪುಸ್ತಕವನ್ನು ತಂದುಕೊಟ್ಟನು. ಹೂವಯ್ಯ ತಾನು ಮೆಚ್ಚಿದ ಕವನಗಳನ್ನಾಗಲಿ ನಾಟಕಭಾಗಗಳನ್ನಾಗಲಿ ಗದ್ಯ

ಖಂಡಗಳನ್ನಾಗಲಿ ಜ್ವಾಲಾಮಯವಾಗಿ ಓದುತ್ತಿದ್ದನು. ರಾಮಯ್ಯನಿಗೆ ಕೇಳಿದಷ್ಟೂ ಸಾಕಾಗುತ್ತಿರಲಿಲ್ಲ.

ಹೂವಯ್ಯ ಹಾಳೆಗಳನ್ನು ಮಗುಚಿಹಾಕಿ, 'ರಗ್ಬಿಚಾಪೆಲ್' ಕವನವನ್ನು ತೆಗೆದು ಐವತ್ತೆಂಟನೆಯ ಪಂಕ್ತಿಯಿಂದ ಓದತೊಡಗಿದನು:

"What is the course of the life of mortal men on the earth?—Most men eddy about here and there, eat and drink, chatter and love and hate, gather and squander, are raised aloft, are hurl'd in the dust, striving blindly, achieving nothing; and then they die, perish!..........

"We, we have chosen our path—path to clear-purposed goal, path of advance!—but it leads a long, steep journey, through sunk gorges, o'er mountains in snow! Cheerful, with friends, we set forth—then, on the height comes the storm!.......

"..........Alas, havoc is made in our train! Friends who set forth at our side falter, are lost in the storm! We, we only, are left! With frowning foreheads, with lips sternly compress'd, we strain on, on.........."

ಹೂವಯ್ಯ ಓದುವುದನ್ನು ನಿಲ್ಲಿಸಿ, ನೀಳವಾಗಿ ನಿಟ್ಟುಸಿರುಬಿಟ್ಟು, ಎದುರಿಗಿದ್ದ ಅರಣ್ಯಾಕಾಶಗಳ ಕಡೆಗೆ ನೋಡುತ್ತ ಕುಳಿತನು. ಅವನ ಕಣ್ಣು ಹನಿ ಹನಿಯಾಗಿತ್ತು. ಮುಖ ಕೆಂಪೇರಿತ್ತು. ಆವೇಶ ಬಂದಹಾಗಿತ್ತು. ಅವನಿಗೆ ಆಗಾಗ ಬರುತ್ತಿದ್ದ ಭಾವೋನ್ಮಾದವಿರಬೇಕೆಂದು ತಿಳಿದು ರಾಮಯ್ಯ ಕೆನ್ನೆಗೈಯಾಗಿ ನೆಲವನ್ನು ನೋಡುತ್ತ ಸುಮ್ಮನೆ ಕುಳಿತನು.

ಉಪ್ಪರಿಗೆಯಮೇಲಿದ್ದ ಇವರಿಬ್ಬರ ಭಾವುಕತೆಯನ್ನೂ ಆದರ್ಶತೆಯನ್ನೂ ವಾಸ್ತವ ಜಗತ್ತು ಪರಿಹಾಸ್ಯಮಾಡುತ್ತಿದೆಯೋ ಎಂಬಂತೆ ಕೆಳಗಡೆಯಿಂದ ಅನೇಕರು ನಗುವ ಸದ್ದು ಕೇಳಿಬಂದಿತು.

ತುಸು ಹೊತ್ತಾದ ಬಳಿಕ ಹೂವಯ್ಯ ತನ್ನ ಕಡೆಗೆ ತಿರುಗಿನೋಡಲು ರಾಮಯ್ಯ "ಅಣ್ಣಯ್ಯಾ, ಈ ಹಿಸ್ಸೆಯಾಗುವುದನ್ನು ತಪ್ಪಿಸುವುದಕ್ಕಾಗುವುದಿಲ್ಲವೆ?" ಎಂದನು.

"ಹೇಗೆ ತಪ್ಪಿಸುವುದಕ್ಕಾಗುತ್ತದೆ? ಚಿಕ್ಕಯ್ಯ ಒಪ್ಪಬೇಕಾಯ್ತಲ್ಲಾ!"

"ನಾನು ಕೇಳಿ ನೋಡಲೇನು?"

"ನಿನಗೆಲ್ಲೋ ಹುಚ್ಚು! ಚೆನ್ನಾಗಿ ಬೈಸಿಕೊಳ್ಳುತ್ತೀಯಷ್ಟೆ!"

ಮತ್ತೆ ಇಬ್ಬರೂ ಮಾತಾಡದೆ ಸುಮ್ಮನೆ ಕೂತುಕೊಂಡರು. ತೋಟದಿಂದ ಒಂದು ಮಿಂಚುಳ್ಳಿ ಮ್ಲ್ಹಿ ಮ್ಲ್ಹಿ ಎಂದು ಕೂಗಿತು. ಕಾಮಳ್ಳಿಯೊಂದು ಹಾಡುತ್ತ ಹಾರಿಹೋಯಿತು. ಏತಕ್ಕೋ ಗಾರಾದ ಕೋಳಿಗಳು ಮನೆಯ ಹಿಂದುಗಡೆ ಕೂಗಿಕೊಳ್ಳುತ್ತಿದ್ದುವು.

ಏಣಿ ಮೆಟ್ಟಲುಗಳು ಸದ್ದಾಗುವಂತೆ ಪುಟ್ಟಮ್ಮ ಹತ್ತಿಬಂದು "ಅಣ್ಣಯ್ಯಾ, ಬಳ್ಳೆ ಹಾಕಿದಾರೆ. ಉಣ್ಣಕ್ಕೆ ಬರಬೇಕಂತೆ" ಎಂದಳು.

"ಅರೆ! ಇಷ್ಟು ಬೇಗ ಊಟಕ್ಕೇನೆ! ಗಂಟೆ ಎಷ್ಟೇ?" ಎಂದು ರಾಮಯ್ಯ ಆಶ್ಚರ್ಯದಿಂದ ಕೇಳಿದನು.

ಪುಟ್ಟಮ್ಮ "ಹನ್ನೊಂದು ಹೊಡೀತು" ಎಂದಳು.

"ಅದು ಯಾಕೆ ನಗುತ್ತ ಇದ್ದರಲ್ಲಾ ಕೆಳಗೆ?"

"ಕಿರಾಪು ತೆಗೆದುಹಾಕಿ ಜುಟ್ಟು ಬಿಡಬೇಕು ಅಂತ ಹೇಳಿದ್ದರಂತೆ ಅಪ್ಪಯ್ಯ. ಅದಕ್ಕೇ ಚೌರದವನು ಬಂದಿದ್ದು ಕಂಡು ವಾಸು ಓಡಿಹೋಗಿ ಕೋಳಿ ಒಡ್ಡೀಲಿ ಕದ್ದು ಕೂತಿದ್ದ!..."

"ಕೋಳಿ ಒಡ್ಡೀಲಿ!"

"ಹ್ಞೂ ಅಂತೀನಿ! ಕೋಳಿ ಒಡ್ಡೀಲೇ ಅಡಗಿಕೊಂಡು ಕೂತಿದ್ದು! ಸೇರೆಗಾರ್‍ರು, ಪುಟ್ಟಣ್ಣ, ಅಪ್ಪಯ್ಯ, ನಾನು ಎಲ್ಲಾ ಸೇರಿ ಹುಡುಕೀ ಹುಡುಕೀ, ಕಡೇಗೆ ಸಿಕ್ಕ! ಈಗ ಎಳಕೊಂಡುಹೋಗಿ ಕಿರಾಪು ಕತ್ತರಿಸ್ತಾ ಇದ್ದಾರೆ! ಅವನೇನು ಅಳ್ತಾನೆ, ಅಳ್ತಾನೆ! ಪುರಸತ್ತೇ ಇಲ್ಲ!"

"ಸಾಕು ಬಿಡು! ದಂಡು ಕಡಿದಿರಿ ಎಲ್ಲಾ ಸೇರಿ! ಅವನ ಕ್ರಾಪು ನಿಮಗೆಲ್ಲ ಕಣ್ಣುಬೇನೆಯಾಗಿತ್ತೇನೋ?"

ಪುಟ್ಟಮ್ಮನಿಗೆ ಸ್ವಲ್ಪ ಚುಚ್ಚಿದಂತಾಗಿ "ನಾನೇನು ಮಾಡ್ಲೊ, ಅಣ್ಣಯ್ಯಾ? ಅಪ್ಪಯ್ಯ ಹೇಳಿದ್ರೂ..." ಎಂದು ಮುಗಿಸುವುದರಲ್ಲಿ ರಾಮಯ್ಯ "ಸಾಕು ಬಿಡು!" ಎಂದನು.

ಪುಟ್ಟಮ್ಮ ಸ್ವಲ್ಪ ರಭಸದಿಂದಲೆ ಏಣಿ ಮೆಟ್ಟಿಲುಗಳನ್ನು ಇಳಿದು ಹೋದಳು. ಅವಳಿಗೆ ಸಿಟ್ಟು ಬಂದಿತ್ತು.

೪೦

# ಕಾನೂರು ಜಮೀನಿನ ಹಿಸ್ಸೆಯ ಪಂಚಾಯಿತಿ

ಇಂದು ಕಾನೂರು ಮನೆ ಪಾಲಾಗುವ ದಿನ. ಬಹುಕಾಲದಿಂದಲೂ ಒಂದಾಗಿ ಹರಿದುಬಂದಿದ್ದ ಸಂಸಾರನದಿ ಇಂದು ಎರಡಾಗುತ್ತದೆ. ಹೊರಗಡೆಯ ಜಗತ್ತಿಗೆ ಅದೊಂದು ಅತಿಸಾಮಾನ್ಯ ಘಟನೆಯಾಗಿದ್ದರೂ ಆ ಮನೆಯವರಿಗೂ ಅವರಿಗೆ ಸಂಬಂಧಪಟ್ಟವರಿಗೂ ಅದೊಂದು ವಿಷಮ ಸನ್ನಿವೇಶವಾಗಿದೆ. ಒಬ್ಬೊಬ್ಬರ ಹೃದಯದಲ್ಲಿ ಒಂದೊಂದು ರೀತಿಯ ಭಾವತರಂಗಗಳೇಳುತ್ತಿವೆ. ಹೂವಯ್ಯ ರಾಮಯ್ಯರಿಗೆ ದುಮ್ಮಾನ. ಚಂದ್ರಯ್ಯಗೌಡರು ನಾಗಮ್ಮನವರು ಇವರಿಗೆ ಹಿಗ್ಗು. ಸುಬ್ಬಮ್ಮನಿಗೆ ಒಂದು ವಿಧವಾದ ಭೀತಿ. ಪುಟ್ಟಮ್ಮ ವಾಸು ಇವರಿಗೆ ದುಮ್ಮಾನ, ಹಿಗ್ಗು, ಭೀತಿ — ಎಲ್ಲಾ ಒಟ್ಟುಗೂಡಿ ಉಂಟಾಗಿರುವ ಸಂಭ್ರಾಂತಿ. ಪುಟ್ಟಣ್ಣನಿಗೆ ಮುಂದೆ ತಾನೇನು ಮಾಡಬೇಕೆಂಬ ಚಿಂತೆ. ಸೇರೆಗಾರ ರಂಗಪ್ಪ ಸೆಟ್ಟರಿಗೆ ಏನೋ ಒಂದು ತೆರನಾದ ದಿಗ್ವಿಜಯದ ಹರ್ಷ: ಚಂದ್ರಯ್ಯಗೌಡರು ತನ್ನನ್ನು ತಮ್ಮ ಅಂತರಂಗಕ್ಕೆ ತೆಗೆದುಕೊಂಡಿದ್ದಾರಲ್ಲಾ ಎಂಬ ಹೆಮ್ಮೆ. ಆಳು ಗಳಿಗೆಲ್ಲ ಏನಾದರೂ ಆಗಲಿ ಎಂಬ ನಿಸ್ಸಹಾಯಭಾವ. ಅಂತೂ ಇಂದು ಪ್ರಾತಃಕಾಲದಿಂದ ಮನೆಯಲ್ಲಿ ಗಜಿಬಿಜಿ ಪ್ರಾರಂಭವಾಗಿದೆ !

ವಿಷಯವನ್ನರಿಯದ ಹೊರಗಿನವರು ಯಾರಾದರೂ ಬಂದು ನೋಡಿದ್ದರೆ ಅಂದು ಆ ಮನೆಯಲ್ಲಿ ಏನೋ ಒಂದು ವಿಶೇಷೋತ್ಸವ ನಡೆಯುತ್ತಿದೆ ಎಂದು ಊಹಿಸುತ್ತಿದ್ದರು. ಪ್ರತಿಯೊಬ್ಬರ ಚಲನೆಯಲ್ಲಿಯೂ ಏನೋ ಒಂದು ನಿರೀಕ್ಷಣೆ ವ್ಯಕ್ತವಾಗುತಿತ್ತು. ಜಗಲಿಯಲ್ಲಿ ಹಾಸಿದ್ದ ಪಟ್ಟೆಪಟ್ಟೆಯ ಜಮಖಾನದ ಮೇಲೆ ಜರಿ ರುಮಾಲುಗಳನ್ನು ಸುತ್ತಿದ್ದ ಗೌಡರುಗಳೂ ಹೆಗ್ಗಡೆಗಳೂ ನಾಯಕರೂ ದಿಂಬುಗಳಿಗೊರಗಿಕೊಂಡು, ಹರಿವಾಣದಿಂದ ಎಲೆಯಡಕೆ ಹಾಕಿಕೊಳ್ಳುತ್ತಾ, ಏನೋ ಮಹತ್ಕಾರ್ಯಗಳನ್ನು ಮಾಡಬಂದಿರುವ ರಾಯಭಾರಿಗಳಂತೆ ಲೋಕಾಭಿರಾಮವಾಗಿ ಮಾತಾಡುತ್ತ ಕುಳಿತಿದ್ದರು. ಅವರ ಓಲಗದ ಓಜೆ ಎಷ್ಟರಮಟ್ಟಿಗಿತ್ತು ಎಂದರೆ ಗಟ್ಟಿಯಾಗಿ ಮಾತಾಡುತ್ತ ಹೆಬ್ಬಾಗಿಲು ದಾಟಿ ಚೌಕಿಗೆ ತಲೆಹಾಕಿದ್ದ ಬೇಲರ ಬೈರ ಜಗಲಿಯ ಕಡೆ ನೋಡಿದೊಡನೆಯೆ ಬಾಯಿ ಮುಚ್ಚಿಕೊಂಡು, ತಾನೆಸಗಿದ ಅಪರಾಧಕ್ಕೆ ನಾಲಗೆ ಕಚ್ಚಿಕೊಂಡು, ಹಿಂತಿರುಗಿ ಹೊರಗೆ ಹೋಗಿ, ಅಲ್ಲಿ ನೆರೆದಿದ್ದ ಇತರ ಆಳುಗಳಿಗೆ ಒಳಗಿದ್ದ ವೈಭವದ ದೃಶ್ಯವನ್ನು

ವರ್ಣಿಸಲು ಅವರೆಲ್ಲರೂ ಒಬ್ಬೊಬ್ಬರಾಗಿ ಬಂದು ಹೆಬ್ಬಾಗಿಲಿನ ಸಂದಿಯಲ್ಲಿ ಇಣಿಕಿ ಇಣಿಕಿ ನೋಡತೊಡಗಿದರು.

"ಬೈರಣ್ಣಾ, ಆ ಮುಂಡಿಗೆ ಕಂಭಕ್ಕೆ ಒರಗಿಕೊಂಡು ಕೂತಾರಲ್ಲಾ ಅವ ರ್‍ಯಾರೋ?" ಎಂದು ಸಿದ್ದ ಕೇಳಿದನು.

ಬೈರ "ಏ! ನೀನ್ಯಾಕೋ ಹೀಂಗೆ ಹೊಸಬನ್ಹಾಂಗೆ ಮಾತಾಡ್ತೀಯಾ? ಬೈದೂರು ಬಸವೇಗೌಡ್ರು ಅಲ್ಲೇನೊ!" ಎಂದು ತನಗೆ ನಾಡಿನ ದೊಡ್ಡ ದೊಡ್ಡ ಗೌಡರೆಲ್ಲರೂ ಗೊತ್ತು ಎಂಬ ಹೆಮ್ಮೆಯಿಂದ ಪಿಚ್ಚನೆ ಹಲ್ಲುಬಿಟ್ಟನು.

ಹಳೆಪೈಕದ ತಿಮ್ಮನೂ ಸಂದಿಯಲ್ಲಿ ಇಣಿಕಿನೋಡಿ "ಹೋಗೋ ಹೊಗೋ! ಬೈದೂರು ಬಸವೇಗೌಡ್ರು ಗೋಡೆಗೆ ಒರಗಿಕೊಂಡು ಕೂತಾರೆ! ಮುಂಡಿಗೀಗೆ ಒರಗಿಕೊಂಡು ಕೂತೋರು ಬಾಳೂರು ಸಿಂಗೇಗೌಡ್ರು!" ಎಂದು ಬೈರನ ಸರ್ವಜ್ಞತೆಗೆ ಭಂಗತಂದನು!

ಬೈರ ಮತ್ತೆ ಇಣಿಕಿನೋಡಿ "ಹೋಗ್ರೋ ಹೋಗ್ರೋ! ನಿಮಗೇನು ಗೊತ್ತು? ನಂಗಿಲ್ಲೇನು ಬೈದೂರು ಬಸವೇಗೌಡ್ರ ಗುರ್ತು!" ಎಂದು ಪ್ರತಿವಾದಿಸಿದನು.

"ಸಾಕು! ನಿನ್ನ ಕೂಳ್ಗೊತ್ತಿತ್ತು! ಅವರಿಲ್ಲೀಗೆ ಬಂದಾಗಲೆಲ್ಲಾ ಕಳ್ಳು ಕೊಡೋ ನಂಗೇ ಗೊತ್ತಿಲ್ಲಂತೆ ಅವರ ಗುರ್ತು!" ಎಂದು ತಿಮ್ಮ ಅಧಿಕಾರ ವಾಣಿಯಿಂದ ಹೇಳಿದನು.

ಆದರೂ ಬೈರ ಒಪ್ಪಲಿಲ್ಲ. ಇಬ್ಬರಿಗೂ ಮಾತು ಹತ್ತಿತು!

ಅಷ್ಟರಲ್ಲಿ ಸಿದ್ದ "ತಡೀರ್‍ರೊ; ಯಾಕೆ ಬಡ್ಕೋತೀರಿ. ನೋಡಲ್ಲಿ ಸೇರೆಗಾರ್‍ರು ಬತ್ತಾರೆ. ಅವರನ್ನೇ ಕೇಳಿದ್ರೆ ಎಲ್ಲ ಗೊತ್ತಾಗ್ತದೆ" ಎಂದನು.

ಅಲ್ಲಿಗೆ ಬಂದ ರಂಗಪ್ಪಸೆಟ್ಟರು ಕಾನೂರು ಮನೆಯನ್ನು ಹಿಸ್ಸೆಮಾಡಲು ಬಂದು ಜಗಲಿಯಮೇಲೆ ಮಂಡಿಸಿದ್ದ ಮುಂಡಾಸದ ಗೌಡರು ಹೆಗ್ಗಡೆ ನಾಯ ಕರುಗಳನ್ನೆಲ್ಲ ಒಬ್ಬೊಬ್ಬರನ್ನಾಗಿ ವರ್ಣಿಸಿ ವಿವರಿಸಿ ಗುರುತು ಹೇಳಿದರು:

"ಮುಂಡಿಗೆಗೆ ಒರಗಿಕೊಂಡು ಕೂತವರು ನೆಲ್ಲುಹಳ್ಳಿ ಪೆದ್ದೇಗೌಡರು... ಅವರ ಹತ್ತಿರ ಗೋಡೆಗೆ ಒರಗಿಕೊಂಡವರು ಮುದ್ದೂರು ಭರ್ಮೇಗೌಡರು... ಅವರೀಚೆಗೆ ಕುಳ್ಳಗೆ ತೆಳ್ಳಗೆ ಕೂತಾರಲ್ಲಾ ಅವರು ಎಂಟೂರು ಶೇಷೇಗೌಡರು."

"ಹುಡ್ಗಿ ಹಾರಿಸಿದರು ಅಂತಾ ಕೇಸಾಗಿತ್ತಲ್ಲಾ ಅವರೇ ಏನ್ರೊ?" ಎಂದು ನಡುವೆ ಬಾಯಿಹಾಕಿ ಬೈರ ಪ್ರಶ್ನೆ ಕೇಳಿದನು.

ಸೇರೆಗಾರರು "ಅದೆಲ್ಲಾ ಪಾರುಪತ್ತಿ ನಿಂಗ್ಯಾಕೋ?" ಎಂದು ಗದರಿಸಿ ಮುಂದೆ ಹೇಳಿದರು. "ಕರೀ ಗೀರುಗೀರು ಕೋಟಿನವರೇ ಬಾಳೂರು ಸಿಂಗೇ

ಗೌಡ್ರು...ಗಿರ್ಲುಮಿಾಸೆ ಬಿಟ್ಟವರು ಮೇಗ್ರಳ್ಳಿ ನಾಗಪ್ಪ ಹೆಗ್ಗಡೇರು... ಗಡಿಯಾರದ ಸರಪಣಿ ಕಾಣ್ತದಲ್ಲಾ ಅವರೇ ಬೈದೂರು ಬಸವೇಗೌಡ್ರು..."

ಸೇರೆಗಾರರು ಬಾಯಿತುಂಬ ತುಂಬಿಕೊಂಡಿದ್ದ ಎಲೆಯಡಿಕೆಯನ್ನು ತುಂತುರು ತುಂತುರಾಗಿ ಊದಿ ಉಗುಳಿ ಒಳಗೆ ಹೋದರು. ಆಳುಗಳೆಲ್ಲ ಹೊರಗೇ ನಿಂತು ಆ ಅಪೂರ್ವ ದೃಶ್ಯವನ್ನು ಆಗಾಗ್ಗೆ ನೋಡುತ್ತ, ಮಾತಾಡುತ್ತ ಸಂತೆ ಸೇರಿದ್ದರು. ಅವರ ಕಣ್ಣಿಗೆ ಅಷ್ಟೊಂದು ಜರಿ ಪೇಟಗಳೂ ಬಣ್ಣದ ಬಟ್ಟೆಗಳೂ ಬಚಕಾನಿಗಳೂ ಒಟ್ಟಿಗೆ ಸೇರಿದ್ದುದು ಮೈಸೂರಿಗೆ ಹೋದ ಹಳ್ಳಿಗನ ದೃಷ್ಟಿಗೆ ದಸರಾ ದರ್ಬಾರು ಸೇರಿದಹಾಗಿತ್ತು.

ಇತ್ತ ಆಳು ಒಕ್ಕಲುಗಳು ದೃಶ್ಯಾವಲೋಕನದಲ್ಲಿ ಆಸಕ್ತರಾಗಿರಲು ಅತ್ತ ಜಗಲಿಯಲ್ಲಿ ಮಾತುಕತೆ ಭರದಿಂದ ಸಾಗಿತ್ತು. ಸಂಭಾಷಣೆಯ ಆಳ ಅಗಲ ಗಳು ಗ್ರಾಮ್ಯಜೀವನದ ಎಲ್ಲೆಕಟ್ಟನ್ನು ದಾಟಿರಲಿಲ್ಲ. ಜಮಿಾನು, ಬೇಸಾಯ, ಮಳೆ, ಅಡಕೆ ತೋಟದ ಕೊಳೆರೋಗ, ಅಡಕೆ ಧಾರಣೆ, ಘಟ್ಟದ ಕೆಳಗಿನ ಆಳುಗಳ ವಿಚಾರ — ಇವುಗಳನ್ನೆ ಕುರಿತು ಒಬ್ಬೊಬ್ಬರೂ ತಮ್ಮ ತಮ್ಮ ದೃಷ್ಟಿಯಿಂದ ಉಪನ್ಯಸಿಸುತ್ತಿದ್ದರು. ಚಂದ್ರಯ್ಯಗೌಡರು ಬೀರುವಿನ ಪಕ್ಕದಲ್ಲಿ ಶಾಲು ಹೊದೆದುಕೊಂಡು ಕುಳಿತು, ಆಗಾಗ್ಗೆ ನಶ್ಯ ಹಂಚುತ್ತಲೂ ಹಾಕಿಕೊಳ್ಳುತ್ತಲೂ, ಅತಿಥಿಗಳನ್ನು ಉಪಚರಿಸುತ್ತಿದ್ದರು.

ಇದ್ದಕ್ಕಿದ್ದ ಹಾಗೆ ಏಣಿ ಮೆಟ್ಟಲು ಸದ್ದಾಗಿ ಎಲ್ಲರೂ ಮಾತು ನಿಲ್ಲಿಸಿ ಆಕಡೆ ನೋಡಿದರು. ಪ್ರತಿಯೊಬ್ಬರ ಭಂಗಿಯಲ್ಲಿಯೂ ಗೌರವಪ್ರದರ್ಶನದ ಸೂಚನೆ ಯೆದ್ದಿತು. ಮುತ್ತಳ್ಳಿ ಶ್ಯಾಮಯ್ಯಗೌಡರು ಉಪ್ಪರಿಗೆಯಿಂದ ಇಳಿದು ಬಂದು ಎಲ್ಲರನ್ನೂ ಮೇಲಕ್ಕೆ ಬರುವಂತೆ ಕರೆದರು. ಅವರನ್ನು ಹಿಂಬಾಲಿಸಿ ಒಬ್ಬೊಬ್ಬ ರಾಗಿ ಜಗಲಿಯ ಮೇಲಿದ್ದವರೆಲ್ಲರೂ ಉಪ್ಪರಿಗೆಗೆ ಹೋದರು.

ಅಲ್ಲಿ ಚೊಕ್ಕಟವಾಗಿ ಹಾಸಿದ್ದ ಕೆಂಪು ಕಪ್ಪು ಪಟ್ಟೆಯ ವಿಸ್ತಾರವಾದ ಜಮ ಖಾನದಮೇಲೆ, ಒಂದು ಭಾಗದಲ್ಲಿ, ಹೂವಯ್ಯನೊಡನೆ ಮಾತಾಡುತ್ತ ಸೀತೆಮನೆ ಸಿಂಗಪ್ಪಗೌಡರು ಕುಳಿತಿದ್ದರು. ಒಂಬತ್ತು ಗಂಟೆಯ ಬಿಸಿಲಿನಲ್ಲಿ ಅವರಿಬ್ಬರ ಛಾಯೆಗಳೂ ಜಮಖಾನದ ಮೇಲೆ ಕಪ್ರಗೊರಗಿದ್ದುವು. ನಂಟರು ಬಂದ ಒಡನೆಯೆ ಇಬ್ಬರೂ ಎದ್ದು ನಿಂತು ನಮಸ್ಕಾರ ಮಾಡಿದರು. ಪ್ರತಿ ಯೊಬ್ಬರೂ ತಮತಮಗೆ ಉಚಿತವಾದ ತಾಣಗಳಲ್ಲಿ ಮಂಡಿಸಿದ ತರುವಾಯ ಆ ದಿನದ ಕಾರ್ಯಕ್ಕಾರಂಭವಾಯಿತು.

ಆ ಸಭೆಗೆ, ಅವರನ್ನು ಯಾರೂ ಚುನಾಯಿಸದಿದ್ದರೂ ತಮ್ಮ ತೂಕ ಸಂಪತ್ತು

ವ್ಯಕ್ತಿತ್ವಗಳ ಮಹಿಮೆಯಿಂದಲೆ, ಮುತ್ತಳ್ಳಿ ಶ್ಯಾಮಯ್ಯಗೌಡರೆ ಸ್ವಾಭಾವಿಕವಾಗಿ ಸ್ವಯಂ ಅಧ್ಯಕ್ಷರಾಗಿ ಕಾರ್ಯಕಲಾಪಗಳನ್ನು ಪ್ರಾರಂಭಿಸಿದರು.

ಪ್ರಾರಂಭದಲ್ಲಿ ಎಲ್ಲವೂ ಸುಸೂತ್ರವಾಗಿ ಸಾಗಿತು. ಲೆಕ್ಕಪತ್ರಗಳ ಪರೀಕ್ಷೆಯಾಯಿತು; ಮನೆಗೆ ಸೇರಿದ ತರಿ ಖುಷ್ಕಿ ಮತ್ತು ಇತರ ಜಮೀನುಗಳನ್ನು ತೋರಿಸುವ ನಕಾಶೆಯ ಸಮೀಕ್ಷೆಯಾಯಿತು; ಹೂವಯ್ಯನ ತಂದೆಯೂ ಚಂದ್ರಯ್ಯಗೌಡರೂ ಸೋದರರಾದುದರಿಂದ ಇರುವ ಆಸ್ತಿಯನ್ನೆಲ್ಲ ಸಮಪಾಲು ಮಾಡಬೇಕೆಂಬ ಇತ್ಯರ್ಥವಾಯಿತು. ನಡುವೆ ಸೀತೆಮನೆ ಸಿಂಗಪ್ಪಗೌಡರು ಹೂವಯ್ಯನ ಪರವಾಗಿ, ಹೂವಯ್ಯನ ತಂದೆ ಚಂದ್ರಯ್ಯಗೌಡರಿಗಿಂತಲೂ ಹಿರಿಯರಾಗಿದ್ದುದರಿಂದ ಹೂವಯ್ಯನಿಗೆ ಹೆಚ್ಚಿನ ಆಸ್ತಿ ಬರಬೇಕೆಂದು ವಾದ ಹೂಡಿದರೂ ಸ್ವಲ್ಪ ಚರ್ಚೆಯಾದಮೇಲೆ ಚಂದ್ರಯ್ಯಗೌಡರ ಪಕ್ಷವೇ ಜಯ ಹೊಂದಿತು.

ಆದರೆ ಜಮೀನುಗಳನ್ನು ಪಾಲು ಮಾಡುವ ಸಮಯ ಬಂದಾಗ ಚಂದ್ರಯ್ಯಗೌಡರು ಒಂದು ತಕರಾರು ತಂದರು:

"ಹಿಸ್ಸೆಗೆ ಎಲ್ಲ ಆಸ್ತಿಯೂ ಸೇರಲಾರದು. ಪಿತ್ರಾರ್ಜಿತವಾದ ಆಸ್ತಿ ಮಾತ್ರ ಸೇರಬೇಕು. ನನ್ನ ಸ್ವಯಾರ್ಜಿತವಾದ ಆಸ್ತಿಯಲ್ಲಿ ಪಾಲುಕೊಡಲು ನಾನು ಒಪ್ಪುವುದಿಲ್ಲ. ಬಾವೀಮಕ್ಕಿ ಜಮೀನು — ಗದ್ದೆ ತೋಟ ಎಲ್ಲಾ — ನಾನೇ ಸ್ವತಃ ಬೆವರು ಸುರಿಸಿ ಸಂಪಾದಿಸಿದ್ದು. ಹಾಗೆಯೆ ಚಿಕ್ಕೂರು ತೋಟವನ್ನೂ ನನ್ನ ಯಜಮಾನಿಕೆಯಲ್ಲಿ ನಾನೇ ಸಂಪಾದಿಸಿದ್ದು" ಎಂದು.

ಬಾಳೂರು ಸಿಂಗೇಗೌಡರೂ ನೆಲ್ಲುಹಳ್ಳಿ ಪೆದ್ದೇಗೌಡರೂ ಚಂದ್ರಯ್ಯಗೌಡರ ಹೇಳಿಕೆಯನ್ನೆ ಸಮರ್ಥಿಸಿದರು. ಆದರೆ ಸೀತೆಮನೆ ಸಿಂಗಪ್ಪಗೌಡರು ಮನಃಪೂರ್ವಕವಾಗಿ ಪ್ರತಿಭಟಿಸಿದರು.

ಹೂವಯ್ಯನೂ ಚಂದ್ರಯ್ಯಗೌಡರ ಮಾತನ್ನು ಪ್ರತಿಭಟಿಸಿ "ಸ್ವಯಾರ್ಜಿತ ಪಿತ್ರಾರ್ಜಿತ ಎಂದು ಆಸ್ತಿಯನ್ನು ವಿಭಾಗಮಾಡುವುದು ನ್ಯಾಯವಲ್ಲ. ಒಂದು ಮನೆಗೆ ಯಜಮಾನನಾದವನು ಏನು ಸಂಪಾದನೆ ಮಾಡಿದರೂ ಅವು ಮನೆಯ ಸಂಪತ್ತಿಗೇ ಸೇರುತ್ತವೆ. ಯಜಮಾನನು ವೈವಟ್ಟು ನಡೆಸುವಾಗ ಏನಾದರೂ ನಷ್ಟ ಸಂಭವಿಸಿದರೆ ಆ ನಷ್ಟವನ್ನು ತನ್ನೊಬ್ಬನ ಮೈಮೇಲೆಯೇ ಹಾಕಿಕೊಳ್ಳುತ್ತಾನೆಯೆ? ಮನೆಯ ಲೆಖ್ಖಕ್ಕೆ ಖರ್ಚು ಹಾಕುವುದಿಲ್ಲವೇನು? ನಷ್ಟದಂತೆಯೇ ಲಾಭವೂ ಮನೆಯ ಆಸ್ತಿಗೇ ಸೇರತಕ್ಕದ್ದು. ಪಿತ್ರಾರ್ಜಿತವಾದ ಆಸ್ತಿಯ ಆಧಾರ, ಬೆಂಬಲ, ಧನ, ಗೌರವ, ವಿರಾಮ ಇವುಗಳೆಲ್ಲ ಇಲ್ಲದಿದ್ದರೆ ಯಜಮಾನನು ಹೊಸ ಆಸ್ತಿಗಳನ್ನು ಸಂಪಾದಿಸಲು ಸಾಧ್ಯವಾಗುತ್ತಿತ್ತೆ? ಆದ್ದರಿಂದ ಸಂಪಾದಿ

ಸಿದ ಹೊಸ ಆಸ್ತಿಗಳೆಲ್ಲವೂ ಪಿತ್ರಾರ್ಜಿತ ಆಸ್ತಿ ಎಂಬ ಮೂಲಧನದ ಮೇಲೆ ಬಂದ ಬಡ್ಡಿಯಂತೆಯೇ ಹೊರತು ಮತ್ತೆ ಬೇರೆಯಲ್ಲ. ಆದ್ದರಿಂದ ಚಿಕ್ಕಯ್ಯ ಹೇಳಿದಂತೆ, ಪಿತ್ರಾರ್ಜಿತ ಸ್ವಯಾರ್ಜಿತ ಎಂದು ಆಸ್ತಿಯನ್ನು ವಿಭಾಗಿಸುವುದಕ್ಕೆ ನಾನೊಪ್ಪುವುದಿಲ್ಲ" ಎಂದು ವಾದಿಸಿದನು.

ಆ ವಾದವನ್ನು ಕೇಳಿ ಚಂದ್ರಯ್ಯಗೌಡರಾದಿಯಾಗಿ ಎಲ್ಲರೂ ಸ್ತಬ್ಧರಾದರು. ಅಲ್ಲಿದ್ದವರೆಲ್ಲರೂ ನಿಷ್ಪಕ್ಷಪಾತಿಗಳಾಗಿಯೆ ಇದ್ದಿದ್ದರೆ ಹೂವಯ್ಯನ ವಾದವನ್ನು ಒಪ್ಪಿಕೊಳ್ಳಬೇಕಾಗಿತ್ತು. ಆದರೆ ಸನ್ನಿವೇಶ ಹಾಗಿರಲಿಲ್ಲ. ಅಲ್ಲಿ ನೆರೆದಿದ್ದವರೆಲ್ಲರೂ — ಮುತ್ತಳ್ಳಿ ಶ್ಯಾಮಯ್ಯಗೌಡರನ್ನುಳಿದು — ಒಳಗೊಳಗೇ ಚಂದ್ರಯ್ಯಗೌಡರ ಅಥವಾ ಹೂವಯ್ಯನ ಪಕ್ಷಗಳನ್ನು ವಹಿಸಿಯೇ ಬಂದಿದ್ದರು. ಬಾಳೂರು ಸಿಂಗೇಗೌಡರೂ ನೆಲ್ಲುಹಳ್ಳಿ ಪೆದ್ದೇಗೌಡರೂ ಚಂದ್ರಯ್ಯಗೌಡರ ಪಕ್ಷವಹಿಸಿ ಬಂದಿದ್ದಂತೆ ಸೀತೆಮನೆ ಸಿಂಗಪ್ಪಗೌಡರು ಹೂವಯ್ಯನ ಪರವಾಗಿ ಬಂದಿದ್ದರು. ಆದ್ದರಿಂದ ಅವರಲ್ಲಿ ಯಾರೊಬ್ಬರ ನಿರ್ಣಯಕ್ಕೂ ಕಾರಣಗಳ ಆವಶ್ಯಕತೆ ಬೇಕಿರಲಿಲ್ಲ. ಅವರ ಮಾತುಗಳೆಲ್ಲವೂ ಅವರ ಮನಸ್ಸಿನ ಕೋರಿಕೆಗಳನ್ನು ಹೇಳುತ್ತಿದ್ದುವೆ ಹೊರತು ನಿಷ್ಪಕ್ಷಪಾತವಾಗಿ ವಿಚಾರಮಾಡಿ ಸಿದ್ಧಾಂತಕ್ಕೆ ಬಂದ ಅಭಿಪ್ರಾಯಗಳನ್ನು ಸೂಚಿಸುತ್ತಿರಲಿಲ್ಲ.

ಅಂತೂ ಮೊದಮೊದಲು ಗಂಭೀರವಾಗಿ ಪ್ರಾರಂಭವಾದ ಚರ್ಚೆ, ಬರಬರುತ್ತಾ ಬಿಸಿಹೆಚ್ಚಿ, ಕೂಗಾಟದ ಕದನವಾಗಿ ಪರಿಣಮಿಸಿತು. ಕೆಳಗಡೆ ಹೆಬ್ಬಾಗಿಲಾಚೆ ಕುತೂಹಲದಿಂದಿದ್ದ ಆಳು ಒಕ್ಕಲುಗಳೆಲ್ಲ ಬೆಪ್ಪುಬೆರಗಾಗಿ ಭೀತರಾದರು. ಹಳೆಪೈಕದ ತಿಮ್ಮ ಬೇಲರ ಬೈರನನ್ನು ಕುರಿತು ಚಂದ್ರಯ್ಯಗೌಡರನ್ನು ಪ್ರಶಂಸಿಸುವ ಸಲುವಾಗಿ "ನೋಡ್ದೇನೋ, ನಮ್ಮ ಗೌಡ್ರು ಹ್ಯಾಂಗೆ ಮಾತಾಡ್ತಾರೆ ಅಂತಾ? ಅಷ್ಟು ದೊಡ್ಡೊಡ್ಡ ಮುಂಡಾಸದ ಗೌಡ್ರನ್ನೆಲ್ಲಾ ಲಕ್ಷ್ಮಾಮಾಡ್ದೆ ಮುಲಾಜ್ ನೋಡ್ದೆ ಹೆದರಿಸ್ತಿದ್ದಾರೆ!...ನಿಂಗೆ ನಾ ಹೇಳ್ಲಿಲ್ಲೇನು? ಹ್ಞೂ! ಏನು ಮನೆ ಪಾಲಾಗದಂದ್ರೆ ಕುಸಾಲು ಅಂತಾ ಮಾಡಿದ್ದೇನು?" ಎಂದು ಮತ್ತೆ ಕಿವಿಗೊಟ್ಟು, ಸಂಗೀತ ಕೇಳುವವನಂತೆ, ಉಪ್ಪರಿಗೆಯ ಮೇಲೆ ನಡೆಯುತ್ತಿದ್ದ ಗಲಭೆಯನ್ನು ಆನಂದದಿಂದ ಆಲಿಸತೊಡಗಿದನು.

ಬೈರನೂ ಭೀತಸ್ವರದಿಂದ ಗಂಟಲು ಧ್ವನಿಯಲ್ಲಿ "ಹೌದು ಕಣ್ರಾ! ಮಾರಾಮಾರಿ ಆಗ್ತಾಂಗೆ ಕಾಣ್ತದೆ!" ಎಂದು ಕಣ್ಣುಕಣ್ಣು ಬಿಟ್ಟು ಕಿವಿಗೊಟ್ಟನು.

ಜಗಲಿಯಲ್ಲಿ ಮೇಲೆ ನಡೆಯುತ್ತಿದ್ದ ದಾಂದಲೆಯನ್ನು ಆಲಿಸುತ್ತಿದ್ದ ವಾಸು, ಪುಟ್ಟಮ್ಮ, ನಾಗಮ್ಮನವರು, ಸುಬ್ಬಮ್ಮ, ಪುಟ್ಟಣ್ಣ, ಸೇರೆಗಾರರು ಮೊದಲಾದವರೆಲ್ಲರೂ ಉದ್ವಿಗ್ನರಾದರು. ವಾಸುವಿನ ಕಣ್ಣಿನಲ್ಲಿ ಹೆದರಿಕೆಯಿಂದಲೋ

ಶೋಕದಿಂದಲೋ, ಅಥವಾ ದೊಡ್ಡವರು ಹೀಗೇಕೆ ಕಾದಾಡುತ್ತಾರೆ ಎಂಬುದರ ಅರ್ಥವಾಗದಿದ್ದುದರಿಂದಲೋ ನೀರು ಸುರಿಯತೊಡಗಿತು. ಪುಟ್ಟಣ್ಣ ಸುಮ್ಮನಿರಲಾರದೆ ಮೆಲ್ಲಗೆ ಏಣಿ ಮೆಟ್ಟಲು ಏರಿ ಉಪ್ಪರಿಗೆಯ ದೃಶ್ಯವನ್ನು ಇಣಿಕಿ ನೋಡತೊಡಗಿದನು. ಅವನ ಹಿಂದೆ ಸೇರೆಗಾರರೂ ಹತ್ತಿ ಏಣಿಯ ಅರ್ಧದಲ್ಲಿಯೆ ನಿಂತು ನಿರೀಕ್ಷಿಸಿದರು. ಉಪ್ಪರಿಗೆಯಲ್ಲಾಗುತ್ತಿದ್ದ ಗಲಾಟೆಗೆ ಗಾರಾದ ನಾಯಿಗಳೂ ಬೊಗಳ ತೊಡಗಿದುವು.

ಇದ್ದಕ್ಕಿದ್ದಂತೆ ಏಣಿಯ ತುದಿಯಲ್ಲಿ ಇಣಿಕಿನೋಡುತ್ತಿದ್ದ ಪುಟ್ಟಣ್ಣ ಹಿಮ್ಮೊಗವಾಗಿಯೆ ಬಡಬಡನೆ ಕೆಳಗಿಳಿದನು. ಸೇರೆಗಾರರು ತನ್ನ ಹಿಂದೆ ಇದ್ದಾರೆಂಬುದು ಅವನಿಗೆ ಮರೆತುಹೋಗಿತ್ತು. ಸೇರೆಗಾರರ ಮೋರೆಗೆ ಅವನ ಮೈ ಢಿಕ್ಕಿ ಹೊಡೆದು ಅವರು ಕೆಳಗುರುಳಿ ತರಹರಿಸಿ ನಿಂತರು! ಅಷ್ಟರಲ್ಲಿ ಸೀತೆಮನೆ ಸಿಂಗಪ್ಪಗೌಡರೂ ಏಣಿಯನ್ನಿಳಿದು ಬಂದರು. ಅವರ ಹಿಂದೆ ಹೂವಯ್ಯನೂ ಬಂದನು. ಇಬ್ಬರೂ ಹೆಬ್ಬಾಗಿಲು ದಾಟಿ ತೋಟದ ಕಡೆಗೆ ಹೋದರು.

ಅಲ್ಲಿ ಸ್ವಲ್ಪಕಾಲ ಏನನ್ನೊ ಗುಟ್ಟಾಗಿ ಮಾತಾಡುತ್ತಿದ್ದು, ಮತ್ತೆ ಹಿಂದಿರುಗಿ ಬಂದು ಉಪ್ಪರಿಗೆಗೆ ಹೋದರು.

ಹೂವಯ್ಯನ ಒಪ್ಪಿಗೆಯ ಮೇರೆಗೆ ಚಂದ್ರಯ್ಯಗೌಡರ ಇಷ್ಟವೇ ಮತ್ತೆ ಗೆದ್ದಿತು. ಅವರ 'ಸ್ವಯಾರ್ಜಿತ' ಆಸ್ತಿಗಳನ್ನು ಅವರಿಗೇ ಬಿಟ್ಟು 'ಪಿತ್ರಾರ್ಜಿತ' ಆಸ್ತಿಯನ್ನೇ ಎರಡು ಪಾಲು ಮಾಡುವುದೆಂದು ನಿರ್ಣಯವಾದಮೇಲೆ ಎಲ್ಲರೂ ಮಧ್ಯಾಹ್ನದ ಊಟಕ್ಕೆ ತೆರಳಿದರು.

ಅಪರಾಹ್ಣದಲ್ಲಿ ಜಮೀನಿನ ಹಿಸ್ಸೆಗೆ ಮೊದಲಾಯಿತು. ಚಂದ್ರಯ್ಯಗೌಡರಿಗೆ ತಮ್ಮ ಜಮೀನುಗಳಲ್ಲಿ ಫಲವತ್ತಾದುವು ಯಾವುವು, ಯಾವ ಯಾವ ಭಾಗಗಳಲ್ಲಿ ಹೆಚ್ಚು ಫಸಲು ದೊರೆಯುತ್ತದೆ ಎಂಬ ವಿಚಾರಗಳೆಲ್ಲ ಚೆನ್ನಾಗಿ ತಿಳಿದಿದ್ದುದರಿಂದಲೂ, ಹೂವಯ್ಯನಿಗೆ ಅದರ ಅನುಭವ ಲೇಶಮಾತ್ರವೂ ಇಲ್ಲದಿದ್ದುದರಿಂದಲೂ, ಹಿಸ್ಸೆ ಮಾಡಲೆಂದು ಅಲ್ಲಿ ನೆರೆದಿದ್ದವರಿಗೆ ಕಾನೂರು ಜಮೀನುಗಳ ಪರಿಚಯ ಸಾಲದಿದ್ದುದರಿಂದಲೂ ಪಾಲಾಗುವುದರಲ್ಲಿ ಕೆಲವು ಅವಿವೇಕಗಳು ಅನಿವಾರ್ಯವಾಗಿಯೂ, ಮತ್ತೆ ಕೆಲವು ಆಕಾಂಕ್ಷಿತವಾಗಿಯೂ ನಡೆದುಹೋದವು. ಸೀತೆಮನೆ ಸಿಂಗಪ್ಪಗೌಡರು ತಮಗೆ ತಿಳಿದಮಟ್ಟಿಗೆ, ತಮ್ಮ ಕೈಲಾದಮಟ್ಟಿಗೆ ಹೂವಯ್ಯನಿಗೆ ಅನುಕೂಲವಾಗಬೇಕೆಂದೇ ಪ್ರಯತ್ನಮಾಡಿದರು. ಮುತ್ತಳ್ಳಿ ಶ್ಯಾಮೇಗೌಡರು ಒಂದುಕಡೆ ಸಿಂಗಪ್ಪಗೌಡರ ಮತ್ತು ಹೂವಯ್ಯನ ದಾಕ್ಷಿಣ್ಯಕ್ಕೂ ಮತ್ತೊಂದುಕಡೆ ಚಂದ್ರಯ್ಯಗೌಡರ ದಾಕ್ಷಿಣ್ಯಕ್ಕೂ ಸಿಕ್ಕಿ, ಸ್ವಲ್ಪ ತಟಸ್ಥಭಾವವನ್ನೆ ತಾಳಿಬಿಟ್ಟರು. ಅಲ್ಲದೆ ಸ್ವಭಾವತಃ ಸಾತ್ವಿಕರಾಗಿದ್ದ ಅವರು ಏನನ್ನು

ಮಾಡಲೂ ಹೇಸದಷ್ಟು ರಜೋಗುಣಿಗಳಾಗಿದ್ದ ಚಂದ್ರಯ್ಯಗೌಡರಿಗೆ ಅನಾನುಕೂಲವಾಗುವಂತೆ ಮಾತಾಡಿ, ಅವರ ವೈರದೃಷ್ಟಿಗೆ ಭಾಜನರಾಗಲು ಅಳುಕಿದರು.

ಅಂತೂ ಹಿಸ್ಸೆಯಲ್ಲಿ ಜಮೀನಿನ ಉತ್ತಮಾಂಶಗಳೆಲ್ಲವೂ, ಮೀಸೆ ಹುರಿ ಮಾಡಿ, ಕಣ್ಣು ಕೆಂಪಗೆ ಮಾಡಿಕೊಂಡು, ರಭಸದಿಂದ ವರ್ತಿಸುತ್ತಿದ್ದ ಚಂದ್ರಯ್ಯಗೌಡರ ಪಾಲಿಗೇ ದಕ್ಕಿದುವು. ನಾಗಮ್ಮನವರು ಮೂರು ನಾಲ್ಕು ಸಾರಿ ಹೂವಯ್ಯನಿಗೆ ಹೇಳಿಕಳುಹಿಸಿ, ತಮಗೆ ಗೊತ್ತಿದ್ದ ಕೆಲವು ಉತ್ತಮವಾದ ಗದ್ದೆ ತೋಟಗಳು ತಮ್ಮ ಪಾಲಿಗೇ ಬರುವಂತೆ ಹಟ ಹಿಡಿಯಬೇಕೆಂದು ಮಾಡಿದ ಬುದ್ಧಿವಾದವೂ ಪ್ರಯೋಜನಕಾರಿಯಾಗಲಿಲ್ಲ.

ಸಾಯಂಕಾಲ ಚಂದ್ರಯ್ಯಗೌಡರು ಕುಡುಕರಾಗಿದ್ದ ಅತಿಥಿಗಳನ್ನೆಲ್ಲ ಕಾನುಬೈಲಿನ ಕಳ್ಳುಗೊತ್ತಿಗೆ ಕರೆದೊಯ್ದರು. ರಾಮಯ್ಯ ವಾಸು ಸೇರೆಗಾರರನ್ನೂ ಅತಿಥಿಗಳ ಸತ್ಕಾರಸೇವೆಗಾಗಿ ಜೊತೆ ಬರುವಂತೆ ಕರೆದರು. ರಾಮಯ್ಯ ತನಗೆ ಮೈ ಸರಿಯಾಗಿಲ್ಲವೆಂದು ನೆವಹೇಳಿ ಒಪ್ಪಲಿಲ್ಲ. ಚಂದ್ರಯ್ಯಗೌಡರು ಮಗನ ಮೇಲೆ ರೇಗಿ, "ನಿನಗೆ ಎರಡಕ್ಷರ ಕಲ್ತಿದ್ದಕ್ಕೆ ಜಂಭ ನೆತ್ತಿಗೇರಿಬಿಟ್ಟಿದೆ... ನೆಲಾಗುಡಿಸೋ ಪಂಚೆ ಉಟ್ಕೊಂಡು ಪ್ಯಾಟೇಲಿ ತಿರುಗೀ ತಿರುಗೀ ಈಗ ಕೆಲಸಾ ಮಾಡೋದು ಅಂದ್ರೆ ಮೈ ಬಗ್ಗೋದಿಲ್ಲ... ಇನ್ನೆಷ್ಟುದಿನಾ ಹೀಂಗೇ ಮಾಡ್ತೀಯಾ ನೋಡ್ತೇನೆ..." ಎಂದು ಮೊದಲಾಗಿ ಬಾಯಿಗೆ ಬಂದಂತೆ ಅಂದರು.

ರಾಮಯ್ಯ ಮರುಮಾತಾಡಲಿಲ್ಲ. ಹೆಂಡಕುಡುಕರಿಗೆ ಕಳ್ಳು ಮತ್ತು ಹುರಿದ ಮಾಂಸಗಳನ್ನು ಹಂಚುವುದು ಅವನ ಮನಸ್ಸಿಗೆ ಅತಿ ಹೀನವಾಗಿಯೂ ಅವಮಾನಕರವಾಗಿಯೂ ಕಂಡಿತು. ಬಹಳ ದುಃಖದಿಂದ ಪಶ್ಚಿಮ ದಿಕ್ಕಿನ ಹೆಬ್ಬಾಗಿಲನ್ನು ದಾಟಿ ತೋಟದ ಕಡೆಗೆ ನಡೆದನು. ನಂತರೆಲ್ಲ ಚಂದ್ರಯ್ಯಗೌಡರ ನಾಯಕತ್ವದಲ್ಲಿ ಪೂರ್ವದಿಕ್ಕಿನ ಹೆಬ್ಬಾಗಿಲಿಂದ ಕಾನುಬೈಲಿಗೆ ಹೋದ ಮೇಲೆ, ಉಪ್ಪರಿಗೆಯಲ್ಲಿ ಹಿಂದಕ್ಕುಳಿದುಕೊಂಡಿದ್ದ ಸಿಂಗಪ್ಪಗೌಡರು ಹೂವಯ್ಯನನ್ನು ಕುರಿತು "ನೀನೆಂಥವನೋ? ಅವರು ಹೇಳಿದ್ದಕ್ಕೆಲ್ಲಾ ಹ್ಣು ಅಂತಾ ಒಪ್ಪಿಕೊಂಡುಬಿಡೋದೇನು?" ಎಂದರು.

ಹೂವಯ್ಯ "ಹೋಗಲಿ ಬಿಡು, ಸಿಂಗಪ್ಪ ಕಕ್ಕಯ್ಯ, ನಿಜವಾದ ಸುಖ ಇರುವುದು ಆ ಜಮೀನಿನಲ್ಲಲ್ಲ, ಇಲ್ಲಿ!" ಎಂದು ತನ್ನ ಎದೆಯನ್ನು ಮುಟ್ಟಿ ತೋರಿಸಿದನು.

"ಅದೂ ಹೌದು!... ಆದ್ರೂ..."

"ಏನು 'ಆದ್ರೂ'?..."

"ಆದ್ರೂ ವ್ಯವಹಾರ ಇದೆಯಲ್ಲ..."

ಅಷ್ಟರಲ್ಲಿ ಏಣಿ ಮೆಟ್ಟಲು ಸದ್ದಾಗಿ ನಾಗಮ್ಮನವರು ಮೇಲೆ ಬಂದರು. "ಸಿಂಗಪ್ಪಾ, ಏನು ಎಲ್ಲಾ ಪೂರೈಸ್ತಾ?" ಎಂದರು.

ಸಿಂಗಪ್ಪಗೌಡರು ನೆಲದ ಕಡೆ ನೋಡುತ್ತ "ಪೂ...ರೈ...ಸ್ತೂ...ಆದ್ರೆ ಏನ್ಮಾಡೋದು? ನಿನ್ನ ಮಗ ಅವರು ಹೇಳಿದ್ದಕ್ಕೆಲ್ಲಾ ಹ್ಞೂ ಹ್ಞೂ ಅಂತಾ ಬಸವನ ಹಾಗೆ ತಲೆ ಅಲ್ಲಾಡಿಸಿಬಿಟ್ಟ" ಎಂದು ಪ್ರಾರಂಭಮಾಡಿ ನಡೆದುದನ್ನೆಲ್ಲ ವಿವರಿಸಿದರು.

ಅದನ್ನೆಲ್ಲ ಕೇಳಿ ನಾಗಮ್ಮನವರು ಹನಿಗಣ್ಣಾಗಿ ನಿಟ್ಟುಸಿರುಬಿಟ್ಟು ದುಃಖ ಧ್ವನಿಯಿಂದ "ಏನ್ಮಾಡೋದು? ನನ್ನ ಗಿರಾಚಾರ! ಅವರು ಇದ್ದಿದ್ರೆ ಹೀಂಗೆಲ್ಲಾ ಆಗ್ತಿತ್ತೇನು?...ಇವನಂತೂ ಬಸವನಂತಾ ಮನುಷ್ಯ! ಸನ್ನೇಸಿ ಹಾಂಗೆ ಏನೂ ಬ್ಯಾಡ ಅಂತಾನೆ!" ಎಂದು ಮಗನ ಕಡೆ ಅಕ್ಕರೆ ತುಂಬಿದ ಕನಿಕರದಿಂದ ನೋಡಿದರು.

ಹೂವಯ್ಯ "ಹಾಗಲ್ಲವ್ವಾ; ಚಿಕ್ಕಯ್ಯ ಹತ್ತು ಹದಿನೈದು ಸಾವಿರ ರೂಪಾಯಿ ಸಾಲ ತೋರಿಸಿಬಿಟ್ಟಿದ್ದಾರೆ. ಅದರಲ್ಲಿ ಹೆಚ್ಚು ಪಾಲು ನನ್ನ ವಿದ್ಯಾಭ್ಯಾಸಕ್ಕೇ ಆಯ್ತು ಅಂತಾ ಹೇಳ್ತಾರೆ...ಏನ್ಮಾಡೋದು?...ಅವರಿಗೆ ಜಮೀನೇನೋ ಹೆಚ್ಚಾಗಿ ಪಾಲು ಹೋಗಿದೆ. ಆದರೆ ಅದರ ಜೊತೆಗೆ ಪೂರ್ತಿ ಸಾಲವನ್ನೂ ಅವರೇ ಹಾಕಿಕೊಂಡಿದ್ದಾರೆ...ನಮಗೆ ಆ ಸಾಲದ ಹೊರೆ ತಪ್ಪಿದ್ದು ಒಳ್ಳೇ ದಾಗಲಿಲ್ಲೇನು?" ಎಂದು ತಾಯಿಗೆ ತಮಗಾದ ಲೇಸನ್ನೇ ಹೇಳಿ ಸಮಾ ಧಾನಪಡಿಸಲೆಳಸಿದನು.

ನಾಗಮ್ಮನವರು ಸ್ವಲ್ಪ ರಭಸದಿಂದ "ಯಾರು ಹೇಳ್ದೋರು ಆ ಸಾಲ ಎಲ್ಲಾ ನಿನ್ನ ಓದೋಕೆ ಆಯ್ತು ಅಂತಾ? ಅವರ ಹೆಂಡಿರು ಮಕ್ಕಳಿಗೆ ಜರತಾರಿ ಸೀರೆಯೇನು! ಒಡವೆಯೇನು! ಉಂಗುರ, ಅಡ್ಡಿಕೆ, ಡಾಬು, ಕಾಸಿನಸರ, ಕಟ್ಟಾಣಿ, ಹೊಂಬಳೆ—ಇವನ್ನೆಲ್ಲಾ ಮಾಡ್ಸೀ ಮಾಡ್ಸೀ ಪೆಟ್ಟಿಗೆ ತುಂಬಿದ್ರೆ ಸಾಲ ಆಗ್ದೆ ಬಿಡ್ತದೇನು?..." ಎಂದು ಮುಂದುವರಿಯುವಷ್ಟರಲ್ಲಿ, ಹೂವಯ್ಯ

"ಹೋಗಲಿ ಬಿಡವ್ವಾ, ಅವರ ಅನ್ಯಾಯ ಅವರಿಗೇ ಇರಲಿ! ನಮಗೆ ಹೊಟ್ಟೆಗೆ ಬಟ್ಟೆಗೆ ಸಿಕ್ಕಿದರಾಯ್ತು! ಅದೂ ಅಲ್ಲದೆ ಚಿನ್ನ ತುಂಬಿಕೊಂಡು ಸುಖಪಟ್ಟೋರು ಪ್ರಪಂಚದಲ್ಲಿ ಬಹಳ ಜನ ಇಲ್ಲ" ಎಂದು ಧೀರವಾಣಿಯಿಂದ ಹೇಳಿದನು.

ನಾಗಮ್ಮನವರಿಗೆ ಆ ಮಾತು ಕೇಳಿ ತಮ್ಮ ಮಗನೇ ತಮಗೊಂದು ದೊಡ್ಡ ನಿಧಿ ಎಂಬ ಹೆಮ್ಮೆ ಹುಟ್ಟಿ "ಏನೋ ಅಪ್ಪಾ, ನನಗೊಂದೂ ತಿಳಿಯಾದಿಲ್ಲ" ಎಂದು ಸಿಂಗಪ್ಪಗೌಡರ ಕಡೆಗೆ ತಿರುಗಿ "ನಾಳೆ ಚರಸೊತ್ತು ಪಾಲು ಮಾಡುವಾಗ

ಲಾದ್ರೂ ಸ್ವಲ್ಪ ಬಿಗಿಹಿಡಿದು ಮಾಡಿಯಪ್ಪಾ" ಎಂದು ಹೇಳಿ, ಉಪ್ಪರಿಗೆಗೆ ಲ್ಯಾಂಪು ಹೊತ್ತಿಸಲೆಂದು ಬಂದಿದ್ದ ನಿಂಗನನ್ನು ಕುರಿತು "ಎಣ್ಣೆಯಿದೆಯೇನೋ ಲ್ಯಾಂಪಿನಾಗೆ?" ಎಂದರು.

ನಿಂಗ ಸಾವಧಾನವಾಗಿ ರಾಗದಿಂದ "ಎಣ್ಣೆ ಇದೇ!... ಲ್ಯಾಂಪು ಸಿಗಿಸಾಕ್ಕೆ ಮಳೆ ಹುಡುಕ್ತಿದ್ದೀನಿ... ಇಲ್ಲೆಲ್ಲೊ ಇತ್ತಪ್ಪಾ ಒಂದು ಹಾಳ್ಮಳೆ!" ಎಂದು ಹೇಳುತ್ತಾ ತೊಲೆಗಳ ಮೇಲೆ ಕೈಸವರಿ ಮೊಳೆಯನ್ನು ಹುಡುಕತೊಡಗಿದನು.

ನಾಗಮ್ಮನವರು ಕೆಳಗಿಳಿದುಹೋದರು. ನಿಂಗ ತೂಗು ಲ್ಯಾಂಪನ್ನು ಮೊಳೆಗೆ ತಗುಲಿಹಾಕಿ, ದೀಪ ಹೊತ್ತಿಸಿ, ಹೊರಟುಹೋದನು.

"ಏನಾದರೂ ಓದೋ" ಎಂದರು ಸಿಂಗಪ್ಪಗೌಡರು.

ಹೂವಯ್ಯ "ಕಿಂಗ್‌ಲೀರ್" ನಾಟಕವನ್ನು ಕೈಗೆ ತೆಗೆದುಕೊಂಡು ಅದನ್ನು ಓದುತ್ತಾ ಅರ್ಥ ಹೇಳತೊಡಗಿದನು.

ಸಿಂಗಪ್ಪಗೌಡರು ಅತ್ಯಂತ ಕುತೂಹಲದಿಂದ ಆಲಿಸತೊಡಗಿದರು.

ಬಹಳ ಹೊತ್ತಾದಮೇಲೆ, ಆಲಿಸುತ್ತಿದ್ದ ಸಿಂಗಪ್ಪಗೌಡರು ಚಕಿತರಾಗಿ "ಯಾರೋ ಕೂಗ್ತಾರಲ್ಲೋ?" ಎಂದು ಹಣೆ ಸುಕ್ಕಾಗುವಂತೆ ಹುಬ್ಬು ಗಂಟಾಗಿ ಓರೆಗಣ್ಣಿನಿಂದ ವಕ್ರದೃಷ್ಟಿಯನ್ನು ಬೀರುತ್ತ ಕಿವಿಗೊಟ್ಟರು. ಹೂವಯ್ಯನೂ ಓದುವುದನ್ನು ನಿಲ್ಲಿಸಿ ಆಲಿಸಿದನು.

ಯಾರೋ ಗಟ್ಟಿಯಾಗಿ ಕೂಗುತ್ತಿದ್ದುದು ಇಬ್ಬರಿಗೂ ಕೇಳಿಸಿತು.

"ಚಂದ್ರಯ್ಯಗೌಡರಲ್ಲೇನೊ?" ಎಂದರು ಸಿಂಗಪ್ಪಗೌಡರು.

"ಹೌದು! ಅವರ ಧ್ವನಿ ಕೇಳಿದಹಾಗೇ ಆಗ್ತದೆ!" ಎಂದು ಹೂವಯ್ಯ ಗಾಬರಿಯಿಂದ ಎದ್ದುನಿಂತನು.

ಸಿಂಗಪ್ಪಗೌಡರೂ ದಡಬಡನೆ ಎದ್ದು. ಇಬ್ಬರೂ ಏಣಿ ಇಳಿದು ಜಗಲಿಗೆ ಬಂದರು. ರಾಮಯ್ಯ, ಪುಟ್ಟಣ್ಣ, ನಾಗಮ್ಮನವರು, ಸುಬ್ಬಮ್ಮ — ಎಲ್ಲರೂ ಅಲ್ಲಿ ಆಗಲೆ ಸೇರಿ ಗುಜುಗುಜು ಮಾಡುತ್ತಿದ್ದರು.

"ಪುಟ್ಟಣ್ಣಾ, ಯಾರೋ ಅದು ಕೂಗಿದ್ದು?" ಎಂದರು ಸಿಂಗಪ್ಪಗೌಡರು.

"ನಮ್ಮ ಗೌಡರ ಕೂಗು ಕೇಳಿದ ಹಾಂಗಾಯ್ತು!" ಎಂದು ಒಂದು ಲಾಟೀನು ಹೊತ್ತಿಸಿದನು.

ರಾಮಯ್ಯ, ಹೂವಯ್ಯ, ಸಿಂಗಪ್ಪಗೌಡರು, ಪುಟ್ಟಣ್ಣ ಮತ್ತು ಗಾರಾದ ನಾಯಿಗಳು ಎಲ್ಲರೂ ಕಾನುಬೈಲಿನ ಕಡೆಗೆ ಹೊರಟರು.

ಹತ್ತುಮಾರು ಹೋಗುವಷ್ಟರಲ್ಲಿ ಎದುರಾಗಿ ಸೇರೆಗಾರರೊಡನೆ ಅವರ ಹಿಂದೆ ಓಡಿಬರುತ್ತಿದ್ದ ವಾಸು ಅವರಿಗಿಂತಲೂ ಮುಂದೆ ನುಗ್ಗಿ, ಒಂದೇ ಉಸುರಿ

ನಲ್ಲಿ ಏದುತ್ತಾ ಏದುತ್ತಾ "ಮತ್ತೆ...ನೆಲ್ಹಳ್ಳಿ ಪೆದ್ದಮಾವ!...ಕುಡಿದು ಹೆಚ್ಚಾಗಿ...ಬಿದ್ದು...ತಲೆ ಒಡೆದುಹೋತು!..." ಎಂದು ಏದಲಾರಂಭಿಸಿದನು.

ಸಿಂಗಪ್ಪಗೌಡರು 'ತಲೆ ಒಡೆದುಹೋಯಿತು' ಎಂಬ ಮಾತನ್ನು ಕೇಳಿ ಭಯವಿಹ್ವಲರಾಗಿ "ಆ್ಞಃ! ಏನಾಯ್ತು..." ಎನ್ನುತ್ತಿರಲು ಸೇರೆಗಾರ ರಂಗಪ್ಪಸೆಟ್ಟರು "ಅಲ್ಲಾ ಕಾಣೆ; ಹಾಂಗಲ್ಲ! ಕುಡಿದು ತಲೆಗೇರಿತ್ತಂಬರು! ನಡೆದು ಬಪ್ಪಾಗ ಕಲ್ಲು ತಗಲಿತ್ತಂಬರು ಕಾಲಿಗೆ...ಬಿದ್ದು ಹಣೆಗೆ ಗಾಯವಾಯಿತ್ತಂಬರು...ಎಣ್ಣೆ ಬೇಕಂಬರು...ಕಯ್ಯೆಲ್ಲಾಗದಮೇಲೆ ಹಾಂಗೆ ಯಾಕೆ ಕುಡಿಯುವುದಪ್ಪಾ?..." ಎನ್ನುತ್ತಾ ಎಣ್ಣೆ ತರಲು ಮನೆಗೆ ಓಡಿದರು.

ಉಳಿದವರೆಲ್ಲ ಒಟ್ಟಿಗೆ ಗುಡ್ಡವೇರಿ ನೆಲ್ಲುಹಳ್ಳಿ ಪೆದ್ದೇಗೌಡರ 'ಕುರುಕ್ಷೇತ್ರ'ಕ್ಕೆ ತಲುಪಿದರು.

ಅವರಿಗೆ ಹೆಚ್ಚೇನೂ ಗಾಯವಾಗಿರಲಿಲ್ಲ. ಆದರೂ ಕಲ್ಲು ಹಣೆಗೆ ಬಡಿದು ಪೆಟ್ಟೇನೊ ಬಲವಾಗಿತ್ತು. ಜೊತೆಗೆ ಕುಡಿದ ಅಮಲು ಬೇರೆ! ಮೈ ಬಟ್ಟೆ ತುಂಬಾ ವಾಂತಿಮಾಡಿಕೊಂಡು ದುರ್ವಾಸನೆ ಮೂಗು ಮುಚ್ಚಿಕೊಳ್ಳುವಂತಿತ್ತು.

ಅವರ ಜೊತೆಯಿದ್ದವರು ಅವರನ್ನು ಎತ್ತಿನಿಲ್ಲಿಸಿ ಮೆಲ್ಲಗೆ ನಡೆಸಿಕೊಂಡು ತೂರಾಡುತ್ತ ಗುಡ್ಡವಿಳಿಯುತ್ತಿದ್ದರು. ಅವರಲ್ಲಿ ಯಾರಿಗೂ ಕಾಲಾಗಲಿ ತಲೆಯಾಗಲಿ ಹತೋಟಿಯಲ್ಲಿರಲಿಲ್ಲ ಎಂಬುದು ಚೆನ್ನಾಗಿ ತೋರುತ್ತಿತ್ತು.

ಮಹತ್ತನ್ನು ಕ್ಷುದ್ರಕ್ಕೆ ಹೋಲಿಸುವುದಾದರೆ ಚಂದ್ರನನ್ನು ಪರಿವೇಷ ಸುತ್ತುವರಿದಂತೆ ಅವರೆಲ್ಲರನ್ನೂ ಕಳ್ಳಿನ ವಾಸನೆ ಆವರಿಸಿತ್ತು!

## ೪೧

## ಮನೆಯ ಚರಸೊತ್ತಿನ ಹಿಸ್ಸೆ—ವಾಸುವಿನ ವಿಚಿತ್ರ ಮೂರ್ಛೆ!

ಮರುದಿನ ಬೆಳಿಗ್ಗೆ ಚಂದ್ರಯ್ಯಗೌಡರು ಇತರರೊಡನೆ ಜಾನುವಾರುಗಳನ್ನು ಹಿಸ್ಸೆಮಾಡಲು ಕೊಟ್ಟಿಗೆಯಿದ್ದ ಜಾಗಕ್ಕೆ ಹೋಗಿದ್ದರು. ಜಗಲಿಯ ಮೇಲೆ ನೆಲ್ಲುಹಳ್ಳಿ ಪೆದ್ದೇಗೌಡರು ಬಲವಾಗಿ ಜಾಡಿ ಹೊದೆದುಕೊಂಡು ಮಲಗಿದ್ದರು. ಅವರ ಹಾಸಗೆಯ ಪಕ್ಕದಲ್ಲಿ ಒಂದು ವಾಂತಿ ಬಟ್ಟಲು, ಒಂದು ತೆಂಗಿನೆಣ್ಣೆ ಕುಡಿಕೆ, ಒಂದು ಹಿತ್ತಾಳೆಯ ಪೀಕದಾನಿ, ಎದ್ದು ನಡೆಯಬೇಕಾದಾಗ ಊರುವುದಕ್ಕಾಗಿ

ಇದ್ದ ಒಂದು ಬಲಿಗೆಯ ದೊಣ್ಣೆ—ಇವುಗಳೆಲ್ಲ ಇದ್ದುವು. ಅವರನ್ನು ನೋಡಿಕೊಳ್ಳುವುದಕ್ಕಾಗಿ ವಾಸುವನ್ನು ಬಿಟ್ಟಿದ್ದರೂ ಅವನು ಮಾತ್ರ ಅಲ್ಲಿ ಕಾಣುತ್ತಿರಲಿಲ್ಲ. ಅವನಿಗೆ ಆ ನೀರಸವ್ಯಕ್ತಿಯ ಪಕ್ಕದಲ್ಲಿ ಕುಳಿತು ಕಾಯುವುದು ಬಹಳ ಬೇಸರವಾಗಿ ಕಂಡುಬಂದುದರಿಂದ ಆಗಾಗ್ಗೆ ಅತ್ತಯಿತ್ತ ಸಂಚಾರಹೋಗಿ ಬರುತ್ತಿದ್ದನು. ಸುಬ್ಬಮ್ಮ ಒಂದೆರಡು ಸಾರಿ ಬಂದು ತಂದೆಯನ್ನು ಮಾತಾಡಿಸಿಕೊಂಡು ಹೋದಳು. ಆದರೆ ಆ ದಿನ ಅನೇಕರಿಗೆ ಅಡುಗೆ ಮಾಡಬೇಕಾಗಿದ್ದುದರಿಂದ ಆಕೆಗೆ ತಂದೆಯ ಬಳಿ ಇದ್ದು ಶುಶ್ರೂಷೆ ಮಾಡಲು ಪುರಸತ್ತಿರಲಿಲ್ಲ.

ಪೆದ್ದೇಗೌಡರಿಗೆ ಹಿಂದಿನ ರಾತ್ರಿ ಕುಡಿದಿದ್ದ ಕಳ್ಳು ಬ್ರಾಂದಿಗಳ ಅಮಲು ಬಹಳಮಟ್ಟಿಗೆ ಇಳಿದುಹೋಗಿದ್ದರೂ ಎಡವಿಬಿದ್ದುದರಿಂದ ಉಂಟಾಗಿದ್ದ ಗಾಯದ ಮತ್ತು ಶರೀರದ ನೋವು ಕಡಿಮೆಯಾಗಿರಲಿಲ್ಲ. ಮೈನೋವಿನಿಂದ ಜ್ವರವೂ ಬಂದಿತ್ತು. ದುರ್ವಾಸನೆಯ ವಾಂತಿ ವಾಕರಿಕೆಗಳಂತೂ ಆಗಾಗ್ಗೆ ತಲೆಹಾಕುತ್ತಿದ್ದುವು. ಎಷ್ಟು ಪ್ರಯತ್ನಪಟ್ಟರೂ ವಾಸುವಿಗೆ ಅದನ್ನು ಸಹಿಸಲಾಗಲಿಲ್ಲ—ಮಾವನ (ತನ್ನ ತಂದೆ 'ಮಾವ' ಎಂದು ಕರೆಯುತ್ತಿದ್ದುದರಿಂದ ತಾನೂ ಹಾಗೆಯೆ ಕರೆಯುತ್ತಿದ್ದನು.) ವಿಚಾರದಲ್ಲಿ ಅಸಹ್ಯ ಹುಟ್ಟಿ, ಪೀಡೆ ತೊಲಗಿದರೆ ಸಾಕು ಎಂದು ಯೋಚಿಸುತ್ತಿದ್ದನು. ಹೊರಗಡೆ ಆ ರಮಣೀಯ ಪ್ರಾತಃಕಾಲದಲ್ಲಿ ಸಂಭ್ರಮದ ಘಟನೆಗಳು ನಡೆಯುತ್ತಿದ್ದಾಗ ತಾನು ಮಾತ್ರ ಈ 'ದರಿದ್ರ ಮನುಷ್ಯ'ನ ಪಕ್ಕದಲ್ಲಿ ವಾಂತಿಯ ವಾಸನೆಯನ್ನು ಸೇವಿಸುತ್ತ ಕುಳ್ಳಿರಬೇಕಾಯಿತಲ್ಲಾ ಎಂದು ಕುದಿದು ಉಪ್ಪರಿಗೆ ಏರಿದನು.

ಅಲ್ಲಿದ್ದ ದೊಡ್ಡ ಕನ್ನಡಿಯ ಪಕ್ಕದಲ್ಲಿ ಹೋಗುತ್ತಿದ್ದಾಗ ಹಠಾತ್ತಾಗಿ ತನ್ನ ಪ್ರತಿಬಿಂಬವನ್ನು ಕಂಡು ನಿಂತುಬಿಟ್ಟನು. ನೋಡುತ್ತ ನೋಡುತ್ತ ಬಾಲಕನ ಕಣ್ಣು ಮಂಜುಮಂಜಾಯಿತು. ಹೃದಯ ಯಾತನೆಯಿಂದ ತುಂಬಿಹೋಯಿತು. ತನ್ನ ಪ್ರತಿಬಿಂಬ ತನಗೇ ಅಪರಿಚಿತವಾಗುವಷ್ಟು ವಿಕಾರವಾಗಿ ತೋರಿತು: ಅಯ್ಯೋ, ಆ ಹಾಳು 'ಚೌರದವನು' ಬರದೆಹೋಗಿದ್ದರೆ! ಕ್ರಾಪು ಇದ್ದಾಗ ಎಷ್ಟು ಲಕ್ಷಣವಾಗಿತ್ತು! ಈಗ? ರೆಕ್ಕೆ ಪುಕ್ಕಗಳನ್ನು ತಿಪ್ಪುಳಿಸಿಬಿಟ್ಟ ನವಿಲಂತಾಗಿದೆ ತನ್ನ ರೂಪ! ಕನ್ನಡಿಯ ಕಡೆಗೆ ನೋಡಲಾರದೆ ಮುಖ ತಿರುಗಿಸಿಕೊಂಡುಹೋಗಿ ಒಂದು ಮೂಲೆಯಲ್ಲಿ ಕುಳಿತು ನೀರವವಾಗಿ ಬಿಕ್ಕಿ ಬಿಕ್ಕಿ ಅಳತೊಡಗಿದನು. ಯಾರಾದರೂ ಅಡಗಿ ನಿಂತು ನೋಡಿದ್ದರೆ ಹೃದಯ ವಿದ್ರಾವಕವಾಗಿತ್ತು ಆ ದೃಶ್ಯ. ಆದರೆ ಮನುಷ್ಯರಾರೂ ಅದನ್ನು ನೋಡಲಿಲ್ಲ. ಅವರೆಲ್ಲ ಜಾನುವಾರು ಹಿಸ್ಸೆ ಮಾಡುವ ಮತ್ತು ಇತರ ಉಪಯುಕ್ತವಾದ ಕಾರ್ಯಗಳಲ್ಲಿ ತೊಡಗಿದ್ದರು.

"ವಾಸಯ್ಯಾ! ವಾಸಯ್ಯಾ!" ಎಂದು ನಿಂಗನ ಮಗ ಪುಟ್ಟ ಕೂಗಿ ಕರೆಯತೊಡಗಿದನು.

ಎರಡು ಮೂರುಸಾರಿ ಕರೆಯುವವರೆಗೂ ವಾಸು ಮಾತಾಡಲಿಲ್ಲ. ಆಮೇಲೆ ಕಣ್ಣೀರನ್ನು ಬೇಗಬೇಗನೆ ಒರಸಿಕೊಂಡು, ಸಿಂಬಳ ಸುರಿದುಹಾಕಿ, ಮೂಗನ್ನು ಅಂಗಿಯ ತೋಳಿನಿಂದ ಉಜ್ಜಿ ಚೊಕ್ಕಟ ಮಾಡಿಕೊಂಡು, ಸಿಟ್ಟಿನಿಂದ "ಏನಾಗಿದೆಯೊ ನಿಂಗೆ? ನಿನ್ನ ಗಂಟಲು ಕಟ್ಟಿಹೋಗಾಕೆ ಅದ್ಯಾಕೆ ಹಂಗೆ ಕೂಗ್ತಿಯೊ?" ಎಂದು ಗಟ್ಟಿಯಾಗಿ ಕೂಗುತ್ತಾ, ಏಣಿ ಮೆಟ್ಟಲುಗಳನ್ನು ದಡದಡನೆ ಇಳಿದನು.

ಏಣಿಯ ಬುಡದಲ್ಲಿ ನಿಂತು ಉಪ್ಪರಿಗೆಯ ಕಡೆಗೆ ನೋಡುತ್ತಿದ್ದ ಪುಟ್ಟ ವಾಸಯ್ಯನ ರಭಸಕ್ಕೆ ಸ್ವಲ್ಪ ಹಿಂಜರಿದು ನಿಂತು "ನಾಯಿಮರಿ ಹೋದ್ದಾಂಗೆ ಅಂತಾ ಕಾಣ್ತದೆ? ಕಣ್ಣಿಗೆ ಮೆಣ್ಸಿನಕಾಳು ಅರ್ದು ಹಾಕ್ದೆ...ಕೂಗ್ತದೇ! ಕೇಳ್ದಾಂಗಿಲ್ಲ!" ಎಂದನು.

ವಾಸುವಿಗೆ ತನ್ನ ದುಃಖವೆಲ್ಲ ಮರೆತುಹೋಗಿ ಒಡನೆಯೆ ನಾಯಿಮರಿಯ ಯೋಗಕ್ಷೇಮ ಚಿಂತೆ ಅವನ ಆತ್ಮವನ್ನೆಲ್ಲ ಆಕ್ರಮಿಸಿ, ಗಾಬರಿಯಿಂದಲೂ ಸಿಟ್ಟಿನಿಂದಲೂ "ಅಯ್ಯೋ ನಿನ್ನ ಮನೆ ಹಾಳಾಗ! ಮೆಣಸಿನಕಾಯಿ ಯಾಕೆ ಹಾಕಿದೆಯೋ ಕಣ್ಣಿಗೆ?" ಎಂದನು.

"ಮೆಣಸಿನ ಕಾಯಲ್ಲ, ಕಾಳು!"

"ನಿನ್ನ ಅಜ್ಜಿ ತಲೆ! ಯಾರು ಹೇಳಿದ್ರು ನಿಂಗೆ?"

"ಗಂಗಹುಡುಗ ಹೇಳ್ದ, ಮೆಣಸಿನಕಾಳು ತೇದು ಹಚ್ಚಿದ್ರೆ ಗಾಯ ಗುಣಾಗ್ತದೆ ಅಂತಾ!"

"ಅಣ್ಣವ ಸತ್ತ!" ಎಂದು ವಾಸು ಜಗಲಿಯಮೇಲೆ ಹಾದು ಹಿತ್ತಿಲು ಕಡೆಗೆ ಓಡಿದನು. ಪುಟ್ಟನೂ ಅವನ ಹಿಂದೆಯೆ ನುಗ್ಗಿದನು.

ಕೆಲವು ದಿನಗಳ ಹಿಂದೆ ಕೋಳಿ ಕುಕ್ಕಿದ್ದ ಕಣ್ಣಿನ ನಾಯಿಮರಿ, ಸಾಯುವುದಕ್ಕಾಗಿ ಬಿದ್ದುಕೊಂಡು, ಕಣ್ಣಿನ ಗಾಯಕ್ಕೆ ಹಾಕಿದ್ದ ಮೆಣಸಿನಕಾಳಿನ ಲೇಪನದ ಉರಿಯನ್ನು ಸಹಿಸಲಾರದೆ, 'ಕುಯ್ಯೋಂ' ಎಂದು ಅರಚಿಕೊಳ್ಳುತ್ತಿತ್ತು. ತೂತಾದ ಕಣ್ಣಿನಿಂದ ಕೀವೂ ಸ್ರವಿಸುತ್ತಿತ್ತು. ಮರಿ ಬಡಕಲಾಗಿ ಎಲುಬು ಚರ್ಮವಾಗಿತ್ತು.

ವಾಸು ದೊಡ್ಡಮ್ಮನಿಂದ ಸ್ವಲ್ಪ ಹಾಲು ಈಸಿಕೊಂಡು ಬಂದು ಅದರ ಬಾಯಿಗೆ ಹೊಯ್ಯಲು ಪ್ರಯತ್ನಿಸಿದನು. ಆದರೆ ಹಾಲೆಲ್ಲ ಕಟಬಾಯಿಯಲ್ಲಿ ಸುರಿದುಹೋಯಿತು. ಹಾಗೆ ಸುರಿದುಹೋಗಬಾರದೆಂದು ಅದರ ಮೂತಿಯನ್ನು ಎತ್ತಿ ಹಿಡಿದನು. ಮರಿ ಅವನ ಕೈಮೇಲೆಯೆ ಪ್ರಾಣಬಿಟ್ಟಿತು!

ಅಲ್ಲಿಗೆ ಬಂದು ನೋಡುತ್ತಿದ್ದ ಪುಟ್ಟಮ್ಮ "ವಾಸೂ, ನಾಯಿಮರಿ ಸತ್ತು ಹೋಗಿದೆಯೊ!" ಎಂದಳು.

ವಾಸುಗೆ ರೇಗಿ "ನಿನ್ನ ಬಾಯಿಗೆ...ಹಾಕ! ಹಾಳು ಬಾಯಿ ನುಡೀ ಬ್ಯಾಡ!" ಎನ್ನುತ್ತಾ ನಾಯಿಮರಿಯನ್ನು ನಿಲ್ಲಿಸಲು ಪ್ರಯತ್ನಮಾಡಿದನು. ಆದರೆ ಶವ ದೊಪ್ಪನೆ ಉರುಳಿತು!

ತಾನಿದ್ದಂತೆಯೆ ನಾಯಿಮರಿಯ ಪ್ರಾಣ ಹೇಗೆ ಹೋಯಿತು ಎಂಬುದು ವಾಸುವಿಗೆ ಅರ್ಥವಾಗಲಿಲ್ಲ.

ಅಂತೂ ಕಣ್ಣೀರು ಕರೆಯುತ್ತಾ ಪುಟ್ಟನನ್ನು "ನೀನೇ ಕೊಂದುಹಾಕಿದ್ದು!" ಎಂದು ಚೆನ್ನಾಗಿ ಬೈದನು.

ಹುಡುಗರಿಬ್ಬರೂ ಸೇರಿ ಒಂದು ಪೊದೆಯ ಬುಡದಲ್ಲಿ ಅವರ ಮುದ್ದಿನ ಮರಿಯ ಹೆಣವನ್ನು ಜೋಪಾನವಾಗಿ ಹೂಳಿ, ನರಿಗಿರಿ ಕಿತ್ತು ತಿನ್ನದಂತೆ ಚೆನ್ನಾಗಿ ಮಣ್ಣು ಮುಚ್ಚಿ, ಮುಳ್ಳುಹಾಕಿ, ಕಲ್ಲಿನ ಭಾರ ಹೇರಿ ಬಂದರು.

* * * *

ಮಧ್ಯಾಹ್ನ ವಾಸದ ಮನೆಯನ್ನೂ ಪಾತ್ರೆ ಪದಾರ್ಥಗಳನ್ನೂ ಪಾಲು ಮಾಡಿದರು. ಆ ಕಾರ್ಯದ ಪ್ರತಿಯೊಂದು ಭಾಗವೂ ಹೂವಯ್ಯನಿಗೆ 'ಇಸ್ಸಿ' ಎನ್ನಿಸುವಂತಿತ್ತು.

ಹಳೆ ಪೊರಕೆಗಳು, ಕರಿ ಮಡಕೆಗಳು, ಮೊರಗಳು, ಸಾರಣೆಗಳು, ಸಿಕ್ಕಗಳು, ಸೌಟುಗಳು, ಒನಕೆಗಳು, ಹಾರೆ ಸವೆಗೋಲುಗಳು, ಹೆಡಗೆಗಳು, ಬುಟ್ಟಿಗಳು, ತಾಮ್ರ ಹಿತ್ತಾಳೆಯ ಪಾತ್ರೆಗಳು, ಜೋಮಾಲೆ ಹಾಕಿದ್ದ ಇರಿಕೆಗಳು, ಹಪ್ಪಳ ಸಂಡಿಗೆ ಉಪ್ಪಿನಕಾಯಿಗಳು, ಚಾಪೆ ಮೊದಲಾದ ಹಾಸುವ ವಸ್ತುಗಳು, ಡಬ್ಬಗಳು—ಇತ್ಯಾದಿಗಳನ್ನೆಲ್ಲಾ ತಂದು, ಅಂಗಳದಲ್ಲಿ ದೇವರ ಕಲ್ಲಿನ ಸುತ್ತಲೂ ರಾಶಿಹಾಕಿದುದನ್ನು ಕಂಡು, ಹೂವಯ್ಯನಿಗೆ ತಮ್ಮ ಮನೆಯ ಅಂತರಂಗದ ಮರ್ಮಸ್ಥಾನಗಳನ್ನೆಲ್ಲಾ ಪರಕೀಯರ ಮುಂದೆ ಬಯಲಿಗೆಳೆದಂತಾಗಿ 'ಅಯ್ಯೋ' ಎನ್ನಿಸಿತು. ತಗ್ಗಿಸಿದ ತಲೆಯನ್ನು ಮೇಲೆತ್ತುವುದಕ್ಕೂ ಕಷ್ಟವಾಯಿತು. ರಾಮಯ್ಯನಂತೂ ಅಲ್ಲಿಗೆ ತಲೆಹಾಕಲಿಲ್ಲ.

ಬೆಳಿಗ್ಗೆ ಜಾನುವಾರುಗಳನ್ನು ಹಿಸ್ಸೆಮಾಡುತ್ತಿದ್ದಾಗ ಹೂವಯ್ಯ ನಡುನಡುವೆ ಪ್ರತಿಭಟಿಸಿದ್ದನು. ವಾಸದ ಮನೆಯನ್ನು ಪಾಲುಮಾಡುವಾಗಲೂ ಒಂದೆರಡು ಸಾರಿ ಜೋರಾಗಿ ಮಾತಾಡಿದ್ದನು. ಆದರೆ ಕ್ಷುದ್ರವಾದರೂ ಮನೆಯ ಅಂತರಂಗಕ್ಕೆ ಸೇರಿ ಪವಿತ್ರವಾಗಿದ್ದ ಪದಾರ್ಥಗಳನ್ನು ಹಂಚುವಾಗ ಮಾತ್ರ ಯಾವ ಮಾತನ್ನೂ ಆಡಲಿಲ್ಲ. ಆ ಪದಾರ್ಥಗಳನ್ನು ಉಪಯೋಗಿಸಿದ್ದ ಪಿತೃಗಳ

ಆತ್ಮಗಳೆಲ್ಲ 'ಇಸ್ಸಿ! ಇಸ್ಸಿ! ಇಸ್ಸಿ!' ಎನ್ನುತ್ತಿದ್ದಂತೆ ಅವನಿಗೆ ಭಾಸವಾಗುತ್ತಿತ್ತು.

ಶ್ಯಾಮಯ್ಯಗೌಡರೂ ಸಿಂಗಪ್ಪಗೌಡರೂ ನಡುನಡುವೆ ಇತರರ ಸಲಹೆಗಳನ್ನು ತೆಗೆದುಕೊಳ್ಳುತ್ತಾ ಆ ಪದಾರ್ಥಗಳ ಹಂಚಿಕೆಗೆ ತೊಡಗಿದರು. ಪುಟ್ಟಣ್ಣ, ಸೇರೆಗಾರರು, ನಿಂಗ ಮೊದಲಾದ ಮುಟ್ಟಾಳುಗಳು (ಮುಟ್ಟಬಹುದಾದ ಜಾತಿಯವರು ಎಂದರ್ಥ. ಏಕೆಂದರೆ ತಿಮ್ಮನಂತಹ ಹಳೆಪೈಕದವರಾಗಲಿ ಬೈರನಂತಹ ಬೇಲರಾಗಲಿ ಕೀಳುಜಾತಿಯವರಾದುದರಿಂದ ಒಳಗಿನ ಪದಾರ್ಥಗಳನ್ನು ಮುಟ್ಟುತ್ತಿರಲಿಲ್ಲ.) ಆ ಪದಾರ್ಥಗಳನ್ನೆಲ್ಲ ಹೇಳಿದಂತೆ ಎರಡು ಭಾಗವಾಗಿ ಬೇರೆ ಬೇರೆ ಮಾಡತೊಡಗಿದರು. ಸುಮಾರು ಒಂದು ಒಂದೂವರೆ ಗಂಟೆಯ ತರುವಾಯ ಅಂಗಳದಲ್ಲಿ ಮೊದಲು ಒಟ್ಟಾಗಿದ್ದ ರಾಶಿ ಈಗ ಭಾಗವಾಗಿ ನಿಂತಿತು.

ಯಾರಿಗೆ ಯಾವ ಭಾಗ ಹೋಗಬೇಕು ಎನ್ನುವುದರಲ್ಲಿ ಸ್ವಲ್ಪ ಚರ್ಚೆ ನಡೆಯಿತು. ಅದಕ್ಕೆ ಕಾರಣ ಹೂವಯ್ಯನಾಗಿರಲಿಲ್ಲ; ಅವನ ಪಕ್ಷವನ್ನು ವಹಿಸಿದ್ದ ಸೀತೆಮನೆ ಸಿಂಗಪ್ಪಗೌಡರಾಗಿದ್ದರು.

ಕಡೆಗೆ ಮುತ್ತಳ್ಳಿ ಶ್ಯಾಮಯ್ಯಗೌಡರು ಒಂದು ಉಪಾಯವನ್ನು ಸೂಚಿಸಿದರು: "ಒಬ್ಬ ಚಿಕ್ಕ ಹುಡುಗನನ್ನು ಕರೆದು ಯಾವುದಾದರೊಂದು ಭಾಗವನ್ನು ಮುಟ್ಟು, ಎಂದು ಹೇಳೋಣ. ಅವನು ಮುಟ್ಟಿದ ಭಾಗ ಚಂದ್ರಯ್ಯಗೌಡರಿಗಾಗಲಿ ಉಳಿದದ್ದು ಹೂವಯ್ಯಗಾಗಲಿ."

ಅವರ ಸೂಚನೆಗೆ ಸಮ್ಮತಿ ದೊರಕಿತು. ಚಂದ್ರಯ್ಯಗೌಡರು ನಿಂಗನ ಮಗ ಪುಟ್ಟನನ್ನು ಕರೆದರು. ಅವನು ನಾಯಿಮರಿ ಕೊಂದುಹಾಕಿದ್ದಕ್ಕೆ ತನಗೇನು ಗ್ರಹಚಾರ ಬಂದಿತೋ ಎಂದು ಹೆದರಿ ತಲೆತಪ್ಪಿಸಿಕೊಂಡುಬಿಟ್ಟನು. ಎಷ್ಟು ಕರೆದರೂ ಬರಲಿಲ್ಲ. ಹುಡುಕಿದರೂ ಸಿಕ್ಕಲಿಲ್ಲ. ಕಡೆಗೆ ಹೂವಯ್ಯನ ಸಲಹೆಯಂತೆ ವಾಸುವನ್ನೇ ಕರೆದರು. ಮೊದಲು ಮೊದಲು ಅವನೂ ಬರಲೊಪ್ಪಲಿಲ್ಲ. ಚಂದ್ರಯ್ಯಗೌಡರು ಕಣ್ಣು ಕೆರಳಿಸಿ ಗದರಿಸಿದರು. ಅಳತೊಡಗಿದನು. ಅಂತೂ ಹೂವಯ್ಯನೇ ಹೋಗಿ ಅವನಿಗೆ ಸಮಾಧಾನ ಹೇಳಿ ಒಪ್ಪಿಸಿ ಕರೆತರಬೇಕಾಯಿತು.

ಆ ದಿನ ಪ್ರಾತಃಕಾಲದಿಂದಲೂ ವಾಸುವಿನ ಮನಸ್ಸು ಏನೋ ಒಂದು ರೀತಿಯಾಗಿತ್ತು. ಹೃದಯದಲ್ಲಿ ಕಳವಳ ನೆಲೆಸಿತ್ತು. ಎರಡು ದಿನಗಳ ಹಿಂದೆ ಚಂದ್ರಯ್ಯಗೌಡರು ಬಲಾತ್ಕಾರದಿಂದ ಅವನ ಕ್ರಾಪನ್ನು ಕತ್ತರಿಸಿ, ಲಾಳದಾಕಾರದ ಕ್ಷೌರ ಮಾಡಿಸಿದಾಗಿನಿಂದಲೂ ಅವನ ಚಿತ್ತ ಅಸ್ವಸ್ಥವಾಗಿತ್ತು. ಅದರ ಜೊತೆಗೆ ಹಿಂದಿನ ದಿನ ಸಂಜೆಯಲ್ಲಿ ತಂದೆಯ ಆಜ್ಞೆಯ ಪ್ರಕಾರ ಕಾನುಬೈಲಿಗೆ ಹೋಗಿ, ಅಲ್ಲಿ ನಂಟರು ಕಳ್ಳು ಬ್ರಾಂದಿ ಕುಡಿಯುತ್ತಿದ್ದಾಗ ತಾನೂ ಅವರ

ಪ್ರಲೋಭನಕ್ಕೊಳಗಾಗಿ, ಹೂವಣ್ಣಯ್ಯನ ಸದ್ಬೋಧೆಗೆ ವ್ಯತಿರಿಕ್ತವಾಗಿ, ಮದ್ಯ ಪಾನಮಾಡಿಬಿಟ್ಟಿದ್ದನು. ಅವನೇನೋ ತಾನು ಕುಡಿಯುವುದಿಲ್ಲ ಎಂದು ಎರಡು ಮೂರು ಸಾರಿ ಒಲ್ಲೆನೆಂದರೂ ಪೆದ್ದೇಗೌಡರೇ ಮೊದಲಾದವರು ಬಹಳ ಉಪಚಾರಮಾಡಿ ಅನುರೋಧಿಸಿದ್ದರಿಂದ ಕುಡಿಯಲೇಬೇಕಾಯಿತು. ಆ ಸುದ್ದಿ ಹೂವಣ್ಣಯ್ಯಗಾಗಲಿ ಅಣ್ಣಯ್ಯಗಾಗಲಿ ಮುಟ್ಟಿದರೆ ತನ್ನನ್ನು ಏನೆಂದು ಕೊಳ್ಳುವರೋ ಎಂಬ ಉದ್ವೇಗವೂ ಅವನನ್ನು ಪೀಡಿಸುತ್ತಿತ್ತು. ಅಲ್ಲದೆ ಆ ದಿನ ಬೆಳಿಗ್ಗೆ ಅವನನ್ನು ಪೆದ್ದೇಗೌಡರ ಶುಶ್ರೂಷೆಗೆ ಸೆರೆಹಾಕಿದ್ದರಿಂದಲೂ ದುರದೃಷ್ಟಕ್ಕೆ ಸರಿಯಾಗಿ ನಾಯಿಮರಿ ತೀರಿಹೋಗಿದ್ದರಿಂದಲೂ ಅವನ ಮನಸ್ಸು ಮತ್ತಷ್ಟು ಕ್ಷುಬ್ಧವಾಗಿತ್ತು. ಮತ್ತೊಂದು ಮಹತ್ತಾದ ವಿಷಯವೇನೆಂದರೆ, ಆ ಬಾಲಕನ ಸರಳ ಬುದ್ಧಿಗೆ ಮನೆಯಲ್ಲಿ ಅಂದು ನಡೆಯುತ್ತಿದ್ದ ಹಿಸ್ಸೆ ಏನೋ ಒಂದು ಅಮಂಗಲದಂತೆ, ಅಶುಭದಂತೆ, ಅನಿಷ್ಟದಂತೆ, ಅಪಶಕುನದ ಸೂಚನೆ ಯಂತೆ ತೋರತೊಡಗಿತ್ತು. ಅದರ ಪರಿಣಾಮವಾಗಿ ಅವನ ಹೃದಯದಲ್ಲಿ ನಿರಾಕಾರವಾದ ಅಸ್ಫುಟವಾದ ಭೀತಿ ತಲೆದೋರಿತ್ತು.

ಇಂತಹ ಸ್ಥಿತಿಯಲ್ಲಿದ್ದ ವಾಸು ತನ್ನ ಹೂವಣ್ಣಯ್ಯನ ಮಾತಿನ ಮೇರೆಗೆ ಅಂಗಳಕ್ಕಿಳಿದನು. ಅವನ ಅವಸ್ಥೆ ಮೊದಲನೆಯ ಸಲ ವೇದಿಕೆಯ ಮೇಲೆ ನಿಂತು ಅನೇಕ ಜನರ ಸಮ್ಮುಖದಲ್ಲಿ ಮಾತಾಡುವವನಂತಾಗಿತ್ತು. ಎಲ್ಲರ ದೃಷ್ಟಿಯೂ ತನ್ನಮೇಲೆ ಬಿದ್ದಿರುವುದನ್ನೂ ತಾನು ಮಾಡಲಿರುವ ಕಾರ್ಯದಲ್ಲಿ ಮಹತ್ತಿದ್ದಂತೆ ತೋರುತ್ತಿದ್ದುದನ್ನೂ ಅರಿತ ಬಾಲಕನ ಮೈ ಆಗಲೆ ಬಿಸಿಯಾಗ ತೊಡಗಿತ್ತು. ಉಸಿರು ವೇಗವಾಯಿತು; ಬೆವರಿತು. ಬಗೆ ಕದಡಿದಂತಾಯಿತು. ಕಣ್ಣು ಕತ್ತಲೆಗಟ್ಟಿಕೊಳ್ಳುತ್ತಾ ಬಂದಿತು. ಕಾಲು ತತ್ತರಿಸತೊಡಗಿತು.

ಸೇರಿದ್ದವರಲ್ಲಿ ಯಾರೊ ಒಬ್ಬರು "ಹೆದರಬೇಡ. ಹೋಗು, ಮುಟ್ಟು!" ಎಂದಹಾಗಾಯಿತು.

ವಾಸು ಬಹುಪ್ರಯಾಸದಿಂದ ಮುಂಬರಿದುಹೋಗಿ ನಡುಗುತ್ತಿದ್ದ ಕೈಯಿಂದ ಒಂದು ಪಾಲಿನ ಸಮುದಾಯದಲ್ಲಿದ್ದ ಕಡಾಯಿಯೊಂದರ ಗೋಣಸನ್ನು ಮುಟ್ಟಿ, ಹಿತ್ತಾಳೆಯ ಪಾತ್ರೆಗಳಮೇಲೆ ಢಣ ಢಣ ಢಣಾರನೆ ಉರುಳಿದನು.

"ಹುಡುಗ ಬಿದ್ದ! ಹುಡುಗ ಬಿದ್ದ! ಅಯ್ಯೋ ಬಿದ್ದ! ಹಿಡುಕೊಳ್ಳೊ ಪುಟ್ಟಣ್ಣಾ, ಹಿಡುಕೋ!... ನೀರು! ನೀರು... ಆ ಬೀಸಣಿಗೆ ತಗೊಂಡು ಬಾ!"—ಇತ್ಯಾದಿ ಕೂಗುಗಳೊಡನೆ ಅಲ್ಲಿದ್ದವರೆಲ್ಲರೂ ವಾಸುವಿನ ಬಳಿಗೆ ಓಡಿದರು.

ಹೂವಯ್ಯ ಅವನನ್ನು ಮೆಲ್ಲಗೆ ಹಿಡಿದೆತ್ತಿ ಜಗಲಿಗೆ ತಂದು ಹಾಸಗೆಯ

ಮೇಲೆ ಮಲಗಿಸಿದನು. ಬಾಲಕನಿಗೆ ಪ್ರಜ್ಞೆಯಿರಲಿಲ್ಲ.

ತಲೆಗೆ ತಣ್ಣೀರು ತಟ್ಟಿದರು. ಬೀಸಣಿಗೆಯಿಂದ ಗಾಳಿ ಬೀಸಿದರು. ನಾಗಮ್ಮನವರೂ ಚಂದ್ರಯ್ಯಗೌಡರೂ ಪ್ರತ್ಯೇಕ ಪ್ರತ್ಯೇಕವಾಗಿ ದೆಯ್ಯ ದೇವರುಗಳಿಗೆ ಹೇಳಿಕೊಂಡರು. ಇದ್ದಕ್ಕಿದ್ದಹಾಗೆ ಅಲ್ಲಿ ನೆರೆದಿದ್ದವರೆಲ್ಲರ ಮನಸ್ಸೂ ಮನೆ, ಹಿಸ್ಸೆ, ಪಾಲು, ಪಾತ್ರೆ, ಜಗಳ ಇವುಗಳನ್ನೆಲ್ಲ ಹಿಂದೆ ಬಿಟ್ಟು, ಜೀವ, ಸಾವು, ದೇವರು ಇವುಗಳ ಕಡೆಗೆ ತಿರುಗಿಬಿಟ್ಟಿತು. ಕೆಲವು ದಿನಗಳ ಹಿಂದೆ ತಾನೇ ತಮ್ಮ ಮಗನನ್ನು ಭಯಂಕರ ರೀತಿಯಲ್ಲಿ ಕಳೆದುಕೊಂಡಿದ್ದ ಸಿಂಗಪ್ಪಗೌಡರಂತೂ ಮಾತಾಡಲಾರದೆ ಒಂದು ಕಡೆ ಗೋಡೆಗೊರಗಿಬಿಟ್ಟರು.

ಬಹಳ ಹೊತ್ತಾದಮೇಲೆ ವಾಸುವಿಗೆ ಪ್ರಜ್ಞೆ ಬಂದಿತು.

"ಹೂವಣ್ಣಯ್ಯಾ, ಕುಡೀಬೇಕು!" ಎಂದನು.

ಪುಟ್ಟಮ್ಮ ಒಳಗೆ ಓಡಿಹೋಗಿ ಪಾನಕ ತಂದುಕೊಟ್ಟಳು.

ಆ ದಿನ ಸಾಯಂಕಾಲವೆ ಪೆದ್ದೇಗೌಡರನ್ನು ಗಾಡಿಯಮೇಲೆ ಹೇರಿ ನೆಲ್ಲುಹಳ್ಳಿಗೆ ಸಾಗಿಸಿದರು. ಮುತ್ತಳ್ಳಿ ಶ್ಯಾಮಯ್ಯಗೌಡರು, ಸೀತೆಮನೆ ಸಿಂಗಪ್ಪಗೌಡರು ಇವರಿಬ್ಬರನ್ನುಳಿದು ಮಿಕ್ಕ ನಂಟರೆಲ್ಲ ತಮ್ಮ ತಮ್ಮ ಮನೆಗಳಿಗೆ ಹೊರಟುಹೋದರು.

ಶ್ಯಾಮಯ್ಯಗೌಡರು ಉಳಿದುಕೊಂಡದ್ದು ತಮಗೆ ಬರಬೇಕಾಗಿದ್ದ ಸಾಲದ ವಿಚಾರವಾಗಿ ಚಂದ್ರಯ್ಯಗೌಡರೊಡನೆ ಏನಾದರೂ ಒಂದು ನಿರ್ಣಯಕ್ಕೆ ಬರಬೇಕೆಂದು.

ಸಿಂಗಪ್ಪಗೌಡರು ಉಳಿದುಕೊಂಡದ್ದು ಹೂವಯ್ಯನೊಡನೆ ಮಾತುಕತೆಯಾಡಿ ಉತ್ತಮ ವಿಚಾರಗಳನ್ನು ತಿಳಿದುಕೊಳ್ಳಬೇಕೆಂದು. ಅವನೊಡನೆ ಇದ್ದಾಗ ಅವರಿಗೆ ತಮ್ಮ ದುಃಖಗಳೆಲ್ಲ ಕ್ಷುದ್ರವಾದಂತೆ ತೋರಿ, ಒಂದು ಅಲೌಕಿಕ ಆನಂದವಾಗುತ್ತಿತ್ತು.

## ೪೨
## ಸಣ್ಣ ಮನಸ್ಸು

ಅಂತೂ ಬಹುಕಾಲದಿಂದ ಒಟ್ಟಿಗೆ ನಡೆದುಕೊಂಡುಬಂದಿದ್ದ ಕಾನೂರು ಮನೆಯ ಅವಿಭಕ್ತ ಕುಟುಂಬ ಎರಡು ಪಾಲಾಗಿಹೋಯಿತು. ಕೆಲವರಿಗೆ ಅದರಿಂದ ವ್ಯಸನವಾದರೂ ಮತ್ತೆ ಕೆಲವರಿಗೆ ಒಳಗೊಳಗೆ ಹರ್ಷವಾಗದೆ ಇರ

ಲಿಲ್ಲ. ಪ್ರಬಲವಾಗಿದ್ದ ಮನೆತನ ಒಡೆದುಹೋದರೆ ಪ್ರಬಲರಾಗಬೇಕೆಂಬ ಇತರರಿಗೆ ಒಳ್ಳೆಯ ಅವಕಾಶ ಸಿಕ್ಕಿದಂತಾಗುವುದಿಲ್ಲವೆ? ಅದರಲ್ಲಿಯೂ ಚಂದ್ರಯ್ಯಗೌಡರಂತಹ ನಿರಂಕುಶ ದರ್ಪಶಾಲಿಗಳ ಮೇಲೆ ಅನೇಕರಿಗೆ ಕಣ್ಣಿರು ವುದು ಸಹಜ. ಅಂಥವರೆಲ್ಲ ಕಾನೂರು ಮನೆ ಪಾಲಾಯಿತೆಂಬುದನ್ನು ಕೇಳಿ ಹರ್ಷಿತರಾದರು. ಕೆಲವರಿಗೆ ತಮ್ಮ ಅಭ್ಯುದಯಕ್ಕಿಂತಲೂ ಮತ್ತೊಬ್ಬರ ಅವನತಿಯಲ್ಲಿ ಹೆಚ್ಚು ಸುಖವಿರುತ್ತದೆ.

ಹೆಸರಿಗೆ ಮಾತ್ರ ಮನೆ ಎರಡು ಪಾಲಾಯಿತು. ಆದರೆ ಆಸ್ತಿಯಲ್ಲಿ ಮುಕ್ಕಾಲು ಪಾಲು ಚಂದ್ರಯ್ಯಗೌಡರ ಹಿಸ್ಸೆಗೇ ಸೇರಿಹೋಯಿತು. 'ಸ್ವಯಾ ರ್ಜಿತ' ವೆಂದು ಕೆಲವು ಜಮೀನುಗಳನ್ನೂ, ಮನೆಯ ಸಾಲವನ್ನೆಲ್ಲ ತನ್ನ ಮೇಲೆ ಹಾಕಿಕೊಂಡದ್ದರಿಂದ ಎಂದು ಮತ್ತೆ ಕೆಲವು ಜಮೀನುಗಳನ್ನೂ ಚಂದ್ರಯ್ಯ ಗೌಡರು ತಮ್ಮ ಪಾಲಿಗೇ ಹಾಕಿಕೊಂಡರು. ಆಭರಣ ಮುಂತಾದ ಚರಸ್ವತ್ತು ಗಳನ್ನು ಪಾಲುಮಾಡುವಾಗಲೂ ಕೂಡ ಅನೇಕ ಉಪಾಯಗಳಿಂದ ತಮಗೆ ಹೆಚ್ಚು ಪಾಲು ಬರುವಂತೆ ಮಾಡಿಕೊಂಡರು. ಮನೆಯ ಜೀತದಾಳುಗಳನ್ನು ಹಂಚಿಕೊಳ್ಳುವಾಗಲೂ ಹಾಗೆಯೇ ನಡೆಯಿತು. ಬೈರ ಮತ್ತು ಅವನ ಸಂಸಾರ— ಹೆಂಡತಿ ಸೇಸಿ, ಮಗ ಗಂಗಹುಡುಗ— ಹೊರತು ಉಳಿದ ಎಲ್ಲ ಬೇಲರೂ ಚಂದ್ರಯ್ಯಗೌಡರ ಪಾಲಿಗೆ ಬಂದರು.

ಬೈರ ಕೂಡ ತನ್ನ ಸಂಸಾರಸಮೇತವಾಗಿ ಚಂದ್ರಯ್ಯಗೌಡರ ಪಕ್ಷಕ್ಕೇ ಹೋಗುತ್ತಿದ್ದನೋ ಏನೋ! ಆದರೆ ಕೆಲದಿನಗಳ ಹಿಂದೆ ಎತ್ತಿನ ಕಾಲು ಗಾಯವಾದುದಕ್ಕೆ ಗೌಡರು ಹೊಡೆದುದರಿಂದಲೂ, ಅವರ ಅಪ್ಪಣೆಗೆ ವಿರೋಧ ವಾಗಿ ತಾನು ಕೂಲಿ ತೆಗೆದುಕೊಂಡಾಗ ಗೌಡರು ಕಠೋರವಾಗಿ ವರ್ತಿಸಿದುದ ರಿಂದಲೂ, ಆ ರಾತ್ರಿ ತಾನು ತನ್ನ ಹೆಂಡತಿಯನ್ನು ಹೊಡೆಯುತ್ತಿದ್ದಾಗ ಅಸ್ಪೃಶ್ಯನಾದ ತನ್ನ ಕಂಬಳಿಯಲ್ಲಿದ್ದ ಬತ್ತವನ್ನು ತನ್ನ ಬಿಡಾರಕ್ಕೆ ಹೂವಯ್ಯ ಹೊತ್ತುತಂದು ನಯವಾಕ್ಯಗಳಿಂದ ತನ್ನನ್ನು ತಿದ್ದಿದುದರಿಂದಲೂ ಅವನಿಗೆ ಹೂವಯ್ಯನ ಪರವಾಗಿ ಆರಾಧನಾಭಾವ ಬಂದುಬಿಟ್ಟಿತ್ತು. ಆದ್ದರಿಂದಲೆ ಅವನು ತಾನು ಚಂದ್ರಯ್ಯಗೌಡರ ಪಕ್ಷಕ್ಕೆ ಹೋಗುವುದಿಲ್ಲ ಎಂದು ಪಟ್ಟು ಹಿಡಿದದ್ದು. ಚಂದ್ರಯ್ಯಗೌಡರು ಮನಸ್ಸಿನಲ್ಲಿಯೆ 'ನಿನಗೆ ಮಾಡಿಸುತ್ತೇನೆ' ಎಂದುಕೊಂಡು ಅವನನ್ನು ಹೂವಯ್ಯನಿಗೆ ಬಿಟ್ಟುಕೊಟ್ಟರು. ಉಳಿದ ಜೀತ ದಾಳುಗಳೆಲ್ಲರೂ ಚಂದ್ರಯ್ಯಗೌಡರ ಕಣ್ಣುಹೆದರಿಕೆ ಕೊರಳುಹೆದರಿಕೆಗಳಿಂದ ಒಂದು ಪ್ರತಿಮಾತನ್ನೂ ಆಡದೆ ಅವರ ಪಕ್ಷಕ್ಕೇ ಬಂದುಬಿಟ್ಟರು.

ಮನೆ ಹಿಸ್ಸೆಯಾದ ಮರುದಿನವೆ ಎರಡು ಅಡುಗೆಮನೆಯ ಒಲೆಗಳಲ್ಲಿ ಬೆಂಕಿ

ಹೊಗೆಯಾಡಿತು. ಬಚ್ಚಲು ಮನೆಯಲ್ಲಿಯೂ ಮತ್ತೊಂದು ಒಲೆ ನೇರ್ಪಟ್ಟು ಬೇರೆ ಬೇರೆಯ ಹಂಡೆಗಳಲ್ಲಿ ನೀರು ಕುದಿಯತೊಡಗಿತು. ಒಂದೇ ಜಗಲಿಯಲ್ಲಿ ಪಶ್ಚಿಮದ ಕೊನೆಯಲ್ಲಿ ಒಂದು, ಪೂರ್ವದ ಕೊನೆಯಲ್ಲಿ ಒಂದು, ಹೀಗೆ ಎರಡು ಲ್ಯಾಂಪು ಉರಿಯತೊಡಗಿದುವು. ಸಾಧ್ಯವಾದ ಕಡೆಗಳಲ್ಲೆಲ್ಲ ಚಂದ್ರಯ್ಯಗೌಡರು ಹೂವಯ್ಯನ ಪಾಲಿಗೂ ತನ್ನ ಪಾಲಿಗೂ ನಡುವೆ ತಟ್ಟಿಗಳನ್ನು ಕಟ್ಟಿಸಿದರು. ಹಾಗೆ ಮಾಡಿದರೆ ಮನೆಯೆಲ್ಲ ವಿಕಾರವಾಗುತ್ತದೆ; ಮನೆಗೆ ಬಂದ ನಂಟರಿಗೂ ಅದನ್ನೆಲ್ಲ ನೋಡಿದರೆ ಇಸ್ಸಿ ಎನ್ನಿಸುತ್ತದೆ; ತಟ್ಟಿ ಕಟ್ಟುವುದು ಬೇಡ ಎಂದು ಹೂವಯ್ಯ ಹೇಳಿದರೆ ಚಂದ್ರಯ್ಯಗೌಡರು ದೀರ್ಘಸ್ವರದಿಂದ "ಯಾಕಪ್ಪಾ? ನಿನ್ನ ಪಾಲು ನಿನಗೆ; ನನ್ನ ಪಾಲು ನನಗೆ! ನಾವು ನಾವು ದೂರ ದೂರ ಇರೋದೆ ವಾಸಿ" ಎಂದು ಮೊದಲಾಗಿ ಅನೇಕ ಕಟುಹಾಸ್ಯಗರ್ಭಿತವಾದ ಮಾತುಗಳನ್ನು ಆಡಿ, ತಾವು ಕೈಕೊಂಡ ಕಾರ್ಯವನ್ನು ಸಾಂಗವಾಗಿ ನೆರವೇರಿಸಿಬಿಟ್ಟರು.

ಹಾಗೆಯೆ ಅಡಕೆಯ ತೋಟದಲ್ಲಿಯೂ ಕೂಡ ತಮ್ಮ ಪಾಲಿಗೂ ಹೂವಯ್ಯನ ಪಾಲಿಗೂ ನಡುವೆ ಗಡಿಬೇಲಿ ಹಾಕಬೇಕೆಂದು ಸೇರೆಗಾರರಿಗೆ ಅಪ್ಪಣೆ ಮಾಡಿದರು. ತಮ್ಮ ಕೂಲಿಯಾಳುಗಳಿಗೆ ಹೂವಯ್ಯನ ಕೆಲಸವಾವುದನ್ನೂ ಮಾಡಕೂಡ ದೆಂದು 'ತಾಕೀತು' ಮಾಡಿದರು. ಅದು ಎಷ್ಟರ ಮಟ್ಟಿಗೆ ಮುಂದುವರಿಯಿ ತೆಂದರೆ ಜಗಲಿಯನ್ನು ಗುಡಿಸುತ್ತಿದ್ದ ನಿಂಗ ಗೌಡರ ಅಪ್ಪಣೆಯನ್ನು ಮರೆತು ಪದ್ಧತಿಯಂತೆ ಹೂವಯ್ಯನ ಪಾಲಿಗೆ ಹೋಗಿದ್ದ ಭಾಗವನ್ನೂ ಗುಡಿಸಿಬಿಡಲು ಗೌಡರಿಗೆ ಆ ವಿಚಾರ ತಿಳಿದು ಅವನನ್ನು ಚೆನ್ನಾಗಿ 'ಅಂದರು.' ನಿಂಗ ತಾನು ಮಾಡಿದ ಅಪರಾಧವನ್ನು ತಿದ್ದಿಕೊಳ್ಳುತ್ತೇನೆಂದು ಹೇಳಿ, ಹೋಗಿ, ತಾನು ಗುಡಿ ಸಿದ್ದ ಹೂವಯ್ಯನ ಜಗಲಿಯ ಭಾಗಕ್ಕೆ ಮತ್ತೆ ಕಸಹಾಕಿ ಬಂದನು. ಮತ್ತೊಂದು ಸಾರಿ ನಾಗಮ್ಮನವರ ಕೋಳಿಯೊಂದು ಚಂದ್ರಯ್ಯಗೌಡರ ಚೌಕಿಗೆ ಬಂದು ಅಸಹ್ಯಮಾಡಲು ಅದನ್ನು ಪುಟ್ಟನಿಂದ ಎತ್ತಿಸಿ, ಹೊರಗೆ ಬಿಸಾಡಿಸುವ ಬದಲು, ಹೂವಯ್ಯನ ಚೌಕಿಯ ಭಾಗಕ್ಕೆ ಹಾಕಿಸಿದರು.

ಇತರ ಜಾನುವಾರುಗಳಂತೆಯೆ ನಾಯಿಗಳನ್ನೂ ಪಾಲುಮಾಡಿಕೊಂಡಿದ್ದ ರಷ್ಟೆ? ಆದರೆ ಆ ಮೂಗುಪ್ರಾಣಿಗಳಿಗೆ ಮನುಷ್ಯರ ಅವಿವೇಕಜನ್ಯವಾದ ಈ ಕೃತಕ ವಿಭಜನೆಯ ರಹಸ್ಯ ತಿಳಿಯುವುದಾದರೂ ಹೇಗೆ? ಅವು ಮೊದಲಿನಂತೆ ಮನೆಯಲ್ಲಿ ಎಲ್ಲಿ ಇಷ್ಟಬಂದರೆ ಅಲ್ಲಿ ತಿರುಗಾಡುತ್ತಿದ್ದುವು; ಮಲಗುತ್ತಿದ್ದುವು. ಅವುಗಳನ್ನು ಒದ್ದು ಓಡಿಸುವ ಹೀನ ಕೆಲಸಕ್ಕೆ ಆಳುಗಳೂ ಕೂಡ ಕೈಹಾಕುತ್ತಿರ ಲಿಲ್ಲ. ಆದರೆ ಚಂದ್ರಯ್ಯಗೌಡರು ಮಾತ್ರ ಸಂದರ್ಭ ಸಿಕ್ಕಿದಾಗಲೆಲ್ಲ ಹೂವಯ್ಯನ ಪಾಲಿಗೆ ಬಂದ ನಾಯಿಗಳನ್ನು, ಎಷ್ಟೋ ಸಾರಿ ಅವುಗಳು ನೆಮ್ಮದಿಯಾಗಿ ನಿದ್ದೆ

ಮಾಡುತ್ತಿದ್ದಾಗಲೂ, ಒದ್ದು ತಮ್ಮ ಚೌಕಿಯಿಂದಾಚೆಗೆ ಕೂಗಿಸಿ ಓಡಿಸುತ್ತಿದ್ದರು.

ಎಂದಿನಂತೆ ನಿಂಗ ಮಧ್ಯಾಹ್ನ ನಾಯಿಗಳಿಗೆ ಅನ್ನ ಹಾಕಲೆಂದು ಹಿತ್ತಾಳೆಯ ದೊಡ್ಡ ಬೋಗುಣಿಯಲ್ಲಿ ಮಜ್ಜಿಗೆಯನ್ನವನ್ನು ಕಲಸಿಕೊಂಡು ಹೋಗಿ ಕ್ರೂ, ಕ್ರೂ, ಕ್ರೂ ಎಂದು ಕರೆದನು. ಹಸಿದ ನಾಯಿಗಳೆಲ್ಲವೂ ಓಡಿಬಂದು ಬಾಲ ವಲ್ಲಾಡಿಸುತ್ತಾ ಮುಖವೆತ್ತಿ ನಿಂಗನ ಕಡೆಗೂ ಬೋಗುಣಿಯ ಕಡೆಗೂ ನೋಡುತ್ತ ನಿಂತುವು. ನಿಂಗ ಮೊದಲು ಚಂದ್ರಯ್ಯಗೌಡರ ನಾಯಿಗಳಿಗೇ ಅನ್ನ ಹಾಕಲು ಪ್ರಯತ್ನಿಸಿದನು. ಆದರೆ ಸಾಧ್ಯವಾಗಲಿಲ್ಲ. ಕಡೆಗೆ ಅವನೂ ದೊಡ್ಡ ಮನಸ್ಸು ಮಾಡಿ ಎಲ್ಲ ನಾಯಿಗಳಿಗೂ ಅನ್ನ ಹಾಕಿಬಿಟ್ಟನು.

ಅದನ್ನು ನೋಡುತ್ತಿದ್ದ ಹಳೆಪೈಕದ ತಿಮ್ಮ ತನ್ನ ಗೌಡರಿಗೆ ವರದಿ ಒಪ್ಪಿಸಿದನು. ಅವರು ನಿಂಗನನ್ನು ಕರೆದು "ನಿನಗೆ ತಿಂದ ಕೂಳು ಕಣ್ಣಿಗೆ ಬಂದದೆ ಅಂತ ಕಾಣ್ತದೆ! ಯಾರಜ್ಜನ ಮನೆಗಂಟು ಅಂತಾ ಅನ್ನಹಾಕ್ದೆ ಅವರ ಮನೇ ನಾಯಿಗೆ?" ಎಂದು ಸಿಡುಕಿದರು.

ನಿಂಗ ನಮ್ರತೆಯಿಂದ "ನಾ ಏನ್ಮಾಡ್ಲಯ್ಯಾ? ಎಲ್ಲಾ ಬಂದು ಒಂದ್ರನ್ನ ಒಂದು ತಿಂದ್ರೆ ನಾ ಏನ್ಮಾಡ್ಲಯ್ಯ?" ಎಂದು ತಪ್ಪನ್ನೆಲ್ಲ ನಾಯಿಗಳ ಮೇಲೆ ಹೊರಿಸಲು ಪ್ರಯತ್ನಿಸಿದನು.

ಗೌಡರು "ಒಂದರನ್ನ ಒಂದು ತಿನ್ನಾಗ ನೀನೇನು ಕತ್ತೆ ಕಾಯ್ತಿದ್ದೇನು? ಅಲ್ಲಿ ಸೌದೆ ಬಡಿಕೆ ಇರಲಿಲ್ಲೇನು?..." ಎಂದು ಹೂವಯ್ಯನ ನಾಯಿಗಳನ್ನು ಓಡಿಸುವ ವಿಧಾನವನ್ನು ಹೇಳಿಕೊಟ್ಟರು.

ಹಾಗೆಯೆ ಹೂವಯ್ಯ ತಮ್ಮ ನಾಯಿಗಳಿಗೆ ಅನ್ನ ಹಾಕಿದ್ದನ್ನು ಕೇಳಿದಾಗಲೂ, ಇನ್ನುಮೇಲೆ ಹಾಗೆ ಹಾಕಬಾರದೆಂದು ಬಹಳ ರಭಸದಿಂದ ರೇಗಿ ಮಾತಾಡಿದರು.

ನಾಯಿ, ಕೋಳಿ, ಕೂಲಿಯಾಳುಗಳ ಮಾತಂತಿರಲಿ. ವಾಸು ಆ ದಿನ ಎರಡು ಜಾಗಗಳಲ್ಲಿ ಅಡುಗೆಯಾಗುತ್ತಿದ್ದುದನ್ನು ನೋಡಿ ನಾಗಮ್ಮನವರ ಹತ್ತಿರ ಬಂದು "ದೊಡ್ಡಮ್ಮಾ, ಇದ್ಯಾಕೆ ಎರಡು ಕಡೆ ಅಡಿಗೆ ಆಗ್ತಾ ಇದ್ಯೆಲ್ಲಾ?" ಎಂದು ಕೇಳಿದನು.

ನಾಗಮ್ಮನವರು ಹುಡುಗನ ಸರಳ ಬುದ್ಧಿಗೆ ನಸುನಕ್ಕು ಮುದ್ದಿನಿಂದ "ಅಯ್ಯೋ ಹುಡುಗಾ, ನಿಂಗೆ ಅಷ್ಟೂ ತಿಳಿಯಾದಿಲ್ಲೇನೊ? ನಿನ್ನೆ ಮನೆ ಹಿಸ್ಸೆ ಆಯ್ತಲ್ಲಾ ಅದಕ್ಕೇ..." ಎಂದರು.

ಹಿಸ್ಸೆ ಎನ್ನುವುದರ ಅರ್ಥ ಇಷ್ಟು ದೂರಗಾಮಿಯಾಗುತ್ತದೆ ಎಂದು ವಾಸು ಭಾವಿಸಿರಲಿಲ್ಲ. ಅವನಿಗೆ ಹಿರಿಯರ ನಡತೆಗಳೆಲ್ಲ ವಿಚಿತ್ರವಾಗಿ ಕಾಣತೊಡಗಿದುವು; ಒಂದು ಅಡುಗೆಮನೆ ಸಾಲದೆ ಎರಡು ಮಾಡಿಕೊಂಡಿದ್ದಾರೆ! ಬಚ್ಚಲಿನಲ್ಲಿ

ಒಂದು ಒಲೆಗೆ ಬದಲಾಗಿ ಎರಡಾಗಿವೆ! ಮನೆಯ ಅನೇಕ ಸ್ಥಳಗಳನ್ನು ತಟ್ಟಿ ಕಟ್ಟಿ ವಿಂಗಡಿಸಿದ್ದಾರೆ! ಅವನಿಗೆ ಹೊರಗೆ ಕಾಣುತ್ತಿದ್ದ ವಿಭಜನೆಗಳ ಹಿಂದೆ ಅವಕ್ಕೆ ಕಾರಣವಾಗಿದ್ದ ಮನಸ್ಸಿನ ಒಡಕನ್ನು ತಿಳಿಯುವಷ್ಟು, ಅಳೆಯುವಷ್ಟು ಪರಿಜ್ಞಾನವಿರಲಿಲ್ಲ. ಆದ್ದರಿಂದಲೆ ಊಟದ ಸಮಯದಲ್ಲಿ ತಾನು ದೊಡ್ಡಮ್ಮನ ಅಡುಗೆಮನೆಯಲ್ಲಿ ಹೂವಣ್ಣಯ್ಯನೊಡನೆ ಊಟ ಮಾಡುತ್ತೇನೆ ಎಂದು ಹಟಹಿಡಿದುಬಿಟ್ಟನು.

ಪುಟ್ಟಮ್ಮ "ಬ್ಯಾಡ, ಮಾರಾಯ! ಅಪ್ಪಯ್ಯ ಕೇಳಿದ್ರೆ ಬಯ್ತಾರೆ!" ಎಂದರೂ ಕೇಳಲಿಲ್ಲ.

ನಾಗಮ್ಮನವರೂ ವಾಸುವಿನ ಮೇಲಣ ಪ್ರೀತಿಯಿಂದಲೂ ಚಂದ್ರಯ್ಯ ಗೌಡರಿಗೆ ಎದೆ ಚುಚ್ಚುವಂತಾಗಲಿ ಎಂಬ ಪ್ರತಿಹಿಂಸೆಯ ಸಲುವಾಗಿಯೂ ವಾಸುವಿಗೆ ಹೂವಯ್ಯನ ಜೊತೆಯಲ್ಲಿ ತಮ್ಮ ಅಡುಗೆಮನೆಯಲ್ಲಿಯೆ ಬಳ್ಳೆ ಹಾಕಿದರು.

ವಾಸು ಹೂವಣ್ಣಯ್ಯನೊಡನೆ ವಿನೋದವಾಗಿ ಹರಟೆಹೊಡೆಯುತ್ತ ಖುಷಿ ಯಿಂದ ಉಣ್ಣುತ್ತಿದ್ದನು.

ಅಷ್ಟರಲ್ಲಿ ರಾಮಯ್ಯನೊಡನೆ ಊಟಕ್ಕೆ ಬಂದ ಚಂದ್ರಯ್ಯಗೌಡರು "ಎಲ್ಲಿ ವಾಸು?" ಎಂದು ಕೇಳಿದರು.

ಸುಬ್ಬಮ್ಮ ಸತ್ಯ ಹೇಳಿದರೆ ಕಷ್ಟವಾಗುತ್ತದೆ ಎಂದು "ಏನೋ ಗೊತ್ತಿಲ್ಲ-ಅ್ಹಾವ ಇನ್ನೂ ಉಣ್ಣಕ್ಕೆ ಬಂದೇ ಇಲ್ಲ" ಎಂದಳು.

"ಪುಟ್ಟಮ್ಮಾ!" ಎಂದು ಗೌಡರು ಕೂಗಿದರು.

"ಅ್ಹಾ! ಏನಪ್ಪಯ್ಯಾ?" ಎಂದು ಪುಟ್ಟಮ್ಮ ಬಾಗಿಲು ಸಂದಿಯಿಂದ ಹೆದರಿ ಹೆದರಿ ಬಂದಳು.

"ತಮ್ಮ ಎಲ್ಲಿದ್ದಾನ್ಸ್ ಕರೀ" ಎಂದರು.

ಪುಟ್ಟಮ್ಮ ಜಗಲಿಗೆ ಹೋಗಿ ಹುಡುಕಿದಂತೆ ನಟಿಸಿ ಬಂದು "ಅಲ್ಲೆಲ್ಲ ನೋಡ್ದೆ. ಎಲ್ಲೂ ಕಾಣಲಿಲ್ಲ" ಎಂದು ಹೇಳಿ ರಾಮಯ್ಯನ ಮುಖವನ್ನು ಅರ್ಥಗರ್ಭಿತ ವಾಗಿ ನೋಡಿದಳು.

ಗೌಡರಿಗೆ ಸಂಶಯವಾಗಿ "ತಮ್ಮಾ! ತಮ್ಮಾ!" ಎಂದು ಗಟ್ಟಿಯಾಗಿ ಕಿರಿ ಮಗನನ್ನು ಕೂಗತೊಡಗಿದರು.

ಹೂವಯ್ಯನೊಡನೆ ಊಟಮಾಡುತ್ತಿದ್ದ ವಾಸು 'ಆಚೆಮನೆ'ಯ ಅಡುಗೆ ಮನೆಯಿಂದ "ಅ್ಹಾ!" ಎಂದು ಓಕೊಂಡನು.

"ಉಣ್ಣಕ್ಕೆ ಬರೋದಿಲ್ಲೇನೋ? ಅಲ್ಲೇನ್ಮಾಡ್ತೀಯ?" ಎಂದು ಗದರಿದರು.

"ಇಲ್ಲೆ ಉಣ್ತಿದ್ದೀನಿ ಹೂವಣ್ಣಯ್ಯನ ಜತೇಲಿ" ಎಂದು ಸರಳ ಮನಸ್ಸಿನಿಂದಲೆ ಗಟ್ಟಿಯಾಗಿ ಕೂಗಿ ಹೇಳಿದನು.

ಗೌಡರು ಕೆಂಪುಗಣ್ಣಾಗಿ ಸುಬ್ಬಮ್ಮ, ರಾಮಯ್ಯ, ಪುಟ್ಟಮ್ಮ ಇವರ ಕಡೆಗೆ ಒಂದು ಕ್ಷಣಮಾತ್ರ ದೃಷ್ಟಿಯೆಸೆದು "ಬರ್ತೀಯೋ ಇಲ್ಲೊ ಒಳ್ಳೆ ಮಾತ್ನಿಂದ!" ಎಂದು ಕೂಗಿದರು.

ಯಾರೊಬ್ಬರೂ ಮಾತಾಡಲಿಲ್ಲ. ವಾಸವೂ ಕೂಡ ಹೆದರಿ ಹೂವಯ್ಯನನ್ನೂ ನಾಗಮ್ಮನವರನ್ನೂ ಸರದಿಯ ಮೇಲೆ ಬೆಬ್ಬಳಿಸಿ ನೋಡತೊಡಗಿದನು. ಮನೆಯೆಲ್ಲ ಮೌನವಾಗಿತ್ತು.

"ಹೋಗೆ, ಪುಟ್ಟಮ್ಮ, ಎಳಕೊಂಡು ಬಾರೆ ಅವನ್ನ!" ಎಂದು ಗೌಡರು ಗರ್ಜಿಸಿದರು.

ಪುಟ್ಟಮ್ಮ ಮಾತಾಡಲಿಲ್ಲ. ನಿಂತಲ್ಲಿಂದ ಹಂದಲಿಲ್ಲ. "ಹೋಗ್ತೀಯೋ ಇಲ್ಲೋ?" ಎಂದು ಗೌಡರು ಮತ್ತೆ ಆರ್ಭಟಿಸಿದರು.

ಪುಟ್ಟಮ್ಮ ಅಳುತ್ತ ಜಗಲಿಯ ಕಡೆಗೆ ಹೋದಳು.

ಅದುವರೆಗೆ ಸುಮ್ಮನಿದ್ದ ರಾಮಯ್ಯ "ಊಟಕ್ಕೆ ಕೂತಿದ್ದಾನಂತೆ! ನೀವು ಎಳಕೊಂಡು ಬಾ ಅಂತ ಹೇಳಿದರೆ?" ಎಂದನು.

"ಅವನು ಊಟಮಾಡಿದ್ದನ್ನೆಲ್ಲಾ ಕಕ್ಕಸ್ತೀನಿ; ಹೊರಗೆ ಬರ್ಲಿ!" ಎಂದು ಗೌಡರು ಸಿಟ್ಟಿನಿಂದ ಉಣತೊಡಗಿದರು.

ದಿನಕಳೆದಂತೆ ಚಂದ್ರಯ್ಯಗೌಡರ ಮನಸ್ಸು ಕ್ಷುದ್ರವೂ ಅನುದಾರವೂ ಆಗಿ ಅಧೋಮುಖವಾಗಿ ಹೋಗುತ್ತ ಕತ್ತಲೆಗಿಳಿಯುತ್ತಿತ್ತು. ಮನೆ ಹಿಸ್ಸೆಯಾದ ಮೇಲಾದರೂ ಉದಾರತೆಯಿಂದ ವರ್ತಿಸುತ್ತಾರೆ ಎಂದು ಹಾರೈಸಿದ್ದ ಹೂವಯ್ಯನಿಗೂ ಕೂಡ ಅವರ ವಿಚಾರದಲ್ಲಿ ಜುಗುಪ್ಸೆ ಹುಟ್ಟಿತು. ಸಣ್ಣ ಪುಟ್ಟ ವಿಚಾರಗಳಲ್ಲಿಯೂ ಕೂಡ ಅವರು ತೋರುತ್ತಿದ್ದ ದ್ವೇಷ ಮಾತ್ಸರ್ಯಗಳನ್ನು ನೋಡಿ ಅವನೂ ಸ್ವಲ್ಪ ಕುಪಿತನಾದನು. ಹಾಗೆಯೆ ನಾಗಮ್ಮನವರೂ ಮಗನ ತಾಟಸ್ಥ್ಯವನ್ನು ಖಂಡಿಸಿ, ಇನ್ನುಮೇಲೆ ಪ್ರತಿಭಟಿಸದೆ ಸುಮ್ಮನಿದ್ದರೆ ತಾವು ಶಾಂತಿಯಿಂದ ಇರುವಹಾಗಿಲ್ಲ ಎಂದು ಬೋಧಿಸಿದರು. ಆದ್ದರಿಂದ ಹೂವಯ್ಯ ತನ್ನ ಮನಸ್ಸಿನಲ್ಲಿಯೆ 'ಕಚ್ಚಬಾರದು, ಬುಸ್ಸೆಂದು ಹೆಡೆಯೆತ್ತಿ ಬೆದರಿಸಬೇಕು' ಎಂಬ ಗೃಹಸ್ಥ ಧರ್ಮವನ್ನು ಅನುಸರಿಸಿ ನೋಡುತ್ತೇನೆ, ಎಂದು ನಿಶ್ಚಯಿಸಿದನು.

ರಾಮಯ್ಯನೆಲ್ಲಿಯಾದರೂ ತನ್ನ ಮನೋರಥವನ್ನು ತಪ್ಪಾಗಿ ತಿಳಿದುಕೊಂಡಾನೆಂದು ಅವನಿಗೂ ತನ್ನ ನಿರ್ಣಯವನ್ನು ತಿಳಿಸಿದನು. ಅವನೂ ಅದಕ್ಕೆ ಸಮ್ಮತಿಸಿದನು.

ಹೂವಯ್ಯ ಮತ್ತು ನಾಗಮ್ಮನವರ ಇಷ್ಟದಂತೆ ಅವರ ಮನೆಯಲ್ಲಿಯೇ ಇರಲು ಒಪ್ಪಿದ ಪುಟ್ಟಣ್ಣನಿಗೂ ಈ ವಿಷಯವನ್ನು ತಿಳಿಸಿದನು.

ಹೀಗೆ ಮನೆಯಲ್ಲಿ ಚಂದ್ರಯ್ಯಗೌಡರನ್ನು ತಿದ್ದುವ ಸಲುವಾಗಿ ಒಂದು ಸಣ್ಣ ಒಳಸಂಚಿನ ಗಂಪು ಸಿದ್ಧವಾಯಿತು.

೪೩

## ತೆಂಗಿನಕಾಯಿಯ ಮಂತ್ರಶಕ್ತಿ

ಮನೆ ಹಿಸ್ಸೆಯಾದ ತರುವಾಯ ಇತರರಂತೆ ನಿಂಗನೂ ತಾನು ಕಾಡಿನಲ್ಲಿ ಹೂಳಿ ಬೈತಿಟ್ಟ ವಸ್ತುಗಳನ್ನು ಮರಳಿ ಮನೆಗೆ ಸಾಗಿಸತೊಡಗಿದನು. ಒಂದೆರಡೆಡೆ ಗಳಲ್ಲಿ ಪದಾರ್ಥಗಳೆಲ್ಲ ಅವನು ಇಟ್ಟಿದ್ದಂತೆಯೆ ಇದ್ದುವು. ಲೋಹದ ಪದಾರ್ಥ ಗಳಿಗೆ ತುಕ್ಕುಹಿಡಿದುದನ್ನಾಗಲಿ ಮರದ ವಸ್ತುಗಳಿಗೆ ಒರಲೆಹಿಡಿದುದನ್ನಾಗಲಿ ಅವನೇನು ಹೆಚ್ಚು ಮನಸ್ಸಿಗೆ ತಂದುಕೊಳ್ಳಲಿಲ್ಲ. ಅಲ್ಲದೆ ಮುಂಗಾರು ಮಳೆ ಆಗಲೇ ಹಿಡಿದುಬಿಟ್ಟಿದ್ದರಿಂದ ಬೆತ್ತದ ಸಣ್ಣ ಪಿಟಾರಿಯಲ್ಲಿದ್ದ ಅವನ ತೀರಿಹೋದ ಹೆಂಡತಿಯ ಬೆಲೆಯುಳ್ಳ ಒಂದು ಸೀರೆ ತೊಪ್ಪನೆ ತೊಯ್ದು ಮುಗ್ಗಲುಮುದ್ದೆ ಯಾದುದನ್ನು ಕೂಡ ಅವನು ತಾಳ್ಮೆಯಿಂದ ಸಹಿಸಿಕೊಂಡನು. ಆದರೆ ಗಂಗ ಹುಡುಗನ ಸಹಾಯದಿಂದ ಕಳ್ಳಂಗಡಿಯವನು ಬರಿದುಮಾಡಿದ್ದ ಕುಳಿಯ ಬಳಿಗೆ ಬಂದೊಡನೆಯೆ ಅವನಿಗೆ ಎದೆ ಹಾರಿತು. ಆಕಾಶವೆ ತಲೆಯಮೇಲೆ ಜರಿದು ಬಿದ್ದಹಾಗಾಯಿತು. ಅಯ್ಯೋ ಎಂದು ಹಣೆ ಹಣೆ ಬಡಿದುಕೊಂಡು ಶಾಪಹಾಕ ತೊಡಗಿದನು. ದುಃಖ ಕೋಪ ನಿರಾಶೆಗಳಿಂದ ಹಲ್ಲುಹಲ್ಲು ಕಡಿಯುತ್ತ 'ಅಯ್ಯೋ ಯಾವ ಮುಂಡೇಮಕ್ಳೋ ನನ್ನ . . . ತಿಂದೋರು? ನಿಮ್ಮ ಗುಡಿ ಹಾಳಾಗ! ನಿಮ್ಮ ಹೆಂಡಿರು ಮುಂಡೇರಾಗಿ ಹೋಗ! . . . ನಿಮ್ಮ ಬಾಯಿಗೆ ಮಣ್ಣಾಗ! ನಿಮ್ಮ ಗುದ್ದಿಗೆ ತುಂಬಿಹೋಗ!' ಎಂದು ಕಾಡೆಲ್ಲ ಮೊಳಗುವಂತೆ ಒರಲುತ್ತಾ ಬೈಯುತ್ತಾ ಮನೆಗೆ ಬರುತ್ತಿದ್ದನು. ಅವನ ರೋದನವನ್ನೂ ಕೂಗಾಟವನ್ನೂ ಆಲಿಸಿ ತೋಟದಲ್ಲಿ ಗಡಿಬೇಲಿ ಕಟ್ಟುತ್ತಿದ್ದ ಸೇರೆಗಾರರೂ ಅವರ ಕಡೆಯ ಗಟ್ಟದಾಳುಗಳೂ ಏನೋ ಪ್ರಮಾದವಾಯಿತೆಂದು ಮಾಡುತ್ತಿದ್ದ ಕೆಲಸಗಳನ್ನು ಅಲ್ಲಲ್ಲಿಯೆ ಬಿಟ್ಟು ಓಡಿಬಂದರು. ಹಾವು ಕಚ್ಚಿತೋ? ಮರದಮೇಲಿಂದ ಬಿದ್ದನೋ? ದೆವ್ವಗಿವ್ವ ಹೊಡೆಯಿತೋ? ಮರದ ಕೊಂಬೆಗಿಂಬೆ ಎಲ್ಲಿಯಾದರೂ ಮೈಮೇಲೆ ಬಿದ್ದಿತೋ? ಅಥವಾ ಯಾರಾದರೂ

ಖೂನಿಗೀನಿ ಮಾಡುತ್ತಿದ್ದಾರೋ? ಹೀಗೆ ಒಬ್ಬೊಬ್ಬರು ಒಂದೊಂದನ್ನು ಆಶಂಕಿಸುತ್ತಾ ಓಡಿಬರುತ್ತಿರುವುದನ್ನು ಕಂಡ ನಿಂಗ ಮತ್ತಷ್ಟು ಹೆಚ್ಚಾಗಿ ತಲೆ ತಲೆ ಬಡಿದುಕೊಂಡು ರೋದಿಸುತ್ತಾ ಶಪಿಸತೊಡಗಿದನು.

ನಿಜವಾದ ವಿಷಯ ಏನೆಂಬುದನ್ನು ತಿಳಿದುಕೊಳ್ಳಲು ಬಂದವರಿಗೆ ಅರ್ಧ ಗಂಟೆ ಹಿಡಿಯಿತು. ನಿಂಗ ಒಂದು ಮಾತಾಡಿದರೆ ಹತ್ತು ಬೈಗುಳವಾಡುತ್ತಿದ್ದನು.

"ವಿಚಾರಿಸುವ; ಒರಲುವುದು ಯಾಕೆ?"

"ಗೌಡ್ರಿಗೆ ಹೇಳಿನಿ; ಕಾಂಬ; ಕಳ್ಳ ಎಲ್ಲಿಗೆ ಹೋಪ?"

"ಊರಿನವರೆ ಯಾರೋ ತೆಗೆದಿಟ್ಟಿರಬಹುದು. ಕೊಡ್ತಾರೆ."

ಹೀಗೆ ಒಬ್ಬೊಬ್ಬರು ಒಂದು ಮಾತು ಹೇಳಿ ನಿಂಗನನ್ನು ಸುಮ್ಮನಿರಿಸಲು ಪ್ರಯತ್ನಿಸಿದರು. ಆದರೂ ನಿಂಗ ಶಾಪಹಾಕುವುದನ್ನೂ ಬಾಯಿಬಡುಕೊಳ್ಳು ವುದನ್ನೂ ನಿಲ್ಲಿಸಲಿಲ್ಲ. ಹಾಗೆ ಮಾಡುವುದರಿಂದಲೆ ಕಳೆದುಹೋದ ಪದಾರ್ಥ ಗಳೆಲ್ಲ ಮರಳಿ ತನ್ನ ಕಾಲಿನ ಬುಡಕ್ಕೆ ಬಂದುಬೀಳುತ್ತವೆ ಎಂದು ಅವನು ಭಾವಿಸಿದಂತಿತ್ತು.

ತೆಂಗಿನೆಣ್ಣೆಯ ಪಸೆಯಿಂದ ನುಣ್ಣನೆ ಮಿರುಗುವಂತಿದ್ದ ಡೊಳ್ಳು ಹೊಟ್ಟೆ ಬಿಟ್ಟುಕೊಂಡು, ತ್ರಿಕೋಣಾಕಾರವಾಗಿ ಮೊಳಕಾಲಿನವರೆಗೂ ನೇತಾಡುತ್ತ ಕೊಳೆಯಿಂದ ಮಷೀಮಯವಾಗಿದ್ದ ಲಂಗೋಟಿಯೊಂದನ್ನು ಮಾತ್ರ ಕಟ್ಟಿ ಕೊಂಡು, ತಲೆಗೆ ಹಾಳೆಟೋಪಿ ಹಾಕಿಕೊಂಡು, ಕೈಯಲ್ಲಿ ಕೆಲಸದ ಕತ್ತಿಯನ್ನು ಹಿಡಿದುಕೊಂಡು ನಡೆಯುತ್ತಿರುವುದನ್ನೆಲ್ಲ ನೋಡುತ್ತ ಅದುವರೆಗೂ ದೂರವಾಗಿ ನಿಂತಿದ್ದ ಬಾಡುಗಳ್ಳ ಸೋಮ ಮುಂದೆ ಬಂದು "ಹೌದಾ, ನಿಂಗಯ್ಯ; ನಾ ಹೇಳ್ತೆ; ಕೇಳಿನಿ. ನೀವು ಹೀಂಗೆ ಅರಚುವುದು ಯಾಕೆ? ಹಾಂಗಾದ್ರೇನು ಸತ್ಯ ಕೆಟ್ಟು ಹೋಯಿತಾ? ನಮ್ಮ ಭೂತರಾಯನಿಗೆ ಒಂದು ತೆಂಗಿನಕಾಯಿ ಹರಸಿ, ಎಲ್ಲರ ಕೈಲೂ ಮುಟ್ಟಿಸಿ. ಆಮೇಲೆ ನೋಡಿ; ನಿಮ್ಮ ಸಾಮಾನು ಎಲ್ಲಿದ್ದರೂ ಹೊರಗೆ ಬಂದುಬೀಳ್ತವೆ!" ಎಂದು ಮಂತ್ರಾಲೋಚನೆ ಹೇಳಿದನು.

ಸರ್ವರಿಗೂ ಸೋಮನ ಹರುವು ಒಪ್ಪಿಗೆಯಾಯಿತು. ಸೇರೆಗಾರರೂ ಆಳುಗಳೂ ಗಡಿಬೇಲಿ ಬಿಗಿಯವುದಕ್ಕೆ ಹೋದರು. ನಿಂಗ ಸೋಮ ಹೇಳಿ ದಂತೆ ಮುಂದಿನ ಕಾರ್ಯ ಜರುಗಿಸಲು ಮನೆಗೆ ಬಂದನು.

ಕಂಡಕಂಡವರಿಗೆಲ್ಲ ಹೃದಯವಿದ್ರಾವಕವಾಗುವ ರೀತಿಯಲ್ಲಿ ತನಗೊದಗಿದ ಮಹಾನಷ್ಟದ ಕಥೆಯನ್ನು ವಿಸ್ತರಿಸಿ; ಮಾತುಮಾತಿಗೂ ಕಳ್ಳರಮೇಲೆ ಬೈಗುಳದ ಬಿರುಮಳೆಯನ್ನು ಕರೆದು; 'ಕಾಯಿಮುಟ್ಟಿಸಿ' ಕದ್ದಿದ್ದನ್ನೆಲ್ಲ ಕಕ್ಕಿಸುತ್ತೇನೆ; ಹಾಂಗಾದರೇನು ನಮ್ಮ ಭೂತರಾಯನ 'ಸಕ್ತಿ' ಹೋಯಿತೋ ಇದೆಯೋ

ನೋಡಿಯೇ ಬಿಡುತ್ತೇನೆ ಎಂದು ಮೊದಲಾಗಿ ಒದರುತ್ತಾ, ಯೋಗ್ಯ ಪ್ರಕೃತಿಯ ಮತ್ತು ಯೋಗ್ಯಾಕೃತಿಯ ತೆಂಗಿನಕಾಯನ್ನು ಹುಡುಕಿ ಸಂಪಾದಿಸಿದನು. ಆ ತೆಂಗಿನಕಾಯಿಗೆ ಜುಟ್ಟು, ಕಣ್ಣು, ನೀರು ಮೂರೂ ಇರಬೇಕು. ನೀರು ಒಣಗಿ ಹೋಗಿ ಗಿಟುಕವಾಗಿದ್ದರೆ ಅಥವಾ ಅದರ ಮುಕ್ಕಣ್ಣುಗಳಲ್ಲಿ ಯಾವುದೊಂದಾದರೂ ಕೆಟ್ಟುಹೋಗಿದ್ದರೆ ಅಥವಾ ಜುಟ್ಟಿಲ್ಲದಿದ್ದರೆ ಅಂಥಾದ್ದು ಮಂತ್ರಕ್ಕೆ ಅರ್ಹವಾಗಿರುವುದಿಲ್ಲ!

ನಿಂಗ ಆ ತೆಂಗಿನಕಾಯನ್ನು ಸ್ವಚ್ಛ ತೀರ್ಥದಿಂದ ತೊಳೆದು 'ಈಬುತ್ತಿ' (ವಿಭೂತಿ), ಕುಂಕುಮ, ಎಣ್ಣೆ, ದಾಸವಾಳದ ಹೂವು, ಕೋಳಿ ಚೊಟ್ಟಿಯ ರಕ್ತ ಮೊದಲಾದುವುಗಳಿಂದ ಅರ್ಚಿಸಿ, ಅದನ್ನು ಕೈಯಲ್ಲಿ ಹಿಡಿದುಕೊಂಡು ನಾಲ್ಕು ದಿಕ್ಕುಗಳಿಗೂ ತಿರುಗಿ ತಿರುಗಿ ನಮಸ್ಕರಿಸುತ್ತಾ ಮಹಾ ಭಯಭಕ್ತಿಯಿಂದ ಒಂದಿನಿತು ರಾಗವಾಗಿ "ಸ್ವಾಮಿ ಭೂತರಾಯ, ಪಾಪ ಪುಣ್ಯ ಎಲ್ಲಾ ನಿನಗೆ ಗೊತ್ತು. ಈ ಬಡವನ ಮೇಲೆ ಕನಿಕರ ಇಟ್ಟು ನಿನ್ನ ಸಕ್ತಿ ತೋರಿಸಬೇಕು. ಯಾರೇ ಕದ್ದಿರಲಿ ನನ್ನ ಸಾಮಾನು ಬಯಲಿಗೆ ಬರುವ ಹಾಗೆ ಅವರ ಬಾಯಲ್ಲಿ ರಕ್ತ ಕಾರಿಸಬೇಕು. ಮುಂದಿನ ಹರಕೆಗೆ — ನಾನು ಬಡವ; ಹೆಚ್ಚು ಕೊಡೋಕೆ ನನ್ನಿಂದ ಆಗೋದಿಲ್ಲ. ನನ್ನ ಭಕ್ತಿ ನೋಡಿ ನಿನ್ನ ಸಕ್ತಿ ತೋರಿಸಬೇಕು.— ಮುಂದಿನ ಹರಕೆಗೆ ಒಂದು ಕೋಳಿ ಹೆಚ್ಚಾಗಿ ಕೊಡ್ತೀನಿ ನಿನಗೆ... ಥೂ! ಮಾಂಕಾಳಿ, ಮಾರಿ, ದುರ್ಗಿ, ಅವರ ಕಣ್ಣು ಹೊಟ್ಟೆ ಹೋಗಲಿ! ಅವರ ಬಾಯಿಗೆ ಮಣ್ಣಾಗಲಿ! ಅವರು ರಕ್ತ ಕಾರಿ ಹಾಳಾಗಿಹೋಗಲಿ!" ಎಂದು ಸರಳ ವಾಕ್ಯಗಳನ್ನೂ ಕರಾಳಾಕಾಂಕ್ಷೆಗಳನ್ನೂ ಒಂದೇ ಉಸಿರಿನಲ್ಲಿ ಉಚ್ಚರಿಸಿ ಭೂತರಾಯನಿಗೆ ಮುಡಿಪು ಕಟ್ಟಿದನು.

ತರುವಾಯ ಯಾರ ಯಾರ ಕೈಯಲ್ಲಿ ಕಾಯಿ ಮುಟ್ಟಿಸಬೇಕು ಎಂದು ಆಲೋಚಿಸಿ, ಮನೆಯವರು ಯಾರೂ ತನ್ನ ಸಾಮಾನುಗಳನ್ನು ಕದ್ದಿರಲಾರರೆಂದು ಯಾವುದೋ ಒಂದು ತರ್ಕದಿಂದ ನಿರ್ಧರಿಸಿ, ಸೇರೆಗಾರರಾದಿಯಾಗಿ ಅವರ ಗಟ್ಟದಾಳುಗಳು, ಬೇಲರು, ಹಳೆಪೈಕದ ತಿಮ್ಮ ಮೊದಲಾದ ಒಕ್ಕಲುಗಳು ಇವರ ಕೈಯಲ್ಲೆಲ್ಲ ಕಾಯಿ ಮುಟ್ಟಿಸಬೇಕೆಂದು ನಿಶ್ಚಯಮಾಡಿದನು. ದೂರದಲ್ಲಿದ್ದ ಕಳ್ಳಂಗಡಿಯವನ ಮೇಲೆ ಅವನ ಗುಮಾನಿ ಹೋಗಲೇ ಇಲ್ಲ.

ಹೀಗೆ ಖಾಲಿ ತೋಟಾವನ್ನು ಮದ್ದುಗುಂಡುಗಳಿಂದ ಬಾರುಮಾಡಿಕೊಂಡು ಷಿಕಾರಿಗೆ ಹೊರಡುವವನಂತೆ ತೈಲಲಿಪ್ತ, ವಿಭೂತಿಭೂಷಿತ, ಕುಂಕುಮಾಂಕಿತ ಜಪಾ ಸುಶೋಭಿತ ರುದ್ರವೇಷದ ನಾರಿಕೇಳವನಾಂತು ಕೈಯಲಿ ನಿಂಗ ಹೊರಹೊಂಟ!

ಮೊದಲು ಗಟ್ಟದಾಳುಗಳು ಕೆಲಸಮಾಡುತ್ತಿದ್ದಲ್ಲಿಗೆ ಹೋಗಿ ಅವರೆಲ್ಲರಿಂದಲೂ ಕಾಯಿ ಮುಟ್ಟಿಸಿದನು. ತರುವಾಯ ಗದ್ದೆಗೆ ಹೋಗಿ ಅಲ್ಲಿ ಉಳುತ್ತಿದ್ದ, ಅಂಚು ಕಡಿಯುತ್ತಿದ್ದ, ಬೇಲರಾಳುಗಳ ಕೈಲಿ ಮುಟ್ಟಿಸಿದನು. ಅವರಲ್ಲಿ ಕೆಲವರು ಮೊದಮೊದಲು ಮುಟ್ಟಲು ಹಿಂಜರಿದರೂ, ಕಡೆಗೆ ವಿಷಯವೆಲ್ಲ ಚೆನ್ನಾಗಿ ತಿಳಿದಮೇಲೆ ನಿರಪರಾಧಿಗಳಾಗಿದ್ದ ತಮಗೆ ಹೆದರಿಕೆಯೇಕೆಂದು ಮುಟ್ಟಿದರು. ಆಮೇಲೆ ಹಳೆಪೈಕದವರ ಗುಡಿಸಲುಗಳಿಗೆ ಹೋಗಿ ಕಾಯಿ ಮುಟ್ಟಿಸಿಕೊಂಡು ಬೇಲರ ಕೇರಿಗೆ ಬಂದನು. ನಿಂಗ ಅಲ್ಲಿದ್ದ ಹೆಣ್ಣಾಳುಗಳೆಲ್ಲರಿಗೂ ಮತ್ತೊಮ್ಮೆ ತನ್ನ ಕಥೆಯನ್ನು ವಿಸ್ತಾರವಾಗಿ ಹೇಳಿದನು. ಅವರೆಲ್ಲರೂ ಒಬ್ಬೊಬ್ಬರಾಗಿ ಕಾಯಿ ಮುಟ್ಟಿದರು. ನಿಂಗ ಹುಡುಗರೂ ಮುಟ್ಟಬೇಕು ಎಂದು ಹೇಳಲು ತಾಯಂದಿರು ಹಲವರು ಪ್ರತಿಭಟಿಸಿದರು. 'ಹುಡುಗರ ಕೈಲಿ ಮುಟ್ಟಿಸು ವುದೇತಕ್ಕೆ? ಅವರೇಕೆ ನಿಮ್ಮ ಸಾಮಾನು ಕದಿಯಾಕೆ ಬರ್‍ತಾರೆ?' ಎಂದು. ಆದರೆ ನಿಂಗ ತನ್ನ ಸಂಶಯನಿವಾರಣೆಗಾಗಿ ಹುಡುಗರು ಮುಟ್ಟಲೇಬೇಕೆಂದು ಹಟಹಿಡಿದನು. ಸ್ವಲ್ಪ ಹೊತ್ತು ಮಾತಿನ ಮಸೆದಾಟವಾದಮೇಲೆ ಒಪ್ಪಿಗೆ ಬಂದಿತು. ಎಲ್ಲವನ್ನೂ ಆಲಿಸುತ್ತ ಹುಡುಗರ ಗುಂಪಿನಲ್ಲಿ ನಿಂತಿದ್ದ ಗಂಗ ಹುಡುಗ ಮಹಾ ಭಯಗ್ರಸ್ತನಾಗಿ ಮೆಲ್ಲನೆ ನುಣುಚಿಕೊಳ್ಳಲು ಪ್ರಯತ್ನಿಸು ತ್ತಿದ್ದನು. ಆದರೆ ನಿಂಗ ಯಾರನ್ನೂ ಹೋಗಗೊಡಲಿಲ್ಲ. ಹುಡುಗರೂ ಒಬ್ಬೊಬ್ಬರಾಗಿ ಹೆದರಿ ಹೆದರಿ ಕಾಯಿ ಮುಟ್ಟತೊಡಗಿದರು. ನಿಂಗ ಗಂಗ ಹುಡುಗನ ಬಳಿಗೆ ಬರಲು ಅವನು ನಡುಗುತ್ತ ಅಳತೊಡಗಿದನು.

ತನ್ನ ಮಗನ ಗುಟ್ಟನ್ನು ಒಂದಿನಿತೂ ತಿಳಿಯದಿದ್ದ ಸೇಸಿ ತನ್ನ ಕುಟುಂಬದ ಸ್ವಚ್ಛ ಶೀಲತೆಯನ್ನು ಸ್ಥಾಪಿಸುವ ಸಲುವಾಗಿ ಮಗನ ಬಳಿಗೆ ಬಂದು ಬೋಳೈ ಸುತ್ತಾ "ನಿಂಗೇನಂತೆ? ಮುಟ್ಟೋ! ನಾವೆಲ್ಲ ಮುಟ್ಟಲಿಲ್ಲೇನು! ನೀ ಕದ್ದಿದ್ರೆ ನಿಂಗೆ ಕಷ್ಟ! ಇಲ್ದಿದ್ರೇನು? ಹೆದರಬೇಡ! ಮುಟ್ಟು!" ಎಂದಳು.

ಹುಡುಗ ತಾಯಿಯ ಮುಖವನ್ನೂ ನೆರೆದವರನ್ನೂ ನೋಡುತ್ತಾ ನೋಡುತ್ತಾ "ನಾ ಒಲ್ಲೆ! ದಮ್ಮಯ್ಯಾ!" ಎಂದು ಗಟ್ಟಿಯಾಗಿ ರೋದಿಸತೊಡಗಿದನು.

ಅಲ್ಲಿದ್ದವರೆಲ್ಲರೂ ಅವನಿಗೆ ಧೈರ್ಯ ಹೇಳಿ, ಸಮಾಧಾನಮಾಡಿ, ಕಾಯಿ ಮುಟ್ಟುವಂತೆ ಪ್ರೋತ್ಸಾಹಿಸಿದರು. ಆದರೆ ಗಂಗ ಗಡಗಡನೆ ನಡುಗುತ್ತ ಕುಂಕುಮದಿಂದ ಕೆಂಪಾಗಿ ಕಾಣುತ್ತಿದ್ದ ತೆಂಗಿನಕಾಯನ್ನು ಎವೆಯಿಕ್ಕದೆ ಭಯ ದೃಷ್ಟಿಯಿಂದ ನೋಡುತ್ತಾ "ದಮ್ಮಯ್ಯಾ! ಅಪ್ಪಾ! ನಾ ಒಲ್ಲೆ! ಒಲ್ಲೇ! ನಿಂಗಯ್ಯ, ಬ್ಯಾಡ; ನಿಮ್ಮ ಕಾಲಿಗೆ ಬೀಳ್ತೀನಿ!" ಎಂದು ಕೂಗತೊಡಗಿದನು.

ನಿಂಗನಿಗೆ ಆದನ್ನು ಕಂಡು ಇಸ್ಸಿ ಎನ್ನಿಸಿತು.

ಸೇಸಿಯ ಕಡೆ ತಿರುಗಿ "ಹೋಗಲಿ ಬಿಡು! ಪಾಪ! ಅಂತೂ ನಿಮ್ಮ ಮೇಲೆ ಗುಮಾನಿ ಬಿದ್ದಹಾಂಗಾಗ್ತದೆ!" ಎಂದು ಹೊರಡಲೆಳಸಿದನು.

ಸೇಸಿಗೆ ಮುಖಭಂಗವಾಗಿ ಮಗನ ಮೇಲೆ ಸಿಟ್ಟೇರಿತು, ಅಷ್ಟು ಜನರ ಮುಂದೆ ತಮ್ಮ ಮನೆತನದ ಮೇಲೆ ಮಸಿ ಬಿದ್ದಿತಲ್ಲಾ ಎಂದು.

ಬೆನ್ನಿಗೊಂದು ಗುದ್ದು ಹೇರಿ ಮಗನನ್ನು ಹಿಡಿದೆಳೆತಂದು "ಎಲ್ಲಿ, ನಿಂಗಯ್ಯಾ, ಕಾಯಿ ತೋರಿಸಿ, ಅವನ ಕೈಲೇ ಮುಟ್ಟಿಸ್ತೀನಿ" ಎಂದಳು ಸೇಸಿ.

ನಿಂಗ ತೆಂಗಿನಕಾಯನ್ನು ಮುಂದಕ್ಕೆ ಚಾಚಿ ಹಿಡಿದನು. ಸೇಸಿ ಗಂಗನ ಬಲಗೈಯನ್ನು ಬಲಾತ್ಕಾರದಿಂದ ಹಿಡಿದೆಳೆದು, ಅವನು 'ದಮ್ಮಯ್ಯಾ ಅವ್ವಾ! ಬ್ಯಾಡ!' ಎಂದು ಬೊಬ್ಬೆಹಾಕಿ ಒದ್ದಾಡುತ್ತಿದ್ದರೂ ಲಕ್ಷ್ಯಕ್ಕೆ ತಾರದೆ, ಕಾಯಿ ಮುಟ್ಟಿಸಿಯೆಬಿಟ್ಟಳು.

ಹುಡುಗ ಕೆಂಪಗೆ ಕಾದ ಕಬ್ಬಿಣದುಂಡೆಯನ್ನು ಮುಟ್ಟಿದವನಂತೆ ಕಿಟ್ಟನೆ ಕಿರಿಚಿಕೊಂಡು ತಾಯಿಯ ಕೈಮೇಲೆಯೆ ಪ್ರಜ್ಞೆತಪ್ಪಿ ಬಿದ್ದುಬಿಟ್ಟನು. ನಿಂತಿದ್ದ ವರಿಗೆಲ್ಲ ದಿಗ್ಭ್ರಮೆಯಾಯಿತು. ಸ್ವಲ್ಪ ತಣ್ಣೀರು ತಂದು ಹುಡುಗನ ತಲೆಗೆ ಹಾಕಿ, ಗಾಳಿ ಬೀಸಿ, ಮೆಲ್ಲನೆ ಎತ್ತಿಕೊಂಡು ಹೋಗಿ ಬಿಡಾರದಲ್ಲಿ ಕಂಬಳಿಯ ಮೇಲೆ ಮಲಗಿಸಿದರು.

ನಿಂಗ ತನ್ನ ತೆಂಗಿನಕಾಯಿಯ ಮಂತ್ರಶಕ್ತಿಗೆ ತಾನೆ ಭಯಪಟ್ಟುಕೊಂಡು ಭೂತರಾಯನ ಸತ್ಯಕ್ಕೆ ಹೆದರಿಕೊಳ್ಳುತ್ತ ಮನೆಗೆ ಹಿಂತಿರುಗಿದನು.

ಸ್ವಲ್ಪ ಹೊತ್ತಿನಮೇಲೆ ಬೇಲರ ಹೈದನೊಬ್ಬನು ಹೂವಯ್ಯ ಪುಟ್ಟಣ್ಣ ಇವರೊಡನೆ ಗದ್ದೆಯಲ್ಲಿ ಕೆಲಸಮಾಡುತ್ತಿದ್ದ ಬೈರನ ಬಳಿಗೆ ಬಂದು, ಗಂಗನಿಗೆ ಏನೋ ಹೊಡೆದಿದೆಯೆಂದೂ, ಜ್ವರವೇರಿ ಭ್ರಾಂತಿಯಿಂದ ಬಾಯಿಗೆಬಂದಂತೆ ಹಲವರಿಯುತ್ತಿದ್ದಾನೆಂದೂ, ಬೈರನು ಬೇಗ ಬರಬೇಕೆಂದು ಸೇಸಿ ಹೇಳಿಕಳುಹಿಸಿದ್ದಾಳೆಂದೂ ಹೇಳಿದನು. ಒಡನೆಯೆ ಬೈರ ತನ್ನ ಕೆಲಸವನ್ನು ಹಾಗೆಯೆ ನಿಲ್ಲಿಸಿ, ಹೂವಯ್ಯನಿಗೆ ಸಮಾಚಾರ ತಿಳಿಸುತ್ತಾ ಕಣ್ಣೀರು ಹಾಕಿದನು. ಹೂವಯ್ಯನಿಗೂ ಗಾಬರಿಯಾಯಿತು. ಪುಟ್ಟಣ್ಣನನ್ನೂ ಬೈರನೊಡನೆ ಹೋಗಿ ಅದೇನೆಂದು ನೋಡಿ ವಿಚಾರಿಸಿಕೊಂಡು ಬರುವಂತೆ ಹೇಳಿಕಳುಹಿಸಿ, ತಾನೊಬ್ಬನೆ ಮಳೆ ಸುರಿದು ನೀರು ನಿಂತು ಕೆಸರಾಗಿದ್ದ ಗದ್ದೆಯಲ್ಲಿ ಕೆಲಸಮಾಡತೊಡಗಿದನು.

ದೂರದ ಗದ್ದೆಗಳಲ್ಲಿ ಚಂದ್ರಯ್ಯಗೌಡರು ತಮ್ಮ ಹೆಚ್ಚು ಸಂಖ್ಯೆಯ ಆಳುಗಳೊಡನೆಯೂ ಎತ್ತುಗಳೊಡನೆಯೂ ಕೆಲಸ ಮಾಡಿಸುತ್ತಿದ್ದರು. ರಾಮಯ್ಯನ ಬಿಳಿಯ ಉಡುಪೂ ಅವರ ನಡುವೆ ಗೋಚರಿಸುತ್ತಿತ್ತು. ಅವನು ಯಾವ ಕೆಲಸದಲ್ಲಿಯೂ ತೊಡಗದಿದ್ದರೂ ತಂದೆಯ ಭಯಕ್ಕಾಗಿ ಹೂವಯ್ಯನೆಡೆಗೆ

ಹೋಗಲು ಕಾತರವಾಗಿದ್ದ ಮನಸ್ಸನ್ನು ತಡೆದು ಗದ್ದೆಯಂಚಿನ ಮೇಲೆ ಹಾಕಿದ್ದ ಕಂಬಳಿಯ ಮೇಲೆ ಕುಳಿತಿದ್ದನು.

ಬಿರುಮಳೆಯಲ್ಲಿ ಮಿಂದು ಮಿಂದು ನಾಡೆಲ್ಲ ಹಸುರಾಗಿ ಚೊಕ್ಕಟವಾಗಿತ್ತು. ಆಕಾಶದ ತುಂಬ ಮೋಡ ಮುಚ್ಚಿಕೊಂಡು ಸೂರ್ಯರಶ್ಮಿಯ ಸುಳಿವೂ ಅಡಗಿ ಹೋಗಿತ್ತು. ವಾಯುಮಂಡಲ ನಿರ್ಮಲವಾಗಿತ್ತು. ಬಯಲುಗಳ ಮೇಲೆ ಹಸುರುಗಂಬಳಿ ಹಾಸಿದಂತೆ ಹುಲ್ಲು ಹಬ್ಬಿ ಬೆಳೆದಿತ್ತು. ಸುತ್ತಲೂ ಮಹಾ ಪರ್ವತದುರ್ಗದ ಗೋಡೆಗಳಂತೆ ಎತ್ತರವಾಗಿ ಎದ್ದು ನಿಂತಿದ್ದ ಬೆಟ್ಟಗಳನ್ನು ಬಿಗಿದಪ್ಪಿದ್ದ ಕಾಡುಗಳಸಾಲು ಹಚ್ಚನೆ ಹಸುರಾಗಿ ರಮಣೀಯವಾಗಿತ್ತು. ಗದ್ದೆಗಳಲ್ಲಿ ಅಲ್ಲಲ್ಲಿ ಗುಪ್ಪೆಗುಪ್ಪೆಯಾಗಿ ಹಾಕಿದ್ದ ಕರಿಯ ಗೊಬ್ಬರದ ರಾಶಿಗಳಲ್ಲಿ ಉರುಳಿ ಹಕ್ಕಿಗಳು ನಾನಾವಿಧವಾಗಿ ಕೆಲೆಯುತ್ತ ಹುಳುಬೇಟೆಯಲ್ಲಿ ಮಗ್ನವಾಗಿದ್ದುವು. ಅಲ್ಲಲ್ಲಿ ಬಿಳಿಯ ಕುಕ್ಕಗಳೂ ತಮ್ಮ ನೀಳವಾದ ಕೊರಳುಗಳನ್ನು ಎತ್ತಿಕೊಂಡು ಧ್ಯಾನ ಮಾಡುವಂತೆ ಕುಳಿತಿದ್ದುವು. ಹೂವಯ್ಯ ತಾನು ಕೈಕೊಂಡ ಹೊಸ ಕಸಬಿನಲ್ಲಿ ಮಗ್ನನಾಗಿದ್ದರೂ ತಾನು ಕಾಲೇಜಿನಲ್ಲಿ ಉಪನ್ಯಾಸ ಮಂದಿರದ ಗ್ಯಾಲರಿಯಲ್ಲಿ ಕುಳಿತು ಅಧ್ಯಾಪಕರ ಮಾತುಗಳನ್ನು ಕೇಳುತ್ತಿರುವ ದೃಶ್ಯವನ್ನು ಆಗ ತಾನು ಗೆಯ್ಯುತ್ತಿದ್ದ ದೃಶ್ಯದೊಡನೆ ಹೋಲಿಸಿಕೊಂಡು ಮುಗುಳುನಗೆ ನಕ್ಕನು.

ಅರ್ಧ ಗಂಟೆಯೊಳಗಾಗಿ ಪುಟ್ಟಣ್ಣ ಅವಸರ ಅವಸರವಾಗಿ ಬಂದು ಹೂವಯ್ಯನನ್ನು ಬೇಲರ ಕೇರಿಗೆ ಬರುವಂತೆ ಕರೆದನು. ಇಬ್ಬರೂ ಬೈರನ ಬಿಡಾರಕ್ಕೆ ಹೊರಟರು. ದಾರಿಯಲ್ಲಿ ಪುಟ್ಟಣ್ಣ ನಡೆದ ವೃತ್ತಾಂತವನ್ನೆಲ್ಲ ಸಂಕ್ಷೇಪವಾಗಿ ಹೇಳಿದನು.

ಅವರು ಬಿಡಾರದ ಹತ್ತಿರ ಬರುವಷ್ಟರಲ್ಲಿಯೆ ಅವರನ್ನು ದೂರದಿಂದ ಕಂಡ ಬೈರ "ಅಯ್ಯೋ, ಅಯ್ಯಾ, ನನ್ನ ಕಂದನ್ನ ಕೊಂದ್ರೂ! ಕೊಂದ್ರೂ!" ಎಂದು ಎದೆ ಬಡಿದುಕೊಂಡು ರೋದಿಸತೊಡಗಿದನು.

ಹೂವಯ್ಯ ಅವನನ್ನು ಸುಮ್ಮನಿರುವಂತೆ ಗದರಿಸಿ, ಬಿಡಾರದ ಒಳಗೆ ಹೋದನು. ಅಲ್ಲಿ ಸೇಸಿ, ಹಾಸಿದ್ದ ಕಂಬಳಿಯ ಬಳಿ ಕುಳಿತು "ಅಯ್ಯೋ ಮಗನೇ" ಎಂದು ಅಳುತ್ತ ಹಣೆಯನ್ನೂ ಎದೆಯನ್ನೂ ಬಡಿದುಕೊಳ್ಳುತ್ತಿದ್ದಳು. ಕಂಬಳಿಯ ಮೇಲೆ ಮೆಳ್ಳೆಗಣ್ಣಾಗಿ ನಿಶ್ಚೇಷ್ಟಿತನಾಗಿದ್ದಂತೆ ಗಂಗ ಬಿದ್ದಿದ್ದನು. ಉಸಿರಾಡುತ್ತಿತ್ತು. ದೆವ್ವದ ಭಯದಿಂದಲೇ ಹುಡುಗನಿಗೆ ಆ ರೀತಿಯಾಗಿದೆ ಎಂಬುದೇನೋ ಹೂವಯ್ಯನಿಗೆ ನಿರ್ವಿವಾದವಾಗಿ ತಿಳಿದಿತ್ತು.

ತಂದೆತಾಯಿಗಳಿಗೆ ಧೈರ್ಯ ಹೇಳಿ, ಅವರ ಧೈರ್ಯಕ್ಕಾಗಿ ಅವರು ಇಷ್ಟಪಟ್ಟಂತೆ ತನ್ನ ಪರವಾಗಿ ಪುಟ್ಟಣ್ಣನಿಂದ ಭೂತರಾಯನಿಗೆ 'ತಪ್ಪು' ಹೇಳಿಸಿ

ದನು. ತನಗೆ ತಿಳಿದಿದ್ದ ಶೈತ್ಯೋಪಚಾರಗಳನ್ನೆಲ್ಲ ಮಾಡಿಸಿ, ಹುಡುಗನಿಗೆ ಜ್ವರ ಅತಿಯಾಗಿರುವುದನ್ನು ತಿಳಿದು ಹಣೆಗೆ ಒದ್ದೆಬಟ್ಟೆ ಇಡಿಸಿದನು. ಸ್ವಲ್ಪ ಹೊತ್ತಿನಲ್ಲಿ ಗಂಗನಿಗೆ ಪ್ರಜ್ಞೆಬಂದು ಕಣ್ಣು ಹೊರಳಿಸಿ, ಅತ್ತ ಇತ್ತ ನೋಡಿದನು.

ಪುಟ್ಟಣ್ಣ ಮೃದು ಧ್ವನಿಯಿಂದ "ಗಂಗಾ! ಗಂಗಾ! ಇವರು ಯಾರೋ? ಇಲ್ಲಿ ನೋಡು! ಇಲ್ಲಿ!" ಎಂದು ಹೂವಯ್ಯನನ್ನು ತೋರಿಸಿದನು.

ಗಂಗ ಗಡಗಡನೆ ನಡುಗುತ್ತ ಕಿಟ್ಟನೆ ಕಿರಿಚಿಕೊಂಡು, ಸೇಸಿಯನ್ನು ಬಲವಾಗಿ ಅಪ್ಪಿ ಹಿಡಿದು "ಇಲ್ಲಾ! ದಮ್ಮಯ್ಯಾ! ನನ್ನ ತಪ್ಪಾಯ್ತು! ನಾನಲ್ಲಾ, ಕಳ್ಳಂಗಡಿ ಚಿಕ್ಕಣ್ಣಾ!! ಅಯ್ಯೋ ಅವ್ವಾ! ಬಿಡಿಸೇ ಬಿಡಿಸೇ! ಸತ್ತೇ! ಸತ್ತೇ!!" ಎಂದು ಮತ್ತೆ ಮೈಮರೆತನು. ಕಟಬಾಯಿಯಿಂದ ರಕ್ತವೂ ಸೋರಿತು!

ಹೂವಯ್ಯ ಪುಟ್ಟಣ್ಣನ ಕಡೆ ತಿರುಗಿ "ಏನದು? ಕಳ್ಳಂಗಡಿ ಚಿಕ್ಕಣ್ಣಾ ಅಂತಾನಲ್ಲಾ?" ಎಂದನು.

ಬೈರ ಉತ್ತರವಾಗಿ "ಏನೋ ನೋಡಿ. ನಂಗೊಂದೂ ಗೊತ್ತಾಗಾದಿಲ್ಲ. ಆವಾಗಿನಿಂದ ಅದೇ ಮಾತು ಹೇಳ್ತಾನೆ! ಅವರನ್ನೇ ಕರೆಸಿ ಇಚಾರಿಸಿದ್ರೆ ಆಗ್ತಿತ್ತು!" ಎಂದು ಅಳಲಾರಂಭಿಸಿದನು.

"ಆಗಲಿ, ಅವನನ್ನೂ ಕರೆಸಿ ಕೇಳೋಣಂತೆ!—ನೀವೆಲ್ಲ ಸೇರಿ ಇಲ್ಲಿ ಗಲಾಟೆ ಮಾಡಬೇಡಿ. ಅವನನ್ನು ಬೆಚ್ಚಗೆ ಮಲಗಿಸಿ! ನಾನು ಮನೆಗೆ ಹೋಗಿ ಜ್ವರ ಕ್ಕಾಗಿ ಔಷಧಿ ಕಳಿಸ್ತೀನಿ.—ಏ ಬೈರಾ, ಅವನಿಗೆ ಸ್ವಲ್ಪ ಧಾತು ಬಂದಮೇಲೆ 'ದೇವರ ಪ್ರಸಾದ ಕಳಿಸಿಕೊಟ್ಟಿದ್ದಾರೆ. ಏನೂ ಹೆದರೋದು ಬೇಡವಂತೆ' ಎಂದು ತಿಳಿಯುವಂತೆ ಚೆನ್ನಾಗಿ ಸಮಾಧಾನ ಹೇಳಿ, ನಾನು ಹೂವು ವಿಭೂತಿ ಕಳಿಸಿಕೊಡ್ತೀನಲ್ಲ ಅದನ್ನು ಕೊಡು. ಅವನಿಗೆ ನಂಬಿಕೆ ಹುಟ್ಟೋಹಾಗೆ ಮಾಡ್ಬೇಕು; ಕೇಳ್ತೇನು ನಾ ಹೇಳಿದ್ದು?"

"ಆಯ್ತಯ್ಯಾ."

ಹೂವಯ್ಯ ಮನೆಗೆ ಹೋಗಿ, ತಾನು ಹೇಳಿದ್ದಂತೆ ಔಷಧಿಯನ್ನೂ ಪ್ರಸಾದ ವನ್ನೂ ಕಳುಹಿಸಿಕೊಟ್ಟನು. ಆದರೆ ಅವುಗಳಿಂದ ಯಾವ ಪ್ರಯೋಜನವೂ ಆಗಲಿಲ್ಲ. ನಿಂಗನ ತೆಂಗಿನಕಾಯಿಯಿಂದ ಉಂಟಾಗಿದ್ದ ಭಯಂಕರ ಸೂಚನೆ ದೆವ್ವವೆಂದರೆ ಹೆದರಿ ಸಾಯುತ್ತಿದ್ದ ಹುಡುಗನನ್ನು ಹಿಂಡುತ್ತಿತ್ತು.

ಹೂವಯ್ಯ ನಿಂಗನನ್ನು ಚೆನ್ನಾಗಿ ಗದರಿಸಿದನು. ನಿಂಗ ಕಣ್ಣೀರು ಕರೆಯುತ್ತಾ "ಹಿಂಗೆ ಆಗ್ತದೆ ಅಂತಾ ನಂಗೆ ಗೊತ್ತಿರಲಿಲ್ಲಯ್ಯಾ" ಎಂದು ಅಂಗಲಾಚಿ ಬೇಡಿ ಕೊಂಡನು.

ಆದರೆ ಚಂದ್ರಯ್ಯಗೌಡರು ತಮ್ಮ ಆಳಿನ ಪರವಾಗಿ ಮಾತಾಡುತ್ತೇನೆಂದು ಹೂವಯ್ಯನಿಗೆ ಬಾಯಿಗೆ ಬಂದಂತೆ ಹೇಳಿಬಿಟ್ಟರು.

"ನಮ್ಮ ಮನೆ ಆಳನ್ನು ಕೇಳೋಕೆ ನೀನ್ಯಾರು? ಅವನ್ನ ಬೈಯ್ಯೋಕೆ ನಿಂಗೇನು ಹಕ್ಕಿದೆ? ತೆಂಗಿನಕಾಯಿ ಮುಟ್ಟಿಸಿದ ಅಂದ್ರೆ, ಅವನ ವಸ್ತು ಹೋಗಿದ್ದಕ್ಕೆ ಅವನು ಕೆಲಸಮಾಡದೆ ನೀ ಮಾಡಿಕೊಡ್ತೀಯೇನು? ಅಂಥಾ ಹೆದರುಪುಕ್ಕ ನಿನ್ನಾಳು ಕಾಯಿ ಮುಟ್ಟಿದ್ದೇಕೆ?"

ತನ್ನ ಪರವಾಗಿ ಚಂದ್ರಯ್ಯಗೌಡರು ಆಡುತ್ತಿದ್ದ ಮಾತುಗಳನ್ನು ಕೇಳಿ ನಿಂಗ ನಿಗೂ ಕೂಡ ಇಸ್ಸಿ ಅನ್ನಿಸಿತು.

ಹೂವಯ್ಯನೂ ಕುಪಿತನಾಗಿ ಹಿಂತಿರುಗಿ ನಾಲ್ಕು ಮಾತು ಚೆನ್ನಾಗಿ ಆಡಿ ಬಿಟ್ಟನು. ತಾನೂ ದೆವ್ವದ ಶಕ್ತಿಯನ್ನು ಚಂದ್ರಯ್ಯಗೌಡರಮೇಲೆ ಪ್ರಯೋಗಿ ಗಿಸುತ್ತೇನೆ ಎಂದೂ ಹೇಳಿಬಿಟ್ಟನು!

ದೆವ್ವವೆಂದರೆ ಭಯಪಡುತ್ತಿದ್ದ ಗೌಡರು ರೇಗಿ ಕೂಗಿ "ನಿನ್ನ ಅಜ್ಜ ಬರಬೇಕು, ನನ್ನೊಂದು ರೋಮ ಹರೀಬೇಕಾದ್ರೆ! ಭೂತಕ್ಕೆ ಹರಸಿದ್ದ ಹೋತನ್ನ ಹರಕೆಗೆ ಬಿಡದೆ ಇಟ್ಟುಕೊಂಡ ನಿನಗೆ ನೀರು ಕುಡಿಸದೆ ಬಿಟ್ರೆ ಕೇಳು ಆಮೇಲೆ ನಮ್ಮ ಭೂತ್ರಾಯ! ಆ ಪೆಟ್ಟಲ್ದೆ ಮತ್ತೇನು ಗಂಗಹುಡುಗಗೆ ಈಗ? ನಿನಗೇ ಬರಬೇಕಾಗಿತ್ತು. ನಿನ್ದೆಸೆಯಿಂದ ಆ ಬಡ ಮುಂಡೇ ಕುರುದೆಗೆ ಪ್ರಾಣಕ್ಕೆ ಬಂತು... ತಪ್ಪು ತನ್ದೇ ಆಗಿಕೊಂಡು ಈಗ ಯಾರ್‍ಯಾರ ಮೇಲೆಲ್ಲಾ ರೇಗಿದ್ರೆ ಕೇಳೋರ್‍ಯಾರು?" ಎಂದು ಮೊದಲಾಗಿ ವಿಷ ಕಾರಿಬಿಟ್ಟರು.

ಆ ದಿನ ಮಧ್ಯರಾತ್ರಿ ಕಾನೂರು ಮನೆಯಲ್ಲಿ ಎಲ್ಲರೂ ಗಾಢನಿದ್ರೆಯಲ್ಲಿದ್ದಾಗ ಬೈರ ಹೃದಯವೊಡೆಯುವ ರೀತಿಯಲ್ಲಿ ಬಾಯಿ ಬಾಯಿ ಹೊಡೆದುಕೊಳ್ಳುತ್ತ ಎದೆಯೆದೆ ಬಡಿದುಕೊಳ್ಳುತ್ತ ಅಲ್ಲಿಗೆ ಬಂದನು. ಮಲಗಿದ್ದವರೆಲ್ಲರೂ ದಿಗಿಲು ಬಿದ್ದು ಎದ್ದರು.

ಪುಟ್ಟಣ್ಣ ಹೆಬ್ಬಾಗಿಲು ತೆರೆದೊಡನೆಯೆ ಬೈರ ನೆತ್ತರು ಹೆಪ್ಪುಗಡುವಷ್ಟು ಭಯಂಕರವಾಗಿ ರೋದಿಸುತ್ತಾ ಒಳನುಗ್ಗಿ "ಅಯ್ಯೋ! ನಿಂಗಯ್ಯಾ, ನನ್ನ ಮಗ ನಿಮಗೇನು ಮಾಡಿದ್ದನ್ರೋ? ಅಯ್ಯೋ! ನಾ ಕೆಟ್ಟೆ! ಅಯ್ಯಾ! ಹೂವಯ್ಯಾ! ನನ್ನ ಮಗನ ಕಾಪಾಡಿರೋ!" ಎಂದು ಕೂಗ ತೊಡಗಿದನು.

ಹೂವಯ್ಯ ಅವನನ್ನು ಕೈಹಿಡಿದು ನಡಸಿಕೊಂಡು ಬೇಲರ ಕೇರಿಗೆ ನಡೆದನು. ಪುಟ್ಟಣ್ಣ ರಾಮಯ್ಯರೂ ಜೊತೆ ಹೋದರು. ಹೋಗಿ ನೋಡುವಲ್ಲಿ ಗೋಳಿಡುತ್ತಾ ನೆರೆದಿದ್ದ ಕೇರಿಯುವರ ಮಧ್ಯೆ, ಹರಳೆಣ್ಣೆ ಹಣತೆಯ ದೀಪದ ಮಬ್ಬು ಕೆಂಬೆಳಕಿನಲ್ಲಿ, ಗಂಗಹುಡುಗನ ಮೃತ ಕಳೇಬರ ಕಂಬಳಿಯಲ್ಲಿ ಮುಚ್ಚಿ ಬಿದ್ದಿತ್ತು.

## ೪೪

## ಹೂವಯ್ಯ ಕಾನೂರು ಮನೆಯನ್ನು ಬಿಟ್ಟು ಹೋದುದು

ಮಳೆ ಹಿಡಿಯಿತು. ಮುಂಗಾರಿನ ಪ್ರಾರಂಭದಲ್ಲಿ ಹಠಾತ್ತಾಗಿ ಕಾಣಿಸಿಕೊಂಡು, ಆಕಾಶವನ್ನೆಲ್ಲ ಆಚ್ಛಾದಿಸಿ, ಮಿಂಚು ಗುಡುಗು ಸಿಡಿಲು ಬಿರುಗಾಳಿಗಳ ರುದ್ರ ಪರಿವಾರದೊಡನೆ ಬಂದು, ಬಿರುಮಳೆಗರೆದು, ತುಸು ಹೊತ್ತಿನಲ್ಲಿ ಕಣ್ಮರೆಯಾಗಿ ನೀಲಾಕಾಶವನ್ನೂ ಸೂರ್ಯನ ಸ್ವಚ್ಛತರ ಕಿರಣ ಸಂಕುಲವನ್ನೂ ಮರಳಿ ತೋರಿಸುತ್ತಿದ್ದ ಮೇಘರಾಶಿ ನೀರವವಾಗಿ, ಅನವರತವೂ ಆಕಾಶವನ್ನೆಲ್ಲ ಕವಿದು ಮುಚ್ಚಿ, ದಿನದಿನಗಳ ವರೆಗೆ ಸೂರ್ಯನಿದ್ದಾನೆ ಎಂಬ ಕುರುಹನ್ನೂ ತೋರ ಗೊಡದೆ, ಹಗಲಿರುಳೂ ಒಂದೇ ಸಮನಾಗಿ ಜಡಿಮಳೆಯನ್ನು ಹುಯ್ಯತೊಡ ಗಿತ್ತು. ನಾಡು ಕಾಡು ಬೆಟ್ಟ ಬಯಲುಗಳೆಲ್ಲವೂ ವರ್ಷಧಾರೆಗಳಿಂದ ನೆಯ್ದ ತೆಳುವಾದ ನಸುಬಿಳಿಯ ಪರದೆಯೊಳಗೆ ಜೋಂಪಿಸುವಂತಿದ್ದುವು. ಬೇಸಗೆ ಯಲ್ಲಿ ಬತ್ತಿದ್ದ ತೊರೆಗಳೆಲ್ಲವೂ ಸಜೀವವಾಗಿ ಕಲನಾದದಿಂದ ಪ್ರವಹಿಸತೊಡ ಗಿದ್ದುವು. ಹಾದಿಗಳೆಲ್ಲ ಕೆಸರಾಗಿ ಯಾವಾಗಲೂ ನೀರು ಮಿಜಿಗುಟ್ಟುತ್ತಿತ್ತು. ನೆಲವೆಲ್ಲ ಸರ್ವದಾ ಜಲಮಯವಾಗಿತ್ತು. ತೋಟದ ಕಪ್ಪುಗಳಲ್ಲಿಯೂ ಗದ್ದೆಯ ಒಡಗುಗಳಲ್ಲಿಯೂ ನೀರು ಹಸುಳೆಯಂತೆ ಯಾವಾಗಲೂ ಗಳಹುತ್ತ ತೊದಲುತ್ತ ಪರಿದಾಡುತ್ತಿತ್ತು. ಎರಡು ತಿಂಗಳ ಹಿಂದೆ ಬೋಳು ಬೆತ್ತಲೆ ಯಾಗಿ ಒಣಗಿದ್ದ ಗದ್ದೆಯ ಕೋಗುಗಳು ಇಂದು ಬತ್ತದ ಸೊಸಿಗಳಿಂದಲೂ ಕಟ್ಟಿ ನಿಲ್ಲಿಸಿದ ನೀರಿನಿಂದಲೂ ಕಳಕಳಿಸಿ ನಗುತ್ತಿದ್ದುವು. ಸುತ್ತಲೂ ಬೆಟ್ಟ ಗಾಡುಗಳಿದ್ದು, ನಡುವೆ ಕಣಿವೆಗಳಲ್ಲಿ ಅಗಲವಾಗಿ ಹಬ್ಬಿ ಬೆಳೆದಿದ್ದ ಎಳಸಸಿಯ ಗದ್ದೆಯ ಕೋಗಿನ ಕೋಮಲವಾದ ಹಸುರು, ಕಣ್ಣಿಗೆ ನಲ್ಮೆಯನ್ನೂ ಮನಸ್ಸಿಗೆ ಆಹ್ಲಾದವನ್ನೂ ಆತ್ಮಕ್ಕೆ ಶಾಂತಿಯನ್ನೂ ಮೆತ್ತುವಂತಿತ್ತು.

ಜನರೆಲ್ಲರೂ ಬೇಸಗೆಯ ಸೋಮಾರಿತನವನ್ನು ಕೊಡಹಿ ಎಚ್ಚತ್ತು ಕಾರ್ಯ ಶೀಲರಾಗಿದ್ದರು. ಕೆಲವರಿಗೆ ಜಗಳಕ್ಕೂ ಚಾಡಿಗೂ ಮನಸ್ಸಿದ್ದರೂ ಪುರಸತ್ತಿರ ಲಿಲ್ಲ. ಬೆಳಿಗ್ಗೆ ಗಂಜಿಯುಂಡು, ಮಧ್ಯಾಹ್ನ ಹನ್ನೆರಡು ಅಥವಾ ಒಂದು ಗಂಟೆಯುವರೆಗೆ ಚೆನ್ನಾಗಿ ದುಡಿದು, ನಡುವೆ ಹಲಸಿನಕಾಯಿ ಅಥವಾ ಹಣ್ಣು ಗಳನ್ನು ತಿಂದು, ಮಧ್ಯಾಹ್ನದ ಊಟ ಪೂರೈಸಿದೊಡನೆ ಮತ್ತೆ ಗದ್ದೆಗೆ ಇಳಿದು, ಸಾಯಂಕಾಲದವರೆಗೂ, ಜಡಿಮಳೆಯಲ್ಲಿ ಕಂಬಳಿಕೊಪ್ಪೆಯ ಗಂಡಸರೂ ಗೊರಬು ಸೂಡಿದ ಹೆಂಗಸರೂ ಗೆಯ್ದು ಗೆಯ್ದು ದಣಿದು, ಮನೆಗೆ ಬರುವುದೇ ತಡ

ಉಂಡು ಹಾಸಗೆ ಹಿಡಿಯುತ್ತಿದ್ದರು. ಹೀಗೆ ವಿರಾಮವಿಲ್ಲದಿದ್ದುದರಿಂದಲೂ ದುಡಿದು ದಣಿಯುತ್ತಿದ್ದುದರಿಂದಲೂ ಕಷ್ಟಮಾಡುವವರ ಮನಸ್ಸು ಕತ್ತಲೆಯ ಮೋಹಕ್ಕೆ ಒಳಗಾಗದಿರುವುದು ಸ್ವಾಭಾವಿಕವಾದ್ದರಿಂದಲೂ, ಬೇಸಗೆಗೆ ಹೋಲಿಸಿ ನೋಡಿದರೆ, ಮಳೆಗಾಲದಲ್ಲಿ ನಾಡಿನ ಜೀವನ ನೆಮ್ಮದಿಯಾಗಿದೆ ಎಂದು ಹೇಳಬಹುದಾಗಿತ್ತು.

ಸ್ವಲ್ಪ ವಿರಾಮವಿದ್ದವರಿಗೂ ಕೂಡ ಗದ್ದೆಗೆ ಕೂಣಿಹಾಕುವುದು, ಹಳ್ಳದ ಕಟ್ಟಿಗೆ ಹೆಗ್ಗೂಣಿ ಕಟ್ಟುವುದು, ಮಳೆ ಜೋರಾದ ರಾತ್ರಿಗಳಲ್ಲಿ ದೊಂದಿ ಲಾಟೀನು ಮೊದಲಾದ ದೀಪ ಸೌಕರ್ಯಗಳನ್ನು ಹಿಡಿದುಕೊಂಡು ಹೋಗಿ ಬಯಲು ಜಡ್ಡುಗಳಿಗೆ ಹತ್ತಿಬರುತ್ತಿದ್ದ 'ಹತ್ತುಮೀನು' ಗಳನ್ನು ಕಡಿಯುವುದು ಮುಂತಾದ ಸಾಹಸದ ಉದ್ಯೋಗಗಳಿದ್ದುದರಿಂದ ಅವರೂ ಬೇರೆಯ ರೀತಿಯಲ್ಲಿ ಇತರರಂತೆಯೆ ದುಡಿದು ದಣಿಯುತ್ತಿದ್ದರು.

ಸೇರೆಗಾರ ರಂಗಪ್ಪಸೆಟ್ಟರೂ ಅವರ ಆಳುಗಳೂ ವರ್ಷ ವರ್ಷದ ಪದ್ಧತಿಯಂತೆ ಗಟ್ಟದ ಕೆಳಗಿದ್ದ ತಮ್ಮ 'ದೆಯ್ಯ ದ್ಯಾವರು' ಗಳಿಗೆ ಹರಕೆಯನ್ನೊಪ್ಪಿಸಲೆಂದೂ ಊರಿಗೆ ಹೋಗಿ ಬಂಧುಗಳನ್ನೂ ಅಲ್ಲಿಯ ಕೆಲಸಕಾರ್ಯಗಳನ್ನೂ ನೋಡಿಕೊಂಡು ಬರಲೆಂದೂ ಗಟ್ಟದ ಕೆಳಗೆ ಹೋಗಿದ್ದವರು ಇನ್ನೂ ಬಂದಿರಲಿಲ್ಲ. ಚಂದ್ರಯ್ಯಗೌಡರು ದಿನದಿನವೂ ಅವರನ್ನು ನಿರೀಕ್ಷಿಸುತ್ತಾ, ಬೇಲರ ಕೈಯಲ್ಲಿಯೆ ಆದಷ್ಟು ಕೆಲಸಮಾಡಿಸುತ್ತಿದ್ದರು. ಅವರ ಆ ಉತ್ಕಂಠಿತ ನಿರೀಕ್ಷೆಗೆ ಮನೆಯ ಕೆಲಸಕಾರ್ಯಗಳ ನಿರ್ವಾಹ ಮಾತ್ರವಲ್ಲದೆ ಗಂಗೆಯ ವಿಯೋಗವೂ ಪ್ರಬಲ ಕಾರಣವಾಗಿತ್ತು.

ಹೂವಯ್ಯ ನಾಗಮ್ಮನವರು ಪುಟ್ಟಣ್ಣ ಬೈರ ಸೇಸಿ ಇವರ ಸಹಾಯದಿಂದಲೂ, ಸೀತೆಮನೆ ಸಿಂಗಪ್ಪಗೌಡರು ಆಗಾಗ್ಗೆ ಕಳುಹಿಸುತ್ತಿದ್ದ ಒಬ್ಬಿಬ್ಬರು ಕೂಲಿಯಾಳುಗಳ ನೆರವಿನಿಂದಲೂ, ತನ್ನ ಪಾಲಿಗೆ ಬಂದಿದ್ದ ಗದ್ದೆ ತೋಟಗಳಲ್ಲಿ ಮಾಡಬೇಕಾಗಿದ್ದ ಕಾಮಗಾರಿಗಳನ್ನೆಲ್ಲ ಮನಸ್ಸಿಟ್ಟು ಮಾಡಿಸುತ್ತಿದ್ದನು. ಕರ್ಮರಂಗದಲ್ಲಿ ತಾನಷ್ಟು ಜಯಶೀಲನಾಗುತ್ತಿದ್ದುದು ಅವನಿಗೇ ಆಶ್ಚರ್ಯಕರವಾಗಿ ತೋರುತ್ತಿತ್ತು.

ನಾಗಮ್ಮನವರಿಗೆ ವಯಸ್ಸಾಗಿದ್ದರೂ ಕೂಡ, ಮನೆಯಲ್ಲಿ ಅಡುಗೆಯ ಕಾರ್ಯವನ್ನು ಸಾಂಗವಾಗಿ ಮಾಡಿಟ್ಟು, ಮಗನ ಮೇಲಣ ಪ್ರೀತಿ ನೀಡಿದ ಉತ್ಸಾಹ ಶಕ್ತಿಗಳಿಂದ ಪ್ರೇರಿತರಾಗಿ, ಗದ್ದೆಗೂ ಹೋಗಿ, ಸಸಿ ಕೀಳುವುದು, ನೆಡುವುದು ಮುಂತಾದ ಕಾರ್ಯಗಳಲ್ಲಿ ಮಗ್ನರಾಗಿದ್ದರು. ಹೂವಯ್ಯ 'ಗದ್ದೆಗೆ ಬಂದು ಮಳೆಯಲ್ಲಿಯೂ ಚಳಿಯಲ್ಲಿಯೂ ಕೆಲಸ ಮಾಡುವುದು ಬೇಡ' ಎಂದು ಎಷ್ಟು ಹೇಳಿದರೂ ಅವರು ಬೇರೆ ಕೇಳುತ್ತಿರಲಿಲ್ಲ. ತಾಯಿ ಗೊರಬು ಸೂಡಿಕೊಂಡು

ಸೇಸಿಯ ಜೊತೆಯಲ್ಲಿ ಸಸಿ ನೆಡುತ್ತಿದ್ದುದನ್ನು ಕಂಡು ಎಷ್ಟೋ ಸಾರಿ ಅವನಿಗೆ ಕಣ್ಣೀರು ಬರುತ್ತಿತ್ತು. ಆ ಕಣ್ಣೀರಿನಲ್ಲಿ ತಾಯಿ ಕಷ್ಟಪಡುತ್ತಿದ್ದಾಳಲ್ಲಾ ಎಂಬ ದುಃಖವೂ ತನಗೆ ಇಂತಹ ತಾಯಿ ಇದ್ದಾಳಲ್ಲಾ ಎಂಬ ಹೆಮ್ಮೆಯಿಂದ ಮೂಡುವ ಸುಖವೂ ಎರಡೂ ಸೇರಿರುತ್ತಿತ್ತು.

ಸುಬ್ಬಮ್ಮ ಪುಟ್ಟಮ್ಮ ಇವರು ಮನೆಯಲ್ಲಿ ಬೆಚ್ಚಗಿರುವುದನ್ನು ನೆನೆದು ನಾಗಮ್ಮನವರಿಗೆ ಆಗಾಗ ಮನಸ್ಸು ನೋಯುತ್ತಿದ್ದರೂ ಮಗನನ್ನು ನೋಡುವ ಸಂಭ್ರಮದಲ್ಲಿ ಅದೆಲ್ಲ ಮರೆತುಹೋಗುತಿತ್ತು.

ಉಳುವುದು ಬಿತ್ತುವುದು ಇಂತಹ ಪ್ರಯೋಜನದ ಕಾರ್ಯಗಳಲ್ಲಿ ಬಹು ಸೋಮಾರಿಯೆಂದು ಹೆಸರುಗೊಂಡಿದ್ದ ಪುಟ್ಟಣ್ಣನಂತೂ ಕಂಡವರೆಲ್ಲ ಬೆರಗಾಗುವಂತೆ ಹೂವಯ್ಯನೊಡನೆ ಕೆಲಸ ಮಾಡುತ್ತಿದ್ದನು. ಹೂವಯ್ಯ ಕಥೆ ಹೇಳುವುದು, ಪದ್ಯ ಹಾಡುವುದು, ವಿನೋದವಾಡುವುದು ಮೊದಲಾದುವುಗಳಿಂದ ತನ್ನೊಡನೆ ಕೆಲಸ ಮಾಡುವವರೆಲ್ಲರನ್ನೂ ಉತ್ಸಾಹಗೊಳಿಸುತ್ತಿದ್ದನು. ಎಷ್ಟೋ ಸಾರಿ ದೂರದ ಗದ್ದೆಗಳಲ್ಲಿ ಚಂದ್ರಯ್ಯಗೌಡರ ಮೇಲ್ವಿಚಾರಣೆಯಲ್ಲಿ ಇತರ ಆಳುಗಳೊಡನೆ 'ಬಿಂ' ಎಂದು ಕೆಲಸ ಮಾಡುತ್ತಿದ್ದ ರಾಮಯ್ಯ ಮಳೆಯ ಸದ್ದನ್ನೂ ಮೀರಿ ತಮ್ಮಲ್ಲಿಗೆ ತೆರೆತೆರೆಯಾಗಿ ಬರುತ್ತಿದ್ದ ಹೂವಯ್ಯನ ಮತ್ತು ಆತನೊಡನೆ ಕೆಲಸ ಮಾಡುತ್ತಿದ್ದವರ ನಗೆಯನ್ನು ಆಲೈಸಿ ಕರುಬುತ್ತಿದ್ದನು. ಅಂತಹ ಸಮಯಗಳಲ್ಲಿ ತಪ್ಪದೆ ಚಂದ್ರಯ್ಯಗೌಡರು ಹೂವಯ್ಯ ಅಥವಾ ನಾಗಮ್ಮನವರ ವಿಚಾರವಾಗಿ ಅನುದಾರವಾದ ಟೀಕೆಗಳನ್ನು ಮಾಡದೆ ಬಿಡುತ್ತಿರಲಿಲ್ಲ.

ಆದಷ್ಟು ಅವಕಾಶಗಳನ್ನು ಕಲ್ಪಿಸಿಕೊಂಡು ದಾಯಾದಿಗಳಿಗೆ ತೊಂದರೆ ಕೊಡಬೇಕು ಎಂಬ ಗೀಳು ಹಿಡಿದಿತ್ತು ಚಂದ್ರಯ್ಯಗೌಡರಿಗೆ.

ಅಂತೂ ಅವರ ಹಟಸಾಧನೆ ಬಹುಮಟ್ಟಿಗೆ ಕೈಗೂಡಿತು. ಹೂವಯ್ಯ ಹೆಚ್ಚುಕಾಲ ಕಾನೂರಿನಲ್ಲಿ ವಾಸಿಸಲಾಗಲಿಲ್ಲ.

ಮನೆ ಹಿಸ್ಸೆಯಾದ ದಿನ ಮೊದಲ್ಗೊಂಡು ಚಂದ್ರಯ್ಯಗೌಡರ ಕಿರುಕುಳ ತಪ್ಪಲಿಲ್ಲ. ಕೂತರೆ ನಿಂತರೆ ತಪ್ಪು ಕಂಡುಹಿಡಿದು ಮೈಮೇಲೆ ಬರುತ್ತಿದ್ದರು. ಹೂವಯ್ಯನ ದನವೊಂದು ತಮ್ಮ ತೋಟಕ್ಕೆ ನುಗ್ಗಿತೆಂದು, ಹೂವಯ್ಯನ ನಾಯಿ ತಮ್ಮ ನಾಯಿಯನ್ನು ಮುರಿಯಿತೆಂದು, ಹೂವಯ್ಯನ ಕೋಳಿ ತಮ್ಮ ಜಗಲಿಯ ಮೇಲೆ ಅಸಹ್ಯಮಾಡಿತೆಂದು, ತಮ್ಮ ಕಟ್ಟಿಗೆ ರಾಶಿಯಿಂದ ಹೂವಯ್ಯನ ಕಡೆಯವರಾರೋ ಕಟ್ಟಿಗೆ ಕದ್ದಿದ್ದಾರೆ ಎಂದು, ತಮ್ಮ ವೀಳೆಯದೆಲೆಯ ಹಂಬಿನಿಂದ ಹೂವಯ್ಯನಾಳು ಬೈರ ಎಲೆ ಕದ್ದಿದ್ದಾನೆ ಎಂದು, ತಾವು ಊಟಕ್ಕೆ

ಹೋದಾಗಲೆಲ್ಲ ನಾಗಮ್ಮನವರು ಬೇಕೆಂತಲೆ ಅವರ ಅಡುಗೆಮನೆಯಲ್ಲಿ ಹೊಗೆ ಹಾಕಿ ತಮ್ಮ ಊಟದ ಮನೆಗೆ ಅದನ್ನು ಎಬ್ಬಿಸುತ್ತಾರೆ ಎಂದು, ತಮ್ಮ ಹಿತ್ತಲಿನಿಂದ ನಾಗಮ್ಮನವರು ತರಕಾರಿ ಕದಿಯುತ್ತಾರೆ ಎಂದು, — ಹೀಗೆ ನೂರಾರು ನೆವಗಳನ್ನು ನಿರ್ಮಿಸಿಕೊಂಡು ಬೈದಾಡುತ್ತಿದ್ದರು. ಹೂವಯ್ಯ ಒಮ್ಮೊಮ್ಮೆ ಪ್ರತೀಕಾರಮಾಡಿ ನೋಡಿದನು. ಆದರೆ ಅದರಿಂದ ಚಂದ್ರಯ್ಯಗೌಡರ ಸಣ್ಣಬುದ್ಧಿಯೂ ಜಿದ್ದೂ ಬೆಳೆಯುತ್ತಲೆ ಹೋಗುತ್ತಿದ್ದುದನ್ನು ಕಂಡು ನಿರಾಶನಾದನು.

ಹೂವಯ್ಯನಿಗೂ ಅವನ ಮನೆಯವರಿಗೂ ತೊಂದರೆ ಕೊಡುವ ಮಾತು ಹಾಗಿರಲಿ. ತಾವು ವರ್ತಿಸುತ್ತಿದ್ದಂತೆ ತಮ್ಮ ಮನೆಯವರು ಅವರನ್ನು ದ್ವೇಷಿಸುತ್ತಿಲ್ಲವಲ್ಲಾ ಎಂದು ಅವರೆಲ್ಲರನ್ನೂ ಕಾಡಿಸುತ್ತಿದ್ದರು.

ವಾಸುವಲ್ಲಿಯಾದರೂ 'ಆಚೆಮನೆ'ಗೆ ಹೋಗಿದ್ದುದನ್ನು ಕಂಡರೆ ಚೆನ್ನಾಗಿ ಬೈದು ಕಿವಿ ಹಿಂಡುತ್ತಿದ್ದರು. ಒಂದು ಸಾರಿ ನಾಗಮ್ಮನವರು ಕೊಟ್ಟ ತಿಂಡಿಯನ್ನು ಅವನು ಬಾಗಿಲ ಸಂದಿಯಲ್ಲಿ ಕದ್ದು ನಿಂತುಕೊಂಡು ತಿನ್ನುತ್ತಿದ್ದುದು ಚಂದ್ರಯ್ಯಗೌಡರ ಕಣ್ಣಿಗೆ ಬಿದ್ದಾಗ ಅವರು ಅವನ ಕೈಲಿದ್ದ ತಿಂಡಿಯನ್ನು ಮಾತ್ರವಲ್ಲದೆ ಬಾಯಲ್ಲಿದ್ದುದನ್ನೂ ಬೆರಳು ಹಾಕಿ ತೆಗೆದು ಬಿಸಾಡಿ, ಬೆನ್ನಿನ ಮೇಲೆ ನಾಲ್ಕು ಗುದ್ದು ಹಾಕಿ, ಇನ್ನೆಂದೆಂದಿಗೂ ಹಾಗೆ ಮಾಡದಿರಲಿ ಎಂದು 'ಸಿದ್ದೆಗುಮ್ಮ' ಮಾಡಿದರು.

ಸಿದ್ದೆಗುಮ್ಮ ಎಂದರೆ, ಒಂದು ಬಿದಿರಿನ ಸಿದ್ದೆಯಲ್ಲಿ ಎಂದರೆ ಅಳತೆಯ ಪಾತ್ರೆಯಲ್ಲಿ ಒಣಮೆಣಸಿನಕಾಯಿಗೆ ಉರಿಯುವ ಕೆಂಡವನ್ನು ಹಾಕಿ, ಅದನ್ನು ಮೂಗಿಗೆ ಒತ್ತಿ ಹಿಡಿದು, ಬಾಯಲ್ಲಿ ಉಸಿರೆಳೆದುಕೊಳ್ಳದಂತೆ ಅದನ್ನೂ ಕೈಯಿಂದ ಒತ್ತಿ ಹಿಡಿಯುತ್ತಾರೆ. ಮೆಣಸಿನಕಾಯಿನ ಹೊಗೆ ಮೂಗಿಗೂ ಶ್ವಾಸಕೋಶಕ್ಕೂ ಹೋಗಿ ಪ್ರಾಣ ಹೋಗುವಂತಾಗುತ್ತದೆ!

ಇನ್ನೊಂದು ಸಾರಿ ಪುಟ್ಟಮ್ಮ 'ಆಚೆಮನೆ'ಗೆ ಹೋಗಿ ದೊಡ್ಡಮ್ಮನೊಡನೆ ಸಲ್ಲಾಪ ಮಾಡುತ್ತಿರಲು ಚಂದ್ರಯ್ಯಗೌಡರು ಆಕೆಯನ್ನು ಕರೆದು ಬಾಯಿಗೆ ಬಂದಂತೆ 'ಮಿಂಡನ್ನ ಹುಡುಕಿಕೊಂಡು ಹೋಗೋ ಜಾತಿ' ಎಂದು ಮೊದಲಾಗಿ ಅಶ್ಲೀಲವಾಗಿ ಅಂದರು. ಹಾಗೆಯೇ ಮತ್ತೊಮ್ಮೆ ನಾಗಮ್ಮನವರು ಕೊಟ್ಟಿದ್ದ ಕೊಚ್ಚಲಿಮೀನಿನ ಪಲ್ಯವನ್ನು ಸುಬ್ಬಮ್ಮ ತಮಗೆ ಬಡಿಸಿರಲು ಊಟ ಮಾಡುತ್ತಿದ್ದ ಚಂದ್ರಯ್ಯಗೌಡರಿಗೆ ಸಂಶಯ ತೋರಿ 'ಕೊಚ್ಚಲಿ ಮೀನು ಎಲ್ಲಿತ್ತು?' ಎಂದು ಪ್ರಶ್ನಿಸಿದರು. ಆದಿನ ಬೆಳಿಗ್ಗೆ ನಿಂಗ ತಮ್ಮ ಗದ್ದೆಯ ಕೂಣಿಗಳಿಂದ ಮೀನು ತರುತ್ತಿದ್ದಾಗ ಬುಟ್ಟಿಯನ್ನು ಪರೀಕ್ಷಿಸಿ ನೋಡಿದ್ದ ಚಂದ್ರಯ್ಯಗೌಡರಿಗೆ

'ಬೆಳಿಗ್ಗೆ ನಿಂಗ ತಂದಿದ್ದು' ಎಂದು ಹೇಳಿದ ಸುಬ್ಬಮ್ಮನ ಮಾತು ಸುಳ್ಳು ಎಂಬುದು ಗೊತ್ತಾಗಿ 'ಎಲ್ಲಿತ್ತು? ಹೇಳ್ತೀಯೋ ಇಲ್ಲೋ?' ಎಂದು ಕಣ್ಣು ಕೆಂಪಗೆ ಮಾಡಿಕೊಂಡು ಗರ್ಜಿಸಿದರು. ಚಂದ್ರಯ್ಯಗೌಡರು ಕಣ್ಣು ಕೆಂಪಗೆಮಾಡಿದರೆ ಎಂಥವರಿಗೂ ಭೀತಿಯಾಗುತ್ತಿತ್ತು. ಸುಬ್ಬಮ್ಮ ಭಯ ದಿಂದ ನಡುಗುತ್ತಾ ಸತ್ಯವನ್ನೇ ಹೇಳಿಬಿಟ್ಟಳು. ಗೌಡರು ಊಟದ ಎಲೆಯನ್ನು ಎಳೆದು ಬಿಸಾಡಿ, ಹೆಂಡತಿಯನ್ನು ಕೈಸೋಲುವವರೆಗೂ ಹೊಡೆದು ಕುತ್ತಿಗೆ ಹಿಡಿದು ಅಂಗಳಕ್ಕೆ ನೂಕಿ 'ಹೋಗು ನಿನ್ನಪ್ಪನ ಮನೆಗೆ! ನನ್ನ ಮನೇಲಿರ ಬೇಡ' ಎಂದು ಭಯಂಕರವಾಗಿ ವರ್ತಿಸಿದರು. ಸುಬ್ಬಮ್ಮ ಊಟವಿಲ್ಲದೆ ಮನೆಯ ಹೊರಗಡೆ ಕುಳಿತು ಹಗಲೆಲ್ಲಾ ಅತ್ತು ಅತ್ತು, ರಾತ್ರಿ ನಾಗಮ್ಮನವರ ಬಲಾತ್ಕಾರದಿಂದ ಅವರ ಮನೆಗೆ ಹೋಗಿ ಕಣ್ಣೀರಿನಲ್ಲಿಯೆ ಅನ್ನ ಕಲಸಿಕೊಂಡು ಊಟಮಾಡಿ ಅಲ್ಲಿಯೇ ಮಲಗಿಕೊಂಡಳು. ಆ ವಿಷಯ ಗೌಡರಿಗೆ ತಿಳಿದೊಡ ನೆಯೆ ಅವರು ರಣಪಿಶಾಚಿಯಂತಾದರು.

ಹುಡುಗಿಯನ್ನು ಮದುವೆಯಾಗಿದ್ದ ಆ ಮುದುಕನಿಗೆ ಮೊದಲೇ ಸಂಶಯ ಪಿಶಾಚಿ ಅಮರಿತ್ತು. ಅದರಲ್ಲಿಯೂ ಹೂವಯ್ಯನ ಪರವಾಗಿ ಸುಬ್ಬಮ್ಮ ತೋರಿಸುತ್ತಿದ್ದ ಆದರವನ್ನು ಚಂದ್ರಯ್ಯಗೌಡರು ವಿಪರೀತವಾಗಿ ಅರ್ಥಮಾಡಿ ಕೊಂಡಿದ್ದರು. ಮನೆ ಹಿಸ್ಸೆಯಾಗುವುದಕ್ಕೆ ಅದೂ ಒಂದು ಪ್ರಬಲವಾದ ಕಾರಣವಾಗಿತ್ತು. ಮನೆ ಹಿಸ್ಸೆಯಾದ ಮೇಲಂತೂ ಸಂಶಯಪಿಶಾಚ ಸಾವಿ ರಾರು ರೂಪಗಳನ್ನು ತಾಳಿತ್ತು. ಒಮ್ಮೊಮ್ಮೆ ತಮ್ಮ ಸ್ವಂತ ಮಗ ರಾಮಯ್ಯ ನನ್ನೂ ಸಂಶಯದೃಷ್ಟಿಯಿಂದ ನೋಡತೊಡಗಿದ್ದರು. ಸುಬ್ಬಮ್ಮನನ್ನಂತೂ ಕಣ್ಣಿನ ಮೇಲೆ ಕಣ್ಣಿಟ್ಟು ಪರೀಕ್ಷಿಸುತ್ತಿದ್ದರು.

ಯಾವಾಗ ಸುಬ್ಬಮ್ಮ 'ಆಚೆಮನೆ'ಯಲ್ಲಿ ರಾತ್ರಿಯನ್ನು ಕಳೆದಳೆಂದು ಗೊತ್ತಾಯಿತೋ ಚಂದ್ರಯ್ಯಗೌಡರ ಕಲ್ಪನೆ ಅವರಲ್ಲಿ ಅದುವರೆಗೆ ಭಯಗಳಂತಿ ದ್ದವುಗಳನ್ನೆಲ್ಲ ವಾಸ್ತವವಾಗಿ ಚಿತ್ರಿಸಿತು. ಹೆಂಡತಿಯನ್ನು ಮನೆಯಲ್ಲಿ ಸೇರಿಸಿ ಕೊಳ್ಳುವುದೇ ಇಲ್ಲವೆಂದು ಸಾರಿಬಿಟ್ಟರು. ನೆಲ್ಲುಹಳ್ಳಿಯ ಪೆದ್ದೇಗೌಡರು ಮುತ್ತಳ್ಳಿ ಶ್ಯಾಮಯ್ಯಗೌಡರು ಮೊದಲಾದ ಗೌಡರುಗಳು ಬಂದು ಸಮಾಧಾನ ಹೇಳಿ, ಸುಬ್ಬಮ್ಮ ಪರಿಶುದ್ಧಳೆಂದು ಸಾಧಿಸದಿದ್ದರೆ ಅವಳ ಗತಿ ಕಾಡುಪಾಲಾಗು ತ್ತಿತ್ತು!

ಎಲ್ಲ ಕೋಟಲೆಗಳನ್ನೂ ಸಹಿಸಲು ಸಿದ್ಧನಾಗಿದ್ದ ಹೂವಯ್ಯನಿಗೆ ಈ ಅಪ ವಾದವನ್ನು ಸಹಿಸಲು ಸಾಧ್ಯವಾಗಲಿಲ್ಲ. ತಾನು ಆ ಮನೆಯಲ್ಲಿದ್ದರೆ ಒಂದಲ್ಲ ಒಂದು ದಿನ ಅನಾಹುತಕ್ಕೀಡಾಗಬೇಕಾಗುತ್ತದೆ ಎಂದು ಮುಂಗಂಡು ಪಿತೃಗಳ

ಕಾನೂರು ಮನೆಯನ್ನು ಬಿಡಬೇಕೆಂದು ನಿಶ್ಚಯಿಸಿದನು. ಇದನ್ನೆಲ್ಲಾ ತಾಯಿಗೂ ವಿಶದವಾಗಿ ಹೇಳಿದನು. ಅವರೂ ಬಹಳ ಕಷ್ಟದಿಂದ ಒಪ್ಪಿದರು. ಮಳೆಗಾಲ ಕಳೆದ ಮೇಲೆ ಮನೆ ಬಿಡುವುದೆಂದು ನಿಶ್ಚಯವಾಯಿತು. ಅದನ್ನು ಕೇಳಿದ ಚಂದ್ರಯ್ಯಗೌಡರಿಗೆ ಅತ್ಯಾನಂದವಾಗಿ ಅವರನ್ನು ಆದಷ್ಟು ಬೇಗನೆ ಮನೆ ಬಿಡಿಸಲೆಂದು ಕಿರುಕುಳವನ್ನು ಮತ್ತಷ್ಟು ಹೆಚ್ಚಿಸಿದರು.

ಅವರ ಅದೃಷ್ಟಕ್ಕೆ ತಕ್ಕಹಾಗೆ ಒಂದು ಸಂಗತಿ ಜರುಗಿತು. ಒಂದು ದಿನ ಸಾಯಂಕಾಲ ನಾಗಮ್ಮನವರು ತಮ್ಮ ಗದ್ದೆಗಳ ಅಂಚಿನಲ್ಲಿ ಹೊನಗೊನೆ ಸೊಪ್ಪನ್ನು ಕುಯ್ದುಕೊಂಡು ಬರಲು ಹೋಗಿದ್ದರು. ತುಂತುರು ಮಳೆ ಸುರಿಯುತ್ತಿತ್ತು. ಮೋಡದ ಕತ್ತಲೆ ಕವಿದಿತ್ತು.

ಗದ್ದೆಯ ಮೇಲುಭಾಗದಲ್ಲಿದ್ದ ಬಯಲಿನಲ್ಲಿ ದನಗಳ ಹಿಂಡಿನಲ್ಲಿ ಚಂದ್ರಯ್ಯಗೌಡರ ಗಾಡಿ ಎತ್ತುಗಳು ಮೇಯುತ್ತಿದ್ದುವು. ಅವುಗಳಲ್ಲಿ 'ಲಚ್ಚ' ಗೊರಬು ಸೂಡಿಕೊಂಡು ಬಾಗಿ ಬಾಗಿ ಏಳುತ್ತಿದ್ದ ನಾಗಮ್ಮನವರನ್ನು ಕಂಡು, ಏನೆಂದು ಊಹಿಸಿತೋ ಏನೋ, ಬಾಲವೆತ್ತಿ ಕಾಲು ಕುಟ್ಟಿ, ಕೋಡುಮಟ್ಟೆಹಾಕಿದ್ದ ನೀಳವಾದ ಕೋಡುಗಳನ್ನು ಮುಂಚಾಚಿ ಭಯಂಕರವಾಗಿ ಕೂಗುತ್ತಾ ಗುಟುರು ಹಾಕಿ ಅವರ ಕಡೆಗೆ ನುಗ್ಗಿತು.

ದನ ಕಾಯುತ್ತಿದ್ದ ಬೇಲರ ಸಿದ್ದ ಅದನ್ನು ಕಂಡೊಡನೆಯೆ 'ಅಯ್ಯೊ ಅಮ್ಮಾ! ಅಯ್ಯೊ ಅಮ್ಮಾ!' ಎಂದು ಕರೆಯುತ್ತಾ ಓಡಿದನು.

ನಾಗಮ್ಮನವರು ತಲೆಯೆತ್ತಿ ನೋಡುತ್ತಾರೆ: ಬತ್ತದ ಸಸಿ ಬೆಳೆದು ನಿಂತ ಗದ್ದೆಗಳಲ್ಲಿ ಅಂಚಿನಿಂದ ಅಂಚಿಗೆ ನೆಗೆಯುತ್ತಾ ಲಚ್ಚೆತ್ತು ತಮ್ಮ ಕಡೆಗೆ ಭೀಷಣವಾಗಿ ನುಗ್ಗಿಬರುತ್ತಿದೆ! ಕಿಟ್ಟನೆ ಕಿರಿಚಿಕೊಂಡು ಸೂಡಿಕೊಂಡಿದ್ದ ಗೊರಬಿನೊಡನೆ ಓಡಿದರು. ಎರಡು ಮಾರು ಓಡುವುದರಲ್ಲಿ ನಡುಗದ್ದೆಯಲ್ಲಿ ಉರುಳಿ ಬಿದ್ದರು. ಗೊರಬು ಅವರ ಮೇಲೆ ಬುಟ್ಟಿ ಮುಚ್ಚಿದಂತೆ ಬಿದ್ದಿತು. ಲಚ್ಚ ಓಡಿಹೋಗಿ ಮನುಷ್ಯರ ಬದಲಾಗಿ ಗೊರಬಿದ್ದುದನ್ನು ನೋಡಿ ಅದನ್ನೇ ತಿವಿಯಿತು. ತರಗೆಲೆಯ ಗೊರಬು ತೂತಾಗಿ ಎತ್ತಿನ ಕೋಡಿಗೆ ಚುಚ್ಚಿ ಸಿಕ್ಕಿಕೊಂಡು ಗಾಳಿಯಲ್ಲಿ ಹಾರಾಡಿತು. ಲಚ್ಚ ಎರಡನೆಯ ಸಾರಿ ತಿವಿಯಲು ಪ್ರಯತ್ನಿಸಿತು. ಅಷ್ಟರಲ್ಲಿ ಬಳಿಯಲ್ಲಿಯೆ ಗದ್ದೆಯ ಬೇಲಿಯ ಮರಗಳಲ್ಲಿ ಹೊರಸಲು ಹಕ್ಕಿ ಬೇಟೆಯಾಡುತ್ತಿದ್ದ ಹೂವಯ್ಯ ತನ್ನ ಸಮಸ್ತ ಶಕ್ತಿಯನ್ನೂ ಸಂಮಂತ್ರಿಸಿ, ಲಚ್ಚನ ಬಳಿಗೆ ನುಗ್ಗಿಬಂದನು. ಎತ್ತು ಅತ್ತಕಡೆಗೆ ತಿರುಗಿ ಅವನನ್ನೆ ಅಟ್ಟತೊಡಗಿತು.

ಸ್ವಲ್ಪ ದೂರ ಓಡಿದ ಮೇಲೆ ಹೂವಯ್ಯ ಕೈಲಿದ್ದ ಬಂದೂಕಿನಿಂದ ಎತ್ತನ್ನು

ಸುಡುತ್ತೇನೆ ಎಂದು ಭಾವಿಸಿದನು. ಆದರೆ ಚಂದ್ರಯ್ಯಗೌಡರ ಎತ್ತು! ಗೋಹತ್ಯ! ಏನೇನೊ ಆಲೋಚನೆಗಳು ಅವನ ಮೆದುಳನ್ನೆಲ್ಲ ಕದಡಿಬಿಟ್ಟುವು. ನೋಡುತ್ತಾನೆ: ಎತ್ತು ನಾಲ್ಕೈದು ಮಾರು ದೂರದಲ್ಲಿ ದೃಢನಿಶ್ಚಯದಿಂದ ನುಗ್ಗುತ್ತಿದೆ! ತಳುವಿದರೆ ಸಾವು ನಿಶ್ಚಯ! ಮೇಲೆ ಹತ್ತಲು ಯಾವ ಮರವೂ ಹತ್ತಿರವಿಲ್ಲ! ಹೂವಯ್ಯ ಸರಕ್ಕನೆ ಹಿಂತಿರುಗಿ ನಿಂತು, ಗುಂಡು ಹಾರಿಸಿದನು. ಎತ್ತು ಹೆಚ್ಚು ಕಡಿಮೆ ಅವನ ಮೈಮೇಲೆಯೆ ಉರುಳಿದಂತೆ ದೊಪ್ಪನೆ ಬಿದ್ದಿತು! ಈಡು ತಗುಲಿದ ಅದರ ಹಣೆಯ ಗಾಯದಿಂದ ನೆತ್ತರು ಕೋಡಿಹರಿಯತೊಡಗಿತು!

ಹೂವಯ್ಯ ಧಾತು ಹಾರಿದ್ದ ತನ್ನ ತಾಯಿಗೆ ಶೈತ್ಯೋಪಚಾರ ಮಾಡಿ ಎಚ್ಚರಗೊಳಿಸಿ, ಗಲಭೆಯನ್ನು ಕೇಳಿ ಅಲ್ಲಿಗೆ ಓಡಿಬಂದಿದ್ದ ಪುಟ್ಟಣ್ಣ, ರಾಮಯ್ಯ, ವಾಸು ಇವರ ಸಹಾಯದಿಂದ ಅವರನ್ನು ಮನೆಗೆ ಸಾಗಿಸಿದನು. ನರಗಳೆಲ್ಲ ಆ ಘಟನೆಯ ಆಘಾತದಿಂದ ತತ್ತರಿಸಿದ್ದುವಾದಕಾರಣ ಅವನೂ ಹಾಸಗೆಯಲ್ಲಿ ಮಲಗಿ ವಿಶ್ರಾಂತಿ ತೆಗೆದುಕೊಂಡನು.

ಚಂದ್ರಯ್ಯಗೌಡರಿಗೆ ನಡೆದ ವಿಚಾರವೆಲ್ಲ ಸರಿಯಾಗಿ ತಿಳಿದ ಮೇಲೆಯೂ ಕೂಡ ಹೂವಯ್ಯ ತಮ್ಮ ಗಾಡಿಯೆತ್ತನ್ನು ಹೊಟ್ಟೆಕಿಚ್ಚಿನಿಂದಲೆ ಹೊಡೆದು ಕೊಂದನೆಂದು ಹೇಳುತ್ತಾ 'ಕೇಸು ಮಾಡುತ್ತೇನೆ;' 'ಹುಯಿಲು ಕೊಡುತ್ತೇನೆ;' (ಮಾಟಮಾಡಿ ದೆವ್ವದ ಸಹಾಯದಿಂದ ವೈರಿಗಳನ್ನು ಕೊಲ್ಲಿಸುವುದು ಎಂದರ್ಥ) 'ಅವನ ಜಾನುವಾರುಗಳನ್ನೂ ಗುಂಡಿನಿಂದ ಹೊಡೆಯುತ್ತೇನೆ' ಎಂದು ಮೊದಲಾಗಿ ಮನೆಯ ಮಹಡಿ ಹಾರುವಂತೆ ಗಲಭೆ ಮಾಡಿದರು.

ಆದರೆ, ಕಡೆಗೆ ಅವರು ಹೇಳಿದಂತೆ ಯಾವುದನ್ನೂ ಮಾಡಲಿಲ್ಲ. ಲಚ್ಚನ ಜೊತೆಯ ಎತ್ತಾಗಿದ್ದ 'ನಂದಿ'ಯನ್ನೂ ಹೂವಯ್ಯನಿಗೇ ಕೊಟ್ಟು ತಾವು ಆ ಜೊತೆಯ ಗಾಡಿಯೆತ್ತುಗಳಿಗೆ ಕೊಟ್ಟಿದ್ದ ಮೊಬಲಗನ್ನು ಒಟ್ಟಿಗೆ ವಸೂಲು ಮಾಡಿಕೊಂಡರು.

ನಾಗಮ್ಮನವರನ್ನು ಮಾತಾಡಿಸಿಕೊಂಡು ಹೋಗಲು ಮುತ್ತಳ್ಳಿ ಚಿನ್ನಯ್ಯನೂ ಸೀತೆಮನೆ ಸಿಂಗಪ್ಪಗೌಡರೂ ಬಂದರು. ಮನೆ ಪಾಲಾದ ಮೇಲೆ ಚಿನ್ನಯ್ಯ ಕಾನೂರಿಗೆ ಬಂದಿರಲಿಲ್ಲ. ಒಬ್ಬರ ಮನೆಗೆ ಊಟಕ್ಕೆ ಹೋದರೆ ಮತ್ತೊಬ್ಬರಿಗೆ ಸಿಟ್ಟು ಬರುತ್ತದೆ; ಒಬ್ಬರ ಜಗಲಿಯಲ್ಲಿ ಕುಳಿತರೆ ಮತ್ತೊಬ್ಬರಿಗೆ ಮುನಿಸಾಗುತ್ತದೆ ಎಂಬುದೇ ಅವನು ಬರದಿದ್ದುದಕ್ಕೆ ಕಾರಣವಾಗಿತ್ತು.

ಚಂದ್ರಯ್ಯಗೌಡರು ಚಿನ್ನಯ್ಯನನ್ನೇನೊ ಎಂದಿನಂತೆ ಸ್ವಾಗತಿಸಿದರು. ಆದರೆ ಸಿಂಗಪ್ಪಗೌಡರನ್ನು ಕಣ್ಣೆತ್ತಿಯೂ ನೋಡಲಿಲ್ಲ. ಚಿನ್ನಯ್ಯ ಚಂದ್ರಯ್ಯಗೌಡರ

ಜಗಲಿಯಮೇಲೆಯೂ ಸಿಂಗಪ್ಪಗೌಡರು ಹೂವಯ್ಯನ ಜಗಲಿಯ ಮೇಲೆಯೂ ಕುಳಿತರು.

ಆದರೆ ಸ್ವಲ್ಪ ಹೊತ್ತಿನೊಳಗಾಗಿ ಚಿನ್ನಯ್ಯನು ಸಿಂಗಪ್ಪಗೌಡರೊಡನೆ ಮಾತಾಡುವ ನೆವದಿಂದ ಹೂವಯ್ಯನ ಜಗಲಿಗೆ ಬಂದು ಕುಳಿತನು. ಸರಿ; ರಾಮಯ್ಯ, ವಾಸು, ಪುಟ್ಟಣ್ಣ ಎಲ್ಲರೂ ಅಲ್ಲಿಯೇ ನೆರೆದರು. ಮಾತುಕತೆ ಗಾರಂಭವಾಯಿತು. ಚಂದ್ರಯ್ಯಗೌಡರೊಬ್ಬರೇ ತಮ್ಮ ಬೀರುವಿನ ಬುಡದಲ್ಲಿ ಕುಳಿತು ಕಪೇಸಬೇಕಾಯಿತು. ತನ್ನನ್ನು ಕಂಡರೆ ಎಲ್ಲರಿಗೂ 'ಸಸಾರ' ಎಂದು ಅವರಿಗೆ ಮುನಿಸೇರಿತು.

ಪುಟ್ಟಮ್ಮ ಮುತ್ತಳ್ಳಿ ಚಿನ್ನಯ್ಯಬಾವ ಬಂದಿದ್ದಾರೆ ಎಂದು ಸುಬ್ಬಮ್ಮ ನೊಡಗೂಡಿ ಔತಣ ಸಿದ್ಧಪಡಿಸುವುದರಲ್ಲಿ ರಾತ್ರಿಯೂಟಕ್ಕೆ ಸ್ವಲ್ಪ ವಿಲಂಬ ವಾಯಿತು.

ಹೂವಯ್ಯನ ಮನೆಯಲ್ಲಿ ನಾಗಮ್ಮನವರಿಗೆ ಸ್ವಸ್ಥವಿಲ್ಲದಿದ್ದುದರಿಂದ ಅಷ್ಟೇನೂ ವಿಶೇಷವಿರಲಿಲ್ಲ. ಆದರಿಂದ ರಾತ್ರಿ ಎಂಟು ಗಂಟೆಯ ಒಳಗೆ ಊಟ ಸಿದ್ಧವಾಯಿತು.

ಪುಟ್ಟಣ್ಣ ಬಂದು 'ಉಟಕ್ಕೇಳಿ' ಎಂದನು.

ಕುಳಿತವರೆಲ್ಲ ಒಬ್ಬರ ಮುಖವನ್ನು ಒಬ್ಬರು ನೋಡಿದರು.

ಸಿಂಗಪ್ಪಗೌಡರು 'ಏಳು, ಚಿನ್ನಯ್ಯ, ಶಾಸ್ತ್ರ ಪೂರೈಸಿಬಿಡೋಣ' ಎಂದು ಆಡುತ್ತಿದ್ದ ಇಸ್ಪೀಟುಗಳನ್ನು ಜಮಖಾನದ ಮೇಲೆ ಹಾಕಿ, ಮೇಲೆದ್ದರು. ಚಿನ್ನಯ್ಯನೂ ಎದ್ದನು.

ಅಷ್ಟರಲ್ಲಿ ರಾಮಯ್ಯ ಹೂವಯ್ಯನ ಕಿವಿಯಲ್ಲಿ 'ನಮ್ಮ ಮನೆಯಲ್ಲಿ ವಿಶೇಷ ಮಾಡಿದ್ದಾರೆ' ಎಂದನು.

ಹೂವಯ್ಯನೂ ಪಿಸುಮಾತಿನಲ್ಲಿಯೆ "ಹೌದು ,ಏನು ಮಾಡುವುದು ಹೇಳು? ಒಳ್ಳೆ ಪೀಕಲಾಟಕ್ಕೆ ಬಂತಲ್ಲಾ! ಸಿಂಗಪ್ಪಕಕ್ಕಯ್ಯ ನಿಮ್ಮ ಮನೆಗೆ ಊಟಕ್ಕೆ ಬರೋದಿಲ್ಲ. ಚಿನ್ನಯ್ಯನೂ ಊಟಕ್ಕೆ ಎದ್ದಾಗಿಹೋಯ್ತು. ಮತ್ತೆ ಕೂತುಕೋ ಅಂತ ಹೇಳಿ ಅವನನ್ನು ಬಿಟ್ಟುಹೋಗೋದು ಹೇಗೆ?" ಎಂದನು.

ಅಂತೂ ಅನಿವಾರ್ಯದಿಂದ ಚಿನ್ನಯ್ಯನೂ ಸಿಂಗಪ್ಪಗೌಡರೊಡನೆ ಹೂವಯ್ಯನ ಮನೆಗೇ ಊಟಕ್ಕೆ ಹೋದನು.

ಅದನ್ನು ಕೇಳಿ ಪುಟ್ಟಮ್ಮ ಕಣ್ಣೀರು ಹಾಕಿ, ತಾನು ಅಗಲೇ ತಯಾರು ಮಾಡಿದ್ದ ಕೆಲವು ಪದಾರ್ಥಗಳನ್ನೂ ಪಲ್ಯಗಳನ್ನೂ 'ಆಚೆಮನೆಗೆ' ಕಳುಹಿಸಿ ಕೊಟ್ಟಳು.

ಈ ಸಣ್ಣ ಘಟನೆ ಚಂದ್ರಯ್ಯಗೌಡರ ಮನಸ್ಸಿಗೆ ಮಹಾ ಪಿತೂರಿಯಾಗಿ ಕಂಡಿತು.

ಮರುದಿನ ನಂಟರು ಮನೆಬಿಟ್ಟು ಹೊರಟೊಡನೆಯೆ ರಾಮಯ್ಯನನ್ನು ತರಾಟೆಗೆ ತೆಗೆದುಕೊಂಡರು. ಚಿನ್ನಯ್ಯನನ್ನು 'ಆಚೆಮನೆ'ಗೆ ಊಟಕ್ಕೆ ಕಳುಹಿಸಿದುದಕ್ಕೆ ಅವನನ್ನು ಕಂಡಾಬಟ್ಟೆ ಉಗುಳಿ ಬೈದರು.

ಇಂತಹ ಇಕ್ಕಳದ ಸನ್ನಿವೇಶಗಳು ಹೆಜ್ಜೆಹೆಜ್ಜೆಗೂ ಒದಗತೊಡಗಿ ಕಾನೂರು ಮನೆಯಲ್ಲಿ ಆ ಮಳೆಗಾಲವನ್ನಾದರೂ ಕಳೆಯಬೇಕೆಂದಿದ್ದ ಹೂವಯ್ಯ ಪಾಲಾದ ಎರಡು ತಿಂಗಳಲ್ಲಿಯೆ ಅದನ್ನು ಬಿಡಲು ನಿಶ್ಚಯಿಸಬೇಕಾಯಿತು.

ಕೆಳಕಾನೂರು ಅಣ್ಣಯ್ಯಗೌಡರಿದ್ದ ಹುಲ್ಲಿನ ಮನೆಯೂ ಅದರ ಸಮೀಪದ ಜಮೀನುಗಳೂ ಹೂವಯ್ಯನ ಪಾಲಿಗೆ ಬಂದಿದ್ದುವು. ಆ ಮನೆ ನೋಡಿಕೊಳ್ಳುವವರಿಲ್ಲದೆ ನೀರು ಸೋರಿ, ಕಸ ಬಿದ್ದು, ದನಕರುಗಳೂ ಮಲಗಿ ಎದ್ದು, ಹಂದಿಯ ಹಟ್ಟಿಯಾಗಿತ್ತು.

ಆ ಮನೆಯನ್ನೆ ಚೊಕ್ಕಟಮಾಡಿಸಿ, ಹುಲ್ಲು ಹೊದಿಸಿ, ಅದರ ಬಳಿಯಿದ್ದ ಗದ್ದೆಯ ಬಾವಿಯನ್ನೂ ಶುಚಿಮಾಡಿಸಿ, ಹಟ್ಟಿ ಕೊಟ್ಟಿಗೆಗಳನ್ನೂ ಸರಿಮಾಡಿಸಿ ಹೂವಯ್ಯ ಕೆಳಕಾನೂರಿಗೆ ಒಕ್ಕಲು ಹೋಗಲು ನಿಶ್ಚಯಿಸಿ ಒಂದು ದಿನ ಗೊತ್ತುಮಾಡಿದನು. ಆ ದಿನ ಮಳೆ ಜೋರಾಗಿ ಸುರಿಯುತ್ತಿದ್ದರೂ, ಸಿಂಗಪ್ಪಗೌಡರು ಕಳುಹಿಸಿದ್ದ ಗಾಡಿಯಮೇಲೆ ಸಾಮಾನುಗಳನ್ನೂ ಪಾತ್ರೆ ಗೀತ್ರೆಗಳನ್ನೂ ಹೇರಿ ಸಾಗಿಸಿ, ಚಂದ್ರಯ್ಯಗೌಡರೊಬ್ಬರ ಹೊರತು ಉಳಿದವರೆಲ್ಲ ಕಣ್ಣೀರು ಮಿಡಿಯುತ್ತಿರಲಾಗಿ, ಹೂವಯ್ಯ ನಾಗಮ್ಮನವರೊಡನೆ ಪಿತೃಗೃಹವನ್ನು ತ್ಯಜಿಸಿದನು.

ಪುಟ್ಟಣ್ಣ ಹೂವಯ್ಯನ ಪಾಲಿಗೆ ಬಂದಿದ್ದ ಡೈಮಂಡು, ರೋಜಿ, ಕೊತ್ವಾಲ ಈ ಮೂರು ನಾಯಿಗಳನ್ನೂ, ಒಂದು ಹೆಸರಿಡದಿದ್ದ ಅಥವಾ ಅನೇಕರು ಅನೇಕ ವಿಧವಾಗಿ ಹೆಸರಿಟ್ಟು ಕರೆಯುತ್ತಿದ್ದ ನಾಯಿಮರಿಯನ್ನೂ ಕರೆದುಕೊಂಡು, ಸದ್ಯಕ್ಕೆ ಚಂದ್ರಯ್ಯಗೌಡರ ಕಾಟದಿಂದ ದೂರವಾದೆವಲ್ಲಾ ಎಂಬ ಹರ್ಷದಿಂದ ಕೆಳಕಾನೂರಿನ ಕಡೆಗೆ ಬಂದೂಕು ಹಿಡಿದು ನಡೆದನು.

## ೪೫

# ಹಾವಿನ ಮೊಟ್ಟೆ

ಎಂಟುದಿನಗಳು ಕಳೆದುವು. ಅಣ್ಣಯ್ಯಗೌಡರೂ ಓಬಯ್ಯನೂ ವಾಸಿಸು ತ್ತಿದ್ದ ಕೆಳಕಾನೂರಿನ ಹುಲ್ಲಿನ ಮನೆ ಹೂವಯ್ಯ, ನಾಗಮ್ಮನವರು, ಪುಟ್ಟಣ್ಣ ಇವರ ನಿವಾಸವಾಗಿ ಹೆಚ್ಚು ಗೌರವಾನ್ವಿತವಾಯಿತು. ಪುಟ್ಟಣ್ಣನ ಅನವರತ ಶ್ರಮದಿಂದಲೂ ಹೂವಯ್ಯನ ಕಲಾಭಿರುಚಿಯಿಂದಲೂ ಅದು ನೋಡುವುದಕ್ಕೆ ಒಂದು ಸಣ್ಣ ಕುಟೀರದಂತೆ ಮನೋಹರವೂ ಆಯಿತು.

ಮನೆಗೆ ಕಣದ ಬಣಬೆಯಲ್ಲಿದ್ದ ನೆಲ್ಲುಹುಲ್ಲನ್ನು ಹೊದಿಸಿ, ಮಾಡಿನ ಅಂಚನ್ನು ಸಮವಾಗಿ ಕತ್ತರಿಸಿದ್ದರಿಂದ ಅದಕ್ಕೆ ಏನೋ ಒಂದು ಹೊಸತನ ಬಂದಿತ್ತು. ಮೊದಲು ಸಗಣಿ ಮೆತ್ತಿ ಸಿಡುಬೆದ್ದವನ ಮುಖದಂತೆ ಕಾಣುತ್ತಿದ್ದ ಗೋಡೆಗಳಿಗೆ ಈಗ ಕೆಮ್ಮಣ್ಣು ಬಳಿದು ನುಣುಪುಗೈದು ಬಿಳಿಯ ಜೇಡಿ ಬಳಿದುದರಿಂದ ಆಹ್ಲಾದಕರವಾದ ಹೊಸ ಕಾಂತಿ ಮೆರೆದಿತ್ತು. ಅನೇಕ ವರ್ಷಗಳಿಂದಲೂ ಹೊಗೆ ಹತ್ತಿಕೊಂಡು ಕರಿಯಿಲ್ಲಣ ನೇತಾಡುತ್ತಿದ್ದ ತೊಲೆಗಳೂ ಅಟ್ಟದ ಮರ ಮುಟ್ಟುಗಳೂ ಈಗಲೂ ಕರ್‍ರಗಿದ್ದರೂ ಚೊಕ್ಕಟವಾಗಿದ್ದುವು. ಜೇಡರ ಬಲೆ ಗಳೂ ಬಂಜೆಹುಳುಗಳ ಗೂಡುಗಳೂ ಮಾಯವಾಗಿ ಮನೆಯು ಒಳಜಾಗ ವಿಸ್ತಾರವಾದಂತೆ ತೋರುತಿತ್ತು. ಮನೆಯ ಸುತ್ತಲೂ ಸದಾ ಬಿದ್ದಿರುತ್ತಿದ್ದ ಕಸ ಸೊಪ್ಪು ಸದೆಗಳೆಲ್ಲ ತೊಲಗಿ ಶುಚಿಯಾಗಿತ್ತು.

ಎಲ್ಲಕ್ಕಿಂತಲೂ ವಿಶೇಷವಾದುದೆಂದರೆ, ಆ ಮನೆ ಹಿಂದೆ ಸ್ವಪ್ನದಲ್ಲಿಯೂ ಕೂಡ ಕಾಣದಿದ್ದ ಚಿತ್ರಪಟಗಳು ಮತ್ತು ಪುಸ್ತಕಗಳು ! ಹೂವಯ್ಯ ಕಾನೂರನ್ನು ಬಿಟ್ಟ ಎರಡನೆಯ ದಿನವೇ ತೀರ್ಥಹಳ್ಳಿಗೆ ಹೋಗಿದ್ದ ಚಿನ್ನಯ್ಯ ಮೈಸೂರಿನಿಂದ ಅಲ್ಲಿಗೆ ಬಂದಿದ್ದ ಹೂವಯ್ಯನ ಸಾಮಾನುಗಳನ್ನು ತಮ್ಮ ಎತ್ತಿನ ಗಾಡಿಯಲ್ಲಿ ಹೇರಿ ಕಳುಹಿಸಿದ್ದನು. ಆ ಸಾಮಾನುಗಳು ಬಂದುದು ಹೂವಯ್ಯನ ಭಾಗಕ್ಕೆ ಶಾಂತಿ, ಉತ್ಸಾಹ, ಆನಂದ, ಜ್ಞಾನ—ಇತ್ಯಾದಿಗಳ ನಿಧಿಯೇ ಬಂದಂತಾಗಿತ್ತು. ನೂರಾರು ಚಿತ್ರಪಟಗಳು ಗೋಡೆಗಳನ್ನಲಂಕರಿಸಿದುವು. ಜಗಲಿಯ ನಡುವೆ ಮೇಜು ಕುರ್ಚಿಗಳನ್ನಿಟ್ಟು, ಅದಕ್ಕೆ ಸಮೀಪವಾಗಿ ಬೀರುವನ್ನಿಟ್ಟು, ಗ್ರಂಥರಾಶಿ ಯನ್ನು ಅಂದವಾಗಿ ಜೋಡಿಸಿದನು. ಅಂತೂ ಒಂದು ವಾರ ಕಳೆಯುವುದರಲ್ಲಿ ಕೆಳಕಾನೂರಿನ ಹುಲ್ಲಿನ ಮನೆ ಕಾನೂರಿನ ಹೆಂಚಿನ ಮನೆಯನ್ನು ಗಾತ್ರ ಬಲಗಳಲ್ಲಿ ವಿನಾ ಉಳಿದೆಲ್ಲದರಲ್ಲಿಯೂ ಮೂದಲಿಸುವಂತಾಯಿತು.

ಮೊದಲು ಮೊದಲು ಹೂವಯ್ಯನ ಮನದಲ್ಲಿ ನೂತನ ಗೃಹಪ್ರವೇಶದ ಆನಂದಕ್ಕಿಂತಲೂ ಹೆಚ್ಚಾಗಿ ಪುರಾತನವಾದ ಪಿತೃಗೃಹತ್ಯಾಗದ ಶೋಚನೀಯತೆ ಯಿತ್ತು. ಆದರೆ ತನಗೆ ಜೀವಾತುವಾಗಿದ್ದ ಗ್ರಂಥಸಮೂಹ ಕೈಸೇರಿದಮೇಲೆ ತಮ್ಮ ಹೊಸ ಹುಲ್ಲುಮನೆಯೇ ಪರ್ಣಕುಟೀರದಂತೆ ಶಾಂತಿಮಯವಾಗಿ ಕಂಡು ಬಂದಿತು. ಅಲ್ಲದೆ ಕಾನೂರಿನಲ್ಲಿರುತ್ತಿದ್ದ ಚಂದ್ರಯ್ಯಗೌಡರ ಕರೆಕರೆಯೂ ತಪ್ಪಿ ಮನಸ್ಸಿನಲ್ಲಿ ನೆಮ್ಮದಿ ನೆಲಸಿತು. ರಾಮಯ್ಯನೂ ಸಾಯಂಸಂಚಾರದ ನೆವದಲ್ಲಿ, ಜಡಿಮಳೆ ಹೊಯ್ಯುತ್ತಿದ್ದರೂ ಲೆಕ್ಕಿಸದೆ, ಪ್ರತಿದಿನವೂ ಕೆಳಕಾನೂರಿಗೆ ಬಂದು ಅಣ್ಣನೊಡನೆ ಒಂದೆರಡು ಗಂಟೆಗಳಿದ್ದು ಹೋಗತೊಡಗಿದ್ದನು. ಯಾವ ಯಾವ ಚಿತ್ರಪಟಗಳನ್ನು ಎಲ್ಲಿ ಎಲ್ಲಿ ತೂಗಹಾಕಬೇಕು, ಕುರ್ಚಿ ಮೇಜು ಪುಸ್ತಕದ ಬೀರುಗಳನ್ನು ಎಲ್ಲಿ ಇಡಬೇಕು ಎಂಬ ವಿಚಾರಗಳಲ್ಲಿಯೂ ಅವುಗಳನ್ನಿಡುವ ಕಾರ್ಯದಲ್ಲಿಯೂ ರಾಮಯ್ಯ ಮುಖ್ಯ ಭಾಗ ವಹಿಸಿದ್ದನು. ಅಲ್ಲದೆ ತನ್ನ ಕೆಲವು ಉತ್ತಮತರದ ಸಾಮಾನುಗಳನ್ನೂ ಪಟಗಳನ್ನೂ ಪುಸ್ತಕಗಳನ್ನೂ ಹೂವಯ್ಯನಲ್ಲಿಯೇ ಇಡಲು ಏರ್ಪಾಡು ಮಾಡಿದನು. ಅವನಿಗೆ ಕೆಳಕಾನೂರು ಒಂದು ತರಹದ 'ರೀಡಿಂಗ್‌ರೂಂ' 'ಲೈಬ್ರರಿ' 'ಆಶ್ರಮ' 'ಕ್ಲಬ್ಬು' ಎಲ್ಲಾ ಆಗಿ ಪರಿಣಮಿಸಿತ್ತು. ಕೆಲವುಸಾರಿ ಅವನಿಗೆ, ಮನೆ ಹಿಸ್ಸೆಯಾಗಿ ಹೂವಯ್ಯ ಕೆಳಕಾನೂರಿಗೆ ಬಂದದ್ದೂ ಒಂದು ಪ್ರಚ್ಛನ್ನ ಶ್ರೇಯಸ್ಸಿನಂತೆ ತೋರುತ್ತಿತ್ತು. ಕೆಳಕಾನೂರಿಗೆ ನಿತ್ಯವೂ ಬಂದು ಹೋಗುವುದಕ್ಕಾಗಿ ತಂದೆಯಿಂದ ಎಷ್ಟು ಬೈಗು ಳವನ್ನಾದರೂ ಸಹಿಸಲು ಸಿದ್ಧನಾಗುತ್ತೇನೆ ಎಂದು ನಿರ್ಧರಿಸಿಬಿಟ್ಟಿದ್ದನು.

ಹೂವಯ್ಯ ಕೆಳಕಾನೂರಿಗೆ ಬಂದ ಎಂಟನೆಯ ದಿನ ಒಂದು ಸಣ್ಣ ಸಂತೋಷ ಕೂಟವನ್ನು ನಿಶ್ಚಯಿಸಿ, ತಾನೇ ಕಾನೂರಿಗೆ ಹೋಗಿ ಚಂದ್ರಯ್ಯಗೌಡರನ್ನೂ ಇತರರನ್ನೂ ಆಹ್ವಾನಿಸಿದನು. ಸೀತೆಮನೆಗೂ ಮುತ್ತಳ್ಳಿಗೂ ಇತರ ಒಂದೆರಡು ಮನೆಗಳಿಗೂ ಪುಟ್ಟಣ್ಣನನ್ನು 'ಕರೆಯಲು' ಕಳುಹಿಸಿದನು.

ಆ ದಿನ ಬೆಳಿಗ್ಗೆ ಎಂಟೂವರೆ ಗಂಟೆಯ ಹೊತ್ತಿಗೆ ಕಾನೂರಿನಿಂದ ರಾಮಯ್ಯ, ಪುಟ್ಟಮ್ಮ, ವಾಸು ಮೂವರೂ ಬಂದರು. ವಾಸುವಂತೂ ಪಂಜರದಿಂದ ಬಿಡುಗಡೆ ಹೊಂದಿದ ಜಿಂಕೆಯಂತೆ ಹಾರುತ್ತ ಕುಣಿಯುತ್ತ ಗಳಪುತ್ತಾ ಬಂದು ನಾಗಮ್ಮನವರನ್ನು ಒರಗಿ ಕುಳಿತು, ನೂರಾರು ವಿಷಯಗಳನ್ನು ಕುರಿತು ಹೇಳುತ್ತ, ಪ್ರಶ್ನೆ ಕೇಳುತ್ತ, ದೊಡ್ಡಮ್ಮನ ಕಣ್ಣು ಆನಂದದಿಂದ ಹನಿಯಾಡು ವಂತೆ ಮಾಡಿ, ಅಲ್ಲಿಂದೆದ್ದು ಮನೆಯನ್ನೆಲ್ಲಾ ಮೂಲೆ ಮೂಲೆಗೂ ಹೋಗಿ ನೋಡಿ, ಚಿತ್ರಪಟಗಳನ್ನೂ ಪುಸ್ತಕಗಳನ್ನೂ ಈಕ್ಷಿಸಿ ಈಕ್ಷಿಸಿ, ಹಿಗ್ಗಿಬಿಟ್ಟನು.

ಹೂವಯ್ಯ ಸುಬ್ಬಮ್ಮ ಏಕೆ ಬರಲಿಲ್ಲ ಎಂದು ಕೇಳಲು ಪುಟ್ಟಮ್ಮ ನಡೆದ

ಕಥೆಯನ್ನು ಹೇಳಿದಳು. ಸುಬ್ಬಮ್ಮನಿಗೆ ಬರಬೇಕು ಎಂದು ಬಹಳ ಕುತೂಹಲ ವಿತ್ತಂತೆ. ಹೊಸ ಸೀರೆಯನ್ನೂ ಉಟ್ಟಾಗಿತ್ತಂತೆ. ಆದರೆ ಚಂದ್ರಯ್ಯಗೌಡರು ಬಾಯಿಗೆ ಬಂದಂತೆ ಬೈದು ಗದರಿಸಿ ಆಕೆಯನ್ನು ನಿಲ್ಲಿಸಿಬಿಟ್ಟಿದ್ದರು.

ಒಂಬತ್ತು ಗಂಟೆಯ ಹೊತ್ತಿಗೆ ಸೀತೆಮನೆ ಸಿಂಗಪ್ಪಗೌಡರು ಬಂದರು. ಬಂದೊಡನೆಯೆ ಮನೆಯನ್ನೂ ಬಾಗಿಲುಗಳಿಗೆ ಕಟ್ಟಿದ್ದ ತಳಿರುತೋರಣಗಳನ್ನೂ ನೋಡಿ ಹೃತ್ಪೂರ್ವಕವಾಗಿ ನಗುತ್ತಾ "ಓ ಹೋ ಹೋ ಏನಿದು ಹೂವಯ್ಯಾ? ನಿನ್ನ ಮದುವೆಮನೆ ಇದ್ದಹಾಂಗಿದೆಯಲ್ಲ!" ಎಂದು ಎಲ್ಲರನ್ನೂ ನಗಿಸಿಬಿಟ್ಟರು.

ಮಧ್ಯಾಹ್ನ ಹತ್ತು ಗಂಟೆಗೆ ಮುತ್ತಳ್ಳಿಯ ಗಾಡಿ ಅಂಗಳದಲ್ಲಿ ನಿಂತಿತು. ಚಿನ್ನಯ್ಯ, ಸೀತೆ, ಸೀತೆಯ ಕೈಹಿಡಿದ ಲಕ್ಷ್ಮಿ (ಬರಿ 'ಲಕ್ಷ್ಮಿ' ಎಂದರೆ ತಪ್ಪಾಗು ತ್ತದೆ!) ಮೂವರೂ ಗಾಡಿಯಿಂದಿಳಿದರು. ಅವರನ್ನು ಸ್ವಾಗತಿಸಲು ಮನೆ ಯಲ್ಲಿದ್ದವರೆಲ್ಲರೂ ಅಲ್ಲಿ ನೆರೆದಿದ್ದರು.

ಸಿಂಗಪ್ಪಗೌಡರು 'ಓ ಹೋ ಹೋ ಹೂವಯ್ಯಾ, ನಾ ಹೇಳಿದ್ದೇ ಸರೀ! ಹೆಣ್ಣಿನ ಕಡೆಯ ದಿಬ್ಬಣವೂ ಬಂದೆಬಿಡ್ತಲ್ಲಾ!' ಎಂದರು.

ಅಲ್ಲಿ ನೆರೆದಿದ್ದವರೆಲ್ಲರೂ ಗೊಳ್ಳೆಂದು ನಕ್ಕರು. ಮದುಮಗಳಂತೆ ಸಿಂಗಾರ ಮಾಡಿಕೊಂಡಿದ್ದ ಸೀತೆಯ ಮುಖ ಓಕುಳಿ ಚೆಲ್ಲಿದಂತೆ ಕೆಂಪೇರಿ, ನಾಚಿಕೆಯಿಂದ ತಲೆಬಾಗಿದಳು. ಹೂವಯ್ಯನೂ ಎಲ್ಲರೊಡನೆ ನಗುತ್ತಿದ್ದನು. ಆದರೆ ಅವನ ಮುಖವೂ ಕೆಂಪಾಗಿತ್ತು. ಅವನು ತಲೆ ಬಾಗಿಸಲಿಲ್ಲ. ಅವರಿವರ ಕಡೆಗೆ ಮುಖ ತಿರುಗಿಸಿ ಮಾತಾಡುವ ನೆವದಿಂದ ವಸಂತ ಸೌಂದರ್ಯದ ಅವತಾರ ಮೂರ್ತಿಯಂತೆ ಮೆರೆಯುತ್ತಿದ್ದ ಸೀತೆಯ ಕಡೆಗೆ ನೋಡಿ ನೋಡಿ ಆನಂದಿಸು ತ್ತಿದ್ದನು.

ರಾಮಯ್ಯನೂ ಸಿಂಗಪ್ಪಗೌಡರು ತನ್ನನ್ನುದ್ದೇಶಿಸಿಯೇ ಹಾಸ್ಯ ಮಾಡಿದ ರೆಂದು ಭಾವಿಸಿ, ಒಳಗೊಳಗೆ ಹಿಗ್ಗಿ ಸೀತೆಯ ಕಡೆಗೆ ಆಗಾಗ ನೋಡುತ್ತಿದ್ದನು.

ಚಿನ್ನಯ್ಯ ಪುಟ್ಟಮ್ಮರ ಮನೋಭಾವಗಳೂ ರಥಗಳೂ ಅದೇ ಶೃಂಗಾರ ವೀಥಿಯಲ್ಲಿ ಮೆರವಣಿಗೆ ಹೊರಟಿದ್ದುವು.

ನಾಗಮ್ಮನವರು, ಚಿಕ್ಕಮಕ್ಕಳು ನಂಟರ ಮನೆಗೆ ಬಂದಾಗ ಮಾಡುವ ಪದ್ಧತಿಯಂತೆ, ಕೆಂಗೂಳಿಗೆ ಚುಚ್ಚಿದ ಕಕ್ಕಡದುರಿಯನ್ನು ಲಕ್ಷ್ಮಿಗೆ ಆರತಿಯೆತ್ತಿ ಓಕುಳಿಗೆ ಕೆಂಗೆಂಡಗಳನ್ನು ಹಾಕಿ ಚ್ಹುಯ್ ಎಂದು ಸದ್ದುಮಾಡಿ, ಹಣೆಗೆ ಕಕ್ಕಡದ ಬತ್ತಿಯಿಂದ ತೆಗೆದ ಕರಿಮಸಿಯನ್ನು ಹಚ್ಚಿ, 'ದಿಸ್ಟಿ ಬೆಳಗಿದ' ತರುವಾಯ ಎಲ್ಲರೂ ಮನೆಯೊಳಗೆ ಹೋದರು.

ಆ ವಿಚಿತ್ರವಾದ ಶುಭಕ್ರಿಯಾಲೀಲೆಯನ್ನು ನೋಡುತ್ತಾ ಬಾಲವಲ್ಲಾಡಿ

ಸುತ್ತಾ ನಿಂತಿದ್ದ ಡೈಮಂಡು ರೋಜಿ ಕೊತ್ವಾಲಗಳು ಅಂಗಳಕ್ಕೆ ಗಾಡಿ ಬಂದೊಡನೆ ನಿಲ್ಲಿಸಿದ್ದ ಪ್ರಣಯಕ್ರೀಡೆಯನ್ನು ಮತ್ತೆ ಪ್ರಾರಂಭಿಸಿದುವು.

ಲಕ್ಷ್ಮಿ ಬೇಡವೆಂದರೂ ಕೇಳದೆ ಹಠಮಾಡಿ ಅಕ್ಕಯ್ಯನೊಡಗೂಡಿ ಎಷ್ಟು ಉತ್ಸಾಹದಿಂದ ನಂಟರ ಮನೆಗೆ ಬಂದಿದ್ದಳೋ ಅಷ್ಟೇ ರಭಸದಿಂದ ಮುತ್ತಳ್ಳಿ ಯಲ್ಲಿದ್ದ ತಾಯಿಯ ಬಳಿಗೆ ಮರಳಿ ಹೋಗಬೇಕೆಂದು ಹಠಹಿಡಿದು ಅಳತೊಡ ಗಿದಳು. ಯಾರು ಯಾರು ಎತ್ತಿಕೊಂಡು ಸಂತೈಸಿದರೂ ಎಷ್ಟು ಎಷ್ಟು ತಿಂಡಿ ಕೊಟ್ಟು ಉಪಚರಿಸಿದರೂ ಅವಳು ಬೇರೆ "ಅ . . . ವ್ವಾ. ಆ ಆ ಆ !" ಎಂದು ಕಿಂದರಿಬಾರಿಸುವುದನ್ನು ನಿಲ್ಲಿಸಲಿಲ್ಲ. ಸೀತೆಗೆ ತಂಗಿಯ ಮೇಲಣ ಸಿಟ್ಟಿನಿಂದ ಅಳುಬಂದು ಕಣ್ಣೀರು ತಡೆಯಲಾಗಲಿಲ್ಲ.

ಅಕ್ಕಯ್ಯ ಕೋಪಪ್ರದರ್ಶನಮಾಡಿದಷ್ಟೂ ಹೆಚ್ಚಾಗಿ ಲಕ್ಷ್ಮಿ ಅಳಲಾರಂಭಿಸಿ ದಳು. ಅಂತೂ ಹಾಗೂ ಹೀಗೂ ಮಧ್ಯಾಹ್ನದ ಊಟ ಮುಗಿಯುವ ತನಕ ಅವಳನ್ನು ಉಪಚರಿಸುತ್ತಿದ್ದು, ಊಟ ಮುಗಿದೊಡನೆಯೆ ಲಕ್ಷ್ಮಿಯನ್ನು ಕೂರಿಸಿ ಕೊಂಡು ಹೋಗುವಂತೆ ನಂಜನಿಗೆ ಸೀತೆ ಹೇಳಿದಳು.

ನಂಜ ತಾನೊಬ್ಬನೇ ಗಾಡಿ ಹೊಡೆದುಕೊಂಡು ಹಿಂದಕ್ಕೆ ಹೋಗುತ್ತೇನೆ; ಆದ್ದರಿಂದ ಕಳ್ಳಂಗಡಿಯಲ್ಲಿ ಚೆನ್ನಾಗಿ 'ಸದ್ದುಕೊಂಡು ಹೋಗಬೈದು' ಎಂದು ಹಾರೈಸಿದ್ದನು. ಆದರೆ ಈಗ ಲಕ್ಷ್ಮಿಯನ್ನೂ ಕರೆದುಕೊಂಡು ಹೋಗುವ ಜವಾಬ್ದಾರಿ ಬಂದುದರಿಂದ ತನ್ನ 'ಹುನಾರು' ವ್ಯರ್ಥವಾಗುತ್ತದೆಂಬ ಆಶಾ ಭಂಗದಿಂದ 'ಯಾಕ್ರೊ, ಸೀತಮ್ಮ, ಅವರೂ ಇರಲಿ ಒಂದೆರಡು ದಿನ ನಿಮ್ಮ ಜೊತೇಲಿ !' ಎಂದನು.

ಸೀತೆಗೆ ಸಿಟ್ಟು ಉಕ್ಕಿಬಂದು 'ಇರೋದು ಬ್ಯಾಡ, ಏನೂ ಬ್ಯಾಡ ! ನೀ ಕರ್ಕೊಂಡು ಹೋಗ್ತಿದ್ರೆ ಹೋಗು ! ಮತ್ತೆ ನಾನು ಬಾಯಿಗೆ ಬಂದ್ಹಾಗೆ ಹೇಳಿ ಬಿಟ್ಟೇನು !' ಎಂದು ಸಿಡುಕಿದುದನ್ನು ಕಂಡು ನಂಜ ಮರುಮಾತು ಹೇಳದೆ ಒಪ್ಪಿದನು.

ಆದರೆ ಮಾರಾಯಗಿತ್ತಿ ಮಹಾರಾಣಿ ಲಕ್ಷ್ಮೀದೇವಿಯವರನ್ನು ಗಾಡಿ ಹತ್ತಿಸು ತ್ತಿದ್ದಾಗ ಅಥವಾ ರಥವೇರಿಸುತ್ತಿದ್ದಾಗ, ಅವಳು ಅಕ್ಕಯ್ಯನೂ ತನ್ನ ಜೊತೆಗೆ ಬರಬೇಕೆಂದು ಹಠಹಿಡಿದು ಅಳತೊಡಗಿದಳು. ಸೀತೆಯ ಗಂಟಲಿಗೆ ಗಾಳ ಸಿಕ್ಕಿದಂತಾಯ್ತು. ಪ್ರತಿಭಟಿಸಿದರೆ ನೋವು, ಶರಣಾದರೆ ಸಾವು ಎನ್ನುವ ಮೀನಿನ ಸ್ಥಿತಿ ಅವಳದಾಯಿತು. ಅವಳಿಗೆ ಅಳಬೇಕೋ ನಗಬೇಕೋ ಕೋಪ ಮಾಡಿಕೊಳ್ಳಬೇಕೋ ಗುದ್ದಬೇಕೋ ಒಂದೂ ಬಗೆಹರಿಯಲಿಲ್ಲ. ಆ ದಿನ ಬೆಳಿಗ್ಗೆತಾನೆ ಹೂವಯ್ಯಬಾವನ ಬಳಿಗೆ ಬಂದಿದ್ದ ಅವಳು ಅದೇ ದಿನ ಮಧ್ಯಾಹ್ನ

ಹಿಂತಿರುಗಬೇಕು ಎಂದರೆ ಹೇಗೆ ಸಾಧ್ಯವಾದೀತು? ಹಸಿದ ದುಂಬಿ ಹೂವಿನ ಮೇಲೆ ಕೂತೊಡನೆಯೆ 'ಮಕರಂದಪಾನಮಾಡಿದ್ದು ಸಾಕು, ಇನ್ನು ಹಾರಿ ಹೋಗು' ಎಂದರೆ ಅದು ಹೋಗುತ್ತದೆಯೆ? ಸೀತೆ ಹಲ್ಲುಹಲ್ಲು ಕಡಿದು ಕಣ್ಣು ಕೆಂಪಗೆ ಮಾಡಿಕೊಂಡು ತಂಗಿಯ ಕಡೆ ದುರದುರನೆ ನೋಡಿದಳು. ಹೂವಯ್ಯ, ಸಿಂಗಪ್ಪಗೌಡರು, ರಾಮಯ್ಯ ಮೊದಲಾದವರು ಯಾರೂ ಅಲ್ಲಿ ಇರದಿದ್ದರೆ ಲಕ್ಷ್ಮಿಗೆ ಗುದ್ದು ಹೇರಿ ರಾಪುಬಿಡಿಸುತ್ತಿದ್ದಳೆಂದು ತೋರುತ್ತದೆ.

ತಂಗಿಯನ್ನು ಬಾಚಿ ತಬ್ಬಿಕೊಂಡು ದಮ್ಮಯ್ಯಗುಡ್ಡೆಹಾಕುತ್ತ ಇತರರಿಗೆ ಕೇಳಿಸದಷ್ಟು ಮೃದುವಾಗಿ "ನಿನ್ನ ದಮ್ಮಯ್ಯ ಕಾಣೇ! ನಿನ್ನ ಕಾಲಿಗೆ ಬೀಳ್ತೀನೆ ಪುಣ್ಯಾತಗಿತ್ತೀ! ಅಷ್ಟು ಉಪಕಾರಮಾಡೇ!" ಎಂದು ಅಂಗಲಾಚಿ ಬೇಡಿಕೊಂಡಳು. ಆದರೆ ಶರಣುಹೊಕ್ಕವರನ್ನು ಕಾಪಾಡಬೇಕು ಎಂಬ ಬುದ್ಧಿ ಬರುವಷ್ಟು ದೊಡ್ಡವಳಾಗಿರಲಿಲ್ಲ ಲಕ್ಷ್ಮಿ. ಅವಳು "ನಾ . . . ನೊ . . . ಲ್ಲೇ . . . ನೀ . . . ಬರಬೇಕೂ ಊ ಊ!" ಎಂದು ಮುಖ ಹಿಂಡುವುದನ್ನು ಬಿಡಲೇ ಇಲ್ಲ.

ಸೀತೆಯ ಹೃದಯದಲ್ಲಿ ಕೋಪ ಜ್ವಾಲಾಮಯವಾಗಿ, ಇತರರಾರೂ ಕಾಣದಂತೆ, ಲಕ್ಷ್ಮಿಯ ಒಳತೊಡೆಯನ್ನು ಚೆನ್ನಾಗಿ ಚಿವುಟಿದಳು. ಒಡನೆಯೇ ಸನ್ನಿವೇಶ 'ರಾಣಾರಂಪ'ವಾಯಿತು. ಲಕ್ಷ್ಮಿ ಹಾವು ಕಡಿದವಳಂತೆ ಕಿಟ್ಟನೆ ಕಿರಿಚಿಕೊಂಡು ಗೋಳೋ ಎಂದು ಬಿದ್ದುಬಿದ್ದು ಅಳತೊಡಗಿದಳು. ಅಷ್ಟರಲ್ಲಿ ನಾಗಮ್ಮನವರು ಪುಟ್ಟಮ್ಮ ಎಲ್ಲರೂ ಬಳಿಗೆಬಂದು ಲಕ್ಷ್ಮಿಯನ್ನು ಸಂತೈಸಿ, ಬಹಳ ಹೊತ್ತಿನಮೇಲೆ, ಪುಟ್ಟಣ್ಣನೊಡಗೂಡಿ ಮುತ್ತಳ್ಳಿಗೆ ಹೋಗುವಂತೆ ಒಪ್ಪಿಸಿದರು.

ನಂಜ ಗಾಡಿ ಕಟ್ಟಿದನು. ಲಕ್ಷ್ಮಿಯನ್ನು ಕರೆದುಕೊಂಡು ಪುಟ್ಟಣ್ಣ ಗಾಡಿಯೇರಿದನು. ಗಾಡಿ ಹೊರಟಿತು.

ಹೂವಯ್ಯ ಹಿಂದಿನಿಂದ "ಅವಳನ್ನು ಬಿಟ್ಟು ನೀ ಬೇಗ ಬಂದುಬಿಡು" ಎಂದು ಗಟ್ಟಿಯಾಗಿ ಕೂಗಿ ಹೇಳಿದನು.

ಪುಟ್ಟಣ್ಣನೂ "ಆಯಿತೂ! ಆಯಿತೂ!" ಎಂದು ಪ್ರತ್ಯುತ್ತರ ಕೂಗಿದನು.

ಗಾಡಿ ಕಣ್ಮರೆಯಾದಮೇಲೆ, ಸದ್ಯಕ್ಕೆ ಪೀಡೆ ತೊಲಗಿತಲ್ಲಾ ಎನ್ನುವಷ್ಟರ ಮಟ್ಟಿಗೆ ಸೀತೆಯ ಮನಸ್ಸು ನೆಮ್ಮದಿಯಾಯಿತು.

ಸಾಯಂಕಾಲ ಐದು ಗಂಟೆಯಾಗಿರದಿದ್ದರೂ ಮೋಡ ಕವಿದುಕೊಂಡು ಜಡಿಮಳೆ ಬಿಡದೆ ಹೊಡೆಯುತ್ತಿದ್ದುದರಿಂದ ಆರೂವರೆ ಏಳು ಗಂಟೆಯ ಹೊತ್ತಿನ ಕಪ್ಪು ನೆಲಬಾನುಗಳನ್ನೆಲ್ಲ ತಬ್ಬಿಬಿಟ್ಟಿತು.

ಮೈಸೂರಿನಿಂದ ಬಂದಿದ್ದ ತನ್ನ ಸಾಮಾನುಗಳನ್ನೂ ಪುಸ್ತಕಗಳನ್ನೂ ತೋರಿಸಿಯಾದಮೇಲೆ ಹೂವಯ್ಯ ಗೋಡೆಗಳಿಗೆ ತಗುಲಿಹಾಕಿದ್ದ ಚಿತ್ರಪಟಗಳನ್ನು ತೋರಿಸುತ್ತಾ ಚಲಿಸುತ್ತಿದ್ದನು. ನಡುನಡುವೆ ಪಟಗಳನ್ನು ವಿವರಿಸಲೋಸ್ಕರ ಉಚಿತ ವ್ಯಾಖ್ಯಾನಗಳನ್ನೂ ಮಾಡುತ್ತಿದ್ದನು. ಅವನ ಸುತ್ತುಮುತ್ತ ಸಿಂಗಪ್ಪಗೌಡರು, ಚಿನ್ನಯ್ಯ, ರಾಮಯ್ಯ ವಾಸು, ಸೀತೆ, ಪುಟ್ಟಮ್ಮ ಇವರುಗಳು ಆಗಾಗ ಒಂದೊಂದು ಮಾತಾಡುತ್ತಲೂ ಪ್ರಶ್ನೆಹಾಕುತ್ತಲೂ ಅದು ಚೆನ್ನಾಗಿದೆ ಇದು ಚೆನ್ನಾಗಿದೆ ಎಂದು ಪ್ರಶಂಸಿಸುತ್ತಲೂ ಚಲಿಸುತ್ತಿದ್ದರು.

"ಇವನೇ ಬುದ್ಧದೇವ. ಶುದ್ಧೋದನ ಎಂಬ ದೊರೆಗೆ ಮಗನಾಗಿದ್ದ. ಅವನು ಹುಟ್ಟಿದಾಗ ಜೋಯಿಸರು, ಇವನು ಸಂಸಾರ ತ್ಯಾಗಮಾಡಿ ಸಂನ್ಯಾಸಿಯಾಗುತ್ತಾನೆ ಎಂದು ಭವಿಷ್ಯ ಹೇಳಿದ್ದರಂತೆ. ಅದಕ್ಕಾಗಿ ರಾಜ ಲೋಕದ ಕಷ್ಟ ಸಂಕಟಗಳು ಮಗನ ಕಣ್ಣಿಗೆ ಬೀಳದಂತೆ ಮಾಡಿದ್ದನಂತೆ. ಆದರೆ ಒಂದು ಸಾರಿ ಅವನು ತನ್ನ ರಾಜಧಾನಿಯಲ್ಲಿ ರಥದಮೇಲೆ ಕೂತುಕೊಂಡು ಹೋಗುತ್ತಿದ್ದಾಗ ಒಬ್ಬ ರೋಗಿಯನ್ನೂ, ಒಬ್ಬ ಅಂಗಹೀನನನ್ನೂ, ಒಬ್ಬ ಮುದುಕನನ್ನೂ ಒಂದು ಹೆಣವನ್ನೂ, ಒಬ್ಬ ಸಂನ್ಯಾಸಿಯನ್ನೂ ಕಂಡು, ತನ್ನ ಸಾರಥಿಯಿಂದ ವಿಷಯವನ್ನೆಲ್ಲ ಕೇಳಿ ತಿಳಿದುಕೊಂಡನು. ಆಮೇಲೆ ಅವನ ಮನಸ್ಸು ಅರಮನೆಯ ಭೋಗಗಳ ಕಡೆಗೆ ಹೋಗಲಾರದೆಹೋಯಿತು. ಮನುಷ್ಯನ ಬಾಳು ನಶ್ವರ ದುಃಖಮಯ ಎಂದು, ಆ ದುಃಖದಿಂದ ಪಾರಾಗುವ ವಿಧಾನವನ್ನು ಕಂಡು ಹಿಡಿಯಬೇಕೆಂದು ನಿರ್ಧರಿಸಿದನು. ರಾಜನು ಮಗನು ಮನೆಬಿಟ್ಟು ಹೋಗದಿರಲಿ ಎಂದು ಒಂದು ಚೆಲುವಾದ ಹೆಣ್ಣನ್ನು ಮದುವೆಮಾಡಿದ್ದನು. ಬುದ್ಧ ಅವಳೊಡನೆ ಕೆಲವು ಕಾಲ ಸುಖವಾಗಿದ್ದನು. ಆದರೆ ಅವನ ಅಂತರಂಗ ಕ್ರಮ ಕ್ರಮೇಣ ಸಂಸಾರಸುಖದಿಂದ ದೂರವಾಗುತ್ತಿತ್ತು. ಹೀಗಿರುತ್ತ ಒಂದು ರಾತ್ರಿ ರಾಜ್ಯವನ್ನೂ ತಂದೆ ತಾಯಿಗಳನ್ನೂ ಅರಮನೆಯನ್ನೂ ಆ ಎಲ್ಲ ಸುಖಭೋಗಗಳನ್ನೂ ತೊರೆದು ತಪಸ್ಸಿಗೆ ಹೋಗಬೇಕೆಂದು ಮನಸ್ಸುಮಾಡಿದನು. ಅದೇ ರಾತ್ರಿ ಅವನ ಹೆಂಡತಿ ಒಂದು ಮಗು ಹೆತ್ತಳು. . . ."

"ಗಂಡೋ ಹೆಣ್ಣೋ" ಎಂದು ಕೇಳಿದಳು ಪುಟ್ಟಮ್ಮ.

ಹೂವಯ್ಯ ರಾಮಯ್ಯರು ನಕ್ಕರು. ಉಳಿದ ಯಾರಿಗೂ ಆ ಪ್ರಶ್ನೆ ಹಾಸ್ಯಾಸ್ಪದವಾಗಿರಲಿಲ್ಲ. ಅದಕ್ಕೆ ಬದಲಾಗಿ ಅವರೆಲ್ಲರೂ ಉತ್ತರವನ್ನೇ ನಿರೀಕ್ಷಿಸುತ್ತಿದ್ದಂತೆ ತೋರಿತು.

"ಗಂಡು!" ಎಂದು ಮತ್ತೆ ಪ್ರಾರಂಭಿಸಿ ಹೂವಯ್ಯ ಸ್ವಾರಸ್ಯವಾಗಿ ವಿವರವಾಗಿ ಸಿದ್ಧಾರ್ಥನ ರಾಜ್ಯಪರಿತ್ಯಾಗದ ಮಹಾರಾತ್ರಿಯಲ್ಲಿ ನಡೆದ ಘಟನೆ

ಗಳನ್ನು ವರ್ಣಿಸತೊಡಗಿದನು. ಎಲ್ಲರೂ ಉಸಿರುಕಟ್ಟಿ ನಿಂತು ಕೇಳು ತ್ತಿದ್ದರು.

ಧ್ಯಾನಮಗ್ನ ಬುದ್ಧದೇವನ ಪ್ರಶಾಂತಮೂರ್ತಿ ಶತಮಾನಗಳ ಮೌನ ಗಾಂಭೀರ್ಯಗಳಿಂದ ಮುದ್ರಿತವಾಗಿ ಮಲೆನಾಡಿನ ಕಾಡಿನ ಮೂಲೆಯ ಕೆಳಕಾನೂರಿನ ಹುಲ್ಲುಮನೆಯ ಗೋಡೆಯಮೇಲೆ ನಿಷ್ಪಂದವಾಗಿತ್ತು.

"ಮನಸ್ಸಿಲ್ಲದ ಮನಸ್ಸಿನಿಂದ ಆ ರಾತ್ರಿ, ಬಾಣಂತಿಯಾಗಿದ್ದ ತನ್ನ ಹೆಂಡತಿ ಯನ್ನೂ ಹಾಲುಹಸುಳೆಯಾಗಿದ್ದ ತನ್ನ ಮಗನನ್ನೂ ಎಲ್ಲರೂ ಮಲಗಿದ್ದಾಗ ಹೋಗಿ ನೋಡಿಕೊಂಡು ಬಂದು ನಡುರಾತ್ರಿಯಲ್ಲಿ ಸಾರಥಿಯ ಸಹಾಯದಿಂದ ತನ್ನ ಪ್ರೀತಿಯ ಕುದುರೆಯನ್ನೇರಿ ಬಹುದೂರ ಹೋದನು."—ಎಂಬುದನ್ನು ಹೂವಯ್ಯ ಕಾವ್ಯವಾಣಿಯಿಂದ ಹೇಳಿದಾಗ ಎಲ್ಲರ ಕಣ್ಣಿನಲ್ಲಿಯೂ ಹನಿಯಾಡು ತ್ತಿತ್ತು.

"ಛೇ! ಹಾಂಗೆ ಮಾಡ್ಬಾರದಾಗಿತ್ತು!" ಎಂದು ವಾಸು ಹೇಳಿಯೆ ಬಿಟ್ಟನು.

ವಿಮರ್ಶೆಗೆ ಪಾತ್ರನಾಗಿದ್ದ ಬುದ್ಧ ಕೂಡ ವಾಸುವಿನೊಡನೆ ಸಹಾನುಭೂತಿ ತೋರಿಸದೆ ಇರುತ್ತಿರಲಿಲ್ಲ.

ಹೂವಯ್ಯ ಕಥೆಯನ್ನು ಮುಂಬರಿಸಿ, ಸಿದ್ಧಾರ್ಥ ಬುದ್ಧದೇವನಾದುದನ್ನೂ, ಅವನ ಹೆಂಡತಿಯೂ ಬಂಧುಗಳೂ ಶಿಷ್ಯವರ್ಗಕ್ಕೆ ಸೇರಿದುದನ್ನೂ, ಲೋಕವೆಲ್ಲ ಅವನ ಅನುಯಾಯಿಯಾದುದನ್ನೂ ಹೇಳಿ ಮುಗಿಸಿ ಮುಂದೆ ನಡೆದನು.

ತರುವಾಯ ಯೇಸು ಕ್ರಿಸ್ತನನ್ನು ಶಿಲುಬೆಗೆ ಹಾಕಿದ ಚಿತ್ರವನ್ನೂ, ಯಮ, ಸತ್ಯವಾನ್, ಸಾವಿತ್ರಿ ಇವರಿರುವ ಚಿತ್ರವನ್ನೂ ದೀರ್ಘವಾಗಿ ವಿವರಿಸಿದನು.

ಆಲಿಸುತ್ತ ಆಲಿಸುತ್ತ ಸೀತೆ ಹೂವಯ್ಯನಿಗೆ ಎಷ್ಟು ಸಮೀಪ ಬಂದಿದ್ದಳೆಂದರೆ ತನ್ನ ಮೈ ಅವನ ಮೈಗೆ ಸೋಂಕುತ್ತಿದ್ದುದನ್ನೂಕೂಡ ಆಕೆ ಗಮನಿಸಿರಲಿಲ್ಲ. ಇನಿಯನ ಭಾವಮಯ ವಾಕ್ಯಗಳನ್ನು ಕೇಳುತ್ತ ಕೇಳುತ್ತ ಆಕೆಯ ಹೃದಯ ನಂದನೋದ್ಯಾನವಾಗಿತ್ತು; ಆಕೆಯ ಮನಸ್ಸು ಕಲ್ಪನೆಗಳ ಮಂತ್ರಮಂಜೂಷ ವಾಗಿತ್ತು. ಬುದ್ಧನಿಗೆ ಆತನ ಪತ್ನಿ ಶಿಷ್ಯೆಯಾದಂತೆ ತಾನೂ ಹೂವಯ್ಯನಿಗೆ ಶಿಷ್ಯೆಯಾಗುತ್ತೇನೆಂದೂ ಸಾವಿತ್ರಿ ತನ್ನ ಪತಿಯೊಡನೆ ಯಮಲೋಕಕ್ಕೆ ಹೋಗಲು ಸಿದ್ಧಳಾಗಿದ್ದಂತೆ ತಾನೂ ಹೂವಯ್ಯನೊಡನೆ ಹೋಗಲು ಸಿದ್ಧಳಾಗುತ್ತೇನೆಂದೂ ಚಿನ್ನದ ಕನಸುಗಳನ್ನು ಕಟ್ಟುತ್ತಿದ್ದಳು.

ಸೀತೆ ಹೂವಯ್ಯನಿಗೆ ಅಷ್ಟು ಸಮೀಪವಾಗಿ ಮೈಗೆ ಮೈ ತಾಗಿಸುತ್ತ ಹೋಗು ತ್ತಿದ್ದುದನ್ನು ನೋಡಿದಮೇಲೆ, ರಾಮಯ್ಯನ ಮನಸ್ಸು ಹೂವಯ್ಯ ಮಾಡುತ್ತಿದ್ದ

ಚಿತ್ರಪಟದ ವಿವರಣೆಯ ಕಡೆಗೆ ಹೋಗಲಿಲ್ಲ. ಅವನಿಗೆ ಅನೇಕ ದಿನಗಳಿಂದ ದೂರದ ಸಂದೇಹಮಾತ್ರವಾಗಿದ್ದ ಯಾವುದೋ ಒಂದು ಭೀತಿ ಸೀತೆ ಹೂವಯ್ಯರ ಸಾಮಿಪ್ಯವನ್ನು ಕಂಡೊಡನೆ ಸ್ಪಷ್ಟವಾಗತೊಡಗಿತು. ಹೂವಯ್ಯನ ಪರವಾಗಿ ತಾನು ಹಿಂದೆ ಎಂದೂ ಅನುಭವಿಸದಿದ್ದ ಒಂದು ಭಾವ ಅವನ ಎದೆಯಲ್ಲಿ ಸುಳಿಯಿತು. ಆಗತಾನೇ ಹುಟ್ಟಿ ಕಣ್ಣುಬಿಡುವುದರಲ್ಲಿದ್ದ ಆ ಭಾವಕ್ಕೆ 'ಪ್ರಣಯ ಮಾತ್ಸರ್ಯ' ಎಂಬ ಹೆಸರು ಬಹಳ ಹೆಚ್ಚಿನದಾದರೂ ಅದರಲ್ಲಿ ಒಂದು ಸ್ವಲ್ಪ ಅಹಿತತ್ವವಿತ್ತು ಎಂದು ಹೇಳಬೇಕಾಗುತ್ತದೆ.

ಮರುದಿನ ಬೆಳಿಗ್ಗೆ ಸಿಂಗಪ್ಪಗೌಡರು ಸೀತೆಮನೆಗೆ ಹೊರಟುಹೋದರು. ತಂದೆ ಹೇಳಿದ್ದಾರೆ ಎಂದು ರಾಮಯ್ಯನೂ ಚಿನ್ನಯ್ಯ, ಸೀತೆ, ಪುಟ್ಟಮ್ಮ ಇವರನ್ನು ಕರೆದುಕೊಂಡು ಕಾನೂರಿಗೆ ಹೋದನು. ಹೊರಡುವಾಗ ಸೀತೆ ತನ್ನ ಹೃದಯ ವನ್ನು ಮುಚ್ಚಿಕೊಳ್ಳಬೇಕೆಂದು ಎಷ್ಟು ಪ್ರಯತ್ನಪಟ್ಟರೂ ಕಣ್ಣು ಹನಿಹಾಕಿ, ಹೃದಯಕ್ಕೆ ದ್ರೋಹಮಾಡಿತು.

ವಾಸು ಯಾರು ಎಷ್ಟು ಹೇಳಿದರೂ ಕೇಳದೆ ಕಾನೂರಿಗೆ ಹೋಗಲು ಒಪ್ಪಲಿಲ್ಲ. ಹೂವಣ್ಣಯ್ಯನ ಜೊತೆಯಲ್ಲಿ ಇರುತ್ತೇನೆ ಎಂದು ಹಟಹಿಡಿದು ನಿಂತುಬಿಟ್ಟನು.

ಹೂವಯ್ಯ ನಂಟರೆಲ್ಲರನ್ನೂ ಸ್ವಲ್ಪದೂರ ಕಳುಹಿಸುತ್ತ ಗದ್ದೆಯನ್ನು ದಾಟಿ ಹಳ್ಳದವರೆಗೆ ಹೋಗಿ, ಅಲ್ಲಿ ಕಾಲುಗಂಟೆಯ ಕಾಲ ಮಾತಾಡುತ್ತ ನಿಂತು, ಮಳೆ ಸುರಿಯಲು ತೊಡಗಿದ ಮೇಲೆಯೇ ಮನಸ್ಸಿಲ್ಲದ ಮನಸ್ಸಿನಿಂದ ಬೀಳ್ಕೊಂಡು ಹಿಂದಕ್ಕೆ ಬಂದನು. ಬೀಳ್ಕೊಳ್ಳುವಾಗ ಸೀತೆಯಕಡೆಗೆ ನೋಡಿದನು. ಅವಳಂತೂ ಅವನನ್ನೇ ನೋಡುತ್ತ ನಿಂತಿದ್ದಳು. ಆ ಕ್ಷಣದಲ್ಲಿ ಅವರಿಬ್ಬರ ಮನಸ್ಸಿಗೂ ಜಗತ್ತು ವಿರಹದ ನರಕದಂತೆ ತೋರಿರಬೇಕು.

ನಿತ್ಯವೂ ತಪ್ಪದೆ ಕೆಳಕಾನೂರಿಗೆ ಬಂದು ಹೋಗುತ್ತಿದ್ದ ರಾಮಯ್ಯ ಸೀತೆ ಕಾನೂರಿನಲ್ಲಿರುವವರೆಗೆ ಅತ್ತಕಡೆಗೆ ಮುಖಹಾಕಲಿಲ್ಲ! ವಾಸು ಪಂಜರದಿಂದ ಬಿಡುಗಡೆಹೊಂದಿದ ಹಕ್ಕಿಯಂತೆ ಪ್ರಾತಃಸೂರ್ಯನ ಕೋಮಲ ರುಕ್ಮರಶ್ಮಿಯಲ್ಲಿ ಬೆಟ್ಟದ ನೆತ್ತಿಯ ಮರದ ತುತ್ತತುದಿಯಲ್ಲಿ ಕುಳಿತು ಗಾನೋನ್ಮತ್ತನಾಗಿದ್ದನು.

# ೪೭

## ಚಂದ್ರಯ್ಯಗೌಡರಿಗೆ ಕೃಷ್ಣಪಕ್ಷ ಹಿಡಿಯಿತು

ಚಿನ್ನಯ್ಯ ಸೀತೆ ಪುಟ್ಟಮ್ಮರೊಡನೆ ರಾಮಯ್ಯ ತಮ್ಮ ಮನೆಗೆ ಬಂದೊಡನೆ ಚಂದ್ರಯ್ಯಗೌಡರು 'ವಾಸು ಎಲ್ಲಿ?' ಎಂದು ಕೇಳಿದರು. ಅವನು ಒಂದೆರಡು ದಿನ ಅಲ್ಲಿಯೇ ಇರುತ್ತಾನಂತೆ ಎಂದು ರಾಮಯ್ಯ ಹೇಳಲು ಗೌಡರ ಮುಖ ಕ್ಷಣಾರ್ಧ ಮಾತ್ರ ಕ್ರೋಧದಿಂದ ವಿಕಾರವಾಗಿ ಉತ್ತರಕ್ಷಣದಲ್ಲಿಯೆ ಮನೆಗೆ ಬಂದ ನಂತರೊಡನೆ ಶಾಂತವಾಗಿ ಮಾತಾಡತೊಡಗಿದರು. ತಂದೆ ಅಷ್ಟರಮಟ್ಟಿಗೆ ಪ್ರಶಾಂತರಾದುದನ್ನು ಕಂಡು ರಾಮಯ್ಯನಿಗೆ ಆಶ್ಚರ್ಯವಾಯಿತು.

ಎರಡು ದಿನಗಳ ಮೇಲೆ ರಾಮಯ್ಯನಿಗೆ ತಂದೆಯ ಪ್ರಶಾಂತತೆ ಉನ್ಮಾದಕ್ಕೆ ಹತ್ತಿರವಾದ ಪ್ರಚ್ಛನ್ನ ಕ್ರೋಧವೆಂಬುದು ಸ್ಪಷ್ಟವಾಗತೊಡಗಿತು. ಚಿನ್ನಯ್ಯ ಸೀತೆಯರನ್ನು ಮನೆಯಿಂದ ಸ್ವಲ್ಪದೂರ ಹೋಗಿ ಕಳುಹಿಸಿ ಬರುತ್ತಿದ್ದಾಗ, ತೆಂಗಿನಮರದ ಮೇಲೆ ಕಾಗೆಯೊಂದು ಕುಳಿತು ವಿಷಣ್ಣವಾಗಿ ಕಾ ಕಾ ಕಾ ಎಂದು ಕಾಗರೆಯುತ್ತಿತ್ತು. ಅದನ್ನು ನೋಡಿ ಗೌಡರಿಗೆ ಸಿಟ್ಟಾಯಿತು. "ಹಾಳು ಕಾಗೆ ಏನು ಅಪಶಕುನ ಕೂಗ್ತದೆ! ಏ ನಿಂಗಾ ಆ ಕೋವಿ ತಗೊಂಡು ಬಾ ಇಲ್ಲಿ" ಎಂದರು.

ನಿಂಗ ಒಳಗೆ ಹೋಗಿ ಬಂದೂಕನ್ನೂ ತೋಟಾಗಳನ್ನೂ ತಂದುಕೊಟ್ಟನು. ಈಡು ಹಾರಿದ ಕೂಡಲೆ ಕಾಗೆ ಮರದ ನೆತ್ತಿಯಿಂದ ಉರುಳಿಬಿದ್ದಿತು. ನಾಯಿಗಳೆಲ್ಲ ಅದರ ಬಳಿಗೆ ಓಡಿ ನುಗ್ಗಿದುವು. ಡೂಲಿ ಕಾಗೆಯನ್ನು ಬಾಯಲ್ಲಿ ಕಚ್ಚಿ ಎತ್ತಿಕೊಂಡು ಬಂದು ಗೌಡರ ಹತ್ತಿರ ಹಾಕಿತು. ನಾಯಿಗಳೆಂದರೆ ಹಚೀ ಹಚೀ ಎನ್ನುತ್ತಿದ್ದ ಗೌಡರು ಡೂಲಿಯನ್ನು ಬಹಳವಾಗಿ ಪ್ರಶಂಸಿಸಿ, ಮುದ್ದಿಸಿ, ಶಹಬಾಸ್‌ಗಿರಿ ಕೊಟ್ಟರು. ಮನಃಶಾಸ್ತ್ರಜ್ಞರಾರಾದರೂ ನೋಡಿದ್ದರೆ ಗೌಡರಿಗೆ ತಮ್ಮ ಕಿರಿಮಗನ ಮೇಲಿದ್ದ ಕ್ರೋಧದ ರೂಪಾಂತರವನ್ನು ಅದರಲ್ಲಿ ಕಾಣುತ್ತಿದ್ದರೆಂದು ತೋರುತ್ತದೆ.

ಸಾಲದಿದ್ದುದಕ್ಕೆ ಆ ದಿನವೇ ಕನ್ನಡ ಜಿಲ್ಲೆಯಿಂದ ಆಳುಗಳೊಡನೆ ಹಿಂತಿರುಗಿ ಬಂದಿದ್ದ ಸೇರೆಗಾರರನ್ನು ಕರೆದು "ಈ ತೆಂಗಿನಮರ ನಾಳೆ ಕಡಿಸಿಹಾಕಿ ಬಿಡಿ" ಎಂದು ಅಪ್ಪಣೆ ಮಾಡಿದರು.

ಅನೇಕ ತಲೆಮಾರುಗಳಿಂದ ಬೆಳೆದುಕೊಂಡುಬಂದು ಬೇಕಾದಷ್ಟು ಫಲವನ್ನೂ

ಕೊಟ್ಟಿದ್ದ ಆ ವೃದ್ಧವೃಕ್ಷವನ್ನು ನೋಡಿ ಕನಿಕರದಿಂದ ಸೇರೆಗಾರರು "ಹೌದಾ, ಸ್ವಾಮಿ, ಅದು ಇದ್ದರೆ ನಿಮಗೇನು ಮಾಡುತ್ತದೆ. ಅಲ್ಲದೆ ಅದನ್ನು ಕಲ್ಪವೃಕ್ಷ ಅಂಬರು. ಅದೇ ಬಿದ್ದು ಹ್ವೋದ್ರೆ ಹ್ವೋಗ್ಲಿ. ನಾವು ಕಡಿದು ಪಾಪ ಕಟ್ಟಿಕೊಳ್ಳುವುದು ಬೇಡ" ಎಂದರು.

ಗೌಡರು ಇದ್ದಕ್ಕಿದ್ದಹಾಗೆ ಉರಿದೆದ್ದು "ನಿಮಗ್ಯಾಕ್ರೀ ಆ ಪುರಾಣ? ಹೇಳಿದಷ್ಟು ಕೆಲ್ಸಾಮಾಡಿ. ಕಲ್ಪವೃಕ್ಷವಂತೆ! ಕಾಮಧೇನುವಂತೆ! ಕೆಲಸಕ್ಕೆ ಬಾರದ ಬಂಜೆಮರ ಇದ್ದರೇನು? ಹೋದ್ರೇನು?" ಎಂದರು.

ಮರುದಿನ ಗೌಡರು ತಾವೇ ಖುದ್ದು ನಿಂತು ತೆಂಗಿನ ಮರವನ್ನು ಕಡಿಸಿದರು.

ಗೌಡರು ಅದನ್ನು ಮುದ್ದಿಸಲಾರಂಭಿಸಿದ ಮೇಲೆ ಡೂಲಿ ಮೂರುಹೊತ್ತೂ ಅವರ ಬಳಿಯೇ ಇರುತ್ತಿತ್ತು. ಅದಕ್ಕೆ ಊಟಉಪಚಾರಗಳೂ ಸಮೃದ್ಧಿಯಾಗಿ ನಡೆಯತೊಡಗಿದವು. ಗೌಡರು ತಮ್ಮ ಎಲೆಯಿಂದಲೇ ಹಾಲು ಮೊಸರನ್ನಗಳನ್ನೂ ಮಾಂಸ ಮತ್ತು ಎಲುಬಿನ ತುಂಡುಗಳನ್ನೂ ಅದಕ್ಕೆ ನೀಡುತ್ತಿದ್ದರು.

ಮೂರು ನಾಲ್ಕು ದಿನಗಳಾದಮೇಲೆ ಗೌಡರು ತಾವು ಸ್ನಾನಮಾಡುತ್ತಿದ್ದಾಗ ಡೂಲಿಗೂ ಸ್ನಾನಮಾಡಿಸಬೇಕೆಂದು ಪ್ರಯತ್ನಿಸಿದರು. ಆದರೆ ಅದು ಅಷ್ಟರ ಮಟ್ಟಿಗೆ ನಾಗರಿಕವಾಗಿರಲಿಲ್ಲ. ಒಂದು ಚೊಂಬು ನೀರು ಮೈಮೇಲೆ ಬಿದ್ದೊಡನೆ ಅವರ ಕೈಯಿಂದ ನುಣುಚಿಕೊಂಡು ಓಡಿಹೋಯಿತು. ಕೌಪೀನಧಾರಿಯಾಗಿ ಸ್ನಾನಕ್ಕೆ ಸಿದ್ಧರಾಗಿದ್ದ ಗೌಡರು ಡೂಲಿಯನ್ನು ಕರೆಯುತ್ತ ಹಿಂಬಾಲಿಸಿದರು. ಡೂಲಿ ನಿಂತು ನಿಂತು, ಹಿಂತಿರುಗಿ ನೋಡುತ್ತ ನೋಡುತ್ತ, ಗೌಡರು ಹತ್ತಿರ ಬರಲು ಕೈಗೆ ಸಿಕ್ಕದೆ ಓಡತೊಡಗಿತು. ಗೌಡರು ಒಂದೆರಡು ಸಾರಿ ನಿಂತು ನಿಂತು ಕ್ರೋಧವಾಣಿಯಿಂದ ನಾಯನ್ನು ಬಳಿಗೆ ಕರೆದರು. ಅದು ಬರಲಿಲ್ಲ. ರೇಗಿ, ಅಟ್ಟಿ ಹಿಡಿಯಲು ಪ್ರಯತ್ನಿಸಿದರು. ಮನೆ, ಕೊಟ್ಟಿಗೆ, ಕಣ ಎಲ್ಲೆಲ್ಲಿಯೂ ಅಟ್ಟಿದರು. ಕೌಪೀನ ವಿನಾ ನಗ್ನರಾಗಿದ್ದ ಗೌಡರು ಅಟ್ಟುತ್ತಿದ್ದುದನ್ನು ಕಂಡು ಪುಟ್ಟ, ನಿಂಗ ಇವರೂ ನೆರವಾದರು. ನಾಯಿಗೆ ಗಾಬರಿ ಹೆಚ್ಚಿ ಸಿಕ್ಕಾಬಟ್ಟೆ ಓಡತೊಡಗಿತು.

ಗೌಡರು ಕ್ರೋಧದಿಂದಲೂ ಆಯಾಸದಿಂದಲೂ ದೀರ್ಘಶ್ವಾಸೋಚ್ಛ್ವಾಸಗಳನ್ನು ಬಿಡುತ್ತ ನಿಂತು, ನಿಂಗನಿಗೆ ಬಂದೂಕು ತರಲು ಹೇಳಿದರು. ನಿಂಗ ಪ್ರತಿ ಮಾತಾಡಲು ಹೆದರಿ ಬಂದೂಕು ತಂದುಕೊಟ್ಟನು. ಅಷ್ಟರಲ್ಲಿ ಅಲ್ಲಿಗೆ ಓಡಿಬಂದಿದ್ದ ರಾಮಯ್ಯ ನಾಯಿಯನ್ನು ಹೊಡೆಯುವುದು ಬೇಡ ಎಂದು ಆಗ್ರಹಮಾಡಿದನು. ಗೌಡರು ಮಗನನ್ನು ಕೆಲಕ್ಕೆ ತಳ್ಳಿ "ಹೇಳಿದ ಮಾತು ಕೇಳದಿದ್ದ ಪ್ರಾಣಿ ಬದುಕಿರಬಾರದು" ಎಂದು ಹೇಳುತ್ತ ದೂರದಲ್ಲಿ ನಿಂತು

ಅವರನ್ನೇ ನೋಡುತ್ತಿದ್ದ ಡೂಲಿಗೆ ಗುರಿಯಿಟ್ಟರು. ಆ ಮೂಗುಪ್ರಾಣಿಗೆ ಗೌಡರ ಪ್ರಲಯಬುದ್ಧಿ ಅರ್ಥವಾಗಲಿಲ್ಲ. ಒಂದು ಸಾರಿ ಗಟ್ಟಿಯಾಗಿ ಕೂಗಿ ನಾಯಿಯನ್ನು ಹತ್ತಿರಕ್ಕೆ ಕರೆದರು. ಅದು ನಿಂತಲ್ಲಿಂದ ಅಲುಗಾಡಲಿಲ್ಲ. ಎರಡನೆಯ ಸಾರಿ ಕೂಗಿದರು. ಅದು ಸ್ವಲ್ಪ ಹೆದರಿ ಒಂದೆರಡು ಹೆಜ್ಜೆ ದೂರ ಸರಿಯಿತು. ಇತರರು ಹೇಗಾದರೂ ಅದರ ಜೀವ ಉಳಿದರೆ ಸಾಕೆಂದು 'ಬಾ, ಡೂಲಿ! ಬಾ, ಡೂಲಿ!' ಎಂದು ಕೂಗಿ ಕರೆಯುತ್ತಿದ್ದರು. ಗೌಡರು ಮೂರನೆಯ ಸಾರಿ ಕೂಗಿದರು. ನಾಯಿ ಹಿಂತಿರುಗುವುದರಲ್ಲಿತ್ತು. ಆದರೆ ಈಡೂ ಹಾರಿತ್ತು! ರಕ್ತದ ಕೆಸರಿನಲ್ಲಿ ಬಿದ್ದು ಕೂಗುತ್ತ ಹೊರಳಾಡಿ ಡೂಲಿ ಪ್ರಾಣ ಬಿಟ್ಟಿತು.

ಗೌಡರು ಸರಕ್ಕನೆ ಹಿಂತಿರುಗಿ ಹೋಗಿ ಸ್ನಾನಮಾಡಿದರು.

ಮಧ್ಯಾಹ್ನ ಊಟಮಾಡಿ ಮಲಗಿದವರಿಗೆ ಹಾಸಿಗೆಯಿಂದ ಏಳಲಾಗಲಿಲ್ಲ. ರಾಮಯ್ಯ ಹೋಗಿ ವಿಚಾರಿಸಿದನು. ಜ್ವರ ಬಂದಿದೆ ಎಂದರು.

ಆ ದಿನ ಸಾಯಂಕಾಲದಲ್ಲಿ ಗೌಡರ ಜ್ವರ ವಿಷಮಸ್ಥಿತಿಗೇರಿತು. ಬುದ್ಧಿ ವಿಕಾರದಿಂದ ಏನೇನೋ ಹಲವರಿಯತೊಡಗಿದರು. ತೆಂಗಿನಮರ ಕಡಿಸುವುದು, ಬಂಜೆಯಿಂದ ಪ್ರಯೋಜನವೇನು ಎಂದು ಗೊಣಗುವುದು, ಹೇಳಿದ ಮಾತು ಕೇಳದವರನ್ನು ಗುಂಡಿನಿಂದ ಹೊಡೆಯಬೇಕು ಎಂದು ಕೂಗುವುದು, ಅಯ್ಯೋ ವಾಸೂ ನನ್ನ ಬಿಟ್ಟು ಹೋದೆಯೇನೋ ಎಂದು ಮರುಗುವುದು — ಇತ್ಯಾದಿಯಾಗಿ ಅಸಂಬದ್ಧಪ್ರಲಾಪ ಮಾಡತೊಡಗಿದರು. ಅವರ ಹೆಂಡತಿ ಸುಬ್ಬಮ್ಮನನ್ನಂತೂ ಹತ್ತಿರಕ್ಕೆ ಬರಗೊಡಿಸದೆ 'ಥೂ, ಹಾದರಗಿತ್ತಿ, ನಡಿ!' ಎಂದು ಉಗುಳುತ್ತಿದ್ದರು. ರಾಮಯ್ಯನನ್ನು ಕಂಡರೂ ಪರಕೀಯನಂತೆ ಕಾಣ ಹತ್ತಿದರು. ಸೇರೆಗಾರ ರಂಗಪ್ಪಸೆಟ್ಟರು, ಅವರಿಗಿಂತಲೂ ವಿಶೇಷವಾಗಿ ಗಂಗೆ ಇವರಿಬ್ಬರು ಮಾತ್ರ ಅವರನ್ನು ಉಪಚರಿಸಿ ಹತೋಟಿಯಲ್ಲಿಡಲು ಸಮರ್ಥರಾಗುತ್ತಿದ್ದರು. ಗೌಡರಿಗೆ ಸ್ವಕೀಯರೇ ಪರಕೀಯರಂತೆಯೂ ಪರಕೀಯರೇ ಸ್ವಕೀಯರಂತೆಯೂ ಕಾಣತೊಡಗಿದ್ದಂತೆ ತೋರಿತು. ಗಂಗೆಯಲ್ಲಿ ಅವರಿಗಿದ್ದ ನಂಬುಗೆ ವಿಶ್ವಾಸಗಳು ಸುಬ್ಬಮ್ಮನಲ್ಲಿರಲಿಲ್ಲ.

ಮರುದಿನ ಅವರಿಗೆ ಜ್ವರ ಸ್ವಲ್ಪ ಇಳಿದಿದ್ದರೂ ಮನೋವಿಕಾರವೇನೊ ಇಳಿದಂತೆ ತೋರುತ್ತಿರಲಿಲ್ಲ. ರಾಮಯ್ಯ ತೀರ್ಥಹಳ್ಳಿಯಿಂದ ಡಾಕ್ಟರನ್ನು ಕರೆಸುತ್ತೇನೆ ಎಂದು ಹೇಳಿದಾಗ ಅವನ ಮೇಲೆ ರೇಗಿ ಬಯ್ದು "ಡಾಕ್ಟರಿಂದ ಏನಾಗ್ತದೋ? ಭೂತರಾಯನ ಚೇಷ್ಟೆ! ಎಲ್ಲ ಆ ಹೂವಯ್ಯನ ಮಾಟ! ಕೆಳಕಾನೂರ ಅಣ್ಣಯ್ಯಗೌಡನ ಕರೆಸೋ! ನೀವೆಲ್ಲ ಸೇರಿಕೊಂಡು ನನ್ನ ತಗೀಬೇಕು ಅಂತಾ ಮಾಡೀರಿ!" ಎಂದು ಕಣ್ಣೀರು ಕರೆಯತೊಡಗಿದರು.

ಕೆಳಕಾನೂರು ಅಣ್ಣಯ್ಯಗೌಡರು ಕೆಲವು ತಿಂಗಳ ಹಿಂದೆ ಊರು ಬಿಟ್ಟು ಹೋದುದನ್ನು ನೆನಪಿಗೆ ತಂದುಕೊಟ್ಟು, ಅವರೆಲ್ಲಿದ್ದಾರೆಯೋ ಅದೂ ಗೊತ್ತಿಲ್ಲ ಎಂದು ಹೇಳಲು, ಗೌಡರು ನರಳಿ ನಿಟ್ಟುಸಿರು ಬಿಟ್ಟು "ಮಾಡೀ! ಮಾಡೀ! ಏನೇನು ಮಾಡ್ತೀರೋ ಎಲ್ಲ ಮಾಡಿ!" ಎಂದು ಹೊದೆದಿದ್ದ ಕಂಬಳಿಯಿಂದ ಮುಖ ಮುಚ್ಚಿಕೊಂಡರು.

ರಾಮಯ್ಯ ತಂದೆಯ ನಂಬುಗೆಯ ಸಲುವಾಗಿ ಸೇರೆಗಾರರಿಂದ ಭೂತ ರಾಯನಿಗೆ ಕಾಣಿಕೆ ಕಟ್ಟಿಸಿ ಹೇಳಿಕೊಂಡನು.

ಮಧ್ಯಾಹ್ನ ವಾಸುವನ್ನು ಕೆಳಕಾನೂರಿನಿಂದ ಕರೆತರಿಸಿದನು. ಗೌಡರು ಅವನನ್ನು ನೋಡಿದ ಕೂಡಲೆ "ಯಾರೋ ಅದು?" ಎಂದರು.

"ನಾನು, ಅಪ್ಪಯ್ಯಾ" ಎಂದನು ವಾಸು.

"ಯಾರೋ ನೀನು ಸತ್ತುಹೋದ ಅಂತಾ ಹೇಳಿದ್ರಲ್ಲೋ" ಎಂದು ಗೌಡರು ಹೇಳಲು, ಪಕ್ಕದಲ್ಲಿದ್ದ ಗಂಗೆ—

"ಥೆ! ಎಂತ ಹಾಳು ಬಾಯಿ ನುಡೀತೀರಿ?" ಎಂದು ಗದರಿಸಿದಳು. ಗೌಡರು ಮಾತಾಡಲಿಲ್ಲ.

ಸಾಯಂಕಾಲದ ಹೊತ್ತಿಗೆ ಅಗ್ರಹಾರದ ಜೋಯಿಸರು ವೆಂಕಪ್ಪಯ್ಯನವರೂ ದಯಮಾಡಿಸಿದರು. ಅವರಂತೂ ದೊಡ್ಡ ಪ್ರವಾಹದಲ್ಲಿ ಸೇತುವೆಯೊಂದು ಮುರಿದುಬೀಳುವ ಚಿಹ್ನೆ ತೋರಿದಾಗ ಅದರ ರಕ್ಷಣಾರ್ಥವಾಗಿ ಅಲ್ಲಿಗೆ ಕರೆಯಲ್ಪಡುವ ಎಂಜಿನಿಯರು ಯಾವ ಅಧಿಕಾರದಿಂದ, ದರ್ಪದಿಂದ, ಹೆಮ್ಮೆಯಿಂದ, ಹುಕುಂ ಚಲಾಯಿಸುತ್ತಾನೆಯೋ ಅದಕ್ಕಿಂತಲೂ ಹೆಚ್ಚಾದ ರೀತಿಯಲ್ಲಿ ವರ್ತಿಸುತ್ತಿದ್ದರು.

ಜೋಯಿಸರಿಗೆ ರೋಗವೇನೆಂದು ಗೊತ್ತಾಗದಿದ್ದರೂ ತಮಗೆ ತಿಳಿದಿದ್ದ ಔಷಧಿಗಳನ್ನೆಲ್ಲ ಒಂದಾದಮೇಲೊಂದನ್ನು ಪ್ರಯೋಗಿಸತೊಡಗಿದರು. ಜೊತೆಗೆ ಹಾದಿದಾನ ಬೀದಿದಾನ ಮಂತ್ರ ತಂತ್ರಗಳೇ ಮೊದಲಾದ ದೈವಿಕ ವಿಧಾನಗಳನ್ನೂ ಪ್ರಯೋಗಿಸಿದರು.

ರೋಗ ಪ್ರಬಲತರವಾಯಿತು. ನಾಲ್ಕನೆಯ ದಿನ ರಾಮಯ್ಯ ಹತಾಶ ನಾಗಿ ಕೆಳಕಾನೂರಿಗೆ ಓಡಿದನು. ಹೂವಯ್ಯ ಪುಟ್ಟಣ್ಣನೊಡಗೂಡಿ ಮನೆಯ ಅಂಗಳದಲ್ಲಿ ಒಂದು ಸಣ್ಣ ಹೂವಿನ ತೋಟದ ರಚನೆಯಲ್ಲಿ ತೊಡಗಿದ್ದವನು ರಾಮಯ್ಯನಿಂದ ಸಂಗತಿ ಎಲ್ಲವನ್ನೂ ಕೇಳಿ, ಕೂಡಲೆ ತೀರ್ಥಹಳ್ಳಿಯಿಂದ ಸರ್ಕಾರಿ ಡಾಕ್ಟರನ್ನು ಕರೆಯಿಸುವಂತೆ ಹೇಳಿದನು.

ರಾಮಯ್ಯ "ಅವರು ಸರ್ಕಾರಿ ಡಾಕ್ಟರೆಂದರೆ ರೇಗುತ್ತಾರೆ! ಏನು ಮಾಡೋದು?" ಎಂದನು.

"ರೇಗಿದರೆ ರೇಗಲಿ! ರೋಗಿಯ ಮಾತು ಕೇಳಬಾರದು! ಮೊದಲು ಆ ಜೋಯಿಸರಿಗೆ 'ಔಷಧಿ ಕೊಡುವುದು ಬೇಡ' ಎಂದು ಹೇಳಿ ನಿಲ್ಲಿಸಿಬಿಡು. ಆ ಅಳಲೇಕಾಯಿ ಪಂಡಿತರಿಂದ ಉಳಿಗತಿಯಿಲ್ಲ."

"ನೀನೂ ಬಂದಿದ್ದರೆ ಚೆನ್ನಾಗಿತ್ತು..."

"ನಾನು ಮಾಟ ಮಾಡಿದ್ದೇನೆ ಎಂದು ಹೇಳಿದರು ಅಂತಾ ಹೇಳ್ತೀಯ. ನನ್ನ ನೋಡಿದರೆ ಅವರ ಬುದ್ಧಿವಿಕಾರ ಇನ್ನೂ ಹೆಚ್ಚಿಬಿಟ್ಟರೆ?"

ಕಡೆಗೂ ರಾಮಯ್ಯನ ಧೈರ್ಯಕ್ಕೋಸ್ಕರ ಹೂವಯ್ಯನೂ ಕಾನೂರಿಗೆ ಹೋದನು. ಆದರೆ ಚಂದ್ರಯ್ಯಗೌಡರು ಅವನನ್ನು ಕಂಡೊಡನೆ ಕಾಹಿಲೆಯಿಂದ ಅಶಕ್ತರಾಗಿದ್ದರೂ ಆದಷ್ಟು ಗಟ್ಟಿಯಾಗಿ ಬಾಯಿಗೆ ಬಂದಂತೆ ಬಯ್ದು, ತಮ್ಮ ಕಣ್ಣುಮುಂದೆ ನಿಲ್ಲಬಾರದೆಂದು ಕೂಗಿಕೊಂಡರು. ಆಮೇಲೆ ಹೂವಯ್ಯ ಅವರಿಗೆ ಕಾಣಿಸಿಕೊಳ್ಳದಂತೆ ಜಾಗರೂಕನಾದನು.

ತೀರ್ಥಹಳ್ಳಿಯಿಂದ ಡಾಕ್ಟರು ಬಂದು ಸೂಜಿಮದ್ದನ್ನೂ ಔಷಧಿಯನ್ನೂ ಕೊಟ್ಟು, ಪಥ್ಯಗಳನ್ನೆಲ್ಲಾ ಹೇಳಿ, ಶುಶ್ರೂಷೆಯ ವಿಧಾನಗಳನ್ನೂ ತಿಳಿಸಿ, ಪ್ರತಿದಿನವೂ ಬಂದು ಔಷಧಿ ತೆಗೆದುಕೊಂಡುಹೋಗುವಂತೆ ಅಪ್ಪಣೆಮಾಡಿ ಫೀಜು ತೆಗೆದುಕೊಂಡು ಮರಳಿದರು.

ಎಂಟು ಹತ್ತು ದಿನಗಳಲ್ಲಿ ಗೌಡರ ದೈಹಿಕ ರೋಗ ಗುಣವಾಯಿತು. ಆದರೆ ಬುದ್ಧಿವಿಕಾರ ಸಂಪೂರ್ಣವಾಗಿ ಹೋಗಲಿಲ್ಲ. ಸುಬ್ಬಮ್ಮನನ್ನು ಬಂಜೆ, ಹಾದರಗಿತ್ತಿ ಎಂದು ಮೊದಲಾಗಿ ಶಪಿಸುತ್ತಿದ್ದರು. ಮನೆಯವರನ್ನೆಲ್ಲ ಜುಗುಪ್ಸೆಯಿಂದ ಕಾಣತೊಡಗಿದರು. ಗಂಗೆಯೊಬ್ಬಳೇ ಅವರಿಗೆ ಅತ್ಯಂತ ಹಿತಕಾರಿಣಿಯಾಗಿದ್ದಳು.

ಮೊದಲಿದ್ದ ಶಕ್ತಿಯಾಗಲಿ ದರ್ಪವಾಗಲಿ ಗಾಂಭೀರ್ಯವಾಗಲಿ ಅವರಿಗೆ ಮರಳಿ ಬರಲಿಲ್ಲ. ಅದಕ್ಕೆ ಬದಲಾಗಿ ಕ್ರೋಧ, ಧೂರ್ತವರ್ತನೆ, ಸಿಡುಕುಬುದ್ಧಿ, ನಡುನಡುವೆ ಉನ್ಮಾದಪ್ರಕೃತಿ ಇವುಗಳು ಹೆಚ್ಚಿದುವು.

ದಿನಗಳು ಸಾಗಿದುವು. ಅಡಕೆಯ ಕೊಯಿಲು ಬಂದಿತು. ರಾಮಯ್ಯನೇ ಮುತುವರ್ಜಿಯಿಂದ ಕೊನೆ ತೆಗೆಯುವವರನ್ನು ಗೊತ್ತುಮಾಡಿ, ಕೊನೆ ತೆಗೆಸಿದನು.

ಅಡಕೆ ಸುಲಿಯುವುದು, ಬೇಯಿಸುವುದು, ಹರಡುವುದು, ಮಧ್ಯೆ ಮಧ್ಯೆ ಕೆಳಕಾನೂರಿಗೆ ಹೋಗಿ ಹೂವಯ್ಯನಿಗೂ ಕೆಲಸದಲ್ಲಿ ಸಹಾಯಮಾಡುವುದು, ಆಗಾಗ ಕೋವಿ ಹಿಡಿದುಕೊಂಡು ಇಬ್ಬರೂ ಕಾಡಿನಲ್ಲಿ ಬೇಟೆಯಾಡುವುದು — ಹೀಗಿರುತ್ತಿರಲು ಭೂಮಿ ಹುಣ್ಣಿಮೆಯ ಹಬ್ಬ ಬಂದಿತು.

೪೭

## ಭೂಮಿ ಹುಣ್ಣಿಮೆ ಹಬ್ಬದ ಹಿಂದಿನ ದಿನ ಕಾಡಿನಲ್ಲಿ ದೈತ್ಯನಾದ ಪುಟ್ಟಣ್ಣನ ಕಣೆಹಂದಿಯ ಬೇಟೆ

ಭೂಮಿ ಹುಣ್ಣಿಮೆಯ ಹಬ್ಬ ದೀಪಾವಳಿ ಹಬ್ಬಕ್ಕೆ ಹದಿನೈದು ದಿನಗಳ ಹಿಂದೆ ಬರುತ್ತದೆ. ಕೊಬ್ಬಿ ಬೆಳೆದುನಿಂತ ಹಸುರಾದ ಬತ್ತದ ಗದ್ದೆಗಳಲ್ಲಿ ಆಗತಾನೆ ಹೊಡೆ ಹೊರಡಲು ಮೊದಲಾಗುತ್ತದೆ. ಕೆಲವು ಮುಂಬೆಳಸಿನ ಗದ್ದೆಗಳಲ್ಲಿ ಹಾಲ್ದೆನೆಗಳೂ ಮೂಡಿರುತ್ತವೆ. ಸೂರ್ಯನನ್ನೇ ಕಾಣಗೊಡಿಸದೆ ಆಕಾಶ ವನ್ನೆಲ್ಲ ಮುಚ್ಚಿಕೊಂಡು ಹಗಲಿರುಳೂ ಹಿಡಿದು ಮಳೆ ಸುರಿಸುವ ಕರಿ ಮುಗಿಲು ಬಿಳಿಮುಗಿಲಾಗಲು ತೊಡಗುತ್ತದೆ. ಒಮ್ಮೊಮ್ಮೆ ವಿರಳವಾಗಿ ತುಂತುರು ಮಳೆ ಹೊಯ್ದರೂ ಬೆಚ್ಚನೆ ಬಿಸಿಲು ಆಡಿಗಡಿಗೆ ಇಣಿಕಿಣಿಕಿ ಹಸುರು ಗದ್ದೆಗಳ ಮೇಲೆ ಹೊಂಬಣ್ಣದ ನಗೆ ಬೀರುತ್ತದೆ. ಮಳೆಗಾಲದ ಜಡಿಮಳೆಯೂ ಇರದೆ, ಬೇಸಗೆಯ ಉರಿಬಿಸಲೂ ಇರದೆ, ಚಳಿಗಾಲದ ಕೊರೆಚಳಿಯೂ ಇರದೆ ಹವಾ ಸುಖವಾಗಿರುತ್ತದೆ. ಒಂದೊಂದು ದಿನ ಸ್ವಲ್ಪವೂ ಮಳೆಯಿಲ್ಲದೆ ಮೋಡ ವಿಲ್ಲದೆ ತೊಳೆದಿಟ್ಟ ನೀಲಿ ಗಾಜಿನಂತೆ ಹಬ್ಬಿರುವ ನೀಲಾಕಾಶದಲ್ಲಿ ಸೂರ್ಯನು ಪ್ರಫುಲ್ಲ ತೇಜಸ್ವಿಯಾಗಿರುವುದೂ ಉಂಟು. ಅಂತಹ ದಿನಗಳೆಂದರೆ ವನ್ಯಜಂತು ಗಳಿಗೆ ಖುಷಿ! ಬೇಟೆಗಾರರಿಗೂ ಖುಷಿ!

ಭೂಮಿ ಹುಣ್ಣಿಮೆಯ ಹಬ್ಬದಲ್ಲಿ ವಿಶೇಷವೆಂದರೆ, ಕಳಮಶ್ರೀಯ ಪೂಜೆ. ಹಬ್ಬದ ಹಿಂದಿನ ದಿನವೇ ಕಾಡುಗಳಿಗೆ ಹೋಗಿ ಅರವತ್ತು ಬಗೆಯ ಸೊಪ್ಪು ಗಳನ್ನೂ, ನೂಲೆ ಗೆಣಸುಗಳನ್ನೂ ತರುತ್ತಾರೆ. ಸೊಪ್ಪುಗಳನ್ನೆಲ್ಲ ಸೇರಿಸಿ ಮಾಡಿದ ಪಲ್ಯಕ್ಕೆ 'ಬೆರಕೆಸೊಪ್ಪಿನ ಪಲ್ಯ' ಎಂದು ಹೆಸರು. ಅರ್ಧ ಅಡಿ ಯಷ್ಟು ದಪ್ಪವಾಗಿ ನಾಲ್ಕೈದು ಅಡಿಗಳವರೆಗೂ ಉದ್ದವಾಗಿರುತ್ತದೆ, ಮುಳ್ಳು ಮುಳ್ಳು ನೂಲೆಬಳ್ಳಿಯ ಬುಡದ ಗೆಣಸು. ಅದನ್ನು ಬೇಯಿಸಿ ಸಿಪ್ಪೆ ಸುಲಿದರೆ ಬೆಣ್ಣೆಯಿದ್ದಂತೆ ಬೆಳ್ಳಗೆ ನುಣ್ಣಗೆ ಮೃದುವಾಗಿರುತ್ತದೆ. ಹಾಗೆಯೇ ಅಣಂಬಲಿ, ಕೆಸುವಿನ ಕೊಟ್ಟೆಹಿಟ್ಟು, ಕೊಚ್ಚಿಲಿ ಮೀನಿನ ಪಲ್ಯ ಇತ್ಯಾದಿಯಾಗಿ ಅನೇಕ ಭಕ್ಷ್ಯ ಭೋಜ್ಯಗಳನ್ನೂ ಮಾಡುತ್ತಾರೆ. ಜೊತೆಗೆ ಹಬ್ಬದ ಹಿಂದಿನ ದಿನ ಎಂದಿನಂತೆ 'ದೊಡ್ಡ ಬೇಟೆ' ಸೇರಿದಾಗ 'ಶಿಕಾರಿಯಾಗಿದ್ದರೆ' 'ಅದರ ಪಕಾರ'ವೂ ಇರುತ್ತದೆ.

ಆದರೆ ಕಳಮಶ್ರೀಗೆ ಜೈನ ಮೇಲೋಗರಗಳನ್ನೇ ನಿವೇದಿಸುತ್ತಾರೆ.

ಹಬ್ಬದ ದಿನ ಉಷಃಕಾಲಕ್ಕೆ ಮೊದಲೇ ಗದ್ದೆಗಳಿಗೆ ಹೋಗಿ ಬತ್ತದ ಪೈರನು ಹೂವು, ಹಣ್ಣು, ಕರ್ಪೂರ, ಗಂಧ, ಜಾಗಟೆ, ಗಂಟೆ, ಆರತಿಗಳಿಂದ ವಿಧಿವತ್ತಾಗಿ ಅರ್ಚಿಸುತ್ತಾರೆ. ಕಳಮಶ್ರೀಯ ಆರಾಧನೆಯ ಜೊತೆಗೆ ಕಲೋಪಾಸನೆಯೂ ಆಗುತ್ತದೆ. ಜಡಜಗತ್ತೂ ಸಸ್ಯಾದಿಗಳೂ ತತ್ತ್ವತಃ ಚೈತನ್ಯವೇ ಆದುದರಿಂದ ವಂದನೀಯ ಎಂಬುದು ಆ ಪೂಜೆಯ ಅವ್ಯಕ್ತಬೋಧೆ.

ನೂಲೆಗೆಣಸು ಬೆರಕೆಸೊಪ್ಪುಗಳನ್ನು ತಂದಹಾಗೂ ಆಯಿತು, ಬೇಟೆಯಾಡಿದ ಹಾಗೂ ಆಯಿತು ಎಂದುಕೊಂಡು ಹಬ್ಬದ ಹಿಂದಿನ ದಿನ ಹೂವಯ್ಯ, ರಾಮಯ್ಯ, ವಾಸು, ಪುಟ್ಟಣ್ಣ, ಬೇಲರ ಬೈರ, ಸಿದ್ದ— ಇವರೆಲ್ಲ ಒಟ್ಟುಗೂಡಿ ಕಾಡಿಗೆ ಹೊರಟರು. ಸತ್ಯ ಹೇಳುವುದಾದರೆ ಎಲ್ಲ ಒಟ್ಟುಗೂಡಿ ಹೊರಡಲಿಲ್ಲ; ಹೊರಟಮೇಲೆ ಕಾನುಬೈಲಿನಲ್ಲಿ ಎಲ್ಲರೂ ಒಟ್ಟಾದರು. ರಾಮಯ್ಯ, ವಾಸು, ಬೇಲರ ಸಿದ್ದ ಇವರು ಚಂದ್ರಯ್ಯಗೌಡರ ಅಪ್ಪಣೆ ಪಡೆದು ನಾಯಿ, ಕೋವಿ, ಹಾರೆ, ಸಮೆಗೋಲು, ಬೆಂಕಿಪೊಟ್ಟಣ ಮೊದಲಾದ ಸಲಕರಣೆಗಳನ್ನೆಲ್ಲ ತೆಗೆದು ಕೊಂಡು ನಡೆದು ಕಾನುಬೈಲಿನಲ್ಲಿ ಸಕಲ ಸಲಕರಣೆಗಳನ್ನೊಳಗೊಂಡು ಕಾಯುತ್ತಿದ್ದ ಹೂವಯ್ಯನ ದಳವನ್ನು ಕೂಡಿಕೊಂಡು ಮುಂಬರಿದರು. ಹಾಗೆ ಮಾಡುವುದಕ್ಕೆ ಚಂದ್ರಯ್ಯಗೌಡರ ಭೀತಿಯೇ ಕಾರಣವಾಗಿತ್ತು.

ಆ ದಿನ, ಅವರ ಪುಣ್ಯವಶದಿಂದ, ಬೆಚ್ಚನೆಯ ಬಿಸಿಲು ಹಚ್ಚನೆಯ ಹಸುರಿನ ಮೇಲೆ ರಮಣೀಯವಾಗಿತ್ತು. ದೂರದೂರವಾಗಿದ್ದ ತುಂಡುಮೋಡಗಳನ್ನು ಬಿಟ್ಟರೆ ಆಕಾಶ ಸ್ವಚ್ಛವಾಗಿತ್ತು. ಹವಾ ಪ್ರಕಾಶಮಾನವಾಗಿ ಸುಖಶೀತೋಷ್ಣ ವಾಗಿತ್ತು. ಪಕ್ಷಿಗಳು ಕೂಜನೋತ್ಸವದಲ್ಲಿ ತತ್ಪರವಾಗಿದ್ದುವು.

ಹೂವಯ್ಯನಾದಿಯಾಗಿ ಬೈರ ಸಿದ್ದರಿಗೂ ಕೂಡ ಗಿರಿವನಗಳ ರಮಣೀಯತೆ ಯಲ್ಲಿ ಜೀವನವು ಗರಿಯಂತೆ ಹಗುರವಾಗಿ ಹಕ್ಕಿಯಂತೆ ಹಾರಾಡತೊಡಗಿತು. ಸಂಸಾರದ ನೂರಾರು ಕೋಟಲೆಗಳ ಕಣಿವೆಗಳ ನಿಮ್ನತೆಯಿಂದ ಸ್ವಚ್ಛತರವೂ ಸ್ವಾತಂತ್ರ್ಯಪೂರ್ಣವೂ ಆಗಿರುವ ಗಿರಿವನಗಳ ಔನ್ನತ್ಯಕ್ಕೇರಿದರೆ ಯಾವ ಜೀವಿಯ ಆತ್ಮತಾನೇ ಗಗನಸ್ಪರ್ಶಿಯಾಗುವುದಿಲ್ಲ? ಹೂವಯ್ಯ ತಿಳಿದು ಆನಂದಪಡುತ್ತಿದ್ದನು; ಸಿದ್ದ ತಿಳಿಯದೆ ಆನಂದಪಡುತ್ತಿದ್ದನು.

ಬೇಟೆಗಾರರ ಗುಂಪು ಕೆಲವುಸಾರಿ ವಿನೋದದ ಮಾತನ್ನಾಡುತ್ತ, ಕೆಲವು ಸಾರಿ ಮಾತಿಲ್ಲದೆ ಆಲಿಸಿ ನೋಡುತ್ತ, ಒಮ್ಮೆ ಪಿಸುಮಾತಿನಲ್ಲಿ ಮಂತ್ರಾಲೋಚನೆ ಮಾಡುತ್ತ, ಒಮ್ಮೆ ಸುತ್ತಲೂ ನೆಲವನ್ನು ಮೂಸುತ್ತ ತೊಳತೊಳಲಿ ಬರುತ್ತಿದ್ದ ನಾಯಿಗಳಿಗೆ ಪಿಸುದನಿಯಲ್ಲಿ ಛೂ ಛೂ ಎನ್ನುತ್ತ, ಕೈ ಚಿಟಿಕೆ ಹೊಡೆದು ಸನ್ನೆ ಮಾಡುತ್ತ, ಒಂದೊಂದು ಸಲ ಅಲ್ಲಲ್ಲಿ ನೂಲೆಬಳ್ಳಿಗಳನ್ನು ಹುಡುಕುತ್ತ, ಬೆರಕೆ

ಸೊಪ್ಪನ್ನು ಕೊಯ್ಯುತ್ತ, ಸರುವಿಗಿಳಿದು, ಅಬ್ಬರಿಯೇರಿ ಸರಸ ಸಾಹಸದಿಂದ ಮುಂದುವರಿದರು.

ಕಾಡುಗಳಲ್ಲಿ ತಿರುಗಿ ಅನುಭವ ಸಾಲದ ವಾಸುವಿನ ಕಾಲುಗಳಂತೂ ಮುಳ್ಳು ಬಳ್ಳಿಗಳಿಂದ ಪರಚಿ ಪರಚಿಹೋದುವು. ಅವನು ಮಾತ್ರ ಗಾಯಗೊಂಡಷ್ಟೂ ಕೆರಳಿ ಯುದ್ಧಮಾಡುವ ರಣವೀರನಂತೆ ದೊಡ್ಡವರಿಗೆ ಸರಿಸಾಟಿಯಾಗಿ ಸಾಗಿದನು. ಆ ಅರಣ್ಯ ಪರ್ವತಗಳ ಸಂಗ ಸಹವಾಸಗಳೆಂದರೆ ಅವನಿಗೆ ಹಿಡಿಸಲಾರದಷ್ಟು ಸಂತೋಷ; ಅದರಲ್ಲಿಯೂ ಹೂವಣ್ಣಯ್ಯನ ಜೊತೆ! ಮತ್ತು ಸ್ವಾತಂತ್ರ್ಯ!

ಒಂದೆಡೆ ಸಮೀಪ ಸಮೀಪವಾಗಿ ನೂಲೆಬಳ್ಳಿಗಳು ಬೆಳೆದಿದ್ದುದನ್ನು ಕಂಡು ಹಿಡಿದು ಗೆಣಸು ಅಗೆಯಲು ತೊಡಗಿದರು.

ಬೈರನೊಂದು ಕಡೆ ಸಿದ್ದನಿನ್ನೊಂದು ಕಡೆ ಸಮೆಗೋಲು (ಹಾರೆ) ಗಳಿಂದ ಅಗೆಯುತ್ತಿದ್ದರು. ಇತರರು ಕಂಬಳಿಗಳನ್ನು ಪಕ್ಕಪಕ್ಕದಲ್ಲಿ ಹಾಸಿಕೊಂಡು ಕುಳಿತು ಮಾತಾಡುತ್ತಿದ್ದರು. ನಾಯಿಗಳು ಒಂದಾದಮೇಲೊಂದು ಅಲ್ಲಿಗೆ ಬಂದು ಕೆನ್ನಾಲಗೆಗಳನ್ನು ಜೋಲುಹಾಕಿಕೊಂಡು ಏದುತ್ತ ಸುತ್ತಲೂ ವಿಶ್ರಮಿಸಿಕೊಳ್ಳತೊಡಗಿದುವು. ಪುಟ್ಟಣ್ಣ ಜೇಬಿನಿಂದ ಎಲೆಯಡಕೆಯನ್ನು ತೆಗೆದು ಹಾಕಿಕೊಳ್ಳುತ್ತಿದ್ದನು.

ಹೂವಯ್ಯ ವಿನೋದಕ್ಕೆ "ಇವತ್ತು ವಾಸು ಬಂದಿದ್ದಕ್ಕೆ ಅಂತಾ ಕಾಣ್ತದೆ ಏನೂ ಷಿಕಾರಿಯಾಗಲಿಲ್ಲ" ಎಂದನು.

ಪುಟ್ಟಣ್ಣ ಬಾಯಿತುಂಬ ತಾಂಬೂಲ ತುಂಬಿಕೊಂಡು, ಮೂಗನ್ನರಳಿಸುತ್ತಾ, ಕೆಳತುಟಿಯನ್ನು ನೀರಾನೆಯಂತೆ ಮೇಲ್ಮೊಗವಾಗಿ ಚಾಚಿಕೊಂಡು "ಹೌದೆ ಹೌದು! ಣೀವು ಅವಣ್ಣ ಕರಕೊಂಡೇ ಬರಬಾರ್‍ದಿಟ್ಟು!" ಎನ್ನುತ್ತಿದ್ದಂತೆಯೆ ರಕ್ತದಂತೆ ಕೆಂಪಾಗಿದ್ದ ಉಗುಳು ಚಿಮ್ಮಿ ಕಂಬಳಿಯ ಮೇಲೆಯೂ ಅವನ ಮೈ ಮೇಲೆಯೂ ಬಿದ್ದಿತು.

ವಾಸು "ಥೂ ನಿನ್ನ!" ಎಂದು ದೂರ ಸರಿದನು.

ಪುಟ್ಟಣ್ಣ ಕೈಯಿಂದಲೆ ಕಂಬಳಿಯನ್ನೂ ಮೈಯನ್ನೂ ಒರಸಿ ಮಡಿ ಮಾಡಿ ಕೊಂಡನು.

"ನಾ ಬಂದರೆ ಷಿಕಾರಿ ಆಗೋದಿಲ್ಲಂತೆ? ಹೋದೊರ್ಷ ಭೂಮಿ ಹುಣ್ಣಿಮೆ ಹಬ್ಬದಾಗೆ ಪುಟ್ಟಣ್ಣನ ಜೊತೇಲೇ ಬಿಲ್ಲಿಗೆ ಕೂತಿದ್ದೆನಲ್ಲಾ! ಆವಾಗ ಅವನೇ ಒಂದು ಹಂದಿ ಹೊಡ್ದನಲ್ಲಾ!"

"ಹೌದು, ಮಾರಾಯರ್‍ರಾ, ಇವನ್ನ ಕೂರಿಸಿಕೊಂಡು ಬಿಲ್ಲಿಗೆ ಕೂತು ನಂಗೆ ಸಾಕೋ ಸಾಕು ಅನ್ನಿಸಿಬಿಡ್ತು! ಮಾತಾಡಬೇಡ, ಸುಮ್ಮನಿರು, ಅಂತ

ಹೇಳಿದರೆ 'ಸುಮ್ಮನೆ ತಿನ್ನು ಅಂದ್ರೆ, ಹಾರ‍್ರುಮನೆ ಓಣಿ ಬಕ್ಕೆಯಾ?' ಅಂದ ಹಾಗೆ, ಮಾತೂ ಮಾತೂ ಮಾತೂ. ಆ ಹಂದಿಗೆ ಗಿರಾಚಾರ ಕಾಡಿ ನನ್ನ ಹತ್ರ ಬಂದಿತ್ತು.!"

ಇತರರಿಗೆ ಬೇಸರ ಹುಟ್ಟಿಸುವಂತಹುದಾದರೂ ಅವರವರಿಗೆ ರಸಪೂರ್ಣವಾಗಿದ್ದ ಸಂಭಾಷಣೆ ಅನಂತವಾಗಿ ಸಾಗಿತ್ತು. ಈ ಮಧ್ಯೆ ಪುಟ್ಟಣ್ಣನೂ ಎದ್ದು ಅಗೆಯುತ್ತಿದ್ದ ಬೈರ ಸಿದ್ದರ ಸಹಾಯಕ್ಕೆ ಹೋದನು. ರಾಮಯ್ಯ ಕಂಬಳಿಯ ಮೇಲೆ ಅಂಗಾತನೆ ಮಲಗಿದ್ದವನು ಹಾಗೆಯೆ ಕಣ್ಣು ಮುಚ್ಚಿದನು.

ಹೂವಯ್ಯ "ಪುಟ್ಟಣ್ಣಾ, ನಾನು ಹೀಂಗೆ ಹೋಗಿ ಬರ‍್ತೀನಿ" ಎಂದು ಕೋವಿ ತೆಗೆದುಕೊಂಡು ಎದ್ದನು.

ವಾಸು "ನಾನೂ ಬರ‍್ತೀನಿ" ಎಂದನು.

"ಬೇಡ. ಇಲ್ಲೇ ಇರು!"

ಅವನನ್ನು ಅಲ್ಲಿಯೆ ಇರುವಂತೆ ಹೇಳಿ ನಾಯಿಗಳೊಡನೆ ಹೂವಯ್ಯನೊಬ್ಬನೆ ಹಳುವಿನಲ್ಲಿ ಮರೆಯಾದನು.

ವಾಸುವೂ ಪುಟ್ಟಣ್ಣ ಬೈರ ಸಿದ್ದರು ಗೆಣಸು ಅಗೆಯುತ್ತಿದ್ದಲ್ಲಿಗೆ ಹೋಗಿ "ಓಹೋಹೋ ನನ್ನಷ್ಟೆತ್ರ ಇದೆಯಲ್ಲೋ ಗೆಣಸೂ!" ಎಂದನು.

ಹೂವಯ್ಯ ಹಳುವಿನಲ್ಲಿ ಮರೆಯಾಗಿಹೋಗಿ ಅರ್ಧಗಂಟೆ ಕಳೆದಿತ್ತು. ಅಗೆಯುತ್ತಿದ್ದವರು ಎರಡು ದೊಡ್ಡ ದೊಡ್ಡ ಉದ್ದವಾದ ಗೆಣಸುಗಳನ್ನು ಕಿತ್ತು, ಮತ್ತೆರಡಕ್ಕೆ ಷುರುಮಾಡಿದ್ದರು. ವಾಸು ಪಕ್ಕದಲ್ಲಿದ್ದ ಮರಗಳನ್ನು ಹತ್ತಿ ಹತ್ತಿ ಇಳಿದನು. ಬೈರನ ಕೆಲಸದ ಕತ್ತಿಯನ್ನು ತೆಗೆದುಕೊಂಡು ಚಿಣ್ಣಿದಾಂಡುಗಳನ್ನು ಕತ್ತರಿಸಿದನು. ನೀಳವಾಗಿ ಮರಗಳ ನೆತ್ತಿಗಳಿಂದ ಜೋಲುಬಿದ್ದಿದ್ದ ಮಂಗನ ಬಳ್ಳಿಗಳನ್ನು ಎಳೆದು ಸರಪಣಿಗಳನ್ನು ರಚಿಸಿದನು. ಚಿಗುರೆಲೆಗಳನ್ನು ಕೊಯ್ದು, ಎರಡು ಹೆಬ್ಬೆರಳುಗಳ ಮಧ್ಯೆ ಇಟ್ಟು, ಕಾಡುಕೋಳಿಗಳೂ ಮಂಗಟ್ಟೆ ಹಕ್ಕಿಗಳೂ ಕೂಗುವಂತೆ ಕೂಗಲು ಪ್ರಯತ್ನಿಸಿದನು. ಆದರೆ ಸಾಧ್ಯವಾಗಲಿಲ್ಲ. ಯಾವ ಪ್ರಾಣಿಗೂ ಅನ್ವಯಿಸದ ವಿಕಾರಧ್ವನಿಗಳು ಹೊರಟು, ಬೆವರು ಸುರಿಸಿಕೊಂಡು ಅಗೆಯುತ್ತಿದ್ದವರೂ ಕೂಡ ನಕ್ಕು ನಕ್ಕು ಬೀಳುವಂತಾಯಿತು. ತನ್ನಿಂದ ಸಾಧ್ಯವಾಗದಿರಲು ಪುಟ್ಟಣ್ಣನಿಗೆ ಚಿಗುರೆಲೆಗಳನ್ನು ಕೊಟ್ಟು ಕೂಗುವಂತೆ ಹೇಳಿದನು. ಅವನು ಕೂಗಿದನು. ಅದು ಎಷ್ಟರಮಟ್ಟಿಗೆ ಸಹಜವಾಗಿತ್ತೆಂದರೆ ದೂರದಲ್ಲಿದ್ದ ಕಾಡುಕೋಳಿಗಳೂ ಮರಗಳ ಮೇಲಿದ್ದ ಮಂಗಟ್ಟೆ ಹಕ್ಕಿಗಳೂ ಇದ್ದಕ್ಕಿದ್ದಹಾಗೆ ಪ್ರತ್ಯುತ್ತರವಾಗಿ ಕೂಗತೊಡಗಿದುವು. ವಾಸುವಿಗೆ ಅತ್ಯಾನಂದದೊಡನೆ ನಿರಾಶೆಯೂ ಹೊಟ್ಟೆಕಿಚ್ಚೂ ಉಂಟಾದುವು. ಅವನಿಗೆ ಪುಟ್ಟಣ್ಣನು ಸರ್ವಾ

ವರ್ಷಗಳ ಪರಮಾವಧಿಯಾಗಿ ಕಂಡುಬಂದನು. ಪುಟ್ಟಣ್ಣನಿಗೆ ತಂದೆಯಿಲ್ಲ; ಆದ್ದರಿಂದ ತಂದೆಯ ಭಯವಿಲ್ಲ. ಅವನು ಎಲ್ಲಿಗೆ ಬೇಕಾದರಲ್ಲಿಗೆ ಹೋಗುತ್ತಾನೆ. ಅವನಿಗೆ ರಾತ್ರಿ ಹಗಲು ಎಲ್ಲವೂ ಒಂದೇ. ಕಾಡಿನಲ್ಲಿ ಯಾವಾಗೆಂದರೆ ಆವಾಗ ಅಲೆಯುತ್ತಾನೆ. ಅವನು ಕೋವಿ ಹೊಡೆದನೆಂದರೆ ಇಟ್ಟ ಗುರಿ ತಪ್ಪುವುದಿಲ್ಲ. ಕಣೆಹಂದಿ (ಮುಳ್ಳುಹಂದಿ), ಹಂದಿ, ಹುಲಿ, ಹಾವು ಮೊದಲಾದ ಕಾಡುಪ್ರಾಣಿಗಳೆಂದರೆ ಅವನಿಗೆ ಹೆದರಿಕೆಯಿಲ್ಲ. ಅವನಿಗೆ ಬದುಕಿನ ಜವಾಬ್ದಾರಿಯೂ ಇಲ್ಲ; ಸಾವಿನ ಜವಾಬ್ದಾರಿಯೂ ಇಲ್ಲ. ಹೆಂಡಿರಿಲ್ಲ, ಮಕ್ಕಳಿಲ್ಲ; ಭೂಮಿಯಿಲ್ಲ, ಕಾಣೆಯಿಲ್ಲ, ಏನೂ ಇಲ್ಲದಿದ್ದರೂ ಎಲ್ಲವನ್ನೂ ಪಡೆದವನಂತೆ ಸ್ವತಂತ್ರ, ಸುಖಿ. ಮಂಗಟ್ಟೆಹಕ್ಕಿ ಕೂಗುವಂತೆ ಕೂಗುತ್ತಾನೆ; ಕಾಡುಕೋಳಿಗಳನ್ನು ಅವು ಕೂಗುವಂತೆಯೆ ಕೂಗಿ ಕರೆದು ಬಂದೂಕಿನಿಂದ ಹೊಡೆಯುತ್ತಾನೆ! — ವಾಸು ಆಲೋಚಿಸಿದಂತೆಲ್ಲ ಪುಟ್ಟಣ್ಣನ ಗುಣಗಳು ಗುಣಿತವಾಗುವಂತೆ ತೋರಿತು. ದೊಡ್ಡ ಮರದ ಬುಡದಲ್ಲಿ ಸಣ್ಣ ಗಿಡ ನಿಂತಂತಾದನು ಅವನು. ಪುಟ್ಟಣ್ಣನನ್ನು ಕಂಡು ಅವನಿಗೆ ಹೊಟ್ಟೆಕಿಚ್ಚಾಯಿತು. ಆದರೆ ಅದು ಹಸುಳೆಯ ಹೊಟ್ಟೆಗಿಚ್ಚು. ಅದರಲ್ಲಿ ಬೆಳಗುವ ಗುಣವಿರುತ್ತದೆ; ಸುಡುವ ಗುಣವಿರುವುದಿಲ್ಲ.

ವಾಸು ಒಂದು ಎಲೆಯನ್ನು ಸುರುಳಿಸುತ್ತಿ ಪೀಪಿಮಾಡಿ ಊದಿದನು. ಅದರ ಕೀಚುದನಿ ಎಷ್ಟು ತೀಕ್ಷ್ಣವಾಗಿತ್ತೆಂದರೆ ಮಲಗಿದ್ದ ರಾಮಯ್ಯನ ಕಿವಿಗೆ ಕಚಗುಳಿಯಿಟ್ಟಂತಾಗಿ ಎಚ್ಚರವಾಯಿತು. ಅವನು ಅನೈಚ್ಛಿಕವಾಗಿಯೆ ಎದ್ದು ಕೂತುಕೊಂಡು ಕಣ್ಣುಜ್ಜಿಕೊಳ್ಳುತ್ತಿದ್ದನು. ತಂದೆಯ ಕಾಯಿಲೆಯ ದೆಸೆಯಿಂದಲೂ ಮನಸ್ಸಿನ ಕ್ಷೋಭೆಯ ದೆಸೆಯಿಂದಲೂ ಅವನಿಗೆ ಕೆಲದಿನಗಳಿಂದ ಸರಿಯಾದ ನಿದ್ದೆಯಿರಲಿಲ್ಲ.

ವಾಸು ಮತ್ತೆ ಪುಟ್ಟಣ್ಣನ ಹತ್ತಿರಕ್ಕೆ ಬಂದು, ಅಗೆಯುತ್ತಿದ್ದವನನ್ನು ನಿಲ್ಲಿಸಿ "ಎಲೇಲಿ ನೀನು ಪೀಪಿ ಮಾಡಿ ಊದು, ನೋಡೋಣ" ಎಂದನು.

"ಊದದೆ ಏನಂತೆ? ಮಹಾ!" ಎಂದನು ಪುಟ್ಟಣ್ಣ.

"ಊದು, ನೋಡೋಣ" ಎಂದು ಪುಸಲಾಯಿಸಿದನು ವಾಸು.

ಪುಟ್ಟಣ್ಣನೂ ಒಂದು ಎಲೆಯನ್ನು ಕಿತ್ತುಕೊಂಡು ಸುರಳಿ ಸುತ್ತಿ ಊದಿದನು.

ಪುಸ್ ಪುಸ್ ಎಂದು ಊದುಕೊಳವಿಯಲ್ಲಿ ಒಲೆ ಊದಿದಂತಾಯಿತು. ವಾಸುವಿಗೆ ಮುಯ್ಯಿತೀರಿಸಿಕೊಂಡಷ್ಟು ಸಂತೋಷವಾಗಿ "ಹ್ಞಾ! ಹಾಂಗಾಗ್ಬೇಕು! ಎಲ್ಲದರಲ್ಲೂ ನೀನೇ ಗಟ್ಟಿಗ ಅನ್ನಿಸಿಕೊಳ್ಳಬೇಕು ಅಂತಾ ಮಾಡಿಯೇನು?" ಎಂದು ಅಣಕಿಸುವ ಧ್ವನಿಯಿಂದ "ಊದು ನೋಡೋಣ ಈಗ! ಪೀಪಿ ಊದು? ಅದೇನು ಹಂದಿ ಹೊಡೆದ್ಹಾಂಗೆ ಅಂತಾ ಮಾಡಿಯೇನು?"

ಎಂದವನೇ ತನ್ನ ಎಲೆಪೀಪಿಯಿಂದ ಗಟ್ಟಿಯಾಗಿ ಒಂದು ಸಿಳ್ಳು ಊದಿ ಹೆಮ್ಮೆಯಿಂದ ಮಲೆತುನಿಂತನು.

ಪುಟ್ಟಣ್ಣ ನಗುತ್ತಾ ನಾಲ್ಕು ಐದು ಎಲೆಗಳಿಂದ ಪೀಪಿಮಾಡಿ ಊದಲು ಪ್ರಯತ್ನಿಸಿದನು. ಆದರೆ ಪ್ರತಿಸಲವೂ ವಾಸುವಿಗೆ ಆನಂದ ಉಂಟಾಯಿತೇ ಹೊರತು ಸಿಳ್ಳು ಹೊರಡಲಿಲ್ಲ. ಏಕೆಂದರೆ, ಅವನು ಕೊಯ್ದಿದ್ದ ಎಲೆ, ಅವನ ಕೈ, ಅವನು ಎಲೆಯನ್ನು ಸುರುಳಿಮಾಡಿದ ರೀತಿ, ಅವನ ತುಟಿ, ಅವನ ಉಸಿರೂ ಕೂಡ ಎಲ್ಲವೂ ಒರಟಾಗಿದ್ದುದರಿಂದ ಹಸುಳೆಯ ಮೃದುತ್ವಕ್ಕೆ ಸಾಧ್ಯವಾದ ಕಾರ್ಯ ಅವನಿಗೆ ಸಾಧ್ಯವಾಗಲಿಲ್ಲ.

"ಪೀಪಿ ಊದಿದ ಮಾತ್ರಕ್ಕೆ ನೀನು ಗಂಡಸಾಗಲಿಲ್ಲ. ಹೆಣ್ಣು ಹುಡುಗರೂ ಕೂಡ ಊದುತ್ತಾರೆ! ನಾನು ಅಗೆದಹಾಗೆ ಅಗೀ ನೋಡೋಣ!" ಎಂದನು ಪುಟ್ಟಣ್ಣ.

ಪುಟ್ಟಣ್ಣ ವಿನೋದಕ್ಕೆ ಹೇಳಿದನು. ಆದರೆ ವಾಸು ನೆಟ್ಟಗೆ ಹೋಗಿ ಬೈರನಿಂದ ಸಮೆಗೋಲು ತೆಗೆದುಕೊಂಡು ಅಗೆಯಲು ತೊಡಗಿದನು. ಉಳಿದವರು ನಗುವನ್ನು ತಡೆದು ನಿಂತು ನೋಡುತ್ತಿದ್ದರು. ಎರಡು ನಿಮಿಷದೊಳಗಾಗಿ ಬಾಲಕನ ಎಳೆಯ ಮುಖದಲ್ಲಿ ಬೆವರುಹನಿಗಳೂ ಕಣ್ಣುಗಳಿಂದ ಕಂಬನಿಗಳೂ ಸೂಸತೊಡಗಿದುವು.

ಅಷ್ಟು ಹೊತ್ತಿಗೆ ಸರಿಯಾಗಿ ದೂರದಲ್ಲಿ ಕಾಡಿನ ಮಧ್ಯೆ ನಾಯಿಗಳ ಕೂಗಾಟವೂ ಅದನ್ನು ಹಿಂಬಾಲಿಸಿ ಎರಡು ಈಡುಗಳ ಸದ್ದೂ ಕೇಳಿಸಿದುವು. ಒಡನೆಯೆ ಯಾರೋ ಕೂಗುವಂತೆಯೋ ಕರೆಯುವಂತೆಯೋ ಕೇಳಿಸಿತು.

ಎಲ್ಲರ ಗಮನವೂ ದೂರದಲ್ಲಿ ಜಂತುವನ್ನು ಕಂಡ ಬೇಟೆನಾಯಿಯ ಕಿವಿಗಳಂತೆ ನಿಮಿರಿನಿಂತಿತು.

"ಯಾರೋ? ಅಣ್ಣಯ್ಯನೇನೋ?" ಎಂದನು — ಚಟುವಟಿಕೆಯಿಂದ ಎದ್ದು, ಕೋವಿ ಹಿಡಿದುಕೊಂಡು ನಿಂತಿದ್ದ ರಾಮಯ್ಯ.

"ಅಲ್ಲಾ ಅಂತಾ ಕಾಣ್ತದೆ ನೋಡಿ. ಬಹಳ ದೂರದಲ್ಲಿ ಕೇಳಿಸಿದ ಹಾಂಗಾಯ್ತು!" ಎಂದನು ಪುಟ್ಟಣ್ಣ.

"ಏನಾದರಾಗಲಿ, ನಾನು ನೋಡಿಕೊಂಡು ಬರ್ತೀನಿ" ಎಂದು ರಾಮಯ್ಯನೂ ತೋಟಾ ಬಂದೂಕನ್ನು ಹೆಗಲಮೇಲೆ ಹೇರಿಕೊಂಡು ಹೂವಯ್ಯ ಹೋದ ದಿಕ್ಕಿನಲ್ಲಿ ಕಾಡಿನ ಮಧ್ಯೆ ಮರೆಯಾದನು.

ಇಷ್ಟರಲ್ಲಿ ವಾಸು ಯಾರಿಗೂ ತಿಳಿಯದಂತೆ, ತನಗೂ ಕೂಡ ತಿಳಿಯಬಾರದು ಎಂಬಂತೆ, ಅಗೆಯುವುದನ್ನು ಬಿಟ್ಟು, ದೂರ ಹೋಗಿ ಒಂದು ಪೊದೆಯ ಹಿಂದೆ ಏನೋ ಮಹಾಕಾರ್ಯದಲ್ಲಿ ತೊಡಗಿದ್ದಂತೆ ನಟಿಸುತ್ತಿದ್ದನು!

ಪುಟ್ಟಣ್ಣ ಮೊದಲಾದವರಿಗೆ ಕೇಳಿಸಿದ ಈಡುಗಳ ಸದ್ದು ಕಾನೂರಿಗೂ ಕೆಳಕಾನೂರಿಗೂ ಕೇಳಿಸದಿರಲಿಲ್ಲ. ಅದನ್ನು ಕೇಳಿದವರು ಒಬ್ಬೊಬ್ಬರು ಒಂದೊಂದು ತೆರನಾಗಿ ಊಹಿಸಿದರು.

ಚಂದ್ರಯ್ಯಗೌಡರು ಸೇರೆಗಾರರೊಡನೆ "ಏಂತದಕ್ರೀ ಎರಡು ಈಡು ಕೂಡೆ ಕೂಡೆ ಹೊಡೆದರಲ್ಲ?" ಎಂದು ನಶ್ಯ ಹಾಕಿಕೊಂಡು ಮೂಗನ್ನು ಉಜ್ಜಿ ಕೊಂಡರು.

"ಮಿಗ ಅಂತಾ ಕಾಣ್ತದೆ, ನೋಡಿ. ಮೊನ್ನೆ ನಮ್ಮ ಹೊಟ್ಟೆಸೋಮ ಒಂದು ಮಿಗದ ಹಿಂಡನ್ನೇ ಕಂಡನಂತೆ, ಕಾಣಿ."

"ಮಿಗಕ್ಕೆ ಅಲ್ಲಾ ಅಂತ ಕಾಣ್ತದೆ. ಹಂದಿಗೇ ಇರ್ಬೇಕು. ಎರಡು ಈಡು ಕೂಡೆ ಕೂಡೆ ಹೊಡೆದು ಕೂಗಬೇಕಾದರೆ ಹಂದೀನೇ ಇರಬೇಕು."

"ಹೌಧಾ! ತೋಟಾಕೋವಿ ಈಡು ಅಲ್ದಾ?"

"ಮತ್ತೇನು? ಕೇಪಿನ ಕೋವೀಲಿ ಎರಡು ಈಡು ಕೂಡೆ ಕೂಡೆ ಹೊಡೆಯೋದು ಹ್ಯಾಂಗೆ?"

"ಅಲ್ಲಾ; ನಮ್ಮ ಹಳೇಪೈಕದ ತಿಮ್ಮನ ಸವಾರಿ ಕಾಡುಹತ್ತಿತ್ತೋ ಏನೋ?"

"ಹೌದು! ಹೌದು! ಅವನ್ಹತ್ರ ಇರೋದು ಜೋಡುನಲ್ಲಿ ಕೇಪಿನ ಕೋವಿ. ಅವನೇ ಆಗಿದ್ದರೂ ಆಗಿರಬೈದು" ಎಂದು ಗೌಡರು ತಿಮ್ಮನಮೇಲೆ ತಮಗಿರುವ ಪಕ್ಷಪಾತವನ್ನು ವ್ಯಕ್ತಗೊಳಿಸಿ ಮಾತಾಡಿದರು.

ಕೆಳಕಾನೂರಿನ ಹುಲ್ಲಿನ ಮನೆಯಲ್ಲಿ ನಾಗಮ್ಮನವರ ಚಿಂತಾತರಂಗಗಳು ಬೇರೆಯ ತೆರನಾಗಿದ್ದುವು. ಆ ದಿನ ಹೂವಯ್ಯ ಪುಟ್ಟಣ್ಣರು ಮನೆಯಿಂದ ಹೊರಟಾಗಿನಿಂದ ಅವರ ಮಾತೃಹೃದಯ ಯಾವುದೋ ಆಶಂಕೆಯಿಂದ ತುಂಬಿ ಹೋಗಿತ್ತು. ಏನೋ ಒಂದು ಅಸ್ಪಷ್ಟ ಭೀತಿ ತಾಯಿಯ ಆತ್ಮವನ್ನು ಕಡೆಯ ತೊಡಗಿತ್ತು. ಮನೆಯಲ್ಲಿ ಯಾರೊಬ್ಬರೂ ಇರದಿದ್ದುದರಿಂದ ಉಂಟಾಗಿದ್ದ ಶಕುನಪೂರ್ಣವಾದಂತಿದ್ದ ಮೌನವು ಅವರ ಹೆದರಿಕೆಗೆ ಮತ್ತಷ್ಟು ಭಾರವನ್ನು ಹೇರಿತ್ತು. ಹಾಗೆಯೆ ಏಕಾಂತತೆ ಕಲ್ಪನೆಯನ್ನು ಕೆರಳಿಸಿ ಲೆಕ್ಕವಿಲ್ಲದಷ್ಟು ಭಯದ ಚಿತ್ರಗಳನ್ನು ತಂದು, ಒಳಗಣ್ಣಿನ ಮುಂದೆ ಹಿಡಿದು ತೋರಿ, ಬೆದರಿಸತೊಡಗಿತ್ತು. ಬೈರನ ಹೆಂಡತಿ ಸೇಸಿ ಸೌದೆಕೊಟ್ಟಿಗೆಯಲ್ಲಿ ಅಕ್ಕಿ ಬೀಸುತ್ತಿದ್ದರೂ ನಾಗಮ್ಮನವರು ಅಲ್ಲಿಗೆ ಹೋಗಿ ಅವಳೊಡನೆ ಎರಡು ಮಾತಾಡುವುದರಲ್ಲಿ ಮತ್ತೆ ಏನೇನೊ ಭಯಾನಕವಾದ ಆಲೋಚನೆಗಳು ಮನಸ್ಸಿಗೆ ಬಂದು ಹಿಂತಿರುಗುತ್ತಿದ್ದರು.

ಸ್ಥೂಲಪ್ರಕೃತಿಯ ಸೇಸಿಗೂ ಕೂಡ ನಾಗಮ್ಮನವರ ಉದ್ವೇಗ ಗೊತ್ತಾಗಿ "ಏನ್ರಮ್ಮ ಮೈ ಸೊಸ್ತಾಗಿಲ್ಲೇನು?" ಎಂದು ಕೇಳಿದಳು.

ನಾಗಮ್ಮನವರು ಔಪಚಾರಿಕವಾಗಿ, ಯಾಂತ್ರಿಕವಾಗಿ, "ಸ್ವಲ್ಪ ತಲೆ ನೋವು ಕಣೇ!" ಎಂದು ಮನೆಯೊಳಗೆ ಹೋಗಿ ಜಗುಲಿಯಲ್ಲಿ ತಗುಲಿಹಾಕಿದ್ದ ಒಂದೊಂದು ಪಟದ ಮುಂದೆಯೂ ನಿಂತು ನಿಂತು ಮಗನ ಕ್ಷೇಮಕ್ಕಾಗಿ ಮತ್ತೆ ಮತ್ತೆ ಕೈಮುಗಿದರು. ಪಟಗಳ ಮಾತಿರಲಿ; ಅವರ ಹೃದಯ ಕಂಡುದಕ್ಕೆಲ್ಲ ಕೈಮುಗಿಯುವ ಸ್ಥಿತಿಯಲ್ಲಿತ್ತು.

ಹುಟ್ಟಿದಂದಿನಿಂದಲೂ ಹೂವಯ್ಯನ ಮೇಲೆ ನಾಗಮ್ಮನವರಿಗೆ ಅತಿ ಅಕ್ಕರೆ. ತಾಯಿ ತನ್ನ ಮಗುವನ್ನು ಆದರಿಸುವುದನ್ನೂ ಉಪಚರಿಸುವುದನ್ನೂ ನೋಡಿದವರೆಲ್ಲ 'ಏನಪ್ಪಾ ಇದು?' ಎಂದುಕೊಳ್ಳುತ್ತಿದ್ದರು. ಮಗನು ಬೆಳೆಯುತ್ತ ಬಂದಹಾಗೆಲ್ಲ ಅವನ ಸುಪುಷ್ಟವಾದ ಅಂಗಾಂಗಗಳನ್ನೂ ಭದ್ರಾಕಾರವನ್ನೂ ನೋಡಿ ನೋಡಿ ಹಿಗ್ಗುತ್ತಿದ್ದರು. ಒಟ್ಟು ಕುಟುಂಬದಲ್ಲಿರುವ ತಾಯಂದಿರು ಮಾಡಬಾರದ ಕೆಲಸಗಳನ್ನೂ ಮಗನ ಮೇಲಣ ಒಲ್ಮೆಗಾಗಿ ಮಾಡುತ್ತಿದ್ದರು. ಮಗನಿಗೆ ಪ್ರತ್ಯೇಕವಾಗಿ ತುಪ್ಪ, ಬೆಣ್ಣೆ, ಮೊಸರು, ಹುರಿದ ಕೋಳಿಮೊಟ್ಟೆ, ಹುರಿತುಂಡು ಮೊದಲಾದುವುಗಳನ್ನು ಕದ್ದಿಟ್ಟು ಕೊಡುತ್ತಿದ್ದರು. ತಮ್ಮ ಮುದ್ದಿನ ಮಗನು ಬಳಿಯಿರುವಾಗ ಇತರ ಮಕ್ಕಳನ್ನು ಮುದ್ದಾಡುತ್ತಲೂ ಇರಲಿಲ್ಲ; ಹತ್ತಿರ ಸೇರಿಸುತ್ತಲೂ ಇರಲಿಲ್ಲ. ಕೆಲವು ಕಾಲದಮೇಲೆ ಮಗನು ಬುದ್ಧಿಯಲ್ಲಿಯೂ ಮೇಲುಗೈಯಾಗಿರುವನೆಂದು ಗೊತ್ತಾಗಿ, ಅವರ ಎದೆ ಹಿಗ್ಗಿ ಹೆಬ್ಬಾಗಿಲಾಯಿತು. ಚಂದ್ರಯ್ಯಗೌಡರಿಗೂ ತಮ್ಮ ಗಂಡನಿಗೂ ಮನಸ್ತಾಪ ಉಂಟಾಗಿ, ಗಂಡನು ಕಷ್ಟದೆಶೆಯಲ್ಲಿ ತೀರಿಹೋದಮೇಲೆ, ನಾಗಮ್ಮನವರು ತಮ್ಮ ಮುಂದೆ ಉಂಟಾಗಿದ್ದ ಜಗತ್ತಿನ ಶೂನ್ಯತೆಯನ್ನೆಲ್ಲ ತಮ್ಮ ಮಗನೊಬ್ಬನಿಂದಲೇ ಪೂರ್ಣಗೈದರು. ಅವರಿಗೆ ಹೂವಯ್ಯನೇ ಪ್ರಪಂಚ, ಪ್ರಪಂಚವೇ ಹೂವಯ್ಯ ಆಗಿತ್ತು. ಹೂವಯ್ಯ ಓದುವುದಕ್ಕೆಂದು ಬೇರೆಯ ಊರುಗಳಿಗೆ ಹೋದಮೇಲೆ ಅವರ ಪ್ರೀತಿ ಪುಟ್ಟಮ್ಮ ವಾಸು ಇವರ ಕಡೆಯೂ ತಿರುಗಿದ್ದು ದೇನೋ ನಿಜ. ವಾಸುವನ್ನಂತೂ ಅತಿಶಯವಾಗಿ ಪ್ರೀತಿಸುತ್ತಿದ್ದರು. ಆದರೆ ಆ ಪ್ರೀತಿ ಹೂವಯ್ಯನ ಪರವಾಗಿದ್ದ ಪ್ರೀತಿಯ ಮುಂದೆ ಅಲ್ಪವಾಗಿತ್ತು.

ಅತಿಪ್ರೀತಿ ಅತಿಭೀತಿಗೆ ಕಾರಣವಾಗುವುದು ಸ್ವಾಭಾವಿಕ. ಹೂವಯ್ಯ ತಮ್ಮ ಬಳಿ ಇದ್ದಾಗ ಯಾವ ಸ್ವರ್ಗಸುಖವನ್ನು ಅನುಭವಿಸುತ್ತಿದ್ದರೋ ಅಷ್ಟೇ ನರಕ ಯಾತನೆಯಾಗುತ್ತಿತ್ತು ನಾಗಮ್ಮನವರಿಗೆ, ಹೂವಯ್ಯನು ದೂರ ಹೋದಾಗ.

ಅವನು ಮೈಸೂರಿನಲ್ಲಿ ನೆಮ್ಮದಿಯಾಗಿದ್ದಾಗಲೂ ಕೂಡ ನಾಗಮ್ಮನವರು ಅವನು ರೋಗದಿಂದ ನರಳಿ ತಮ್ಮನ್ನು ಕರೆಯುತ್ತಿರುವಂತೆಯೋ, ಕಳ್ಳಕಾಕರ ಕೈಗೆ ಸಿಕ್ಕಂತೆಯೋ, ಕಂದಾರೆಯುವರ ಪಾಲಾದಂತೆಯೋ, ಮೋಟಾರಿಗೆ ಸಿಕ್ಕಿ

ಕೈಕಾಲು ಮುರಿದುಕೊಂಡಂತೆಯೋ ಅಥವಾ ರೈಲಿಗೆ ಸಿಕ್ಕಿ ಪ್ರಾಣಬಿಟ್ಟಂತೆಯೋ ನಾನಾರೀತಿಯಾಗಿ ಯೋಚಿಸಿಕೊಂಡು "ಭಗವಂತ, ಭಗವಂತ, ನನ್ನ ಮಗನನ್ನು ಕಾಪಾಡು ! ನನಗೆ ದಿಕ್ಕಿಲ್ಲ" ಎಂದು ಗುಟ್ಟಾಗಿ ಅಳುತ್ತಿದ್ದರು. ವಾಸುವನ್ನಂತೂ ದಿನಕ್ಕೆ ನಾಲ್ಕು ಸಾರಿ ಕೇಳುತ್ತಿದ್ದರು: "ಹೂವಣ್ಣಯ್ಯನಿಂದ ಕಾಗದ ಬಂತೇನೋ ?" ಎಂದು. ಕಾಗದ ಬಂದ ದಿನವೂ ಕೂಡ ಸುಖವಾಗಿರುತ್ತಿರಲಿಲ್ಲ; ಏಕೆಂದರೆ, ಕಾಗದ ಎರಡು ಮೂರು ದಿನಗಳ ಹಿಂದೆ ಬರೆದುದು; ಆವಾಗ ಸುಖವಾಗಿದ್ದನು; ಈಗ ಏನಾಗಿದೆಯೋ — ಎಂದು ! ಅನೇಕಸಾರಿ ತಮ್ಮ ಭೀತಿ ಅನಾವಶ್ಯಕವೆಂದು ಆದರಿಂದ ತಪ್ಪಿಸಿಕೊಳ್ಳಲು ಪ್ರಯತ್ನಿಸಿದ್ದರು. ಆದರೆ ಪ್ರಯತ್ನಿಸಿದಂತೆಲ್ಲ ಭೀತಿ ಇನ್ನೂ ಹೆಚ್ಚಾಗುತ್ತಿತ್ತು.

ಆ ದಿನವೂ ಹೂವಯ್ಯ ಕಾಡಿಗೆ ಹೊರಟಾಗ, ಅವನನ್ನು ಕರೆದು, ಕ್ರಾಪಿನ ಮೇಲೆ ಕೈಯಾಡಿಸುತ್ತಾ, ಅನೇಕ ನೆವಗಳಿಂದ ಅವನ ಮುಖ ಕೆನ್ನೆ ಗಲ್ಲಗಳನ್ನು ತಮ್ಮ ಅಂಗೈಯಿಂದ ಸವರುತ್ತಾ "ಹುಷಾರಾಗಿ ಹೋಗಿ ಬಾರಪ್ಪಾ !" ಎಂದು ಹರಸಿ ಕಳುಹಿಸಿದ್ದರು. ಆಮೇಲೆ ಪುಟ್ಟಣ್ಣನನ್ನೂ ಕೂಗಿ ಬಳಿಗೆ ಕರೆದು "ಹುಷಾರಾಗಿ ನೋಡಿಕೊಳ್ಳಪ್ಪಾ !" ಎಂದು ಬೆಸಸಿದ್ದರು. ಹಾಗೆಯೆ ದೇವತೆಗಳಿಗೆಲ್ಲ ಮನಸ್ಸಿನಲ್ಲಿಯೂ ಕಾಯದಲ್ಲಿಯೂ ಕೈಮುಗಿದಿದ್ದರು.

ಆದರೆ ಬೇಟೆಗಾರರ ಗುಂಪು ಕಣ್ಮರೆಯಾದೊಡನೆ ಚಿರಪರಿಚಿತ ಭೀತಿ ಪಿಶಾಚವು ತಾಯಿಯ ಹೃದಯವನ್ನು ಪೀಡಿಸತೊಡಗಿತು. ಅದರ ಯಾತನೆಯನ್ನು ತಾಯ್ತನ ಮಾತ್ರವೇ ತಿಳಿಯಬಲ್ಲದು.

ಇದ್ದಕ್ಕಿದ್ದ ಹಾಗೆ ಸಿಂಗಪ್ಪಗೌಡರ ಮಗ ಕೃಷ್ಣಪ್ಪ ಹುಲಿಯ ಪಾಲಾದುದು ನೆನಪಿಗೆ ಬಂದು ನಾಗಮ್ಮನವರು ಆಪಾದಮಸ್ತಕವಾಗಿ ನಡುಗಿದರು. ಮನೆಯ ಹೊರಗೆ ಓಡಿಹೋಗಿ ಮಗನನ್ನು ಬೇಟೆಗೆ ಹೋಗದಂತೆ ಹಿಂದಕ್ಕೆ ಕರೆಯಲೆಂದು ಗರುಡದೃಷ್ಟಿಯನ್ನಟ್ಟಿ ನೋಡಿದರು. ವಿಸ್ತಾರವಾದ ಗದ್ದೆ, ದಟ್ಟವಾದ ಕಾಡು, ಎತ್ತರವಾದ ಬೆಟ್ಟ, ನೀಲಮೌನವಾದ ಆಕಾಶ, ಬೆಳಗುವ ಬಿಸಿಲು, ಕಿವಿಯ ಮೇಲೆ ಸುಯ್ಯನೆ ಬೀಸುವ ಗಾಳಿ — ಇವುಗಳಲ್ಲದೆ ಬೇರೆ ಯಾವುದೂ ಅವರ ಕಣ್ಬೊಲಕ್ಕೆ ಗೋಚರವಾಗಲಿಲ್ಲ.

"ಏ ! ಹೂವಯ್ಯಾ ! ಓ ! ಪುಟ್ಟಣ್ಣಾ !" ಎಂದು ಗಟ್ಟಿಯಾಗಿ ಕರೆದರು.

ಆ ಕೂಗಿಗೆ ಹಸುರುಗದ್ದೆಯಲ್ಲಿ ಕೂತಿದ್ದ ಬಿಳಿಯ ಕೊಕ್ಕರೆ ಕೂಡ ಹಾರಲಿಲ್ಲ. ನಾಗಮ್ಮನವರು ಹಿಂದಕ್ಕೆ ಬಂದು ತಲೆಯಮೇಲೆ ಕೈಹೊತ್ತುಕೊಂಡು ಹಗಲು ಗನಸುಗಳನ್ನು ಕಟ್ಟುತ್ತಾ ಕುಳಿತರು. ಅವರು ಕುಳಿತಿದ್ದುದು ಚಾಪೆಯ ಮೇಲಲ್ಲ; ಮುಳ್ಳಿನಮೇಲೆ ಎನ್ನುವ ಹಾಗಿತ್ತು. ಆ ತಾಯಿಯ ಮನಸ್ಸಿನಲ್ಲಿ ಏನೇನು

ದುರೂಹೆಗಳು, ಏನೇನು ಭೀತಿಯ ಚಿತ್ರಗಳು, ಏನೇನು ಭಯಂಕರ ಕಲ್ಪನೆಗಳು ಸುಳಿದು ಆಕೆಯ ಹೃದಯದಲ್ಲಿ ಎಂತಹ ಪ್ರಲಯಾಗ್ನಿ ಭಾವಗಳು ತಾಂಡವ ಗೈಯುತ್ತಿದ್ದುವೆಂಬುದನ್ನು ಬರೆಯಲು ಸಾಧ್ಯವಲ್ಲ.

ಇದ್ದಕ್ಕಿದ್ದಹಾಗೆ ದೂರದ ಗಿರಿವನದ ಮಧ್ಯದಿಂದ ಎರಡು ಈಡುಗಳು ಢಂ ಢಂ ಎಂದು ಹಗಲಿನ ಮೌನವನ್ನು ಆಲೋಡಿಸಿದುವು. ತಾಯಿ ಬೆಚ್ಚಿಬಿದ್ದು ಎದ್ದುನಿಂತಳು! ಇನ್ನೇನು ಕೂಗಿಕೊಳ್ಳಬೇಕು! ಆದರೆ ಕೂಗಿಕೊಳ್ಳದೆ ದೀರ್ಘವಾಗಿ ಸುಯ್ಯತೊಡಗಿದಳು. ರಾಮ! ರಾಮ! ರಾಮ! ಕಾಪಾಡು ಎಂದು ಕೈಮುಗಿದಳು. ಮಿಂಚಿನ ವೇಗದಿಂದ ಸಾವಿರಾರು ಭಯಂಕರ ಚಿತ್ರಗಳು ಕೆರಳಿದ ಕಲ್ಪನೆಯಲ್ಲಿ ಹಾದುಹೋದವು! ಹುಲಿ ಹಾರಿದಂತೆ! ಹಂದಿ ತಿವಿದಂತೆ! ತಲೆ ಒಡೆದಂತೆ! ರಕ್ತ ಹರಿದಂತೆ! ಗುಂಡು ತಗುಲಿದಂತೆ!...!! ನಾಗಮ್ಮನವರು ನಿಂತಲ್ಲಿ ನಿಲ್ಲಲಾರದೆ ಸೌದೆಕೊಟ್ಟಿಗೆಗೆ ಓಡಿದರು.

ಅಲ್ಲಿ ಸೇಸಿ ಹಗಲಿನ ಮೌನಕ್ಕಿಂತಲೂ ಮೌನವಾಗಿ, ಅರಣ್ಯದ ಶಾಂತಿಗಿಂತಲೂ ಶಾಂತವಾಗಿ ಮೆಲ್ಲಗೆ ಬಹುಮೆಲ್ಲಗೆ ಹಾಡು ಹೇಳಿಕೊಳ್ಳುತ್ತಾ ಅಕ್ಕಿ ಬೀಸುತ್ತಿದ್ದಳು. ಅವಳಿಗೆ ಈಡುಗಳ ಸದ್ದು ಕೂಡ ಕೇಳಿಸಿರಲಿಲ್ಲ!

* * * *

ಹೂವಯ್ಯ ಹೋದ ದಿಕ್ಕಿಗೆ ಹೆಗಲಮೇಲೆ ಕೋವಿ ಹೇರಿಕೊಂಡು ಹೊರಟ ರಾಮಯ್ಯ ಕಾಡಿನ ಹಳುವಿನಲ್ಲಿ ನುಗ್ಗಿ ನುಸಿದು ನಡೆದು ಸ್ವಲ್ಪದೂರ ಹೋಗಿದ್ದನು. ನಡು ಹಗಲಿನ ಬಿಸಿಲಿನಲ್ಲಿಯೂ ಕವಿದುಕೊಂಡಿದ್ದ ಆ ಬನಗತ್ತಲೆ, ಗಾಳಿ ಮರಗಳಲ್ಲಿ ಬೀಸುವ ನಾದದಿಂದಲೆ ಪೋಷಿತವಾದಂತಿದ್ದ ಆ ಕಗ್ಗಾಡಿನ ನಿಶ್ಶಬ್ದತೆ, ಮೌನದ ಸರೋವರಕ್ಕೆ ನಿಸ್ವನದ ಕಲ್ಲೆಸೆಯುವಂತೆ ಅತಿವಿರಳವಾಗಿ ಆಗಾಗ ಕೇಳಿಬರುತ್ತಿದ್ದ ವಿವಿಧ ಶಕುನಿಗಳ ವಿಕಟಧ್ವನಿ — ಇವುಗಳ ಮಾಯಾ ಪ್ರಭಾವದಿಂದ ಅವನು ಸ್ವಪ್ನಸ್ಥನಾದಂತೆಯೂ ಸ್ವಪ್ನಮುದ್ರಿತನಾದಂತೆಯೂ ಮುಂದುವರಿಯುತ್ತಿದ್ದವನು ಇದ್ದಕ್ಕಿದ್ದ ಹಾಗೆ ಬೆಚ್ಚಿ, ಕಂಡರಿಸಿದಂತಾಗಿ, ನಟ್ಟದೃಷ್ಟಿಯಾಗಿ ನಿಂತು ನೋಡತೊಡಗಿದನು.

ತನಗೆ ತುಸು ದೂರದಲ್ಲಿ, ಎತ್ತರವಾದೊಂದು ಸ್ಥಾನದಲ್ಲಿ, ಸುತ್ತಲೂ ಗಿಡಬಳ್ಳಿಗಳು ಕಿಕ್ಕಿರಿದೆಡೆ, ಮರಗಳು ದಟ್ಟವಾದ ಹಸುರುಕೊಡೆಯನ್ನು ಹಿಡಿದಿರಲು, ಆ ಕಾಡುಗತ್ತಲೆಯಲ್ಲಿ, ಆ ಬನದ ಮೌನದಲ್ಲಿ, ಹಾಸುಂಬೆ ಹಬ್ಬಿ ಹಸುರು ಮಕಮಲ್ಲು ಹೊದಿಸಿದಂತಿದ್ದ ಹೆಬ್ಬಂಡೆಯ ನೆತ್ತಿಯಲ್ಲಿ, ಹಾಸಿಕೊಂಡಿದ್ದ ಕರಿಯ ಕಂಬಳಿಯ ಮೇಲೆ ಪದ್ಮಾಸನ ಹಾಕಿಕೊಂಡು ಕುಳಿತಿದೆ ಮನುಷ್ಯಾಕಾರದ ಒಂದು ನಿಶ್ಚಲಮೂರ್ತಿ! ಇತರರಾರಾದರೂ ಆಗಿದ್ದರೆ ಪೂರ್ವಕಾಲದ ಋಷಿಯೊಬ್ಬನು

ಸ್ಥಾವರ ಶರೀರಿಯಾಗಿ, ಕಲಿಯುಗದ ಕಾಡಿಗೆ ತಪಸ್ಸು ಮಾಡಲು ಬಂದಿರಬಹುದೋ ಏನೋ ಎಂದು ಶಂಕಿಸುತ್ತಿದ್ದರು. ಆದರೆ ರಾಮಯ್ಯ ಮೋಸಹೋಗಲಿಲ್ಲ. ಅಲ್ಲಿ ಧ್ಯಾನಸ್ಥನಾಗಿ ಕುಳಿತಿದ್ದವನು ಹೂವಯ್ಯನೆಂಬುದು ಗೊತ್ತಾಗಿ, ಅವನ ಧ್ಯಾನಕ್ಕೆ ಭಂಗಬಾರದಿರಲಿ ಎಂದು ತಾನೊಂದು ಪೊದೆಯ ಮರೆಯಲ್ಲಿ ನೀರವವಾಗಿ ಅವಿತುಕೊಂಡನು.

ಹೂವಯ್ಯನ ಬಂದೂಕು ಅವನು ಮುಂಡಿಸಿದ್ದ ಬಂಡೆಗೆ ಒರಗಿಸಿತ್ತು.

ಆ ಚಿತ್ರ ಎಷ್ಟು ಭವ್ಯವಾಗಿತ್ತೆಂದರೆ ನೋಡುತ್ತಾ ಅಡಗಿ ಕುಳಿತಿದ್ದ ರಾಮಯ್ಯನ ಮನಸ್ಸೂ ಮೆಲ್ಲಮೆಲ್ಲಗೆ ಗಗನಕ್ಕೇರತೊಡಗಿತು. ಮೈ ಗುಡಿಗಟ್ಟಿ, ಎದೆ ದಿವ್ಯಾವೇಶದ ಮಿಂಚಿನಿಂದ ಜುಮ್ಮೆಂದಿತು. ಕಣ್ಣುಗಳಲ್ಲಿ ಹನಿಯಾಡಿತು. ಹೂವಯ್ಯ ತನ್ನ ಧ್ಯಾನದಿಂದ ಆ ಪ್ರದೇಶವನ್ನೆಲ್ಲ ಧ್ಯಾನಸ್ಥವನ್ನಾಗಿ ಮಾಡು ತ್ತಿದ್ದಂತೆ ತೋರಿತು. ಆ ಪ್ರಭಾವದ ಉದಾರ ಕೃಪಾಪೂರ್ಣ ಸುಂದರಾಶ್ರಯ ದಲ್ಲಿ ರಾಮಯ್ಯ ಮುಳುಗಿ ಕುಳಿತನು.

ಹೂವಯ್ಯ ಕಡೆದಿಟ್ಟ ಕಲ್ಲಿನಂತೆ ಕುಳಿತಿದ್ದನು. ಉಸಿರಾಡುವುದೂ ಊಹಾ ಮಾತ್ರವಾಗಿ ಪರಿಣಮಿಸಿತ್ತು. ಆತನ ಆತ್ಮ ಭೂರ್ಭುವಸ್ಸುವರ್ಲೋಕಗಳನ್ನು ವ್ಯಾಪಿಸಿ ನುಂಗಿ ಜೀರ್ಣಿಸಿಕೊಂಡು ದಾಟಿ ಅನಿರ್ವಚನೀಯವೂ ಅಪ್ರಮೇಯವೂ ಆದ ಅನಂತದಲ್ಲಿ ವಿಹರಿಸುವಂತಿತ್ತು. ಆ ಧ್ಯಾನಕ್ಕೆ ಆಳ ಅಗಲಗಳ ಪವಣಿರು ವಂತೆ ತೋರುತ್ತಿರಲಿಲ್ಲ. ಅವನು ಅಲ್ಲಿ ಬೀಸುತ್ತಿದ್ದ ಗಾಳಿಯಾಗಿದ್ದನು; ಅಲ್ಲಿ ಬೆಳೆದಿದ್ದ ಮರಗಿಡಬಳ್ಳಿಗಳಾಗಿದ್ದನು; ಕಾಡಾಗಿದ್ದನು; ಮರ್ಮರನಾದವಾಗಿದ್ದನು; ಅಲ್ಲಿಯ ಮೌನವಾಗಿದ್ದನು; ದೂರದ ಆಕಾಶವಾಗಿದ್ದನು; ಹತ್ತಿರದ ಭೂಮಿ ಯಾಗಿದ್ದನು. ಅಷ್ಟೇ ಅಲ್ಲ; ಹೂವಯ್ಯನಿಗೆ ತನ್ನ ವ್ಯಕ್ತಿತ್ವವೂ ನಿರಾಕಾರ ವಾಗುತ್ತಿದ್ದಂತೆ ಭಾಸವಾಯಿತು!

ನೋಡುತ್ತಿದ್ದ ಹಾಗೆಯೆ ಹೂವಯ್ಯ (ಎಲ್ಲಿಂದಲೊ ಬಹುದೂರದಿಂದ ಹಿಂದಿರುಗಿ ಇಳಿದುಬಂದವನಂತೆ ನಿಡುಸುಯ್ದು) ಹಸನ್ಮುಖಿಯಾಗಿ ಸುತ್ತಲೂ ದೃಷ್ಟಿಸಿದನು. ವದನ ತೇಜಸ್ವಿಯಾಗಿತ್ತು; ಕಣ್ಣುಗಳು ಪ್ರಜ್ವಲಿಸುತ್ತಿದ್ದುವು.

ಇದ್ದಕ್ಕಿದ್ದಹಾಗೆ ಆ ಅರಣ್ಯದ ಶಾಂತಿಮಯ ಮೌನದಲ್ಲಿ ಮಂತ್ರಘೋಷದ ಮಧುರಗಂಭೀರನಾದ ಮೂಡಿ ಮೇಲೆದ್ದು ವನಪ್ರದೇಶವನ್ನೂ ವಾಯು ಮಂಡಲವನ್ನೂ ಒಯ್ಯನೊಯ್ಯನೆ ತುಂಬಿ ತುಳುಕಿತು. ರಾಮಯ್ಯ ಉಸಿರಿಕ್ಕದ ಆನಂದದಿಂದ ಹೃಷ್ಟರೋಮನಾಗಿ ಆಲಿಸಿದನು: ವೇದೋಪನಿಷತ್ತುಗಳ ಮಹಾ ಮಂತ್ರಗಳು ಸಹ್ಯಾದ್ರಿಯ ಕಾಂತಾರಗಳಲ್ಲಿ ಧೀರಮಾಧುರ್ಯದಿಂದ ಸ್ಪಂದಿತ ವಾಗುತ್ತಿದ್ದುವು!

ಸ್ವಲ್ಪ ಹೊತ್ತಿನೊಳಗಾಗಿ ಪುಟ್ಟಣ್ಣ ಕರೆಯುತ್ತಿದ್ದ ಕೂಗು ಕೇಳಿಸಿ, ರಾಮಯ್ಯ ತಾನಿದ್ದ ಸ್ಥಳದಿಂದ ಗುಟ್ಟಾಗಿ ಜುಣುಗಿದನು.

"ಹೂವಯ್ಯ ಸಿಕ್ಕರೇನು?" ಎಂದು ಪುಟ್ಟಣ್ಣ ಕೇಳಲು, ರಾಮಯ್ಯ "ಇಲ್ಲ" ಎಂದು ಹೇಳಿ, ಅವನನ್ನು ಗಟ್ಟಿಯಾಗಿ ಕರೆಯುವಂತೆ ಹೇಳಿದನು. ಪುಟ್ಟಣ್ಣ ಬೇಟೆಗಾರರ ಧಾಟಿಯಲ್ಲಿ ಹೂವಯ್ಯನನ್ನು ಕೂಗಿ ಕರೆಯಲಾರಂಭಿಸಿದನು.

ಹೂವಯ್ಯ ಪುಟ್ಟಣ್ಣನ ಕಾಕನ್ನಾಲಿಸಿ, ಎದ್ದು ಬಂದು, ಅವನ ಪ್ರಶ್ನೆಗೆ ಉತ್ತರವಾಗಿ — ನಾಯಿಗಳೆಲ್ಲವೂ ಈಡಿನ ಸದ್ದು ಕೇಳಿದೊಡನೆಯೆ ನುಗ್ಗಿ ಓಡಿ ಹೋದುವೆಂದೂ ತಾನುಮಾತ್ರ ಒಂದು ಕಡೆ ಕೂತು ಅವುಗಳಿಗಾಗಿ ಕಾಯುತ್ತಿದ್ದು ಕೂಗು ಕೇಳಿಸಲು ಎದ್ದು ಬಂದೆನೆಂದೂ, ಬಹುಶಃ ಇನ್ನಾರೊ ಶಿಕಾರಿಗೆ ಬಂದಿದ್ದು ಯಾವ ಪ್ರಾಣಿಗೊ ಈಡು ಹೊಡೆದಿರಬೇಕೆಂದೂ, ಈಡು ಕೇಳಿಸಿದ ದಿಕ್ಕು ಈಕಡೆಯೆಂದೂ ಉಪನ್ಯಾಸಮಾಡಿಬಿಟ್ಟನು. ಗುಟ್ಟನ್ನು ತಿಳಿದಿದ್ದ ರಾಮಯ್ಯ ಒಳಗೊಳಗೆ ನಗುತ್ತಿದ್ದನು.

ಪುಟ್ಟಣ್ಣ ನಾಯಿಗಳನ್ನು ಕೂಗಿ ಕರೆದನು. ಯಾವ ನಾಯಿಯೂ ಬರಲಿಲ್ಲ. ಎಲ್ಲರೂ ಸೇರಿ ಆಗೆದಿದ್ದ ಗೆಣಸುಗಳನ್ನೂ ಆಯುಧಗಳನ್ನೂ ಹೊತ್ತುಕೊಂಡು ಈಡು ಕೇಳಿಸಿದ್ದ ದಿಕ್ಕಿಗೆ ಹೊರಟರು.

"ಕ್ರೂಊ ಡೈಮಂಡ್! ಕ್ರೂಊ ಕೊತ್ವಾಲ!"

"ಕ್ರೂಊ ಊ ರೂಬಿ: ಕ್ರೂಊ ಊ ರೋಜಿ!"

ಎಂದು ದೊಡ್ಡವರು ದೊಡ್ಡದಾಗಿ ಆಗಾಗ ಕರೆದರೆ ವಾಸು ಎಳೆಗೊರಳಿನ, ಸಣ್ಣದಾದರೂ ಕೀಚಾದ, ತಾರಸ್ವರದಿಂದ ಒಂದೇ ಉಸಿರಿನಲ್ಲಿ ಪದೇ ಪದೇ "ಕ್ರ ಕ್ರ ಕ್ರ ಕುರು ಕುರು ಕುರೂ ಊ ಊ" ಎಂದು ಕೂಗುತ್ತಿದ್ದನು.

ಅನೇಕ ದೂರ ಹೋದಮೇಲೆ ಕಾಡಿನ ಮಧ್ಯೆ ಅತಿಸಾಂದ್ರವಾದ ಅತಿಶೀತವಾದ ಅತಿನೀರವವಾದ ಕಣಿವೆಯಲ್ಲಿ ಯಾರೋ ಕೂಗಿದ ಹಾಗಾಯಿತು. ಪುಟ್ಟಣ್ಣನೂ ಕೂಗಿದನು. ಯಾರೋ ಓಕೊಂಡು ಕರೆದರು.

"ಹೋ, ನಮ್ಮ ಹಳೆಪೈಕದ ತಿಮ್ಮನ ಕೂಗು ಕೇಳಿಸಿದ ಹಾಂಗಾಗ್ತದೆ. ಕಣೆಹಂದಿ ಗುದ್ದಿಗೆ ಕೂಡಿಕೊಂಡಿದ್ದಾನೆ ಅಂತಾ ಕಾಣ್ತದೆ! ಹಾಂಗಾದ್ರೆ ಒಂದು ಒಳ್ಳೇ ಪಡಾವಾಯ್ತು!" ಎಂದು ಹೇಳುತ್ತಲೆ ಬೇಗ ಬೇಗನೆ ಮುಂಬರಿದನು. ಉಳಿದವರೂ ಕುತೂಹಲ ಉತ್ಸಾಹಗಳಿಂದ ಅವನನ್ನು ಹಿಂಬಾಲಿಸಿದರು.

ಹೋಗಿ ನೋಡುವಲ್ಲಿ ತಿಮ್ಮನ ಎರಡು ಕಂತ್ರಿನಾಯಿಗಳ ಜೊತೆಗೂಡಿ ಡೈಮಂಡು ಕೊತ್ವಾಲ ರೂಬಿ ರೋಜಿ ಮೊದಲಾದ ಜೀನಿ ನಾಯಿಗಳೂ ಸೇರಿ

ಕೊಂಡು ಕಣೆಹಂದಿಯ ಗುದ್ದಿನ ಬಾಯ ಬಳಿ ಕೆಮ್ಮಣ್ಣನ್ನು ಕೆರೆಯುತ್ತಿದ್ದುವು. ಪಕ್ಕದಲ್ಲಿ ಕಂಬಳಿಯ ಮೇಲೆ ಜೋಡುನಳಿಗೆಯ ಕೇಪಿನ ಕೋವಿಯನ್ನು ಇಟ್ಟು ಕೊಂಡು ಎಲೆಯಡಿಕೆ ಹಾಕಿಕೊಳ್ಳುತ್ತಾ ಹಳೆಪೈಕದ ತಿಮ್ಮ ಕುಳಿತಿದ್ದನು.

ಪುಟ್ಟಣ್ಣ "ಏನೋ?" ಎಂದನು.

"ನಾಯಿ ಕಣ್ಹಂದಿ ಅಟ್ಟಿಕೊಂಡು ಬಂದ್ವು. ಯಲ್ಡ್ ಈಡು ಹೊಡದೆ ನೋಡಿ. ಒಂದೂ ಬಡೀಲೇ ಇಲ್ಲ. ತಂದು ಈ ಗುದ್ದು ನುಗ್ಗಿಸಿಬಿಟ್ವಾವೆ! ಅಷ್ಟೊತ್ತಿಗೆ ನಿಮ್ಮ ನಾಯಿನೂ ಬಂದ್ವು. ಹಾಂಗಾರೆ ನೀವೂ ಬರ್ಲಿ ಅಂತಾ ಕೂತೆ ಸುಮ್ಮನೆ!" ಎಂದ ತಿಮ್ಮ ಹೂವಯ್ಯ ರಾಮಯ್ಯರು ಹಿಂದೆ ಬರು ತ್ತಿದ್ದುದನ್ನು ನೋಡಿ ಮೇಲೆದ್ದನು.

ಕಣೆಹಂದಿ ಎಂದರೆ ಮುಳ್ಳುಹಂದಿ. ಗುದ್ದು ಎಂದರೆ ಅದು ವಾಸಿಸುವ ಸುರಂಗಮಾರ್ಗದಂತಹ ರಂಧ್ರಗುಹೆ. ಗುದ್ದುಗಳಲ್ಲಿ ಕೆಲವು ಬಹಳ ಉದ್ದ ವಾಗಿರುತ್ತವೆ. ಅವುಗಳನ್ನು ಸರಗುದ್ದು ಎಂದು ಕರೆಯುತ್ತಾರೆ. ಅವುಗಳೇ ಮುಳ್ಳುಹಂದಿಗಳಿಗೆ ನಿಜವಾದ ಹಕ್ಕೆ. ಅಂತಹ ಗುದ್ದುಗಳಿಗೆ ಹಂದಿಗಳು ನುಗ್ಗಿ ದರೆ ಅವಕ್ಕೆ ಯಾರೂ ಏನೂ ಮಾಡಲು ಸಾಧ್ಯವಿಲ್ಲ. ಇನ್ನೊಂದು ತರಹದ ಗುದ್ದುಗಳು ಹತ್ತಾರು ಮಾರು ಉದ್ದವಾಗಿರುತ್ತವೆ. ಅವುಗಳಿಗೆ ನುಗ್ಗಿದರೆ ಕಷ್ಟಪಟ್ಟು ಅಗೆದು ತೆಗೆಯಬಹುದು. ಅಥವಾ ಹೊಗೆ ಹಾಕಿ ಕೊಲ್ಲಬಹುದು. ಇನ್ನು ಕೆಲವು ಆಡುಗುದ್ದುಗಳಿರುತ್ತವೆ. ಆಡುಗುದ್ದುಗಳೆಂದರೆ ಆಟದ ಗುದ್ದುಗಳು ಎಂದರ್ಥ. ಅವು ಎರಡು ಮೂರು ಮಾರು ಉದ್ದವಿದ್ದು, ಎರಡು ಕಡೆಗಳಲ್ಲಿಯೂ ಬಾಯಿ ಇರುತ್ತದೆ. ಜಂತು ಒಂದು ಕಡೆಯಿಂದ ನುಗ್ಗಿ ಮತ್ತೊಂದು ಕಡೆಯಿಂದ ಸರಾಗವಾಗಿ ತಪ್ಪಿಸಿಕೊಂಡು ಹೋಗಬಹುದು. ಈ ಎಲ್ಲ ಗುದ್ದುಗಳನ್ನೂ ನಿರ್ಮಿಸುವುವು ಮಾತ್ರ ಕಣೆಹಂದಿಗಳಲ್ಲ: ಚಿಪ್ಪಿನ ಹಂದಿಗಳು ಕೊರೆದು ಮಾಡಿದ ಗುದ್ದುಗಳಲ್ಲಿ ಕಣೆಹಂದಿಗಳು ಚಕ್ರಾಧಿಪತ್ಯ ಸ್ಥಾಪನೆಮಾಡುತ್ತವೆ!

ಸಣ್ಣದೇಹದ ನಾಯಿಗಳಲ್ಲಿ ಕೆಲವು ಧೈರ್ಯವಾಗಿ ಗುದ್ದು ನುಗ್ಗಿ ಕಣೆಹಂದಿ ಗಳೊಡನೆ ಹೋರಾಡುತ್ತವೆ. ಆದರೆ ಅದು ಅಪಾಯಕರವಾದ ಸಾಹಸ. ಎಷ್ಟೋ ಸಾರಿ ಹಾಗೆ ಗುದ್ದು ನುಗ್ಗಿದ ನಾಯಿಗಳು ಹೊರಗೆ ಬರದೇ ಇದ್ದುದೂ ಉಂಟು.

ಪುಟ್ಟಣ್ಣ ಒಂದು ಉದ್ದವಾದ ಬಳ್ಳಿಕೋಲನ್ನು ಕಡಿದು, ಒಂದು ಒಂದೂವರೆ ಅಡಿಯಷ್ಟು ಅಗಲವಾಗಿದ್ದ ಗುದ್ದಿನ ಬಾಯಲ್ಲಿ ಕುಳಿತುಕೊಂಡು, ಆ ಕೋಲನ್ನು ಒಳಗೆ ತೂರಿಸಿ ಅಲ್ಲಾಡಿಸಿ, ಕಣೆಹಂದಿ ಹತ್ತಿರದಲ್ಲಿದೆಯೋ ದೂರದಲ್ಲಿದೆಯೋ

ಎಂಬುದನ್ನು ಪತ್ತೆಹಚ್ಚಲು ಪ್ರಾರಂಭಿಸಿದನು. ಸ್ವಲ್ಪ ಸಮಯದಲ್ಲಿಯೆ ಬಳ್ಳಿಕೋಲಿನ ತುದಿ ಹಂದಿಯ ಮೈಯ ಕಣೆಗಳಿಗೆ ತಗುಲಿದ ಅನುಭವವಾಗಲು ಪುಟ್ಟಣ್ಣ ಆ ಶುಭ ಮತ್ತು ಸುಲಭವಾದ ಸಮಾಚಾರವನ್ನು ಇತರರಿಗೆ ತಿಳಿಸಿ, ಗುದ್ದಿನಬಾಯಿಗೆ ಕಸಕಟ್ಟಿಗೆ ಹಾಕಿ, ಬೆಂಕಿಮಾಡಿ, ಹೊಗೆ ಹಾಕಬೇಕೆಂದು ನಿರ್ಧರಿಸಿದನು. ರೂಬಿಯೂ ಕೂಡ ಒಂದೆರಡು ಸಾರಿ ಗುದ್ದು ನುಗ್ಗಿ ಸಾಹಸಮಾಡಿ ಹೊರಗೆ ಬಂದಿತು. ಅದು ಹಿಂದೆ ಮುಳ್ಳುಹಂದಿಗಳ ಮೇಲೆ ಬಿದ್ದು ಕಣೆಗಳ ರುಚಿಯನ್ನು ಅನುಭವಿಸಿದ್ದುದರಿಂದ ಮೇಲೆ ಬೀಳುವ ಸಾಹಸಕ್ಕೆ ಹೋಗದೆ, ಪ್ರಾಣಿ ಅಲ್ಲಿದೆ ಎಂಬುದನ್ನು ಯಜಮಾನನಿಗೆ ತಿಳಿಸಲು ಎಷ್ಟು ಬೇಕೋ ಅಷ್ಟನ್ನು ಮಾತ್ರ ನಿರ್ವಹಿಸುತ್ತಿತ್ತು.

ಬೈರ, ಸಿದ್ದ, ಹಳೆಪೈಕದ ತಿಮ್ಮ ಮೂವರೂ ಸುತ್ತಮುತ್ತ ಇದ್ದ ಮರಮಟ್ಟುಗಳಿಂದ ಬೆಂಕಿಹಾಕಲು ಸೌದೆ ಸದೆ ಕಡ್ಡಿ ಸೊಪ್ಪುಗಳನ್ನು ಸರಬರಾಯಿ ಮಾಡತೊಡಗಿದರು. ಹೂವಯ್ಯ, ರಾಮಯ್ಯ, ವಾಸು ಮೂವರೂ ಗುದ್ದಿನ ಬಾಯ ಬುಡದಲ್ಲಿ ಕುಳಿತಿದ್ದ ಪುಟ್ಟಣ್ಣನ ಸುತ್ತಲೂ ಬಾಗಿನಿಂತು ಮಾತಾಡುತಿದ್ದರು. ಸುತ್ತಲೂ ತರುಸಾಂದ್ರವಾಗಿದ್ದ ಅರಣ್ಯ ಗಿರಿಶ್ರೇಣಿಗಳು ಅನಂತವಾಗಿ ಪಸರಿಸಿದ್ದುವು. ನಡುಹಗಲಾಗಿದ್ದರೂ ವನದ ಛಾಯೆಯ ಬನಗತ್ತಲು ಕವಿದು ವಾತಾವರಣ ಶೀತಲವಾಗಿತ್ತು.

"ಎಷ್ಟು ದೂರದಲ್ಲಿದೆಯೋ ಕಣ್ಹಂದಿ?" ಎಂದನು ವಾಸು.

"ಮೂರು ನಾಲ್ಕು ಮಾರಿನ ಒಳಗೆ ಇರಬೇಕು" ಎಂದು ಪುಟ್ಟಣ್ಣ ಬಳ್ಳಿಕೋಲನ್ನು ಮತ್ತೆ ಗುದ್ದಿನೊಳಗೆ ನುಗ್ಗಿಸಿ ಆಡಿಸುತ್ತಾ "ಕೇಳ್ತೇನು ಕಣೆಸದ್ದು!" ಎಂದನು.

ಮೂವರೂ ಗುದ್ದಿನ ಬಾಯಿಗೆ ಕಿವಿಗೊಟ್ಟು ಆಲಿಸಿದರು. ಆ ಅರಣ್ಯ ನೀರವದಲ್ಲಿ ಹಂದಿಯ ಕಣೆಗಳ ಸದ್ದು ಚೆನ್ನಾಗಿ ಕೇಳಿಸಿದಂತಾಯಿತು.

ಇದ್ದಕ್ಕಿದ್ದಹಾಗೆ ಪುಟ್ಟಣ್ಣ ಬೆಚ್ಚಿಬಿದ್ದವನಾಗಿ ಕೈಲಿದ್ದ ಬಳ್ಳಿಕೋಲನ್ನು ಕೆಳಗೆ ಹಾಕಿ, ತನ್ನ ಕಂಬಳಿಯನ್ನು ತುಡುಕಿ, ಗುದ್ದಿನ ಬಾಯಿಗೆ ಆನಿಸಿ ಹಿಡಿದು "ನೋಡಿ, ನೋಡೀ, ಕಣ್ಹಂದಿ ಹೊರಗೆ ಹೊರಡ್ತು ಅಂತಾ ಕಾಣ್ತದೆ! ಸ್ವಲ್ಪ ದೂರ ಹೋಗಿ" ಎಂದನು.

ಹೂವಯ್ಯ ರಾಮಯ್ಯರಿಬ್ಬರೂ ತಮ್ಮ ತಮ್ಮ ಬಂದೂಕುಗಳನ್ನು ಹಿಡಿದು ಸಿದ್ಧರಾಗಿ ದೂರ ನಿಂತರು. ನಾಯಿಗಳೆಲ್ಲ ಉದ್ವೇಗದಿಂದ ಹಾರಾಡತೊಡಗಿದುವು.

ಇದ್ದಕ್ಕಿದ್ದಹಾಗೆ ಮುಳ್ಳುಹಂದಿಯ ತಲೆ ಗುದ್ದಿನ ಬಾಯಲ್ಲಿ ಕಾಣಿಸಿಕೊಂಡಿತು. ದೈತ್ಯನಾದ ಪುಟ್ಟಣ್ಣ ಕೂತಲ್ಲಿಂದ ಸರಿಯದೆ, ಹೆದರದೆ ಹಿಂದೆಗೆಯದೆ ನಾಲ್ಕಾರು

ಮಡಿಕೆ ಮಡಿಸಿದ್ದ ತನ್ನ ಕಂಬಳಿಯನ್ನು ಅದರ ಕುತ್ತಿಗೆಯ ಬಳಿಗೆ ಹಾಕಿ, ಬಲವಾಗಿ ಅದುಮಿ ಹಿಡಿದನು. ಪ್ರಾಣಿಯ ದೇಹವೆಲ್ಲಿಯಾದರೂ ಗುದ್ದಿನ ಹೊರಗಡೆ ಇದ್ದಿದ್ದರೆ ಅವನಿಗೆ ಬಾಣಪ್ರಯೋಗದ ಶಾಸ್ತಿಯಾಗದೆ ಇರುತ್ತಿರಲಿಲ್ಲ. ಆದರೆ ದೇಹ ಗುದ್ದಿನೊಳಗಿದ್ದುದರಿಂದ ಒಂದೊಂದಕ್ಕೆ ಬಡಿಯುತ್ತಿದ್ದ ಕಣೆಗಳ ಸದ್ದು ಮಾತ್ರ ಕೇಳಿಸುತ್ತಿತ್ತು. ಮುಳ್ಳುಹಂದಿಗೆ ತಲೆಯಲ್ಲಿ ಮಾತ್ರ ಕಣೆಗಳಿಲ್ಲ. ಅದಕ್ಕೆ ಅದೊಂದು ಭಾಗವೇ ನಿರಾಯುಧವಾದುದು.

ಮಿಂಚಿನ ವೇಗದಿಂದ ಪುಟ್ಟಣ್ಣ ಎಡಗೈಯಿಂದ ಹಂದಿಯ ತಲೆಯನ್ನು ಬಲವಾಗಿ ಒತ್ತಿ ಹಿಡಿದುಕೊಂಡು, ಬಲಗೈಯಿಂದ ತನ್ನ ಕೋವಿಯ ಚೀಲದಲ್ಲಿದ್ದ ಬಾಕುವನ್ನು ಈಚೆಗೆಳೆದುಕೊಂಡು, ಹಂದಿಯ ತಲೆಯನ್ನು ಕಚಕಚಕಚನೆ ಕೊಚ್ಚ ತೊಡಗಿದನು.

ಆ ಮುಹೂರ್ತ ನೋಡುತ್ತಿದ್ದವರಿಗೆ ಮುಳ್ಳಿನಮೇಲೆ ನಿಂತಹಾಗಿತ್ತು. ಯಾರೊಬ್ಬರೂ ಮಾತಾಡಲೂ ಸಮರ್ಥರಾಗಲಿಲ್ಲ. ಹಂದಿ ಎಲ್ಲಿ ಮೈಮೇಲೆ ನುಗ್ಗಿ ಪುಟ್ಟಣ್ಣನ ಗತಿ ಏನಾಗುತ್ತದೆಯೋ ಎಂದು ನಿಂತಿದ್ದವರೆಲ್ಲ ಉಸಿರಿಕ್ಕದಿದ್ದರು. ಆದರೆ ಒಂದೆರಡು ನಿಮಿಷಗಳಲ್ಲಿ ಹಂದಿಯ ಆಟ ತಣ್ಣಗಾಯಿತು. ಒಡೆದು ಚೂರು ಚೂರಾದ ಅದರ ತಲೆಯೋಡಿನಿಂದ ಕೋಡಿ ಹರಿಯುತ್ತಿದ್ದ ರಕ್ತಮಿಶ್ರವಾದ ಬಿಳಿಯ ಮಿದುಳು ಬೀಭತ್ಸವಾಗಿ ತೋರತೊಡಗಿತು. ಆದರೂ ಪುಟ್ಟಣ್ಣನ ದೈತ್ಯಾವೇಶ ಇಳಿಯಲಿಲ್ಲ. ಬಾಕುವಿನಿಂದ ಕಣ್ಣುಬೇಳೆ, ಕಿವಿ, ನೆತ್ತಿ, ಮೂತಿ, ಬಾಯಿ ಇವುಗಳನ್ನು ಹುಲ್ಲು ಕೊಚ್ಚುವಂತೆ ಕೊಚ್ಚುತ್ತಿದ್ದನು. ಅದನ್ನು ನೋಡಿದ ಹೂವಯ್ಯನಿಗೆ ಕಣ್ಣು ಮುಚ್ಚಿಕೊಳ್ಳುವಂತಾಯಿತು. ಅನೇಕ ಕರುಣೆಯ ಕಾರ್ಯಗಳನ್ನು ಮಾಡುತ್ತಿದ್ದ ಪುಟ್ಟಣ್ಣನೇ, ನಾಯಿಯ ಕಾಲಿಗೆ ಮುಳ್ಳು ಚುಚ್ಚಿ ಕೀವಾದರೆ ಅದಕ್ಕೆ ಶಸ್ತ್ರಚಿಕಿತ್ಸೆಮಾಡಿ ಔಷಧಿ ಹಾಕಿ ಶುಶ್ರೂಷೆ ಮಾಡಿ ಸಲಹುತ್ತಿದ್ದ ಕರುಣಾಶಾಲಿ ಪುಟ್ಟಣ್ಣನೇ, ಈ ಭೀಮ ಭಯಾನಕ ಬೀಭತ್ಸವಾದ ರುದ್ರಕಾರ್ಯದಲ್ಲಿ ಉದ್ರಿಕ್ತನಾಗಿರುವುದನ್ನು ಕಂಡು, ಎದೆಯಮೇಲೆ ಗರಗಸ ತೀಡಿದಂತಾಯಿತು! 'ಸಾಕಪ್ಪಾ ಈ ಹಾಳು ಷಿಕಾರಿ,' 'ಇನ್ನು ಮೇಲೆ ಕೋವಿ ಹಿಡಿದು ಕೊಲೆಗೆಲಸಕ್ಕೆ ಕಾಡೇರಬಾರದು' ಎಂದು ಮನಸ್ಸಿನಲ್ಲಿ, ಹಿಂದೆ ಅನೇಕಸಾರಿ ಮಾಡಿದ್ದಂತೆ ಮತ್ತೆ ಪ್ರತಿಜ್ಞೆ ಮಾಡಿದನು!

ಹಂದಿಯ ತಲೆ ನುಚ್ಚುನುಚ್ಚಾಗಿ ಅದರ ಜೀವ ಸಂಪೂರ್ಣವಾಗಿ ಹೋದ ಮೇಲೆಯೇ ಆವೇಶವಿಳಿದು ಪುಟ್ಟಣ್ಣ ನೀಳವಾಗಿ ನಿಡುಸುಯ್ದು, ವಿಜಯೋನ್ಮಾದದ ಒಂದು ಠೀವಿಯಿಂದ ಕಣೆಹಂದಿಯನ್ನು ಗುದ್ದಿನಿಂದ ಎಳೆದು ಬೀಸಿ ಹೊರಗೆ ಬಿಸಾಡಿದನು. ನಾಯಿಗಳೆಲ್ಲ ಮುತ್ತಿ ಅಲುಬತೊಡಗಿದುವು.

ಸಾಯಂಕಾಲ ಹೂವಯ್ಯ ಸುರಕ್ಷಿತವಾಗಿ ಮನೆ ಸೇರಿದಾಗ ಉದ್ವೇಗ ಭಯಾಶಂಕೆಗಳಿಂದ ನೊಂದು ಬೆಂದಿದ್ದ ತಾಯಿ ನಾಗಮ್ಮನವರಿಗೆ ಹೋದಜೀವ ಬಂದಂತಾಯಿತು. ಅವರ ಹೃದಯದಲ್ಲಿ ಮೂಡಿದ ಕೃತಜ್ಞತೆಯ ಭಕ್ತಿಯು ಮಂಗಳಾರತಿಯ ಮಹಾಜ್ವಾಲೆ ಅಂತರಿಕ್ಷವನ್ನು ದಾಟಿ ಅತೀತಕ್ಕೆ ಅರ್ಪಿತ ವಾಯಿತು.

## ೪೮

## ಚಂದ್ರಯ್ಯಗೌಡರ ಕತ್ತಿಯಿಂದ ತಪ್ಪಿಸಿಕೊಂಡು ಸುಬ್ಬಮ್ಮ ರಾತ್ರಾರಾತ್ರಿ ಕಾನೂರಿನಿಂದ ಓಡಿಹೋದದ್ದು

ಭೂಮಿ ಹುಣ್ಣಿಮೆಯ ಹಬ್ಬ ಕಳೆಯಿತು. ದೀಪಾವಳಿಯೂ ಪೂರೈಸಿತು. ಅಡಕೆಯ ಕೊಯಿಲೂ ಪ್ರಾರಂಭವಾಗಿ ಸ್ವಲ್ಪ ದೂರ ಸಾಗಿತ್ತು.

ದೀಪಾವಳಿ ಹಬ್ಬದಲ್ಲಿ ಎಂದಿನಂತೆ ದೊಡ್ಡಬೇಟೆ ಸಾಹಸ ಪೂರ್ಣವಾಗಿ ಸಾಗಿತು. ಮೂರು ಹಂದಿಗಳೂ ಒಂದು ಮಿಗವೂ ಒಂದೆರಡು ಬರ್ಕಗಳೂ ಒಂದು ಕಣೆಹಂದಿಯೂ ಲಭಿಸಿ, ಎಲ್ಲರಿಗೂ ಹರಿಹಬ್ಬವಾಯಿತು.

ಅದರಲ್ಲಿ ಹೇಳಬೇಕಾದ ವಿಷಯವೆಂದರೆ ಹೂವಯ್ಯ ಮಿಗ ಹೊಡೆದದ್ದು. ಹಿಂದೆ ಪ್ರಾಣಹಿಂಸೆ ಮಾಡುವುದಿಲ್ಲ ಎಂದು ಮಾಡಿಕೊಂಡಿದ್ದ ಪೂಣ್ಕೆ ಅಂದು ಸಾರ್ಥಕವಾಗಲಿಲ್ಲ. ಅವನೇನೋ ಸಾಧುಪ್ರಾಣಿಯೂ ಅತಿಭೀರುವೂ ಆದ ಮಿಗವನ್ನು ಹೊಡೆಯುವುದಿಲ್ಲ; ಹಂದಿ, ಹುಲಿ, ಚಿರತೆ ಇಂತಹ ಕ್ರೂರಪ್ರಾಣಿಗಳು ತನ್ನ ಬಿಲ್ಲಿಗೆ ಬಂದರೆ ಮಾತ್ರ ಹೊಡೆಯುತ್ತೇನೆ ಎಂದು ಬಂದೂಕು ಹಿಡಿದು ಬಿಲ್ಲಿಗೆ ನಿಂತಿದ್ದನು. ಆದರೆ ನಾಯಿಗಳ ಕೂಗೂ ಸೋವುವವರ ಕಾಕೂ ಇತರರ ವಿವಿಧ ಬಂದೂಕುಗಳ ಠೊಳ್, ಠಾಪ್, ಢಂ, ಢಾಂ ಎಂಬ ಉತ್ತೇಜಕವಾದ ಸದ್ದೂ, ಕೇಳಿಸಿಬಂದು ಬೇಟೆ ಹುರುಪಾಗಲು, ಹೂವಯ್ಯ ತನ್ನನ್ನು ತಾನೆ ಮರೆತು, ಹಾರಿ ಹಾರಿ ಬೆದರಿ ಮಿಂಚಿ ಬರುತ್ತಿದ್ದ ಮಿಗಕ್ಕೆ ಗುಂಡು ಹೊಡೆದು ಕೆಡಹಿದನು. ಆಗ ಅವನಿಗೆ ಆಲೋಚನೆ ಮಾಡುವನಿತು ತಾಳ್ಮೆಯಾಗಲಿ ಪುರಸತ್ತಾಗಲಿ ಇರಲಿಲ್ಲ.

ಅಷ್ಟೇ ಅಲ್ಲದೆ, ಆ ಮಿಗ ರಾಮಯ್ಯನ ಬಿಲ್ಲಿನ ಮಾರ್ಗವಾಗಿ ಹೂವಯ್ಯನ ಬಿಲ್ಲಿಗೆ ಬಂದಿತ್ತು. ಹೂವಯ್ಯನಿಗಿಂತ ಮೊದಲೇ ರಾಮಯ್ಯ ಒಂದು ಈಡು ಹೊಡೆದಿದ್ದನು. ಮಿಗವೇನೋ ನೆಲಕ್ಕುರುಳಿ ಬಿದ್ದದ್ದು ಹೂವಯ್ಯನ

ಈಡಿನಿಂದಲೇ. ಆದರೆ ರಾಮಯ್ಯನ ಈಡಿನ ಒಂದೆರಡು ಕಡಕು (ದೊಡ್ಡಚರೆ) ಅದರ ಹಿಂಭಾಗಕ್ಕೆ ಮೊದಲೇ ತಗುಲಿತ್ತು. ನೆತ್ತರೂ ಅಲ್ಲಲ್ಲಿ ಸೋರಿತ್ತು. ಆದ್ದರಿಂದ ಹೂವಯ್ಯನದು ಮರುಗುಂಡಾಗಿತ್ತೇ ಹೊರತು ಮೊದಲ್ಗುಂಡಾಗಿರ ಲಿಲ್ಲ. ಆದರೆ ಹೂವಯ್ಯ ತನ್ನ ಈಡಿನಿಂದಲೆ ಅದು ಬಿದ್ದುದೆಂದು ವಾದಿಸಿದನು. ಆ ವಿಚಾರವಾಗಿ ವಿನೋದದಿಂದ ಪ್ರಾರಂಭವಾಗಿದ್ದ ಭಿನ್ನಾಭಿಪ್ರಾಯದ ಮಾತು ಕತೆ ಆಮೇಲೆ ಸ್ವಲ್ಪ ಬಿಸಿಬಿಸಿಯಾಗಿ ಖಾರ ಖಾರವಾಯಿತು. ಹೂವಯ್ಯನೂ ರಾಮಯ್ಯನೂ ಒಂದು ವಾರದವರಿಗೆ ಪರಸ್ಪರ ಮಾತುಕತೆಯಾಡುವುದನ್ನೂ ಬಿಟ್ಟುಬಿಟ್ಟಿದ್ದರು. ತರುವಾಯವೂ ಮಾತಿನಲ್ಲಿ ಮೊದಲಿನ ಸಲಿಗೆ ಮೈ ದೋರಲಿಲ್ಲ.

ಹೂವಯ್ಯ ರಾಮಯ್ಯರು ಪ್ರತ್ಯಕ್ಷವಾಗಿ ಜಗಳವಾಡಿದ್ದುದು ಅದೇ ಮೊದಲನೆಯ ಸಲವಾಗಿದ್ದರೂ ಆ ಘಟನೆಯಲ್ಲಿ ಗುಪ್ತವಾಗಿ ಅವರಿಬ್ಬರ ಅಂತ ರಾಳದಲ್ಲಿ ಕೆಲಕಾಲದಿಂದಲೂ ಜರುಗುತ್ತಿದ್ದ ಹೃದಯಮಂಥನದ ಛಾಯೆಯಿತ್ತು. ಬಹುಶಃ ಸೀತೆ ಅದಕ್ಕೆ ಕಾರಣಳಾಗಿರಬಹುದೇನು ?

ಅಡಕೆಯ ಕೊಯಿಲು ಪ್ರಾರಂಭವಾಗಿ ಸ್ವಲ್ಪದೂರ ಮುಂದುವರಿದಿತ್ತು. ಕಾನೂರು ಮನೆಯಲ್ಲಿ ಬೆಳಿಗ್ಗೆಯಿಂದ ಸಾಯಂಕಾಲದವರೆಗೆ ಕೊನೆ ತೆಗೆಯುವುದು, ಕುತ್ತರೆ ಹಾಕುವುದು, ಮೆಟ್ಟುಗತ್ತಿಯಿಂದ ಅಡಕೆ ಸುಲಿಯುವುದು, ಚೊಗರು ಹಾಕಿ ಬೇಯಿಸುವುದು, ಚಪ್ಪರದಮೇಲೆ ವಾಟೆಯ ತಟ್ಟಿಗಳಲ್ಲಿ ಹರಡಿ ಬಿಸಿಲಿನಲ್ಲಿ ಆರಿಸುವುದು — ಈ ಕಾರ್ಯಗಳೆಲ್ಲವೂ ಭರದಿಂದ ಸಾಗಿದ್ದುವು.

ರಾತ್ರಿ ಎಂಟು ಗಂಟೆಯ ಹೊತ್ತು. ಜಗಲಿಯಲ್ಲಿ, ಕಿರುಜಗಲಿಯಲ್ಲಿ, ಚೌಕಿಯಲ್ಲಿ ಎಲ್ಲೆಲ್ಲಿಯೂ ಎಲ್ಲ ಕಡೆಗಳಿಂದಲೂ ಮೆಟ್ಟುಗತ್ತಿಗಳಲ್ಲಿ ಅನೇಕರು ಅಡಕೆ ಸುಲಿಯುವ ಸದ್ದು ಮನೋಹರವೂ ಲಯಬದ್ಧವೂ ಆದ ನಾದಪರಂಪರೆ ಯಾಗಿ ಕೇಳಿಬರುತ್ತಿತ್ತು. ಆ ದಿನ ಹೆಚ್ಚಾಗಿ ಕೊನೆ ತೆಗೆದಿದ್ದುದರಿಂದ ಅವು ಗಳನ್ನೆಲ್ಲ ಮರುದಿನದ ಒಳಗಾಗಿ ಸುಲಿದು ಪೂರೈಸಬೇಕೆಂದು ಗೌಡರು ಕಟ್ಟಪ್ಪಣೆ ಮಾಡಿದ್ದರು. ಆದ್ದರಿಂದಲೆ ಬೇಲರೂ ಹಳೆಪೈಕದವರೂ ಕನ್ನಡಜಿಲ್ಲೆಯ ಆಳುಗಳೂ ಮನೆಯ ಆಳುಗಳೂ ಎಲ್ಲರೂ ಸೇರಿ ಬೇಗಬೇಗನೆ ರಾತ್ರಿಯ ಊಟವನ್ನು ಪೂರೈಸಿಕೊಂಡು ಬಂದು ಅಡಕೆಯ ಸುಲಿತಕ್ಕೆ ಕೈಹಚ್ಚಿ ಭರದಿಂದ ಸಾಗಿದ್ದರು.

ಚೌಕಿಯ ಮೂಲೆಯಲ್ಲಿ ದೊಡ್ಡದಾದ ಅಡಕೆಯೊಲೆಯ ಮೇಲೆ ಕರಿ ಹಿಡಿದು ಚೊಗರುಬಿದ್ದು ಚಿತ್ರವಿಚಿತ್ರವಾಗಿದ್ದ ತಾಮ್ರದ ದೊಡ್ಡ ಹಂಡೆಯಲ್ಲಿ ಅಡಕೆ ತಕಪಕನೆ ಕುದಿಯುತ್ತಿತ್ತು. ಇನ್ನೊಂದುಕಡೆ ಆ ರಾತ್ರಿ ಬೇಯಿಸಿದ ಅಡಕೆ

ಯನ್ನು ಒಣಗಿಸಲು 'ಹೊಗೆದಟ್ಟಿ'ಯೂ ಸಿದ್ಧವಾಗಿದ್ದಿತು. ಅಡಕೆಯೊಲೆ ಯಲ್ಲಿ ಬೆಂಕಿ ಭೀಮಾಕಾರವಾಗಿ ಉರಿಯುತ್ತಿತ್ತು. ಅದಕ್ಕೆ ತುಸು ದೂರದಲ್ಲಿ ನಿಂಗಸು ನಿಂತು ಪರಪರನೆ ತೊಡೆ ಕೆರೆದು ಚಳಿ ಕಾಯಿಸುತ್ತಲೂ ಆಗಾಗ್ಗೆ ಬೇಯು ತ್ತಿದ್ದ ಅಡಕೆಯನ್ನು ದೊಡ್ಡ ದಬ್ಬೆಸಟ್ಟುಗದಿಂದ ತಿರುವುತ್ತಲೂ ಇದ್ದನು. ಬೆಂಕಿಗೆ ಸ್ವಲ್ಪ ದೂರವಾಗಿ, ಆದರೂ ಅದರ ಉಷ್ಣದ ವಲಯದಲ್ಲಿ, ನಾಯಿಗಳು ನಿರ್ಲಕ್ಷ್ಯವಾಗಿ ಪವಡಿಸಿದ್ದುವು!

ಅಲ್ಲಲ್ಲಿ ಅಡಕೆ ಸುಲಿಯುವವರ ಸೌಕರ್ಯಕ್ಕಾಗಿ ಕೆಂಜೊಡರಿನ ಹೊಗೆ ಕಾರುವ ಚಿಮಿಣಿ (ಸೀಮೆಯೆಣ್ಣೆ ಬುಡ್ಡಿ)ಗಳು ಉರಿಯುತ್ತಿದ್ದವು. ಆ ಗ್ರಾಮ್ಯ ದೀಪಗಳ ಕುಡಿಗಳು ಕುಣಿದಂತೆ ಅಡಕೆ ಸುಲಿಯುತ್ತಿದ್ದವರ ಛಾಯೆಗಳೂ ಚಿತ್ರ ವಿಚಿತ್ರವಾಗಿ ರೂಪವಿರೂಪಗಳಾಗಿ ಗೋಡೆಗಳ ಮೇಲೆ ಶಕುನಪೂರ್ಣವಾಗಿ ಗುಹ್ಯಭೀಷಣವಾಗಿ ಪ್ರೇತನಾಟ್ಯದ ಪ್ರತಿಬಿಂಬಗಳಂತೆ ತೋರುತ್ತಿದ್ದುವು.

ಜಗಲಿಯ ಒಂದೆಡೆಯಲ್ಲಿ ಸೇರೆಗಾರ ರಂಗಪ್ಪಸೆಟ್ಟರು, ಗಂಗೆ, ಸೋಮ ಇವರಿಗೆ ತುಸು ದೂರದಲ್ಲಿ ಹಳೆಪೈಕದ ತಿಮ್ಮ — ಇಷ್ಟು ಜನರು ತಮ್ಮದೇ ಒಂದು ಗುಂಪುಮಾಡಿಕೊಂಡು ಸರಸಸಲ್ಲಾಪಗಳಲ್ಲಿಯೂ ಕಾಡುಹರಟೆಗಳಲ್ಲಿಯೂ ತೊಡಗಿ, ಮಧ್ಯೆ ಮಧ್ಯೆ ನೆರೆದವರ ಶಬ್ದ ಸಮೂಹವನ್ನೆಲ್ಲ ಮೀರುವಂತೆ ಗಹಗಹಿಸಿ ನಗುತ್ತಾ ಮೆಟ್ಟುಗತ್ತಿಗಳ ಮೇಲೆ ಭದ್ರವಾಗಿ ಕುಳಿತು ಅಡಕೆ ಸುಲಿಯು ತ್ತಿದ್ದರು. ಮನಸ್ಸೆಲ್ಲ ಮಾತಿನಲ್ಲಿದ್ದರೂ ಕೈಗಳು ಅಭ್ಯಾಸಬಲದಿಂದ ತಮ್ಮ ಕೆಲಸದಲ್ಲಿ ಜಾಡೂ ತಪ್ಪಿಹೋಗದೆ ಕೆಲಸಮಾಡುತ್ತಿದ್ದುವು. ಹಳೆಪೈಕದ ತಿಮ್ಮನ ಕೃಪೆಯಿಂದ ಅವರೆಲ್ಲರಿಗೂ ಸ್ವಲ್ಪ ಸ್ವಲ್ಪ ಅಮಲೇರಿತ್ತು ಎಂಬುದನ್ನೂ ನಾವು ಮರೆಯಬಾರದಲ್ಲವೆ?

ಇದ್ದಕ್ಕಿದ್ದಹಾಗೆ ಎಲ್ಲರೂ ಅಡಕೆ ಸುಲಿಯುವುದನ್ನು ನಿಲ್ಲಿಸಿ, ಹುಬ್ಬು ನಿಮಿರಿಸಿ, ಕಣ್ಣಗಲಿಸಿ, ತುಟಿ ತೆರೆದು ಆಲಿಸಿದರು. ಒಳಗಡೆಯಿಂದ ಚಂದ್ರಯ್ಯಗೌಡರ ಕ್ರೋಧಧ್ವನಿಯೂ ನಡುನಡುವೆ ಸುಬ್ಬಮ್ಮನ ಪ್ರತಿಭಟನೆಯ ಧ್ವನಿಯೂ ಕೇಳಿಬಂದುವು.

"ಹ್ಞಾ! ಕಾಣೆ, ಮತ್ತೆ! ಆರಂಭವಾಯಿತು! ಆ ಹೆಗ್ಗಡಿತಮ್ಮನವರ ಕಡೆಯಿಂದ ಸುಖಾ ಇಲ್ಲ!" ಎಂದಳು ಗಂಗೆ, ಸೇರೆಗಾರರ ಕಡೆ ನೋಡಿ.

"ಹೆಗ್ಗಡಿತಮ್ಮನವರ ಮೇಲೆ ಯಾಕೆ ತಪ್ಪು? ಗೌಡರ ತಲೆ ಕೆಟ್ಟಿತ್ತಲ್ಲಾ!" ಎಂದು ಹೇಳುತ್ತಾ ಸೇರೆಗಾರರು ಮೆಟ್ಟುಗತ್ತಿಯಿಂದ ಮೇಲೆದ್ದರು.

ಇತ್ತೀಚೆಗೆ ಸುಬ್ಬಮ್ಮನ ಮೇಲೆ ಗೌಡರ ವರ್ತನೆ ಹುಚ್ಚುಹುಚ್ಚಾಗಿ ಬರಬರುತ್ತಾ ಕ್ರೂರವಾಗುತ್ತಿತ್ತು. ದೇಹದೌರ್ಬಲ್ಯದೊಡನೆ ಅವರಲ್ಲಿ ಸಂಶಯ

ಪ್ರಕೃತಿಯೂ ವರ್ಧಿಸಿತ್ತು. ಸುಬ್ಬಮ್ಮ ತಮ್ಮನ್ನು ಒಲಿಯುವುದಂತಿರಲಿ, ತಮ್ಮನ್ನು ಕಂಡರೆ ಆಕೆಗೆ ಆಗುವುದಿಲ್ಲ ಎಂಬ ಭಾವವೂ ಬೆಳೆಯಿತು. ಜೊತೆಗೆ ಆಕೆ ಪತಿವ್ರತೆಯಾಗಿಲ್ಲ ಎಂಬ ಗೂಢಭಾವದ ಕೀಟವೂ ಅವರ ಎದೆ ಮಿದುಳು ಗಳಲ್ಲಿ ಗೂಡುಕಟ್ಟಿತು. ಸ್ವಲ್ಪ ಕಾರಣಗಳಿಗೂ, ಕೆಲವುಸಾರಿ ಕಾರಣಗಳನ್ನು ಕಲ್ಪಿಸಿಕೊಂಡೂ ಆಕೆಯನ್ನು ಹೊಡೆಯುತ್ತಿದ್ದರು; ಬಯ್ಯುತ್ತಿದ್ದರು.

ವಾಸ್ತವವಾಗಿಯೂ ಸುಬ್ಬಮ್ಮನಿಗೆ ಗಂಡನ ವಿಚಾರವಾಗಿ ಜುಗುಪ್ಸೆ ಹುಟ್ಟಿದ್ದು ನಿಶ್ಚಯ. ಆದರೆ ಆ ಜುಗುಪ್ಸೆ ಪರರ ಪ್ರೀತಿಯಿಂದ ಪ್ರೇರಿತವಾಗಿರಲಿಲ್ಲ. ಸೇರೆಗಾರರೇನೊ ಆಕೆಯ ವಿಚಾರದಲ್ಲಿ ಹೆಚ್ಚಾದ ಸಹಾನುಭೂತಿ ತೋರಿಸು ತ್ತಿದ್ದರು. ಅವರು ಯಾವ ಅಭಿಸಂಧಿಯಿಂದ ಹಾಗೆ ವರ್ತಿಸುತ್ತಿದ್ದರೋ ಏನೊ? ಅದು ಸುಬ್ಬಮ್ಮನ ಸ್ಥೂಲಬುದ್ಧಿಗೆ ಹೊಳೆಯಲಿಲ್ಲ. ಆಕೆಯೇನೊ ಅವರನ್ನು ಕಷ್ಟ ದಲ್ಲಿ ನೆರವಾಗುವವರನ್ನು ಯಾವ ಕೃತಜ್ಞತೆಯಿಂದ ಕಾಣಬೇಕೊ ಅಂಥಾ ದೃಷ್ಟಿ ಯಿಂದ ಮಾತ್ರ ಕಾಣುತ್ತಿದ್ದಳು. ಗಂಡನಿಂದ ಬೈಸಿಕೊಂಡು, ಪೆಟ್ಟುತಿಂದು, ಸದಾ ಕರಕರೆಯ ಬಾಳನ್ನು ಬಾಳುತ್ತಿದ್ದು, ಆಕೆ ಬರಬರುತ್ತಾ ಕೃಶಳಾದಳು. ಅದನ್ನು ಕಂಡು ಗೌಡರಿಗೆ ಇನ್ನೂ ರೇಗಿತು. ರೋಗಗ್ರಸ್ತವಾದ ಅವರ ಮೆದುಳಿ ನಲ್ಲಿ ಕರಾಳ ಕಲ್ಪನೆ ಪಿಶಾಚಿಯಾಗಿ ಕುಣಿಯತೊಡಗಿತು.

ಒಂದುಸಾರಿ ಊಟಮಾಡುತ್ತಿದ್ದಾಗ ಗೌಡರ ತಲೆಯಲ್ಲಿ ಹೆಂಡತಿ ತನ್ನನ್ನು ಕೊಲ್ಲಲೆಂದು ಪಲ್ಯಕ್ಕೆ ವಿಷ ಹಾಕಿದ್ದಾಳೆ ಎಂಬ ಭಾವ ಸ್ಫುರಿಸಿ "ಪಲ್ಯಕ್ಕೆ ಏನು ಹಾಕಿದ್ದೀಯಾ? ಒಳ್ಳೆ ಮಾತಿನಲ್ಲಿ ಹೇಳ್ತೀಯೋ ಇಲ್ಲವೊ?" ಎಂದು ಜಡೆ ಹಿಡಿದು ಅಲುಗಿಸಿದರು.

"ಉಪ್ಪು ಕಾರ ಹುಳಿ ಹಾಕಿದ್ದೀನಿ! ಮತ್ತೇನು ಹಾಕ್ತೀನಿ?" ಎಂದು ಸುಬ್ಬಮ್ಮ ಮುನಿದು ಹೇಳಿದಳು.

ಗೌಡರು "ಸುಳ್ಳು ಹೇಳ್ತೀಯಾ ಹಡಬೇ ರಂಡೇ! ಮಿಂಡಗಾರರ ಮಾತು ಕಟ್ಟಿಕೊಂಡು ಪಲ್ಯಕ್ಕೆ ವಿಷಾ ಹಾಕಿಲ್ಲಾ? ಹೇಳು!" ಎಂದು ಗುದ್ದಿದರು.

ಸುಬ್ಬಮ್ಮ ರೋದಿಸುತ್ತ ತಾನು ಏನೂ ಮಾಡಿಲ್ಲ ಎಂದು ದಮ್ಮಯ್ಯ ಗುಡ್ಡೆ ಹಾಕಿದಳು. ರಾಮಯ್ಯ, ಸೇರೆಗಾರರು ಎಲ್ಲರೂ ಸುಬ್ಬಮ್ಮನ ಪರವಾಗಿ ವಾದಿಸಿದರು. ಆದರೂ ಗೌಡರು ಪಲ್ಯವನ್ನೆಲ್ಲ ಸುಬ್ಬಮ್ಮನ ಕೈಯಿಂದ ಅಲ್ಲಿಯೇ ತಮ್ಮೆದುರು ತಿನ್ನುವಂತೆ ಮಾಡಿ, ಅವಳು ಸಾಯುವುದನ್ನೇ ಎದುರುನೋಡಿ, ಹತಾಶರಾಗಿದ್ದರು.

ಮತ್ತೊಂದು ಸಾರಿ ಸುಬ್ಬಮ್ಮನ ತಲೆಯ ಹಿಂಭಾಗದಲ್ಲಿಯೂ ಬೆನ್ನಿನ ಮೇಲೆಯೂ ಒಣಗಿದ್ದ ಹುಲ್ಲೆಸಳುಗಳಿದ್ದುದನ್ನು ಕಂಡು ಗೌಡರು "ಎಲ್ಲಿಂದ

ಬಂತು ಈ ಹುಲ್ಲು ನಿನ್ನ ಬೆನ್ನಮೇಲೆ? ಎಲ್ಲಿ ಯಾರ ಜೊತೆ ಹುಲ್ಲು ಗೊಣಬೇಲಿ ಮಲಗಿದ್ದೆ ಹೇಳು?" ಎಂದು ಹಲ್ಲು ಕಚ್ಚಿಕೊಂಡು ಕಣ್ಣು ಕೆಂಪಗೆ ಮಾಡಿಕೊಂಡು ಕೇಳಿದರು. ಸುಬ್ಬಮ್ಮ ತಾನು ಕರೆಯುವ ದನಗಳಿಗೆ ಹುಲ್ಲು ಹಾಕುತ್ತಿದ್ದಾಗ ಅದನ್ನು ಬೆನ್ನಮೇಲೆ ಹೊತ್ತುಕೊಂಡು ಹೋಗಿದ್ದೆ ಎಂದು ಹೇಳಿದರೂ ಗೌಡರು ಸಮಾಧಾನರಾಗದೆ ಆಕೆಯನ್ನು ಚೆನ್ನಾಗಿ ಗುದ್ದಿ ಗುದ್ದಿ ಒದ್ದು ಒದ್ದು ಹಾಕಿದ್ದರು.

ಅಲ್ಲದೆ, ಅನೇಕ ರಾತ್ರಿ, ಗೌಡರು ಮಲಗುತ್ತಿದ್ದ ಕೋಣೆಯಿಂದ ರಭಸದ ಮಾತುಗಳೂ ಗುದ್ದಿನ ಸದ್ದುಗಳೂ ರೋದನಧ್ವನಿಗಳೂ ಕೇಳಿಬರುತ್ತಿದ್ದುದನ್ನು ಉಪ್ಪರಿಗೆಯಮೇಲೆ ಮಲಗುತ್ತಿದ್ದ ರಾಮಯ್ಯನಾದಿಯಾಗಿ ಎಲ್ಲರೂ ಆಲಿಸಿದ್ದರು.

ಎಲ್ಲಕ್ಕಿಂತಲೂ ಹೆಚ್ಚಾಗಿ, ಸುಬ್ಬಮ್ಮನನ್ನು ಪ್ರತಿಭಟನೆಗೆ ರೇಗಿಸಿದ್ದೆಂದರೆ ಗೌಡರು ಗಂಗೆಗೆ ಸುಬ್ಬಮ್ಮನ ಸೀರೆಗಳನ್ನೂ ಒಡವೆಗಳನ್ನೂ ಕೊಡತೊಡಗಿದ್ದು. ಕಷ್ಟದಾರಿದ್ರ್ಯಗಳಲ್ಲಿ ಹುಟ್ಟಿ ಬೆಳೆದಿದ್ದ ಆ ಒರಟು ಹುಡುಗಿ ಪೆಟ್ಟುಗಳನ್ನೂ ಬೈಗುಳಗಳನ್ನೂ ನಿಂದೆಯನ್ನೂ ಕಷ್ಟಪಟ್ಟುಕೊಂಡು ಸಹಿಸಿದ್ದರೂ ತನಗೆ ಸೇರಿದ್ದ ಉಡುಗೆತೊಡುಗೆಗಳು ಹೆರರ ಪಾಲಾಗುತ್ತಿದ್ದುದನ್ನು ಕಂಡು ಸಹಿಸಲಾರದೆ ಹೋದಳು. ಗಂಡನಿಗೆ ಪ್ರತಿಯಾಗಿ ಮಾತಾಡಲೂ ಪ್ರಾರಂಭಿಸಿದ್ದಳು.

ಆ ದಿನ ರಾತ್ರಿಯೂ ಹೊರಗೆ ಎಲ್ಲರೂ ಅಡಕೆ ಸುಲಿಯುತ್ತಿದ್ದಾಗ ಒಳಗೆ ಒಂದು ರಣರಂಪವಾಗುತ್ತಿತ್ತು. ಗೌಡರು ಸುಬ್ಬಮ್ಮನ ಪಿಟಾರಿಯ ಬೀಗದ ಕೈಯನ್ನು ಕೇಳಿದರು. ಆಕೆ ಕೊಡಲಿಲ್ಲ. ಗೌಡರು ಬದ್ಧಭ್ರುಕುಟಿಯಾಗಿ ಹೆಂಡತಿಯ ಮೈಮೇಲೆ ಬಿದ್ದು ಬೀಗದಕೈಯನ್ನು ಕಸಿದುಕೊಳ್ಳಲು ಪ್ರಯತ್ನಿಸಿ ಸೋತರು.

ಒಡನೆಯೆ ಸುಬ್ಬಮ್ಮನನ್ನು ಬಿಟ್ಟು "ನಿನ್ನ ಇವತ್ತು ಕತ್ತರಿಸಿ ಹಾಕ್ದೇ ಇದ್ರೆ ನನ್ನ ಅಪ್ಪನಿಗೆ ಹುಟ್ಟಿದ ಮಗನಲ್ಲ ನಾನು" ಎನ್ನುತ್ತಾ ನಾಗಂದಿಗೆಯ ಮೇಲೆ ಕೈಯಾಡಿಸಿ ಕತ್ತಿಯನ್ನು ಹುಡುಕಿದರು. ಸುಬ್ಬಮ್ಮನಿಗೆ ತನ್ನ ಜೀವನದ ಕೊನೆಯೇ ಕಂಡಹಾಗಾಯಿತು. ಗಟ್ಟಿಯಾಗಿ ಕಿರಿಚಿಕೊಳ್ಳುತ್ತಾ ಅಲ್ಲಿಂದೆದ್ದು ಜಗಲಿಗೆ ನುಗ್ಗಿದಳು.

ಒಳಗೆ ನಡೆಯುತ್ತಿದ್ದ ಜಗಳವನ್ನಾಲಿಸಿ ಮೆಟ್ಟುಗತ್ತಿಯನ್ನು ಬಿಟ್ಟು ಎದ್ದಿದ್ದ ಸೇರೆಗಾರರು ಇದೇನೆಂದು ನೋಡುವ ಮೊದಲೇ ಸುಬ್ಬಮ್ಮನನ್ನು ಹಿಂಬಾಲಿಸಿ ಕೈಯಲ್ಲಿ ಕತ್ತಿ ಹಿಡಿದಿದ್ದ ಗೌಡರು ರೋಷಭೀಷಣರಾಗಿ ನುಗ್ಗಿದರು.

"ಅಯ್ಯೋ ಸತ್ತೇ! ಸತ್ತೇ! ಸೇರೆಗಾರರೇ" ಎಂದು ಅಬ್ಬರಿಸಿ ಕೂಗುತ್ತಾ ಸುಬ್ಬಮ್ಮ ತೆರೆದಿದ್ದ ಹೆಬ್ಬಾಗಿಲನ್ನು ಮಿಂಚಿನಂತೆ ದಾಟಿ ಮನೆಯ

ಹೊರಗೆ ಧಾವಿಸಿದಳು. ಗೌಡರೂ ಹಿಂದೆಯೇ ನುಗ್ಗಿದರು. ಆಡಕೆ ಸುಲಿಯು ತ್ತಿದ್ದವರೆಲ್ಲರೂ ಹಾಗೆಹಾಗೆಯೇ ದಡಬಡನೆ ಮೇಲೆದ್ದು ಹಿಂದೋಡಿದರು. ಚಳಿಜ್ವರ ಬಂದು ಉಪ್ಪರಿಗೆಯಮೇಲೆ ಮಲಗಿದ್ದ ರಾಮಯ್ಯನೂ ಗಾಬರಿಗೊಂಡು ದಡಬಡನೆ ಏಣಿ ಮೆಟ್ಟಲುಗಳನ್ನು ಹಾರಿ ಇಳಿದನು.

ಮಲೆನಾಡಿನ ನೀರವ ರಾತ್ರಿ ನಿಶ್ಚಲವಾಗಿತ್ತು. ಮುಗಿಲ ಮಧ್ಯೆ ಇದ್ದ ಅಪೂರ್ಣಚಂದ್ರನ ಮಂದಕಾಂತಿ ಮಾಯೆಯ ಮುಸುಗಿನಂತೆ ಗಿರಿವನಗಳ ಸ್ತಬ್ಧ ನಿದ್ರೆಯ ಮೇಲೆ ಕಾವುಕೂತಿತ್ತು. ಆದರೆ ಕ್ಷಣಮಾತ್ರದಲ್ಲಿ ನಾಯಿ ಮತ್ತು ಮನುಷ್ಯರ ಕೂಗುವದನಿ ನಿಶ್ಯಬ್ದತೆಯನ್ನು ಕಲಕಿಬಿಟ್ಟಿತು.

ಕೈಯಲ್ಲಿ ಕತ್ತಿ ಹಿಡಿದು ಅಟ್ಟುತ್ತಿದ್ದ ಚಂದ್ರಯ್ಯಗೌಡರಿಗೆ ಸುಬ್ಬಮ್ಮ ಕಾಣಿಸ ಲಿಲ್ಲ. ಅಲ್ಲಲ್ಲಿ ದಟ್ಟಯಿಸಿದ್ದ ಮರಗಳ ನೆರಳುಗತ್ತಲೆಯಲ್ಲಿ ಆಕೆ ಕಣ್ಮರೆಯಾಗಿ ಬಿಟ್ಟಳು. ಕ್ರೋಧಾಂಧರಾಗಿದ್ದ ಗೌಡರು, ಗಾಯಗೊಂಡ ಹುಲಿ ಅಟ್ಟಣೆಯಲ್ಲಿ ಅಡಗಿರುವ ಬೇಟೆಗಾರನನ್ನು ಹುಡುಕುವಂತೆ, ದೀರ್ಘಶ್ವಾಸೋಚ್ಛ್ವಾಸಗಳನ್ನು ಬಿಡುತ್ತ ಹುಡುಕಾಡಿದರು. ಇದ್ದಕ್ಕಿದ್ದ ಹಾಗೆ ನೆರಳಿನಲ್ಲಿ ಮರದ ಬುಡದಲ್ಲಿ ಯಾರೋ ಕೂತಿದ್ದಹಾಗೆ ಕಂಡುಬರಲು ಅಲ್ಲಿಗೆ ನುಗ್ಗಿ, ಕೈಲಿದ್ದ ಕತ್ತಿಯಿಂದ ಬಲವಾಗಿ ಒಂದು ಕೊಚ್ಚು ಹಾಕಿದರು. ಯಾರೂ ಕೂಗಲಿಲ್ಲ. ಕತ್ತಿಯೂ ಸಿಕ್ಕಿಕೊಂಡಿತು. ಗೌಡರು ಎಳೆದರೂ ಬರಲಿಲ್ಲ. ಅವರು ಹೊಡೆದದ್ದು ಒಂದು ಮರದ ದಿಂಡಾಗಿತ್ತು! ಆದರೂ ಗೌಡರ ಭೀತಚಿತ್ತದಲ್ಲಿ ದೆವ್ವ, ಭೂತರಾಯ ಮುಂತಾದವುಗಳ ವಿಚಾರವಾದ ಭಯಭಾವಗಳು ಮೂಡಿ ಕಣ್ಣು ಕೆರಳಿ ಗಟ್ಟಿಯಾಗಿ ವಿಕಟವಾಗಿ ಕೂಗಿಕೊಂಡು ಕೆಳಗೆ ಬಿದ್ದರು.

ಗೌಡರನ್ನು ಮನೆಗೆ ಸಾಗಿಸಿದರು. ಸುಬ್ಬಮ್ಮನನ್ನು ಕರೆದು ಹುಡುಕಿದರು. ಆದರೆ ಪ್ರತ್ಯುತ್ತರವೂ ಬರಲಿಲ್ಲ. ಆಕೆ ಕಾಣಿಸಲೂ ಇಲ್ಲ.

ಬಹಳ ಹೊತ್ತು ಕರೆದು ಹುಡುಕಿದಮೇಲೆ ಎಲ್ಲರೂ ಹತಾಶರಾಗಿ ಭಯಾ ಶಂಕೆಗಳಿಂದ ಹಿಂತಿರುಗಿದರು. ಆದರೆ ಸೇರೆಗಾರರು ಹತಾಶರಾಗಲೂ ಇಲ್ಲ; ಹಿಂತಿರುಗಲೂ ಇಲ್ಲ. ಆಳುಗಳ ಬಿಡಾರ, ಗಂಗೆಯ ಗುಡಿಸಲು ಈ ಕಡೆಗಳಲ್ಲಿ ಹುಡುಕುತ್ತಾ ಮೆಲ್ಲಗೆ ಹೆಸರು ಹಿಡಿದು ಕೂಗುತ್ತಾ ಹೊರಟರು.

ಹೊದರಿನಲ್ಲಿ ಅಡಗಿ ಕುಳಿತಿದ್ದ ಸುಬ್ಬಮ್ಮ ಬಹಳ ಹೊತ್ತಿನಮೇಲೆ ಚಳಿಯಿಂದ ನಡುಗತೊಡಗಿದಳು. ಜನರ ಸದ್ದು ಅಡಗಿದ ತರುವಾಯ ಆಕೆಗೆ ಭಯವೂ ಉಂಟಾಯಿತು. ಕ್ರಿಮಿಕೀಟಗಳೋ ಇರುವೆಗಳೋ ಮೈಮೇಲೆ ಗುಳುಗುಳು ಹರಿಯತೊಡಗಿದುವು. ಅಲ್ಲಿಂದ ಮೆಲ್ಲನೆ ಎದ್ದು ಹೊರಗೆ ಬಂದು, ಕ್ಷಣಕಾಲ ಅನಿರ್ದಿಷ್ಟಚಿತ್ತೆಯಾಗಿ ನಿಂತು, ಮುಂದೇನು ಮಾಡುವುದೆಂದು ಆಲೋಚಿಸಿದಳು.

ಕಾನೂರಿನಲ್ಲಿ ಎಲ್ಲಿಯೂ ತನಗೆ ಕ್ಷೇಮವಿಲ್ಲ ಎಂದು ಭಾವಿಸಿ ನೆಟ್ಟಗೆ ಕೆಳಕಾನೂರಿಗೆ ಹೊರಟಳು.

ಗದ್ದೆಬಯಲಿನಲ್ಲಿ ಹೋಗುತ್ತಿದ್ದಾಗ ಹಿಂದೆ ಯಾರೋ ಬಂದಂತೆ ಸದ್ದಾಗಿ ನೋಡಿದಳು. ಯಾವುದೋ ಒಂದು ವ್ಯಕ್ತಿ ತನ್ನನ್ನು ಹಿಂಬಾಲಿಸುತ್ತಿದ್ದುದು ಗೊತ್ತಾಗಿ ಮತ್ತೆ ಓಡತೊಡಗಿದಳು. ಆ ವ್ಯಕ್ತಿಯೂ ಓಡುತ್ತಾ ಹಿಂಬಾಲಿಸಿತು.

ಸ್ವಲ್ಪದೂರ ಹೋಗುವುದರಲ್ಲಿ ಹಿಂದೆ ಬರುತ್ತಿದ್ದ ವ್ಯಕ್ತಿ ತನ್ನನ್ನು ಶೀಘ್ರದಲ್ಲಿಯೇ ಆಕ್ರಮಿಸುವನೆಂದು ಬಗೆದು, ಅಡ್ಡಹಾದಿ ಹಿಡಿದು ಓಡಿ, ಒಂದು ದೊಡ್ಡ ಮರದ ಬುಡದಲ್ಲಿ ಬೆಳೆದಿದ್ದ ಹಳುವಿನಲ್ಲಿ ಅವಿತುಕೊಂಡಳು. ಆಕೆ ನೋಡುತ್ತಿದ್ದ ಹಾಗೆಯೇ ಸೇರೆಗಾರ ರಂಗಪ್ಪಸೆಟ್ಟರು ಕೆಳಕಾನೂರಿನ ಹಾದಿ ಹಿಡಿದು ಅವಸರ ಅವಸರವಾಗಿ ಮುಂದೆ ಓಡಿದರು.

ಐದು ನಿಮಿಷ ಕಳೆದಿರಲಿಲ್ಲ. ಮೇಲೆ, ಮರದಮೇಲೆ ಯಾರೊ ಮೆಲ್ಲಗೆ ಕೆಮ್ಮಿದಂತಾಯಿತು. ಸುಬ್ಬಮ್ಮಗೆ ದೆವ್ವ ಪಿಶಾಚಿಗಳಲ್ಲಿ ನಂಬುಗೆ ನಟ್ಟು ಹೋಗಿತ್ತು. ('ದೆಯ್ಯ'ವಾಸಿಸದ ದೊಡ್ಡ ಮರವಿಲ್ಲ ಎಂಬ ಭಾವ ಹಳ್ಳಿಗಳಲ್ಲಿ 'ವೈಜ್ಞಾನಿಕ ಸಿದ್ಧಾಂತ'ವಾಗಿರುತ್ತದೆ.) ಮರದ ಕೊಂಬೆಯೊಂದು ಸ್ವಲ್ಪ ಅಲುಗಾಡಿದಂತಾಯಿತು. ಸುಬ್ಬಮ್ಮ ನಿಬ್ಬೆರಗಾಗಿ ಮೇಲೆ ನೋಡುತ್ತಾಳೆ: ಮನುಷ್ಯಾಕೃತಿಯೊಂದು ಕೆಳಗಿಳಿಯುತ್ತಿದೆ; ಹೆಗಲಮೇಲೆ ಕಂಬಳಿಯಿದೆ; ಕೈಯಲ್ಲಿದ್ದ ಕೋವಿಯ ನಳಿಗೆ ಆಕಾಶ ಪಟಕ್ಕೆದುರಾಗಲು ಆಗಾಗ ಮಷೀಚಿತ್ರವಾಗಿ ಗೋಚರಿಸುತ್ತದೆ! ಕೋವಿಯನ್ನು ಕಂಡೊಡನೆ ಸುಬ್ಬಮ್ಮಗೆ ಧೈರ್ಯವಾಯಿತು, ಯಾರೋ "ಮರಸಿ"ಗೆ ಕೂತಿದ್ದಾರೆಂದು. ಕಾಡುಹಂದಿಗಳಿಗಾಗಿ ಕೂತಿದ್ದ ಆ ಬೇಟೆಗಾರ ಮರದ ಬುಡದವರೆಗೂ ನಿಧಾನವಾಗಿ ಇಳಿದು ಬಂದು ನೆಲಕ್ಕೆ ದೊಪ್ಪನೆ ನೆಗೆದು, ನಿಂತು "ಯಾರದು?" ಎಂದನು.

ಸುಬ್ಬಮ್ಮಗೆ ಪುಟ್ಟಣ್ಣನ ಧ್ವನಿ ಕೇಳಿಸಿ ಜೀವ ಬಂದಂತಾಗಿ, ಅಡಗಿದ್ದ ಸ್ಥಳದಿಂದ ಹೊರಗೆ ಬಂದು ನಡುಕುದನಿಯಿಂದ ಶೋಕಪೂರ್ಣವಾಗಿ "ನಾನು ಕಣೋ, ಪುಟ್ಟಣ್ಣಾ! ನನ್ನ ಗತಿ ಇಲ್ಲಿಗೆ ಬಂತಪ್ಪಾ!" ಎಂದಳು.

ಸಿಡಿಲು ಬಡಿದಿದ್ದರೂ ಪುಟ್ಟಣ್ಣನಿಗೆ ಅಷ್ಟು ಆಶ್ಚರ್ಯವಾಗುತ್ತಿರಲಿಲ್ಲ.

"ಯಾರು? ಸುಬ್ಬಮ್ಮ ಹೆಗ್ಗಡಿತೇರೇನು?" ಎಂದನು.

ಸುಬ್ಬಮ್ಮ ಸಂಕ್ಷೇಪವಾಗಿ ನಡೆದುದನ್ನೆಲ್ಲ ಹೇಳಿದಳು. ಪುಟ್ಟಣ್ಣ ಮುಂದೆ ನಡೆದನು. ಹಿಂದೆ ಸುಬ್ಬಮ್ಮ ಕಣ್ಣೊರಸಿಕೊಳ್ಳುತ್ತಾ, ಬಿಕ್ಕಳಿಸುತ್ತಾ ನಡೆದಳು.

ಕೆಳಕಾನೂರಿನ ಹುಲ್ಲು ಮನೆಯ ಮುಂದುಗಡೆ ಉರಿಯುತ್ತಿದ್ದ ಒಂದು

ಲಾಟೀನಿನ ಬಳಿ ಸೇರೆಗಾರರೂ ಹೂವಯ್ಯನೂ ಉದ್ವೇಗದಿಂದ ಮಾತಾಡು ತ್ತಿದ್ದರು. ನಾಯಿಗಳು ಬೇಟೆಗೆ ಹೊರಡುತ್ತಾರೆಯೊ ಏನೊ ಎಂದು ಬಾಲ ವಲ್ಲಾಡಿಸುತ್ತಿದ್ದುವು, ಸುತ್ತಿ ನಿಂತು.

"ಈ ರಾತ್ರಿ ಎಲ್ಲಿಗೆ ಹೋದರು?" ಎಂದನು ಹೂವಯ್ಯ.

"ಏನೋ ಗೊತ್ತಿಲ್ಲ ಕಾಣಿ. ಗದ್ದೆ ಬಯಲಿನಲ್ಲಿ ಕಾಣಿಸಿಕೊಂಡರು. ಮತ್ತೆ ಕಾಣಿಸಲಿಲ್ಲ. ಅವರ ಮನಸ್ಸು ನೆಲ್ಲುಹಳ್ಳಿಗೆ ಹೋಪುದಂಬುದಾಗಿ ಕಾಣ್ತದೆ."

"ನೀವೊಬ್ಬರೇ ಹಿಂದೆ ಬಂದಿರೇನು? ಉಳಿದವರೆಲ್ಲಿ?"

"ಅವರೆಲ್ಲರೂ ಹುಡುಕಿ ಹುಡುಕಿ ಸಾಕಾಗಿ ಹೋದರು."

ಹೂವಯ್ಯ ಸೇರೆಗಾರರ ಮುಖವನ್ನು ಸಂಶಯಾತ್ಮಕವಾದ ತೀಕ್ಷ್ಣದೃಷ್ಟಿ ಯಿಂದ ನೋಡಿದನು!

ನಾಯಿ ಬಗುಳಿದುವು. ಪುಟ್ಟಣ್ಣ "ಹಚಾ! ಇವಕ್ಕೇನು ಕಣ್ಣು ಹೊಟ್ಟಿ ಹೋಗಿದೆಯೇನು?" ಎಂದು ಮುಂದೆ ಲಾಟೀನಿನ ಬೆಳಕಿಗೆ ಬಂದನು.

ಹೂವಯ್ಯ ಅವನಿಗೆ ಸುದ್ದಿಯನ್ನು ಹೇಳಲು ತೊಡಗುವಷ್ಟರಲ್ಲಿ ಸುಬ್ಬಮ್ಮನೂ ಹಿಂದಿನಿಂದ ಕಾಣಿಸಿಕೊಂಡಳು. ಪುಟ್ಟಣ್ಣ ನಡೆದುದನ್ನೆಲ್ಲ ಎರಡು ಮಾತಿನಲ್ಲಿ ಹೇಳಿದಮೇಲೆ ಎಲ್ಲರೂ ಮನೆಯೊಳಗೆ ಹೋದರು.

ಹೂವಯ್ಯ ಗಾಢನಿದ್ರೆಯಲ್ಲಿದ್ದ ತಾಯಿಯನ್ನು ಎಚ್ಚರಿಸಿ, ಸಂಗತಿಯನ್ನು ತಿಳಿಸಿದನು. ಸುಬ್ಬಮ್ಮ ನಾಗಮ್ಮನವರ ಕೊಟಡಿಯಲ್ಲಿ ಮಲಗಿದ ಮೇಲೆ ಹೂವಯ್ಯ ಪುಟ್ಟಣ್ಣ ಮತ್ತು ಸೇರೆಗಾರರು ಬಹಳ ಹೊತ್ತು ಆಕೆಗೊದಗಿದ ದುಃಖಸ್ಥಿತಿಯನ್ನು ಕುರಿತು ಮಾತಾಡುತ್ತಿದ್ದರು.

ಮರುದಿನ ಮುಂಜಾನೆ ಸುಬ್ಬಮ್ಮ ತವರೂರಿಗೆ ಹೋಗುತ್ತೇನೆಂದು ಹಟ ಮಾಡಿದಳು. ಸೇರೆಗಾರರು ತಾನೇ ಆಕೆಯನ್ನು ನೆಲ್ಲುಹಳ್ಳಿಗೆ ಕರೆದೊಯ್ಯು ತ್ತೇನೆಂದು ಮುಂದೆ ಬಂದರು. ಹೂವಯ್ಯ ಪುಟ್ಟಣ್ಣನನ್ನು ಗುಟ್ಟಾಗಿ ಕರೆದು, ಅವನ ಕಿವಿಯಲ್ಲಿ ಏನನ್ನೋ ಹೇಳಿದಮೇಲೆ, ಅವನು ಸೇರೆಗಾರರನ್ನು ಕುರಿತು "ಸೇರೆಗಾರ್ರೇ, ನನಗೂ ಕೆಲಸ ಇದೆ ನೆಲ್ಹಳ್ಳೀಲಿ. ನಾನೂ ಬರ್ತೇನೆ ನಿಮ್ಮ ಜೊತೇಲೆ" ಎಂದನು.

ಸೇರೆಗಾರರು ಹತಾಶರಾದಂತಾಗಿ "ಹಾಂಗಾದ್ರೆ, ನೀವೇ ಹೋಗಿನಿ! ಹೋಪವರು ಯಾರೂ ಇಲ್ಲ ಅಂಬುದಾಗಿ ನಾನೇ ಹೋಗುತ್ತೇನೆ ಅಂದೆ! ಅಷ್ಟೇ! ಹಾಂಗಾದರೆ ನೀವೆ ಹೋಗಿನಿ. ನಾ ಬತ್ತೆ!." ಎಂದು ಹೇಳಿ ಕಾನೂರಿಗೆ ನಡೆದರು.

ಸೇರೆಗಾರರು ಮನಸ್ಸಿನಲ್ಲಿ ಹೂವಯ್ಯನನ್ನೂ ಪುಟ್ಟಣ್ಣನನ್ನೂ ಕಡಿಯುತ್ತಾ

ಹೋದರು. ತರುವಾಯವಾದರೂ ಚಂದ್ರಯ್ಯಗೌಡರ ಕಿವಿಯಲ್ಲಿ ಅವರಿಬ್ಬರ ಮೇಲೆಯೂ ಅಸಹ್ಯವಾದ ನಿಂದೆ ಬರುವಂತಹ ಅಪವಾದವನ್ನು ಉಸಿರದಿರಲಿಲ್ಲ. ಚಂದ್ರಯ್ಯಗೌಡರು ಸುಬ್ಬಮ್ಮನನ್ನು ಎಷ್ಟು ತ್ಯಜಿಸಿದರೆ ಎಷ್ಟು ದ್ವೇಷಿಸಿದರೆ ಅದರಿಂದ ಅಷ್ಟೂ ಪ್ರಯೋಜನ ತಮಗುಂಟೆಂಬುದು ಅವರ ಮನೋರಹಸ್ಯವಾಗಿತ್ತು.

ಯಾವ ಹುತ್ತದಲ್ಲಿ ಯಾವಾಗ ಮೊಟ್ಟೆಯೊಡೆದು ಹಾವಿನಮರಿ ಹೆಡೆಯೆತ್ತುತ್ತದೆಯೋ ಹೇಳುವುದು ಕಷ್ಟ !

## ೪೯

## ಬಾಳಿನ ಬಾನಿನಲ್ಲಿ ಕರ್ಮುಗಿಲು ದಟ್ಟವಾಗುತ್ತಿದೆ

ಸುಬ್ಬಮ್ಮ ಪುಟ್ಟಣ್ಣನ ಮೈಗಾವಲಿನಲ್ಲಿ ನೆಲ್ಲುಹಳ್ಳಿಯ ಕಡೆಗೆ ನಡೆದು ಕಣ್ಮರೆಯಾದಮೇಲೆ ಹೂವಯ್ಯ ಮನೆಯ ಹೊರ ಅಂಗಳದಲ್ಲಿ ನಿಂತು ಆಲೋಚನಾ ಮಗ್ನನಾದನು.

ಅನತಿದೂರದಲ್ಲಿದ್ದ ಹಸುರಾದ ಬೆಟ್ಟದ ಸಾಲಿನಮೇಲೆ ಸೂರ್ಯನು ಮೂಡಿದನು. ಮರ ಮರಗಳಲ್ಲಿ ಪೊದೆ ಪೊದೆಗಳಲ್ಲಿ ಹಕ್ಕಿ ಹಾಡಿದುವು. ಮೃದುಗಾಳಿ, ಬೆಳೆದು ನಿಂತಿದ್ದ ಗದ್ದೆಯ ಕೆವಿಯಮೇಲೆ, ಸುಯ್ಯೆಂದು ಬೀಸಿ, ಗದ್ದೆಯಕೋಗು ತೆರೆ ತೆರೆಯಾಗುವಂತೆ ಮಾಡುತ್ತಿತ್ತು. ಆ ದೃಶ್ಯದ ಮಧ್ಯೆ, ಗದ್ದೆಯ ನಡುವೆ ಹಾದುಬರುತ್ತಿದ್ದ ಕಾಲುದಾರಿಯಲ್ಲಿ, ಅಡಕೆ ಸುಲಿಯಲೆಂದು ಗೊತ್ತುಮಾಡಿದ್ದ ಕೂಲಿಯಾಳುಗಳು — ಹೆಂಗಸರೂ, ಗಂಡಸರೂ — ಬುಡುಬುಡುಕೆಯಂತೆ ತುಮುಲವಾಗಿ ಹರಟೆ ಹೊಡೆಯುತ್ತ ಬಂದರು.

ಹೂವಯ್ಯ ನೋಡುತ್ತಿದ್ದರೂ ಕೇಳುತ್ತಿದ್ದರೂ ಗಮನಿಸಿರಲಿಲ್ಲ. ಅವುಗಳೆಲ್ಲ ಅವನ ಪ್ರಜ್ಞಾವಲಯದ ಅಂಚಿನಲ್ಲಿ ಮಾಸಲು ಮಾಸಲಾಗಿದ್ದುವು. ಅವನ ಧ್ಯಾನ ಅಷ್ಟು ಅಗಾಧವಾಗಿದ್ದಿತೇನು ?

ಇದ್ದಕ್ಕಿದ್ದಹಾಗೆ ಹಿಂದಿನಿಂದ ಯಾರೋ ನೂಕಿದಂತಾಗಿ ಬೆಚ್ಚಿಬಿದ್ದ ಹೂವಯ್ಯ ತಿರುಗಿ ನೋಡಿ, "ಬಲೀಂದ್ರ !" ಎಂದು ಗದರಿ, ನಗುವ ಸಿಟ್ಟಿನಿಂದ ಅದರ ಗಿಡ್ಡಗೋಡುಗಳನ್ನು ಹಿಡಿದು ಜಗ್ಗಿಸುತ್ತಾ "ನಿನಗೇನು ತಿಂದ ಸೊಕ್ಕೇನು? ಹೀಗೆ ಸೊಕ್ಕಿದರೆ ಮತ್ತೆ ಬಲಿಯಾಗ್ತೀಯ ಭೂತಕ್ಕೆ !" ಎಂದು ಗದರಿಸಿದನು.

ಆದರೆ ಆ ಸುಪುಷ್ಟವಾಗಿದ್ದ ಮಹಾಕಾಯದ ಕರಿಯ ಹೋತವು ಸ್ವಾಮಿ

ಭಕ್ತಿಯನ್ನು ಪ್ರದರ್ಶಿಸುವ ಸಲುವಾಗಿಯೊ, ತನ್ನ ಪ್ರಾಣವನ್ನುಳುಹಿದ ಕೃತಜ್ಞತೆಗಾಗಿಯೊ, ಯೌವನಾಧಿಕ್ಯದ ಆನಂದ ಪ್ರದರ್ಶನಾರ್ಥವಾಗಿಯೊ ಅಥವಾ ಸಾಧುಪ್ರಾಣಿಗೆ ಸಹಜವಾದ ಪ್ರೀತಿಗಾಗಿಯೊ ತನ್ನ ಮೈಯನ್ನು ಹೂವಯ್ಯನ ಮೈಗೆ ಉಜ್ಜುತ್ತ, ಕತ್ತೆತ್ತಿ, ಎರಡಂಗುಲದ ಗಡ್ಡದಿಂದಲೂ, ಜೋಲಾಡುತ್ತಿದ್ದ ಕುತ್ತಿಗೆಯ ಮೊಲೆಗಳಿಂದಲೂ, ಎವೆಯಿಕ್ಕದೆ ಯಜಮಾನನ ಮುಖವನ್ನು ನೋಡುತ್ತಿದ್ದ ಜೀವಪೂರ್ಣವಾದ ಕಣ್ಣುಗಳಿಂದಲೂ ಮಾನವ ಸಮಾನವಾಗಿ ಆಚರಿಸತೊಡಗಿತು. ಹೂವಯ್ಯ ಬಾಗಿ, ಅದರ ಕುತ್ತಿಗೆಯನ್ನು ಕಂಕುಳಲ್ಲಿ ಅವುಚಿಕೊಂಡು, ಅದರೊಡನೆ ವಿನೋದಕ್ಕಾಗಿ ಮಾತಾಡುತ್ತಿದ್ದನು. ಹೋತದ ಮೈಯ ಸಿನುಗುವಾಸನೆ ಮೂಗಿನೊಳಗೆ ನುಗ್ಗುತ್ತಿತ್ತು.

ಹೂವಯ್ಯ ಭೂತಕ್ಕೆ ಬಲಿಯಾಗಿದ್ದ ಆ ಹೋತವನ್ನು ಸಂರಕ್ಷಿಸಿದಂದಿನಿಂದ ಅದು ಅವನದಾಗಿಹೋಗಿತ್ತು. ಮತ್ತಾರಿಗೂ ಆ ಪ್ರಾಣಿಯ ಸ್ವಾಮ್ಯವನ್ನು ವಹಿಸಿಕೊಳ್ಳುವಷ್ಟು ಧೈರ್ಯವಿರಲಿಲ್ಲ. ಭೂತಕ್ಕೆ ಬಲಿಯಾಗಲಿದ್ದ ಪ್ರಾಣಿಯನ್ನು ತಪ್ಪಿಸಿದ ಜವಾಬ್ದಾರಿ ತಮ್ಮದಾಗಿ, ಭೂತದ ಕ್ರೋಧಕ್ಕೆಲ್ಲಿ ತಾವೇ ಬಲಿಯಾಗಬೇಕಾಗುತ್ತದೆಯೋ ಎಂದು ಯಾರೂ ಅದರ ಗೋಜಿಗೆ ಹೋಗಲಿಲ್ಲ. ಅಷ್ಟೇ ಅಲ್ಲ. ಕೂಲಿಯಾಳುಗಳೆಲ್ಲರೂ ಆ ಹೋತಕ್ಕಾಗಿ ಎಳ್ಳನಿತು ಕೆಲಸ ಮಾಡಲೂ ಕೂಡ ಹಿಂಜರಿದರು. ಕುರಿ ಕಾಯುವವನು ಅದನ್ನು ಇತರ ಕುರಿಗಳ ಜೊತೆ ಸೇರಿಸಲು ಒಪ್ಪಲಿಲ್ಲ. ಸೊಪ್ಪು ಹಾಕುವವನು ಸೊಪ್ಪು ಹಾಕಲು ಸಮ್ಮತಿಸಲಿಲ್ಲ. ಹೋತ ಸ್ವಾಭಾವಿಕವಾಗಿ ಬಲಶಾಲಿಯಾಗಿದ್ದುದರಿಂದಲೂ ಅನೇಕ ಸಾರಿ ಹೂವಯ್ಯನೊಡನೆ ನಾಯಿಗಳ ಸಮೂಹದಲ್ಲಿ ನಿರ್ಲಕ್ಷ್ಯವಾಗಿರುತ್ತಿದ್ದುದರಿಂದಲೂ ಅದು ನಾಯಿಗಳಿಗೂ ಹೆದರುತ್ತಿರಲಿಲ್ಲ. ಅದಕ್ಕೆ ಬದಲಾಗಿ ನಾಯಿಗಳೇ ಅದಕ್ಕೆ ಭಯಪಡತೊಡಗಿದ್ದುವು. ಅದನ್ನು ನೋಡಿ ಕೆಲವು ಮೂಢರು ಭೂತರಾಯನೇ ಬಂದು ಅದರೊಳಗೆ ವಾಸಮಾಡುತ್ತಿರುವುದರಿಂದ ನಾಯಿಗಳೂ ಅದಕ್ಕೆ ಹೆದರುತ್ತವೆ ಎಂದು ಸುದ್ದಿ ಹುಟ್ಟಿಸಿದರು. ಹೋತದ ಮೇಲಿದ್ದ ಭೂತ ಮನುಷ್ಯರ ಕಣ್ಣಿಗೆ ಕಾಣಿಸದಿದ್ದರೂ ನಾಯಿಗಳಿಗೆ ಕಾಣಿಸುತ್ತದೆ ಎಂಬುದು ಅವರ ನಂಬುಗೆಯಾಗಿತ್ತು. ಹೀಗೆ ಆ ಹೋತ ದೇವರಿಗೆ ಬಿಟ್ಟ ಬಸವನಂತೆ ಸ್ವೇಚ್ಛಾಚಾರಿಯೂ ಬಲಿಷ್ಠವೂ ಸ್ವಲ್ಪಮಟ್ಟಿಗೆ ಧೂರ್ತವೂ ಪುಕ್ಕಲೆದೆಯವರಿಗೆ ಭೀಕರವೂ ಆಗಿ ಸಂಪೂರ್ಣ ಸ್ವರಾಜ್ಯವನ್ನು ಅನುಭವಿಸುತ್ತಿತ್ತು.

ಕಾನೂರಿನಲ್ಲಿ ನಡೆಯುತ್ತಿದ್ದ ಕಷ್ಟಸಂಕಟಗಳಿಗೂ ಅನಾಹುತಗಳಿಗೂ ಜಗಳಗಳಿಗೂ ರೋಗರುಜೆಗಳಿಗೂ ಎಲ್ಲಕ್ಕೂ ಆ ಹೋತವೇ ಮುಖ್ಯಕಾರಣವೆಂಬ

ಭಾವವೂ ಸಾಮಾನ್ಯವಾಯಿತು. ಮನೆ ಪಾಲಾದುದು, ವಾಸು ಮೂರ್ಛೆ ಹೋದುದು, ಚಂದ್ರಯ್ಯಗೌಡರಿಗೆ ಧಾತು ಹಾರಿದುದು, ಅವರು ಸುಬ್ಬಮ್ಮಗೆ ಹೊಡೆಯುತ್ತಿದ್ದುದು, ಬಯ್ಯುತ್ತಿದ್ದುದು— ಎಲ್ಲಕ್ಕೂ, 'ಅನಿಷ್ಟಕ್ಕೆ ಶನಿ ಗುರಿ' ಎಂಬಂತೆ, ಹೋತವೆ ಗುರಿಯಾಯಿತು.

ಅನೇಕಸಾರಿ ಚಂದ್ರಯ್ಯಗೌಡರು, ಸೇರೆಗಾರರು, ಗಂಗೆ, ಹಳೆಪೈಕದ ತಿಮ್ಮ, ನಿಂಗ — ಇವರು "ಆ ಹೋತವನ್ನು ಭೂತಕ್ಕೆ ಮತ್ತೆ ಬಲಿಕೊಟ್ಟ ಹೊರತೂ ಊರಿಗೆ ಸುಖವಿಲ್ಲ" ಎಂದು ಸರಭಸವಾಗಿ ವಾದಿಸಿದ್ದರು. ನಾಗಮ್ಮನವರೂ ಕೂಡ ತಮ್ಮ ಮಗನೊಡನೆ ಹಾಗೆಯೇ ವಾದಿಸಿದ್ದರು. ಆದರೆ ಹೂವಯ್ಯ ಯಾವುದನ್ನೂ ಲಕ್ಷಿಸದೆ ಹೋತದೊಡನೆ ಸರಸ ಸಂಗಾತಿಯಾಗಿರುತ್ತಿದ್ದನು. ಮನೆ ಪಾಲಾಗಿ ಹೋತ ಹೂವಯ್ಯರಿಬ್ಬರೂ ಕೆಳಕಾನೂರಿಗೆ ಹೋದಮೇಲೆಯೂ ಕೂಡ ಹೋತದ ವಿಚಾರವಾಗಿದ್ದ ಮೊದಲಿನ ಭಾವನೆಗಳು ಬಾಡುವ ಬದಲಾಗಿ ಇನ್ನೂ ಚೆನ್ನಾಗಿ ಅರಳಿದುವು.

ಗಟ್ಟದಾಳುಗಳಲ್ಲಿಯೂ ಬೇಲರಲ್ಲಿಯೂ "ಭೂತ ಹೂವಯ್ಯಗೌಡರ ಕೈವಶವಾಗಿ ಹೋತದಲ್ಲಿ ವಾಸಿಸುತ್ತಿದೆ. ಅವರು ಹೇಳಿದ ಹಾಗೆ ಭೂತ ಕೇಳುತ್ತದೆ" ಎಂಬ ಅಭಿಪ್ರಾಯ ಪ್ರಬಲವಾಯಿತು. ಆದರಿಂದ ಹೂವಯ್ಯನಿಗೆ, ಅವನಿಗೆ ಗೊತ್ತಿಲ್ಲದಿದ್ದರೂ, ಒಂದು ಉಪಕಾರವಾಯಿತು.

ಚಂದ್ರಯ್ಯಗೌಡರು ಬೈರ ಸೇಸಿ ಇವರನ್ನುಳಿದು ಇತರ ಆಳುಗಳಿಗೆಲ್ಲ ಸೇರೆಗಾರರ ಮುಖಾಂತರವೂ ನಿಂಗನ ಮುಖಾಂತರವೂ ಗುಟ್ಟಾಗಿ ಹೂವಯ್ಯನಿಗೆ ಕೆಲಸಕಾರ್ಯಗಳಲ್ಲಿ ಯಾವ ರೀತಿಯಿಂದಲೂ ಸಹಾಯವಾಗಬಾರದೆಂದು ಹೇಳಿಸಿದ್ದರು. ಮೊದಮೊದಲು ಅವರೆಲ್ಲರೂ ಆ ಪಿತೂರಿಗೆ ಒಳಗಾಗಿ ಹೇಳಿದ ಹಾಗೆ ಮಾಡಿದುದರಿಂದ ಹೂವಯ್ಯನಿಗೆ ಕಾಮಗಾರಿ ಮಾಡಿಸುವುದೇ ಕಷ್ಟವಾಯಿತು. ಆದರೆ ಯಾವಾಗ ಹೂವಯ್ಯನ 'ಅತಿಮಾನುಷತೆ' ಮಂದಿಯಲ್ಲಿ ಹಬ್ಬಿತೋ ಆಗ ಪ್ರಾಣಭಯದಿಂದ ಪ್ರೇರಿತರಾಗಿ ಅವರೆಲ್ಲರೂ ಅವನು ಕೆಲಸಕ್ಕೆ ಕರೆದಾಗ ಗುಟ್ಟಾಗಿ ಹೋಗುತ್ತಿದ್ದರು.

ಹೂವಯ್ಯನ 'ಅತಿಮಾನುಷತೆ'ಯ ವಾರ್ತೆ ಜನಜನಿತವಾಗಿ ಹಬ್ಬಲು ಅನೇಕ ಕಾರಣಗಳಿದ್ದುವು. ಆಗಾಗ ಅವನಿಗಾಗುತ್ತಿದ್ದ ಭಾವಸಮಾಧಿ; ಅವನು ಇತರರಂತಲ್ಲದೆ ಏಕಾಂತದಲ್ಲಿ ಹೆಚ್ಚುಕಾಲ ಕಳೆಯುತ್ತಿದ್ದುದು; ಅರಣ್ಯಗಳಲ್ಲಿ ಕುಳಿತು ಧ್ಯಾನಿಸುತ್ತಿದ್ದುದು; ಇತರರಿಗೆ ತಿಳಿಯದ ಭಾಷೆಗಳಲ್ಲಿ ದೊಡ್ಡ ದೊಡ್ಡ ಗ್ರಂಥಗಳನ್ನು ಓದುತ್ತಿದ್ದುದು; ಸಾಮಾನ್ಯರ ಮೌಢ್ಯಗಳನ್ನೆಲ್ಲ ಖಂಡಿಸಿ, ಸಂಪ್ರದಾಯದಿಂದ ಬಂದ 'ದೆಯ್ಯ ದ್ಯಾವರು'ಗಳ ಆರಾಧನೆಯನ್ನು ಮಾಡ

ದೆಯೂ ಆರೋಗ್ಯವಾಗಿ ಇರುತ್ತಿದ್ದುದು; ಹೋತದ ವೃತ್ತಾಂತ — ಇವೆಲ್ಲವೂ ಸೇರಿ ಅವನ ಸುತ್ತಲೂ ಒಂದು ಅತಿಮಾನುಷತಾ ಪರಿವೇಷವನ್ನು ಕಲ್ಪಿಸಿದ್ದುವು. ಹೂವಯ್ಯನ ಕಿವಿಗೂ ಆ ಸಂಗತಿ ಬಿದ್ದಿತ್ತು. ಅದನ್ನು ಪರಿಹರಿಸಿ ತಿದ್ದಲೆಂದು ಅವನು ಮಾಡಿದ ಕೆಲವು ಪ್ರಯತ್ನಗಳು ಆ ಪ್ರತೀತಿಯನ್ನು ಮತ್ತಷ್ಟು ಪ್ರಜ್ವಲಿಸಲು ತೊಡಗಿದುದರಿಂದ ಸುಮ್ಮನಾಗಬೇಕಾಯಿತು.

ಈ ಎಲ್ಲ ವಿನೋದದ ವಿಚಾರಗಳನ್ನು ಕುರಿತು ಅವನು ಹೋತದೊಡನೆ ಮಾತಾಡುತ್ತಿದ್ದನು: 'ನಿನ್ನಲ್ಲಿ ಭೂತ ಇದೆಯೇನು?' 'ಎಲ್ಲಿದೆ?' 'ಕಣ್ಣಿನಲ್ಲಿದೆಯೋ ಗಡ್ಡದಲ್ಲಿದೆಯೋ ಹೇಳು!'

ಇತ್ಯಾದಿಯಾಗಿ ಅವನೇನೋ ಕುಚೇಷ್ಟೆಗಾಗಿ ಹೋತದೊಡನೆ ಮಾತಾಡುತ್ತಿದ್ದರೂ ಅಡಕೆ ಸುಲಿಯಲೆಂದು ಬಂದಿದ್ದ ಆಳುಗಳು ದೂರದಲ್ಲಿ ಬೆರಗಾಗಿ ನಿಂತು ಹೂವಯ್ಯಗೌಡರು ಭೂತದೊಡನೆ ಸಂಭಾಷಿಸುತ್ತಿರುವುದನ್ನು ಭೀತಿ ಭಕ್ತಿಯಿಂದ ದೃಷ್ಟಿಸುತ್ತಾ, ಒಬ್ಬರಕಡೆಗೊಬ್ಬರು ನೋಡಿ ಸನ್ನೆಯಿಂದಲೆ ಮಾತಾಡಿಕೊಳ್ಳುತ್ತಿದ್ದರು.

ಅಡುಗೆ ಮನೆಯ ಕಿಟಕಿಯಿಂದ ಅದೆಲ್ಲವನ್ನೂ ನೋಡಿದ ನಾಗಮ್ಮನವರು ಎದೆನೊಂದುಕೊಂಡು ಹೊರಗೆ ಬಂದು ಆಳುಗಳಿಗೆ "ಅಲ್ಲೇನು ನೋಡ್ತೀರೋ ನಿಮ್ಮ ಕೆಲಸ ಬಿಟ್ಟು? ನಡೀರಿ, ನಡೀರಿ! ಅಡಕೆ ಸುಲೀರಿ" ಎಂದು ಗದರಿಸಿ, ಮಗನನ್ನು ಕುರಿತು "ಜನಗಳಾಡೋದಕ್ಕೂ ನೀ ಮಾಡೋದಕ್ಕೂ ಸರಿಯಾಗ್ತದೆ! ಅದೆಲ್ಲೋ ಒಂದು 'ಅನಿಷ್ಟ' ಸಿಕ್ಕಿಬಿಟ್ಟಿದೆ ನಿನಗೆ!... ಥೂ, ಬಿಟ್ಟುಬರ್ತಿಯೋ ಇಲ್ಲೋ ಇತ್ತಲಾಗಿ!" ಎಂದು ಒಂದು ಸೌದೆ ಕೋಲನ್ನು ನೆಲದಿಂದ ಎತ್ತಿಕೊಂಡು ಹೋಗಿ ಹೋತನನ್ನು ಓಡಿಸಿದರು.

ಹೂವಯ್ಯ ತಾಯಿಯನ್ನು ನೋಡಿ ನಸುನಗುತ್ತ "ನಿಮಗೆಲ್ಲ ಈ ಭೂತದ ಭ್ರಾಂತಿ ಎಂದು ತೊಲಗುತ್ತದೆಯೋ ಆ ದೇವರೇ ಬಲ್ಲ!" ಎಂದನು.

ಬಲೀಂದ್ರ, (ಹೋತಕ್ಕೆ ಹೂವಯ್ಯನಿಟ್ಟಿದ್ದ ಹೆಸರು) ಹಿಂತಿರುಗಿ ನೋಡುತ್ತಾ ನೋಡುತ್ತಾ, ಮೋಟು ಬಾಲವನ್ನು ಕುಣಿಸಿ, ನೆಗೆದು ಚಿಮ್ಮುತ್ತಾ, ಹರ್ಷಕ್ಕೆ ಅರಚುತ್ತಾ, ಮೇಯಲು ಕಾಡಿನ ಕಡೆಗೆ ನಡೆಯಿತು.

ಬಲೀಂದ್ರ, ಕಣ್ಮರೆಯಾದ ಮೇಲೆ ಹೂವಯ್ಯ ತುಂಡುಗಡಿದಿದ್ದ ತನ್ನ ಆಲೋಚನೆಯನ್ನು ಮತ್ತೆ ನೆನಪಿಗೆ ತಂದುಕೊಂಡು, ತಾನು ಮುತ್ತಳ್ಳಿಗೆ ಹೋಗಿ ಆ ದಿನವೇ ಸಾಯಂಕಾಲದ ಒಳಗಾಗಿ ಬರುವುದಾಗಿ ತಾಯಿಗೆ ಹೇಳಿದನು.

ನಾಗಮ್ಮನವರು "ಬರ್ತಾ ಹಾಂಗೇ ಸೀತೆಮನೆಗೂ ಹೋಗಿ ನಿನ್ನ ಸಿಂಗಪ್ಪ ಕಕ್ಕಯ್ಯನ್ನೂ ಕಂಡು ಬಾ. ನಾನು ಏನೋ ಹೇಳಿದ್ದೆ ಅವರಿಗೆ. ಅದೇನಾಯ್ತು

ಅಂತಾ ಕೇಳಿಕೊಂಡು ಬಾ" ಎಂದು ಅರ್ಥಪೂರ್ಣವಾಗಿ ಮಗನ ಕಡೆ ನೋಡಿದರು.

"ಏನು ನನಗೆ ಹೇಳಬಾರದೇನು?"

"ನಿನಗ್ಯಾಕೆ ಅವೆಲ್ಲಾ? ನೀ ಸುಮ್ಮನೆ ಕೇಳಿಕೊಂಡು ಬಾ. ಆಮೇಲೆ ಹೇಳ್ತೀನಿ!" ಎಂದು ನಗುನಗುತ್ತಾ ನಾಗಮ್ಮನವರು ಇನ್ನು ಹೆಚ್ಚು ಹೊತ್ತು ನಿಂತರೆ ಪ್ರಶ್ನೆಗಳ ಬಲೆಯಲ್ಲಿ ಸಿಕ್ಕಿಕೊಳ್ಳಬೇಕಾಗುತ್ತದೆ ಎಂದು ಹೆದರಿ ನುಸುಳುವವರಂತೆ ಅಲ್ಲಿಂದ ಹೋದರು.

ಮುತ್ತಳ್ಳಿಗೆ ಹೋದ ಹೂವಯ್ಯ ಶ್ಯಾಮಯ್ಯಗೌಡರಿಗೂ ಚಿನ್ನಯ್ಯನಿಗೂ ಹಿಂದಿನ ದಿನದ ರಾತ್ರಿ ಕಾನೂರಿನಲ್ಲಿ ನಡೆದ ವಿಷಯಗಳನ್ನೆಲ್ಲ ತಾನು ಕೇಳಿ ನೋಡಿದ್ದಂತೆ ವಿವರವಾಗಿ ತಿಳಿಸಿ, ಒಡನೆಯೆ ಕಾನೂರಿಗೆ ಬಂದು ಚಂದ್ರಯ್ಯಗೌಡರಿಗೆ ಬುದ್ಧಿ ಹೇಳಿ ಎಲ್ಲವನ್ನೂ ಸರಿಪಡಿಸದಿದ್ದರೆ ಮುಂದೆ ಏನಾದರೂ ಅನಾಹುತವಾಗುತ್ತದೆ ಎಂಬುದನ್ನು ಸೂಚಿಸಿದನು.

"ನಾನಾಗಲೇ ಹೇಳಿದ್ದೆ ಅವರಿಗೆ, ನಿಮಗೆ ಈ ವಯಸ್ಸಿನಲ್ಲಿ ಮದುವೆ ಬೇಡ ಎಂದು. ನನ್ನ ಮಾತು ಕೇಳಲಿಲ್ಲ" ಎಂದು ಗೊಣಗುತ್ತ ಶ್ಯಾಮಯ್ಯಗೌಡರು ನಂಜನನ್ನು ಕರೆದು ಮಧ್ಯಾಹ್ನದ ಊಟವಾದೊಡನೆ ಕಾನೂರಿಗೆ ಗಾಡಿ ಕಟ್ಟಬೇಕೆಂದು ಬೆಸಸಿದರು.

ಊಟ ಮುಗಿಸಿ ಕೈತೊಳೆದುಕೊಂಡು ಜಗಲಿಗೆ ಬರುತ್ತಿದ್ದ ಹೂವಯ್ಯನನ್ನು ಕರೆದು ಗೌರಮ್ಮನವರೂ ಆ ಕಥೆಯನ್ನೆಲ್ಲ ಕೇಳಿ ನಿಡುಸುಯ್ದು, ಹತ್ತಿರ ನಿಂತಿದ್ದ ಸೀತೆಯ ಕಡೆಗೆ ಕನಿಕರದಿಂದಲೆಂಬಂತೆ ನೋಡಿದರು.

ಹೂವಯ್ಯನಿಗಾಗಲಿ ಸೀತೆಗಾಗಲಿ ಆ ನೋಟದಲ್ಲಿ ಅಡಗಿದ್ದ ರಹಸ್ಯವೂ ಖೇದವೂ ಒಂದು ತೆರನಾದ ಪಶ್ಚಾತ್ತಾಪದ ಭಾವವೂ ಎಳ್ಳನಿತೂ ಹೊಳೆಯಲಿಲ್ಲ. ಚಂದ್ರಯ್ಯಗೌಡರಿಗೂ ಶ್ಯಾಮಯ್ಯಗೌಡರಿಗೂ ಗೌರಮ್ಮನವರಿಗೂ ಪರಸ್ಪರವಾಗಿ ತಮ್ಮ ಮಕ್ಕಳ ಲಗ್ನದ ವಿಚಾರವಾಗಿ ಒಳಗೊಳಗೆ ನಡೆಯುತ್ತಿದ್ದ ಮಾತುಕತೆಗಳೂ ಮನಸ್ತಾಪಗಳೂ ಹೋರಾಟಗಳೂ ಸೀತೆ ಹೂವಯ್ಯರಿಗೆ ಗೊತ್ತಾಗುವುದು ತಾನೇ ಹೇಗೆ?

ಆದರೆ ಹೂವಯ್ಯನಿಗೆ ಅಂದು ಸಾಯಂಕಾಲದೊಳಗೆ ಗೊತ್ತಾಗುತ್ತದೆ!

ಶ್ಯಾಮಯ್ಯಗೌಡರೂ ಹೂವಯ್ಯನೂ ಗಾಡಿಯಲ್ಲಿ ಕುಳಿತು ಹೊರಟರು. ಗೌಡರು ನಾಗಮ್ಮನವರ ಯೋಗಕ್ಷೇಮ, ಹೂವಯ್ಯನ ಮನೆಗೆಲಸ, ಗದ್ದೆ ತೋಟಗಳ ಪೈರು, ಅಡಕೆ ಕೊಯಿಲು, ಇತ್ಯಾದಿಗಳ ವಿಚಾರವಾಗಿ ಮಾತಾಡಿದರು. ಹೂವಯ್ಯ ಹೌದು, ಅಲ್ಲ, ಆ್ಹ, ಉ್ಹು, ಎಂಬ ಸಂಕ್ಷೇಪವಾದ ಉತ್ತರ

ಗಳನ್ನು ಕೊಡುತ್ತಾ ಇನ್ನೇನನ್ನೊ ಆಲೋಚಿಸುತ್ತಿದ್ದನು. ಕೈಮೀರುವುದರೊಳಗೆ ಶ್ಯಾಮಯ್ಯಗೌಡರಿಗೆ ತಿಳಿಸಬೇಕೆಂದು ಅನೇಕ ತಿಂಗಳುಗಳಿಂದಲೂ ಅವನ ಮನಸ್ಸಿನಲ್ಲಿ ಹೊಂಚುಹಾಕುತ್ತಿದ್ದ ಒಂದು ಆಲೋಚನೆ ಇಂದು ಮತ್ತೆ ಕಣ್ದೆರೆದು ಮೈಮುರಿದು ಎಚ್ಚರವಾಗಿದ್ದಿತು.

ಎರಡು ಮೂರು ಸಾರಿ ಆ ಮಾತನ್ನು ಎತ್ತಬೇಕೆಂದು ಪ್ರಯತ್ನಿಸಿದಾಗಲೆಲ್ಲ ಅದು, ಬೆಟ್ಟದಿಂದ ಉರುಳಿ ಬಂದ ಹೊಳೆ ಮರುಭೂಮಿಯಲ್ಲಿ ಬತ್ತುವಂತೆ, ಎದೆಯಿಂದ ಬಂದುದು ಗಂಟಲಿನಲ್ಲಿಯೆ ಲಯಹೊಂದುತ್ತಿತ್ತು. ನಂಜನೊಬ್ಬ ನಿಲ್ಲದಿದ್ದರೆ ಹೇಳಿಬಿಡುತ್ತಿದ್ದೆ! ತನಗೆ ಮಗಳನ್ನು ಕೊಡಬೇಕೆಂದು ತಾನೇ ಕೇಳುವುದೇ ಮಹಾಕಷ್ಟದ ಕಾರ್ಯ! ಅದರಲ್ಲಿಯೂ ಅನ್ಯರಿರುವಾಗ ಅಸಾಧ್ಯ! ಆದರೂ ಆಗಲಿ ಇನ್ನೊಂದು ಫರ್ಲಾಂಗು ದಾಟಿದ ಮೇಲೆ ಕೇಳುತ್ತೇನೆ, ಎಂದು ಮನಸ್ಸು ಗಟ್ಟಿಮಾಡಿಕೊಂಡನು.

ಅದೇಕೆ ಫರ್ಲಾಂಗು ದಾಟಬೇಕು? ಎಂದು ಯಾರಾದರೂ ಕೇಳಿದ್ದರೆ ಖಂಡಿತವಾಗಿಯೂ ಸರಿಯಾದ ಕಾರಣ ಸಿಕ್ಕುತ್ತಿರಲಿಲ್ಲ.

ಫರ್ಲಾಂಗೂ ದಾಟಿತು. ಆದರೂ ಹೂವಯ್ಯ ಕೇಳಲಿಲ್ಲ. ಮುಂದಿನ ಮೈಲಿಕಲ್ಲು ಕಣ್ಣಿಗೆ ಕಾಣಿಸಿದ ಕೂಡಲೆ ಸ್ವಲ್ಪವೂ ಆಲೋಚಿಸದೆ ಹಿಂದು ಮುಂದು ನೋಡದೆ ತಡಮಾಡದೆ ಕೇಳಿಬಿಡುತ್ತೇನೆ ಎಂದು ದೃಢವಾಗಿ ನಿರ್ಧರಿಸಿ ಕುಳಿತನು. ಕ್ಷಣಕ್ಷಣಕ್ಕೂ ಗಾಡಿ ಮುಂದುವರಿದಂತೆಲ್ಲ ಅವನ ಎದೆ ದಡದಡನೆ ಹೊಡೆದುಕೊಳ್ಳಲಾರಂಭಿಸಿತು. ಇನ್ನೇನು ಮೈಲಿಕಲ್ಲು ಬಂದುಬಿಡುತ್ತದೆ! ಬಂದೇ ಬಿಡುತ್ತದೆ!

ಮೊದಲು ಏನೆಂದು ಪ್ರಾರಂಭಿಸಲಿ?

"ನಾನು ಬಹಳ ದಿನದಿಂದ ನಿಮ್ಮನ್ನೊಂದು ಪ್ರಶ್ನೆ ಕೇಳಬೇಕೆಂದಿದ್ದೇನೆ!...?"

ತ್ಛೂ! ಹಾಗೆ ಪ್ರಾರಂಭಿಸುವುದು ಚೆನ್ನಾಗಿಲ್ಲ.

"ಮಾವ, ಸೀತೆ ಈವಾಗ ಆರೋಗ್ಯವಾಗಿದ್ದಾಳಷ್ಟೆ?"

ಈಗತಾನೆ ನೋಡಿಕೊಂಡು ಬಂದಿದೇನೆ! ಹಾಗೆ ಪ್ರಶ್ನೆ ಕೇಳಿದರೆ 'ನನಗೆ ತಲೆ ನೆಟ್ಟಗಿಲ್ಲ' ಎಂದು ಜನರು ಹೇಳುತ್ತಿರುವುದನ್ನು ನಾನೇ ಹೇಳಿಕೊಂಡ ಹಾಗಾಗುತ್ತದೆ!

ಈಗ ನಡೆಯುತ್ತಿರುವ ಅನಾಹುತಕ್ಕೆಲ್ಲ ಆ ಹಾಳು ಅಗ್ರಹಾರದ ವೆಂಕಪ್ಪಯ್ಯ ಜೋಯಿಸನೇ ಮೂಲಕಾರಣ. ಅವನೇ ಅಲ್ಲವೆ ಜಾತಕ ನೋಡಿ ಚಿಕ್ಕಯ್ಯನಿಗೆ ಮದುವೆ ಮಾಡಿಸಿದ್ದು?"

ಉಹ್ಞು ಹ್ಞು, ಹಾಗೆ ಪ್ರಾರಂಭಿಸಬಾರದು. ವೆಂಕಪ್ಪಯ್ಯನಲ್ಲಿ ಇವರಿಗೆಲ್ಲಾ ಬಹಳ ಗೌರವ, ನಂಬಿಕೆ, ಭಕ್ತಿ!...

ಒಂದುಸಾರಿ ಗಾಡಿಯ ಚಕ್ರ ಒಂದು ಕಲ್ಲನ್ನು ಹತ್ತಿ ಹಾರಿ ಬಲವಾಗಿ ಕುಕ್ಕಿತು. ಹೂವಯ್ಯ ನಿದ್ರೆಯಿಂದ ಎಚ್ಚತ್ತವನಂತಾಗಿ ಮುಂದೆ ಏನನ್ನೂ ಆಲೋಚಿಸಲು ಸಾಧ್ಯವಿಲ್ಲದುದರಿಂದ ಮೈಲಿಕಲ್ಲು ಬರುವುದನ್ನೇ ನಿರೀಕ್ಷಿಸಿ ನೋಡತೊಡಗಿದನು. ಗಾಡಿ ಎಷ್ಟು ಮುಂದುವರಿದರೂ ಮೈಲಿಕಲ್ಲು ಬರಲಿಲ್ಲ. ಹೂವಯ್ಯನಿಗೆ ಆಶ್ಚರ್ಯವಾಯಿತು. ಇದೇನು ಪವಾಡವೊ? ಯಾವಾಗಲೂ ಇರುತ್ತಿದ್ದ ಮೈಲಿಕಲ್ಲು — ನಂಜ ಮೊದಲಾದ ಮಹನೀಯರು ಕಳ್ಳಂಗಡಿಯಲ್ಲಿ ಚೆನ್ನಾಗಿ 'ಸದ್ದು' ನೆತ್ತಿಗೇರಿ ದಾರಿಯಲ್ಲಿ ಹೋಗುವಾಗ ಅವರಿಂದ ಗುದ್ದಿಸಿಕೊಂಡು ಒದೆಯಿಸಿಕೊಂಡು ಸುಣ್ಣದ ಬಣ್ಣ ಮಾಸಿ ಕಾವಿಬಣ್ಣಕ್ಕೆ ತಿರುಗಿದ್ದ ಆ ಮೈಲಿ ಕಲ್ಲು—ಇವತ್ತೆಲ್ಲಿ ಹೋಯಿತು.? ಕುಡಿದವರು ಯಾರಾದರೂ ಕಿತ್ತುಹಾಕಿದ ರೇನೋ? ಹೂವಯ್ಯ ಬೆಚ್ಚಿಬಿದ್ದು ನೋಡುತ್ತಾನೆ; ತಾನು ಸೀತೆಮನೆಗೆ ಆಗಲಿ ಹೋಗಬೇಕಾಗಿದ್ದ ಕೂಡುರಸ್ತೆ ಎದುರಿಗಿದೆ! ಆಗ ಗೊತ್ತಾಯಿತು, ಆಲೋಚಿಸುತ್ತಿದ್ದಾಗ ಮೈಲಿಕಲ್ಲು ಹಾದುಹೋಗಿರಬೇಕು ಎಂದು.

"ಮಾವ, ನಾನು ಬರ್ತೀನಿ. ಸೀತೆಮನೆಗೆ ಹೋಗಬೇಕು!... ಏ ನಂಜಾ, ಗಾಡಿ ನಿಲ್ಲಿಸೊ!" ಎಂದು ಹೂವಯ್ಯ ಗಾಡಿ ನಿಲ್ಲುವ ಮೊದಲೆ ಹಿಂದುಗಡೆ ಯಿಂದ ರಸ್ತೆಗೆ ಹಾರಿ ನಿಂತನು.

"ಏನಾದರೂ ಕೆಲಸ ಇದೆಯೇನು?" ಎಂದರು ಗೌಡರು ಒರಗಿದ್ದ ದಿಂಬನ್ನು ಸರಿಯಾಗಿ ಆಪು ಕೊಟ್ಟುಕೊಳ್ಳುತ್ತ.

"ಅವ್ವ ಏನನ್ನೋ ಹೇಳಿತ್ತಂತೆ ಸಿಂಗಪ್ಪ ಕಕ್ಕಯ್ಯನ ಹತ್ತಿರ. ಅದೇನಾ ಯಿತು ಕೇಳಿಕೊಂಡು ಬಾ ಅಂತ ಹೇಳಿತ್ತು."

ಶ್ಯಾಮಯ್ಯಗೌಡರು "ಹಾಂಗಾದ್ರೆ ಹೋಗಿ ಬಾ'ಪ್ಪಾ" ಎಂದರು. ಗಾಡಿ ಹೊರಟಿತು. ಹೂವಯ್ಯ ಹೊರಟನು.

ಹೂವಯ್ಯ ಸಿಂಗಪ್ಪಗೌಡರಿಂದ ಕೇಳಿ ತಿಳಿಯಬೇಕಾಗಿದ್ದ ಉತ್ತರವನ್ನು ಶ್ಯಾಮಯ್ಯಗೌಡರೇ ಹೇಳಿಬಿಡಬಹುದಾಗಿತ್ತು. ನಾಗಮ್ಮನವರು ಸಿಂಗಪ್ಪ ಗೌಡರಿಂದ ತಿಳಿಯಬೇಕಾಗಿದ್ದುದು ಏನು ಎಂಬುದು ಶ್ಯಾಮಯ್ಯಗೌಡರಿಗೆ ಚೆನ್ನಾಗಿ ಗೊತ್ತಾಗಿತ್ತು. ಆದರೆ ಅದು ಹೂವಯ್ಯ ಸೀತೆಯರನ್ನು ಕುರಿತದ್ದಾದ್ದ ರಿಂದ ಅರಿಯದವರಂತೆ ನಟಿಸಿದ್ದರು.

ಹೂವಯ್ಯ ಸೀತೆಮನೆಗೆ ಬರಲು ಸಿಂಗಪ್ಪಗೌಡರು ಅತ್ಯಾನಂದದಿಂದ ಅವನನ್ನು ಎದುರುಗೊಂಡು 'ಬೇಡ ಬೇಡ' ಎಂದರೂ ಕೇಳದೆ ಕಾಫಿ ತಿಂಡಿ ಕೊಟ್ಟು ಉಪಚರಿಸಿದರು. ಸಿಂಗಪ್ಪಗೌಡರದು ಸ್ವಾಭಾವಿಕವಾಗಿ ಹರ್ಷ ಪ್ರಕೃತಿ; ವಿನೋದಶೀಲ. ಅವರಲ್ಲಿ ವೈರಿಗಳಿಗೆ ಪ್ರತೀಕಾರ ಮಾಡಲು ಎಷ್ಟು

ವಕ್ರತೆಯಿದ್ದಿತೋ ತಮಗೆ ಬೇಕಾದವರನ್ನು ಪ್ರೀತಿಸುವ ಸರಳತೆಯೂ ಅಷ್ಟರ ಮಟ್ಟಿಗೇ ಇದ್ದಿತು. ಅವರನ್ನು ನೋಡಿದವರು ಯಾರಾದರೂ ಕೆಲವು ತಿಂಗಳ ಹಿಂದೆ ಮದುವೆಗೆ ಬಂದಿದ್ದ ಅವರ ಮಗ ಹುಲಿಯ ಕೈಗೆ ಸಿಕ್ಕಿ ದುರ್ಮರಣ ಪಟ್ಟನೆಂದು ಹೇಳಲಿಕ್ಕೆ ಸಾಧ್ಯವಾಗುತ್ತಿರಲಿಲ್ಲ.

ಸ್ವಲ್ಪ ಮಾತುಕತೆಯಾದಮೇಲೆ ಹೂವಯ್ಯ ತಾಯಿ ಹೇಳಿದುದನ್ನು ತಿಳಿಸಿ, ಉತ್ತರವನ್ನೇ ಹಾರೈಸಿ, ಸಿಂಗಪ್ಪಗೌಡರ ಮುಖದ ಕಡೆ ನೋಡಿದನು. ಅವರ ಮುಖದಲ್ಲಿ ಕ್ರೋಧ, ಖಿನ್ನತೆ, ಹತಾಶೆ — ಇವು ಮೂರೂ ಒಂದಕ್ಕಿಂತ ಒಂದು ನಾನು ಮೇಲು ತಾನು ಮೇಲು ಎಂಬ ಅಹಮಹಮಿಕೆಯಿಂದ ಮೆರೆಯುತ್ತಿದ್ದಂತೆ ತೋರಿ ಹೂವಯ್ಯನಿಗೆ ಬೆಕ್ಕಸವಾಯಿತು.

ಸಿಂಗಪ್ಪಗೌಡರು ಗುಟ್ಟನ್ನೆಲ್ಲ ಬಾಯಿಬಿಟ್ಟು ಹೇಳತೊಡಗಿದರು:

ಕೆಲವು ದಿನಗಳ ಹಿಂದೆ ನಾಗಮ್ಮನವರು ಸಿಂಗಪ್ಪಗೌಡರೊಡನೆ ಸೀತೆಯನ್ನು ತಮ್ಮ ಮಗನಿಗೆ ತಂದುಕೊಳ್ಳುವ ಪ್ರಸ್ತಾಪವನ್ನೆತ್ತಿ, ಶ್ಯಾಮಯ್ಯಗೌಡರನ್ನು ವಿಚಾರಿಸುವಂತೆ ಕೇಳಿದ್ದರು. ಸಿಂಗಪ್ಪಗೌಡರ ಮನಸ್ಸೂ ಹಾಗೆಯೇ ಇದ್ದು ದರಿಂದ ಸಂಬಂಧವನ್ನು ಸಾಂಗಗೊಳಿಸಬೇಕೆಂದು ಉತ್ಸಾಹಿಗಳಾಗಿ ಮುತ್ತಳ್ಳಿಗೆ ಹೋಗಿ ವಿಚಾರಿಸಿದರು.

ಶ್ಯಾಮಯ್ಯಗೌಡರು "ಹೌದು, ನಿಮ್ಮ ಇಷ್ಟದಂತೆ ಮಾಡಬಹುದಾಗಿತ್ತು. ಆದರೆ ನಾನು ಮೊದಲೇ ಚಂದ್ರಯ್ಯ ಬಾವಗೆ ಮಾತುಕೊಟ್ಟು ಒಪ್ಪಿಕೊಂಡಾಗಿದೆ. ಅದೂ ಅಲ್ಲದೆ ,ಹೆಣ್ಣು ಕೊಟ್ಟು ಹೆಣ್ಣು ತರುವದರಿಂದ ನಮಗೂ ಕೆಲಸ ಸಲೀಸಾಗಿ ನಡೆದ ಹಾಂಗಾಗ್ತದೆ. ಏನು ಮಾಡಾದು ನೀವೇ ಹೇಳಿ! ನಮಗೆಲ್ಲಾದರೆ ಏನು? ಹೆಣ್ಣಿಗೊಂದು ಗಂಡು, ಗಂಡಿಗೊಂದು ಹೆಣ್ಣು ಆದರೆ ಸೈ!" ಎಂದರು.

ಚಂದ್ರಯ್ಯಗೌಡರಿಗೂ ಸಿಂಗಪ್ಪಗೌಡರಿಗೂ ಮೊದಲೇ ಎಣ್ಣೆ ಸೀಗೆಯಾಗಿದ್ದು ದರಿಂದ ಸಿಂಗಪ್ಪಗೌಡರು ಚಂದ್ರಯ್ಯಗೌಡರಿಗೆ ಸೀತೆ ದಕ್ಕದಂತೆ ಮಾಡಿಬಿಡ ಬೇಕೆಂದು ಗಟ್ಟಿಮನಸ್ಸು ಮಾಡಿದರು. ಅದೂ ಅಲ್ಲದೆ, ಹಿಂದೆ ತಮ್ಮ ಕುಮಾರನಿಗೆ ಗೊತ್ತಾಗಿದ್ದ ವಧುವಿನ ಮೇಲೆ ಚಂದ್ರಯ್ಯಗೌಡರ ಹಕ್ಕಿಗಿಂತಲೂ ತಮ್ಮ ಹಕ್ಕೇ ಹೆಚ್ಚು ಎಂಬುದೂ ಅವರಲ್ಲಿ ಬಲವಾಗಿತ್ತು. ಯಾರ ವಿವಾಹ ಕ್ಕಾಗಿ ಚಂದ್ರಯ್ಯಗೌಡರು ಸೀತೆಯನ್ನು ಕೇಳಿದ್ದರೋ ಆ ರಾಮಯ್ಯನ ಮೇಲೆ ಸಿಂಗಪ್ಪಗೌಡರಿಗೆ ದ್ವೇಷ ಲವಲೇಶವೂ ಇರದಿದ್ದರೂ — (ಅದಕ್ಕೆ ಬದಲಾಗಿ ವಿಶ್ವಾಸವಿತ್ತು) ರಾಮಯ್ಯನ ತಂದೆಯನ್ನು ವಿರೋಧಿಸುವ ಸಲುವಾಗಿ ನಖಶಿಖಾಂತ ನಿಂತರು.

"ಮಾತಾಡಿದ್ದರೇನಾಯಿತು? ಮಾತುಕೊಟ್ಟ ಹಾಗಾಯಿತೇನು; ನೀವೇನು ಕರಾರು ಬರೆದು ಕೊಟ್ಟಿದ್ದೀರೇನು? ಜಾತಕ ನೋಡಿಸಬೇಕು; ದೇವರು ಕೇಳಿಸಬೇಕು. . . ಅಲ್ಲದೆ ಸುಮ್ಮನೆ ಹೆಣ್ಣಿಗೊಂದು ಗಂಡು ಎಂದು ಹೇಳಿ ಬಿಟ್ಟರಾಗಿಹೋಯಿತೇನು? ಸರಿಯಾದ ಗಂಡನ್ನೇ ಹುಡುಕಿ ಹೆಣ್ಣು ಕೊಡ ಬೇಕಾದುದೂ ತಂದೆ ತಾಯಿಗಳ ಕರ್ತವ್ಯ . . . ರಾಮಯ್ಯನಿಗೂ ಹೂವಯ್ಯ ನಿಗೂ ಎಲ್ಲಿಯ ಹೋಲಿಕೆ? ಹೂವಯ್ಯ ಎಷ್ಟಾದರೂ ಹೆಚ್ಚು ವಿದ್ಯಾವಂತ; ನೋಡುವುದಕ್ಕೂ ಲಕ್ಷಣವಾಗಿದ್ದಾನೆ. ಸೀತೆಗಾಗಿಯೇ ಕಟ್ಟಿಟ್ಟ ಗಂಡು" ಎಂದು ಮೊದಲಾಗಿ ಉಪದೇಶ ಮಾಡಿ, ಚಂದ್ರಯ್ಯಗೌಡರ ಸಂಸಾರದ ಒಡಕು ಬಿರುಕು ಹುಳುಕುಗಳನ್ನೆಲ್ಲ ವರ್ಣಿಸಿದರು.

ಶ್ಯಾಮಯ್ಯಗೌಡರು ಎಲ್ಲವನ್ನೂ ಆಲಿಸಿ "ನೀವೇನೊ ಹೇಳುತ್ತೀರಿ. ಆದರೆ ಹೂವಯ್ಯ ಏನೋ ಒಂದು ತರಹ ಸಂನ್ಯಾಸಿಯಾಗಿಬಿಟ್ಟಿದ್ದಾನೆ! ಬೈರಾಗಿಗೆ ಮಗಳು ಕೊಟ್ಟಂತಾದ್ರೆ? ಅಲ್ಲದೆ ಅವನಿಗೆ ಆಗಾಗ ಮೂರ್ಛೆರೋಗ ಬೇರೆ ಬರ್ತದಂತೆ! . . . ಇರಲಿ. ಯಾವುದಕ್ಕೂ ವೆಂಕಪ್ಪಯ್ಯ ಜೋಯಿಸರನ್ನು ವಿಚಾರಿಸಿ, ಜಾತಕಗೀತಕ ನೋಡಿಸಿ, ಆಮೇಲೆ ಹೇಳ್ತೀನಿ" ಎಂದರು.

ಸಿಂಗಪ್ಪಗೌಡರು ಸೀತೆಯ ತಾಯಿ ಗೌರಮ್ಮನವರೊಡನೆಯೂ ಮಗಳನ್ನು ಚಂದ್ರಯ್ಯಗೌಡರ ಮಗನಿಗೆ ಕೊಡಲು ಬಿಡಬಾರದೆಂದು ಒಳಸಂಚು ನಡೆಸಿ ಬೋಧಿಸಿದರು. ಗೌರಮ್ಮನವರಿಗೂ ಶ್ಯಾಮಯ್ಯಗೌಡರಿಗೂ ಮಗಳ ಮದುವೆಯ ವಿಚಾರವಾಗಿ ಬಿಸಿಬಿಸಿ ಮಾತು ನಡೆದು ಗಂಡನ ಹಟವೇ ಗೆಲ್ಲು ವಂತಾಯಿತು.

ಅಗ್ರಹಾರದ ವೆಂಕಪ್ಪಯ್ಯ ಜೋಯಿಸರ ಬಳಿಗೂ ಹೋಗಿ ಅವರಿಗೆ ಸ್ವಲ್ಪ ದಾನದಕ್ಷಿಣೆಗಳನ್ನು ನಿವೇದಿಸಿ, ಸೀತೆ ಮತ್ತು ರಾಮಯ್ಯರಿಗೆ 'ಜಾತಕ ಬರುವುದಿಲ್ಲ' ಎಂದು ಹೇಳಬೇಕೆಂದೂ ಸೂಚಿಸಿದ ಸಿಂಗಪ್ಪಗೌಡರು ಹೂವಯ್ಯನ ಜಾತಕವನ್ನು ಶ್ಯಾಮಯ್ಯಗೌಡರ ಮುಖಾಂತರ ಜೋಯಿಸರ ಬಳಿಗೆ ಕಳುಹಿಸಿದರು. ಜಾತಕದ ನೆಪದಿಂದಲಾದರೂ ತಮ್ಮ ಹಟವನ್ನು ಸಾಧಿಸಿಕೊಳ್ಳುತ್ತೇನೆ ಎಂದು ಅವರು ಆಲೋಚಿಸಿ ನೆಮ್ಮದಿಯಾದರು.

ಆದರೆ ವೆಂಕಪ್ಪಯ್ಯ ಜೋಯಿಸರ ಅಂತರಂಗದಲ್ಲಿ ಹೂವಯ್ಯನ ಮೇಲೆ ಮಹಾ ರೌರವರೋಷವಿತ್ತು. ಅವನು ತಮ್ಮ ಪೌರೋಹಿತ್ಯವನ್ನು ನಿಂದಿಸಿ ಜನರಲ್ಲಿ ತಮ್ಮ ಲಾಭಕ್ಕೆ ವಿರೋಧವಾಗಿ ಚಳವಳಿ ಮಾಡುತ್ತಿದ್ದುದರಿಂದ ಅವನನ್ನು ಕಂಡರೆ ಮುಂಗುಸಿಯನ್ನು ಕಂಡ ಸರ್ಪದಂತೆ ಬುಸುಗುಡುತ್ತಿದ್ದರು. ಆದ್ದರಿಂದ ಅವರು ಸಿಂಗಪ್ಪಗೌಡರ ದಾನದಕ್ಷಿಣೆಗಳನ್ನು ಸಂತೋಷದಿಂದ

ಸ್ವೀಕರಿಸಿದರೂ ಅವರ ಇಷ್ಟವನ್ನು ನೆರವೇರಿಸಲು ಮನಸ್ಸುಮಾಡಲಿಲ್ಲ. ಅದಕ್ಕೆ ಬದಲಾಗಿ ಚಂದ್ರಯ್ಯಗೌಡರ ಬಳಿಗೆ ಗುಟ್ಟಾಗಿ ಹೋಗಿ ನಡೆದ ಸಂಗತಿಯನ್ನೆಲ್ಲ ತಿಳಿಸಿದರು. ಗೌಡರು ಜ್ವಾಲಾಮುಖಿ ಅಗ್ನಿಜಲವನ್ನು ಕಾರುವಂತೆ ಸಿಂಗಪ್ಪ ಗೌಡರ ಮೇಲೆ ಕ್ರೋಧ ನಿಂದೆಗಳನ್ನು ಕಾರಿ ಜೋಯಿಸರಿಗೆ ಸಿಂಗಪ್ಪಗೌಡರು ಕೊಟ್ಟುದಕ್ಕೆ ಇಮ್ಮಡಿಯಾಗಿ ದಾನದಕ್ಷಿಣೆಗಳನ್ನು ಕೊಟ್ಟು, ಅವರ ಮನಸ್ಸನ್ನು ಸಂಪೂರ್ಣವಾಗಿ ತಮ್ಮ ಕಡೆಗೆ ಒಲಿಸಿಕೊಂಡು ಬೀಳ್ಕೊಟ್ಟರು.

ಸಾಲದುದಕ್ಕೆ ಬೇರೆ ಆ ಒಳಸಂಚಿನ ಸಂಗತಿಯನ್ನು — ನಾಗಮ್ಮನವರು, ಹೂವಯ್ಯ, ಸಿಂಗಪ್ಪಗೌಡರು ಇವರೆಲ್ಲರೂ ಸೇರಿ, ಸೀತೆಯನ್ನು ರಾಮಯ್ಯನಿಗೆ ಮದುವೆ ಮಾಡಿಕೊಡಲು ಶ್ಯಾಮಯ್ಯಗೌಡರು ಒಪ್ಪಿದ್ದರೂ ಕೂಡ ಅದನ್ನು ಹೇಗಾದರೂ ತಪ್ಪಿಸಿ ಹೂವಯ್ಯನ ಪರವಾಗಿ ಪಿತೂರಿ ನಡೆಸುತ್ತಿದ್ದಾರೆ ಎಂದು — ತಮ್ಮ ಮಗನಿಗೂ ತಿಳಿಸಿ "ನೀನೆಲ್ಲಿಯೋ ಶುದ್ಧ ಮಂಕು! ಹೂವಯ್ಯ, ಹೂವಯ್ಯ ಎಂದು ಕಟ್ಟಿಕೊಂಡು ಕುಣಿಯುತ್ತೀಯಲ್ಲ! ಈಗ ನೋಡಿದೆ ಯೇನು ಅವರೆಲ್ಲ ಸೇರಿ ನಿನಗೆ ಮಾಡುತ್ತಿರುವ ಉಪಕಾರ!" ಎಂದು ಕಿವಿಗೆ ವಿಷ ಹೊಯ್ದರು. ಅದನ್ನು ಅಮೃತವೆಂದು ಪಾನಮಾಡಿದ ರಾಮಯ್ಯನು ಹೂವಯ್ಯನಲ್ಲಿಗೆ ಹೋಗಿಬರುವುದನ್ನು ನಿಲ್ಲಿಸಿದ್ದನು. ಅವನನ್ನು ಕಂಡರೆ ಮೊದಲಿನಂತೆ ಆದರಿಸದೆ ಉದಾಸೀನಭಾವದಿಂದ ಎಷ್ಟೋ ಅಷ್ಟು ಎಂಬಂತೆ ಲೆಕ್ಕಾಚಾರವಾಗಿ ಮಾತಾಡುತ್ತಿದ್ದನು.

ಅಂತೂ ಸಿಂಗಪ್ಪಗೌಡರು ಎಷ್ಟು ಪ್ರಯತ್ನಮಾಡಿದರೂ ಸಫಲವಾಗಲಿಲ್ಲ. ಜೋಯಿಸರು ಹೂವಯ್ಯ ಸೀತೆಯರಿಗೆ ಜಾತಕ ಎಷ್ಟುಮಾತ್ರವೂ ಬರುವುದಿಲ್ಲ ವೆಂದೂ ಕಂಟಕಗಳಿಂದ ತುಂಬಿದೆಯೆಂದೂ, ರಾಮಯ್ಯ ಸೀತೆಯರಿಗೆ ಉತ್ತಮ ವಾಗಿ ಜಾತಕ ಬರುತ್ತದೆ ಎಂದೂ ಶ್ಯಾಮಯ್ಯಗೌಡರಿಗೆ ತಿಳಿಸಿದರು. ಅದನ್ನು ಕೇಳಿ ಮಗಳ ಯೋಗಕ್ಷೇಮವೇ ವಿವಾಹದ ಹೆಗ್ಗುರಿಯೆಂದು ಗೌರಮ್ಮನವರೂ ಗಂಡನ ಮಾತಿಗೆ ಎದುರು ಹೇಳಲಿಲ್ಲ.

ವಿಷಾದ ಪ್ರಕರಣವನ್ನು ಉದ್ವಿಗ್ನನಾಗಿ ಆಲಿಸಿದ ಹೂವಯ್ಯ ನಿರ್ವಿಣ್ಣಭಾವ ಭಾರನಾಗಿ ಕುಸಿದು ಕುಗ್ಗಿ, ಕವಿಯುತ್ತಿದ್ದ ಬೈಗುಗಪ್ಪಿನಲ್ಲಿ ಕೆಳಕಾನೂರಿಗೆ ನಡೆದನು.

೫೦

## ಪ್ರೇಮಪತ್ರಕ್ಕೆ ಅಗ್ನಿಜ್ವಾಲೆ

ಹೂವಯ್ಯನಿಂದ ಸಿಂಗಪ್ಪಗೌಡರು ಹೇಳಿದ್ದ ಕಥೆಯನ್ನೆಲ್ಲ ಕೇಳಿ ತಿಳಿದು ನಾಗಮ್ಮನವರು ಆಶಾಭಂಗದಿಂದುಂಟಾದ ದುಃಖದಿಂದ ಸಿಟ್ಟುಗೊಂಡರು. ಪ್ರತೀಕಾರ ಸಾಮರ್ಥ್ಯವಿಲ್ಲದ ಆ ಕ್ರೋಧ ತಿರಸ್ಕಾರದ ವೇಷವನ್ನು ತಾಳಿತು:

"ಹೋಗಲಿ ಬಿಡು. ಅವರ ಹೆಣ್ಣು ನಮಗ್ಯಾಕೆ? ಅವರೇ ಉಬ್ಬೆಗೆ ಹಾಕಿ ಹಣ್ಣುಮಾಡಿಕೊಳ್ಳಲಿ!... ನಿನಗೇನು ಹೆಣ್ಣಿಗೆ ಬರಗಾಲವಲ್ಲ! ಹ್ಞು ಅಂದರೆ ಕಾಲಿಗೆ ಬಿದ್ದು ಹೆಣ್ಣು ಕೊಡೋರು ಹಮಾ ಜನ ಇದ್ದಾರೆ... ನನ್ನ ಹತ್ತಿರ ಆಗಲೆ ಆ ಪಸ್ತಾ್ರಪನೂ ಎತ್ತಿದ್ದಾರೆ... ಆ ಅತ್ತಿಗದ್ದೆ ಹಿರಿಯಣ್ಣ ಗೌಡರ ಮಗಳು ರಂಗಮ್ಮ ಇದ್ದಾಳಲ್ಲಾ — ಏನಾಗಿದಾಳೆ? ಸ್ವಲ್ಪ ಬಾಯಿ ಉಗ್ಗಾದರೆ ಏನಂತೆ? ದುಂಡುಮುಖ, ಬಿಳಿ ಮೈ, ಕಣ್ಣು ಮೂಗು ಬಾಯಿ ಕಿವಿ ಎಲ್ಲಾ ನೆಟ್ಟಗಿಲ್ಲೇನು?... ಮತ್ತೆ ಆ ನುಗ್ಗಿಮನೆ ತಮ್ಮಣ್ಣಗೌಡರ ಮಗಳು ದಾನಮ್ಮ ಇದ್ದಾಳಲ್ಲಾ, ಏನಾಗಿದಾಳೆ?... ಸ್ವಲ್ಪ ಕಪ್ಪಿರಬೈದು. ಇದ್ರೇನಂತೆ? ಗಟ್ಟಿಮುಟ್ಟಾಗಿ ಕೆಲಸ ಮಾಡ್ತಾಳೆ... ಅಥವಾ ಆ ಸಂಪಗೆಹಳ್ಳಿ ಪುಟ್ಟಯ್ಯ ಗೌಡರ ಮಗಳು ದುಗ್ಗಮ್ಮ, ಅವಳೇನಾಗಿದ್ದಾಳೆ?... ಏನೋ ಕಣ್ಣು ಸ್ವಲ್ಪ ವಾರೆ ಅಂತಾರೆ! ಆದ್ರೇನಂತೆ! ಕಿವಿ ಸ್ವಲ್ಪ ಮಂದವಂತೆ. ಹಾಂಗೆ ನೋಡಿದರೆ ಸೀತೆ ಕಿವೀನೂ ಮಂದವೇ!... ಸ್ವಲ್ಪ ಹಲ್ಲು ಉಬ್ಬು ಅವಳಿಗೆ. ಆದರೂ ಅಂದ ಏನೂ ಕೆಟ್ಟಿಲ್ಲ... ಆಯ್ಯೋ ಬಿಡೋ! ಇವರು ಹೆಣ್ಣು ಕೊಡ್ತಾರೆ ಅಂತಾ ನಾನೇನು ಗಂಡು ಹೆರಲಿಲ್ಲ! ಇವರ ಹೆಣ್ಣಿನ ಬಣ್ಣ ಚಿನ್ನ ಅಂತಾ ತಿಳುಕೊಂಡಿದ್ದಾರೇನೋ! ಆದರ ಅಜ್ಜನಂತಾ ಬಣ್ಣದ ಹೆಣ್ಣುಗಳು ಎಷ್ಟೋ ಬಿದ್ದವೆ!..."

ನಾಗಮ್ಮನವರು ಹೂವಯ್ಯ ಆಲಿಸುತ್ತಿದ್ದಾನೆಯೊ ಇಲ್ಲವೊ ಎಂಬುದನ್ನೂ ಗಮನಿಸದೆ ತಮ್ಮ ಮನೋಭಾವಗಳನ್ನು ತಮಗೆ ತಾವೆ ಗಟ್ಟಿಯಾಗಿ ಹೇಳಿ ಕೊಳ್ಳುತ್ತಿದ್ದಾರೆ ಎಂಬಂತೆ ಮಾತಾಡಿದರು. ಹೂವಯ್ಯನ ಮನಸ್ಸಿನಲ್ಲಿ ನೋವು ತುಂಬಿರದಿದ್ದರೆ ತಾಯಿಯ ಸ್ವಗತ ಭಾಷಣ ಮೃದುಹಾಸ್ಯ ಪೂರ್ಣವಾಗಿ ತೋರುತ್ತಿತ್ತು. ಆದರೆ ಆಗ ಆತನಿಗೆ ಆ ಒಂದೊಂದು ಮಾತೂ ಶೂಲ ಪ್ರಾಯವಾಗಿ ಖೇದವನ್ನುಂಟುಮಾಡುತ್ತಿತ್ತು. ನಾಗಮ್ಮನವರಿಗೆ ಬೇಕಾಗಿ ದ್ದುದು ತಮ್ಮ ಮಗನಿಗೆ 'ಒಂದು ಹೆಣ್ಣು.' ಆ ಹೆಣ್ಣಲ್ಲದಿದ್ದರೆ ಈ ಹೆಣ್ಣು!

ಈ ಹೆಣ್ಣು ಸಿಕ್ಕದಿದ್ದರೆ ಊ ಹೆಣ್ಣು! ಊ ಹೆಣ್ಣು ತಪ್ಪಿದರೆ ಓ ಹೆಣ್ಣು! ಅಂತೂ ಅವರಿಗೆ ಬೇಕಾದುದು ಒಂದು ಹೆಣ್ಣು ಮಾತ್ರ! ಆದರೆ ಹೂವಯ್ಯನಿಗೆ ಬೇಕಾಗಿದ್ದುದು ಹೆಣ್ಣು ಮಾತ್ರವಲ್ಲ; ಪ್ರೇಮದ ಹೆಣ್ಣು! ಅವನಿಗೆ ಆ ಪ್ರೇಮದ ಹೆಣ್ಣು ಸೀತೆಯೊಬ್ಬಳಾಗಿದ್ದಳೇ ವಿನಾ — ಅತ್ತಿಗದ್ದೆ ಹಿರಿಯಣ್ಣಗೌಡರ ಮಗಳು ರಂಗಮ್ಮನಾಗಲಿ, ನುಗ್ಗಿಮನೆ ತಮ್ಮಣ್ಣಗೌಡರ ಮಗಳು ದಾನಮ್ಮನಾಗಲಿ, ಸಂಪಿಗೆಹಳ್ಳಿ ಪುಟ್ಟಯ್ಯಗೌಡರ ಮಗಳು ದುಗ್ಗಮ್ಮನಾಗಲಿ — ಬೇರೆ ಯಾರೂ ಆ ಸ್ಥಾನದಲ್ಲಿ ನಿಲ್ಲುವಂತಿರಲಿಲ್ಲ.

ಆ ತಾಯಿಯ ಮನಸ್ಸನ್ನು ಬೇರೆಯ ಕಡೆಗೆ ತಿರುಗಿಸುವ ಸಲುವಾಗಿಯೂ ಯಾತನೆಯ ಭಾವದಿಂದ ಬಿಡುಗಡೆ ಹೊಂದಲೋಸುಗವೂ ಹೂವಯ್ಯ "ಅವ್ವಾ ಪುಟ್ಟಣ್ಣ ಎಲ್ಲಿ? ಇನೂ ಬಂದೇ ಇಲ್ಲೇನು?" ಎಂದು ಕೇಳಿದನು.

"ಬರಾಕೇನು? ಆಗಲೆ ಬಂದಾನೆ! ಹೊಂಗ್ತಾ ಹೊಡರ್‍ತಾ ಹಾದಿ ಮೋಜಿಣಿ ಮಾಡ್ತಾ ಬಂದ! ಬಹಳ ದಿವಸ ಆಗಿತ್ತು ಕುಡೀದೆ... ಸಿಕ್ಕಿತು ಅಂತಾ ಚೆನ್ನಾಗಿ ಕುಡಿದಾ ಅಂತಾ ಕಾಣ್ತದೆ! ಅಲ್ಲೆಲ್ಲೋ ಆ ಮೂಲೇಲಿ ಕಂಬಳಿ ಸುತ್ತಿಗೊಂಡು ಬಿದ್ದಿದ್ದನಪ್ಪಾ..."

"ನನ್ನ ಹತ್ತಿರ ಆಣೆ ಹಾಕಿಕೊಂಡಿದ್ದಾ ಕುಡಿಯೋದಿಲ್ಲಾ ಎಂದು?..."

"ದೇವರಾಣೆ ಹಾಕಿ ಮಾನಪತ್ರಕ್ಕೆ ರುಜು ಹಾಕಿದ್ದೋರೆಲ್ಲಾ ದೊಡ್ಡ ಮನುಷ್ಯರೇ ಕುಡೀತಾರಂತೆ! ಅವನೇನು ಮಾಡ್ತಾನೆ ಪಾಪ! ಸಿಕ್ಕಿತು! ಕುಡಿದಾ! ಮತ್ತೆ ಸಿಕ್ಕೋತನಕ ಕುಡಿಯೋದಿಲ್ಲಾ!..."

ಹೂವಯ್ಯನಿಗೆ ದುಃಖವಾಯಿತು. ಪುಟ್ಟಣ್ಣನ ಮೇಲೆ ಕೋಪಕ್ಕೆ ಬದಲಾಗಿ ಕನಿಕರ ಹುಟ್ಟಿತು, ಮನುಷ್ಯನ ಸಂಯಮ ಎಷ್ಟು ದುರ್ಬಲವಾದುದು ಎಂದು! ಸನ್ನಿವೇಶದಿಂದ ದುರಾತ್ಮನು ಮಹಾತ್ಮನಾಗಬಹುದು, ಮಹಾತ್ಮನು ದುರಾತ್ಮನಾಗಬಹುದು. ದುರ್ವ್ಯಸನಗಳಿಂದ ಉದ್ಧಾರವಾಗಲು ಪುಟ್ಟಣ್ಣನೇನೋ ಹೃತ್ಪೂರ್ವಕವಾಗಿ ಪ್ರಯತ್ನಿಸುತ್ತಿದ್ದನು. ಆದರೆ ಹೂವಯ್ಯನ ಸಾಮಿಪ್ಯ ತಪ್ಪಿ ಸನ್ನಿವೇಶ ಪ್ರಲೋಭನದ ಜಾಲವನ್ನು ತಂದೊಡ್ಡುವುದೇ ತಡ ಬಿದ್ದು ಬಿಡುತ್ತಿದ್ದನು! ಆ ದಿನವೂ ಬೆಳಗ್ಗೆ ಸುಬ್ಬಮ್ಮನನ್ನು ಕರೆದುಕೊಂಡು ನೆಲ್ಲುಹಳ್ಳಿಗೆ ಹೋಗಿದ್ದವನು ಬೈಗುಹೊತ್ತಿಗೆ ಸರಿಯಾಗಿ ಚೆನ್ನಾಗಿ ಕುಡಿದು ಹಣ್ಣುಹಣ್ಣಾಗಿ ತತ್ತರಿಸುತ್ತಾ ಬಂದು ಜಗಲಿಯ ಒಂದು ಮೂಲೆಯಲ್ಲಿ ಉರುಳಿದ್ದನು.

ಹೂವಯ್ಯ ಕೈಯಲ್ಲಿ ದೀಪವೊಂದನ್ನು ಹಿಡಿದುಕೊಂಡು ಕತ್ತಲೆಯಲ್ಲಿ ಹುಡುಕುತ್ತಾ ಹೋಗಿ, ಕಸದ ಮೂಲೆಯಲ್ಲಿ ಕಂಬಳಿ ಸುತ್ತಿಕೊಂಡು ಅಸ್ತವ್ಯಸ್ತವಾಗಿ ಒರಗಿದ್ದ ಪುಟ್ಟಣ್ಣನನ್ನು ಕಂಡು, ಬಳಿ ನಿಂತು ಸುಯ್ದು ನೋಡತೊಡಗಿದನು.

ಪುಟ್ಟಣ್ಣನ ತಲೆ ಕೆದರಿ ವಿಕಾರವಾಗಿತ್ತು. ಎಣ್ಣೆಗಪ್ಪಿನ ಮೊರಡಾದ ಅವನ ಮುಖದಲ್ಲಿ ಬಳಲಿಕೆಯ ಚಿಹ್ನೆ ಎದ್ದು ಮೂಡಿತ್ತು. ಸುರಿದ ಬೆವರಿನ ವಾಸನೆಯೊಂದಿಗೆ ಅವನ ಸುಯ್ಲಿನ ಹೆಂಡದ ನಾತವೂ ಸೇರಿ ಸುತ್ತಲೂ ಅಸಹನೀಯವಾಗಿ ಹಬ್ಬಿತ್ತು. ಕಟಬಾಯಿಯಿಂದ ನೊರೆಗೂಡಿದ ಜೊಲ್ಲು ಅಸಹ್ಯವಾಗಿ ಸುರಿದಿತ್ತು. ಮೂಗಿನಿಂದ ಇಳಿದುಬಂದಿದ್ದ ಸಿಂಬಳ ಅವನ ಒರಟಾದ ಕರಿಯ ಮೀಸೆಯ ಕೂದಲುಗಳಲ್ಲಿ ಬೆಳ್ಳಗೆ ಸಿಕ್ಕಿಕೊಂಡಿತ್ತು. ದೀಪದ ಕೆಂಬೆಳಕಿನಲ್ಲಿ ದಿಂಡುರುಳಿದಂತಿದ್ದ ಪುಟ್ಟಣ್ಣನ ದೇಹದ ನೆರಳು ಅಲುಗಾಡುತ್ತಿದ್ದುದು ದೀಪವನ್ನು ಹಿಡಿದುಕೊಂಡು ನಿಂತಿದ್ದ ಹೂವಯ್ಯನ 'ಅಸ್ಥಿರತೆ'ಯನ್ನು ಮಾತ್ರ ತೋರಿಸುತ್ತಿತ್ತು.

ಮೃದು ಧ್ವನಿಯಿಂದ ಕರುಣಾಪೂರ್ಣವಾಗಿ "ಪುಟ್ಟಣ್ಣಾ! ಪುಟ್ಟಣ್ಣಾ!" ಎಂದು ಕರೆದನು.

ಪುಟ್ಟಣ್ಣ ಅಲುಗಾಡಲಿಲ್ಲ. ಹೆಣದಂತೆ ಬಿದ್ದಿದ್ದನು. ಅವನು ಉಸಿರಾಡುತ್ತಿದ್ದ ಸದ್ದು ಕೇಳಿಸದಿದ್ದಿದ್ದರೆ ಹೆಣವೆಂದೇ ಹೇಳಬೇಕಾಗುತ್ತಿತ್ತು.

ಹೂವಯ್ಯ ಬಾಗಿ ಮೈಮುಟ್ಟಿ ಅಲ್ಲಾಡಿಸಿ "ಪುಟ್ಟಣ್ಣಾ! ಪುಟ್ಟಣ್ಣಾ!" ಎಂದನು.

ಪುಟ್ಟಣ್ಣ ಕಣ್ದೆರೆದು ದೀಪದ ಬೆಳಕನ್ನು ದುರುದುರುನೆ ನೋಡಿ ಮತ್ತೆ ಕಣ್ಮುಚ್ಚಿಕೊಂಡನು. ಕಣ್ಣು ಕೆಂಪಾಗಿದ್ದುವು.

ಹೂವಯ್ಯ ಮತ್ತೆ ಮೈ ಮುಟ್ಟಿ ಕರೆದಾಗ ಪುಟ್ಟಣ್ಣ ಕಣ್ದೆರೆಯದೆ ತೊದಲು ತೊದಲಾಗಿ "ನೋಡೂ ... ನನ್ನ ... ತಂಟೇೀ ... ಬರ್ಬೇಡಾ ... ತೂ!" ಎಂದು ಉಗುಳಿಬಿಟ್ಟನು.

ಹೂವಯ್ಯ ತಟಕ್ಕನೆ ಹಿಂದಕ್ಕೆ ಹಾರಿ ನಿಂತು ಮುಖವನ್ನೊರಸಿಕೊಂಡನು. ಮತ್ತೆ ಮುಂದುವರಿದು ಪ್ರಯತ್ನಿಸಲಿಲ್ಲ. ಬಚ್ಚಲು ಮನೆಯಲ್ಲಿ ಮುಖ ತೊಳೆದುಕೊಂಡು ಬಂದು ತನ್ನ ಕೊಠಡಿಗೆ ಹೋಗಿ ಕುರ್ಚಿಯ ಮೇಲೆ ಕುಳಿತುಕೊಂಡನು.

ಪ್ರಪಂಚವೆಲ್ಲವೂ ಒಂದು ಕಡೆಗೂ ತಾನೊಬ್ಬನೇ ಒಂದು ಕಡೆಗೂ ಹೋಗುತ್ತಿರುವಂತೆ ಭಾಸವಾಯಿತು. ತಾನೇ ಪ್ರಪಂಚದ ಕಡೆಗೆ ತಿರುಗಬೇಕೊ ಅಥವಾ ಪ್ರಪಂಚವನ್ನೇ ತನ್ನ ಕಡೆಗೆ ತಿರುಗಿಸಿಕೊಳ್ಳಬೇಕೊ ಒಂದೂ ಬಗೆಹರಿಯಲಿಲ್ಲ. ಆದರೂ ಮೊದಲನೆಯದು ಸುಲಭವೂ ಸರಾಗವೂ ಆಗಿ ತೋರಿತು. ಬಹುಮಂದಿ ನಡೆದ ಹಾದಿಯಲ್ಲಿ ನಡೆದರೆ ಕಾಲಿಗೆ ಮುಳ್ಳು ಚುಚ್ಚುವುದಿಲ್ಲವಷ್ಟೆ?

ಸದಾ ತನ್ನ ಸಮೀಪದಲ್ಲಿಯೆ ಇದ್ದುಕೊಂಡು, ತನ್ನ ಮಾತುಕತೆ ಆಚಾರ

ವ್ಯವಹಾರಗಳನ್ನು ಕೇಳಿ ನೋಡುತ್ತಿದ್ದು, ತನ್ನಿಂದೆಷ್ಟೋಸಾರಿ ಹಿತವಾದಗಳನ್ನೂ ಕೂಡ ಕೇಳಿ, ತನ್ನ ಜೀವನವನ್ನು ತಿದ್ದಿಕೊಳ್ಳುತ್ತೇನೆಂದು ಮನಃಪೂರ್ವಕವಾಗಿ ಪ್ರತಿಜ್ಞೆಮಾಡಿದ್ದ ಪುಟ್ಟಣ್ಣನೇ ಸಲಸಲವೂ ಮುಗ್ಗುರಿಸಿ ಬಿದ್ದು ದುಃಸ್ಥಿತಿಗೀಡಾದ ಮೇಲೆ, ತನ್ನಿಂದ ದೂರವಿರುವ, ವಿರೋಧಿಗಳಾಗಿರುವ, ಉದ್ಧಾರಾಕಾಂಕ್ಷೆಯಿಲ್ಲದ ಇತರರನ್ನು ತಿದ್ದುವುದಾದರೂ ಹೇಗೆ? ಎಂಬ ಹತಾಶಾಭಾವವೂ ಹೂವಯ್ಯನಲ್ಲಿ ಮೂಡಿ ಖಿನ್ನನಾದನು.

ಹಾಗೆಯೇ ಮತ್ತೊಂದಾಲೋಚನೆಯೂ ಮನಸ್ಸಿನಲ್ಲಿ ಇಣುಕಿತು; ತಾನು ಕಲ್ಪಿಸಿರುವ ಕಿನ್ನರ ಪ್ರಪಂಚಕ್ಕೂ ಈ ವಾಸ್ತವ ನರ ಪ್ರಪಂಚಕ್ಕೂ ಹೊಂದಿಕೆ ಇರುವಂತೆಯಾಗಲಿ ಬರುವಂತೆಯಾಗಲಿ ತೋರುವುದಿಲ್ಲ. ತನ್ನ ವಾಸಗೃಹವನ್ನು ತನ್ನ ಮೈಮೇಲೆಯೆ ಇಟ್ಟುಕೊಂಡಿರುವ ಹುಳುವಿನಂತೆ ಈ ಕಿನ್ನರ ಪ್ರಪಂಚವನ್ನು ಮೈಗೆ ಸುತ್ತಿಸಿ ಹೊತ್ತುಕೊಂಡು ನರ ಪ್ರಪಂಚದಲ್ಲಿ ಬಾಳುವುದೆಂದರೆ, ಹೊರಲಾರದ ಭಾರವನ್ನು ಹೊತ್ತು ಈಜಲು ಪ್ರಯತ್ನಿಸುವಂತೆ, ವೃಥಾ ಶ್ರಮವಲ್ಲದೆ ಶ್ರೇಯಸ್ಸಿಲ್ಲ. ಇತ್ಯಾದಿ ಆಲೋಚನೆಗಳ ಪರಿಣಾಮವಾಗಿ ಸೀತೆಯನ್ನು ತಾನು ಮದುವೆಯಾಗಬೇಕಾದರೆ ದಾಕ್ಷಿಣ್ಯ ಲಜ್ಜೆಗಳನ್ನು ಒತ್ತಟ್ಟಿಗಿಟ್ಟು ಕೆಲಸಮಾಡಬೇಕೆಂದು ನಿರ್ಣಯಿಸಿದನು. ವಾದವೇನೊ ಅಷ್ಟೇನೂ ತರ್ಕಬದ್ಧವಾಗಿರಲಿಲ್ಲ: ಆದರೆ ಇಚ್ಛಾಬದ್ಧವಾಗಿತ್ತು.

ಮನೆಯ ಹೊರಗಡೆ ಬೆಳೆದ ಗದ್ದೆಯಲ್ಲಿ ನಾಯಿಗಳು ಗಟ್ಟಿಯಾಗಿ ಬಗುಳಿದುವು. ರಾತ್ರಿಯ ನೀರವತೆಯಲ್ಲಿ ಸುತ್ತಣ ಗಿರಿಕಾನನಗಳು ದನಿಯನ್ನು ಕನ್ನಡಿಸಿ ಬೊಗುಳಿದುವು. ಹೂವಯ್ಯ ಕಾಡುಹಂದಿಗಳೇನಾದರೂ ಬಂದಿರಬಹುದೆಂದು ಬಂದೂಕು ತೆಗೆದುಕೊಂಡು ಹೊರಗೆ ಬಂದನು. ಕತ್ತಲೆಯಲ್ಲಿ ಗುಡ್ಡ ಬೆಟ್ಟ ಕಾಡುಗಳು ಆಕೃತಿ ಮಾತ್ರವಾಗಿದ್ದುವು. ಹೂವಯ್ಯ ಮುಂಬರಿವುದರಿಂದ ನಿಷ್ಪ್ರಯೋಜನವಲ್ಲದೆ ಅಪಾಯವೂ ಉಂಟಾಗಬಹುದೆಂದು ವಿವೇಕಪೂರ್ಣವಾದ ಆಶಂಕೆಯಿಂದ ಹಿಂತಿರುಗಿದನು.

ಕುರ್ಚಿಯ ಮೇಲೆ ಕುಳಿತುಕೊಂಡು ಮತ್ತೆ ಆಲೋಚಿಸತೊಡಗಿದನು:

ಸೀತೆಯನ್ನು ನಾನೀಗ ಕೈಬಿಟ್ಟರೆ ಆಕೆಗೆ ಮಹಾ ದ್ರೋಹಮಾಡಿದಂತಾಗುತ್ತದೆ. ಆಕೆಯ ತಂದೆತಾಯಿಗಳು ಏನೇ ಹೇಳಲಿ; ಜಾತಕ ಬರಲಿ, ಬಿಡಲಿ; ಆ ಧನ ಪಿಶಾಚಿ ವೆಂಕಪ್ಪಯ್ಯ ಜೋಯಿಸನೂ ಅವನ ದೇವರೂ ಏನುಬೇಕಾದರೂ ಮಾಡಿಕೊಳ್ಳಲಿ; ಚಂದ್ರಯ್ಯಗೌಡರೂ ರಾಮಯ್ಯನೂ ತಲೆ ಕೆಳಗಾಗಿ ನಡೆಯಲಿ; ನನ್ನ ಮತ್ತು ನನ್ನ ಸೀತೆಯ ಅಭೀಷ್ಟಸಾಧನೆಯಾಗಲೇ ಬೇಕು! ಅದಕ್ಕಾಗಿ ಏನನ್ನು ಬೇಕಾದರೂ ಮಾಡಲು ಸಿದ್ಧನಾಗುತ್ತೇನೆ.

ಕಿಟಕಿಯ ಹೊರಗಡೆ ದೂರದ ವನಗಿರಿಶಿರದಲ್ಲಿ ಉಜ್ವಲವಾದೊಂದು ನಕ್ಷತ್ರ ಸ್ವಲ್ಪ ನೀಲವಾದ ಕಾಂತಿಯಿಂದ ಮಿರುಮಿರುಗಿ ಪ್ರಕಾಶಿಸುತ್ತಾ ಆಗತಾನೆ ಮೂಡಿತ್ತು. ಹೂವಯ್ಯ ಆಲೋಚನೆಯನ್ನು ತುಂಡುಗಡಿದು ಅದನ್ನೇ ನೋಡುತ್ತಾ ಕುಳಿತನು.

ನಾಗಮ್ಮನವರು ಊಟಕ್ಕೆ ಕರೆದರು.

"ಪುಟ್ಟಣ್ಣ ಎದ್ದನೋ? ಹಾಗೇ ಬಿದ್ದಿದ್ದಾನೋ!"

ಮಗನ ಪ್ರಶ್ನೆಗೆ ತಾಯಿ "ಸೈ ಬಿಡು, ನಿನಗೆ ಕಸುಬಿಲ್ಲ! ಅವನೆಲ್ಲಿ ಏಳ್ತಾನೆ ಇವತ್ತು? ನಾಳೆ ಬೆಳಗ್ಗೆ ಎದ್ದರೆ ಸಾಕು!" ಎಂದು ಹಿಂತಿರುಗಿ ಅಡುಗೆ ಮನೆಯ ಕಡೆಗೆ ಹೋಗುತ್ತಾ "ನೀ ಬಾ, ಹೊತ್ತಾಯ್ತು" ಎಂದು ಬಾಗಿ ದಾರಿಯಲ್ಲಿ ಕಾಲಿಗೆ ತಗುಲಿದ ಒಂದೆರಡು ಅಡಕೆ ಕಾಯಿಗಳನ್ನು ಎತ್ತಿ ಕೊನೆ ಕುತ್ತುರೆಗೆ ಎಸೆದು ಒಳಗೆ ಹೋದರು.

ಊಟ ಪೂರೈಸಿ ತನ್ನ ಕೊಠಡಿಗೆ ಬಂದ ಹೂವಯ್ಯ ಕೆಳಗಿಳಿಸಿದ್ದ ಲ್ಯಾಂಪಿನ ಬತ್ತಿಯನ್ನು ಮೇಲಕ್ಕೇರಿಸಿದನು. ಇದ್ದಕಿದ್ದಹಾಗೆ ಬೆಳಕು ಕೊಠಡಿಯಲ್ಲಿ ಉಕ್ಕಿ ತುಂಬಿದಂತಾಯಿತು. ಊಟಕ್ಕೆ ಕುಳಿತಿದ್ದಾಗ ನಿರ್ಣಯಿಸಿದ್ದಂತೆ ಸೀತೆಗೆ ಕಾಗದ ಬರೆಯಲೆಂದು ಲೇಖಣಿ ತೆಗೆದುಕೊಂಡನು.

ಹೂವಯ್ಯ ಊಟಮಾಡುತ್ತಿದ್ದಾಗ ತನ್ನ ಇಷ್ಟಸಾಧನೆಯಾಗುವ ಅನೇಕ ಮಾರ್ಗಗಳನ್ನು ಕುರಿತು ಆಲೋಚಿಸಿದ್ದನು. ಯಾವ ಹಾದಿಯೂ ಒಪ್ಪಿಗೆ ಯಾಗದೆ ಕಡೆಗೆ ಸೀತೆಗೆ ಗುಟ್ಟಾಗಿ ಕಾಗದ ಬರೆಯುವ ಹಾದಿಯೊಂದೇ ಕಾರ್ಯ ಕಾರಿಯಾಗಿ ತೋರಿತ್ತು.

ಹೂವಯ್ಯ ರಸಾವೇಶದಿಂದ ಕಾಗದ ಬರೆಯತೊಡಗಿದನು. ಆಕೆಯಲ್ಲಿ ತನಗಿದ್ದ ಅಗಾಧವಾದ ಪ್ರೇಮವನ್ನೂ ಪ್ರೇಮದ ಪವಿತ್ರತೆ ಶಾಶ್ವತತೆಗಳನ್ನೂ ಸೂಚಿಸಿ, ಆಕೆ ಗೋಡೆಯ ಮೇಲೆ 'ಹೂವಯ್ಯ ಬಾವನನ್ನೇ ಮದುವೆಯಾಗು ತ್ತೇನೆ' ಎಂದು ಬರೆದಿದ್ದುದನ್ನೂ ನೆನಪಿಗೆ ತಂದುಕೊಟ್ಟು, ತಾವಿಬ್ಬರೂ ವಿವಾಹ ದಿಂದ ಏಕಾತ್ಮರಾಗಿ ಆನಂದದಿಂದಿರಬಹುದಾದ ಚಿತ್ರವನ್ನೂ ವರ್ಣಿಸಿ, ಆಕೆ ಇನ್ನಾರನ್ನಾದರೂ ಮದುವೆಯಾಗಬೇಕೆಂದು ತಂದೆತಾಯಿಗಳು ಬಲಾತ್ಕರಿಸಿದರೆ ಪ್ರಾಣವನ್ನಾದರೂ ಬಿಡಬೇಕೆಂದೂ, ತಾನೂ ಆಕೆಯನ್ನಲ್ಲದೆ ಇತರರನ್ನು ಕಣ್ಣೆತ್ತಿ ನೋಡುವುದಿಲ್ಲವೆಂದೂ, ಭಯಂಕರವಾದ ಸಲಹೆಗಳನ್ನಿತ್ತು ಪತ್ರವನ್ನು ಪೂರೈಸಿ ದನು. ಬರೆಯುವ ಜೋರಿನಲ್ಲಿ ಸೀತೆಗೆ ಅರ್ಥವಾಗಬೇಕೆಂಬ ದೃಷ್ಟಿಯೂ ಮರೆತುಹೋಗಿತ್ತು.

ಕಾಗದವೆಲ್ಲಿಯಾದರೂ ಸೀತೆಯ ಕೈಗೆ ಸಿಕ್ಕಿದ್ದರೆ ಅನರ್ಥಕಾರಿಯಾಗದೆ

ಇರುತ್ತಿರಲಿಲ್ಲ. ಏಕೆಂದರೆ ಹೂವಯ್ಯನ ಮಾತುಗಳಲ್ಲಿ ಆಕೆಗೆ ಅಷ್ಟೊಂದು ಗಾಢವಿಶ್ವಾಸವಿತ್ತು.

ಹೂವಯ್ಯ ತನ್ನ ಪ್ರಣಯ ಪತ್ರವನ್ನು ತಾನೇ ಮೂರು ನಾಲ್ಕು ಸಾರಿ ಓದಿದನು. ಒಂದೊಂದು ಸಾರಿ ಓದಿದಂತೆಲ್ಲ ಅದು ಹೆಚ್ಚು ಹೆಚ್ಚು ಅವಿವೇಕವಾಗಿ ತೋರತೊಡಗಿತು. ಕಡೆಯ ಸಾರಿ ಓದಿ ಅದನ್ನು ಲ್ಯಾಂಪಿನ ಜ್ವಾಲೆಗೆ ಹಿಡಿದನು. ಬೆಂಕಿ ಹೊತ್ತಿತು. ಕಾಗದ ಕರಿಕಲಾಗಿ ಮುರುಟಿಕೊಂಡಿತು.

ಎಲ್ಲರೂ ಮಲಗಿದ್ದ ಮನೆ ನಿಶ್ಶಬ್ದವಾಗಿತ್ತು. ಹೊರಗಡೆಯ ರಾತ್ರಿಯ ಜಗತ್ತೂ ನಿದ್ರಿಸುವಂತಿತ್ತು. ಸೆಕೆಯಾರಿಸಿಕೊಳ್ಳಲೆಂದು ಹೂವಯ್ಯ ಹೊರಗೆ ನಡೆದನು.

## ೫೧

## ಗೊಬ್ಬರಗುಂಡಿಯಲ್ಲಿ ಸೋಮ !

ಹೂವಯ್ಯ ಗಾಡಿಯಿಂದಿಳಿದು ಸೀತೆಮನೆಗೆ ಹೊರಟಮೇಲೆ ಮುತ್ತಳ್ಳಿ ಶ್ಯಾಮಯ್ಯಗೌಡರು ಗಾಡಿಯೊಳಗಿದ್ದ ದಿಂಬುಮೆತ್ತೆಯ ಮೇಲೆ ಒರಗಿಕೊಂಡು ಆಲೋಚನೆಗೊಳಗಾದರು. ಅವರಿಗೆ ಸೀತೆಯ ದೆಸೆಯಿಂದ ಉಭಯಸಂಕಟದಲ್ಲಿ ಸಿಕ್ಕಿಬಿದ್ದ ಹಾಗಾಗಿತ್ತು. ಒಂದು ಕಡೆ ಚಂದ್ರಯ್ಯಗೌಡರ ಅಧಿಕಾರವಾಣಿ; ಮತ್ತೊಂದು ಕಡೆ ನಾಗಮ್ಮನವರ ಪ್ರಾರ್ಥನಾವಾಣಿ; ಮಧ್ಯೆ ಸಿಂಗಪ್ಪಗೌಡರ ಸಂಧಾನವಾಣಿ. ಚಂದ್ರಯ್ಯಗೌಡರಿಗೆ ಅವರು ಹಿಂದೆ ಒಂದು ರೀತಿಯಾಗಿ ಮಾತುಕೊಡದಿದ್ದರೆ ಮಗಳನ್ನು ಹೂವಯ್ಯನಿಗೇ ಕೊಡುತ್ತಿದ್ದರೆನ್ನುವುದರಲ್ಲಿ ಸಂದೇಹವಿರಲಿಲ್ಲ. ಆದರೆ ಚಂದ್ರಯ್ಯಗೌಡರ ಕ್ರೂರ ಸ್ವಭಾವವನ್ನು ತಿಳಿದವರಾದ್ದರಿಂದ, ಅವರು ತಮಗೆ ಸಾಲಗಾರರಾಗಿದ್ದರೂ, ತಮಗಿಂತ ಕಡಮೆ ಶ್ರೀಮಂತರಾಗಿದ್ದರೂ ಶ್ಯಾಮಯ್ಯಗೌಡರಿಗೆ ಅವರಲ್ಲಿ ಹೆದರಿಕೆಯಿತ್ತು. ಆದ್ದರಿಂದಲೆ ತಮ್ಮ ಹೆಂಡತಿ ಗೌರಮ್ಮನವರ, ಮಗ ಚಿನ್ನಯ್ಯನ ಮತ್ತು ಮದುಮಗಳಾಗುವ ಮಗಳು ಸೀತೆಯ ಮೂವರ ಮನಸ್ಸೂ, ತಮ್ಮ ನಿಜವಾದ ಅಂತಃಕರಣವೂ ಹೂವಯ್ಯನ ಪಕ್ಷವಾಗಿದ್ದರೂ ಚಂದ್ರಯ್ಯಗೌಡರ ಮಗನಿಗೆ ಮಗಳನ್ನು ಮದುವೆಮಾಡಿಕೊಡಲು ಒಪ್ಪಿದ್ದರು. ಜೊತೆಗೆ ಜೋಯಿಸರಾದ ವೆಂಕಪ್ಪಯ್ಯನವರು ಬೇರೆ ದೇವರು, ಧರ್ಮ, ಶಾಸ್ತ್ರ, ನಿಮಿತ್ತ, ಗ್ರಹಚಾರ ಇವುಗಳ ಹೆಸರಿನಲ್ಲಿ ಚಂದ್ರಯ್ಯಗೌಡರ ಇಚ್ಛೆಯನ್ನೇ ಪೋಷಿಸಿ ಹೂವಯ್ಯನಿಗೆ ವಿರೋಧವಾಗಿ ವರ್ತಿಸಿದ್ದರು.

ಕಾನೂರಿನ ಹೊರ ಅಂಗಳದಲ್ಲಿ ಗಾಡಿ ನಿಲ್ಲುವಷ್ಟರಲ್ಲಿ ಶ್ಯಾಮಯ್ಯಗೌಡರು 'ಯಾರಾದರೇನಂತೆ? ಹೆಣ್ಣಿಗೊಂದು ಗಂಡಾದರೆ ಸೈ. ರಾಮಯ್ಯನೇನು ಕಡಮೆ ಹೂವಯ್ಯನಿಗೆ? ಆಸ್ತಿ, ಮನೆ, ವಿದ್ಯೆ, ರೂಪು ಎಲ್ಲಾ ಇದೆ. ಹೂವಯ್ಯನ ಹಾಗೆ ಅವನಿಗೆ ಮನೆ ಜಮೀನುಗಳ ಮೇಲೆ ತಾತ್ಸಾರ ಬುದ್ಧಿಯೂ ಇಲ್ಲ. ಹೂವಯ್ಯನ ಹಾಗೆ ಮೂರ್ಛೆರೋಗವೂ ಇಲ್ಲ. ಅದೂ ಅಲ್ಲದೆ ಹೂವಯ್ಯನಿಗಿಂತಲೂ ದೊಡ್ಡ ಮನೆ ದೊಡ್ಡ ಆಸ್ತಿ ಎಲ್ಲಾ ಇದೆ. ಬಾವನಿಗೂ ಸಿಟ್ಟು ಬರದಂತೆ ಕೆಲಸ ಸಾಗುತ್ತದೆ. ಹೆಣ್ಣು ಕೊಟ್ಟು ಹೆಣ್ಣು ತಂದಂತೆಯೂ ಆಗುತ್ತದೆ!' ಎಂಬ ನಿರ್ಧಾರಕ್ಕೆ ಬಂದು, ತಮ್ಮ ಹೃದಯ ಮನಸ್ಸುಗಳನ್ನು ಸಮಾಧಾನಪಡಿಸಿಕೊಂಡಿದ್ದರು. ಆದರೆ ಒಂದು ಮುಖ್ಯವಾದ ಕಾರಣ ಅವರ ಆಲೋಚನೆಗೆ ಬರದಿದ್ದರೂ ಅಂತಃಕರಣದಲ್ಲಿ ಇತ್ತು: ಚಂದ್ರಯ್ಯಗೌಡರಿಂದ ಶ್ಯಾಮಯ್ಯಗೌಡರಿಗೆ ಸಾವಿರಾರು ರೂಪಾಯಿಗಳ ಸಾಲ ಬರಬೇಕಾಗಿತ್ತು. ಶ್ಯಾಮಯ್ಯಗೌಡರು ಸುಖಜೀವಿ, ಸದ್ವ್ಯಕ್ತಿ; ದೇವರಲ್ಲಿ ಭಕ್ತಿಯಿತ್ತು; ಕೋರ್ಟು ಮನೆ ಹತ್ತುವುದು, ಅಲೆಯುವುದು, ದಣಿಯುವುದು ಇದೆಲ್ಲಾ ಅವರಿಗೆ ಸರಿ ಬೀಳುತ್ತಿರಲಿಲ್ಲ. ಆದ್ದರಿಂದ ಹೇಗಾದರೂ ಚಂದ್ರಯ್ಯಗೌಡರಿಗೆ ಹಿತವಾಗಿದ್ದು ಕೊಂಡೇ ತಮ್ಮ ಸಾಲವನ್ನು ಹಿಂದಕ್ಕೆ ತೆಗೆದುಕೊಳ್ಳಬೇಕೆಂದು ಅವರ ಬಯಕೆ ಯಾಗಿತ್ತು. ಚಂದ್ರಯ್ಯಗೌಡರಿಗೆ ಮನಸ್ತಾಪ ಬರುವ ಯಾವ ಕಾರ್ಯವನ್ನೂ ಕೈಕೊಳ್ಳಲು ಅವರು ಹೆದರಿ ಹಿಂಜರಿಯುತ್ತಿದ್ದರು. 'ಕೊಟ್ಟವನು ಕೋಡಿಂಗ; ತೆಗೆದುಕೊಂಡವನು ವೀರಭದ್ರ' ಎಂಬ ಗಾದೆಯಂತೆ ಕೋಡಿಂಗನು ಗಾಡಿಯಿಂದಿ ಳಿದು ಕಾನೂರಿನ ಕತ್ತಲೆಕೋಣೆಯಲ್ಲಿ ಅಸ್ವಸ್ಥನಾಗಿ ಮಲಗಿದ್ದ ವೀರಭದ್ರನ ಬಳಿಗೆ ಹೋದನು!

ಜನಗಳಿದ್ದರೂ ಮನೆ ಬೆಕೋ ಎನ್ನುವಂತಿತ್ತು. ರಾಮಯ್ಯ ಮೈ ಸ್ವಸ್ಥ ವಿಲ್ಲದೆ ಉಪ್ಪರಿಗೆಯ ಮೇಲೆ ಮಲಗಿದ್ದನು. ಅನುಭವ ಸಾಲದ ಹುಡುಗಿ ಪುಟ್ಟಮ್ಮ ಗಾಡಿ ಹೊಡೆಯುವ ನಿಂಗನ ಸಹಾಯದಿಂದ ಅಡುಗೆಯ ಕೆಲಸದಲ್ಲಿ ತೊಡಗಿದ್ದಳು.

ಶ್ಯಾಮಯ್ಯಗೌಡರು ಸುಬ್ಬಮ್ಮನ ವಿಚಾರವಾಗಿ ಚಂದ್ರಯ್ಯಗೌಡರಿಗೆ ಬುದ್ಧಿ ಹೇಳಬೇಕೆಂದಷ್ಟೇ ಕಾನೂರಿಗೆ ಬಂದಿದ್ದುದು! ಆದರೆ ಚಂದ್ರಯ್ಯಗೌಡರ ಮುಂದೆ ಆ ವಿಚಾರವಾಗಿ ತುಟಿಪಿಟಕ್ಕೆನ್ನಲು ಧೈರ್ಯವಾಗಲಿಲ್ಲ. ಬೇರೆ ವಿಷಯಗಳನ್ನು ಕುರಿತು ಹೊರೆ ಹೊರೆ ಮಾತಾಡಿದರು. ಹಳೆಪೈಕದ ತಿಮ್ಮ ತಂದುಕೊಟ್ಟ ನೊರೆ ನೊರೆ ಕಳ್ಳನ್ನು ಬಾವ ನಂಟರಿಬ್ಬರೂ ಚೆನ್ನಾಗಿ ಸೇವಿಸಿದರು. ಪರಿಣಾಮವಾಗಿಯೋ ಎಂಬಂತೆ ಚಂದ್ರಯ್ಯಗೌಡರಿಗೆ ಮೈ ಮೇಲೆ ಬಂದಿತು.

ಅಬ್ಬರಿಸಿ ಕೂಗಿದರು. ಭಯಂಕರವಾಗಿ ಬೆದರಿಸಿದರು. ವರ್ತಮಾನವನ್ನು ಕೇಳಿ 'ಗೌಡರ ಮೇಲೆ ಭೂತ ಬಂದಿದೆಯಂತೆ' ಎಂದು ಆಳು ಕಾಳುಗಳೆಲ್ಲ ನೆರೆದರು. ಚಂದ್ರಯ್ಯಗೌಡರ ರೀತಿ ಹೇಗಿತ್ತೆಂದರೆ ಅಂಥವುಗಳಲ್ಲಿ ನಂಬಿಕೆ ಯಿರದಿದ್ದ ರಾಮಯ್ಯನಿಗೂ ಸ್ವಲ್ಪ ನಂಬುಗೆ ಹುಟ್ಟುವಂತಾಯಿತು. ಹೂವಯ್ಯ ನಿಂದ ದೂರವಾಗಿದ್ದ ರಾಮಯ್ಯನ ಮಾನಸಿಕ ಸ್ಥಿತಿಯೂ, ಅಯಸ್ಕಾಂತ ಶಿಲೆಯಿಂದ ಬಹುಕಾಲ ದೂರವಾಗುವ ಕಬ್ಬಿಣದ ಸೂಜಿಗಲ್ಲಿನಂತೆ, ತನ್ನ ಶಕ್ತಿಯನ್ನು ಕಳೆದುಕೊಳ್ಳತೊಡಗಿತ್ತು.

ಶ್ಯಾಮಯ್ಯಗೌಡರು ಕೈಮುಗಿದುಕೊಂಡು ಮೈಮೇಲೆ ಬಂದಿದ್ದ ಚಂದ್ರಯ್ಯ ಗೌಡರ ಎದುರು ನಿಂತು ದೇವರನ್ನು ಸಂಬೋಧಿಸುವಂತೆ "ನೀನ್ಯಾರು ? ಯಾತಕ್ಕೆ ಬಂದಿದ್ದೀಯ ? ದಯಮಾಡಿ ಹೇಳಿದರೆ ಏನು ಬೇಕೋ ಮಾಡ್ತೇವೆ" ಎಂದರು.

ಸೇರೆಗಾರ ರಂಗಪ್ಪಸೆಟ್ಟರೂ ಕೈಮುಗಿದುಕೊಂಡು ಉತ್ತರವನ್ನು ಕಾತರತೆ ಯಿಂದ ನಿರೀಕ್ಷಿಸುತ್ತಿದ್ದರು. ಗಂಗೆ, ಸೋಮ, ಹಳೆಪೈಕದ ತಿಮ್ಮ, ಬೇಲರ ಸಿದ್ದ, ನಿಂಗ, ಪುಟ್ಟಮ್ಮ, ವಾಸು, ನಿಂಗನ ಮಗ ಪುಟ್ಟ ಸರ್ವರೂ ಭಯಭ್ರಾಂತ ರಾಗಿ ಕೆಲರು ಪ್ರತ್ಯಕ್ಷವಾಗಿ ಕೆಲರು ಪರೋಕ್ಷವಾಗಿ ನಡುಗುತ್ತಿದ್ದರು.

ಚಂದ್ರಯ್ಯಗೌಡರು ಅಥವಾ ಅವರ ಮೈಮೇಲೆ ಬಂದಿದ್ದ ಭೂತ ಹೇಳಿತು. ಆ ಭೂತದ ಇಚ್ಛೆ ಚಂದ್ರಯ್ಯಗೌಡರ ಇಚ್ಛೆಗೆ ಒಂದಿನಿತೂ ವಿರೋಧವಾಗಿರಲಿಲ್ಲ. ಮನಃಶಾಸ್ತ್ರಜ್ಞರಾಗಿದ್ದರೆ ಚಂದ್ರಯ್ಯಗೌಡರ ಇಚ್ಛೆಯೇ ಭೂತದ ವೇಷವನ್ನು ಹಾಕಿಕೊಂಡಿದೆ ಎಂದು ನಿರ್ಣಯಿಸುತ್ತಿದ್ದರು.

ಚಂದ್ರಯ್ಯಗೌಡರ ಬಾಯಲ್ಲಿ ಬಂದ ಮಾತುಗಳಲ್ಲಿ ಬೇಕಾದಷ್ಟು ವ್ಯಂಗ್ಯ, ಅಸ್ಪಷ್ಟತೆ, ಸೂಚನೆ, ವಕ್ರೋಕ್ತಿ ಎಲ್ಲಾ ಇದ್ದುವು. ಅಲ್ಲಿ ನೆರೆದಿದ್ದವರಲ್ಲಿ ಪ್ರತಿಯೊಬ್ಬರಿಗೂ ಅದು ಅರ್ಥವಾಯಿತು. ಆದರೆ ಒಬ್ಬರ ಅರ್ಥ ಮತ್ತೊಬ್ಬರ ದಾಗಿರಲಿಲ್ಲ. ಅವರವರಿಗೆ ಬೇಕಾದಂತೆ ಅರ್ಥಮಾಡಿದರು.

"ನಿನ್ನ ಮಗಳನ್ನು ರಾಮಯ್ಯನಿಗೆ ಕೊಡಲಾಗದೆಂದು ಹಲವರು ಪಿತೂರಿ ನಡೆಸುತ್ತಿದ್ದಾರೆ. ಆ ಪಿತೂರಿಗೆ ನೀನು ಒಳಗಾದರೆ ಕೇಡಾಗುತ್ತದೆ. ಮನೆ ಯವರನ್ನೆಲ್ಲ ಮುರಿದುಹಾಕುತ್ತೇನೆ, ಮಗಳನ್ನು ಕಾನೂರಿಗೆ ಕೊಡು. ನಾನು ಒಳ್ಳೆಯದು ಮಾಡುತ್ತೇನೆ" ಎಂಬುದೆ ಆ ಮಾತುಗಳ ಭಾವವೆಂದು ಶ್ಯಾಮಯ್ಯ ಗೌಡರು ನಿರ್ಧರಿಸಿ "ಆಗಲಿ ನೀನು ಹೇಳಿದ ಹಾಗೇ ಮಾಡುತ್ತೇನೆ !" ಎಂದು ಮಾತುಕೊಟ್ಟು, ನಮಸ್ಕಾರ ಮಾಡಿದರು.

"ನನಗೆ ಮೀಸಲಾಗಿದ್ದ 'ಆಯೂರ'ವನ್ನು ಅಪಹರಿಸಿದ್ದೀರಿ. ಅದನ್ನು ಹಿಂದಕ್ಕೆ ಬಲಿಕೊಟ್ಟ ಹೊರತೂ ನಾನು ನಿಮಗೆ ಸುಖ ಕೊಡುವುದಿಲ್ಲ. ಅದನ್ನು

ಶೀಘ್ರದಲ್ಲಿಯೆ ಬಲಿಕೊಡದಿದ್ದರೆ ನಿಮ್ಮನ್ನು ಗಟ್ಟದ ಕೆಳಗೆ ಇಳಿಯದಂತೆ ಮಾಡಿಬಿಡುತ್ತೇನೆ" ಎಂದು ಅರ್ಥಮಾಡಿಕೊಂಡು ಸೇರೆಗಾರರು ಗಂಗೆ ಮೊದಲಾದವರು ಹೇಗಾದರೂ ಮಾಡಿ ಕೆಳಕಾನೂರಿನಲ್ಲಿದ್ದ ಹೂವಯ್ಯನ 'ಬಲೀಂದ್ರ'ನನ್ನು ಭೂತಕ್ಕೆ ಬಲಿಕೊಡದಿದ್ದರೆ ನಾವೆಲ್ಲ ಸಾಯಬೇಕಾಗುತ್ತದೆ ಎಂದು ನಿರ್ಣಯಿಸಿದರು.

ಪುಟ್ಟಮ್ಮ "ಅಪ್ಪಯ್ಯ ಚಿಕ್ಕಮ್ಮನನ್ನು ಮನೆಗೆ ಕರೆಯಿಸಬಾರದೆಂದು ಹೇಳುತ್ತಿದ್ದಾರೆ" ಎಂದು ವ್ಯಾಖ್ಯಾನ ಮಾಡಿಕೊಂಡಳು.

ನಿಂಗನ ಮಗ ಪುಟ್ಟನು 'ತೋಟದಲ್ಲಿ ಕದ್ದಿಟ್ಟಿರುವ ಬಾಳೆಹಣ್ಣುಗಳನ್ನು ನನಗೆ ಕೊಡು' ಎಂದು ಭೂತರಾಯ ಹೇಳುತ್ತಿದೆ ಎಂದು ಊಹಿಸಿ, ಹಾಗೆಯೆ ಮಾಡುವುದಾಗಿ ಮನಸ್ಸಿನಲ್ಲಿ ಪ್ರಾರ್ಥಿಸಿ, ವಾಸುವಿನ ಕಡೆಗೆ ನೋಡಿ, ಗುಟ್ಟಾಗಿ ಕೈಮುಗಿದನು!

ಸುಖ ದುಃಖ ಹೇಳುವುದೆಲ್ಲ ಮುಗಿದ ಮೇಲೆ ಚಂದ್ರಯ್ಯಗೌಡರಲ್ಲಿದ್ದ ಭೂತರಾಯ "ಬಾಯಾರಿಕೆ" ಎಂದಿತು. ನಿಂಗ ಓಡಿಹೋಗಿ ಸೆಗಣಿಯಿಂದ ಪರಿಶುದ್ಧವಾಗಿ ಮಾಡಿದ ನೀರನ್ನು ಒಂದು ಚೊಂಬಿನಲ್ಲಿ ತಂದಿಟ್ಟನು. ಭೂತ ರೇಗಿ ಅದನ್ನು ಚೆಲ್ಲಿ ಬಿಸಾಡಿ ಹಳೆಪೈಕದ ತಿಮ್ಮನ ಕಡೆಗೆ ಅರ್ಥಗರ್ಭಿತವಾಗಿ ನೋಡಿತು.

ಭೂತ ಕಳ್ಳು ಕೇಳುತ್ತಿದೆ ಎಂಬುದು ತಿಮ್ಮನಿಗೆ ಅರ್ಥವಾಗಿ ಒಂದು ಮೊಗೆಯಲ್ಲಿ ಕಳ್ಳನ್ನು ತಂದಿಟ್ಟನು. ಚಂದ್ರಯ್ಯಗೌಡರ ಮುಖಾಂತರ ಭೂತ ಕಳ್ಳನ್ನು ಚೆನ್ನಾಗಿ ಹೀರಿ ಹಾಸಗೆಯ ಮೇಲೆ ಕಾಲುಚಾಚಿ ಮಲಗಿ ಮೌನವಾಯಿತು. ನೆರೆದಿದ್ದವರೆಲ್ಲರೂ ಮಹಾಘಟನೆ ಮುಗಿಯಿತೆಂದು ಚೆದರಿದರು.

ಸೇರೆಗಾರರು, ಗಂಗೆ, ತಿಮ್ಮ, ನಿಂಗ ನಾಲ್ವರೂ ಮನೆಯ ಕಿರುಜಗಲಿಯ ಮೂಲೆಯಲ್ಲಿ ಸೇರಿ, ಹೂವಯ್ಯನ 'ಬಲೀಂದ್ರ' ಹೋತವನ್ನು ಹೇಗೆ ಕದ್ದು ತಂದು ಭೂತಕ್ಕೆ ಬಲಿಕೊಡಬೇಕೆಂಬ ವಿಚಾರವಾಗಿ ದೀರ್ಘವಾಗಿ ಸಂಚು ನಡೆಸಿದರು.

"ದುಡ್ಡು ಕೊಟ್ಟು ಕೊಂಡುಕೊಳ್ಳಲು ಸಾಧ್ಯವೂ ಅಲ್ಲ; ಹೂವಯ್ಯಗೌಡರು ಒಪ್ಪುವುದೂ ಸುಳ್ಳು. ಬೇರೆ ಏನಾದರೂ ಇದ್ದರೆ ಹೇಳಿನಿ" ಎಂದರು ಸೇರೆಗಾರರು.

"ಆ ಪುಂಡ ಪುಟ್ಟೇಗೌಡ್ರು ಇಲ್ದಿದ್ರೆ ನಾನು ಹ್ಯಾಂಗಾದರೂ ಮಾಡಿ ರಾತ್ರಾರಾತ್ರೆ ಸಾಗಿಸಿ ಬಿಡ್ತಿದ್ದೆ ಹೋಂತನ್ನ! ಅವರಿಗೆ ಎಲ್ಲಾದ್ರೂ ಸೂಕ್ಷ್ಮ ಒಂದು ಚೂರು ಗೊತ್ತಾದ್ರೆ ಗುಂಡಿನಲ್ಲೇ ಹೊಡೆಯಾಕೂ ಹೇಸುವುದಿಲ್ಲ ಆ ಮಾರಾಯ!" ಎಂದನು ಹಳೆಪೈಕದ ತಿಮ್ಮ.

ಗಂಗೆ "ನಮ್ಮ ಸೋಮಯ್ಯ ಸೆಟ್ಟರು ಒಪ್ಪಿಕೊಂಡರೆ ಒಂದು ಕೈ ಕಂಡು ಬಿಡಲಕ್ಕು !" ಎಂದಳು.

ಸೋಮನ ಹೆಸರನ್ನು ಕೇಳಿ ಎಲ್ಲರೂ ನಕ್ಕರು. ಆದರೂ ನಿಂಗ ಬಿಡಾರಕ್ಕೆ ಹೋಗಿ ಬಾಡುಗಳ್ಳ ಡೊಳ್ಳುಹೊಟ್ಟೆಯ ಸೋಮನನ್ನು ಕರೆತಂದನು.

ಸೋಮ ಕಥೆಯೆಲ್ಲವನ್ನೂ ಕೇಳಿ 'ನನ್ನಿಂದಾಗದ ಕೆಲಸ ಅಲ್ದಾ !' ಎಂದು ತುಟಿಗಳನ್ನು ಚಾಚುತ್ತ, ತಲೆಯಲ್ಲಾಡಿಸಿದನು.

"ನಿಮಗೆಷ್ಟು ಬೇಕೋ ಅಷ್ಟು ಮಾಂವ್ಸ ಕೊಡ್ತೀವಿ. ಅರ್ಧ ಹೋಂತ ಆದ್ರೆ ಅರ್ಧ ಹೋಂತ ! ಒಂದು ಮನಸ್ಸುಮಾಡಿ ನೋಡಿ ! ಏನೋ ನಾಲ್ಕು ಜನಕ್ಕೆ ಉಪಕಾರ ಆಗ್ತದೆ !" ಎಂದು ತಿಮ್ಮ ತಿಂಡಿ ಹಾಕಿ ಗಾಣ ಬೀಸಿದನು.

ಮಾಂಸ ! ಎಷ್ಟು ಬೇಕೋ ಅಷ್ಟು ! ಸೋಮನ ಮನಸ್ಸು ತಡೆಯಲಾರದೆ ಹೋಯಿತು ! ಸಾಧ್ಯ ಅಸಾಧ್ಯ ಎಂಬುದಾವುದೂ ಅವನ ಮನಸ್ಸಿಗೆ ಬರಲಿಲ್ಲ.

"ಹೋಗೋ ! ಹೋಗೋ ! ನಿನ್ನ ಮಾಂವ್ಸ ಯಾರಿಗೆ ಬೇಕು ? ತಗೊಂಡು ಹೋಗಿ ನಾಯಿಗೆ ಹಾಕು ! ನಾನೇನು ಮಾಂವ್ಸಕ್ಕೆ ಸಾಯ್ತೀನಿ ಅಂತಾ ಮಾಡೀಯೇನು ? . . . ಅದು ಹಾಂಗಿರಲಿ ? ಭೂತಕ್ಕೆ ಬಲಿ ಕೊಡದಿದ್ದರೆ ನಮಗೆ ಊರು ಕಾಂಬುದಿಲ್ಲ ! ನಾಲ್ಕು ಜನಕ್ಕೆ ಉಪಕಾರ ! ಒಂದು ಕೈಕಾಂಬುದಪ್ಪಾ ! ನೋಡ್ತೀನಿ ! . . . ಆದರೆ ನೀವೂ ಸಹಾಯ ಮಾಡಬೇಕು" ಎಂದು ಮಾಂಸಲೋಭಿ ಸೋಮ ಒಪ್ಪಿಕೊಳ್ಳಲು ಉಳಿದವರಿಗೆ ದಿಗ್ವಿಜಯ ಮಾಡಿದಂತೆ ಆನಂದವಾಯಿತು.

ಮರುದಿನ ರಾತ್ರಿ ಕೆಳಕಾನೂರಿಗೆ ಹೋಗಿ ಹೋತವನ್ನು ಕದ್ದು ತರುವುದೆಂದು ಗೊತ್ತಾಯಿತು: ಸೋಮನು ಹೋತವನ್ನು ಕೊಟ್ಟಿಗೆಯಿಂದ ಬಿಚ್ಚಿ ಬಳಿಯ ಕಾಡಿಗೆ ತರುವುದು; ಮುಂದಿನ ಕಾರ್ಯಗಳನ್ನೆಲ್ಲ ಸೇರೆಗಾರರೂ ಇತರರೂ ನೋಡಿಕೊಳ್ಳುವುದು; ಸೋಮನಿಗೆ ಸಾಕಾಗುವಷ್ಟು ಮಾಂಸವನ್ನು ಪ್ರತಿಫಲವಾಗಿ ಸಲ್ಲಿಸುವುದು.

ರಾತ್ರಿ ಕಳೆಯಿತು. ಬೆಳಿಗ್ಗೆ ಕಳೆಯಿತು. ಹಗಲೂ ಕಳೆಯಿತು. ಮತ್ತೆ ರಾತ್ರಿ ಬಂದಿತು. ಸಾಹಸಕ್ಕೆ ಸಕಲ ಸನ್ನಾಹಗಳೂ ಸಿದ್ಧವಾದುವು. ಸುಮಾರು ಹತ್ತು ಗಂಟೆಯ ಹೊತ್ತಿಗೆ ಸೇರೆಗಾರರು, ನಿಂಗ, ತಿಮ್ಮ, ಸಿದ್ದ, ಸೋಮ ಇಷ್ಟು ಜನರೂ ಕೆಳಕಾನೂರಿಗೆ ಗುಸುಗುಸು ಮಾತಾಡುತ್ತಾ ಹೊರಟರು. ಕೆಲವರ ಕೈಯಲ್ಲಿ ಕತ್ತಿ, ಕೆಲವರ ಕೈಯಲ್ಲಿ ದೊಣ್ಣೆ. ಸೋಮನ ಕೈಯಲ್ಲಿ ಹತ್ತಾರು ಮಾರು ಉದ್ದವಾಗಿದ್ದ ಕತ್ತದ ನೇಣಿನ ಸುರುಳಿ.

ಸ್ವಲ್ಪ ದೂರ ಹೋಗುವುದರಲ್ಲಿ ಹಿಂದಿನಿಂದ ಗಂಗೆ ಓಡಿಬಂದು ಪಿಸು ಮಾತಿನಲ್ಲಿ "ರೊಟ್ಟಿ !" ಎಂದು ಸೋಮನ ಕೈಯಲ್ಲಿ ಗಮಗಮನೆ ಸುವಾಸನೆ ಬರುತ್ತಿದ್ದ ಆ ಪದಾರ್ಥವನ್ನು ಕೊಟ್ಟು ಹೋದಳು.

ಇತರರು ಕೆಳಕಾನೂರು ಮನೆಗೆ ಸ್ವಲ್ಪ ದೂರದಲ್ಲಿ ಕಾಡು, ಪೊದೆ, ಮುಂಡುಗದ ಹಿಂಡಿಲುಗಳಲ್ಲಿ ಅಡಗಿ ನಿಂತಮೇಲೆ ಸೋಮನೊಬ್ಬನೆ ಕೈಯಲ್ಲಿ ನೇಣುರೊಟ್ಟಿಗಳನ್ನು ಹಿಡಿದುಕೊಂಡು ಹುಷಾರಾಗಿ ಮುಂದುವರಿದನು.

ನಕ್ಷತ್ರ ಕಾಂತಿ ಸ್ವಲ್ಪವಿದ್ದರೂ ಕತ್ತಲೆ ಕಳ್ಳನ ಮನಸ್ಸಿನಂತಿತ್ತು. ಸೋಮ ಕಂಬಳಿಯನ್ನು ಬಲವಾಗಿ ಸುತ್ತಿ ಹೊದೆದುಕೊಂಡು ಕಾರ್ಯಕ್ರಮವನ್ನು ವ್ಯೂಹಿಸುತ್ತಾ ಬೆಳೆದು ನಿಂತಿದ್ದ ಗದ್ದೆಯಂಚುಗಳ ಮೇಲೆ ಹಾದು ಮನೆಯ ಸಮಿಾಪಕ್ಕೆ ಬಂದನು. ನಾಯಿಯೊಂದು ಬೊಗುಳಿತು. ಇದ್ದಕ್ಕಿದ್ದಂತೆ ಸೋಮನ ಸ್ವಸ್ವರೂಪವಾದ ಹೇಡಿತನ ತಲೆಹಾಕಿತು. ಇತರರ ಮುಂದೆ ಇದ್ದಾಗ ತಾನು ಮಾಡಬೇಕಾಗಿದ್ದ ಕಾರ್ಯದ ಕಷ್ಟವನ್ನು ಅವನು ಸ್ಪಷ್ಟವಾಗಿ ಚಿತ್ರಿಸಿಕೊಂಡಿರಲಿಲ್ಲ. ನಾಯಿ ಬಗುಳಿದೊಡನೆಯೆ ತಾನು ಕೈಕೊಂಡಿದ್ದ ವಿಪರೀತ ಸಾಹಸದ ಅವಿವೇಕ ಅಪಾಯಗಳೆಲ್ಲವೂ ಕಣ್ಣಿನೆದುರು ಕರಾಳಮೂರ್ತಿಗಳಾಗಿ ಹಲ್ಲುಕಿರಿಯತೊಡಗಿದುವು.

'ನನಗೆ ಯಾಕೆ ಬೇಕಿತ್ತು ಈ ಕೆಲಸ?' ಎಂದುಕೊಂಡು ಹಿಂತಿರುಗಿ ನೋಡಿದನು. ಜೊತೆಗಾರರೆಲ್ಲ ದೂರದಲ್ಲಿ ಸುರಕ್ಷಿತವಾಗಿ ಕತ್ತಲೆಯಲ್ಲಿ ಅಡಗಿದ್ದರು. ಸೋಮ ಮುಂಬರಿಯದೆ ನಿಂತು ಆಲೋಚಿಸತೊಡಗಿದನು.

ನಾಯಿಗಳೆರಡು ಬಗುಳುತ್ತಿದ್ದುವು. ಧ್ವನಿಭೇದದಿಂದ ಒಂದು ರೋಜಿ ಮತ್ತೊಂದು ಕೊತ್ವಾಲ ಎಂಬುದು ಕೂಡ ಸೋಮನಿಗೆ ಗೊತ್ತಾಯಿತು. ಮಾಂಸ! ಅರ್ಧ ಹೋತದ ಮಾಂಸ! ತನಗೊಬ್ಬನಿಗೇ! ಉಪ್ಪುತುಂಡು! ಹುರಿತುಂಡು! ಕಡೆಯಪಕ್ಷ ಎರಡು ಮೂರು ದಿನಗಳಾದರೂ ಕೂತುಕೊಂಡು ತಿನ್ನಬಹುದು! ಮಾಂಸದ ಸ್ವರ್ಗವನ್ನು ನೆನೆದೊಡನೆ ಸೋಮನಿಗೆ ಹೃಚ್ಛಕ್ತಿ ಬಂದಂತಾಗಿ ತುಟಿ ಕಚ್ಚಿಕೊಂಡು ಮುಂದುವರಿದನು. ನಾಯಿಗಳು ಗಟ್ಟಿಯಾಗಿ ಬಗಳುತ್ತಾ ಓಡಿಬಂದುವು. ಸೋಮ ಅವುಗಳ ಹೆಸರನ್ನು ಹಿಡಿದು ಮೆಲ್ಲಗೆ ಕೂಗಿ ಕರೆದನು. ಆ ನಾಯಿಗಳಿಗೆ ಸೋಮನ ಪರಿಚಯ ಚೆನ್ನಾಗಿತ್ತು. ಮಾಂಸ ಲೋಭದ ಸ್ವಭಾವಸಾದೃಶ್ಯದಿಂದಲೋ ಏನೋ ಅವುಗಳೆಲ್ಲವೂ ಅವನಲ್ಲಿ ಸಲಿಗೆಯಿಂದಿದ್ದುವು. ಅವನ ಕೈಯಲ್ಲಿದ್ದ ಉಪ್ಪುಮಿಾನಿನ ರೊಟ್ಟಿಯ ವಾಸನೆಯೂ, ಅಧಿಕಾರಿಯ ಕೈಗೆ ಲಂಚಬೀಳುವಂತೆ, ನಾಯಿಗಳ ಮೂಗಿಗೆ ಬಿದ್ದಿತು. ಬಾಲ ವಲ್ಲಾಡಿಸುತ್ತ ಹತ್ತಿರ ಬಂದುವು. ಸೋಮ ರೊಟ್ಟಿಯನ್ನು ಚೂರುಚೂರಾಗಿ ಮುರಿದು ಹಾಕಿದನು. ತಾನೂ ನಾಲ್ಕಾರು ಚೂರುಗಳನ್ನು ತಿನ್ನದೆ ಇರಲಾಗಲಿಲ್ಲ!

ನಾಯಿಗಳನ್ನು ವಶಪಡಿಸಿಕೊಂಡ ಸೋಮ ಹೋತವನ್ನು ಕಟ್ಟುತ್ತಿದ್ದ ಜಾಗಕ್ಕೆ ಜಾಗರೂಕನಾಗಿ ಸಾಗಿದನು. ನಿರೀಕ್ಷಿಸಿದ ಜಾಗದಲ್ಲಿಯೆ ಹೋತವಿತ್ತು.

ನಾಯಿಗಳನ್ನೂ ಮನುಷ್ಯನನ್ನೂ ಕಂಡು ಅದು ದಿಗಿಲು ಬಿದ್ದು ಕುಣಿದಾಡಿತು. ಸೋಮು ತಾನು ವ್ಯೂಹಿಸಿದಂತೆ ಕೆಲಸ ನಡೆಸಲು ಕೈ ಚುರುಕುಮಾಡಿದನು.

ಅದರ ಕೊರಳ ಕಣ್ಣಿಯನ್ನು ಬಿಚ್ಚುವ ಮೊದಲು ತಾನು ತಂದಿದ್ದ ನೇಣಿನ ತುದಿಯನ್ನು ಉರುಳುಮಾಡಿ ಕುತ್ತಿಗೆಗೆ ಬಿಗಿದನು. ಬಿಚ್ಚಿದಮೇಲೆ ತನ್ನ ಕೈ ನೇಣನ್ನೂ ಎಳೆದು ನುಣಚಿಕೊಂಡು ಹೋದೀತೆಂಬ ಭಯದಿಂದ ನೇಣಿನ ಮತ್ತೊಂದು ತುದಿಯನ್ನು ತನ್ನ ಸೊಂಟಕ್ಕೆ ಎಂದು ಡೊಳ್ಳು ಹೊಟ್ಟೆಗೆ ಬಲವಾಗಿ ಕಟ್ಟಿಕೊಂಡನು. ಆಮೇಲೆ ಹೋತದ ಕೊರಳು ಕಣ್ಣಿಯ ಕುಣಿಕೆಯನ್ನು ಬಿಚಿ ಜಗ್ಗುತ್ತಿದ್ದ ಹೋತವನ್ನು ಹೊರಗೆ ಎಳೆತಂದನು.

ಹೋತಕ್ಕೂ ಸೋಮನಿಗೂ ಎಳೆದಾಟ ಹತ್ತಿತು. ಹೋತ ಮನೆಯ ಕಡೆಗೆ ಎಳೆಯಿತು. ಸೋಮ ಕಾಡಿನ ಕಡೆಗೆ ಎಳೆದನು. ಹೋತದ ಕಾಲಿನ ಕೊಳಗು ಗಳ ಸದ್ದೂ ಡೊಳ್ಳು ಸೋಮನ ಉಸಿರಾಡುವ ಸದ್ದೂ ಹೆಚ್ಚಾಗಲು ಸುತ್ತಲಿದ್ದ ನಾಯಿಗಳೂ ಸ್ವಾಭಾವಿಕವಾಗಿ ಮನುಷ್ಯನ ಪಕ್ಷವನ್ನೇ ವಹಿಸಿ ಹೋತವನ್ನು ಕುರಿತು ಬಗುಳುತ್ತಾ ಮೇಲ್ವಾಯ್ದುವು. ಬಲಿಷ್ಠವಾದ ಕರಿಯ ಹೋತ ಮತ್ತೂ ಉದ್ರೇಕಗೊಂಡು ಮನೆಯ ಕಡೆಗೆ ಜಗ್ಗಿ ಎಳೆಯಿತು. ಸೋಮ ಎಳೆದೂ ಎಳೆದೂ ಸೋತು ಕಾಲು ಜಾರಿ, ಹಿಡಿದಿದ್ದ ಹಗ್ಗವನ್ನು ಕೈಬಿಟ್ಟನು. ಆದರೆ, ಗ್ರಹಚಾರ ! ಹಗ್ಗ ಅವನನ್ನು ಕೈಬಿಡಲಿಲ್ಲ. ಸೋಮ ಅದರ ಒಂದು ತುದಿಯನ್ನು ಹೋತವೆಲ್ಲಿಯಾದರೂ ತಪ್ಪಿಸಿಕೊಂಡು ಹೋದೀತೆಂಬ ಶಂಕೆ ಯಿಂದ ತನ್ನ ಸೊಂಟಕ್ಕೆ ಗಂಟುಹಾಕಿ ಬಿಗಿದುಕೊಂಡಿದ್ದನು ! ಬಿಗಿದುಕೊಳ್ಳು ವಾಗ ಹೋತ ತಪ್ಪಿಸಿಕೊಳ್ಳಬಾರದೆಂಬ ಭಾವವೊಂದು ಮಾತ್ರ ಅವನಲ್ಲಿದ್ದಿತೆ ಹೊರತು, ಹೋತ ಎಲ್ಲಿಯಾದರೂ ತನ್ನನ್ನೇ ಎಳೆದರೇನು ಗತಿ ಎಂಬ ಆಲೋ ಚನೆ ತಲೆಗೆ ಬಂದಿರಲಿಲ್ಲ. ಅಷ್ಟು ನಿರ್ಧಾರವಿತ್ತು ಅವನಿಗೆ ತನ್ನ ಶಕ್ತಿಯಲ್ಲಿ ! ತನ್ನ ದೃಷ್ಟಿಯಿಂದ ಸ್ವಪಕ್ಷಪಾತವಾಗಿ ವ್ಯೂಹರಚನೆ ಮಾಡಿಕೊಂಡಿದ್ದನೇ ಹೊರತು, ಹೋತದ ದೃಷ್ಟಿಯನ್ನು ಸಂಪೂರ್ಣವಾಗಿ ನಿರ್ಲಕ್ಷಿಸಿದ್ದನು.

ಯಾವಾಗ ಸೋಮ ಹಗ್ಗವನ್ನು ಕೈಬಿಟ್ಟನೊ ಇಲ್ಲವೊ ಸುತ್ತಲೂ ಮುತ್ತಿ ಬಗುಳಿ ತನ್ನನ್ನು ಪೀಡಿಸುತ್ತಿದ್ದ ನಾಯಿಗಳಿಂದ ಪಾರಾಗಿ ಓಡಿ ಹೋಗುವ ಉದ್ದೇಶದಿಂದಲೂ ಉದ್ವೇಗದಿಂದಲೂ 'ಬಲೀಂದ್ರ' ತನ್ನ ಸಾಮರ್ಥ್ಯವನ್ನೆಲ್ಲ ವೆಚ್ಚಮಾಡಿ ನೆಗೆದು ಹಾರಿ ಇಳಿಜಾರಿನ ಕಡೆ ಜಗ್ಗಿ ಎಳೆಯಿತು. ಡೊಳ್ಳು ಹೊಟ್ಟೆಯ ಬಡಕಲು ಸೋಮ ಘುಕ್ಕೆಂದು ಮುಂದಕ್ಕೆ ಮುಗ್ಗುರಿಸಿದಂತಾಗಿ ಉರುಳಿದನು. ಹೊದೆದಿದ್ದ ಕಂಬಳಿ ಬಿದ್ದುಹೋಗಿ, ಬತ್ತಲೆ ಮೈ ನೆಲಕ್ಕುರುಳಿ, ಕಲ್ಲಿನ ಮೇಲೆ ಕೀಸಿತು. ಮೊಳಕಾಲಿನವರೆಗೆ ಸುತ್ತಿದ ಸೊಂಟದ ಪಂಚೆಯೂ

ಹರಿಯಿತು. ಭೂಸ್ಪರ್ಶಮಾಡಿದ್ದ ದೇಹಭಾಗಕ್ಕೆ ತುರಿಮಣೆಯಲ್ಲಿ ತೆಂಗಿನಕಾಯಿ ತುರಿದಂತಾಯಿತು. ಹೋತ ಎಳೆಯುತ್ತಿದ್ದ ನೇಣಿನುರುಳು ಡೊಳ್ಳಿನ ಸುತ್ತ ಬಿಗಿದು ಉಸಿರು ಉಬ್ಬಸವಾಯಿತು! ಇಳಿಜಾರಾಗಿದ್ದ ಕಲ್ಲುಕಲ್ಲು ನೆಲದಲ್ಲಿ ಹೋತ ಸೋಮನನ್ನು ತನ್ನ ಕೊರಳಿಗೆ ಉದ್ದವಾದ ಹಗ್ಗದಿಂದ ಕಟ್ಟಿದ್ದ ಕುಂಟೆ ಯೋಪಾದಿಯಲ್ಲಿ ದರದರನೆ ಎಳೆಯಿತು. ಸೋಮ ಎದ್ದು ನಿಲ್ಲಬೇಕೆಂದು ಮಾಡಿದ ಪ್ರಯತ್ನಕ್ಕೆ ಅವಕಾಶವಾಗಲಿ ಅನುಕೂಲವಾಗಲಿ ಒಂದಿನಿತೂ ದೊರೆಯ ಲಿಲ್ಲ. ಕೈಗೆ ಸಿಕ್ಕ ಒಂದು ಸಣ್ಣ ಗಿಡವನ್ನು ತಬ್ಬಿ ಹಿಡಿದರೆ ಅದೂ ಕಿತ್ತು ಹೋಯಿತು. ಮತ್ತೊಂದು ಗಿಡವನ್ನು ಹಿಡಿದನು. ಅದು ಮುಳ್ಳಿನ ಗಿಡ ವಾಗಿತ್ತು! ಫಕ್ಕನೆ ಕೈಬಿಟ್ಟನು. ಅಷ್ಟರಲ್ಲಿ ಗೊಬ್ಬರದ ಗುಂಡಿಯ ಮೇಲ್ಭಾಗ ದಲ್ಲಿದ್ದ ತೊಂಡೆಯ ಚಪ್ಪರಕ್ಕೆ ಹಾಕಿದ್ದ ಬಿದಿರು ಕಂಬವೊಂದು ಕೈಗೆ ಸಿಕ್ಕಿತು. ಅದನ್ನು ಬಲವಾಗಿ ಭದ್ರಮುಷ್ಟಿಯಿಂದ ಹಿಡಿದು ಎದ್ದು ನಿಲ್ಲಲು ಪ್ರಯತ್ನಿಸಿದನು. ಹೋತ ಎಳೆಯುತ್ತಲೇ ಇತ್ತು. ಕತ್ತದ ಕಣ್ಣಿ ಡೊಳ್ಳು ಹೊಟ್ಟೆಯನ್ನು ಕೀಸಿ ಕೀಸಿ ಕೊಯ್ಯುತ್ತಿತ್ತು. ಯಮಯಾತನೆಯನ್ನು ಹಲ್ಲುಕಚ್ಚಿ ಸಹಿಸಿಕೊಂಡು ಮೇಲೆದ್ದು ಕಾಲಮೇಲೆ ನಿಲ್ಲಲು ಮಹಾಸಾಹಸ ಮಾಡಿದನು. ಇದ್ದಕ್ಕಿದ್ದ ಹಾಗೆ ಒರಲೆ ಹಿಡಿದು ಬುಡ ಶಿಥಿಲವಾಗಿದ್ದ ಆ ಬಿದಿರು ಕಂಬವೂ ಲಟಲಟನೆ ಮುರಿ ಯಿತು. ಚಪ್ಪರದ ಮೇಲಿದ್ದ ಒಂದು ಸತುವಿನ ತಗಡು ಥಣ್ ಥಣ್ ಥಣಾರನೆ ಇಡೀ ಚಪ್ಪರದೊಡನೆ ಉರುಳಿತು. ನಾಯಿಗಳೂ ಕೂಗಿದುವು. ಹೋತವೂ ಅರಚತೊಡಗಿತು. ಕಳ್ಳತನ ದರೋಡೆಗಿಂತಲೂ ಶಬ್ದಮಯವಾಯಿತು!

ಹೋತ ಮತ್ತೊಂದು ಸಾರಿ ಝಗ್ಗಿಸಿ ಎಳೆದ ಹೊಡೆತಕ್ಕೆ ಸೋಮ ಗೊಬ್ಬ ರದ ಗುಂಡಿಗೆ ಧುಸುಕ್ಕನೆ ಉರುಳಿದನು. 'ಬಲೀಂದ್ರ' ದಡದಮೇಲೆ ಮುಂಬ ರಿಯಲಾರದೆ ಮುಂಬರಿಯಲು ಪ್ರಯತ್ನಿಸುತ್ತಾ ಅರಚುತ್ತಾ ನಿಂತಿತು. ಅಷ್ಟ ರಲ್ಲಿ ಮನೆಯ ಜನರ ಗಲಭೆ ಕೇಳಿಸಿ, ದೀಪದ ಬೆಳಕೂ ತೋರಿತು.

"ಹಿಡೀ! ಥೂ! ಬಿಡಬೇಡ!" ಎಂದು ತುಮುಲವಾಗಿ ಕೂಗುತ್ತಾ ಬಂದೂಕವನ್ನು ಕೈಯಲ್ಲಿ ಹಿಡಿದು ಪುಟ್ಟಣ್ಣನೂ, ಅವನ ಹಿಂದೆ ಹೂವಯ್ಯ, ಸೀತೆಮನೆ ಸಿಂಗಪ್ಪ ಗೌಡರೂ ನುಗ್ಗಿಬಂದರು.

ಆ ದಿನ ಮಧ್ಯಾಹ್ನ ಕೆಳಕಾನೂರಿಗೆ ಬಂದಿದ್ದ ಸಿಂಗಪ್ಪಗೌಡರು ಅಲ್ಲಿಯೆ ಉಳಿದುಕೊಂಡಿದ್ದರು. ಹೂವಯ್ಯನೂ ಅವರೂ ಆ ರಾತ್ರಿ ಹತ್ತುಗಂಟೆಯ ತನಕ ಮಾತಾಡುತ್ತಿದ್ದು ಮಲಗಿದ್ದರು. ದೀಪ ಆರಿಸಿ ಮಲಗಿದ ಮೇಲೆಯೂ ಮಾತಾಡುತ್ತಲೇ ಇದ್ದರು. ಹೂವಯ್ಯನಿಗೆ ಇನ್ನೂ ಸರಿಯಾಗಿ ನಿದ್ದೆ ಹತ್ತಿರ ಲಿಲ್ಲ. ಅಷ್ಟರಲ್ಲಿ ನಾಯಿ ಮೊದಲನೆಯ ಸಾರಿ ಬಗುಳಿದುವು. ನಿತ್ಯವೂ

ಹಾಗಾಗುತ್ತಿದ್ದುದರಿಂದ ಅದರಲ್ಲಿ ವಿಶೇಷತೆಯೇನೂ ತೋರಲಿಲ್ಲ. ಯಾವುದೊ ಎತ್ತೊ ದನವೊ ಗದ್ದೆಗೆ ನುಗ್ಗಿರಬಹುದು; ಅಥವಾ ಹಂದಿ ಗಿಂದಿ ಬಂದಿರಬಹುದು; ಅಥವಾ ಕುರ್ಕದ (ನಾಯಿ ಚಿರತೆ) ವಾಸನೆ ಬಿದ್ದಿರಬಹುದು ಎಂದುಕೊಂಡು ಮಗ್ಗುಲಿಗೆ ತಿರುಗಿ ಮಲಗಿದನು. ನಾಯಿಗಳ ಸದ್ದು ಸಂಪೂರ್ಣವಾಗಿ ಅಡಗಿತು. ತುಸು ಹೊತ್ತಿನಲ್ಲಿಯೆ ದನದ ಹಟ್ಟಿಯ ಬಳಿ ಏನೋ ಸದ್ದಾದಂತಾಗಿ ಆಲಿಸಿದನು. ಕೊಳಗಿನ ಸದ್ದು ! ಹೋರಾಟದ ಸದ್ದು ! ಹುಲಿಗಿಲಿ ಬಂದು ದನವನ್ನು ಹಿಡಿಯಿತೆ? ಅಥವಾ ಪೋಲಿ ಗೂಳಿಗಳು ಕೋಡಾಟ ಆಡುತ್ತಿವೆಯೆ? ಯೋಚಿಸುತ್ತಿದ್ದ ಹಾಗೆಲ್ಲ ನಾಯಿಗಳೆಲ್ಲ ಅಬ್ಬರಿಸಿ ಹಂದಿಯನ್ನು ತಡೆದಂತೆ ಕೂಗಿದುವು. ಹೋತವೂ ಒಂದುಸಾರಿ ಗಟ್ಟಿಯಾಗಿ ಅರಚಿದಂತಾಯಿತು.

ಪಕ್ಕದ ಹಾಸಗೆಯಲ್ಲಿದ್ದ ಸಿಂಗಪ್ಪಗೌಡರನ್ನು "ಕಕ್ಕಯ್ಯ ! ಕಕ್ಕಯ್ಯ !" ಎಂದು ಗಟ್ಟಿಯಾಗಿ ಕರೆಯುತ್ತ ಮೈಮುಟ್ಟಿ ನೂಕಿದನು.

ಅವರಂತೂ ದಿಗಿಲುಬಿದ್ದೆದ್ದು ಉಸಿರು ಮೇಲೆಕೆಳಗಾಗಿ "ಞ್ಞ ! ಞ್ಞ ! ಏನು? ಏನು?" ಎಂದರು.

"ಹುಲಿ ಬಿದ್ದಿದೆ ಅಂತ ಕಾಣ್ತದೆ ಕೊಟ್ಟಿಗೆಗೆ !... ಪುಟ್ಟಣ್ಣಾ ! ಏ ಪುಟ್ಟಣ್ಣಾ ! ಕೋವಿ ತಗೊಳ್ಳೊ ! ಕೋವಿ ತಗೊಳ್ಳೊ !... ಹುಲಿ ಬಿದ್ದದೆ ಕೊಟ್ಟಿಗೆಗೆ !.."

ಪುಟ್ಟಣ್ಣ ಏಳುವುದರೊಳಗೆ ಹೂವಯ್ಯ ಲಾಟೀನು ಹೊತ್ತಿಸಿ ಬಾಗಿಲು ತೆರೆದನು. ಅಷ್ಟರಲ್ಲಿಯೆ ಎಚ್ಚತ್ತು ಜಗಲಿಗೆ ನುಗ್ಗಿ ಬಂದಿದ್ದ ನಾಗಮ್ಮನವರು "ತಡಿಯೋ ತಡಿಯೋ ! ನೀ ಮುಂದೆ ಹೋಗಬ್ಯಾಡ ! ಪುಟ್ಟಣ್ಣ ಬರಲಿ" ಎಂದು ಪುಟ್ಟಣ್ಣನನ್ನು ಕೂಗಿದರು.

ಅಷ್ಟರಲ್ಲಿ ತೊಂಡೆಯ ಚಪ್ಪರ ಮುರಿದು ಬಿದ್ದ ಸದ್ದೂ, ಸತುವಿನ ತಗಡು ಬಿದ್ದ ಸದ್ದೂ, ನಾಯಿಗಳ ಬೊಬ್ಬೆಯೂ, ಹೋತದ ಅರಚುವಿಕೆಯೂ ಕೇಳಿಸಿ, ಹುಲಿಗೂ ಎತ್ತಿಗೂ ಮಾರಾಮಾರಿಯಾಗುತ್ತಿದೆ ಎಂಬುದರಲ್ಲಿ ಯಾರಿಗೂ ಸಂದೇಹವಾಗಲಿಲ್ಲ. ಕಳ್ಳರೆಂಬ ಭಾವನೆ ಮಾತ್ರ ಕನಸಿನಲ್ಲಿಯೂ ಮಿಂಚಲಿಲ್ಲ. ಅಲ್ಲಿಗೆ ಯಾವ ಕಳ್ಳ ಬರಬೇಕು?

ಎಲ್ಲಿ ಹುಡುಕಿದರೂ ಎತ್ತಾಗಲಿ ಹುಲಿಯಾಗಲಿ ಕಾಣಿಸಲಿಲ್ಲ. ಯಾರಿಗೂ ವಿಚಾರವೇನೆಂದು ಹೊಳೆಯಲಿಲ್ಲ. ಆಶ್ಚರ್ಯವಾಯಿತು. ಕಡೆಗೆ ಪುಟ್ಟಣ್ಣ ಗೊಬ್ಬರದ ಗುಂಡಿಯ ಏರಿಯಮೇಲೆ ನಿಂತಿದ್ದ ಹೋತನನ್ನು ಲಾಟೀನಿನ ಮಬ್ಬು ಬೆಳಕಿನಲ್ಲಿ ದೂರದಿಂದಲೆ ನೋಡಿ "ಅಲ್ಲಿ ನೋಡಿ ! ಆ ಹೋಂತ ಬೆದರಿ ಕಣ್ಣೆಕಿತ್ತುಕೊಂಡು ಬಂದು ನಿಂತದೆ !" ಎಂದು ಹೇಳಿ, ಅದನ್ನು ಕೊಟ್ಟಿಗೆಗೆ

ಅಟ್ಟಲೆಂದು ಬಳಿಸಾರಿ 'ಷ್ಬೂ!' ಎಂದನು. ಹೋತ ಮುಂಬರಿಯಲು ಪ್ರಯತ್ನಿಸಿತೇ ಹೊರತು ಹೆಜ್ಜೆಯಿಡಲಿಲ್ಲ.

"ಇದಕ್ಕೇನಾಗಿದೆಯೊ ದಾಡಿ?" ಎಂದು ಮತ್ತೆ "ಷ್ಬೂ! ಷ್ಬೂ!" ಎಂದು ಅಟ್ಟಿದನು. ಆದರೂ ಅದು ಚಲಿಸಲಿಲ್ಲ.

ಹತ್ತಿರಕ್ಕೆ ಬಂದು ಹೋತದ ಕೊರಳಿನಲ್ಲಿದ್ದ ನೇಣಿಗೆ ಕೈಹಾಕಿ, ಅದರ ತುದಿ ಯಾವುದೋ ಗಿಡಕ್ಕೆ ಸಿಕ್ಕಿರಬೇಕೆಂದು ಊಹಿಸಿ ಎಳೆದನು. ಮಳೆಗಾಲದಲ್ಲಿ ನೀರು ನಿಂತು ಸೆಗಣಿಯೆಲ್ಲ ಕಲಸಿದಂತಾಗಿ ಕೆಸರಿನ ಕೊಳದಂತೆ ದುರ್ವಾಸನೆ ತುಂಬಿದ್ದ ಗೊಬ್ಬರಗುಂಡಿಯಲ್ಲಿ ಏನೋ ಭಾರವಾದ ತೊಲೆಯನ್ನು ಎಳೆದಂತೆ ಪಚಪಚನೆ ಸದ್ದಾಯಿತು. ಅಷ್ಟರಲ್ಲಿ ಸಮೀಪಿಸುತ್ತಿದ್ದ ಹೂವಯ್ಯನ ಕೈಲಿದ್ದ ಲಾಟೀನಿನ ಬೆಳಕಿನಲ್ಲಿ ಗೊಬ್ಬರ ಗುಂಡಿಯಲ್ಲಿ ಮನುಷ್ಯಾಕೃತಿ ಗೋಚರಿಸಿ ಪುಟ್ಟಣ್ಣನ ಎದೆಯಲ್ಲಿ ರಕ್ತ ಹೆಪ್ಪುಗಟ್ಟಿದಂತಾಗಿ ಹೂವಯ್ಯನಿಂದ ಲಾಟೀನು ಇಸುಕೊಂಡು ಕೆಳಗಿಳಿದು ನೋಡುತ್ತಾನೆ: ಸೋಮ ಸೆಗಣಿಗೆಸರಿನಲ್ಲಿ ಅದ್ದಿ ಬಿದ್ದಿದ್ದಾನೆ! ದೈವವಶದಿಂದ ತಲೆ ಏರಿಯ ಗಟ್ಟಿನೆಲಕ್ಕೆ ಢಿಕ್ಕಿ ಹೊಡೆದು ಸಿಕ್ಕಿಕೊಂಡಂತಿದೆ! ಇಲ್ಲದಿದ್ದರೆ ಉಸಿರು ಕಟ್ಟಿ ಸಾಯುತ್ತಿದ್ದನು!

"ಈ ಮುಂಡೇಮಗನಿಂದ ಸುಖವಿಲ್ಲವಪ್ಪಾ!" ಎಂದು ಪುಟ್ಟಣ್ಣ ಸೋಮನ ದೇಹವನ್ನು ಏರಿಯ ಮೇಲಕ್ಕೆ ಎತ್ತಿ ತಂದು ಡೊಳ್ಳಿಗೆ ಬಿಗಿದಿದ್ದ ನೇಣನ್ನು ಬಿಚ್ಚಿದನು! ಹೋತ ನೇಣಿನೊಡನೆ ಅರಚುತ್ತಾ ಕೊಟ್ಟಿಗೆಗೋಡಿತು.

ಸೋಮನಿಗೆ ಪ್ರಜ್ಞೆಯಿರಲಿಲ್ಲ. ಮುಖ ನೆಲಕ್ಕೆ ಕೀಸಿಕೀಸಿ ರಕ್ತಮಯ ವಾಗಿತ್ತು. ಮೈಯೆಲ್ಲ ಅಸಹ್ಯವಾಗಿ ಸೆಗಣಿಗೆಸರು ಮೆತ್ತಿಕೊಂಡಿದ್ದರಿಂದ ಗಾಯಗಳಾಗಲಿ ರಕ್ತವಾಗಲಿ ಗೋಚರಿಸಲಿಲ್ಲ.

ಸಿಂಗಪ್ಪಗೌಡರು ಲಾಟೀನನ್ನೂ ಬಂದೂಕನ್ನೂ ಹಿಡಿದುಕೊಂಡರು. ಹೂವಯ್ಯ ಪುಟ್ಟಣ್ಣರಿಬ್ಬರೂ ಸೋಮನನ್ನು ಸ್ನಾನದ ಮನೆಗೆ ಹೊತ್ತುಕೊಂಡು ಹೋಗಿ, ಗಾಳಿ ಬೀಸಿ, ಶೈತ್ಯೋಪಚಾರ ಮಾಡಿದ ಮೇಲೆ ಕಣ್ಣನ್ನೇನೊ ತೆರೆದನು. ಆದರೆ ದೃಷ್ಟಿ ಶೂನ್ಯವಾಗಿತ್ತು.

ಕೈಲಾದಮಟ್ಟಿಗೆ ಅವನ ಮೈಯನ್ನೆಲ್ಲ ತೊಳೆದು, ಗಾಯಗಳಿಗೆ ತೆಂಗಿನೆಣ್ಣೆ ಬಳಿದು, ಬೇರೆ ಬಟ್ಟೆಗಳನ್ನು ಉಡಿಸಿ, ಒಳಗೆ ತಂದು ಹಾಸಗೆಯಲ್ಲಿ ಬೆಚ್ಚಗೆ ಮಲಗಿಸಿದರು. ಗಟ್ಟಿಯಾಗಿ ಉಸಿರಾಡುತ್ತಿದ್ದವನು ಸ್ವಲ್ಪ ಹೊತ್ತಿನಲ್ಲಿ ಭಯಂಕರವಾಗಿ ನರಳತೊಡಗಿದನು.

ಆ ರಾತ್ರಿ ಕೆಳಕಾನೂರಿನಲ್ಲಿ ಯಾರೂ ನಿದ್ದೆ ಮಾಡಲಾಗಲಿಲ್ಲ. ಸಿಂಗಪ್ಪ ಗೌಡರ ಸೂಚನೆಯಂತೆ ಪುಟ್ಟಣ್ಣ ಸುಮಾರು ಎರಡು ಮೈಲಿ ದೂರದಲ್ಲಿದ್ದ

ಕಳ್ಳಂಗಡಿಗೆ ಇರುಳಿನಲ್ಲಿಯೇ ಹೋಗಿ, ಅಲ್ಲಿದ್ದವರಿಗೆಲ್ಲಾ ಗಾಬರಿಯಾಗುವಂತೆ ಅವರನ್ನೆಚ್ಚರಿಸಿ, ಸ್ವಲ್ಪ ಬ್ರಾಂದಿಯನ್ನು ಕೊಂಡು ತಂದು ಸೋಮನಿಗೆ ಕುಡಿಸಿದನು. ಹೂವಯ್ಯ, ಸಿಂಗಪ್ಪಗೌಡರು, ನಾಗಮ್ಮನವರು ಇವರು ಮೂವರೂ ಕಣ್ಣು ಹಚ್ಚದೆ ಔಷಧೋಪಚಾರಗಳಲ್ಲಿ ನಿರತರಾಗಬೇಕಾಯಿತು.

ದೂರ ಅಡಗಿ ನಿಂತಿದ್ದವರಲ್ಲಿ ಒಬ್ಬರೂ ತಲೆಹಾಕಲಿಲ್ಲ. ಹೇಳದೆ ಕೇಳದೆ ಪರಾರಿಯಾದರು. ಮರುದಿನ ಸಿಟ್ಟುಗೊಂಡ ಸೋಮ ಗುಟ್ಟನ್ನೆಲ್ಲ ರಟ್ಟು ಮಾಡಿ, ಹಾಸಗೆಯಲ್ಲಿ ಮಲಗಿಕೊಂಡೇ ಕೈಕೈ ಮುಗಿಯುತ್ತಾ ಕಣ್ಣೀರು ಹಾಕುತ್ತಾ "ಅಯ್ಯಾ, ಅವರ ಮಾತು ಕೇಳಿ ನನ್ನ ಬಾಯಿಗೆ ಮಣ್ಣಾಯಿತು! ಕಲ್ಲಸೂಳೇ ಮಕ್ಕಳು . . . ನನ್ನ ಕಳಿಸಿ ಅಡಗಿ ನಿಂತದ್ದಲ್ಲಾ ಹಿಂದೆ! ಅವರ ತಾಯಿ ರಂಡೆ ಆಪೂಕೆ!" ಎಂದು ಮೊದಲಾಗಿ ಅಂಗಲಾಚಿದನು.

ಸೋಮ ನಡೆದ ಸಂಗತಿಗಳನ್ನು ಹೇಳುವಾಗ ಚಂದ್ರಯ್ಯಗೌಡರನ್ನೂ ರಾಮಯ್ಯನನ್ನೂ ಪಿತೂರಿಗೆ ಸೇರಿಸುವಂತೆ ಛಾಯೆಗಾಣಿಸಿ ಮಾತಾಡಿದ್ದನು. ಚಂದ್ರಯ್ಯಗೌಡರ ಮೈಮೇಲೆ ಬಂದಿದ್ದ ಭೂತ ಹೇಳಿತು ಎಂದು ಹೇಳುವುದಕ್ಕೆ ಬದಲಾಗಿ ಚಂದ್ರಯ್ಯಗೌಡರೇ ಹೇಳಿದರು ಎಂದೂ, ರಾಮಯ್ಯನೂ ಅಲ್ಲಿದ್ದನೆಂದೂ ಹೇಳಿದ್ದನು.

ಸಿಂಗಪ್ಪಗೌಡರಿಗೆ ಅಷ್ಟೇ ಬೇಕಾಗಿತ್ತು. ಕಾನೂರು ಚಂದ್ರಯ್ಯಗೌಡರು "ಕುರಿ ಚೋರಿ" ಮಾಡಿದ ಕಥೆಯನ್ನು ಕಂಡಕಂಡವರಿಗೆಲ್ಲಾ ಹೇಳುತ್ತಾ ಸಾರುತ್ತಾ ಹೊರಟರು. 'ಮಾಡಿದರು' 'ಮಾಡಿಸಿದರು' ಎನ್ನುವುದಕ್ಕೆ ಇರುವ ವ್ಯತ್ಯಾಸವನ್ನೂ ಅವರು ಗಮನಿಸಲಿಲ್ಲ. ಅವರಿಗೆ ಬೇಕಾಗಿದ್ದದ್ದು ಚಂದ್ರಯ್ಯಗೌಡರ ಅಪಕೀರ್ತಿ; ಸತ್ಯ ಪ್ರಚಾರವಲ್ಲ!

ಭಾರತ ರಾಮಾಯಣಗಳನ್ನು ಓದುತ್ತಿದ್ದ ಅವರು ಆ ಕಥೆಯನ್ನು ಉಪ್ಪು ಹುಳಿ ಕಾರ ಹಾಕಿ ಹೇಳತೊಡಗಿದರೆ ಅದು ಕಾಡುಕಿಚ್ಚಿನಂತೆ ಹಬ್ಬದಿರುತ್ತದೆಯೇ?

## ೫೨

## ಸೇರೆಗಾರರ ಸ್ವಾನಬುದ್ಧಿ

ಕುಡಿದು ನೆತ್ತಿಗೇರಿದ್ದ ತನ್ನ ಗಂಡನ ಕೈಯ ಕತ್ತಿಯಿಂದ ಪಾರಾಗಿ ಕೆಳಕಾನೂರಿನಲ್ಲಿ ರಾತ್ರಿಯನ್ನು ಕಳೆದು, ಬೆಳಿಗ್ಗೆ ಪುಟ್ಟಣ್ಣನೊಡನೆ ತವರೂರಾದ ನೆಲ್ಲುಹಳ್ಳಿಗೆ ಹೋಗಿದ್ದ ಸುಬ್ಬಮ್ಮನ ದುಃಖ ದಾರುಣವಾಗಿತ್ತು. ಎಷ್ಟು ವೈಭವದಿಂದ

ಮದುವೆಯಾಗಿ ಕಾನೂರಿಗೆ ಬಂದಿದ್ದಳೋ, ಎಷ್ಟು ವೈಭವದಿಂದ ಮೆರೆದಿದ್ದಳೋ ಎಷ್ಟು ಅಹಂಕಾರದಿಂದ ವರ್ತಿಸಿದ್ದಳೋ ಅಷ್ಟೇ ದಾರಿದ್ರ್ಯದಿಂದಲೂ ಅದಕ್ಕಿಂತಲೂ ಹೆಚ್ಚಾದ ದೈನ್ಯದಿಂದಲೂ ಸುಬ್ಬಮ್ಮ ತವರೂರಿಗೆ ಹಿಂತಿರುಗ ಬೇಕಾಯಿತು. ತನ್ನ ಎಲ್ಲ ಒಡವೆ ವಸ್ತುಗಳನ್ನೂ ಕಾನೂರಿನಲ್ಲಿಯೆ ಬಿಟ್ಟು, ಉಟ್ಟ ಸೀರೆ ತೊಟ್ಟ ತೊಡುಗೆಯೊಡನೆ, ಪುಟ್ಟಣ್ಣನ ಹಿಂದೆ ಬಿಕ್ಕಿ ಬಿಕ್ಕಿ ಅತ್ತು ಕಣ್ಣೊರಸಿಕೊಳ್ಳುತ್ತಾ, ಮಾರುದ್ದ ದೇಹವನ್ನು ಗೇಣುದ್ದ ಮಾಡಿಕೊಂಡು ತನ್ನ ತಂದೆಯ ಬಡ ಹುಲ್ಲುಮನೆಯನ್ನು ಪ್ರವೇಶಿಸಿದಳು. ಕತ್ತಲೆ ಕೋಣೆ ಯಿಂದ ಏಳೆಂಟು ದಿನಗಳು ಹೊರಗೆ ಹೊರಡಲಿಲ್ಲ. ಆಕೆಯ ಹೃದಯ ವಿದೀರ್ಣವಾಗಿತ್ತು. ತಾನು ಕಟ್ಟಿಕೊಂಡಿದ್ದ ಕಾಮನಬಿಲ್ಲಿನ ಬಣ್ಣಬಣ್ಣದ ಚಿನ್ನದ ಕನಸು ಇಷ್ಟು ಬೇಗನೆ ಒಡೆದು ಮುಗಿಲಿನ ನೀಲಿಯಿಂದ ನೆಲದ ಕೊಳಚೆಗೆ ಬೀಳುತ್ತದೆಂದು ಆಕೆ ಭಾವಿಸಿರಲಿಲ್ಲ.

ಎಂತಹ ಗಾಯವೂ ಕಾಲಾಂತರದಲ್ಲಿ ಗುಣ ಹೊಂದುತ್ತದೆ. ಎಂತಹ ದುಃಖವನ್ನೂ ಕಾಲ ಮಾಸಿಬಿಡುತ್ತದೆ. ಸುಬ್ಬಮ್ಮ ದುಃಖವನ್ನೆಲ್ಲ ಅತ್ತು ಅತ್ತು ಹೊರಹಾಕಿದಳು. ತಾಯ್ತಂದೆಗಳೂ ನೆರೆಹೊರೆಯವರೂ ಬಂದು ಬಂದು ಸಮಾಧಾನ ಹೇಳಿ ಹೇಳಿ ಹೋಗುತ್ತಿದ್ದರು. ಕೆಲವರು ಮುಂದೆ ಎಲ್ಲ ಸರಿಹೋಗುತ್ತದೆ ಎಂಬ ಪ್ರತ್ಯಾಶೆಯನ್ನೂ ಸೂಚಿಸುತ್ತಿದ್ದರು. ತಂದೆ ಪೆದ್ದೇ ಗೌಡರು ಮಗಳ ಪರವಾಗಿ ಅಳಿಯನೊಡನೆ ಮಾತಾಡಿ ಬರುತ್ತೇನೆಂದು ಕಾನೂರಿಗೆ ಹೋಗಿ ಚಂದ್ರಯ್ಯಗೌಡರಿಂದ ಬಾಯಿಗೆ ಬಂದಹಾಗೆ ಅನ್ನಿಸಿಕೊಂಡು ಅವಮಾನ ಮಾಡಿಸಿಕೊಂಡೂ ಹಿಂತಿರುಗಿದರು. ಅದಾದಮೇಲೆ ಸುಬ್ಬಮ್ಮ ಕಾನೂರಿಗೆ ಹೋಗುವ ಆಶೆಯನ್ನೇ ನೀಗಿಬಿಟ್ಟಳು.

ಬಡತಾಯಿ ಮಗಳಿಗೆ ಉಟ್ಟುಕೊಳ್ಳಲು ತನ್ನ ಜಡ್ಡು ಸೀರೆಗಳಲ್ಲಿಯೆ ಒಂದನ್ನು ಕೊಟ್ಟಳು. ಕಾನೂರಿನಿಂದ ತನ್ನ ಸೀರೆಗಳನ್ನಾದರೂ ತರಿಸಬೇಕೆಂದು ಸುಬ್ಬಮ್ಮ ಆಳೊಬ್ಬನ ಸಹಾಯದಿಂದ ಮಾಡಿದ ಪ್ರಯತ್ನ ವ್ಯರ್ಥವಾಯಿತು. ಕೆಲವು ದಿನಗಳ ಮೇಲೆ ಪುಟ್ಟಮ್ಮ ತನ್ನದೇ ಒಂದು ಸೀರೆಯನ್ನು ತಂದೆಗೆ ತಿಳಿಯದಂತೆ ಬೈರನ ಕೈಲಿ ನೆಲ್ಲುಹಳ್ಳಿಗೆ ಕಳುಹಿಸಿದಳು.

ಎಷ್ಟು ದಿನ ತಾನೇ ನೆಂಡತಿಯಾಗಿ ಕುಳಿತು ತಿಂದು ತವರುಮನೆಯ ಬಡತನಕ್ಕೆ ಭಾರವಾಗಲಾದೀತು? ಸುಬ್ಬಮ್ಮ ತಾಯಿತಂದೆಗಳ ಜೊತೆಯಲ್ಲಿ ಮದುವೆ ಯಾಗುವ ಮೊದಲು ದುಡಿಯುತ್ತಿದ್ದಂತೆ ದುಡಿಯತೊಡಗಿದಳು. ಗುಡಿಸು ವುದು, ಸಾರಿಸುವುದು, ಅಡುಗೆ ಮಾಡುವುದು, ಬಟ್ಟೆಗಿಟ್ಟೆ ಒಗೆಯುವುದು, ದನದ ಕೊಟ್ಟಿಗೆಯ ಸೆಗಣಿಯನ್ನು ಬಳಿದು ಮಣ್ಣುತಟ್ಟೆಗೆ ತುಂಬಿ ತಲೆಯಮೇಲೆ

ಹೊತ್ತು ಹೋಗಿ ಗೊಬ್ಬರದ ಗುಂಡಿಗೆ ಹಾಕುವುದು, ಕಟ್ಟಿಗೆ ತರುವುದು. ಸಮಯ ಬಿದ್ದರೆ ದನಕಾಯುವುದು — ಎಲ್ಲ ಕೆಲಸಗಳಲ್ಲಿಯೂ ಪಾಲು ವಹಿಸಿದಳು. ದಿನಕಳೆದ ಹಾಗೆಲ್ಲ, ಕಾನೂರಿನಲ್ಲಿ ಹೆಗ್ಗಡಿತಿಯಾಗಿರುವ ಸುಖಕ್ಕಿಂತಲೂ ನೆಲ್ಲುಹಳ್ಳಿಯಲ್ಲಿ ಆಳಾಗಿ ದುಡಿಯುವ ಕಷ್ಟವೇ ಹೆಚ್ಚು ನೆಮ್ಮದಿಯಾಗಿ ತೋರತೊಡಗಿತು.

ಆದರೆ ಒಮ್ಮೊಮ್ಮೆ ತಾನು ಬಂಜೆ ಎಂಬ ಒಂದು ನಂಬುಗೆ ಮನಸ್ಸಿಗೆ ಬಂದಾಗಲೆಲ್ಲ ಆಕೆಯ ಹೆಂಗರುಳಿಗೆ ಚೇಳು ಕಡಿದಂತಾಗುತ್ತಿತ್ತು. ಚಂದ್ರಯ್ಯಗೌಡರ ಬೈಗುಳದಲ್ಲಿ ಆ ಮಾತನ್ನು ಪದೇ ಪದೇ ಕೇಳಿ ಕೇಳಿ ಆಕೆಯಲ್ಲಿ ತಾನು ಮಕ್ಕಳನ್ನು ಹೆರಲಾರದ ಪಾಪಿ ಎಂಬ ಜುಗುಪ್ಸೆ ಬೇರೂರಿತ್ತು.

ನೆಲ್ಲುಹಳ್ಳಿಯಲ್ಲಿ ಗದ್ದೆಕೊಯಿಲು ಭರದಿಂದ ಸಾಗಿತ್ತು. ಸುಬ್ಬಮ್ಮನೂ ಬೆಳಗಿನಿಂದ ಬೈಗಿನವರೆಗೆ ತಂದೆತಾಯಿಗಳಿಗೆ ನೆರವಾಗಿ ಬೆವರು ಸುರಿಸಿ ಗೆಯ್ಯುತ್ತಿದ್ದಳು. ರಾತ್ರಿ ಬಡವೂಟ ಉಂಡರೂ ಕುಡಿಯುವುದಕ್ಕೆ ಹುಳಿ ಹೆಂಡವೂ ನಂಚಿಕೊಳ್ಳಲು ಉಪ್ಪಿನಕಾಯಿಯ ರಸವೂ ಯಥೇಚ್ಛವಾಗಿ ದೊರೆಯುತ್ತಿದ್ದುದರಿಂದ ಆಕೆಗೆ ಆನಂದವಾಗುತ್ತಿತ್ತು. ಅಲ್ಲದೆ ದಿನವೆಲ್ಲ ಬಿಸಿಲಿನಲ್ಲಿ ಗೆಯ್ದು ರಾತ್ರಿ ಹೆಂಡ ಕುಡಿದು ಮಲಗಿದರೆ ಪ್ರಜ್ಞೆ ತಪ್ಪಿದಂತೆ ನಿದ್ದೆ ಬರುತ್ತಿದ್ದುದರಿಂದ ತನ್ನ ದುಃಸ್ಥಿತಿಯನ್ನು ನೆನೆದು ಕೊರಗಲು ಅತಿ ಅವಕಾಶ ಇಲ್ಲದಂತಾಗಿ ಬಾಳು ಸುಖವಾಗಿತ್ತು.

ಒಂದು ದಿನ ಸಾಯಂಕಾಲ ಸುಬ್ಬಮ್ಮ ಗದ್ದೆಯಿಂದ ಮನೆಗೆ ಬಂದಾಗ ಜಗಲಿಯಲ್ಲಿ ಸೇರೆಗಾರ ರಂಗಪ್ಪಸೆಟ್ಟರು ಮೇಲುಬಾರಿಗೆ ಹೂಕೂರಿಸಿದ ಹುಂಚದ ಕಟ್ಟೆಯ ಗಿರ್ಕಿಮೆಟ್ಟು, ಕನ್ನಡ ಜಿಲ್ಲೆಯ ಕಚ್ಚೆಪಂಚೆ, ಕಪ್ಪುಗೀಟಿನ ಕೋಟು, ಹೆಗಲಮೇಲೆ ಕೆಂಪು ಎಲೆವಸ್ತ್ರ, ತಲೆಗೆ ನೀಲಿ ಬಣ್ಣದ ಕೋರೆ ರುಮಾಲು, ಹಣೆಯಲ್ಲಿ ಕುಂಕುಮದ ಬಟ್ಟು, ಕಿವಿಗಳಿಗೆ ಹರಳೊಂಟಿ, ಮೇಲ್ತುಟಿಯನ್ನು ಮೇಲೊತ್ತಿ ಹೊರದೋರುತ್ತಿದ್ದ ಉಬ್ಬುಹಲ್ಲುಗಳಲ್ಲಿ ತಾಂಬೂಲದ ರಂಗು— ಇವುಗಳಿಂದ ಸಾಲಂಕೃತರಾಗಿ ಹಸನ್ಮುಖಿಯಾಗಿ ಕುಳಿತಿದ್ದರು! ಸುಬ್ಬಮ್ಮನನ್ನು ಕಂಡೊಡನೆ ವಿಸ್ತಾರವಾಗಿ ಹಲ್ಲುಕಿರಿದು ನಗೆಸೂಸಿ "ಏನಮ್ಮಾ ಹ್ಯಾಂಗಿದ್ದೀರಿ?" ಎಂದು ಬಹಳ ಆದರ ಪೂರ್ವಕವಾಗಿ ಪ್ರಶ್ನಿಸಿದರು.

ಸುಬ್ಬಮ್ಮನಿಗೆ ಸೇರೆಗಾರರನ್ನು ಕಂಡೊಡನೆ ಕಾನೂರಿನಲ್ಲಿ ತನಗಾದುದೆಲ್ಲ ನೆನಪಿಗೆ ಬಂದು ಕೋಪದಿಂದಲೂ ದುಃಖದಿಂದಲೂ ತಲೆ ಬಗ್ಗಿಸಿಕೊಂಡು ಕಣ್ಣೆತ್ತಿ ನೋಡದೆ "ಹೀಂಗಿದ್ದೀನಿ. ಇನ್ನೂ ಸಾಯ್ಲಿಲ್ಲಾ!" ಎನ್ನುತ್ತ ಒಳಗೆ ಹೋದಳು.

ಆ ದಿನವೇ ಸುಬ್ಬಮ್ಮನನ್ನು ಕರೆದುಕೊಂಡು ಬರುವಂತೆ ಹೇಳಿ ಚಂದ್ರಯ್ಯ ಗೌಡರು ತಮ್ಮನ್ನು ಕಳುಹಿಸಿದ್ದಾರೆ ಎಂದು ಸೇರೆಗಾರರು ತಿಳಿಸಲು ಪೆದ್ದೇಗೌಡರ ಮುಖ ಗಂಟು ಗಂಟಾಯಿತು. ಹಿಂದೆ ಚಂದ್ರಯ್ಯಗೌಡರಿಂದ ತಮಗಾಗಿದ್ದ ಅವಮಾನವನ್ನು ನೆನೆದು ಸಿಟ್ಟಿನಿಂದಲೂ ತಿರಸ್ಕಾರದಿಂದಲೂ ಬಾಯಿಗೆ ಬಂದಹಾಗೆ ಹೇಳಬೇಕೆಂದವರು ನಾಲಗೆಯನ್ನು ಬಿಗಿಹಿಡಿದುಕೊಂಡರು. ಬಡವನ ಸಿಟ್ಟು ದವಡೆಗೆ ಮೂಲ ಎಂಬ ಗಾದೆ ಅವರಿಗೆ ನಿತ್ಯದ ಅನುಭವವಾಗಿತ್ತು. ಅಲ್ಲದೆ ತಮ್ಮ ಕೋಪ ತಮ್ಮ ಮಗಳ ಕಲ್ಯಾಣಕ್ಕೆ ಅಡ್ಡ ಬಂದೀತೆಂಬ ವಿವೇಕದ ಔದಾರ್ಯವೂ ಅವರನ್ನು ಸಂಯಮಿಯನ್ನಾಗಿ ಮಾಡಿತು.

"ಗಾಡಿ ಕಳಿಸಬೇಕು ಅಂತಾ ಇದ್ದರು! ಆದರೆ ಮೊನ್ನೆ ಮೊನ್ನೆ ಹೊಸ ಎತ್ತು ತೆಗೆದುಕೊಂಡಿದ್ದಾರೆ. ಇನ್ನೂ ಸರಿಯಾಗಿ ತಿದ್ದಿಲ್ಲ" ಎಂದರು ಮತ್ತೆ ಸೇರೆಗಾರರು ಸಂಶಯ ನಿವಾರಣೆಗಾಗಿ ಎಂಬಂತೆ.

ಸುಬ್ಬಮ್ಮನನ್ನು ಮದುವೆಯಾದ ಹೊಸತರಲ್ಲಿ ಚಂದ್ರಯ್ಯಗೌಡರು ತಮ್ಮ ಹೊಸ ಹೆಂಡತಿಯ ಹೂವಿನ ಅಡಿಗಳು ಸ್ವಲ್ಪ ನಡೆದರೂ ಎಲ್ಲಿ ಸವೆಯುತ್ತವೆಯೋ ಎಂದು ಬೆದರಿ ಆಕೆಯನ್ನು ಯಾವಾಗಲೂ ಗಾಡಿಯ ಮೇಲೆಯೇ ಹಿಂದಕ್ಕೂ ಮುಂದಕ್ಕೂ ಸಾಗಿಸುತ್ತಿದ್ದರು. ಅದರ ಅತಿರೇಕವು ಜನಜಿಹ್ವೆಯಿಂದಲೂ ಹೊರಬಿದ್ದಿತ್ತು. ಆದ್ದರಿಂದಲೆ ಸೇರೆಗಾರರು ಗೌಡರು ಗಾಡಿ ಕಳುಹಿಸದಿದ್ದುದಕ್ಕೆ ಕಾರಣ ಹೇಳಬೇಕಾಗಿ ಬಂದದ್ದು.

ಬೈಗಾಗಿದ್ದುದರಿಂದ ಮಗಳನ್ನು ಮರುದಿನ ಬೆಳಗ್ಗೆ ಕಳುಹಿಸುವುದಾಗಿ ಪೆದ್ದೇಗೌಡರು ಹೇಳಲು ಸೇರೆಗಾರರು ಎಚ್ಚರಿಕೆ ಹೇಳುವವರಂತೆ "ಹಾಂಗೆ ಮಾಡೂಕಾಗ ಕಾಣೆ! (ಒಂದೊಂದು ಸಾರಿ ಅವರು ಭಾವಪೂರ್ಣವಾಗಿ ಮಾತಾಡುವಾಗ ಗಟ್ಟದ ಮೇಲಿನ ಕನ್ನಡ ಗಟ್ಟದ ಕೆಳಗಿನ ಸೆಟ್ಟರ ಕನ್ನಡವಾಗಿ ಬಿಡುತ್ತಿತ್ತು) ಈವತ್ತೇ ಕಳಿಸಬೇಕೆಂಬ್ರೂ! ಕಳಿಸಿನಿ, ಬಿಡಿನಿ ! ನಾ ಹೋತೆ! ನಮ್ಮ ಗೌಡರಿಗೆ ತಲೆ ಕೆಟ್ಟಿತ್ತಂಬ್ರು! ಈವತ್ತು ಇದ್ದ ಬುದ್ಧಿ ನಾಳೆ ಇರಲಿಕ್ಕಿಲ್ಲ!— ನೀವು ಕಳಿಸಿದರೆ ಕಳಿಸಿನಿ! ಬಿಟ್ಟರೆ ಬಿಡಿನಿ! ನಾನು ಹೋಗಿಬತ್ತೆ!" ಎಂದು ಎದ್ದು ನಿಂತು ಗೋಡೆಗೆ ಒರಗಿಸಿಟ್ಟಿದ್ದ ತಮ್ಮ ಬೆಳ್ಳಿಕಟ್ಟಿನ ಬೆತ್ತವನ್ನು ಕೈಗೆ ತೆಗೆದುಕೊಂಡರು.

"ಹಾಂಗಾರೆ ನೀವು ಹೋಗಿ. ನಾನೇ ನಾಳೆ ಬೆಳಗ್ಗೆ ಕರಕೊಂಡು ಬತ್ತೀನಿ."

ಸೇರೆಗಾರರು ಸ್ವಲ್ಪ ಪೆಚ್ಚಾದರು. ಮತ್ತೆ ಕೂತುಕೊಂಡರು. ಬಹಳ ಹೊತ್ತು ಆಲೋಚಿಸಿದರು.

ಕೋಳಿಗಳ ಕೂಗಾಟ, ನಾಯಿಗಳ ಬೊಗುಳುವಿಕೆ, ಕೊಟ್ಟಿಗೆಗೆ ಬರುತ್ತಿದ್ದ

ದನಕರುಗಳ 'ಅಂಬಾ' 'ಅಂಬಾ' ಎಂಬ ಧ್ವನಿ, ದನ ಕಾಯುವ ಹುಡುಗನ ವಿಚಿತ್ರವಾದ ಸ್ವರಸಮೂಹ, ಹೊರಗೆ ಬಯಲಲ್ಲಿ ಹುಡುಗರು ಮಕ್ಕಳುಗಳ ಬೊಬ್ಬೆ, ಕೇಕೆ—ಯಾವುದೂ ಸೇರೆಗಾರರಿಗೆ ಕೇಳಿಸಲಿಲ್ಲ. ಅವರು ತಮ್ಮ ವ್ಯೂಹ ರಚನೆಗೆ ಭಂಗ ಬಂದಿತಲ್ಲಾ ಎಂದು ಮಾತ್ರ ಹಂಬಲಿಸುತ್ತಿದ್ದರು.

ನಿಜವಾಗಿಯೂ ಚಂದ್ರಯ್ಯಗೌಡರು ಸೇರೆಗಾರರಿಗೆ 'ಸುಬ್ಬಮ್ಮನನ್ನು ಕರೆದುಕೊಂಡು ಬನ್ನಿ' ಎಂದು ಹೇಳಿಕಳುಹಿಸಿರಲಿಲ್ಲ. ಅವರು 'ಕೊಪ್ಪಕ್ಕೆ ಹೋಗುತ್ತೇನೆ' ಎಂದು ಚಂದ್ರಯ್ಯಗೌಡರಿಂದ ಅಪ್ಪಣೆ ಪಡೆದು ಬಂದಿದ್ದರು; ಬಹು ದಿನಗಳಿಂದಲೂ ಅವರ ಮನಸ್ಸಿನಲ್ಲಿ ಅಪವಿತ್ರ ಭಾವನೆಗಳು ಮೂಡಿ ಬೇಯಿಸುತ್ತಿದ್ದುವು. ಆ ದುಷ್ಟ ವಾಸನೆಗಳಿಂದಲೆ ಪ್ರೇರಿತರಾಗಿ ಇಂದು ಅವರು ನೆಲ್ಲುಹಳ್ಳಿಗೆ ಬಂದಿದ್ದರು. ಅವರ ವ್ಯೂಹ ಈ ರೀತಿ ಇದ್ದಿತು: ಸುಬ್ಬಮ್ಮನನ್ನು ಸಾಯಂಕಾಲ ಅಲ್ಲಿಂದ ಕರೆದುಕೊಂಡು ಹೊರಟು, ಕಾಡುದಾರಿಗಳಲ್ಲಿ ಸುತ್ತಿಸಿ, ಕತ್ತಲೆಯಾದ ಮೇಲೆ ತಮ್ಮ ಅಭೀಷ್ಟಸಿದ್ಧಿಗೆ ಪ್ರಯತ್ನಮಾಡುವುದು!

ಸುಬ್ಬಮ್ಮ ತಮ್ಮೊಡನೆ ತೋರುತ್ತಿದ್ದ ಸರಳತೆಯನ್ನು ಸರಸತೆಯೆಂದು ಆ ಕಾಮೋನ್ಮತ್ತನು ಭಾವಿಸಿದ್ದುದರಿಂದ ತನ್ನ ಪ್ರಯತ್ನ ಸಫಲವಾಗುತ್ತದೆ ಎಂದೇ ನಿರ್ಧರಿಸಿದ್ದನು. ಒಂದು ವೇಳೆ ಹಾದಿಯಲ್ಲಿ ಕಾರ್ಯಸಿದ್ಧಿಯಾಗದಿದ್ದರೆ ಎಂತಿದ್ದರೂ ಚಂದ್ರಯ್ಯಗೌಡರು ಆಕೆಯನ್ನು ಮನೆಗೆ ಸೇರಗೊಡುತ್ತಿದ್ದಿಲ್ಲವಾದ್ದರಿಂದ ಆ ರಾತ್ರಿ ಆಕೆಯನ್ನು ಗಂಗೆಯ ಬಿಡಾರದಲ್ಲಾಗಲಿ ಅಥವಾ ಇನ್ನಾವುದಾದರೂ ಗೋಪ್ಯವಾದ ಸ್ಥಾನದಲ್ಲಿಯಾಗಲಿ, ನಿದ್ದೆ ಮಾಡುವ ಮೊದಲು ಆಕೆಗೆ ಅತಿಪ್ರಿಯವಾಗಿದ್ದ ಕಳ್ಳನ್ನು ಅಮಲು ಬರುವಂತೆ ಕೊಟ್ಟು, ಮಲಗಿಸಿ, ಇಷ್ಟಸಿದ್ಧಿ ಮಾಡಿಕೊಳ್ಳಬಹುದೆಂದು ಆ ಪೋಕರಿ ಹವಣಿಸಿದ್ದನು.

ಆದರೆ ಸುಬ್ಬಮ್ಮನ ಸುದೈವ! ಪೆದ್ದೇಗೌಡರ ಮಾತು ಕರಾಳವಾದ ಆ ಹೊಂಗನಸನ್ನು ಚೂರು ಚೂರು ಮಾಡಿದ್ದರಿಂದ ಸೇರೆಗಾರರು ಆಲೋಚಿಸಿ, ಆಲೋಚಿಸಿ, ನಿಟ್ಟುಸಿರು ಬಿಟ್ಟು, "ಅದೂ ಹೌದೇ! ಇವತ್ತು ಇದ್ದು ನಾಳೆ ಬೆಳಿಗ್ಗೆ ನಾನೇ ಕರಕೊಂಡು ಹೋದರೇನಾಗ್ತದೆ! ನಿಮಗೆ ಯಾಕೆ ಆ ತೊಂದ್ರೆ? ಗದ್ದೆಕೊಯಿಲು, ಬಹಳ ಕೆಲಸ!—ಇವತ್ತು ಒಂದು ರಾತ್ರೆ ಇಲ್ಲೇ ಇದ್ದು ಹೋದರಾಯ್ತು! ಗೌಡರೇನೋ ಬಯ್ತ್ಯುತ್ತಾರೆ ಬಾಯಿಗೆ ಬಂದಹಾಂಗೆ! ಏನು ಮಾಡುವುದು;—ಸುಬ್ಬಮ್ಮನವರ ಗೋಳೊಂದು ತಪ್ಪಿದರೆ ಸಾಕು!—ನಾನಂತೂ ಹರಕೆ ಹೇಳಿಕೊಂಡಿದ್ದೇನೆ!" ಎಂದು ಪೆದ್ದೇಗೌಡರ ಮಗಳ ಯೋಗಕ್ಷೇಮಕ್ಕಾಗಿ ಕಾತರತೆ ಕನಿಕರಗಳನ್ನು ಪ್ರದರ್ಶಿಸಿದರು.

ಕಪಟವನ್ನರಿಯದ ಬೆಪ್ಪು ಪೆದ್ದೇಗೌಡರು "ಏನೋ ನೀವೆಲ್ಲ ಪರ್ಯತ್ನ

ಮಾಡಿ ನನ್ನ ಮಗಳ ಮಂಗಳಸೂತ್ರ..." ಎಂದ ಅವರಿಗೆ ದುಃಖದಿಂದ ಕೊರಳ ಸೆರೆ ಬಿಗಿದು ಮುಂದುವರಿಯಲಾರದೆ ಕಣ್ಣೀರು ಹನಿಯಿತು.

ರಾತ್ರಿ ಪೆದ್ದೇಗೌಡರು ಸುಬ್ಬಮ್ಮಗೆ ಸೇರೆಗಾರರು ಹೇಳಿದ ವಿಚಾರವನ್ನೆಲ್ಲ ತಿಳಿಸಿದರು. ಆದರೆ ಸುಬ್ಬಮ್ಮ ಗಂಡನ ಮನೆಗೆ ಹೋಗುವುದಿಲ್ಲವೆಂದು ಹಟಹಿಡಿದು ಅಳತೊಡಗಿದಳು. ತಂದೆತಾಯಿಗಳಿಬ್ಬರೂ ಮಗಳಿಗೆ ನಾನಾ ರೀತಿಯಾಗಿ ಬುದ್ಧಿ ಹೇಳಿದರು. ಪೆದ್ದೇಗೌಡರು "ಗದ್ದೆ ಕೊಯಲಿದ್ದರೆ ಇರಲಿ! ನಿನ್ನ ಜೊತೆ ನಾನೇ ಬಂದು, ನಿನ್ನ ಗಂಡನ ಕಾಲಿಗಾದರೂ ಬಿದ್ದು ಅವರನ್ನು ಒಪ್ಪಿಸಿ ಬರ್‍ತೀನಿ! ನಿನ್ನ ದಮ್ಮಯ್ಯ ಅನ್ತೀನಿ ಒಪ್ಪಿಕೋ!" ಎಂದು ಮಗಳ ಮುಂದೆಯೂ ಅತ್ತರು. ಸುಬ್ಬಮ್ಮ ಮನಸ್ಸಿಲ್ಲದ ಮನಸ್ಸಿನಿಂದ ಒಪ್ಪಿಕೊಳ್ಳ ಬೇಕಾಯಿತು.

ಮರುದಿನ ಬೆಳಿಗ್ಗೆ ಪೆದ್ದೇಗೌಡರೂ ಜೊತೆ ಬರುತ್ತಾರೆಂದು ಕೇಳಿ ಸೇರೆ ಗಾರರಿಗೆ ಎದೆ ಹೌವನೆ ಹಾರಿತು. ಅವರು ಬರದಂತೆ ಮಾಡಲು ಪ್ರಯತ್ನಿಸಿದರೂ ಸಫಲವಾಗಲಿಲ್ಲ.

ಮೂವರೂ ಹೊರಟು ಕಾನೂರಿನ ಕಡೆಗೆ ಗದ್ದೆ ಬಯಲುಗಳನ್ನೂ ಕಾಡು ಗಳನ್ನೂ ಹಾದು ನಡೆದರು. ದಾರಿಯಲ್ಲಿ ಸೇರೆಗಾರರು ಸಿಂಗಪ್ಪ ಗೌಡರು ಹಬ್ಬಿಸಿದ್ದ 'ಕುರಿಚೋರಿ'ಯ ಕಥೆ ಸುಳ್ಳು ಎಂಬುದಾಗಿ ವಿಸ್ತಾರವಾಗಿ ವಿವರಿಸಿ, ಸುಳ್ಳಾಗದಿದ್ದರೂ ಸತ್ಯವಾಗಿ ತೋರುವಂತೆ ಮಾಡಿಬಿಟ್ಟು, ಹೂವಯ್ಯ ಭೂತದ ಬಲಿಯನ್ನು ಅಪಹರಿಸಿ ಹೋತವನ್ನು ಮನೆಯಲ್ಲಿಟ್ಟುಕೊಂಡಿರುವುದರಿಂದಲೇ ಕಾನೂರು ಮನೆಯಲ್ಲಿ ನೆಮ್ಮದಿಯಿಲ್ಲವೆಂತಲೂ, ಸುಬ್ಬಮ್ಮಗೆ ಕಷ್ಟ ಪ್ರಾಪ್ತಿ ಯಾಯಿತೆಂತಲೂ, ಚಂದ್ರಯ್ಯಗೌಡರ ತಲೆ ಕೆಟ್ಟಿತೆಂತಲೂ, ಮೂಢಮತಿ ಗಳಾಗಿದ್ದ ಶ್ರೋತೃಗಳ ನಂಬುಗೆ ನೂರ್ಮಡಿಯಾಗುವಂತೆ ವರ್ಣಿಸಿದರು.

ಕಾನೂರು ಮನೆ ಅರ್ಧ ಮೈಲಿ ದೂರದಲ್ಲಿದೆ ಎನ್ನುವಾಗ ಸೇರೆಗಾರರು "ಪೆದ್ದೇಗೌಡ್ರೇ, ನೀವು ಒಂದು ಕೆಲಸ ಮಾಡಿನಿ. ನಮ್ಮ ಗೌಡರಿಗೆ ನಿನ್ನೆಯ ಬುದ್ಧಿ ಇವತ್ತು ಇರಲಿಕ್ಕಿಲ್ಲ! ನೀವು ಮೊದಲು ಹೋಗಿ, ಅವರ ಮನಸ್ಸು ಹೇಂಗಿತ್ತು ಅಂಬುದನ್ನು ಕಂಡುಕೊಂಡು ಬನ್ನಿ. ಹೆಗ್ಗಡಿತಮ್ಮ ಅದುವರೆಗೂ ಇಲ್ಲೆ ಇರಲಿ" ಎಂದು, ಸುಬ್ಬಮ್ಮಗೆ "ನಾನು ಇರುತ್ತೇನೆ ಕಾವಲಿಗೆ! ನಿಮಗೆ ಭಯ ಬೇಡ" ಎಂದರು.

ಮಗಳಿಗೆ ಒಳ್ಳೆಯದಾದರೆ ಸಾಕು ಎಂಬ ಒಂದೇ ಭಾವದಿಂದ ಉತ್ತಪ್ತರಾಗಿದ್ದ ಸುಬ್ಬಮ್ಮನ ತಂದೆ 'ದೇವರೇ, ಚಂದ್ರಯ್ಯಗೌಡರ ಮನಸ್ಸು ಪ್ರಸನ್ನವಾಗಲಿ' ಎಂದು ಪ್ರಾರ್ಥಿಸುತ್ತಾ ಕಾನೂರಿನ ಕಡೆಗೆ ನಡೆದು ಕಣ್ಮರೆಯಾದರು. ಸೇರೆ

ಗಾರರು ಬುಡದಲ್ಲಿ ವಿರಳವಾಗಿ ಪೊದೆ ಬೆಳೆದಿದ್ದ ಒಂದು ದೊಡ್ಡ ಬಸರಿ ಮರದ ನೆರಳಿಗೆ ಸುಬ್ಬಮ್ಮನನ್ನು ಕರೆದೊಯ್ದು, ಆಕೆ ಕೂತುಕೊಂಡಮೇಲೆ, ಸಮೀಪದಲ್ಲಿ ಎದುರಾಗಿ ತಾವೂ ಕೂತುಕೊಂಡರು.

ಇನ್ನೂ ಮಧ್ಯಾಹ್ನವಾಗಿರಲಿಲ್ಲ. ಬಿಸಿಲು ಜೋರಾಗಿತ್ತು. ಸುತ್ತಲೂ ಅರಣ್ಯಶ್ರೇಣಿಗಳು ಧೀರವಾಗಿ ತಲೆಯೆತ್ತಿ ಹಬ್ಬಿದ್ದುವು. ಬಯಲುಗಳೂ ಕೂಡ ಕುರುಚಲು ಕಾಡುಗಳಂತೆ ಹಸುರಾಗಿದ್ದುವು. ಅವರು ಕುಳಿತಿದ್ದ ಸ್ಥಾನದಿಂದ ಗದ್ದೆಯ ಕೋಗು ಕಣ್ಣಿಗೆ ಕಾಣಿಸದಿದ್ದರೂ ಕೊಯಿಲುಗೆಲಸದಲ್ಲಿ ತೊಡಗಿದ್ದ ಜನರ ಸದ್ದು ಗದ್ದಲ ಸ್ವಲ್ಪ ಸ್ವಲ್ಪ ಕೇಳಿಸುತ್ತಿತ್ತು.

ಹಸಿದ ನಾಯಿ ಮೃಷ್ಟಾನ್ನವನ್ನು ನೋಡುವಂತೆ ಸೇರೆಗಾರರು ಸುಬ್ಬಮ್ಮ ನನ್ನು ಮಾತಾಡಿಸುವ ನೆವದಿಂದ ನೋಡುತ್ತಿದ್ದರು. ಅವರ ಮಾತುಗಳಲ್ಲಿ ಶ್ರದ್ಧೆ ಸಾಮಂಜಸ್ಯಗಳೊಂದೂ ಇರಲಿಲ್ಲ. ಸುಬ್ಬಮ್ಮನೂ ಮಾತಿನ ಕಡೆಗೆ ಹೆಚ್ಚು ಗಮನ ಕೊಡದೆ ತಂದೆ ಹೋಗಿದ್ದ ಕೆಲಸ ಮುಂದೇನಾಗುತ್ತದೆ ಎಂದು ಚಿತ್ತೋದ್ವಿಗ್ನಳಾಗಿ ಕೆನ್ನೆಗೈಯಾಗಿ ಬಾಗಿ ಕುಳಿತಿದ್ದಳು. ಇನ್ನೇನು ಕೈಗೆ ನಿಲುಕ ಲಿರುವ ಸ್ವರ್ಗಸುಂದರ ಸ್ವಪ್ನದಂತೆ ಸುಬ್ಬಮ್ಮ ಸೇರೆಗಾರರ ಕಣ್ಣಿಗೆ ಸುಮ ನೋಹರವಾಗಿ ನಲಿದೆಸೆದಳು.

ಬೇಡವೆಂದರೂ ಕೇಳದೆ ಆಕೆಯ ತಾಯಿ ಆ ದಿನ ಬೆಳಿಗ್ಗೆ ತಲೆಬಾಚಿ, ಹೂ ಮುಡಿಸಿ, ಹಣೆಗೆ ಬೊಟ್ಟಿಟ್ಟು, ಕಿವಿ ಮೂಗುಗಳಿಗೆ ತೊಡಿಸಿ, ಹಿಂದೆ ಪುಟ್ಟಮ್ಮ ಕಳುಹಿಸಿದ್ದ ನೀಲಿಗಪ್ಪಿನ ಸೀರೆಯನ್ನೂ ಉಡಿಸಿ, ಗಂಡನ ಮನೆಗೆ ಹೋಗುವ ಮಗಳನ್ನು ತವರೂರಿನಿಂದ ಹೇಗೆ ಕಳುಹಿಸಬೇಕೊ ಹಾಗೆ ಸಿಂಗರಿಸಿ ಕಳುಹಿಸಿದ್ದಳು. ಸೇರೆಗಾರರು ಕಲಾವಿಮರ್ಶಕನು ವರ್ಣಚಿತ್ರವನ್ನು ವಿವರವಾಗಿ ಸಮೀಕ್ಷಿಸುವಂತೆ ಸುಬ್ಬಮ್ಮನ ಅಂಗೋಪಾಂಗಗಳನ್ನು ಚೆನ್ನಾಗಿ ನೋಡಿ ಸವಿದರು. ದುಂಡು ಮುಖ, ಮೃದುವಾದ ಕೆನ್ನೆಗಳು, ಮನಸ್ಸನ್ನು ಸೂರೆಗೊಳ್ಳುವ ಕಣ್ಣುಗಳು, ಹುಬ್ಬು, ಹಣೆ, ಬಾಚಿದ ಬೈತಲೆ, ಕರಿಗುರುಳು, ಮುತ್ತಿಡುವುದಕ್ಕಾಗಿಯೇ ಮಾಡಿದಂತಿದ್ದ ದುಂಡುಗಲ್ಲದ ನುಣ್ಪು, ರವಕೆ ಬಿಗಿದ ತೋಳುಗಳು, ಹೊಂಬಳೆ, ತೋಳುಸರಿಗೆ, ಎಸಳುಬುಗುಡಿ, ಬೆಂಡೋಲೆ, ಗೆಜ್ಜೆಯಡ್ಡಿಕೆ, ಉಬ್ಬಿದೆದೆ! ನೋಡುತ್ತಾ ನೋಡುತ್ತಾ ಸೇರೆಗಾರರ ಮನಸ್ಸು ಹುಚ್ಚಾಯಿತು! ಮನಸ್ಸಿ ನಲ್ಲಿಯೆ ನೂರಾರುಸಾರಿ ಅಂಗಾಗಗಳಿಗೆ ಮುತ್ತಿಟ್ಟರು! ಮನಸ್ಸು ತೃಪ್ತಿ ಗೊಳ್ಳಲಿಲ್ಲ. ತಡೆಯುದಾಯಿತು!— ಏನಾದರೂ ಆಗಲಿ! ಸುಬ್ಬಮ್ಮ ಒಪ್ಪಿ ಸುಮ್ಮನಾದರೆ ಸಲೀಸಾಯಿತು! ಇಲ್ಲದಿದ್ದರೆ ಗಟ್ಟದ ಕೆಳಗೆ ಹಾರಿದರಾಯಿತು!— ಹೀಗೆ ಆಲೋಚಿಸಿ, ಸುಬ್ಬಮ್ಮನ ಮನಸ್ಸನ್ನರಿಯಲೋಸ್ಕರ ಸ್ವಲ್ಪ ಮುಂದೆ

ಸರಿದು ತಮ್ಮ ಕಾಲು ಆಕೆಯ ಕಾಲಿಗೆ ತಗಲುವಂತೆ ಮಾಡಿದರು. ಸುಬ್ಬಮ್ಮ ಬೆಚ್ಚಿ ಹಿಂದೆ ಸರಿದಳು. ಮುಂದೆ ಏನಾಗುತ್ತಿದ್ದಿತೋ ಏನೋ? ಅಷ್ಟರಲ್ಲಿ ಡೊಳ್ಳುಹೊಟ್ಟೆಯ ಸೋಮ ಮುರುವಿಗೆ ಹುಲ್ಲಿನ ಹೊರೆಯನ್ನು ಹೊತ್ತುಕೊಂಡು ಬರುತ್ತಾ ಸಮೀಪಸ್ಥನಾದುದನ್ನು ಕಂಡು ಸುಬ್ಬಮ್ಮ ಕೆಮ್ಮಿದಳು.

"ಏನು ಹೆಗ್ಗಡಿತಮ್ಮಾ, ಇಲ್ಲಿ ಕೂತುಬಿಟ್ಟಿರಲ್ಲಾ?" ಎಂದು ಸೋಮ ಹತ್ತಿರ ಬಂದು ನಿಂತನು.

ಫಕ್ಕನೆ ದೂರ ಸರಿದಿದ್ದ ಸೇರೆಗಾರರಿಗೆ ಮಹಾ ಆಶಾಭಂಗವಾಗಿ ತುಳು ಭಾಷೆಯಲ್ಲಿ ಏನೇನೋ ಹೇಳತೊಡಗಿದರು. ಸೋಮನೂ ಅದೇ ಭಾಷೆಯಲ್ಲಿಯೆ ಪ್ರತ್ಯುತ್ತರ ಹೇಳುತ್ತಿದ್ದನು. ಮಾತೂ ಮುಖಭಂಗಿಯೂ ಬಿಸಿಬಿಸಿಯಾಗಿದ್ದುವು.

ಸುಬ್ಬಮ್ಮ ವಿಷಯವೇನೆಂದು ಕೇಳಲು, ಹುಲ್ಲು ಹೊರೆಯನ್ನು ಕೆಳಗೆಸೆದು ಸೋಮ ಹೇಳತೊಡಗಿದನು.

ಸೇರೆಗಾರರೇ ಮೊದಲಾದವರು ಪಟಾಲಂ ಸೇರಿ ಹೂವಯ್ಯನ 'ಬಲೀಂದ್ರ' ಹೋತವನ್ನು ಚೋರಿಮಾಡಲು ಪ್ರಯತ್ನಿಸಿದ್ದ ಕಥೆಯನ್ನೆಲ್ಲ ಹೇಳಿದನು. ಮಾಂಸ ದಾಶೆ ತೋರಿಸಿ ತನ್ನನ್ನು ಹೇಗೆ ಮರುಳು ಮಾಡಿ 'ಕುರಿಚೋರಿ'ಗೆ ಕಳುಹಿಸಿ, ತಾವೆಲ್ಲರೂ ದೂರದಲ್ಲಿಯೆ ಅಡಗಿ ನಿಂತು, ಕಡೆಗೆ ಗುಟ್ಟು ರಟ್ಟಾಗಲು, ತಮ್ಮೊಬ್ಬರ ಜವಾಬ್ದಾರಿಯೂ ಇರಲಿಲ್ಲವೆಂದೂ ತಾನೊಬ್ಬನೇ ಕಳ್ಳನೆಂದು ಸಾರಿಬಿಟ್ಟರೆಂಬುದನ್ನೂ ತಿಳಿಸಿದನು.

ಆ ರಾತ್ರಿಯ ಪ್ರಸಂಗದಲ್ಲಿ ಸೋಮನಿಗೆ ಬಹಳ ಗಾಯವಾಗಿ ಹೂವಯ್ಯನ ಶುಶ್ರೂಷೆಯಲ್ಲಿ ಕೆಲ ದಿನಗಳು ಅಲ್ಲಿಯೆ ಇದ್ದು ಅನಂತರ ಎಲ್ಲ ವಾಸಿಯಾದ ಮೇಲೆ ತನ್ನ ಬಿಡಾರದಲ್ಲಿದ್ದ ಸಾಮಾನುಗಳನ್ನೆಲ್ಲ ಕೆಳಕಾನೂರಿಗೇ ತಂದು, ಇನ್ನು ಮೇಲೆ ಕಾನೂರಿಗೆ ಹೋಗುವುದಿಲ್ಲವೆಂದೂ ಸೇರೆಗಾರರ ಆಳಾಗಿ ಇರುವುದಿಲ್ಲವೆಂದೂ ಹಟ ಹಿಡಿದು ನಿಂತನು. ಸೇರೆಗಾರರು ಚತುರೋಪಾಯಗಳನ್ನು ಉಪಯೋಗಿಸಿ ಅವನನ್ನು ಹಿಂದಕ್ಕೆ ಕರೆತರಲು ಪ್ರಯತ್ನಿಸಿದರು. ಸೋಮನನ್ನು ಕಟ್ಟಿ ಹೊತ್ತು ಬಲಾತ್ಕಾರದಿಂದ ಕಾನೂರಿಗೆ ಸಾಗಿಸಲೂ ಪ್ರಯತ್ನಿಸಿದರು. ಆದರೆ ಶಕ್ತಿಯಿಲ್ಲದಿದ್ದರೂ ವಿವೇಕವಿಲ್ಲದಿದ್ದ ಅವನ ಕೆಲಸದ ಕತ್ತಿಗೆ ಬೆದರಿ ಸೇರೆಗಾರರ ಕಡೆಯ ಆಳುಗಳು ಹಿಂದಕ್ಕೆ ಹೋಗಬೇಕಾಯಿತು. 'ಹೂವಯ್ಯಗೌಡರಂಥಾ ಒಡೆಯರನ್ನು ಬಿಟ್ಟು ನಾನು ಎಲ್ಲಿಗೂ ಹೋಗುವುದಿಲ್ಲ' ಎಂದು ಸೋಮ ಕೆಳಕಾನೂರಿನಲ್ಲಿಯೆ ಆಳಾಗಿ ನಿಂತನು. ಕಟ್ಟಕಡೆಗೆ ಸೇರೆಗಾರರು ಸೋಮನಿಂದ ತಮಗೆ ಬರಬೇಕಾದ ಬಾಕಿಯಿದೆ ಎಂದು ಹುನಾರು ತೆಗೆದರು. ಸೋಮ 'ಅವರಿಗೆ ಕೊಡಬೇಕಾದ ಬಾಕಿ ಏನೂ ಇಲ್ಲ. ನಾನು ಇಷ್ಟು ದಿವಸ ಕೆಲಸ

ಮಾಡಿದ್ದಕ್ಕೆ ಮುಂಗಡ ವಜಾ ಆಗಿದೆ. ಅವರಿಂದಲೆ ನನಗೆ ಬರಬೇಕಾದ ಬಾಕಿ ಇದೆ' ಎಂದು ರಭಸವಾಗಿ ವಾದಿಸಿದನು.

ಆ ವಿಚಾರವಾಗಿಯೇ ಸೇರೆಗಾರರಿಗೂ ಸೋಮನಿಗೂ ತುಳು ಮಾತಿನಲ್ಲಿ ವಾಗ್ಯುದ್ಧವಾಗುತ್ತಿದ್ದುದು ಎಂದು ಗೊತ್ತಾದಮೇಲೆ ಸುಬ್ಬಮ್ಮನಿಗೆ ಸೋಮನ ಉಡುಪಿನಲ್ಲಾಗಿದ್ದ ಮಾರ್ಪಾಡು ಅರ್ಥವಾಯಿತು.

ಸಾಮಾನ್ಯವಾಗಿ ಅವನು ಒಂದು ಕೌಪೀನ ಕಟ್ಟಿಕೊಂಡು, ಹೊಟ್ಟೆ ಬಿಟ್ಟು ಕೊಂಡು, ಹಾಳೆಟೋಪಿ ಹಾಕಿಕೊಂಡು ಇರುತ್ತಿದ್ದನು. ಹೆಚ್ಚು ಎಂದರೆ ಒಂದೂವರೆ ಎರಡು ಗೇಣು ಅಗಲದ ಪಾಣಿಪಂಚೆಯನ್ನು ಸೊಂಟಕ್ಕೆ ಸುತ್ತಿಕೊಳ್ಳುತ್ತಿದ್ದನು. ಆದರೆ ಈಗ ಒಂದು ಸೊಗಸಾದ ಹಳೆಯ ಕೋಟು ಹಾಕಿದ್ದಾನೆ; ಮೊಳಕಾಲು ದಾಟಿದ್ದ ಪಂಚೆಯುಟ್ಟಿದ್ದಾನೆ; ತಲೆಗೆ ಹಾಳೆಟೋಪಿಗೆ ಬದಲಾಗಿ ಒಂದು ಹಳೆಯ ಹಾಸನದ ಟೋಪಿ ಹಾಕಿಕೊಂಡಿದ್ದಾನೆ! ಹೂವಯ್ಯನ ಸಂಪರ್ಕದಿಂದ ಇದ್ದಕ್ಕಿದ್ದ ಹಾಗೆ ಸೋಮನಿಗೂ ನಾಗರಿಕತೆ ಬಂದುಬಿಟ್ಟಿತ್ತು! ಕೆಲವು ತಿಂಗಳ ಹಿಂದೆ ತಮ್ಮೆದುರು 'ಒಡೆಯಾ ಒಡೆಯಾ' ಎಂದು ಹಲ್ಲು ಕಿರಿಯುತ್ತಿದ್ದವನು ಈಗ ಹೀಗೆ ತಲೆಯೆತ್ತಿ ನಿಂತು ಮಾತಾಡುತ್ತಿದ್ದುದನ್ನು ಕಂಡು ಸೇರೆಗಾರರ ಮೈ ಕುದಿಯಹತ್ತಿತ್ತು! ಆದರೆ ಅವನ ಮೈ ಮೇಲೆ ಬೀಳುವ ಧೈರ್ಯ ಅವರಿಗಿರ ಲಿಲ್ಲ. ಹರಿತವಾಗಿದ್ದ ಕುಡುಗೋಲು ಅವನ ಕೈಯಲ್ಲಿ ಕೊಂಕಿ ಹೊಳೆಯುತ್ತಿತ್ತು!

ಸುಬ್ಬಮ್ಮನಿಂದ 'ಬಾಯಿಗೆ ಈಸಿ'ಕೊಂಡು (ಎಲೆಯಡಕೆ, ಸುಣ್ಣ, ಹೊಗೆ ಸೊಪ್ಪು—ಇತ್ಯಾದಿ ವೀಳೆಯದ ಸಾಮಾಗ್ರಿಗಳನ್ನು ತೆಗೆದುಕೊಂಡು) ಸೋಮ ಹುಲ್ಲಿನ ಹೊರೆಯನ್ನು ಹೊತ್ತು ಮುಂದೆ ಹೋದರೂ ಸೇರೆಗಾರರ ನಾಯಿ ತನವನ್ನು ಚೆನ್ನಾಗಿ ತಿಳಿದಿದ್ದ ಅವನು ದೂರದ ಮರಪೊದೆಗಳ ಮರೆಯಲ್ಲಿ ಅಡಗಿ ನಿಂತು ನೋಡತೊಡಗಿದನು.

ಸೇರೆಗಾರರು ಎದ್ದುನಿಂತು, ಎಲೆಯಡಿಕೆಯನ್ನು ಉಗುಳುವ ನೆವದಿಂದ ಅತ್ತಯಿತ್ತ ತಿರುಗಾಡಿ, ಸೋಮ ಅಡಗಿ ನಿಂತಿದ್ದನ್ನು ಅರಿತು ಸುಬ್ಬಮ್ಮನನ್ನು ಕುರಿತು "ಯಾಕೆ ಪೆದ್ದೇಗೌಡರು ಇನ್ನೂ ಬರಲೇ ಇಲ್ಲ? ನಾವು ಗಂಗೆಯ ಬಿಡಾರಕ್ಕೆ ಹೋಗಿ ಇರುವ. ಅಲ್ಲಿ ಯಾರೂ ನಿಮ್ಮನ್ನು ಕಾಣುವುದಿಲ್ಲ" ಎಂದು ಗಂಗೆ ಸುಬ್ಬಮ್ಮರ ವೈರವನ್ನು ನೆನೆದು "ಗಂಗೆ ಈಗ ಬಿಡಾರದಲ್ಲಿಲ್ಲ. ಮನೆ (ಚಂದ್ರಯ್ಯಗೌಡರ ಮನೆ)ಯಲ್ಲಿ ಅವಳ ವಾಸ. ಗೌಡರು ಅವಳು ಮನೆ ಯಲ್ಲಿಯೇ ಇರಬೇಕೆಂದು ಹಟಮಾಡಿಬಿಟ್ಟರಲ್ಲಾ?" ಎಂದು ಸ್ವಲ್ಪ ನಗುತ್ತ ಸುಬ್ಬಮ್ಮನ 'ಕಣ್ಣು'ಗಳನ್ನು ದೃಷ್ಟಿಸುತ್ತಾ "ನೀವು ಗಂಡನ ಮೇಲೆ ವಿಶ್ವಾಸ ತೋರಿಸುವುದೇ ಹೊರತೂ ಅವರ ವಿಶ್ವಾಸ ಎಲ್ಲಾ ಗಂಗೆಯ ಮೇಲೆ!" ಎಂದರು.

ಸೇರೆಗಾರರ ವ್ಯಂಗ್ಯವಾಕ್ಯಗಳನ್ನು ಆಲಿಸಿದರೂ ಸುಬ್ಬಮ್ಮ ಉತ್ತರ ಕೊಡಲಿಲ್ಲ. ಆಕೆಯ ದೃಷ್ಟಿ ದೂರ ಮರಗಳ ನಡುವೆ ಕಾಲುದಾರಿಯಲ್ಲಿ ಬರುತ್ತಿದ್ದ ತಂದೆಯ ಮೇಲೆ ನೆಟ್ಟುಬಿಟ್ಟಿತ್ತು. ಹೋದ ಕೆಲಸವೇನಾಯಿತೋ ಎಂಬ ಉದ್ವೇಗದಿಂದ ಆಕೆಯ ಹೃದಯ ಹೊಡೆದುಕೊಳ್ಳುತ್ತಿತ್ತು.

ಪೆದ್ದೇಗೌಡರ ಮುಖದ ಖಿನ್ನತೆಯನ್ನೂ ಕಣ್ಣೀರನ್ನೂ ಕಾಣುತ್ತಲೆ ಸುಬ್ಬಮ್ಮಗೆ ಎಲ್ಲವೂ ಅರ್ಥವಾಯಿತು.

ಅವರು ಸೇರೆಗಾರರೊಡನೆ ಯಾವ ಮಾತನ್ನೂ ಆಡದೆ ದುಃಖಧ್ವನಿಯಿಂದ "ಏಳು, ಮನೆಗೆ ಹೋಗಾನ" ಎಂದು ನೆಲ್ಲುಹಳ್ಳಿಯ ಕಡೆಗೆ ಹೊರಟರು. ಮಟಮಟ ಮಧ್ಯಾಹ್ನವಾಗಿದ್ದುದನ್ನಾಗಲಿ, ತಿರುಗಿ ತೊಳಲಿದ ಆಯಾಸ ವನ್ನಾಗಲಿ, ಹಸಿವೆಯನ್ನಾಗಲಿ ಅವರು ಸ್ವಲ್ಪವೂ ಗಮನಿಸಲಿಲ್ಲ.

ಸೇರೆಗಾರರು ಏನನ್ನೊ ಹೇಳಲು ಪ್ರಯತ್ನಿಸಿದರು. ಆದರೆ ತಂದೆ ಮಗಳು ಇಬ್ಬರೂ ದೂರ ದೂರ ಹೋಗಿ ಕಣ್ಮರೆಯಾಗಿಬಿಟ್ಟರು.

ಸೇರೆಗಾರರು ಹತಾಶರಾಗಿ ಸೋಮ ಅಡಗಿ ನಿಂತಿದ್ದ ದಿಕ್ಕಿನ ಕಡೆಗೆ ತಿರುಗಿ ತಿರುಗಿ ನೋಡುತ್ತ ಕಾನೂರಿಗೆ ನಡೆದರು.

ಸ್ವಲ್ಪ ದೂರ ಹೋದಮೇಲೆ ಸುಬ್ಬಮ್ಮ ತಂದೆಯ ಆಯಾಸ ಸ್ಥಿತಿಯನ್ನು ಕಂಡು "ಕೆಳಕಾನೂರಿಗೆ ಹೋಗಿ ಊಟ ತೀರಿಸಿಕೊಂಡು ಹೋಗಾನ" ಎಂದು ಸೂಚನೆ ಕೊಟ್ಟಳು. ಆದರೆ ಪೆದ್ದೇಗೌಡರು ಒಪ್ಪಲಿಲ್ಲ. ಕಾನೂರು ಮನೆ ಪಾಲಾಗುವಾಗಲೂ ಇತರ ಕೆಲವು ಸಮಯಗಳಲ್ಲಿಯೂ ಅವರು ಅಳಿಯನ ಪಕ್ಷ ವಹಿಸಿ ನಾಗಮ್ಮನವರಿಗೂ ಹೂವಯ್ಯನಿಗೂ ವಿರುದ್ಧವಾಗಿ ವರ್ತಿಸಿ ಅನ್ಯಾಯ ಮಾಡಿದ್ದುದರಿಂದ ಕೆಳಕಾನೂರಿಗೆ ಊಟಕ್ಕಾಗಿ ಹೋಗಲು ಅವರಿಗೆ ಮುಖವಿರಲಿಲ್ಲ; ಮನಸ್ಸೂ ಬರಲಿಲ್ಲ. ಅಲ್ಲದೆ ತಮಗಾಗಿದ್ದ ದುಃಖ ಮತ್ತು ಅವಮಾನಗಳನ್ನು ಊರಲ್ಲಿ ಹಬ್ಬಿಸಲು ಅವರಿಗೆ ಇಷ್ಟವೂ ಇರಲಿಲ್ಲ.

ದಾರಿಯಲ್ಲಿ ತಂದೆ ಕಾನೂರು ಮನೆಯಲ್ಲಿ ನಡೆದ ಸಂಗತಿಗಳನ್ನು ಮಗಳಿಗೆ ಹೇಳಿಕೊಂಡು ಅತ್ತರು. ಮಗಳೂ ಬಿಕ್ಕಿ ಬಿಕ್ಕಿ ಅತ್ತಳು.

ಚಂದ್ರಯ್ಯಗೌಡರು 'ನಾನು ಸೇರೆಗಾರರನ್ನು ಕಳಿಸಲೂ ಇಲ್ಲ; ನಿಮ್ಮ ಮಗಳು ನನ್ನ ಮನೆಗೆ ಕಾಲಿಡುವುದೂ ಬೇಡ' ಎಂದು ಕತ್ತರಿಸುವಂತೆ ಮಾತಾಡಿ, ಸುಬ್ಬಮ್ಮನನ್ನು ಬಾಯಿಗೆ ಬಂದಂತೆ ವಾಚಾಮಗೋಚರವಾಗಿ ಬೈದರಂತೆ!

ಪೆದ್ದೇಗೌಡರು ಅಳುತ್ತ 'ನನ್ನ ಮಗಳನ್ನು ಉದ್ಧಾರಮಾಡಬೇಕು!' ಎಂದು ಅವರ ಕಾಲಿಗೆ ಬಿದ್ದಾಗ, ಒದ್ದು ಕುತ್ತಿಗೆಗೆ ಕೈಹಾಕಿ ದಬ್ಬಿಬಿಟ್ಟರಂತೆ. ತಂದೆಯನ್ನು ಸಮಾಧಾನಗೊಳಿಸಲು ಬಂದ ರಾಮಯ್ಯನಿಗೂ ಮುಖದಮೇಲೆ ಉಗುಳಿದರಂತೆ!

ಉರಿ ಬಿಸಿಲಿನಲ್ಲಿ ನಡೆದು ನಡೆದು, ಹಸಿದು, ಬಾಯಾರಿ, ದಣಿದು, ತಂದೆ ಮಗಳಿಬ್ಬರೂ ಮಧ್ಯಾಹ್ನ ಮೂರು ಗಂಟೆಯ ಹೊತ್ತಿಗೆ ನೆಲ್ಲುಹಳ್ಳಿಗೆ ಉಸ್ಸೆಂದು ಬಂದುಬಿದ್ದರು.

## ೫೩

## ಹಾ, ವಿಧಿ!

ಸೀತೆಮನೆ ಸಿಂಗಪ್ಪಗೌಡರು ಚಂದ್ರಯ್ಯಗೌಡರ ಮಗನಿಗೆ ಶ್ಯಾಮಯ್ಯಗೌಡರ ಮಗಳನ್ನು ಕೊಟ್ಟು ನಡೆಯಲಿದ್ದ ಮದುವೆಯನ್ನು ತಪ್ಪಿಸಬೇಕೆಂದು ಪ್ರಯತ್ನಿಸಿದ್ದರೂ ಬರುವ ಚೈತ್ರಮಾಸದಲ್ಲಿ ಲಗ್ನವಾಗುವುದು ನಿಶ್ಚಯವಾಯಿತೆಂಬ ಸುದ್ದಿ ಹಬ್ಬಿತು. ಅದುವರೆಗೆ ಸಿಂಗಪ್ಪಗೌಡರು ಕೈಕೊಂಡಿದ್ದ ಉಪಾಯಗಳೆಲ್ಲ ಸಲ್ಪ ಹೆಚ್ಚುಕಡಿಮೆ ನಾಗರಿಕವಾಗಿದ್ದುವು. ಯಾವಾಗ ಮದುವೆ ನಿಶ್ಚಯವಾಯಿತೆಂದು ಗೊತ್ತಾಯಿತೋ ಆಗ ಅವರ ಕೋಪಪ್ರವೃತ್ತಿ ಅನಾಗರಿಕ ಮಾರ್ಗಗಳಲ್ಲಿ ಸಂಚರಿಸತೊಡಗಿತು. ಕಿರಾತಕಾರ್ಯಗಳಿಂದಾದರೂ ಮದುವೆಯನ್ನು ನಿಲ್ಲಿಸಿಯೇ ಬಿಡುತ್ತೇನೆ ಎಂದು ತುಟಿ ಕಚ್ಚಿಕೊಂಡರು: ಜಾತಕ ನೋಡಿ, ದೇವರನ್ನು ಕೇಳಿಸಿ, ಲಗ್ನದ ಮುಹೂರ್ತವನ್ನು ಗೊತ್ತುಮಾಡಿ, ಎಲ್ಲ ವಿಧದಲ್ಲಿಯೂ ತಮಗೆ ವಿರೋಧವಾಗಿ ಚಂದ್ರಯ್ಯಗೌಡರ ಪರವಾಗಿ ವರ್ತಿಸಿದ್ದ ಅಗ್ರಹಾರದ ಜೋಯಿಸರು ವೆಂಕಪ್ಪಯ್ಯನವರನ್ನು ಮೆಟ್ಟಿನಿಂದ ಹೊಡೆಯಿಸುತ್ತೇನೆ; ಚಂದ್ರಯ್ಯಗೌಡರನ್ನು ಗುಂಡಿನಿಂದ ಉಡಾಯಿಸುತ್ತೇನೆ; ಶ್ಯಾಮಯ್ಯಗೌಡರ ಮೇಲೆ ಮಾಟ ಮಾಡಿಸುತ್ತೇನೆ; ಮದುವೆಯ ದಿನ ಅದು ನಡೆಯದಂತೆ ದೊಂಬಿ ಎಬ್ಬಿಸುತ್ತೇನೆ; ಗಂಡಿನ ಮನೆಯ ದಿಬ್ಬಣ ಹೆಣ್ಣಿನ ಮನೆಗೆ ಹೋಗದಂತೆ ತಡೆಯುತ್ತೇನೆ; – ಇತ್ಯಾದಿಯಾಗಿ ಮನಸ್ಸಿಗೆ ಬಂದಂತೆ ಆಲೋಚಿಸಿದರೂ ಬಾಯಿಗೆ ಬಂದಂತೆ ಹೇಳಲಿಲ್ಲ. ಅನೇಕ ಸಾರಿ "ಅಯ್ಯೋ, ನನ್ನ ಜಾಕಿ ಹೋಗಿಬಿಟ್ಟ! ಅವನಿದ್ದಿದ್ದರೆ!" ಎಂದುಕೊಳ್ಳುತ್ತಿದ್ದರು.

ಮಗನು ಅಕಾಲಮರಣಕ್ಕೆ ತುತ್ತಾದ ಮೇಲೆ ಅವರ ಮನಸ್ಸು ಕೆಲವು ವಿಷಯಗಳಲ್ಲಂತೂ ತುಂಬಾ ಕೆಟ್ಟು ಹೋಗಿತ್ತು. ಚಂದ್ರಯ್ಯಗೌಡರ ಕೀಟಲೆ ಅದಕ್ಕೆ ಬಹುಮಟ್ಟಿಗೆ ಕಾರಣವಾಗಿತ್ತು.

ಸಿಂಗಪ್ಪ ಕಕ್ಕಯ್ಯನ ಪ್ರತಾಪದ ಕಥೆಯನ್ನು ಗುಟ್ಟಾಗಿ ಕೇಳಿ ತಿಳಿದ ಹೂವಯ್ಯ ಒಂದು ದಿನ ಸೀತೆಮನೆಗೆ ಬಂದು ಕಕ್ಕಯ್ಯನಿಗೆ ಬುದ್ಧಿವಾದ ಹೇಳಿದನು. ಹೂವಯ್ಯ

ನಲ್ಲಿ ಅವರಿಗೆ ಗೌರವವಿದ್ದುದರಿಂದ ಸಿಂಗಪ್ಪಗೌಡರು ಕಷ್ಟದಿಂದ ಎಲ್ಲವನೂ ಸಾವಧಾನವಾಗಿ ಕೇಳಿದರು.

"ಚಿಕ್ಕಯ್ಯ, ನೀನು ನನಗಾಗಿ ಈ ದುರ್ವರ್ತನೆಗಳಲ್ಲಿ ತೊಡಗುವುದು ಬೇಡ. ಹೆಣ್ಣಿನ ತಂದೆತಾಯಿಗಳೂ ಗಂಡಿನ ತಂದೆತಾಯಿಗಳೂ ಒಪ್ಪಿ ಮದುವೆ ನಡೆಯಿಸು ವಾಗ ಹೊರಗಿನವರಿಗೆ ಅದನ್ನು ತಡೆಯಲು ಹಕ್ಕಿಲ್ಲ. ತಡೆಯುವುದು ನ್ಯಾಯವೂ ಅಲ್ಲ–ಅಲ್ಲದೆ ಜನಗಳು ಈಗಾಗಲೆ ನಮ್ಮನ್ನು ಆಡಿಕೊಳ್ಳುತ್ತಿದ್ದಾರೆ. ನೀನೇನಾ ದರೂ ಕ್ರೂರಕರ್ಮ ಮಾಡಿದರೆ ಅಥವಾ ಮಾಡಿಸಿಬಿಟ್ಟರೆ ಅದಕ್ಕೆ ನಾವೇ ಹೊಣೆ ಯಾಗಿ ಕಷ್ಟಪರಂಪರೆಗಳನ್ನು ಸಹಿಸಬೇಕಾಗುತ್ತದೆ. ವಿಧಿ ಬರೆದಿದ್ದುದನ್ನು ತಿದ್ದಲು ಯಾರಿಗೂ ಸಾಧ್ಯವಿಲ್ಲ. ಕೃಷ್ಣಪ್ಪನಿಗೆ ಮದುವೆ ನಿಶ್ಚಯವಾಗಿರಲಿಲ್ಲವೆ? ಕಡೆ ಗೇನಾಯ್ತು? ನೀನೆ ಯೋಚಿಸಿಕೊ! ಅವರವರ ಹಣೆಯಲ್ಲಿ ಬರೆದಂತೆ ಆಗು ತ್ತದೆ. ಆ ಬಲೆಯಿಂದ ತಪ್ಪಿಸಿಕೊಳ್ಳಲು ಪ್ರಯತ್ನಪಡುವುದೂ ಆ ಬಲೆಗೆ ಬೀಳುವ ಮಾರ್ಗಗಳಲ್ಲಿ ಒಂದು. ನಾನೇನೊ ಒಪ್ಪಿಕೊಳ್ಳುತ್ತೇನೆ: ಸೀತೆಯನ್ನು ಮದುವೆಯಾಗಬೇಕೆಂದು ನನಗೆ ಇಷ್ಟವಿತ್ತು. ನಾನು ಓದು ನಿಲ್ಲಿಸಿ ಇಲ್ಲಿಯೇ ನಿಂತುದಕ್ಕೆ ಅದೂ ಒಂದು ಕಾರಣವೆಂದೇ ಹೇಳುತ್ತೇನೆ . . . ಏನೇನೊ ಕಿನ್ನರ ಕನಸುಗಳನ್ನು ಕಟ್ಟಿಕೊಂಡಿದ್ದೆ. ಆ ಕನಸುಗಳಲ್ಲಿ ಸಿಕ್ಕಿ ನನ್ನ ಮೊದಲಿನ ಉನ್ನತಾ ದರ್ಶಗಳನ್ನೂ ತಿರಸ್ಕರಿಸಿದ್ದೆ . . . ಈಗ ಮತ್ತೆ ಆ ಕನಸುಗಳು ಗುಳ್ಳೆಗಳಂತೆ ಒಡೆದುಹೋಗಿ ನನಗೆ ನಿದ್ದೆಯಿಂದ ಎಚ್ಚರವಾದ ಹಾಗಾಗಿದೆ . . . ಹಿಂದೆ ನಿನ್ನೊ ಡನೆ ನಾನೆಷ್ಟೋ ಸಾರಿ ಮಾತಾಡಿದ್ದೆ – ಮದುವೆಗಿದುವೆಯ ಬಲೆಗೆ ಸಿಕ್ಕಿಕೊಳ್ಳದೆ, ಜ್ಞಾನ ಸಂಪಾದನೆಮಾಡಿ, ನಮ್ಮ ನಾಡಿನ ಜನಗಳ ಮೂಢಭಾವಗಳನ್ನೆಲ್ಲ ಪರಿಹರಿಸಿ ಜನರ ಸೇವೆಯಿಂದ ಜೀವನ ಸಾರ್ಥಕಮಾಡಿಕೊಂಡು ಈಶ್ವರ ಸಾಧನೆ ಮಾಡುತ್ತೇನೆ ಎಂದು."

ಹೂವಯ್ಯ ಮಾತು ನಿಲ್ಲಿಸಿ ಆಕಾಶದೃಷ್ಟಿಯಾಗಿ ಸುಮ್ಮನೆ ಕುಳಿತನು. ರಸಾ ವೇಶದಿಂದ ಅವನ ಮುಖ ಕೆಂಪಾಗುತ್ತಿತ್ತು. ಕಣ್ಣುಗಳಲ್ಲಿ ನೀರು ಹನಿಯಾಡು ತ್ತಿತ್ತು. ಸಿಂಗಪ್ಪಗೌಡರಲ್ಲಿಯೂ ಹೂವಯ್ಯನ ಭಾವವೆ ಸಂಚಾರವಾಗತೊಡಗಿತ್ತು. ಅವರೂ ಮಾತಾಡಲಿಲ್ಲ. ಯಾವುದೊ ಮಂತ್ರಶಕ್ತಿಯಿಂದ ಹೂವಯ್ಯ ತಮ್ಮನ್ನೂ ಒಂದು ಉನ್ನತ ಗಿರಿಶೃಂಗದ ದಿವ್ಯ ಪರಿಮಳಪೂರ್ಣವಾದ ವಾಯುಮಂಡಲಕ್ಕೆ ಕೊಂಡೊಯ್ದುಹಾಗೆ ತೋರಿತು. ಆ ಎತ್ತರಕ್ಕೆ ಕಾನೂರು, ಮುತ್ತಳ್ಳಿ, ಸೀತೆಮನೆ, ಕೆಳಕಾನೂರು — ಎಲ್ಲವೂ ಕ್ಷುದ್ರವಾಗಿ ಸಮತಟ್ಟವಾಗಿ ತೋರತೊಡಗಿದುವು. ಸಿಂಗಪ್ಪ ಗೌಡರು ತಮ್ಮ ಮಹಿಮೆಗೆ ತಾವೇ ಆಶ್ಚರ್ಯ ಪಟ್ಟರು.

ಹೂವಯ್ಯ ಮತ್ತೆ ಹೇಳತೊಡಗಿದನು:

" ಈ ವಿಚಾರಗಳನ್ನೆಲ್ಲ ಕುರಿತು ನಾನು ಅನೇಕ ದಿನ ಹಗಲು ರಾತ್ರಿ ಆಲೋಚನೆ ಮಾಡಿದ್ದೇನೆ. ನನಗೇ ತಿಳಿಯದಂತೆ ಮೆಲ್ಲಮೆಲ್ಲನೆ ನಾನೂ ಸಾಮಾನ್ಯ ಜನರ ಹವ್ಯಾಸಗಳಲ್ಲಿ ತಲೆಹಾಕತೊಡಗಿದ್ದೆ. ಇಲ್ಲಿಯ ಜಗಳ, ಮನಸ್ತಾಪ, ಮಾತ್ಸರ್ಯ, ಕರುಬು — ಇವುಗಳೆಲ್ಲ ನನ್ನ ಹೃದಯದಲ್ಲಿಯೂ ರೂಪಾಂತರ ವೇಷಾಂತರ ಗಳನ್ನು ಧರಿಸಿ ಮನೆಮಾಡಲಾರಂಭಿಸಿದ್ದುವು... ನಿನ್ನೆ ಸೂರ್ಯೋದಯದಲ್ಲಿ ನನ್ನೆದೆಯ ಕತ್ತಲೆ ಬಹುಮಟ್ಟಿಗೆ ಪರಿಹಾರವಾಯಿತು..."

ಹೂವಯ್ಯ ಹಿಂದಿನ ದಿನ ಪ್ರಾತಃಕಾಲದಲ್ಲಿ ತಾನು 'ಕಾನುಬೈಲಿ'ನ ನೆತ್ತಿಗೆ ಹೋಗಿ ಉದಯಸಮಯದ ರಮಣೀಯ ದೃಶ್ಯಪರಂಪರೆಗಳನ್ನು ಅವಲೋಕಿಸು ತ್ತಿದ್ದಾಗ ತನಗಾಗಿದ್ದ ಅನುಭವವನ್ನು ವರ್ಣಿಸಿದನು.

'... ಕಕ್ಕಯ್ಯ, ನನಗೆ ಮಾತುಕೊಡು. ನನ್ನ ಹೊಸ ಬಾಳಿನಲ್ಲಿ ನೀನು ನನಗೆ ಸಹಾಯವಾಗಬೇಕು. ನೀನು ರಾಮಾಯಣ ಮಹಾಭಾರತಗಳನ್ನು ಚೆನ್ನಾಗಿ ಓದಿದ್ದೀಯ! ಭಗವದ್ಗೀತೆಯನ್ನೂ ಸ್ವಲ್ಪ ತಿಳಿದುಕೊಂಡಿದ್ದೀಯ! ನೀನು ಮನಸ್ಸುಮಾಡಿದರೆ ನಿನ್ನ ಹೃದಯದಲ್ಲಿ ಮಾತ್ರವಲ್ಲದೆ ನಮ್ಮ ನಾಡಿನಲ್ಲೆಲ್ಲ ಸ್ವರ್ಗಸ್ಥಾಪನೆ ಮಾಡಬಹುದು.'

ಹೂವಯ್ಯನ ವಾಣಿಯಲ್ಲಿ ಉತ್ಸಾಹವಿತ್ತು; ಅವನ ಕಣ್ಣಿನ ಕಾಂತಿಯಲ್ಲಿ ಶ್ರದ್ಧೆಯಿತ್ತು. ಸಿಂಗಪ್ಪಗೌಡರು 'ಆಗಲಪ್ಪಾ! ನನ್ನ ಕೈಲಾದುದನ್ನು ನಾನು ವಂಚನೆಯಿಲ್ಲದೆ ಮಾಡುತ್ತೇನೆ!' ಎಂದರು. ಅವರಾತ್ಮಕ್ಕೆ ತೀರ್ಥಯಾತ್ರೆಗೋ ಗಂಗಾಸ್ನಾನಕ್ಕೋ ಹೊರಟ ಅನುಭವವಾಗುತ್ತಿತ್ತು.'

* * * *

ಹೂವಿನ ರಸಕ್ಕಾಗಿ ಬಣ್ಣದ ಚಿಟ್ಟೆ ಹಾರಾಡುತ್ತಿದೆ. ಚೈತ್ರಮಾಸದ ಪ್ರಾತಃ ಸಮಯದಲ್ಲಿ ಗಿಡವೆಲ್ಲ ವಸಂತ ಸಂಭ್ರಮದಿಂದ ತುಂಬಿಹೋಗಿದೆ. ಹೂವು ರಾಶಿರಾಶಿಯಾಗಿ ಕಿಕ್ಕಿರಿದಿದೆ. ಒಂದೊಂದು ಹೂವಿನ ಹೃದಯದ ಬಟ್ಟಲೂ ಜೇನಿನಿಂದ ತುಂಬಿದೆ. ಒಂದೊಂದು ಹೂವೂ ಚೆಲುವಾದ ಚಿಟ್ಟೆಯನ್ನು ತನ್ನ ಹೃದಯದ ಮಕರಂದಪಾನಕ್ಕೆ ಆಹ್ವಾನಿಸುತ್ತಿದೆ. ಚಿಟ್ಟೆಯ ಮನಸ್ಸು ಅತ್ತಯಿತ್ತ ಪಾದರಸದಂತೆ ಚಲಿಸುತ್ತಿದೆ. ಹಾಗೆಯೇ ಗಿಡದಲ್ಲಿ ಕೊಂಬೆಯಿಂದ ಕೊಂಬೆಗೆ ಹಬ್ಬಿ ಹೆಣೆದಿದ್ದ ಜೇಡನ ಬಲೆಯಲ್ಲಿ ಸಿಕ್ಕಿಬಿದ್ದಿದ್ದ ಇಬ್ಬನಿಗಳೂ ಬಾಲಸೂರ್ಯ ಕಾಂತಿಯಲ್ಲಿ ಬೆಳ್ಳಿಯ ಹನಿಗಳಂತೆ ಹೊಳೆಯುತ್ತಾ ಪಾದರಸದಂತೆ ವಿಕಂಪಿಸುತ್ತಿವೆ. ಕೆಲವು ಹನಿಗಳಲ್ಲಿ ಕಾಮನ ಬಿಲ್ಲಿನ ಬಣ್ಣಗಳೂ ಮಿರುಗುತ್ತಿವೆ. ಅಯ್ಯೋ, ಇದ್ದಕ್ಕಿದ್ದ ಹಾಗೆ ಹಾರುತ್ತಿದ್ದ ಚಿಟ್ಟೆ ಜೇಡನ ಬಲೆಗೆ ಸಿಕ್ಕಿ ತಪ್ಪಿಸಿಕೊಳ್ಳಲು ಒದ್ದಾಡು ತ್ತಿದೆ! ಬಲೆಯಲ್ಲಿ ಹೊಳೆಯುತ್ತಿದ್ದ ಹನಿಗಳೆಲ್ಲ ಉದುರುತ್ತಿವೆ! ಅಡಗಿ

ಕುಳಿತಿದ್ದ ವಿಕಾರಾಕೃತಿಯ ಕರಾಳ ಜೇಡನೂ ಚಿಟ್ಟೆಯ ಕಡೆಗೆ ಧಾವಿಸುತ್ತಿದೆ. ಅದನ್ನು ಕಂಡು ತಿಳಿದ ಚಿಟ್ಟೆ ತನ್ನ ಶಕ್ತಿಯನ್ನೆಲ್ಲಾ ಉಪಯೋಗಿಸಿ ತಪ್ಪಿಸಿಕೊಳ್ಳಲು ಒದ್ದಾಡುತ್ತಿದೆ! — ಆ ಚಿಟ್ಟೆಯಂತಿದ್ದಳು ಸೀತೆ!

ಪುಟ್ಟಮ್ಮನನ್ನು ತನ್ನಣ್ಣನಿಗೆ ತಂದುಕೊಂಡು, ತನ್ನನ್ನು ರಾಮಯ್ಯನಿಗೆ ಕೊಡುತ್ತಾರೆ ಎಂಬ ಸುದ್ದಿ ಕಿವಿಗೆ ಬಿದ್ದ ಕೂಡಲೆ ಬೆಬ್ಬಳಿಸಿದಳು ಸೀತೆ. ಅದು ವರೆಗೂ ಆಕೆಯ ಪ್ರೀತಿಗೆ ಇತರ ಬಂಧುಗಳಂತೆ ಮಾತ್ರ ಭಾಜನನಾಗಿದ್ದ ರಾಮಯ್ಯ ಈಗ ಮಹಾ ವೈರಿಯಾಗಿ ತೋರಿದನು, ಚಿಟ್ಟೆಗೆ ಜೇಡನು ತೋರಿಬಂದಂತೆ! ಎತ್ತ ತಿರುಗಿದರೂ ಆಕೆಗೆ ಸಹಾಯ ತೋರಲಿಲ್ಲ. ಸಹಜವಾಗಿದ್ದ ನಾಚಿಕೆಯನ್ನೂ ಮೂಲೆಗೊತ್ತಿ ತನ್ನ ತಾಯಿಯನ್ನೂ ಅಣ್ಣನನ್ನೂ ಬೇಡಿದಳು. ಇಬ್ಬರೂ ಕಣ್ಣೀರು ಸುರಿಸುತ್ತಾ ಶ್ಯಾಮಯ್ಯಗೌಡರ ಕಡೆಗೆ ಬೆರಳು ತೋರಿದರು. ಸಾಹಸ ಮಾಡಿ ತಂದೆಯನ್ನೂ ಬೇಡಿದಳು. ಶ್ಯಾಮಯ್ಯಗೌಡರು ಮಗಳಿಗೆ ಅನೇಕ ಬುದ್ಧಿ ವಾದಗಳನ್ನು ಉಪನ್ಯಾಸಮಾಡಿ, ಹೆಣ್ಣುಮಕ್ಕಳು ಗಂಡುಬೀರಿಗಳಂತೆ ವರ್ತಿಸ ಬಾರದೆಂದು ಹೇಳಿದರು.

"ಜಾತಕ ಬಂದಿದೆ. ವೆಂಕಪ್ಪಯ್ಯ ಜೋಯಿಸರಂಥಾ ಜೋಯಿಸರು ಎಲ್ಲಾ ಸರಿಯಾಗಿದೆ ಅಂತಾ ಹೇಳಿದ್ದಾರೆ. ದೇವರ ಪ್ರಸಾದ ಬಂದಿದೆ. ಗಂಡೂ ಲಕ್ಷಣ ವಾಗಿದ್ದಾನೆ. ಆಸ್ತಿ, ಮನೆ, ಐಶ್ವರ್ಯ — ಎಲ್ಲಾ ಇದೆ . . . ಚಂದ್ರಯ್ಯಗೌಡರ ಮಾತು ಎಂದರೆ ನಾಡೆಲ್ಲ ನಡುಗುತ್ತದೆ . . . ಮಾತು ಕೊಟ್ಟಮೇಲೆ ತಪ್ಪಬಾರದು. ಗೋವಿನ ಕಥೆಯಲ್ಲಿ ಆ ಗೋವು ಹುಲಿಗೆ ಮಾತು ಕೊಟ್ಟಮೇಲೆ ಪ್ರಾಣಹೋಗು ತ್ತದೆ ಎಂದು ಗೊತ್ತಿದ್ದರೂ ಕೂಡ ಅದರಂತೆ ನಡೆಯಲಿಲ್ಲವೆ? . . . ನಿನ್ನ ಮಾತು ಕೇಳಿದರೆ ನನ್ನ ಮರ್ಯಾದೆ ಹೋಗುತ್ತದೆ! ಮನೆತನಕ್ಕೆ ನಿನ್ನಿಂದ ಅವಮಾನ ವಾಗಬಾರದು . . . ಗಂಡ ಎಂದ ಮೇಲೆ ದೇವರು ಅಂತಾ ತಿಳಿದುಕೊಳ್ಳಬೇಕು. . ."

ಶ್ಯಾಮಯ್ಯಗೌಡರು ಉಪನ್ಯಾಸವನ್ನು ಇನ್ನೂ ಮುಗಿಸಿರಲಿಲ್ಲ. ಅಷ್ಟರಲ್ಲಿ ಸೀತೆ ತಡೆಯಲಾರದೆ ಬಿಕ್ಕಿಬಿಕ್ಕಿ ಅಳುತ್ತಾ ತನ್ನ ಕೋಣೆಗೆ ಹೋದಳು. ಅತ್ತೂ ಅತ್ತೂ ಕಡೆಗೆ ಹೂವಯ್ಯಬಾವನಿಗೆ ಗುಟ್ಟಾಗಿ ಕಾಗದ ಬರೆದು ಸಹಾಯ ಪಡೆಯು ತ್ತೇನೆ; ಅವರೂ ದುರ್ಲಕ್ಷಿಸಿಬಿಟ್ಟರೆ ಪ್ರಾಣ ಕಳೆದುಕೊಳ್ಳುತ್ತೇನೆ ಎಂದು ನಿರ್ಧರಿಸಿ, ಒಳಗಣಿಂದ ಬಾಗಿಲು ತಾಳ ಹಾಕಿಕೊಂಡು ಕಾಗದ ಬರೆದಳು:

"ಹೂವಯ್ಯಬಾವನಿಗೆ. ದಮ್ಮಯ್ಯ. ನಿಮ್ಮ. ಕಾಲಿಗೆ. ಬೀಳುತ್ತೇನೆ. ನನ್ನ ಕೈಬಿಡಬೇಡಿ. ಇನ್ನೊಂದು ವಾರದಲ್ಲಿ ನನ್ನನ್ನು ಮದುವೆ ಮಾಡಿಕೊಡ್ತಾರಂತೆ. ಮೂರು ದಿನ ಕಾಯುತ್ತೇನೆ. ನಾನೇನು ಮಾಡಬೇಕು? ಕಾಗದ ಬರೆಯಿರಿ. ಇಲ್ಲದಿ ದ್ದರೆ ನೀವೇ ಬಂದು ಹೇಳಿ. ಎರಡನ್ನೂ ಮಾಡದಿದ್ದರೆ ಕೆರೆ ಹಾರಿ ಸಾಯ್ತೇನೆ. ಸೀತೆ."

ಅದು ಸೀತೆಯ ಜೀವಮಾನದಲ್ಲಿ ಆಕೆ ಬರೆದ ಮೊದಲನೆ ಕಾಗದವಾಗಿತ್ತು. ತಾರೀಕು, ಊರು, ಹೆಸರು ಇತ್ಯಾದಿಗಳ ವಿಚಾರದಲ್ಲಿ ಪತ್ರಲೇಖನ ಸಂಪ್ರದಾಯಕ್ಕೆ ಕ್ರಾಂತಿ ಕುಠಾರವಾಗಿತ್ತು. ಸೀಸದಕಡ್ಡಿ ನಿಂತಲ್ಲೆಲ್ಲ ಪೂರ್ಣ ವಿರಾಮವಾಗಿತ್ತು. ಮತ್ತೆ ಕೆಲವೆಡೆ ಕಣ್ಣೀರು ಬಿದ್ದು ಕಲೆಯಾಗಿತ್ತು. ಅಕ್ಷರದ ತಪ್ಪುಗಳಿಗೂ ಬರಗಾಲವಿರಲಿಲ್ಲ.

ಕಾಳನ ಕೈಯಲ್ಲಿ ಕಾಗದವನ್ನು ಕಳುಹಿಸಲು ಪ್ರಯತ್ನಿಸಿದಳು. ಆದರೆ ಅವನಿಗೆ ಪುರಸತ್ತಿರಲಿಲ್ಲ. ಲಗ್ನ ಸಮೀಪಿಸಿದ್ದರಿಂದ ಎಲ್ಲರೂ ಕೆಲಸದ ಮೇಲಿದ್ದರು. ಕಡೆಗೆ ನಂಜನನ್ನು ಗುಟ್ಟಾಗಿ ಕರೆದು, ಕೆಳಕಾನೂರಿಗೆ ಹೋಗಿ ಹೂವಯ್ಯಬಾವನಿಗೆ ಕೊಡಬೇಕೆಂದು ಹೇಳಿ, ಕಾಗದವನ್ನು ಕೊಟ್ಟಳು. ಮತ್ತಾರ ಕೈಗೂ ಕೊಡಬಾರದೆಂದೂ ಎಚ್ಚರ ಹೇಳಿದಳು. ಇನಾಮಾಗಿ ಎಂಟಾಣೆಯನ್ನೂ ಕೊಟ್ಟಳು.

ನಂಜ ಕೆಳಕಾನೂರಿಗೆ ಹೋಗುತ್ತ ದಾರಿಯಲ್ಲಿ ಕಳ್ಳಂಗಡಿಯಲ್ಲಿ ಆ ಎಂಟಾಣೆಯ ಬೆಲೆಗೆ ಡೊಳ್ಳೇರಿ ಹಿಗ್ಗಿ ಹಿಗ್ಗಿ ಹರಿಯುವವರೆಗೂ ಕುಡಿದು-ಬಿಟ್ಟನು. ಮುಂದೆ ಹೋಗಲು ಅವನಿಗೆ ಇಚ್ಛೆಯಾಗಲಿ ಶಕ್ತಿಯಾಗಲಿ ಇರಲಿಲ್ಲ. "ಇಗೊಳ್ಳೊ ನಮ್ಮ ಅಮ್ಮ ಕೊಟ್ಟಾರೆ ! ನಿಮ್ಮ ಸಣ್ಣಯ್ಯಗೆ ಕೊಡು !" ಎಂದು ಹೇಳುತ್ತ ಕುಡಿದ ಮತ್ತಿನಲ್ಲಿ ಸೀತೆ ಹೂವಯ್ಯಗಾಗಿ ಕೊಟ್ಟಿದ್ದ ಕಾಗದವನ್ನು ಕಳ್ಳಂಗಡಿಗೆ ಬಂದಿದ್ದ ಚಂದ್ರಯ್ಯಗೌಡರ ಜೀತದಾಳು ಬೇಲರ ಸಿದ್ದನ ಕೈಗೆ ಕೊಟ್ಟನು.

ಸಿದ್ದ ಅದನ್ನು ಎರಡು ದಿನಗಳಾದಮೇಲೆ ಚಂದ್ರಯ್ಯಗೌಡರ ಗಾಡಿಯಾಳು ನಿಂಗನ ಮಗ ಪುಟ್ಟನ ಕೈಗೆ ಕೊಟ್ಟನು. ಪುಟ್ಟ 'ಸಣ್ಣಗೌಡ್ರಿಗೆ ಕೊಡಬೇಕಂತೆ' ಎಂದು ಹೇಳಿ ತನ್ನ ತಂದೆಗೆ ಕೊಟ್ಟನು. ಅವನು ಅದನ್ನು ರಾಮಯ್ಯಗೆ ತಲುಪಿಸಿದನು. ಹಾ, ವಿಧಿ !

ಮೂರು ದಿನ ಕಳೆಯಿತು. ಆ ಮೂರು ದಿನದ ಕಾಲವೂ ಸೀತೆಯ ಭಾಗಕ್ಕೆ ನಿರೀಕ್ಷಣೆ ಮತ್ತು ನಿರಾಶೆಯ ಒಂದು ದೀರ್ಘಯಾತನೆಯಾಗಿ ಪರಿಣಮಿಸಿತ್ತು. ಹೂವಯ್ಯನಾಗಲಿ ಆತನ ರಹಸ್ಯಪತ್ರವಾಗಲಿ ಬಂದು ತಾನು ಮಹಾಸಂಕಟದಿಂದ ಪಾರಾಗುತ್ತೇನೆ ಎಂದು ಹಾರೈಸಿದ್ದಳು. ಅನೇಕಸಾರಿ ಜಗಲಿಗೆ ಬಂದು ಇಣಿಕಿ ಇಣಿಕಿ ನೋಡಿ ಹೋಗುತ್ತಿದ್ದಳು. ಇತರರಿಗೆ ಹೇಳಿದರೆ ಅರ್ಥವಾಗುವುದೆಂದು ಹೆದರಿ, ತನ್ನ ಅರಿಯದ ತಂಗಿ ಲಕ್ಷ್ಮಿಗೆ ಜಗಲಿಗೆ ಯಾರು ಬಂದರೂ ತನಗೆ ತಿಳಿಸಬೇಕೆಂದು ಮುದ್ದಪ್ಪಣೆಮಾಡಿದ್ದಳು. ಲಕ್ಷ್ಮಿ ಸಲ ಸಲವೂ ಅಕ್ಕನ ಬಳಿಗೆ ಬಂದು ಅವರಿವರೆನ್ನದೆ, ಮನೆಯೊಳಗಿದ್ದವರೇ ಹೊರಗೆ ಹೋಗಿ ಮರಳಿ ಜಗಲಿಗೆ ಬಂದರೆನ್ನದೆ, ಆಳುಗಳೆನ್ನದೆ, ನಂಟರೆನ್ನದೆ, ಅನೇಕ ಜನರ ಆಗಮನವನ್ನು ಕುರಿತು ಬಂದು ಬಂದು ವರದಿ ಹೇಳುತ್ತಿದ್ದಳು. ಮೊದಲು ಮೊದಲು ಸೀತೆಗೆ ಅದು ಹಾಸ್ಯಾ

ಸ್ಪದವಾಗಿ ತೋರಿದರೂ ತುದಿಯಲ್ಲಿ ತಂಗಿಯ ಒಂದೊಂದು ವರದಿಯೂ ಮೂದಲಿಕೆಯಂತೆ ಇರಿಯತೊಡಗಿದುದರಿಂದ ಕರ್ತವ್ಯವನ್ನು ಅಲ್ಲಿಗೆ ಸಾಕು ಮಾಡುವಂತೆ ಹೇಳಿದಳು. ಆದರೂ ಲಕ್ಷ್ಮಿ ಅಭ್ಯಾಸ ಬಲದಿಂದಲೋ ಎಂಬಂತೆ ಆಗಾಗ ಬಂದು ಜಗಲಿಗೆ ಬಂದವರ ಬೇಡದ ಹೆಸರುಗಳನ್ನು ತಪ್ಪು ತಪ್ಪಾಗಿ ಹೇಳುತ್ತಿದ್ದಳು.

ಮೂರನೆಯ ದಿನ ಸಾಯಂಕಾಲದಲ್ಲಿ ಮದುವೆಗೆ ಬೇಕಾಗಿದ್ದ ಚಪ್ಪರ ಮಂಟಪದ ಶೃಂಗಾರಗಳನ್ನು ಮಹೋತ್ಸಾಹದಿಂದ ನೆರವೇರಿಸುತ್ತಿದ್ದ ಜನಸಂದಣಿಯಲ್ಲಿ ತೂರಿ ಕೊಂಡು ಬಂದಿದ್ದ ಲಕ್ಷ್ಮಿ ತನ್ನ ಅಕ್ಕಯ್ಯನನ್ನು ಕುರಿತು "ಕಾನೂರಿನಿಂದ ಗಾಡಿ ನಿಂಗಣ್ಣ ಬಂದಾನೆ ಕಣೇ! ರಾಮಯ್ಯಬಾವನಿಂದ ಅಣ್ಣಯ್ಯಗೆ ಕಾಗದ ತಂದಾನಂತೆ!" ಎಂದಳು.

ಸೀತೆಯ ಮುಖದಲ್ಲಿ ದುಃಖ ನಿರಾಶೆಗಳ ಛಾಯೆ ಎಷ್ಟು ಭಯಾನಕವಾಗಿ ತೋರಿತೆಂದರೆ ಲಕ್ಷ್ಮಿಯ ಮುಗ್ಧಹೃದಯವೂ ತಲ್ಲಣಗೊಂಡಿತು. ಅಕ್ಕಯ್ಯನ ಕೊರಳನ್ನು ಬಿಗಿಯಪ್ಪಿ, ಏತಕ್ಕೊ ಏನೋ ತನಗೇ ತಿಳಿಯದಂತೆ "ಅಕ್ಕಯ್ಯ ನಿನ್ನ ಮದುವೆ ದಿನ ಸೀರೆ ಉಟ್ಟುಕೊಳ್ತೇನೆ? ಆಯ್ತಾ?" ಎಂದು ಲಲ್ಲೆಗೈಯ ತೊಡಗಿದಳು. ಅವಳಿಗರಿಯದು ಅಕ್ಕನ ಎದೆ ಜ್ವಾಲಾಮುಖಿಯಾಗಿದೆ ಎಂದು!

ಸೀತೆ ಮಾತಾಡಲಿಲ್ಲ. ತಂಗಿಯನ್ನು ಮುದ್ದಿಸುತ್ತ ಬಿಕ್ಕಿಬಿಕ್ಕಿ ಅಳತೊಡಗಿದಳು. ಲಕ್ಷ್ಮಿಯೂ ಅಳತೊಡಗಿದಳು. ಅರಿಯದ ಅವಳಿಗೆ ಮದುವೆ ಎಂದರೆ ಏನೋ ಒಂದು ಭಯಂಕರ ವ್ಯಾಪಾರವಾಗಿರಬೇಕು; ಇಲ್ಲದಿದ್ದರೆ ಅಕ್ಕ ಹೀಗೆ ಅಳುತ್ತಿದ್ದಳೇ ಎನ್ನಿಸಿತು.

ಸೀತೆಯ ಮನಸ್ಸು ಆ ಸಮಯದಲ್ಲಿ ಅತ್ಯಂತ ಭಯಂಕರ ವ್ಯಾಪಾರಕ್ಕೆ ಹವಣಿಸುತ್ತಿದ್ದುದೂ ನಿಶ್ಚಯ!

ಲಕ್ಷ್ಮಿ ಸೀತೆಗೆ ತಿಳಿಸಿದ್ದಂತೆ ಕಾನೂರು ಚಂದ್ರಯ್ಯಗೌಡರ ಗಾಡಿಯಾಳು ನಿಂಗ ಸಾಯಂಕಾಲ ರಾಮಯ್ಯನಿಂದ ಒಂದು ಗುಟ್ಟಿನ ಕಾಗದವನ್ನು ತಂದು ಚಿನ್ನಯ್ಯನ ಕೈಯಲ್ಲಿ ಕೊಟ್ಟನು. ಅದನ್ನೋದಿದ ಚಿನ್ನಯ್ಯನ ದೇಹ ನಡುಗ ತೊಡಗಿತು; ಉಸಿರು ಜೋರಾಗಿ ಆಡಲಾರಂಭಿಸಿತು; ಮಾತಾಡಲು ಪ್ರಯತ್ನಿ ಸಿದಾಗ ಗಂಟಲು ಹಿಡಿದುಕೊಂಡಂತಾಗಿ, ನಾಲಗೆಯ ಶಕ್ತಿ ಉಡುಗಿದಂತಾಯಿತು. ತನ್ನ ಅಧೀರಸ್ಥಿತಿಯನ್ನೂ ಉದ್ವೇಗವನ್ನೂ ನಿಂಗನಿಗೆ ತೋರಗೊಡಬಾರದೆಂದು ಅಲ್ಲಿ ನಿಲ್ಲದೆ ಉಪ್ಪರಿಗೆಗೆ ಹೊರಟುಹೋದನು.

ಆ ರಾತ್ರಿ ತಮ್ಮ ಒಡೆಯರ ಮನೆಯಲ್ಲಿ ಕೆಲದಿನಗಳಲ್ಲಿ ಜರುಗಲಿದ್ದ ಮದುವೆ ಗಾಗಿ ಕೆಲಸ ಮಾಡಿಕೊಡಲು ಬಂದಿದ್ದ ನೆರೆಯವರಿಗೂ ಒಕ್ಕಲುಗಳಿಗೂ ಆಳು

ಗಳಿಗೂ ಎಲ್ಲರಿಗೂ ಊಟವಾಗಿ, ಗಡಿಬಿಡಿಯಡಗಿ, ನಿದ್ರಾಮೌನ ಮನೆದುಂಬು ವಷ್ಟರಲ್ಲಿ ಹನ್ನೆರಡು ಗಂಟೆ ಹೊಡೆದಿತ್ತು. ದಣಿದು ನಿಶ್ಚಿಂತರಾಗಿದ್ದ ಸರ್ವರಿಗೂ ಬೇಗನೆ ಗಾಢನಿದ್ರೆ ಹತ್ತಿತು.

ಇಬ್ಬರಿಗೆ ಮಾತ್ರ ನಿದ್ದೆ ಹತ್ತಿರಲಿಲ್ಲ; ತಂಗಿ ಸೀತೆಗೆ, ಅಣ್ಣ ಚಿನ್ನಯ್ಯಗೆ.

## ೫೪

# ಆತ್ಮಹತ್ಯೆ

ಕೆಲವರಿರುತ್ತಾರೆ, ಅವರಿಗೆ ಜಗತ್ತನ್ನು ತಮ್ಮ ಅಭಿಲಾಷೆಯ ಅಗ್ನಿಯಲ್ಲಿ ಕರಗಿಸಿ, ಇಚ್ಛೆಯ ಎರಕದಲ್ಲಿ ಹೊಯ್ದು, ತಮ್ಮ ಇಷ್ಟದ ಜೀವನ ಮೂರ್ತಿ ಯನ್ನು ನಿರ್ಮಿಸಿಕೊಳ್ಳಬೇಕೆಂಬ ಉತ್ಕಟಾಕಾಂಕ್ಷೆ. ಅವರು ಪ್ರಪಂಚವನ್ನು ಅನು ಸರಿಸುವುದಕ್ಕಿಂತಲೂ ಹೆಚ್ಚಾಗಿ ಪ್ರಪಂಚವೇ ತಮ್ಮ ಮನೋರಥಗಳಂತೆ ನಡೆದು ಕೊಳ್ಳಬೇಕೆಂದು ಬಯಸುತ್ತಾರೆ. ಆ ಬಯಕೆ ಕೈಗೂಡದಿದ್ದರೆ ನಿಷ್ಠುರ ಪ್ರಪಂಚ ದಿಂದ ಹೇಗಾದರೂ ಪಾರಾಗಲು ಪ್ರಯತ್ನಿಸುತ್ತಾರೆ. ಆ ಪ್ರಯತ್ನ ಅನೇಕ ರೂಪಗಳನ್ನು ತಾಳಬಹುದು. ಕಲೆಯ ಸುರುಚಿರ ಕೃತಿಗಳಿಂದ ಹಿಡಿದು ಹಗಲು ಗನಸು, ಅರೆಮರುಳು, ಹುಚ್ಚು, ಮೂರ್ಛೆ, ವೈರಾಗ್ಯ, ಆತ್ಮಹತ್ಯ—ಇತ್ಯಾದಿ ಗಳವರೆಗೂ ಆ ಪ್ರಯತ್ನದ ವ್ಯಾಪನೆಯಿದೆ. ಕಲೆ ಮತ್ತು ವೈರಾಗ್ಯಗಳಿಂದ ಲೋಕ ಸಂಗ್ರಹವಾಗಬಹುದು; ಹಗಲುಗನಸು, ಮರುಳು, ಮೂರ್ಛೆ, ಆತ್ಮಹತ್ಯೆ— ಇಂಥವುಗಳಿಂದ ಲೋಕಪೀಡನೆಯಾಗಬಹುದು. ಅಂತೂ ಈ ಪ್ರಪಂಚದಲ್ಲಿ ಆದರ್ಶಪ್ರಪಂಚವನ್ನು ಹುಡುಕುವವರಿಗೆ ಲೋಕ, ಕಟ್ಟಕಡೆಗೆ ಗೌರವ ತೋರಿದರೂ, ಮೊದಮೊದಲು ಅವರನ್ನು ನಿಷ್ಠುರವಾಗಿ ಪೀಡಿಸುತ್ತದೆ. ಆದ್ದರಿಂದ ಆದರ್ಶದ ಹೂವಿನ ಹಾಸಗೆಗೆ ಹೋಗಲೆಳಸುವವರು ಮುಳ್ಳಿನ ಬೇಲಿಯನ್ನು ದಾಟಲು ಸಿದ್ಧರಾಗಿರಬೇಕು. ಹಾಗೆ ಸಿದ್ಧರಾದವರಿಗೆಲ್ಲ ಹೂವಿನ ಹಾಸಗೆ ಲಭಿಸಿಯೆ ಲಭಿಸುತ್ತದೆ ಎಂಬುದೂ ನಿಶ್ಚಯವಲ್ಲ. ಎಷ್ಟೋ ಸಾಹಸಿಗಳು ದಾರಿಯಲ್ಲಿಯೇ ಮಡಿಯಬೇಕಾಗುತ್ತದೆ. ಅಂತಹ ಕನಸು ಕಟ್ಟುವ ಸಾಹಸಿಗಳ ಗುಂಪಿಗೆ ಸೇರಿ ದ್ದರು, ಸೀತೆ ಮತ್ತು ಹೂವಯ್ಯ.

ಮತ್ತೆ ಕೆಲವರಿರುತ್ತಾರೆ, ಅವರಿಗೂ ಆಶೆಗಳೂ ಇಚ್ಛೆಗಳೂ ಉತ್ಕಟವಾಗಿಯೆ ಇರುತ್ತವೆ. ಆದರೆ ಅವರ ಆಕಾಂಕ್ಷೆ ವಾಸ್ತವ ಜಗತ್ತಿಗೆ ಡಿಕ್ಕಿ ಹೊಡೆದು, ತಲೆತಾಗಿಸಿಕೊಂಡು ರಕ್ತಪಾತಮಾಡಿಸಿಕೊಳ್ಳುವುದಿಲ್ಲ. ಅದು ಕಠಿನ ಜಗತ್ತು ಎಲ್ಲಿ

ಬಾಗಿದರೆ ಅಲ್ಲಿ ಬಾಗಿ, ಎಲ್ಲಿ ತಲೆಯೆತ್ತಿದರೆ ಅಲ್ಲಿ ತಲೆಯೆತ್ತಿ, ಎಲ್ಲಿ ಇಕ್ಕಟ್ಟಾದರೆ ಅಲ್ಲಿ ಸಣ್ಣದಾಗಿ ನುಸುಳಿ, ತನ್ನ ಆಶೆ ಮತ್ತು ಇಚ್ಛೆಗಳನ್ನು ಪ್ರಪಂಚಕ್ಕೆ ಹೊಂದಿಸಿ ಕೊಂಡು ಬಾಳುತ್ತದೆ. ಅಂಥವರಿಗೆ ಕನಸುಕಟ್ಟುವ ಸಾಹಸಿಗಳಿಗೆ ಬಂದೊದಗುವ ಅತ್ಯುತ್ಕಟವಾದ ಹೃದಯಯಾತನೆ ಒದಗುವುದಿಲ್ಲ; ಅವರಿಗೆ ಆದರ್ಶ ಸಿದ್ಧಿ ಯಿಂದುಂಟಾಗುವಂತೆ ನಿರುಪಮವಾದ ಮಹತ್ತಾದ ದಿವ್ಯಾನಂದವೂ ದೊರೆಯು ವುದಿಲ್ಲ. ಆದರೆ ಒಟ್ಟಿನಲ್ಲಿ ಸ್ವಪ್ನಸಾಹಸಿಗಳಿಗಿರುವ ಘನತೆಯಿರದಿದ್ದರೂ ಐಹಿಕ ಜೀವನ ವೃಷ್ಟಿಯಲ್ಲಿ ಹೆಚ್ಚು ನೆಮ್ಮದಿಯಾಗಿರುತ್ತಾರೆ. ಅಂಥವರ ಗುಂಪಿಗೆ ಸೇರಿದ್ದವರು: ಚಿನ್ನಯ್ಯ ಮತ್ತು ಪುಟ್ಟಮ್ಮ.

ಮೇಲೆ ಹೇಳಿದ ಎರಡು ಗುಂಪುಗಳಿಂದಲೂ ಹಲಕೆಲವು ಲಕ್ಷಣಗಳನ್ನು ಒಳಗೊಂಡು ಮಧ್ಯವರ್ತಿಯಾಗಿದ್ದನು ರಾಮಯ್ಯ. ಅಂಥವರ ಭಾವ ಅವರಿರುವ ಸನ್ನಿವೇಶದ ಪ್ರಭಾವಕ್ಕೆ ಅನುಗುಣವಾಗಿ ಬದಲಾವಣೆ ಹೊಂದುತ್ತದೆ. ಆದ್ದರಿಂದ ಅಂಥವರನ್ನು ಅಂತು ಇಂತೆಂದು ನಂಬಿಬಿಡುವುದು ಕಷ್ಟ. ಅಸಮಭಾರದಿಂದ ತಕ್ಕಡಿಯ ಕೋಲು ತೂಗುವಂತೆ ಅವರ ಆತ್ಮ ಆಕಾಶಕ್ಕೊಮ್ಮೆ ಹಾರಿ, ಭೂಮಿ ಗೊಮ್ಮೆ ಬೀಳುತ್ತದೆ. ಅಂಥವರು ದುಷ್ಟರಲ್ಲ; ಕೃತ್ರಿಮ ಜೀವಿಗಳಲ್ಲ; ನಮ್ಮ ಕೋಪ ಅವಹೇಳನಗಳಿಗಿಂತಲೂ ಹೆಚ್ಚಾಗಿ ಕನಿಕರಕ್ಕೆ ಪಾತ್ರರಾಗುತ್ತಾರೆ. ಅವರ ಅನಿಶ್ಚಯತೆಯನ್ನು ದುರ್ಬಲತೆ ಎಂದು ಖಂಡಿಸಬಹುದು; ಆದರೆ ಅವರನ್ನು ಪಾಪಿಗಳೆಂದು ನರಕಕ್ಕೆ ತಳ್ಳುವುದು ಸಾಧ್ಯವಿಲ್ಲ; ಅವರು ತಮಗೂ ತೊಂದರೆ ತಂದುಕೊಳ್ಳುವುದಲ್ಲದೆ ಇತರರನ್ನೂ ಕೇಡಿಗೆ ಈಡುಮಾಡುತ್ತಾರೆ.

ಹೂವಯ್ಯನ ಸಹವಾಸ ತಪ್ಪಿದ ಮೇಲೆ ರಾಮಯ್ಯನಿಗೆ ಮೊದಲು ದುಷ್ಟ ವಾಗಿಯೂ ವಿಲಕ್ಷಣವಾಗಿಯೂ ತೋರುತ್ತಿದ್ದ ತನ್ನ ತಂದೆಯ ನಡತೆ ಸಾಧಾರಣ ವಾಗಿಯೂ ಸಮರ್ಪಕವಾಗಿಯೂ ತೋರತೊಡಗಿತು. ಸೀತೆಯ ಮೇಲಣ ಮೋಹದಿಂದ ಅಂಧನಾದ ಅವನು ಹೂವಯ್ಯನಿಗೆ ವಿರೋಧವಾದ ಚಾಡಿಯ ಮಾತುಗಳನ್ನೆಲ್ಲ ರುಚಿಯಿಂದ ಕೇಳಿ ನಂಬಿದನು. ಸ್ವಾರ್ಥಮೋಹದಿಂದ ಅನುದಾರ ವಾಗಿದ್ದ ಅವನ ಮನಸ್ಸು ಹೂವಯ್ಯನನ್ನು ಆಷಾಢಭೂತಿ ಎಂದೂ ಭಾವಿಸತೊಡ ಗಿತು. ಹಿಂದೆ ಎಷ್ಟೋ ಸಾರಿ ತನ್ನ ಅಣ್ಣನ ಘನತೆಯನ್ನು ಪ್ರದರ್ಶಿಸುವಂತೆ ತೋರು ತ್ತಿದ್ದ ಘಟನೆಗಳೆಲ್ಲವೂ ಈಗ ಕಪಟಗಳಾಗಿ ತೋರತೊಡಗಿದುವು. ಎಲ್ಲರೂ ಒಪ್ಪಿ— ರಾಮಯ್ಯ ತಿಳಿದಿದ್ದುದು ಹಾಗೆ—ತನಗಾಗಿ ಗೊತ್ತಾಗಿದ್ದ ಹೆಣ್ಣನ್ನು ಅಪಹರಿಸ ಲೆಂದು ಕ್ಷುದ್ರ ಯುಕ್ತಿಗಳನ್ನು ಹೂಡುವಷ್ಟು ಹೀನನಾದ ಮನುಷ್ಯನೆಲ್ಲಿ? ಉದಾತ್ತ ಸ್ವಭಾವವೆಲ್ಲಿ? ರಾಮಯ್ಯನಿಗೆ ತನ್ನ ತಂದೆ ನಿರ್ದುಷ್ಟರಾಗಿ ತೋರಿದುದರಿಂದ ಅವರ ಉದ್ಯಮಗಳಲ್ಲಿ ಸಂಪೂರ್ಣವಾಗಿ ಭಾಗವಹಿಸಿ ಅವರಿಗೆ ಬೆಂಬಲವಾದನು.

ಆದ್ದರಿಂದಲೆ ಸೀತೆ ಹೂವಯ್ಯನಿಗೆ ಬರೆದಿದ್ದ ಕಾಗದ ತನ್ನ ಕೈಗೆ ಬೀಳಲು ರಾಮಯ್ಯ ಕ್ರೂರನಾದುದು. ಅವನಿಗೆ ಆ ಕಾಗದದಲ್ಲಿ ಕಂಡುಬಂದದ್ದು ಸೀತೆಯ ದೋಷವಲ್ಲ; ಹೂವಯ್ಯನ ಮತ್ತು ಅವನ ಪಕ್ಷದವರ ಕುಯುಕ್ತಿ. ಹೂವಯ್ಯನ ಅಥವಾ ಅವನ ಕಡೆಯವರ ಪಿತೂರಿಯಿಂದಲ್ಲದೆ ಸೀತೆಯಂಥಾ ಸರಳ ಹೃದಯದ ಹಳ್ಳಿಯ ಹುಡುಗಿ ಎಂದಾದರೂ ಅಂತಹ ಪ್ರಣಯ ಪತ್ರವನ್ನು ಬರೆಯುವ ಸಾಹಸಕ್ಕೆ ಕೈಹಾಕಿಯಾಳೆ? ಇವರೆಲ್ಲರೂ ಸೇರಿ ಅರಿಯದ ಹುಡುಗಿಯ ಮನಸ್ಸನ್ನು ಕೆಡಿಸಲು ಪ್ರಯತ್ನಿಸಿದ್ದಾರೆ!

ರಾಮಯ್ಯನಿಗೆ ಸೀತೆ ತನ್ನನ್ನು ಪ್ರೀತಿಸುವಳೆಂಬುದರಲ್ಲಿ ಸ್ವಲ್ಪವೂ ಸಂದೇಹ ಏರಲಿಲ್ಲ. ಅವನು ನೆನೆದ ಪ್ರತಿಯೊಂದು ಸನ್ನಿವೇಶವೂ ತನ್ನ ಪರವಾದ ಸೀತೆಯ ಅನುರಾಗವನ್ನೇ ಸಮರ್ಥಿಸುತ್ತಿತ್ತು. ಅವನ ಮೋಹವಂಚಿತ ದೃಷ್ಟಿಗೆ ಸೀತೆಯ ಸರಳಸ್ನೇಹ ಪ್ರಣಯಪ್ರೇಮದಂತೆ ತೋರಿದುದರಲ್ಲಿ ಆಶ್ಚರ್ಯವೇನಿಲ್ಲ. ಅಂತೂ ಸೀತೆಯನ್ನು ಈ ಮಹಾ ಪಿತೂರಿಯಿಂದ ಹೇಗಾದರೂ ಪಾರುಮಾಡಿ ತನ್ನ ವಧುವನ್ನಾಗಿ ಮಾಡಿಕೊಂಡು ರಕ್ಷಿಸಬೇಕಾದ್ದು ತನ್ನ ಪರಮ ಕರ್ತವ್ಯವೆಂದು ರಸಾವಿಷ್ಟನಾಗಿ, ಸೀತೆಯನ್ನು ಎಚ್ಚರಿಕೆಯಿಂದ ಕಾಯುವಂತೆ ಚಿನ್ನಯ್ಯನಿಗೆ ಗುಟ್ಟಾಗಿ ಕಾಗದ ಬರೆದನು. ಆದರೆ ಸೀತೆಯ ಕಾಗದದ ವಿಚಾರವನ್ನು ಮಾತ್ರ ಯಾರೊಡನೆಯೂ ಪ್ರಸ್ತಾಪಿಸಲಿಲ್ಲ. ತಾನೂ ಅದನ್ನು ಆದಷ್ಟು ಶೀಘ್ರವಾಗಿ ಮರೆತು ಬಿಡುತ್ತೇನೆ ಎಂದು ಹಾರೈಸಿದನು.

ನಿಂಗ ತಂದುಕೊಟ್ಟ ರಾಮಯ್ಯನ ಗುಟ್ಟಿನ ಕಾಗದವನ್ನು ನೋಡಿ ಚಿನ್ನಯ್ಯ ಗಾಬರಿಗೊಂಡನು. ಒಕ್ಕಣೆಯ ಅಸ್ಫುಟತೆ, ಎಚ್ಚರಿಕೆಯ ಅನಿರ್ದಿಷ್ಟತೆ—ಇವು ಗಳಿಂದ ಅವನು ಮತ್ತೂ ಕಂಗಾಲಾದನು. ಆದರೆ ತನ್ನ ಉದ್ವೇಗವನ್ನು ಆದಷ್ಟು ನಿಗ್ರಹಿಸಿಕೊಂಡು ಯಾರೊಡನೆಯೂ ಆ ಮಾತನ್ನೆತ್ತಲಿಲ್ಲ. ಗಲಭೆಯೆಬ್ಬಿಸು ವುದು ಅವನಿಗೆ ನಾಚಿಕೆಗೇಡಾಗಿ ಕಂಡಿತು. ತಂಗಿಯನ್ನು ಎಚ್ಚರಿಕೆಯಿಂದ ಕಾಯುವ ಜವಾಬ್ದಾರಿಯೆಲ್ಲ ತನ್ನೊಬ್ಬನ ಮೇಲೆಯೇ ಬಿದ್ದುದರಿಂದ ಅವನು ಕಣ್ಣಿನ ಮೇಲೆ ಕಣ್ಣಾಗಿ ಆಕೆಯ ಮಾತು ಕತೆ ಸುಳಿವುಗಳನ್ನೆಲ್ಲ ಪರೀಕ್ಷಿಸತೊಡಗಿದನು.

ತನ್ನ ತಂಗಿಗೆ ಹೂವಯ್ಯನನ್ನೇ ಮದುವೆಯಾಗಬೇಕೆಂಬ ಗೀಳು ಹಿಡಿದಿರು ವುದೂ ರಾಮಯ್ಯನನ್ನು ಮದುವೆಯಾಗುವುದರಲ್ಲಿ ಸಂಪೂರ್ಣ ದ್ವೇಷವಿರು ವುದೂ ಚಿನ್ನಯ್ಯನಿಗೆ ಗೊತ್ತಿತ್ತು. ಆಕೆಯ ಇಷ್ಟವನ್ನು ನೆರವೇರಿಸಲು ತನ್ನ ಕೈಲಾದಮಟ್ಟಿಗೂ ಪ್ರಯತ್ನಿಸಿದ್ದನು. ಆದರೆ ತನಗಿಂತಲೂ ಪ್ರಬಲವಾದ ಶಕ್ತಿ ಗಳನ್ನು ಎದುರಿಸುವ ಸಾಹಸಕ್ಕೆ ಹೋಗದೆ 'ಹಣೆಯ ಬರಹ'ಕ್ಕೆ ತಲೆಬಾಗಿದ್ದನು. ಅದೂ ಅಲ್ಲದೆ, ಈ ವೈವಾಹಿಕ ಸಂಧಾನದಲ್ಲಿ ತನಗೆ ಅನಿಷ್ಟವಾದುದರ ಜೊತೆಗೆ

ಅಭೀಷ್ಟವಾದುದೂ ಸೇರಿದ್ದುದರಿಂದ, ಅನಿಷ್ಟವಾದುದನ್ನು ಪರಿಹರಿಸುವ ಉದ್ಯಮದಲ್ಲಿ ಅಭೀಷ್ಟವೆಲ್ಲಿ ಕೈತಪ್ಪುತ್ತದೆಯೋ ಎಂದು ಹಿಂಜರಿದಿದ್ದನು. ಏಕೆಂದರೆ, ಚಿನ್ನಯ್ಯನನ್ನು ಮದುವೆಯಾಗಲು ಪುಟ್ಟಮ್ಮಗೆ ಮನಸ್ಸಿದ್ದಂತೆಯೇ ಪುಟ್ಟಮ್ಮನ ವಿಚಾರದಲ್ಲಿ ಚಿನ್ನಯ್ಯನ ಹೃದಯ ಅತಿ ಕೋಮಲವಾಗಿತ್ತು.

ರಾತ್ರಿ ಎಲ್ಲರೂ ಮಲಗುವವರೆಗೂ ಕೆಲಸ ಮಾಡುವ ಮತ್ತು ಮಾಡಿಸುವ ನೆವದಿಂದ ಚಿನ್ನಯ್ಯ ಅತ್ತಯಿತ್ತ ತಿರುಗಾಡುತ್ತ ತನ್ನ ತಂಗಿಯ ಕಡೆಗೆ ಕಣ್ಣಿಟ್ಟಿದ್ದನು. ಎಲ್ಲರೂ ಮಲಗಿದ ಮೇಲೆ ಸೀತೆ ಮಲಗಿದ್ದ ಕೋಣೆಗೆ ಸಮೀಪವಾಗಿ ಹಾಸಗೆ ಹಾಸಿಕೊಂಡು ಮಲಗಿದನು. ರಾಮಯ್ಯ ಎಚ್ಚರಿಸಿದ್ದನೇ ಹೊರತು ಕಷ್ಟಬರುವ ರೀತಿಯನ್ನಾಗಲಿ ಅಪಾಯದ ಸ್ವಭಾವವನ್ನಾಗಲಿ ತಿಳಿಸಿರಲಿಲ್ಲವಾದುದರಿಂದ, ಚಿನ್ನಯ್ಯ ನಾನಾ ಭಯಂಕರ ಕಲ್ಪನೆಗಳ ದೆಸೆಯಿಂದ ಬೆವರುತ್ತ, ನಿಶ್ಶಬ್ದ ರಾತ್ರಿಯಲ್ಲಿ ಒಂದೊಂದು ಸದ್ದನ್ನೂ ಕಿವಿಗೊಟ್ಟು ಆಲಿಸುತ್ತ ಮಲಗಿದ್ದನು.

ಸಿಗರೇಟಿನ ಮೇಲೆ ಸಿಗರೇಟು ಹೊತ್ತಿ ಹೊತ್ತಿ ಹೊಗೆಯಾಗಿ ಹಬ್ಬಿ, ಚಿನ್ನಯ್ಯ ಮಲಗಿದ್ದ ಕೊಟಡಿಯ ವಾಯುಮಂಡಲವೆಲ್ಲ ಸಾಂದ್ರವಾಗುತ್ತಿತ್ತು. ಹಾಗೆಯೆ ಅವನ ಮನಸ್ಸೂ ಚಿಂತೆಗಳಿಂದ ಸಾಂದ್ರವಾಗಿತ್ತು. ಮನಸ್ಸಿಗೆ ಗೊತ್ತು, ಗುರಿ, ದಿಕ್ಕು, ದೆಸೆ ಏನೂ ಇದ್ದಂತೆ ತೋರಲಿಲ್ಲ; ಸುಂಟರಗಾಳಿಗೆ ಸಿಕ್ಕಿದ ತರಗೆಲೆ ಎತ್ತ ಅಂದರೆ ಅತ್ತ ಗಾಳಿ ದಬ್ಬಿದ ಕಡೆ ನುಗ್ಗುವಂತೆ. ಸೀತೆಗೆ ಏನು ಅಪಾಯ ಬರಬಹುದು? ಹೂವಯ್ಯ, ಸಿಂಗಪ್ಪಮಾವ ಇವರೆಲ್ಲ ಸೇರಿ ಏನಾದರೂ ಪಿತೂರಿ ಹೂಡಿದ್ದಾರೆಯೆ? ... ಸೀತೆಯನ್ನು ಇಲ್ಲಿಂದ ಸಾಗಿಸಲು ಆಲೋಚಿಸಿದ್ದಾರೆಯೆ? ... ಛೀ! ಎಲ್ಲಿಯ ಮಾತು! ಭೂತ ದೆಯ್ಯಗಳ ಚೇಷ್ಟೆಯ ವಿಚಾರವಾಗಿ ವೆಂಕಪ್ಪಯ್ಯನವರೇನಾದರೂ ತಿಳಿಸಿದರೆ? ... ಅಥವಾ ಸೀತೆ ಒಲ್ಲದ ಮದುವೆಯಿಂದ ತಪ್ಪಿಸಿಕೊಳ್ಳಲು ಓಡಿಹೋಗುವಯತ್ನ ಮಾಡುತ್ತಾಳೆಯೆ? – ಆ ಆಲೋಚನೆ ಎಷ್ಟು ಹಾಸ್ಯಾಸ್ಪದವಾಗಿ ಹುಸಿಯಾಗಿ ಕಂಡಿತೆಂದರೆ ಚಿನ್ನಯ್ಯ ಕಿಲಕ್ಕನೆ ನಕ್ಕುಬಿಟ್ಟನು — ಆತ್ಮಹತ್ಯ ಮಾಡಿಕೊಳ್ಳುತ್ತಾಳೆಯೆ? ನೇಣು! ಬಾವಿ! ಕೆರೆ! ವಿಷ! ಎಲ್ಲಿಯಾದರೂ ಉಂಟೆ? ಸೀತೆಯಿಂದ ಅದೊಂದೂ ಸಾಧ್ಯವಿಲ್ಲ! ಇಷ್ಟವಿದ್ದರೂ ಸಾಧ್ಯವಿಲ್ಲ! ನನಗೆ ಗೊತ್ತಿಲ್ಲವೇ ಸೀತೆ?

ಆಲೋಚಿಸುತ್ತ ಅವನ ಮನಸ್ಸು ಸಂಚರಿಸಿತು.— ಮದುವೆ ಚಪ್ಪರ, ಹಿತ್ತಿಲ ಬೇಲಿ, ತಾನು ಮದುವೆಗೆ ಹೊಲಿಸಬೇಕಾಗಿದ್ದ ಬಟ್ಟೆ, ಬೆಳಗಿನ ಜಾವ ಬೆಳಕು ಬಿಡಬೇಕಾದರೆ ಕಾಡುಕೋಳಿ ಹೊಡೆಯುವುದಕ್ಕೆ ಹೋಗಿ ಆಳುಗಳೆಲ್ಲ ಕೆಲಸಕ್ಕೆ 'ರೆಡಿ' ಆಗಬೇಕಾದರೆ ಮೊದಲು ಬಂದುಬಿಡಬೇಕು, ಹಾಳು ಕೋವಿಯ ಬಲದ

ನಳಿಗೆ ಸರಿಯಾಗಿ ಈಡೇ ಆಗುವುದಿಲ್ಲ !—“ಎಂಥದಪ್ಪಾ, ಇದು ಬೆನ್ನು ಕಡಿಯು ತ್ತದೆ? ತಿಗಣೆಯೋ? ಇರು . . . ಆ್ಲಯ್ !”

ಚಿನ್ನಯ್ಯ ಸಿಗರೇಟನ್ನು ಬಾಯಲ್ಲಿ ಕಚ್ಚಿಕೊಂಡೇ ಹಾಸಗೆಯ ಮೇಲೆ ಎದ್ದು ಕುಳಿತು, ಎರಡು ಕೈಯಿಂದಲೂ, ಕಗ್ಗತ್ತಲೆಯಲ್ಲಿ ಏನೂ ಕಾಣಿಸದಿದ್ದರೂ, ಹಾಸಗೆಯ ಮೇಲುಬಟ್ಟೆಯನ್ನು ಚೆನ್ನಾಗಿ ಸವರಿ ಮತ್ತೆ ಮಗ್ಗುಲಾದನು.

“ಸರಿ ! ಈ ರಾಮಯ್ಯನಿಗೆ ಕಸುಬಿಲ್ಲ ! ಏನೇನೋ ಪುಕ್ಕಲು? ಮದುವೆಗೆ ಮೊದಲೇ ಹೆಣ್ಣಿನಮೇಲೆ ಇಷ್ಟೊಂದು ಅಕ್ಕರೆ !”

ಮಧ್ಯರಾತ್ರಿಯ ಮೇಲಾಗಿದೆ ! ಚಿನ್ನಯ್ಯ ಆಲಿಸಿದನು: ಜಗಲಿ, ಕಿರುಜಗಲಿ ಮತ್ತು ಅಂಗಳಗಳಲ್ಲಿ ಮಲಗಿದ್ದ ಆಳುಗಳ ಉಸಿರಾಡುವಿಕೆ ರಾತ್ರಿಯ ನೀರವತೆ ಯಲ್ಲಿ ಛಂದೋಬದ್ಧವಾಗಿ ಕೇಳಿಬರುತ್ತಿತ್ತು. ನಡುವೆ ಗೊರಕೆಗಳ ಸದ್ದೂ ಸೇರಿತ್ತು.—ಚಿನ್ನಯ್ಯ ಸಿಗರೇಟು ಸೇದುವುದನ್ನು ನಿಲ್ಲಿಸಿ, ಕಣ್ಣು ಮುಚ್ಚಿ ಕೊಂಡರೂ ಎಚ್ಚರವಾಗಿರಲು ಪ್ರಯತ್ನಿಸುತ್ತ ಮಲಗಿದ್ದನು. ಆದರೆ ಸ್ವಲ್ಪ ಹೊತ್ತಿನಲ್ಲಿಯೆ ಅವನ ಪ್ರಜ್ಞೆ ಮಂಜುಮಂಜಾಗತೊಡಗಿ ಇನ್ನೇನು ಜಾಗ್ರದ ವಸ್ಥೆಯ ಹೊಸ್ತಿಲನ್ನು ದಾಟಬೇಕು ಎನ್ನುವಷ್ಟರಲ್ಲಿ ಭೀಷಣವಾದ ಚೀತ್ಕಾರ ಧ್ವನಿಯೊಂದು ಕತ್ತಲೆಯ ನಿಶ್ಶಬ್ದತೆಯನ್ನು ಪರಪರನೆ ಹರಿದು, ಎದೆನೆತ್ತರು ಹೆಪ್ಪುಗಡುವಂತೆ, ಕೇಳಿಸಿತು. ಚಿನ್ನಯ್ಯ ಆ ಧ್ವನಿ ಸೀತೆಯದೆಂದು ತಟಕ್ಕನೆ ನಿಶ್ಚಯಿಸಿ, ಕಿಡಿಬಿದ್ದ ಸಿಡಿಮದ್ದಿನಂತೆ ಹಾಸಗೆಯಿಂದ ನೆಗೆದೆದ್ದು “ಸೀತೆ ! ಸೀತೆ !” ಎಂದು ಗಾಬರಿಯಿಂದ ಕೂಗುತ್ತ ಕರೆಯುತ್ತ ಓಡಿದನು, ಸೀತೆ ಮಲಗಿದ್ದ ಕೊಟಡಿಗೆ !

ಮೂರು ದಿನಗಳಿಂದಲೂ ತನ್ನ ಕಾಗದಕ್ಕೆ ಹೂವಯ್ಯಬಾವನಿಂದ ಯಾವ ವಿಧವಾದ ಪ್ರತ್ಯುತ್ತರವೂ ಬಾರದಿದ್ದುದರಿಂದ ಸೀತೆಯ ಕೋಮಲ ಮನಸ್ಸಿಗೆ ದೊಡ್ಡ ಆಘಾತವಾದಂತಾಯಿತು. ಇದ್ದಕ್ಕಿದ್ದಹಾಗೆ ಆಕೆಗೆ ಜಗತ್ತು ಶೂನ್ಯ ವಾಗಿಯೂ ಭಯಾನಕವಾಗಿಯೂ ತೋರತೊಡಗಿತು. ಯಾರನ್ನು ಶಿಶುಸದೃಶ ವಾದ ಸರಳ ಹೃದಯದಿಂದ ತನ್ನ ಜೀವನದ ದೇವತೆಯೆಂದು ಆಕೆ ಭಾವಿಸಿದ್ದಳೋ ಆತನೇ ತನ್ನನ್ನು ತಿರಸ್ಕರಿಸಿದಮೇಲೆ ಬೇರೆ ಗತಿಯೇನು? ಸೀತೆಗೆ ತಾಯಿ, ತಂದೆ, ಅಣ್ಣ, ತಂಗಿ, ಬಂಧು ಬಾಂಧವರೆಲ್ಲರೂ ತನ್ನ ಕ್ರೂರ ವೈರಿಗಳಂತೆ ಕಾಣಲಾರಂಭಿಸಿದರು. ಭಯಂಕರ ಸನ್ನಿವೇಶದಿಂದ ತಪ್ಪಿಸಿಕೊಳ್ಳುವುದಾದರೂ ಹೇಗೆ? ತಾನು ಓದಿದ್ದ ಕಥೆಗಳಲ್ಲಿದ್ದ ಹುಡುಗಿಯರ ಸಾಹಸ ತನಗೆ ಸಾಧ್ಯವಾಗು ವಂತೆ ತೋರಲಿಲ್ಲ. ಓಡಿ ಹೋಗುವುದಾದರೂ ಎಲ್ಲಿಗೆ? ಹೇಗೆ? ಒಂದು ವೇಳೆ ಹೂವಯ್ಯ ‘ಹುಂ’ ಎಂದಿದ್ದರೆ ಅವನೊಡನೆ ಎಲ್ಲಿಗೆಂದರಲ್ಲಿಗೆ ಹೊರಡಲು

ಸಿದ್ಧವಾಗುತ್ತಿದ್ದಳು! ಏನು ಕಷ್ಟ ಒದಗಿದರೂ ಸಹಿಸುತ್ತಿದ್ದಳು! ಮಾನಗೀನ ದಯೆದಾಕ್ಷಿಣ್ಯಗಳನ್ನೆಲ್ಲ ಮೂಲೆಗೊತ್ತಿ ಇನಿಯನನ್ನು ಹಿಂಬಾಲಿಸುತ್ತಿದ್ದಳು! ಆದರೆ ಹೂವಯ್ಯನೂ ಕೈಬಿಟ್ಟಮೇಲೆ? ರಾಮಯ್ಯನಿಗೂ ತನಗೂ ಮದುವೆ ಯಾಗುತ್ತದೆ ಎಂಬುದನ್ನು ನೆನೆದಾಗಲೆಲ್ಲ ಸೀತೆ ಮೂರ್ಛೆ ಹೋಗುವಷ್ಟರ ಮಟ್ಟಿಗೆ ಉದ್ವಿಗ್ನೆಯಾಗುತ್ತಿದ್ದಳು; ಹತಾಶೆಯಿಂದ ಕೈ ಕಾಲು ಬಿದ್ದು ಹೋಗು ವಂತಾಗುತ್ತಿತ್ತು; ಕಣ್ಣೂ ಮನಸ್ಸೂ ಮಂಜಾಗುತ್ತಿತ್ತು. ಆಕೆಯ ಸುತ್ತಲಿದ್ದ ಯಾರೊಬ್ಬರಿಗಾಗಲಿ ಆಕೆಯ ಪುಟ್ಟ ಹೃದಯದಲ್ಲಿ ಆಗುತ್ತಿದ್ದ ವಿಪ್ಲವ ಅರ್ಥ ವಾಗುವಂತಿರಲಿಲ್ಲ.

ಹೊರಗೆ ದೇಶಾಂತರ ಓಡಿಹೋಗಲಾರದ ಆಕೆ ತನ್ನೊಳಗೆ ತಾನು ಓಡಿ ಹೋಗುವ ಉಪಾಯವನ್ನು ಹುಡುಕಬೇಕಾಯಿತು. ಆದರೆ ಆ ಉಪಾಯ ಹೊಳೆದುದು ಆಕೆಯ ಎಚ್ಚತ್ತ ಚಿತ್ತಕ್ಕಲ್ಲ, ಗುಪ್ತ ಚಿತ್ತಕ್ಕೆ.

ಆ ದಿನ ಬೈಗಿನಲ್ಲಿ ಕಪ್ಪಾಗುವವರೆಗೂ ಕಾದಿದ್ದು, ಹೂವಯ್ಯನಾಗಲಿ, ಆತನ ಇತರ ಯಾವ ವಿಧವಾದ ಪ್ರತಿನಿಧಿಯಾಗಲಿ, ಬಾರದಿರಲು, ತನ್ನ ಪ್ರಣಯ ಪತ್ರದಲ್ಲಿ ಬರೆದಿದ್ದಂತೆ ಆತ್ಮಹತ್ಯ ಮಾಡಿಕೊಳ್ಳಲು ನಿಶ್ಚಯಿಸಿದಳು. ಸಾವೆಂದರೆ ಹೆದರುತ್ತಿದ್ದ ಆ ಹುಡುಗಿ ಸಾವೊಂದೇ ತನಗೆ ಪಾರಾಗುವ ಮಾರ್ಗವೆಂದು ನಿಶ್ಚಯಿಸಬೇಕಾದರೆ ಬಾಳು ಆಕೆಗೆ ಎಷ್ಟು ಭಯಂಕರವಾಗಿ ಕಂಡಿರಬೇಕು? ಆತ್ಮಹತ್ಯ ಮಾಡಿಕೊಳ್ಳಲು ನಿಶ್ಚಯಿಸಿದ ಮೇಲೆ ಸಾವು ಭಯಂಕರವಾಗಿ ಕಾಣ ಸಲಿಲ್ಲ; ಬಾಳಿನ ಕೋಟಲೆ ಮತ್ತು ಹತಾಶೆಗಳಿಂದ ತನ್ನನ್ನು ಪಾರುಮಾಡುವ ನಚ್ಚಿನ ಸಖಿಯಂತೆ ಭಾಸವಾಯಿತು.

ಎಲ್ಲರೂ ಮಲಗಿದಮೇಲೆ, ಮನೆಗೆ ಹತ್ತಿರವಾಗಿದ್ದ ಕೆರೆಗೆ ನಡೆದು, ರಾಮಕ್ಕ ಮಾಡಿದಂತೆ ಮಾಡುತ್ತೇನೆ ಎಂದು ದೃಢಮಾಡಿಕೊಂಡಳು. ಕೆಲವು ವರ್ಷಗಳ ಹಿಂದೆ, ತಾನು ಇನ್ನೂ ಬಹಳ ಸಣ್ಣ ಹುಡುಗಿಯಾಗಿದ್ದಾಗ, ಕಾಳನ ತಾಯಿ ರಾಮಕ್ಕ, ಆಗ ತಾನರಿಯಲಾರದ ಯಾವುದೋ ಕಾರಣಕ್ಕಾಗಿ, ಆ ಕೆರೆಯಲ್ಲಿ ಬಿದ್ದು ಪ್ರಾಣ ಬಿಟ್ಟಿದ್ದುದನ್ನು ಸೀತೆ ಮರೆತಿರಲಿಲ್ಲ.

ಆ ರಾತ್ರಿ ಸೀತೆ ಎಲ್ಲರಿಗಿಂತಲೂ ಮೊದಲೆ ಊಟಮಾಡಿ ತಲೆನೋವು ಎಂಬ ನೆವದಿಂದ ಮಲಗಿದಳು. ಲಕ್ಷ್ಮಿ ತನಗೂ 'ಅಕ್ಕಯ್ಯಗೆ ಆದ್ಹಾಂಗೆ ಆಗ್ಯದೆ' ಎಂದು ಸೀತೆ ಮಲಗಿದ್ದ ಹಾಸಗೆಯಲ್ಲಿಯೆ ಪಾಲುಕೊಂಡಳು. ಬೇರೆ ಹಾಸಗೆಯಲ್ಲಿ ಅವಳನ್ನು ಮಲಗಿಸಬೇಕೆಂದು ಸೀತೆ ಮಾಡಿದ ಪ್ರಯತ್ನ ವ್ಯರ್ಥವಾಯಿತು.

ಸೀತೆ ನಿದ್ದೆ ಮಾಡಲಿಲ್ಲ. ಮದುವೆ ಚಪ್ಪರ ಮೊದಲಾದ ಕಾರ್ಯಗಳಲ್ಲಿ ತೊಡಗಿದ್ದವರ ಕೂಗು, ಕರೆ, ನಗು, ಕೇಕೆ — ಇವುಗಳೆಲ್ಲ ನಿಂತು, ಊಟದ ಗಲಿ

ಬಿಲಿಯೂ ಎಲೆಯಡಿಕೆ ವಿನಿಯೋಗದ ಗಡಿಬಿಡಿಯೂ ಮುಗಿದು ಎಲ್ಲರೂ ಮಲಗಿ ನಿಶ್ಶಬ್ದವಾಗುವುದನ್ನೆ ಎದುರುನೋಡುತ್ತಿದ್ದಳು. ತಾಯಿ ಗೌರಮ್ಮ ನವರು ಒಳಗಿನ ಕೆಲಸಗಳಲ್ಲಿ ತೊಡಗಿ ತಲೆತುರಿಸಲು ಪುರಸತ್ತಿಲ್ಲದಿದ್ದರೂ ನಡುವೆ ಒಂದು ಸಾರಿ ಬಂದು ಮಗಳ ಹಣೆಗೆ ಅಮೃತಾಂಜನ ತಿಕ್ಕಿ ಹೋಗಿದ್ದರು. ಅವರು ಮತ್ತೊಂದು ಸಾರಿ, ಮಲಗುವ ಮೊದಲು ಬಂದು ಕರೆದಾಗ ಸೀತೆ ಎಚ್ಚರವಾಗಿ ದ್ದರೂ ಗಾಢನಿದ್ರೆಯಲ್ಲಿರುವಂತೆ ನಟಿಸಿದ್ದಳು. ಅವರು ಮಗಳು ಸುಖವಾಗಿ ನಿದ್ದೆಮಾಡುತ್ತಿದ್ದಾಳೆ ಎಂದು ನೆಮ್ಮದಿಯಾಗಿ ಹೋಗಿ ಮಲಗಿದರೋ ಇಲ್ಲವೋ ನಿದ್ದೆ ಹತ್ತಿತ್ತು.

ಸೀತೆ ಹಾಸಗೆಯ ಮೇಲೆ ಮಲಗಿ ಕಣ್ಣುಬಿಟ್ಟುಕೊಂಡು ಕತ್ತಲೆಯನ್ನೇ ನೋಡುತ್ತ ನೆನೆದೂ ನೆನೆದೂ ಕಣ್ಣೀರು ಸುರಿಸಿದಳು . . . ಆ ಕೆರೆ ! ಆ ಕತ್ತಲೆ ! ಹಾವು ! . . . ನೀರು ಹಾವು ಎಂದರೂ ಆಕೆಗೆ ಪ್ರಾಣ ಹಾರುತ್ತಿತ್ತು ! . . .ಸೀತೆಯ ಎದೆ ಎಷ್ಟೋ ಸಾರಿ ಝಗ್ಗೆಂದಿತು ! . . . ಸಾವು ಭಯಂಕರವಾಗಿ ಕಂಡು, 'ನೋಡೋಣ, ಹೂವಯ್ಯ ಬಾವ ನಾಳೆಯಾದರೂ ಬರಬಹುದು' ಎಂದು ಕುರುಡಾಸೆ ಪಡತೊಡಗಿದಳು . . . ಮತ್ತೆ ತನಗೂ ರಾಮಯ್ಯನಿಗೂ ಆಗುವ ಬಲತ್ಕಾರದ ಮದುವೆಯನ್ನು ನೆನೆದು, ಸೇದುವ ಬಾವಿಗೆ ಕಾಲು ಜಾರಿದವನು ದಡದ ಗಿಡವನ್ನು ಅಮರಿ ಹಿಡಿಯುವಂತೆ ಬಾಳಿನ ಬಾವಿಗೆ ಕಾಲುಜಾರಿದವಳು ಸಾವಿನ ಕಾಲನ್ನು ಭದ್ರವಾಗಿ ಹಿಡಿದಳು ! . . . ಹಾಸಗೆಯ ಮೇಲೆ ಎದ್ದು ಕೂತಳು. ಪಕ್ಕದಲ್ಲಿ ಲಕ್ಷ್ಮಿ ಮುಗ್ಧವಾಗಿ ಮಲಗಿದ್ದುದು ಕಣ್ಣಿಗೆ ಕಾಣಿಸದಿದ್ದರೂ ಮನಸ್ಸಿಗೆ ಕಾಣಿಸಿ, ಏತಕ್ಕೋ ಏನೋ, ಸ್ವಲ್ಪ ತಡೆದು ಹೊರಡುತ್ತೇನೆಂದು ಸೀತೆ ಮತ್ತೆ ಮಲಗಿದಳು. ಮಲಗುತ್ತಿದ್ದಾಗ ಲಕ್ಷ್ಮಿಯ ತಲೆಯ ಮೃದುವಾದ ಎಳೆಗೂದಲು ಸೀತೆಯ ಕೆನ್ನೆಗೆ ಸೋಂಕಿತು ! ಸೀತೆ ಎಷ್ಟೋ ಸಾರಿ ಆ ಮುದ್ದು ತಲೆಗೂದಲಿಗೆ ಎಣ್ಣೆ ಹಾಕಿ, ಬಾಚಿ, ಬೈತಲೆ ತೆಗೆದು ಅಲಂಕರಿಸಿದ್ದಳು ! ಆ ಮುದ್ದಾದ ನುಣ್ಗು ರುಳಿನ ಸೋಂಕು ಧರ್ಮಶಾಸ್ತ್ರದ ಸಾವಿರ ನೀತಿಬೋಧೆಗಿಂತಲೂ ಹೆಚ್ಚು ವಿರೋಧವಾಗಿತ್ತು ಆತ್ಮಹತ್ಯೆಗೆ.

ಸೀತೆ ಈಗ ಹೋಗುತ್ತೇನೆ, ಈಗ ಹೋಗುತ್ತೇನೆ ಎಂದು ಆಲೋಚಿಸು ತ್ತಿದ್ದಾಗಲೆ ಜಗಲಿಯ ಗಡಿಯಾರದಲ್ಲಿ ಗಂಟೆ ಹೊಡೆಯತೊಡಗಿತು. ಸೀತೆ ಬಹಳ ಕುತೂಹಲದಿಂದ, ಇಷ್ಟದಿಂದ ಎಣಿಸಿದಳು ! ಒಂದು, ಎರಡು, ಮೂರು, ನಾಲ್ಕು, ಐದು, ಆರು, ಏಳು, ಎಂಟು, ಒಂಬತ್ತು, ಹತ್ತು, ಹನ್ನೊಂದು, ಹನ್ನೆ ರಡು ! ಆಹ, ಗಡಿಯಾರ ಇನ್ನೂ ಹೀಗೆ ಬೆಳಗಾಗುವ ತನಕವೂ ಗಂಟೆ ಹೊಡೆ ಯುತ್ತಲೇ ಇದ್ದಿದ್ದರೆ ! ಗಂಟೆ ಹೊಡೆಯುವುದನ್ನು ನಿಲ್ಲಿಸಿದ್ದರಿಂದ ಸೀತೆಯ

ಅಂತಃಕರಣಕ್ಕೆ ಗಡಿಯಾರವೂ ನಿಷ್ಕರುಣೆಯಾಗಿ ತೋರಿತು. ಅಷ್ಟರಲ್ಲಿ ಯಾರೋ ಹೊರಗಡೆ ಕೆಮ್ಮಿದರು! ಸೀತೆ ನೆವಸಿಕ್ಕಿ ಸಮಾಧಾನದಿಂದ ಇನ್ನೊಂದು ಸ್ವಲ್ಪ ಹೊತ್ತಾದ ಮೇಲೆ ಎಲ್ಲರೂ ಚೆನ್ನಾಗಿ ನಿದ್ದೆಮಾಡುತ್ತಾರೆ. ಆಮೇಲೆ ಹೊರಡುತ್ತೇನೆ ಎಂದು ಕತ್ತಲೆಯ ಕಡೆಗೆ ನೋಡುತ್ತ ಮಲಗಿದಳು.

ಅರ್ಧಗಂಟೆ ಕಳೆದಿರಲಿಲ್ಲ. ಸೀತೆ ಮೆಲ್ಲನೆ ಹಾಸಗೆಯಿಂದ ಎದ್ದಳು. ಎಲ್ಲೆಲ್ಲಿಯೂ ಸಂಪೂರ್ಣ ನಿಶ್ಶಬ್ದ. ಸೀತೆಗೆ ಆತ್ಮಹತ್ಯಮಾಡಿಕೊಳ್ಳಲು ಅವಕಾಶ ಕಲ್ಪಿಸಿಕೊಡುವುದಕ್ಕಾಗಿಯೇ ಎಂಬಂತೆ ಜಗತ್ತು ಎಚ್ಚರತಪ್ಪಿ ಮಲಗಿತ್ತು. ಬಾಗಿಲುಗಳು ಕೂಡ ಶಬ್ದಮಾಡಲಿಲ್ಲ. ಮಲಗಿದ್ದ ನಾಯಿಗಳೂ ತಲೆಯೆತ್ತಿ ನೋಡಲಿಲ್ಲ. ಸೀತೆ ಬಿರುಬಿರನೆ ಕೆರೆಯ ಕಡೆಗೆ ನಡೆದಳು. ಕಾಲಿಗೆ ಮುಳ್ಳು ಚುಚ್ಚಲಿಲ್ಲ; ಕಲ್ಲು ತಡೆಯಲಿಲ್ಲ.

ಎಷ್ಟು ಬೇಗನೆ ಕೆರೆಯ ದಡಕ್ಕೆ ಬಂದುಬಿಟ್ಟಿದ್ದಾಳೆ!

ಸೀತೆಗೆ ತನ್ನ ಸಾಹಸವನ್ನು ಕಂಡು ತನಗೇ ಆಶ್ಚರ್ಯವಾಯಿತು! ಅಷ್ಟು ಧೈರ್ಯ, ಸ್ಥೈರ್ಯ, ಸಾಮರ್ಥ್ಯ, ಚಿತ್ತದಾರ್ಢ್ಯಗಳು ತನ್ನಲ್ಲಿವೆ ಎಂಬುದು ಅದುವರೆಗೂ ಆಕೆಗೆ ತಿಳಿದಿರಲಿಲ್ಲ. ಸಾಯುವ ಮೊದಲು ಆತ್ಮದ ಶಕ್ತಿಯೆಲ್ಲ ಪ್ರಕಾಶಿತವಾಗಿದ್ದಂತೆ ತೋರಿತು.

ಇನ್ನೇನು ಕೆರೆಗೆ ಹಾರಬೇಕು! ಸೀತೆ ಹಿಂಜರಿದು ನಿಂತಳು.

ಹೂವಯ್ಯಬಾವ ಹೇಳಿಕೊಟ್ಟ ದೇವರ ಪ್ರಾರ್ಥನೆ! ಸೀತೆ ಆ ಕತ್ತಲೆಯಲ್ಲಿ ಸಾವಿರಾರು ನಕ್ಷತ್ರಗಳಿಂದ ಖಚಿತವಾಗಿದ್ದ ಆಕಾಶದ ಕಡೆಗೆ ತಲೆಯೆತ್ತಿ ಕೈ ಮುಗಿದು ಪ್ರಾರ್ಥಿಸಿದಳು! ಏನನ್ನು ಪ್ರಾರ್ಥಿಸಿದಳು! ಸೋಜಿಗ! ಈ ಮದುವೆ ಹೇಗಾದರೂ ತಪ್ಪಿಹೋಗಿ ಹೂವಯ್ಯಬಾವನನ್ನೇ ಮದುವೆಯಾಗುವಂತೆ ಕೃಪೆಮಾಡು ಎಂದು ಪ್ರಾರ್ಥಿಸಿದಳು! ಕೆರೆಗೆ ಹಾರುತ್ತಿದ್ದಾಳೆ! ಇನ್ನೆಲ್ಲಿಯ ಮದುವೆ?

ಪ್ರಾರ್ಥನೆ ಮುಗಿದು, ಸೀತೆ ತನ್ನೆಡೆಗೆ ಓಡಿಬರುತ್ತಿದ್ದ ಕೃಷ್ಣಪ್ಪನನ್ನು ಕಂಡು ಹೆದರಿ ಸೋದ್ವಿಗ್ನಹೃದಯೆಯಾಗಿ ಹಾರಿದಳು! ನೀರು ಚಪಲ್ಲನೆ ಸೀರಿತು! ಆದರೆ ಕೆರೆಯೊಳಗಿದ್ದ ಏನೋ ಒಂದು ಪದಾರ್ಥ ಆಕೆಯ ಎದೆಗೆ ಬಲವಾಗಿ ತಗುಲಿದಂತಾಯಿತು! ಅಥವಾ ಕೃಷ್ಣಪ್ಪನೇ ಗುದ್ದಿದನೇನು? ಬಹುಶಃ ನೀರಿನಲ್ಲಿ ನೆನೆಯಲು ಹಾಕಿದ್ದ ನೇಗಿಲುಗಳಿರಬೇಕು! ಸೀತೆಗೆ ಮಹಾಯಾತನೆಯಾಗಿ ಕಿಟ್ಟನೆ ಚೀರಿದಳು.

ಆ ಕೂಗನ್ನು ಕೇಳಿಯೇ ಚಿನ್ನಯ್ಯ ಆಕೆ ಮಲಗಿದ್ದಲ್ಲಿಗೆ ಓಡಿಬಂದದ್ದು! ಬೇಗನೆ ದೀಪಹೊತ್ತಿಸಿ ನೋಡಿದರೆ, ಸೀತೆ ಹಾಸಗೆಯ ಮೇಲೆ ನಿಷ್ಪಂದವಾಗಿ ಪ್ರಜ್ಞೆಯಿಲ್ಲದೆ ಮಲಗಿದ್ದಾಳೆ! ಲಕ್ಷ್ಮಿಯ ಕೈ ಆಕೆಯ ಎದೆಯ ಮೇಲೆ ಬಿದ್ದಿದೆ. ಮತ್ತು... ಲಕ್ಷ್ಮಿ, ತನ್ನ ಕನಸಿನ ಪ್ರಪಂಚದಲ್ಲಿ ದನದ ಕೊಟ್ಟಿಗೆಯ ಆಚೆ ರತ್ನಗಂಧಿ ಗಿಡದ ಬುಡದಲ್ಲಿ, ಉಚ್ಚೆಹೊಯ್ದು ಬಿಟ್ಟಿದ್ದಾಳೆ!

೫೫

## ಹೂವಯ್ಯ ಮುತ್ತಳ್ಳಿಗೆ

ಮಲಗಿದ್ದವರೆಲ್ಲರೂ ದಡಬಡನೆ ಎದ್ದು ನಾಲ್ಕು ದಿಕ್ಕುಗಳಿಂದಲೂ ಓಡಿ ಬಂದರು. ಒಬ್ಬೊಬ್ಬರ ಮನಸ್ಸಿನಲ್ಲಿ ಒಂದೊಂದು ಅನಾಹುತದ ಊಹೆಯಿತ್ತು. ಆದರೆ ಯಾವುದೊಂದೂ ವಾಸ್ತವವಾಗಿರಲಿಲ್ಲ.

ತಲೆಗೂ ಮುಖಕ್ಕೂ ತಣ್ಣೀರು ಹಾಕಿ, ಗಾಳಿ ಬೀಸಿ ಉಪಚರಿಸಿದ ಸ್ವಲ್ಪ ಹೊತ್ತಿನಮೇಲೆ ಸೀತೆ ಕಣ್ಣು ತೆರೆದಳು. ಆದರೆ ಪ್ರಪಂಚ ಆಕೆಗೆ ಹಿಂದಿನದಾಗಿರ ಲಿಲ್ಲ. ಮೊದಮೊದಲು ಅಲ್ಲಿ ಸುತ್ತಲಿದ್ದ ತಂದೆ, ತಾಯಿ, ಅಣ್ಣ ಮೊದಲಾದ ಪರಿಚಿತರ ಗುರುತು ಕೂಡ ಆಕೆಗೆ ಸಿಕ್ಕಿದಹಾಗೆ ತೋರಲಿಲ್ಲ. ಕೇಳಿದ ಯಾವ ಪ್ರಶ್ನೆಗೂ ಉತ್ತರಕೊಡಲಿಲ್ಲ. ಸುಮ್ಮನೆ ದುರುದುರನೆ ನೋಡತೊಡಗಿದಳು; ಬಿಕ್ಕಿಬಿಕ್ಕಿ ಅಳುತ್ತಿದ್ದಳು.

ಗೌರಮ್ಮನವರು ನಿಡುಸುಯ್ಯುತ್ತ ಕಂಬನಿಗರೆಯುತ್ತ ಮಗಳನ್ನು ನಾನಾ ಪರಿಯಿಂದ ನುಡಿಸುತ್ತ ತಮಗೆ ತಿಳಿದಿದ್ದ ದೆಯ್ಯ ದೇವರುಗಳಿಗೆಲ್ಲ ಹೇಳಿಕೊಂಡು ಮುಡಿಪುಕಟ್ಟಿದರು. ಶ್ಯಾಮಯ್ಯಗೌಡರೂ ಹೆಂಡತಿಯ ಉದ್ಯಮಗಳಲ್ಲಿ ಸಂಪೂರ್ಣ ಭಾಗಿಗಳಾದರು. ಮರುದಿನವೆ ಅಗ್ರಹಾರದ ವೆಂಕಪ್ಪಯ್ಯ ಜೋಯಿ ಸರನ್ನು ಕರೆಯಿಸಿ, ನಿಮಿತ್ತ ನೋಡಿಸುವುದಾಗಿಯೂ, ಕೊಳೂರಿಗೂ ಸಿದ್ಧರ ಮಠಕ್ಕೂ ಆಳು ಕಳುಹಿಸಿ ಪ್ರಸಾದ ತರಿಸುವುದಾಗಿಯೂ, ಮನೆಯ ದೆಯ್ಯ ದ್ಯಾವರುಗಳಿಗೆ ಹಣ್ಣು ಹಾಕಿಸಿ ರಕ್ತಬಲಿ ಕೊಡುವುದಾಗಿಯೂ, ಧರ್ಮಸ್ಥಳ, ತಿರುಪತಿ, ಸಿಬ್ಬಲುಗುಡ್ಡೆ ಮುಂತಾದ ದೂರದ ಮತ್ತು ಸಮೀಪದ ದೇವಸ್ಥಾನ ಗಳಿಗೆ ಕಾಣಿಕೆ ಅರ್ಪಿಸುವುದಾಗಿಯೂ, ಗಟ್ಟಿಯಾಗಿ, ನೆರೆದಿದ್ದ ಎಲ್ಲರಿಗೂ ಕೇಳಿಸು ವಂತೆ ಹೇಳಿಕೊಂಡರು. ಸೀತೆಯ ಮೈಮೇಲೆ ಬಂದಿದ್ದ ಪಿಶಾಚಿಗೆ ಭಯ ಹುಟ್ಟಿಸ ಬೇಕೆಂಬುದು ಅವರ ಅಂತರಂಗದ ಮುಖ್ಯೋದ್ದೇಶವಾಗಿತ್ತು.

ಬೆಳಗಿನ ಜಾವದಲ್ಲಿ ಸೀತೆ ಮಾತಾಡತೊಡಗಿದಳು. ಒಂದು ಸಾರಿ 'ಸೀತೆ' ಮಾತಾಡುವಂತೆಯೂ ಮತ್ತೊಂದು ಸಾರಿ 'ಇನ್ನಾರೋ' ಮಾತಾಡುವಂತೆಯೂ ತೋರುತ್ತಿದ್ದುದರಿಂದ, ಮೊದಲೆ ಮೂಢಭಾವನೆಗಳಿಂದ ತುಂಬಿಹೋಗಿದ್ದ ಮಂದಿಯ ಮನಸ್ಸು ಭಯಭ್ರಾಂತವಾಯಿತು. ಮನಸ್ಸಿಗೆ ಬಂದಹಾಗೆ ಸಿದ್ಧಾಂತ ಗಳನ್ನು ಕಟ್ಟತೊಡಗಿದರು.

ಆ ಊಹೆಯ ಸಿದ್ಧಾಂತಗಳಲ್ಲಿ ಒಂದು ಎಲ್ಲರ ಹೃದಯಕ್ಕೂ ಚೆನ್ನಾಗಿ

ಹಿಡಿಯಿತು: ಸೀತೆಮನೆ ಸಿಂಗಪ್ಪಗೌಡರ ಬಾಳದೆಹೋದ ಮಗ ಕೃಷ್ಣಪ್ಪನೇ ದೆಯ್ಯವಾಗಿ ಸೀತೆಯಮೇಲೆ ಬಂದಿದ್ದಾನೆ ಎಂಬುದು! ಸೀತೆಯ ಬಾಯಿಂದ ಹೊರಡುತ್ತಿದ್ದ ಕೆಲವು ಮಾತುಗಳೂ ಅವರ ಊಹೆಯನ್ನೇ ಸಮರ್ಥಿಸುವಂತೆ ಅರ್ಥ ಕೊಡುತ್ತಿದ್ದುವು!

ರಾಜ್ಯದಲ್ಲಿ ದಂಗೆಯಾದರೆ ಅದನ್ನಡಗಿಸಲು ಆ ಪ್ರದೇಶಕ್ಕೆ ರಾಜನ ಸೈನ್ಯ ಹೋಗುವ ಠೀವಿಯಿಂದ ವೆಂಕಪ್ಪಯ್ಯ ಜೋಯಿಸರು ಮರುದಿನ ಮುತ್ತಳ್ಳಿಗೆ ಬಂದರು. ನೋಡುತ್ತಿದ್ದ ಜನರ ಮನಸ್ಸು ಬೆರಗಾಗುವ ರೀತಿಯಲ್ಲಿ ನಿಮಿತ್ತ ನೋಡಿ, ತಲೆಯಲ್ಲಾಡಿಸಿ ಶ್ಯಾಮಯ್ಯಗೌಡರನ್ನು ಒಂದು ಏಕಾಂತದೆಡೆಗೆ ಕರೆದು ಕೊಂಡು ಹೋಗಿ ಕಿವಿಯಲ್ಲುಸುರಿ, ಮಂತ್ರಿಸಿದ ವಿಭೂತಿ ಕುಂಕುಮ ತೆಂಗಿನ ಕಾಯಿಗಳನ್ನು ಕೊಟ್ಟು, ತಮಗೆ ಬರಬೇಕಾಗಿದ್ದ ದಾನ ದಕ್ಷಿಣೆಗಳನ್ನು ಹೊತ್ತು ಅಗ್ರಹಾರಕ್ಕೆ ಹಿಂತಿರುಗಿದರು. ಏನೋ ಒಂದು ಮಹತ್ತಾದ ಕಾರ್ಯವನ್ನು ಸಾಧಿಸಿದಂತಾಗಿ ಮನೆಯವರೆಲ್ಲರ ಮನಸ್ಸೂ ನೆಮ್ಮದಿಯಾಯಿತು.

ಜೋಯಿಸರು ಉಪದೇಶಿಸಿದಂತೆ ಸೀತೆಗೆ ವಿಭೂತಿ ಕುಂಕುಮಗಳನ್ನು ಹಚ್ಚಿ, ಆಕೆ ಮಲಗುತ್ತಿದ್ದ ಸ್ಥಳದ ಮೇಲುಭಾಗದಲ್ಲಿದ್ದ ಬಿದಿರುಗಳುವಿಗೆ ಮಂತ್ರಿಸಿದ ತೆಂಗಿನಕಾಯಿಯನ್ನು ಕಟ್ಟಿದರು.

ಶ್ಯಾಮಯ್ಯಗೌಡರು ಜೋಯಿಸರು ತಮಗೆ ಹೇಳಿದ್ದ ಗುಟ್ಟಿನ ಮಾತುಗಳನ್ನು, ಗುಟ್ಟಾಗಿ, ಗುಟ್ಟಾಗಿಡಬೇಕೆಂದು ಹೇಳುತ್ತಾ ಒಬ್ಬೊಬ್ಬರಿಗೇ ಎಂದು ಅನೇಕ ಜನರಿಗೆ ಹೇಳಿದರು.

ಹಾಗೆ ಹೇಳಲು ಅವರಿಗೆ ಒಂದು ನೆವವೂ ಇತ್ತು. ಜೋಯಿಸರು ನಿಮಿತ್ತ ಹೇಳಿದ್ದ ವಿಷಯವನ್ನು ಇತರರು ಮೊದಲೇ ನಿರ್ಣಯಿಸಿದ್ದರು. ಎಲ್ಲರಿಗೂ ಗೊತ್ತಿರುವುದನ್ನು ಗುಟ್ಟಾಗಿಡುವುದರಲ್ಲಿ ಅರ್ಥವಾದರೂ ಏನಿದೆ? ಆದ್ದರಿಂದ ತಮ್ಮ ಮಗಳಮೇಲೆ ಬಂದಿರುವವನು ಸೀತೆಮನೆ ಸಿಂಗಪ್ಪಗೌಡರ ಮಗ ಕೃಷ್ಣಪ್ಪನೇ ಎಂದು ಜೋಯಿಸರೂ ನಿಮಿತ್ತ ನೋಡಿ ಹೇಳಿದರೆಂದು ತಿಳಿಸತೊಡಗಿದರು. ಇಂತಹ ವಿಷಯಗಳೆಂದರೆ ಹಳ್ಳಿಗರ ಕಿವಿಗಳಿಗೆ ಹಬ್ಬ. ಸುದ್ದಿ ಬಾಯಿಂದ ಬಾಯಿಗೆ ಕಿವಿಯಿಂದ ಕಿವಿಗೆ ಹಬ್ಬಿತು.

ಸ್ವಂತ ಮಗನಿಗೆ ಹೆಂಡತಿಯಾಗಿ ಮನೆಗೆ ಬರಲಿರುವ ತಮ್ಮ ಸೊಸೆಯನ್ನು ತಮ್ಮ ಬದ್ಧವೈರಿಯಾಗಿರುವ ಸೀತೆಮನೆ ಸಿಂಗಪ್ಪಗೌಡರ ಬಾಳದೆ ಹೋದ ಮಗನ ದೆಯ್ಯ ಹಿಡಿದುಕೊಂಡಿರುವ ವಿಚಾರವನ್ನು ನಿಂಗನ ಬಾಯಿಂದ ಕೇಳಿ ದೊಡನೆಯೆ ಚಂದ್ರಯ್ಯಗೌಡರು ಬೆಂಕಿಬೆಂಕಿಯಾದರು. ತಮ್ಮನ್ನು ಪೀಡಿಸಲು ಬದುಕಿರುವ ತಂದೆ ಸಾಲದೆ ಸತ್ತ ಮಗನೂ ಬರಬೇಕೆ? ಕೃಷ್ಣಪ್ಪನ ಪಿಶಾಚಕ್ಕೆ

ನರಕಯಾತನೆ ಕೊಟ್ಟು ರಚ್ಚು ತೀರಿಸಿಕೊಳ್ಳಬೇಕೆಂದು ನಿರ್ಧರಿಸಿದರು. ಮದುವೆಯಾಗಿ ಸೀತೆ ಕಾನೂರಿಗೆ ಬಂದ ಮೇಲೆಯೂ ಕೃಷ್ಣಪ್ಪನ ಪಿಶಾಚ ತಮ್ಮ ಸೊಸೆಯ ಮೇಲೆ ಬರುವ ಧೈರ್ಯ ಮಾಡಿದರೆ ಆಗ ಮಾಡಿಸುತ್ತೇನೆ ಅದಕ್ಕೆ ! ಕೊಡಬಾರದ ಕಷ್ಟಗಳನ್ನು ಕೊಟ್ಟು ತಂದೆಯ ಮೇಲಣ ಸಿಟ್ಟನ್ನು ಮಗನ ಪ್ರೇತದ ಮೇಲೆ ತೀರಿಸಿಕೊಳ್ಳುತ್ತೇನೆ !

ಆಲೋಚಿಸುತ್ತಿದ್ದಂತೆ ಶಿಕ್ಷಾವಿಧಾನಗಳು ಒಂದೊಂದಾಗಿ ಅವರ ಮನಸ್ಸಿಗೆ ಹೊಳೆದುವು: — ಸೆಗಣಿ ತಿನ್ನಿಸುವುದು; ಬರೆ ಹಾಕುವುದು; ಉಪವಾಸ ಕೆಡವಿ ಜೀರಿಗೆ ಮೆಣಸಿನಕಾಯಿಯ ಕಾರದ ಮುದ್ದೆಯನ್ನು ತಿನ್ನಿಸುವುದು; ತಿನ್ನದಿದ್ದರೆ ಕಣ್ಣಿಗೆ ಕಾರ ಸಿಡಿಯುವುದು; ಪಟಿಕಾರ, ಕೂದಲು, ಇಂಗು, ಒಣಮೆಣಸಿನಕಾಯಿ ಮೊದಲಾದ ಪದಾರ್ಥಗಳನ್ನು ಉರಿಹಾಕಿ ಮೂಗಿಗೆ ಹೊಗೆ ಹಿಡಿಯುವುದು; ವೆಂಕಪ್ಪಯ್ಯ ಜೋಯಿಸರಿಂದ ಮಂತ್ರ ಹಾಕಿಸಿ, ದಿಗ್ಬಂಧನ ಮಾಡಿಸಿ ಅವರಿಗೆ ತಿಳಿದಿರುವ ಮಂತ್ರದ ಯಾತನೆಗಳನ್ನೆಲ್ಲ ಪ್ರಯೋಗಿಸುವುದು . . . ಇತ್ಯಾದಿ.

ಸಿಂಗಪ್ಪಗೌಡರೇ ಕೈಗೆ ಸಿಕ್ಕಿ, ತಾವೇ ಅವರನ್ನು ಮೇಲೆ ಹೇಳಿದ ರೀತಿ ಪೀಡಿಸುತ್ತಿದ್ದರೆ ಎಷ್ಟು ಸಂತೋಷವಾಗುತ್ತಿತ್ತೋ ಅಷ್ಟು ಸಂತೋಷವಾಯಿತು ಚಂದ್ರಯ್ಯಗೌಡರಿಗೆ ಸೀತೆಯ ಮೈಮೇಲೆ ಬರುವ ಕೃಷ್ಣಪ್ಪನ ಆತ್ಮಕ್ಕಾಗುವ ಹಿಂಸೆಯನ್ನು ನೆನೆದು.

ಸಿಂಗಪ್ಪಗೌಡರ ಪ್ರಯತ್ನವೇ ವ್ಯರ್ಥವಾಗಿದೆ ! ಇನ್ನು ಅವರ ಮಗನ ಪ್ರೇತದ ಪ್ರಯತ್ನಕ್ಕೆ ಸೊಪ್ಪು ಹಾಕುತ್ತಾರೆಯೆ ? ಕೃಷ್ಣಪ್ಪನಿರಲಿ ! ಅವನ ಮುತ್ತಜ್ಜನ ದೆಯ್ಯವೇ ಬಂದು ಹಿಡಿದರೂ ಮದುವೆ ಮಾತ್ರ ನಿಲ್ಲದಂತೆ ನೋಡಿಕೊಳ್ಳುತ್ತೇನೆ ಎಂದು ಶಪಥಮಾಡಿ ಚಂದ್ರಯ್ಯಗೌಡರು ಶ್ಯಾಮಯ್ಯಗೌಡರಿಗೆ "ಏನಾದರಾಗಲಿ ! ಎಷ್ಟು ಮಾತ್ರಕ್ಕೂ ನಿಶ್ಚಯವಾದ ಮದುವೆಯನ್ನು ನಿಲ್ಲಿಸಲಾಗುವುದಿಲ್ಲ !" ಎಂಬುದಾಗಿ ಮುನ್ನೆಚ್ಚರಿಕೆ ಹೇಳಿಕಳುಹಿಸಿದರು.

ಸೀತೆಗೆ ದೆವ್ವ ಹಿಡಿದ ಸಮಾಚಾರ ಹೂವಯ್ಯನ ಕಿವಿಗೂ ಮುಟ್ಟಿ, ಅವನು ಗಾಬರಿಗೊಂಡನು. ಮನಃಶಾಸ್ತ್ರದಲ್ಲಿಯೂ ಅಲ್ಪಸ್ವಲ್ಪ ಪರಿಶ್ರಮವಿದ್ದ ಆತನ ಮನಸ್ಸಿಗೆ ಸೀತೆಯ ವಿಕಾರದ ಗುಟ್ಟು ಹೊಳೆಯಿತು. ಹಿಂದೆ ಕೃಷ್ಣಪ್ಪನಿಗೆ ಆಕೆಯನ್ನು ಕೊಟ್ಟು ಮದುವೆಯಾಗಬೇಕೆಂದು ನಿರ್ಣಯವಾಗಿದ್ದಾಗ ಸೀತೆಗೆ ಬಂದೊದಗಿದ್ದ ಅಸ್ವಸ್ಥತೆ ಜ್ಞಾಪಕಕ್ಕೆ ಬಂದಿತು. ಈ ಸಾರಿ ತನಗೆ ತಾನೆ ತಿಳಿಯದಂತೆ ಸೀತೆಯ ಒಳಮನಸ್ಸು ತನ್ನ ಜುಗುಪ್ಸೆ ಮತ್ತು ನೋವುಗಳಿಗೆ ಕೃಷ್ಣಪ್ಪನ ದೆಯ್ಯದ ವೇಷವನ್ನು ಹಾಕಿರಬಹುದೆಂದು ತಟಕ್ಕನೆ ಊಹಿಸಿ, ಮುಂದೆ ಅನಾಹುತ ಅಪಾಯಗಳು ಸಂಭವಿಸದಂತೆ ನೋಡಿಕೊಳ್ಳಬೇಕೆಂದು ಮುತ್ತಳ್ಳಿಗೆ ಮನಸ್ಸಿಲ್ಲದ ಮನಸ್ಸಿನಿಂದ ಹೋದನು.

ಆದರೆ ಮುತ್ತಳ್ಳಿಯಲ್ಲಿ ಹೂವಯ್ಯನಿಗೆ ದೊರೆತ ಸ್ವಾಗತ ಪರಮ ಉದಾಸೀನವಾಗಿತ್ತು. ಅಷ್ಟೇ ಅಲ್ಲ; ಮಾತುಕತೆಗಳಲ್ಲಿಯೂ ಹೂವಯ್ಯನ ಪರವಾಗಿ ಏನೋ ಒಂದು ಜುಗುಪ್ಸೆಯೂ ತೋರುತ್ತಿತ್ತು. ಜನರ ದೃಷ್ಟಿ ಮತ್ತು ಇಂಗಿತಗಳಲ್ಲಿ ತನ್ನ ಪ್ರತಿಯಾಗಿ ಏನೋ ಒಂದು ಭೀತಿ, ಒಡೆದು ಕಾಣಿಸುತ್ತಿತ್ತು. ಹೂವಯ್ಯನಿಗೆ ತಾನಲ್ಲಿಗೆ ಹೋಗಬಾರದಾಗಿತ್ತು ಎನ್ನಿಸುವಷ್ಟರಮಟ್ಟಿಗೆ ಸನ್ನಿವೇಶವಿತ್ತು.

ಅದಕ್ಕೆ ಕಾರಣ ಚಿನ್ನಯ್ಯನಿಂದ ಆಮೇಲೆ ತಿಳಿಯಿತು. ಚಂದ್ರಯ್ಯಗೌಡರ ಸೂಚನೆಯ ಮೇರೆಗೆ ವೆಂಕಪ್ಪಯ್ಯ ಜೋಯಿಸರು 'ಕೃಷ್ಣಪ್ಪ ಸೀತೆಯ ಮೇಲೆ ಬರುವುದಕ್ಕೆ ಹೂವಯ್ಯನೇ ಕಾರಣವಾಗಿದ್ದಾನೆ. ಹೂವಯ್ಯನಿಗೆ ಗೊತ್ತಿರುವ ಮಂತ್ರವಿದ್ಯೆಯ ದೆಸೆಯಿಂದಲೇ ಕಾನೂರು ಮನೆಯ ಭೂತ 'ಬಲೀಂದ್ರ' ಹೋತದಲ್ಲಿ ಸೇರಿಕೊಂಡು, ಅವನ ವಶವಾಗಿ ಕೆಲಸಮಾಡುತ್ತಿದೆ' ಎಂಬ ಮಿಥ್ಯಾವಾರ್ತೆಯನ್ನು ಹಬ್ಬಿಸಿದ್ದರಂತೆ!

ಹೂವಯ್ಯ ಜನರ ಉದಾಸೀನ ಭಾವವನ್ನಾಗಲಿ ಜುಗುಪ್ಸೆಯನ್ನಾಗಲಿ ಮನಸ್ಸಿಗೆ ಹಚ್ಚಿಕೊಳ್ಳದೆ, ಸೀತೆಯನ್ನು ನೋಡಿಯೇ ಹೋಗುತ್ತೇನೆಂದು ನಿರ್ಧರಿಸಿದನು. ಮದುವೆಯ ಸನ್ನಾಹಕಾರ್ಯಗಳ ಮೇಲ್ವಿಚಾರಣೆಯಲ್ಲಿ ತೊಡಗಿದ್ದ ಶ್ಯಾಮಯ್ಯಗೌಡರು ಹೂವಯ್ಯನ ಕಡೆಗೆ ತಿರುಗಿನೋಡದೆ 'ಅವಳಿಗೆ ಬುದ್ಧಿಭ್ರಮೆಯಾಗಿರುವುದರಿಂದ ಈಗ ನೀನು ನೋಡುವುದು ಬೇಡ' ಎಂದುಬಿಟ್ಟರು. ಆದರೆ ಹೂವಯ್ಯ ಮರ್ಯಾದೆಯನ್ನು ಗಮನಿಸದೆ ಮೊಂಡತನ ಮಾಡಿ ಶ್ಯಾಮಯ್ಯಗೌಡರನ್ನು ಒಪ್ಪಿಸಿದನು. ಅವರಂತೂ ಹೂವಯ್ಯ ಮಂತ್ರವಿದ್ಯೆಯಿಂದ ಮತ್ತೇನು ಮಾಡಿಬಿಡುತ್ತಾನೆಯೊ ಎಂಬ ಹೆದರಿಕೆಯಿಂದ ಮನಸ್ಸಿನಲ್ಲಿಯೆ ರಾಮಧ್ಯಾನ ಮಾಡುತ್ತ ಅವನನ್ನು ಒಡಗೊಂಡು ಸೀತೆಯಿದ್ದ ಕೊಟಡಿಗೆ ಬಂದರು. ಸೀತೆಯ ಹಾಸಗೆಯ ಪಕ್ಕದಲ್ಲಿ ಲಕ್ಷ್ಮಿಯೊಡನೆ ಕುಳಿತಿದ್ದ ಗೌರಮ್ಮನವರು ಕಣ್ಣೀರೊರಸಿಕೊಳ್ಳುತ್ತ ಸ್ವಲ್ಪ ದೂರ ಸರಿದರು.

ಆ ಕೊಟಡಿಯ ವಾತಾವರಣ ಸರಿಯಾಗಿದ್ದವರಿಗೂ ದೆವ್ವ ಹಿಡಿಸುವಷ್ಟರಮಟ್ಟಿಗಿತ್ತು. ಕಿಟಕಿಗಳನ್ನೆಲ್ಲ ಮುಚ್ಚಿ ಹೊರಗಿನ ದೆವ್ವಗಳು ಒಳಗೆ ಬರದಂತೆ ಮಾಡಿದ್ದರು. ದೆವ್ವಗಳೊಡನೆ ಬೆಳಕು ಗಾಳಿಗಳಿಗೂ ಬಹಿಷ್ಕಾರವಾಗಿತ್ತು. ಒಳಗಿರುವ ದೆವ್ವಗಳನ್ನು ಓಡಿಸುವ ಸಲುವಾಗಿ ಬೆಳ್ಳುಳ್ಳಿ ಮೊದಲ್ಗೊಂಡ ಏನೇನೋ ಕಟುವಾಸನೆಯ ಪದಾರ್ಥಗಳನ್ನು ಉರಿಸಿ ಹೊಗೆಹಾಕಿದ್ದರಿಂದ, ಹೊರಗಿನಿಂದ ಬಂದವರಿಗೆ ಒಳಗಿನ ಗಾಳಿ ಉಸಿರುಕಟ್ಟುವಂತಿತ್ತು. ಕಿಟಕಿಗಳಿಗೂ ಬಾಗಿಲುಗಳಿಗೂ ಮೆಟ್ಟು, ಪೊರಕೆ, ಮಂತ್ರಿಸಿದ ತೆಂಗಿನಕಾಯಿ ಮುಂತಾದ ವಸ್ತುಗಳನ್ನು

ತೋರಣ ಕಟ್ಟಿದ್ದರು. ಅದನ್ನೆಲ್ಲಾ ಕಂಡ ಹೂವಯ್ಯನಿಗೆ ಎದೆ ದಿಗಿಲ್ಲೆಂದಿತು. ದುಃಖ ಉಕ್ಕಿಬಂದಿತು. ಸೀತೆಗೆ ಈಗ ಬಂದೊದಗಿರುವ ಶಿಕ್ಷೆಗಿಂತಲೂ ಅನೇಕ ಪಾಲು ಹೆಚ್ಚಾಗಿ ಒದಗಲಿರುವ ಶಿಕ್ಷೆಯನ್ನು ಭಾವಿಸಿ ನಿಟ್ಟುಸಿರುಬಿಟ್ಟು, ಹನಿಗಣ್ಣಾದನು. ಏನುಮಾಡಿದರೆ ಸೀತೆಯನ್ನು ರಕ್ಷಿಸಬಹುದೆಂದೂ, ಸೀತೆಯನ್ನು ರಕ್ಷಿಸಲು ಏನನ್ನು ಬೇಕಾದರೂ ಮಾಡಬಹುದೆಂದೂ ಕಾತರನಾಗಿ ಆಲೋಚಿಸಿದನು.

ಸೀತೆಗೆ ಹೂವಯ್ಯನ ಗುರುತು ಸಿಕ್ಕುವುದು ಸ್ವಲ್ಪ ತಡವಾದಂತೆ ತೋರಿತು. ನೋಡುತ್ತಾ ನೋಡುತ್ತಾ ಇದ್ದಕ್ಕಿದ್ದ ಹಾಗೆ ಗುರುತು ಸಿಕ್ಕಿದಂತಾಗಿ, ಸೀತೆ ಹಾಸಗೆಯ ಮೇಲೆ ತಟಕ್ಕನೆ ಎದ್ದು ಕುಳಿತಳು. ಮುಖದಲ್ಲಿದ್ದ ದುಃಖದ ಕರ್ಮುಗಿಲಿನಲ್ಲಿ ಸುಖದ ಮಿಂಚು ಹೊಳೆದು ಆಕೆ ಹೂವಯ್ಯನ ಕಡೆಗೆ ಸರಿಯತೊಡಗುವಷ್ಟರಲ್ಲಿ ಗೌರಮ್ಮನವರು ಮಗಳನ್ನು ಹಿಡಿದು ಬಲಾತ್ಕಾರದಿಂದ ಮಲಗಿಸಲು ಪ್ರಯತ್ನಿಸಿದರು. ಹೂವಯ್ಯ ಆಕೆಯನ್ನು ಹಾಸಗೆಯ ಮೇಲೆ ಕೂತುಕೊಳ್ಳಲು ಬಿಡುವಂತೆ ಹೇಳಿದನು.

ಶ್ಯಾಮಯ್ಯಗೌಡರು "ಇಲ್ಲ, ಸುಮ್ಮನೆ ಕೂತುಕೊಳ್ಳುವುದಿಲ್ಲ. ಈಗ ನೋಡಲಿಲ್ಲೇನು? ನಿನ್ನ ಮೇಲೆ ಬೀಳೋಕೆ ಮಾಡಿದ್ದಳು" ಎಂದರು.

ತಂದೆಯ ಮಾತನ್ನು ಕೇಳಿ ಸೀತೆ ಕಿಲಕ್ಕನೆ ನಕ್ಕಳು. ಅಷ್ಟು ಹಾಸ್ಯಾಸ್ಪದವಾಗಿ ತೋರಿತ್ತು ಆ ವ್ಯಾಖ್ಯಾನ. ಆದರೆ ಗೌಡರಿಗೂ ಗೌರಮ್ಮನವರಿಗೂ ಮಗಳ ನಗು ಅವಳ ಒಳಗಿದ್ದ ಕೃಷ್ಣಪ್ಪನ ನಗುವಾಗಿದ್ದುದರಿಂದ ವಿಕಾರವಾಗಿತ್ತು.

ತನ್ನನ್ನು ಮಲಗಿಸಬೇಕೆಂದು ಪ್ರಯತ್ನಿಸುತ್ತಿದ್ದ ತಾಯಿಯನ್ನು ಕುರಿತು ಸೀತೆ "ಇಲ್ಲ, ಅವ್ವಾ; ನಾ ಸುಮ್ಮನೆ ಕೂತುಕೊಳ್ತೀನಿ. ಮಲಗಿಸಬೇಡ" ಎಂದಳು.

ಆಗಿನ ಆಕೆಯ ಧ್ವನಿಯಲ್ಲಿಯೂ ಮುಖಚರ್ಯೆಯಲ್ಲಿಯೂ ಇದ್ದ ಸರಳತೆ ತಂದೆತಾಯಿಯರಿಬ್ಬರನ್ನೂ ಆಶ್ಚರ್ಯಗೊಳಿಸಿತು. ಅದು ತಮ್ಮ ನಿಜವಾದ ಸೀತೆಯ ಮಾತಿನಂತಿತ್ತು. ಇದೇನು? ಸೀತೆ ಬಹುಕಾಲದ ಸ್ವಪ್ನದಿಂದ ಎಚ್ಚತ್ತಳೋ? ಗೌರಮ್ಮನವರು ಹೂವಯ್ಯನ ಆಗಮನದಿಂದಲೇ ಹಾಗಾಯಿತೆಂದು ಊಹಿಸಿ, ಅತ್ಯಂತ ಹರ್ಷದಿಂದ ಮಗಳ ರೋಗದ ವಿಚಾರವನ್ನು ಮೊದಲಿನಿಂದಲೂ ಸವಿಸ್ತಾರವಾಗಿ ಹೇಳತೊಡಗಿದರು. ಅದನ್ನಾಗಲೆ ಅನೇಕರಿಂದ ಕೇಳಿದ್ದ ಹೂವಯ್ಯ ಅದಕ್ಕೆ ಹೆಚ್ಚು ಗಮನ ಕೊಡದೆ ಸೀತೆಯನ್ನೇ ನೋಡುತ್ತಿದ್ದನು.

ಆಕೆ ಕೃಶವಾಗಿ ಬಿಳುಪೇರಿ ಹೋಗಿದ್ದಳು. ಸ್ವಲ್ಪಮಟ್ಟಿಗೆ ರೂಪವಿಕಾರವೂ ಉಂಟಾಗಿತ್ತು. ಹಗಲಾಗಿದ್ದರೂ ಉರಿಯುತ್ತಿದ್ದ ಹರಳೆಣ್ಣೆಯ ದೀಪದ ಕೆಂಬೆಳಗಿನಲ್ಲಿ ಆಕೆ, ಮೂಢಭಾವ ಮತ್ತು ಮೂಢಾಚಾರಗಳ ಮಧ್ಯೆ ಸೆರೆಸಿಕ್ಕಿದ

ಮುಗ್ಧತೆಯಂತೆ ಕರುಣಾಕರವಾಗಿ ಕಾಣುತ್ತಿದ್ದಳು. ಆಕೆಯ ಕಣ್ಣುಗಳು "ನನ್ನನ್ನು ಹೇಗಾದರೂ ಸಂರಕ್ಷಿಸು" ಎಂಬ ಆತ್ಮದ ಆರ್ತನಾದವನ್ನು ಪ್ರತಿಬಿಂಬಿಸುವಂತೆ ಇದ್ದುವು.

ಸೀತೆ ಹೂವಯ್ಯನೊಡನೆ ಮಾತಾಡತೊಡಗಿದಳು. ಎಷ್ಟು ಚೆನ್ನಾಗಿ ಮಾತಾಡಿದಳೆಂದರೆ, ಶ್ಯಾಮಯ್ಯಗೌಡರಿಗೆ ಹೂವಯ್ಯನ ಮಂತ್ರವಿದ್ಯೆಯಲ್ಲಿ ಇದ್ದ ನಂಬುಗೆ ಮತ್ತೂ ಹೆಚ್ಚಾಯಿತು!—ನಾಗಮ್ಮನವರ ಯೋಗಕ್ಷೇಮವನ್ನು ವಿಚಾರಿಸಿದಳು. ಪುಟ್ಟಣ್ಣ ಈಚೆಗೆ ಏನು ಷಿಕಾರಿ ಮಾಡಿದನೆಂದು ಕೇಳಿದಳು. ನಾಯಿಗಳ ಹೆಸರನ್ನು ಒಂದೊಂದಾಗಿ ಹೇಳಿ ವಿಚಾರಿಸಿದಳು. ಅತ್ತೆಮ್ಮನವರನ್ನೂ ಏಕೆ ಕರೆತರಲಿಲ್ಲ ಎಂದು ಕೇಳಿ, 'ನಾ ಕೇಳ್ದೆ ಅಂತಾ ಹೇಳಿ' ಎಂದಳು. ಕಡೆಗೆ ತಾನೂ ಕೆಳಕಾನೂರಿಗೆ ಬರುತ್ತೇನೆ; ಕರಕೊಂಡು ಹೋಗಿ ಎಂದೂ ನುಡಿದುಬಿಟ್ಟಳು.

ಹೂವಯ್ಯ ಒಂದೊಂದು ಪ್ರಶ್ನೆಗೂ ಸಮಾಧಾನಕರವಾದ ಉತ್ತರವನ್ನು ಕೊಡುತ್ತಾ, ಕಡೆಯ ಪ್ರಶ್ನೆಗೆ ಯಾವ ಉತ್ತರ ಹೇಳಬೇಕೆಂದು ಗೊತ್ತಾಗದೆ ತಡವುತ್ತಿರಲು ಗೌರಮ್ಮನವರೆ "ಹೋಗಬಹುದಂತೆ! ಕಾಯಿಲೆ ಗುಣಾಗಲಿ!" ಎಂದರು.

ಸೀತೆ ತಾಯಿಯ ಕಡೆ ತಿರುಗಿ "ನನಗೇನು ಕಾಯಿಲೆ ಈಗ? ಸರಿಯಾಗಿದ್ದೀನಲ್ಲಾ!" ಎಂದಳು.

ಆಗ ತತ್ಕಾಲದಲ್ಲಿ ಗೌರಮ್ಮನವರಿಗೆ ಮಗಳ ಮಾತು ವಾಸ್ತವವಾಗಿ ಕಂಡಿತು.

ಸೀತೆಯ ಯಾವ ಒಂದು ಮಾತೂ ಯಾವ ಒಂದು ಆಚರಣೆಯೂ ಆಕೆಗೆ ನಿಶ್ಚಯವಾಗಿದ್ದ ವಿವಾಹದ ದೂರದ ನೆನಪು ಕೂಡ ಆಕೆಯಲ್ಲಿದೆ ಎಂಬುದನ್ನು ತೋರುತ್ತಿರಲಿಲ್ಲ. ಆ ವಿಷಯವಲಯ ಆಕೆಯ ಮನೋಪ್ರಪಂಚದಿಂದ ಸಂಪೂರ್ಣವಾಗಿ ಅಳಿಸಿಹೋದಂತಿತ್ತು.

ಮಾತಾಡುತ್ತ ಆಡುತ್ತ ಒಂದು ಸಾರಿ ಕೋಣೆಯಲ್ಲಿದ್ದ ಕತ್ತಲೆ, ಕಟುವಾಸನೆ, ಸೆರೆ ಇವುಗಳನ್ನು ಮೊದಲನೆಯಸಲ ಅನುಭವಿಸಿದವಳಂತೆ ತಾಯಿಯನ್ನು ಕುರಿತು "ಯಾಕವ್ವಾ ಕಿಟಕಿಗಿಟಗಿಯಲ್ಲಾ ಮುಚ್ಚಿಬಿಟ್ಟಿದ್ದೀರಿ! ಏನು ದುರ್ವಾಸನೆ?" ಎಂದು ತಾನೆ ಎದ್ದುಹೋಗಿ ಒಂದು ಕಿಟಕಿಯನ್ನು ಅಗಲವಾಗಿ ತೆರೆದು ಬಂದಳು. ಇದ್ದಕ್ಕಿದ್ದ ಹಾಗೆ ಕೊಟಡಿಯೊಳಗೆ ಗಾಳಿ ಬೆಳಕುಗಳು ನುಗ್ಗಿ ಬಂದು ಹಣತೆಯ ದೀಪ ಆರಿ, ಅದರ ಬತ್ತಿಯ ತುದಿಯಿಂದ ಬೂದಿಬಣ್ಣದ ಹೊಗೆಯು ಗೆರೆ ಡೊಂಕುಡೊಂಕಾಗಿ ಗಾಳಿಯಲ್ಲಿ ಮೇಲೆದ್ದು ತೇಲಿ ಹರಿಯಿತು. ಸುಟ್ಟ ಬತ್ತಿಯ ಕನರುವಾಸನೆ ಕೋಣೆಯನ್ನೆಲ್ಲ ಆವರಿಸಿತು.

ಮಗಳಲ್ಲಿ ಈ ಪರಿಯ ಪರಿವರ್ತನೆಯನ್ನು ಕಂಡ ತಾಯಿತಂದೆಗಳ ಕರುಳು ಆನಂದದಿಂದ ಹಿಗ್ಗಿತು. ಹೂವಯ್ಯನ ಆಗಮನ ಒಂದು ಅದ್ಭುತದಂತಿತ್ತು. ಅವನ ಮಂತ್ರಶಕ್ತಿಯಲ್ಲಿ ನಂಬುಗೆ ಹೆಚ್ಚಿದ್ದ ಗೌಡರಿಗೆ ಮಾತ್ರ ಸ್ವಲ್ಪ ಭಯವೂ ಉಂಟಾಯಿತು.

ಬೆಳಕು ಕೊಟಡಿಯೊಳಗೆ ಬಂದುದನ್ನು ಕಂಡು, ಕತ್ತಲೆಗೆ ಹೆದರಿ ಹೊರಗೆ ಓಡಿ ಹೋಗಿದ್ದ ಮನೆ ನೊಣಗಳೂ ಒಂದೊಂದಾಗಿ ಒಳಗೆ ಬರತೊಡಗಿದುವು. ಅವುಗಳಲ್ಲಿ ಒಂದು ನೊಣ ಸೀತೆ ಸ್ವಲ್ಪ ಕುಡಿದಿಟ್ಟಿದ್ದ ಗೋಧಿ ಗಂಜಿಯ ಲೋಟದ ಮೇಲೆ ಗುಂಯ್ ಗುಂಯ್ ಎಂದು ಹಾರಾಡಿ ಗಂಜಿಯೊಳಗೆ ಬಿದ್ದು ಒದ್ದಾಡ ತೊಡಗಿತು. ಹೂವಯ್ಯ ಅದನ್ನು ನೋಡುತ್ತಿದ್ದುದನ್ನು ಅರಿತು ಸೀತೆ ಒದ್ದೆ ಮುದ್ದೆಯಾಗಿದ್ದ ಆ ನೊಣವನ್ನು ಕೈಬೆರಳಿನಿಂದ ತೆಗೆದು ನೆಲಕ್ಕೆ ಹಾಕಿದಳು. ರೆಕ್ಕೆಯೆಲ್ಲ ತೊಯ್ದು ಮೈಗಂಟಿಕೊಂಡಿದ್ದ ಆ ನೊಣ ನೆಲಕ್ಕೆ ಬಿದ್ದೊಡನೆಯೆ ಮುಂದೆ ಹರಿಯತೊಡಗಿತು. ಅದು ಹರಿದಹಾಗೆ ಅದರ ಹಿಂದೆ ನೆಲದಮೇಲೆ ಒದ್ದೆಗೆರೆಯೊಂದು ಹಿಂಬಾಲಿಸುತ್ತಿತ್ತು. ಒಂದು ನಿಮಿಷದಲ್ಲಿ ಆ ನೊಣ ತನ್ನ ಮುಂಗಾಲುಗಳಿಂದ ಮಂಡೆಯನ್ನು ಸವರಿಕೊಂಡು, ರೆಕ್ಕೆಗಳನ್ನು ಒಂದೆರಡು ಸಾರಿ ಕೊಡವಿಕೊಂಡು ಹಾರಿಹೋಯಿತು. ಹೇಳಿದರೆ ಸೋಜಿಗವಾಗಬಹುದು: ಶ್ಯಾಮಯ್ಯಗೌಡರಾದಿಯಾಗಿ ಎಲ್ಲರೂ ಆ ದೃಶ್ಯವನ್ನು ಕುತೂಹಲದಿಂದ ನೋಡುತ್ತಿದ್ದರು! ಬಹುಶಃ ಪ್ರತಿಯೊಬ್ಬರೂ ಸೀತೆಯ ಕಾರ್ಯಗಳಿಂದ ಆಕೆಯ ಮನಃಸ್ಥಿತಿಯನ್ನು ಭಾವಿಸುತ್ತಿದ್ದರೆಂದು ತೋರುತ್ತದೆ.

ಹೂವಯ್ಯನು ಶ್ಯಾಮಯ್ಯಗೌಡರಿಂದ 'ಸಪರಿವಾರನಾಗಿ' ಕೊಟಡಿಯಿಂದ ಹೊರಗೆ ಹೋದೊಡನೆಯೆ ಸೀತೆ ಕಿಲಕಿಲನೆ ನಕ್ಕಳು. ಇವರ ಕಣ್ಣಿಗೆ ನಾನು ಮಣ್ಣುಹಾಕಲಾರೆನೆ ಎಂಬಂತಿರಬಹುದೆ? ಏನಾದರಾಗಲಿ! ಗೌರಮ್ಮನವರಿಗೆ ಅದು ಎಷ್ಟು ವಿಕಟವಿಕಾರವಾಗಿ ತೋರಿತೆಂದರೆ, ಅವರು ಬೇಗಬೇಗನೆ ಎದ್ದು ಹೋಗಿ ಸೀತೆ ತೆರೆದಿದ್ದ ಕಿಟಕಿಯ ಬಾಗಿಲುಗಳನ್ನು ಸಶಬ್ದವಾಗಿ ಮುಚ್ಚಿದರು. ಸೀತೆ ಏನೂ ಮಾತಾಡಲಿಲ್ಲ. ಹೂವಯ್ಯ ಹೋದ ಮೇಲೆ ಆಕೆಯ ಆತ್ಮಕ್ಕೆ ಕತ್ತಲೆಯೆ ಹೆಚ್ಚು ಆಪ್ಯಾಯಮಾನವಾದಂತೆ ತೋರಿತು.

ಮುತ್ತಳ್ಳಿಯಿಂದ ಹೊರಡುವಾಗ ಹೂವಯ್ಯ ಚಿನ್ನಯ್ಯನನ್ನು ಎಕ್ಕಟಿ ಕರೆದು ಸೀತೆಯನ್ನು ಹೇಗೆ ನೋಡಿಕೊಳ್ಳಬೇಕೆಂಬುವ ವಿಚಾರವಾಗಿ ಎರಡು ಮಾತು ಗಳನ್ನು ಹೇಳಿದುದೂ ಫಲಕಾರಿಯಾಗಲಿಲ್ಲ. ಏಕೆಂದರೆ, ಅವನು ಹೋದಮೇಲೆ ಸೀತೆ ಎಂದಿನಂತೆ ವಿಕಾರಾವಸ್ಥೆಯಲ್ಲಿದ್ದುದನ್ನು ಕಂಡು ಶ್ಯಾಮಯ್ಯಗೌಡರು "ನೋಡಿದಿರಾ? ಅವನ ಮಾಯಾಮಂತ್ರ ಅಲ್ಲದೆ ಮತ್ತೇನೂ ಅಲ್ಲ. ಅವನ

ಮುಂದೆ ಹ್ಯಾಂಗೆ ಮಾತಾಡಿದಳು ಅವಳು! ಅವನು ಹೋದ, ಸುರುವಾಯ್ತು! ಜೋಯಿಸರು ಹೇಳಿದ್ದೇನು ಸುಳ್ಳೇನು?" ಎಂದರು.

ಅಲ್ಲಿದ್ದವರಲ್ಲೊಬ್ಬರು ಮುಂಟಪಕ್ಕೆ ಬಣ್ಣದ ಬಟ್ಟೆಯನ್ನು ಸುತ್ತುತ್ತಾ "ನಮ್ಮ ದೋಯಿಸರ ಮಾತು ಎಂದಿಗೂ ಸುಳ್ಳಾಗದಿಲ್ಲ! ಅವರು ಮಣೇಮುಂದೆ ಕೂತು ಅಕ್ಕಿಕಾಳು ಹಿಡಿದು ಹೇಳಿದರೆ ಸೈ! ಬ್ರಹ್ಮನಿಗೂ ತಪ್ಪಿಸಾಕ್ಕಾಗಾಲ್ಲ!" ಎಂದು ಶ್ಯಾಮಯ್ಯಗೌಡರ ಮಾತನ್ನೆ ಸಮರ್ಥಿಸಿದರು.

## ೫೬

## ಕೌಲಿ ಕರು ಹಾಕಿದ್ದು

ಮುತ್ತಳ್ಳಿಯಿಂದ ಹೊರಟ ಹೂವಯ್ಯ ಸೀತೆಮನೆಗೆ ಹೋಗಿ ಮಧ್ಯಾಹ್ನದ ಊಟ ತೀರಿಸಿಕೊಂಡು, ಸಿಂಗಪ್ಪಗೌಡರಿಗೆ ತಾನು ಅಲ್ಲಿ ಕಂಡ ಕಥೆಯನ್ನೆಲ್ಲ ಹೇಳಿ, ಅವರ ಒಕ್ಕಲೊಬ್ಬನ ವಿಚಾರದಲ್ಲಿ ಒಂದು 'ಪಂಚಾಯಿತಿ'ಯನ್ನು ಕೂಡ ಮಾಡಿ, ಕೆಳಕಾನೂರಿಗೆ ಬರುವಷ್ಟರಲ್ಲಿ ಆ ದಿನ ಸಾಯಂಕಾಲವಾಗಿತ್ತು. ಸಿಂಗಪ್ಪ ಗೌಡರು ಒಕ್ಕಲೊಬ್ಬನಿಂದ ತಮಗೆ ಬರಬೇಕಾಗಿದ್ದ ಸಾಲಕ್ಕಾಗಿ ಅವನ ಮನೆ ಜಪ್ತಿಮಾಡಿಸಲು ಹವಣಿಸುತ್ತಿದ್ದರು. ಆ ಒಕ್ಕಲು ಸಿಂಗಪ್ಪಗೌಡರ ಹತ್ತಿರ ಸಾಗುವುದು ಹೂವಯ್ಯಗೌಡರ ಮಾತೊಂದೇ ಎಂದು ತಿಳಿದು, ಅವನಲ್ಲಿಗೆ ಕೆಲದಿನಗಳ ಹಿಂದೆ ಬಂದು ಅಹವಾಲು ಹೇಳಿಕೊಂಡಿದ್ದನು. ಅದಕ್ಕಾಗಿಯೆ ಹೂವಯ್ಯ ಸೀತೆಮನೆಗೆ ಹೋಗಿ 'ಪಂಚಾಯಿತಿ' ಮಾಡಿ, ಸಿಂಗಪ್ಪಗೌಡರಿಗೆ ಸಮಾಧಾನವನ್ನೂ, ಒಕ್ಕಲಿಗೆ ಬುದ್ಧಿವಾದವನ್ನೂ ಹೇಳಿ, ಬಡವನಿಗೆ ಸಹಾಯ ಮಾಡಿದ್ದನು. ಆ ಸತ್ಕಾರ್ಯದ ನೆನಪು ಅವನ ಮನಸ್ಸಿಗೆ ಏನೋ ಒಂದು ಧರ್ಮಾನಂದವನ್ನು ತಂದುಕೊಡುತ್ತಿದ್ದಿತು.

ಹೂವಯ್ಯ ತನ್ನ ಕೊಟಡಿಯಲ್ಲಿ ಅಂಗಿ ಬಿಚ್ಚಿಟ್ಟು, ಪದ್ಧತಿಯಂತೆ ಕನ್ನಡಿಯ ಮುಂದೆ ನಿಂತು ಕ್ರಾಪು ಬಾಚಿಕೊಂಡು, ನಡುಮನೆಗೆ ಬಂದು ಮೇಜಿನ ಬಳಿಯಿದ್ದ ಕುರ್ಚಿಯನ್ನು ಸ್ವಲ್ಪ ದೂರ ಎಳೆದುಕೊಂಡು ಕೂತನು. ಸುತ್ತಲೂ ಗೋಡೆಯ ಮೇಲಿದ್ದ ಮಹಾಪುರುಷರ ಪಟಗಳನ್ನೂ ಬೀರುವಿನಲ್ಲಿಯೂ ಮೇಜಿನ ಮೇಲೆಯೂ ಇದ್ದ ಗ್ರಂಥಸಮುದಾಯವನ್ನೂ ಕಂಡೊಡನೆ ಅವನ ಹೃದಯದಲ್ಲಿ ಶಾಂತಿ ಸಂಚಾರವಾಗಿ, ಮುಖದ ಮೇಲೆ ಮುಗುಳ್ನಗೆಯ ತೆರೆಯೊಂದು ಸುಳಿ ದಡಗಿತು. ಕಾಫಿ ತಂದುಕೊಟ್ಟು ಬಳಿ ನಿಂತು ಮಾತಾಡುತ್ತಿದ್ದ ತಾಯಿ ನಾಗಮ್ಮ

ನವರು ಅವನಿಗೆ ಎಂದಿಗಿಂತಲೂ ಹೆಚ್ಚು ಪೂಜ್ಯವಾಗಿ ಪ್ರಿಯವಾಗಿ ತೋರಿದರು. ಆ ತಾಯಿಯ ಸಾನ್ನಿಧ್ಯದಲ್ಲಿ ಜೀವನ ದಿವ್ಯವಾಗಿ ಹಗುರವಾಗಿ ಸಾಗುವುದರಲ್ಲಿ ಸಂದೇಹವಿಲ್ಲವೆಂದು ಅವನ ಮನಸ್ಸು ನೆಮ್ಮದಿಯಾಯಿತು.

"ಯಾಕೆ ನಿಂತುಕೊಂಡೀಯ? ಕೂತುಕೊ, ಅವ್ವಾ, ಕುರ್ಚಿಯಮೇಲೆ!"

ಮಗನ ಮಾತಿಗೆ ತಾಯಿ ನಕ್ಕು "ಸೈ, ಬಿಡು! ನಾನು ಕುರ್ಚಿಮೇಲೆ ಕೂತುಕೊಂಡು ದೌಲತ್ತು ಮಾಡೋದು ಅತ್ತ ಮಕಾ ಹೋದ ಮೇಲೇ! ನೀ ಕುಡಿ; ಆರಿಹೋಗ್ತದೆ!" ಎಂದು ಲೋಟಕ್ಕೆ ಹಾಕಿದ್ದ ಕಾಫಿಯಲ್ಲಿ ತೇಲುತ್ತಿದ್ದ ಒಂದು ಸಣ್ಣ ಕಸವನ್ನು ತರ್ಜನಿಯಿಂದ ತೆಗೆದು, ನೋಡಿ, ಬಿಸಾಡಿದರು.

ಬೈರ ಹೊರ ಅಂಗಳದಿಂದ 'ಅಯ್ಯಾ, ಅಯ್ಯಾ!' ಎಂದು ಎರಡು ಮೂರು ಸೊಲ್ಲು ಕರೆದನು.

ನಾಗಮ್ಮನವರು ಕಾಫಿ ಕುಡಿಯುತ್ತಿದ್ದ ಮಗನನ್ನು ಕೂಗಿ ಕೂಗಿ ಏಕೆ ತೊಂದರೆ ಪಡಿಸುತ್ತಾನೆ ಎಂದುಕೊಂಡು ತಾವೇ ಹೊರಗೆ ಹೋಗಿ ಕೇಳಿದರು. ಬೈರ ಒಂದೇ ಉಸಿರಿನಲ್ಲಿ ಮಾತಾಡಿದನು. ನಾಗಮ್ಮನವರಿಗೆ ಒಂದೂ ಭಾವವಾಗದೆ "ತಡಿಯಪ್ಪಾ; ಅವನೇ ಬರ್ತಾನೆ" ಎಂದು ಹೇಳಿ ಒಳಗೆ ಹೋದರು.

ಕಾಫಿ ಕುಡಿದಾದಮೇಲೆ ಹೂವಯ್ಯ ಹೊರಗೆ ಬಂದನು. ಬೈರ "ನನ್ನಿಂದಾಗಾದಿಲ್ಲಯ್ಯಾ ಆ ತ್ವಾಟದ ಬೇಲಿ ನೋಡಿಕೊಳ್ಳಾಕೆ! ಏಟಂತ ನೋಡಿಕೊಳ್ಳಾದು? ಬೇಲಿ ಕಿತ್ತು ದನ ನುಗ್ಗಿಸ್ತಾರೆ!" ಎಂದನು.

"ಹೋಗೋ ಹೋಗೋ! ಬೇಲಿ ಕಿತ್ತು ದನ ನುಗ್ಗಿಸ್ತಾರಂತೆ! ನಿನಗೆ ಬೇಲಿ ಸರಿಯಾಗಿ ಹಾಕೋಕೆ ಬರೋದಿಲ್ಲ ಅಂತಾ ಹೇಳು!..."

"ಹಾಂಗ್ಯಾರೆ ನಾ...ನಾ...ನಾನೇನು ಹೇಳ್ಲಿ! ನೀವೆ ಬಂದು ನೋಡಿ ...ಮನ್ನೆ ದೊಡ್ಡ ಗೌಡ್ರೇ (ಚಂದ್ರಯ್ಯಗೌಡರು) ಖುದ್ದು ನಿಂತು ಬೇಲಿ ಕೀಳಿಸಿ, ದನ ನುಗ್ಗಿಸಿದ್ರಂತೆ!..."

"ನಿನಗೆ ಬುದ್ಧಿಗಿದ್ದಿ ನೆಟ್ಟಗಿದೆಯೋ ಇಲ್ಲೋ? ಹೇಳಿದೋರು ಕೇಳಿದೋರ ಮಾತು ಕಟ್ಟಿಕೊಂಡು ಒಬ್ಬರ ಮೇಲೆ ಸುಳ್ಳು ಚಾಡಿ ಹೇಳಬಾರದು...ನೀ ನೋಡ್ದೇನು ಹೇಳು!..."

"ನಾ...ನೋ...ಡ...ಲಿಲ್ಲ!"

"ಹಾಗಾದರೆ ಸುಮ್ಮನಿರು!"

ಇದ್ದಕ್ಕಿದ್ದಂತೆ ಬೈರ ಮತ್ತೊಂದು ಮಾತು ಎತ್ತಿದನು. ಅವನು ಬಂದದ್ದೂ ಅದಕ್ಕಾಗಿಯೆ ಎಂದು ತೋರುತ್ತದೆ.

"ಅಯ್ಯಾ, ನಾನು ಬಿಡಾರಾನ ಇಲ್ಲಿಗೇ ತಂದುಬಿಡ್ತೀನಿ."

"ಬೇಡ ಅಂತಾ ನಾ ಹೇಳಲಿಲ್ಲೇನು ನಿನಗೆ? ನೀನಿಲ್ಲಿಗೆ ಬಂದ್ರೆ ತೋಟ ನೋಡಿ ಕೊಳ್ಳೋರು ಯಾರು? ನಿನ್ನಜ್ಜ?"

ಇಬ್ಬರೂ ಮಾತಾಡುತ್ತ ನಿಂತಿದ್ದಂತೆ ಪುಟ್ಟಣ್ಣನೂ ನಾಯಿಗಳೂ ಬಂದುವು. ಅವನ ಎಡದ ಹೆಗಲಮೇಲಿದ್ದ ಕಂಬಳಿಯ ಜೋಳಿಗೆಯಲ್ಲಿ ಏನೋ ಇದ್ದುದನ್ನು ಕಂಡು ಹೂವಯ್ಯ "ಎಲ್ಲಿಗೆ ಹೋಗಿದ್ದೆಯೋ?" ಎಂದನು.

"ಕೋವಿ ತಗೊಂಡು ಹೋಗಿದ್ದೆ."

"ಅದು ಕಂಡಹಾಗೇ ಇದೆಯೆಲ್ಲಾ! ಎತ್ತ ಹೋಗಿದ್ದೆ ಎಂದು ಕೇಳಿದೆ."

"ಕತ್ತಲೆ ಸರುವಿನ ಕಡೆ."

"ಏನಾದರೂ ಕಂಡಿತೋ?"

"ಕಾಣುವುದಕ್ಕೇನೊ ಕಂಡುವು."

"ಹೊಡೆಯೋಕೆ ಸಿಕ್ಕಲಿಲ್ಲೇನು?"

"ಉ್ಞ ಹ್ಞು..."

"ಮತ್ತೆ ನಿನ್ನ ಕಂಬಳೀಲಿ ಇರೋದೇನೊ?"

"ಕಂಬಳಿಲ್ಲಿ ಎಂಥದದೆ?"

"ಇಲ್ಲಿ ಬಾ, ನೋಡ್ತೀನಿ."

ಪುಟ್ಟಣ್ಣ ಸ್ವಲ್ಪ ನಗುತ್ತ ಬೇಗ ಬೇಗನೆ ಮನೆಯೊಳಗೆ ಹೋಗಿಬಿಟ್ಟನು.

ಬೈರ ಪಿಚ್ಚನೆ ಹಲ್ಲುಬಿಟ್ಟು ನಗುಮುಖನಾಗಿ "ಹೆಗ್ಗಡಿತಮ್ಮೋರಿಗೇನೊ ತಂದಾರೆ ಅಂತಾ ಕಾಣ್ತದೆ!" ಎಂದನು.

ಹೂವಯ್ಯನಿಗೆ ಆ ಮಾತಿನ ಅರ್ಥವಾದ ಕೂಡಲೆ ಮುಖದ ಮೇಲೆ ಕರಿ ನೆರಳಾಡಿದಂತಾಗಿ ತನ್ನ ಕೊಟಡಿಗೆ ಹೊರಟು ಹೋದನು.

ಕತ್ತಲಾದ ಮೇಲೆ ಪುಟ್ಟಣ್ಣ ಲ್ಯಾಂಪು ಹೊತ್ತಿಸಲು ಅಲ್ಲಿಗೆ ಬಂದನು.

ಹೂವಯ್ಯ "ಪುಟ್ಟಣ್ಣಾ, ನಾ ನಿನಗೆ ಎಷ್ಟು ಸಾರಿ ಹೇಳಬೇಕು?" ಎಂದು ಪ್ರಾರಂಭಿಸಿದನು.

"ನಾನೇನು ಮಾಡಿದ್ದು?..."

"ನಿನಗೆ ನಾಚಿಕೆಯಾಗೋದಿಲ್ಲೇನು? ಸೋಮನಂಥಾ ಬಾಡುಗಳ್ಳ ಕುಡು ಕನೇ ಕುಡಿಯೋದನ್ನ ಬಿಟ್ಟಿದ್ದಾನೆ. ನಿನಗೆ..."

"ನಾನು ಕುಡಿದಿದ್ದರೆ...ಕುಡಿದ್ದಾಂಗೆ! ಆಣೆಹಾಕಿ ಬೇಕಾದರೂ ಹೇಳ್ತೀನಿ..."

"ನೀನು ಕಂಬಳಿಯಲ್ಲಿ ತಂದೆಯಲ್ಲಾ ಅದೇನು?..."

"ನನಗಲ್ಲ! ನಾಗಮ್ಮೋರು ಹೇಳಿದ್ದರು ಅಂತಾ ಒಂದು ಶೀಸೆ..."

"ಕಳ್ಳೋ? ಹೆಂಡವೋ? ಸಾರಾಯಿಯೋ?"

"ಕಳ್ಳು!"

"ನಿನಗೆ ಕೆಟ್ಟದ್ದಾದರೆ ಅವ್ವಗೆ ಹೇಗೆ ಒಳ್ಳೆಯದಾಗ್ತದೆ ಹೇಳು?"

"ಅವರು ಸುಮಾರು ಸಾರಿ ಹೇಳಿದ್ದರು..."

ಹೂವಯ್ಯ ಮುಂದೆ ಮಾತಾಡಲಿಲ್ಲ. ಪುಟ್ಟಣ್ಣ ದೀಪ ಹೊತ್ತಿಸಿ ಹೋದ ಮೇಲೆ, ಅವನು ತನ್ನ ತಾಯಿಯ ದೌರ್ಬಲ್ಯವನ್ನು ಕುರಿತು ಯೋಚಿಸ ತೊಡಗಿದನು. ನಾಗಮ್ಮನವರು ಎಲ್ಲ ವಿಷಯಗಳಲ್ಲಿಯೂ ಆದರ್ಶ ಮಾತೆಯಾಗಿ ತೋರಿದರು. ಆದರೆ ಎರಡು ವಿಚಾರಗಳಲ್ಲಿ ಮಾತ್ರ ಅವರನ್ನು ತಿದ್ದುವುದು ಅಸಾಧ್ಯವಾಗಿತ್ತು. ಒಂದನೆಯದಾಗಿ ದೆವ್ವ ಮುಂತಾದ ಮೌಢ್ಯಗಳ ವಿಷಯದಲ್ಲಿ;— ಎರಡನೆಯದಾಗಿ ಕಳ್ಳು ಕುಡಿಯುವುದರಲ್ಲಿ! ಅವರು ಪದೇ ಪದೇ ದಿನವೂ ಕುಡಿಯುತ್ತಿರಲಿಲ್ಲ. ಆದಷ್ಟು ಪ್ರಯತ್ನದಿಂದ ಮಗನ ಮನಸ್ಸಿಗೆ ಮೆಚ್ಚುಗೆಯಾಗುವಂತೆ ನಡೆದುಕೊಳ್ಳಲು ಪ್ರಯತ್ನಿಸಿ, ಹದಿನೈದು ದಿನಗಳಿಗೊಮ್ಮೆ ತಿಂಗಳಿಗೊಮ್ಮೆ ಕುಡಿಯುವಷ್ಟು ಸಂಯಮವನ್ನೂ ಸಂಪಾದಿಸಿದ್ದರು. ಆದರೆ ಬಾಲ್ಯದಿಂದಲೂ ರಕ್ತಗತವಾಗಿ ಬಂದಿದ್ದ ಆ ಚಾಳಿ ಸಂಪೂರ್ಣವಾಗಿ ಹೋಗಬೇಕಾದರೆ 'ಅತ್ತಕಡೆ ಹೋದ ಮೇಲೆಯೇ' ಎಂದು ಅವರೇ ಹೇಳುತ್ತಿದ್ದರು. ಹೂವಯ್ಯ ಆಲೋಚಿಸುತ್ತಾ, ಆಲೋಚಿಸುತ್ತಾ, ತಾನು ನಶ್ಯ ಹಾಕುವುದನ್ನು ಬಿಡಲು ಪ್ರಯತ್ನಿಸಿದ್ದಾಗ ತನಗಾಗಿದ್ದ ಸೋಲುಗಳನ್ನೂ ಸಂಕಟಗಳನ್ನೂ ನೆನೆದು, ತನ್ನ ತಾಯಿಯ ಅಷ್ಟರಮಟ್ಟಿನ ಸೋಲೂ ಮಹಾ ಜಯವೆಂದೇ ಭಾವಿಸಿ, ಸಹಾನುಭೂತಿಯಿಂದ ಹಿಗ್ಗಿದನು. ಆ ದಿನ ಸೀತೆಯನ್ನು ನೋಡಿ ಬಂದಮೇಲೆ ಅವನಿಗೆ ಎಲ್ಲ ವಿಷಯಗಳಲ್ಲಿಯೂ ಹಿಗ್ಗು ತಲೆದೋರಿತ್ತು. ಮತ್ತೆ ಸೀತೆಯ ನೆನಪು ಬಂದಾಗಲೂ ಹಾಗೆಯೆ ಆಯಿತು. ಸೀತೆಯ ಶೋಚನೀಯ ಸ್ಥಿತಿಗಾಗಿ ವ್ಯಸನಪಡುವುದನ್ನು ಬಿಟ್ಟು ಸಂತುಷ್ಟನಾಗಿರುವುದನ್ನು ಕಂಡು ಹೂವಯ್ಯ ತನ್ನೊಳಗೆ ತಾನೆ ವಿಸ್ಮಿತನಾದನು. ಸೀತೆಯ ಅಂತರ್ಮನಸ್ಸಿನ ವ್ಯೂಹ ಹೂವಯ್ಯನ ಅಂತರ್ಮನಸ್ಸಿಗಲ್ಲದೆ ಬಹಿರ್ಮನಸ್ಸಿಗೆ ಹೇಗೆ ಗೊತ್ತಾಗುತ್ತದೆ? ಆದ್ದರಿಂದಲೆ ಆತನ ಅಂತರ್ಮನಸ್ಸಿನ ಸಂತೋಷ ಬಹಿರ್ಮನಸ್ಸಿಗೆ ಆಶ್ಚರ್ಯಕರವಾಗಿಯೂ ಅಕಾರಣವಾಗಿಯೂ ಕಂಡುಬಂದಿತು.

ಊಟದ ಸಮಯದಲ್ಲಿ ಹೂವಯ್ಯ ಪುಟ್ಟಣ್ಣರಿಗೆ ಸ್ವಲ್ಪ ದೂರವಾಗಿ ಕುಳಿತಿದ್ದ ಸೋಮ ತನ್ನ ಆ ದಿನದ ಕೆಲಸಕಾರ್ಯಗಳನ್ನೂ ಸಾಹಸಗಳನ್ನೂ ಕುರಿತು ಗಟ್ಟಿಯಾಗಿ ಗಳಪುತ್ತಿದ್ದನು. ನಡುನಡುವೆ ಎಲ್ಲರೂ ನಕ್ಕುನಕ್ಕು ಬೀಳುತ್ತಿದ್ದರು. ಸೋಮನ ಮಾತಿನ ವಿಷಯಕ್ಕಿಂತಲೂ ಆದರ ವಿಧಾನವೇ ಹೆಚ್ಚು ಹಾಸ್ಯಕರ

ವಾಗಿತ್ತು. ಅವನ ಸಾಹಸಗಳಲ್ಲಿ ಮುಖ್ಯವಾದದ್ದು ಕೌಲಿ ಎಂಬ ದನ ಗುಡ್ಡದಲ್ಲಿ ಕರು ಹಾಕಿರಲು ಆ ತಾಯಿಮಕ್ಕಳನ್ನು ಕೊಟ್ಟಿಗೆಗೆ ಕರೆತಂದದ್ದು !

ಕೌಲಿಗೆ ಕೋಡುಗಳಿಲ್ಲದಿದ್ದರೂ ಶೌರ್ಯ ಹೆಚ್ಚು. ಅದು ಚೆನ್ನಾಗಿ ಪುಷ್ಟವಾಗಿ ಬೆಳೆದಿದ್ದು, ನೋಡುವುದಕ್ಕೆ ಲಕ್ಷಣವಾಗಿತ್ತು. ಬಿಳಿ ಮತ್ತು ಕೆಂಜರು ಬಣ್ಣಗಳಿಂದ ಶೋಭಿಸುತ್ತಿದ್ದ ಅದರ ಮೈ ಕಂಡವರ ಕಣ್ಣಿಗೊಂದು ಮುತ್ತುಕೊಡುವಂತಿತ್ತು. ಅದರ ಬಾಲ ಹೂಬಾಲ; ಎಂದರೆ ಬಾಲದ ತುದಿಯ ಚೌಲಿ ಬೆಳ್ಳಗೆ ಸೀಮೆಯ ಸುಣ್ಣದಿಂದ ಸಮೆದ ಚಾಮರದಂತಿತ್ತು. ಸೌಂದರ್ಯಕ್ಕೆ ತಕ್ಕಂತೆ ಕೆಚ್ಚಲು ಇದ್ದುದರಿಂದ ಉಪಯೋಗದ ದೃಷ್ಟಿಯಿಂದಲೂ ಇತರ ಹಸುಗಳಿಗಿಂತಲೂ ಹೆಚ್ಚಾಗಿ ಹಾಲು ಕೊಡುತ್ತಿತ್ತು. ಕಾನೂರಿನಲ್ಲಿದ್ದಾಗಲೂ ಅದು ನಾಗಮ್ಮನವರ ನಚ್ಚಿನ ದನವಾಗಿತ್ತು. ಅದಕ್ಕೆ ಒಂದು ಮುಖ್ಯವಾದ ಮತ್ತೊಂದು ಕಾರಣವೆಂದರೆ, ಅದು ನಾಗಮ್ಮನವರಿಗೆ ಬಳುವಳಿ ಬಂದಿದ್ದ ಗೋವಿನ ಸಂತತಿಗೆ ಸೇರಿತ್ತು. ಆ ಹಸು ಬಹುದಿನಗಳಿಂದ ಗಬ್ಬವಾಗಿದ್ದುದರಿಂದ ಹೂವಯ್ಯನಾದಿಯಾಗಿ ಸರ್ವರೂ ಅದು ಕರುಹಾಕುವುದನ್ನು ಕುತೂಹಲದಿಂದ ಕಾಯುತ್ತಿದ್ದರು. ಸೋಮನ ಬಾಯಿಂದ ಆ ವಾರ್ತೆಯನ್ನು ಕೇಳಿ ಅವನಿಗೆ ಆನಂದವಾಯಿತು. ಆದ್ದರಿಂದಲೆ ಸೋಮನನ್ನು ಕೆರಳಿಸಿ ಕೆರಳಿಸಿ ಮಾತಾಡಿಸಿ ನಗಲು ತೊಡಗಿದುದು. ಕೌಲಿ ಕರುವನ್ನು ಎತ್ತಿಕೊಂಡು ಬರಲು ಹೋದಾಗ ಸೋಮನನ್ನು ಅಟ್ಟಿಸಿಕೊಂಡು ಹೋದದ್ದು, ಸೋಮ ಮರಹತ್ತಿದ್ದು, ಆ ಮೇಲೆ ಕೌಲಿ ಮತ್ತೆ ಕರುವಿದ್ದೆಡೆಗೆ ಹಂಬಾ ಎಂದು ಓಡಿಹೋದ ಮೇಲೆ ಸೋಮ ಮರದಿಂದ ಇಳಿಯ ತೊಡಗಿ, ಮತ್ತೆ ಯಾವುದೋ ಒಂದು ಒಣಗಿದ ಹರೆ ಮುರಿದು ಬಿದ್ದ ಸದ್ದಿಗೆ ಕೌಲಿಯೇ ಬಂದಿತೆಂದು ಬೆದರಿ ಬೇಗ ಬೇಗನೆ ಮರವೇರಿದ್ದು, ಇದನ್ನೆಲ್ಲಾ ಕೇಳಿ ಕೇಳಿ ಎಲ್ಲರೂ ಅಳ್ಳೆ ಹಿಡಿಯುವಷ್ಟರಮಟ್ಟಿಗೆ ಗೊಳ್ಳೆಂದು ಬಿದ್ದುಬಿದ್ದು ನಗುತ್ತಿದ್ದರು.

ಊಟ ಪೂರೈಸಿದ ಮೇಲೆ ಹೂವಯ್ಯ ಕೌಲಿಯನ್ನೂ ಅದರ ಕರುವನ್ನೂ ನೋಡಬೇಕೆಂದು ಸೋಮನಿಗೆ ಹೇಳಲು ಅವನು ಅತ್ಯುತ್ಸಾಹದಿಂದ, ಕರು ಹಾಕಿದ್ದವನು ತಾನೆಯೇ ಎನ್ನುವಷ್ಟರ ಮಟ್ಟಿನ ಸಂಭ್ರಮದಿಂದ, ಕೊಟ್ಟಿಗೆಗೆ ಹೋಗಲು ಬೆಳಕು ಬೇಕಾಗಿ, ಲಾಟೀನು ಹೊತ್ತಿಸಿದನು. ಅವನನ್ನು ಹಿಂಬಾಲಿಸಿ ಹೂವಯ್ಯನೂ ಪುಟ್ಟಣ್ಣನೂ ಹೊರಟರು.

ಗೊಬ್ಬರದ ಗುಂಡಿಯ ಏರಿಯ ಮೇಲೆ ಹಾದು ಹೋಗುತ್ತಿದ್ದಾಗ ಹೂವಯ್ಯನಿಗೆ ಕೆಲವು ತಿಂಗಳ ಹಿಂದೆ ಅಲ್ಲಿ ಜರುಗಿದ್ದ ಸೋಮನ ಸಾಹಸ ನೆನಪಿಗೆ ಬಂದು ವಿನೋದಕ್ಕಾಗಿ, “ಇಲ್ಲೇ ಅಲ್ಲವೇನೋ ?” ಎಂದನು.

"ಹೌದೊಡೆಯಾ! ಕಳ್ಳಸೂಳೇಮಕ್ಕಳು ಕೊಂದುಹಾಕಿದ್ದರಲ್ದಾ ನನ್ನ!" ಎನ್ನುತ್ತ ಸೋಮ ಮುಂಬರಿದನು.

'ಬಲೀಂದ್ರ' ಹೋತ ತನ್ನ ಜಾಬಿನಲ್ಲಿ ಮಲಗಿದ್ದುದು, ದೀಪವನ್ನೂ ಮನುಷ್ಯರನ್ನೂ ಕಂಡು ಎದ್ದುನಿಂತು, ಮೆಲುಕು ಹಾಕುವುದನ್ನು ನಿಲ್ಲಿಸಿ ಎವೆ ಯಿಕ್ಕದೆ ನೋಡತೊಡಗಿತು. ಆದರೆ ಜನರು ಹತ್ತಿರ ಬರಲು ಗುರುತು ಸಿಕ್ಕಿ ತೆಂಬುದನ್ನು ಪುನಃ ಮೆಲುಕು ಹಾಕುವುದರಿಂದಲೂ ಸಮಾಧಾನದ ಭಂಗಿ ಯಿಂದಲೂ ಪ್ರದರ್ಶಿಸಿತು.

ಪುಟ್ಟಣ್ಣ "ಇವೆಲ್ಲಿ ಬಾಲಗಚ್ಚೆ! ಎಲ್ಲಿ ಹೋದರೂ ಬರ್ತವೆ! ಹಚಾ! ಹೋಗ್ತೀಯೊ ಇಲ್ಲೊ? ನಿನ್ನ..." ಎಂದು ಕಲ್ಲು ತೆಗೆದುಕೊಳ್ಳುವಂತೆ ನೆಲಕ್ಕೆ ಕೈಯಿಟ್ಟು ಬಾಗಲು, ನಾಯಿಗಳು ಬಡರಿ ಬಿದ್ದು ಹಿಂದಕ್ಕೆ ಓಡಿದುವು.

ಮೂವರೂ ಕೊಟ್ಟಿಗೆಯನ್ನು ಪ್ರವೇಶಿಸಿದರು. ಒಡನೆಯೆ ಸೆಗಣಿ, ಗೋಮೂತ್ರ, ಹುಲ್ಲು, ದನಗಳ ಮೈವಾಸನೆ, ಅವುಗಳ ಉಸಿರಿನ ವಾಸನೆ – ಇವು ಗಳಿಂದ ತುಂಬಿದ ನಸುಬಿಸುಪಾದ ಸಿನುಗುಗಾಳಿ ಮೂಗಿಗೆ ಬೀಸಿತು. ಕಾಲಿಗೂ ಸೆಗಣಿ ಗಂಜಲಗಳ ಅನುಭವವಾಯಿತು. ಮಲಗಿದ್ದ ಕೆಲವು ದನಗಳು ಎದ್ದು ನಿಂತು ದೊಡ್ಡದಾದ ಕಣ್ಣುಬಿಟ್ಟು ನೋಡಿದುವು. ಅವು ಗಾಬರಿಯಿಂದ ಜೋರಾಗಿ ಎಳೆದುಬಿಡುತ್ತಿದ್ದ ಉಸಿರೂ ಕೇಳಿಸಿತು. ಅವು ಚಲಿಸಿದಾಗ ನೆಲಕ್ಕೆ ಹಾಕಿದ್ದ ಕಲ್ಲುಗಳಿಗೆ ತಗುಲಿ ಆಗುತ್ತಿದ್ದ ಗೊರಸಿನ ಸದ್ದೂ, ಕಂಬಗಳಿಗೆ ಕೋಡು ಹೊಡೆದ ಸದ್ದೂ ಕೇಳಿಸಿ ಹೂವಯ್ಯನ ಮನಸ್ಸಿನಲ್ಲಿ ರೈತನ ಜಗತ್ತಿನ ಸುಖದ ಸ್ಮೃತಿ ಮೂಡಿತು. ಆ ದನಗಳ ಕಣ್ಣುಗಳು, ಕಿವಿಗಳು, ಕೋಡುಗಳು, ಗೋಡೆಯ ಮೇಲೆ ಚಲಿಸುತ್ತಿದ್ದ ದೊಡ್ಡ ನೆರಳುಗಳೂ ಹೇಗೆ ಕಾಣುತ್ತಿವೆ! ಯಾವುದೊ ಒಂದು ದನದ ಕೊರಳಿನಲ್ಲಿ ದೊಂಟೆಯ ಸದ್ದಾಗುತ್ತಿದೆ! ಮತ್ತೊಂದು ಕರುವಿನ ಕುತ್ತಿಗೆಯಲ್ಲಿ ಕಿರುಗಂಟೆಯ ಟಿಂಟಿಣಿಯಾಗುತ್ತಿದೆ!...

"ಸೋಮ, ಇವತ್ತು ಯಾರು ಸೆಗಣಿ ಬಾಚಿದ್ದು?"

"ಸೇಸಿ ಅಂತಾ ಕಾಣ್ತದೆ..."

"ಚೆನ್ನಾಗಿ ಸಗಣಿ ಬಾಚ್ತೀರೋ ಇಲ್ಲೊ?..."

"ನಾನು ಬಾಚಿದಾಗ ನೆಕ್ಕಿದಂತೆ ಚೆನ್ನಾಗಿ ಬಾಚುತ್ತೇನೆ..."

"ಪುಟ್ಟಣ್ಣಾ, ನೀ ಸ್ವಲ್ಪ ಕೊಟ್ಟಿಗೆ ಕಡೆ ಸರಿಯಾಗಿ ನೋಡಿಕೊಳ್ಳಬೇಕು." ಎನ್ನುತ್ತಾ ಹೂವಯ್ಯ ಕೌಲಿಯಿದ್ದ ಎಡೆ ನಿಂತು "ಗೋವಿದ್ದರೆ ತಾನೆ ನಾವಿ ರೋದು!" ಎಂದನು.

ಕೌಲಿ ತನ್ನ ಕರುವನ್ನು ಮೂಸುತ್ತ, ಅದರ ಮೃದು ರೋಮಮಯವಾದ ನವಕೋಮಲ ಚರ್ಮವನ್ನು ನೆಕ್ಕುತ್ತ, ಆಗಂತುಕರ ಕಡೆ ತನ್ನ ಅಗಲವಾದ ಕಣ್ಣುಗಳನ್ನು ತೆರೆದು ನೋಡತೊಡಗಿತು. ಸೋಮ ಅದರ ದೃಷ್ಟಿ ಮಾತ್ರಕ್ಕೇ ಬೆದರಿ ಹಿಂಜರಿದು ನಿಂತು "ಹತ್ತಿರ ಹೋಪುದು ಬೇಡ, ಅಯ್ಯಾ" ಎಂದು ಎಚ್ಚರಿಕೆ ಹೇಳಿದನು.

"ಇಷ್ಟು ಹೆದರಿಕೆಯಿರುವ ಮನುಷ್ಯ ನೀನು ಅಂದು ಕದಿಯೋಕೆ ಹೇಗೆ ಧೈರ್ಯ ಮಾಡಿದೆಯೋ ಏನೋ!" ಎನ್ನುತ್ತಾ ಹೂವಯ್ಯ ಮುಂಬರಿದನು. ಆದರೆ ಕೌಲಿ ಕೋಡಿಲ್ಲದ ತನ್ನ ತಲೆಯನ್ನು ಅಲ್ಲಾಡಿಸತೊಡಗಿತು.

ಅದನ್ನು ಕಂಡು ಹೂವಯ್ಯ "ಪೂರಾ ಹೆದರಿಸಿಬಿಟ್ಟಿದ್ದೀರಿ ಅಂತಾ ಕಾಣುತ್ತೆ! ನಿಮ್ಮ ದೆಸೆಯಿಂದ ಆಗೋದಿಲ್ಲ!" ಎಂದು ಸೋಮನ ಕಡೆ ತಿರುಗಿ ನೋಡಿದನು.

ಸೋಮ "ನಾವೇನು ಮಾಡಲಕ್ಕು! ಅದರ ಹಣೇಬರಾ ಹಾಂಗಲ್ದಾ?" ಎಂದು "ಅಮ್ಮ ಒಬ್ಬರಿಗೆ ಹೊರತೂ ಇನ್ನು..." ಎನ್ನುವಷ್ಟರಲ್ಲಿ ಕೌಲಿ ಗಟ್ಟಿಯಾಗಿ ಸೀನಿಬಿಡಲು ಬೆಚ್ಚಿಬಿದ್ದು ಹಿಂದಕ್ಕೆ ಹಾರಿ ನಿಂತನು. ಹೂವಯ್ಯ ಪುಟ್ಟಣ್ಣರಿಗೆ ನಗು ತಡೆಯಲಿಕ್ಕಾಗದೆ ಕೌಲಿ ವಿಸ್ಮಯಪಡುವಂತೆ ನಕ್ಕರು.

ಲಾಟೀನಿನ ಬೆಳಕಿನಲ್ಲಿ ಕೌಲಿಯಂತೆಯೆ ಸುಂದರವಾಗಿ ಮುದ್ದಾಗಿದ್ದ ಅದರ ಕರುವನ್ನು ದೂರದಿಂದಲೆ ನೋಡಿಕೊಂಡು ಮೂವರೂ ಹಿಂತಿರುಗಿದರು. ದೀಪ ದೂರದೂರವಾಗಿ ಮರೆಯಾಗುವವರೆಗೂ ಅದನ್ನೇ ನೋಡುತ್ತಿದ್ದ ಕೌಲಿ ಮತ್ತೆ ಕತ್ತಲೆಯಾಗಲು ಸಮಾಧಾನಗೊಂಡು ಅಕ್ಕರೆಯಿಂದ ತನ್ನ ಕರುವನ್ನು ಅಕ್ಕರೆಗಾಗಿ ನೆಕ್ಕತೊಡಗಿತು.

## ೫೭

## ನಾಗಮ್ಮನವರ ಹತಾಶೆ—ಚಂದ್ರಯ್ಯಗೌಡರ ಈರ್ಷ್ಯೆ

ದೀರ್ಘಕಾಲ ನಿರೀಕ್ಷಿಸಿಕೊಂಡಿದ್ದ ಚೈತ್ರಮಾಸ ಬಂದಿತು. ಮುತ್ತಳ್ಳಿ ಮತ್ತು ಕಾನೂರುಗಳ ವಿವಾಹದ ಶುಭದಿನಗಳೂ ಬಳಿ ಸಾರಿದುವು. ಚಿನ್ನಯ್ಯನ ಮದುವೆ ರಾಮಯ್ಯನ ಮದುವೆಗೆ ಎರಡುದಿನಗಳು ಮೊದಲು ನಡೆಯುವಂತೆ ಏರ್ಪಾಡಾಗಿತ್ತು.

ಗಂಡಿನ ದಿಬ್ಬಣ ಮುತ್ತಳ್ಳಿಯಿಂದ ಹೊರಟು ಕಾನೂರಿಗೆ ಬರುವ ದಿನ ಹಗಲು ಸುಮಾರು ನಾಲ್ಕು ಗಂಟೆಯ ಹೊತ್ತಿನಲ್ಲಿ ಕೆಳಕಾನೂರಿಗೆ ಸಮೀಪವಾಗಿ

ಕಾನೂರಿಗೆ ಹಾದು ಹೋಗುತ್ತಿದ್ದ ಗಾಡಿರಸ್ತೆಯಲ್ಲಿ, ದಟ್ಟವಾಗಿ ಎತ್ತರವಾಗಿ ಇಕ್ಕೆಲಗಳಲ್ಲಿಯೂ ಬೆಳೆದುನಿಂತಿದ್ದ ಹೊಂಗೆಯಮರಗಳ ಹಸುರಿನ ರಾಶಿಯಿಂದ ಧುಮುಕಿ ಪ್ರವಹಿಸುತ್ತಿದ್ದ ಕರಿಯ ತಣ್ಣೆಳಲಿನಲ್ಲಿ ಮಾವಿನ ಎಲೆ, ಹಲಸಿನ ಎಲೆ, ಬಾಳೆಯ ಮರಗಳಿಂದ ಅಲಂಕೃತವಾಗಿದ್ದ ಸಣ್ಣ ಚಪ್ಪರವೊಂದು ನಿರ್ಮಿತವಾಗಿತ್ತು. ನೆಲದ ಮೇಲೆ ಕೆಲವು ವಾಟೆಯ ತಟ್ಟಿಗಳನ್ನೂ ಗೀಕಿನ ಚಾಪೆಗಳನ್ನೂ ಹಾಸಿದ್ದರು. ದೊಡ್ಡ ಹಂಡೆಯೊಂದರಲ್ಲಿ ನಿಂಬೆಯ ಹಣ್ಣಿನ ಪಾನಕವನ್ನು ಮಾಡಿಟ್ಟುಕೊಂಡು ಸೋಮನೂ ಪುಟ್ಟಣ್ಣನೂ ಮಾತಾಡುತ್ತಾ ನಿಂತಿದ್ದರು. ಇಬ್ಬರೂ ತಮ್ಮಲ್ಲಿದ್ದ ಸರ್ವ ಶ್ರೇಷ್ಠವಾದ ಉಡುಗೆ ತೊಡುಗೆಗಳನ್ನು ತಮ್ಮ ತಮ್ಮ ಕಲಾಭಿರುಚಿ ಪರಮಾವಧಿ ಮುಟ್ಟುವಂತೆ ಧರಿಸಿದ್ದರು.

ಅವರಿಗೆ ತುಸು ದೂರದಲ್ಲಿ ನಾಗಮ್ಮನವರೊಡನೆ ಮಾತಾಡುತ್ತ ಹೂವಯ್ಯ ತನ್ನ ನಿತ್ಯದ ಸರಳ ಸಾಧಾರಣ ಪೋಷಾಕಿನಲ್ಲಿ ಕುಳಿತಿದ್ದನು. ನಾಗಮ್ಮನವರು ಮಲೆನಾಡಿನ ಪದ್ಧತಿಯಂತೆ ಹೊಸದಾದ ವಲ್ಲಿಯೊಂದನ್ನು ಕಟ್ಟಿಕೊಂಡಿದ್ದರು. ಅದು ಹೊರತೂ ಅವರಲ್ಲಿ ಬೇರೆ ಯಾವುದೂ ವಿಶೇಷತೆಯಿರಲಿಲ್ಲ. ಅವರ ಬಳಿ ಮದುವಣಿಗನಿಗೆ ಪದ್ಧತಿಯಂತೆಯೂ ಪ್ರೀತಿಪೂರ್ವಕವಾಗಿಯೂ ವಿನಿಯೋಗಿಸ ಲಿದ್ದ ಹಾಲು ತುಪ್ಪದ ಬಟ್ಟಲು ತಳತಳ ಹೊಳೆಯುತ್ತಿತ್ತು. ಅದರಲ್ಲಿದ್ದ ಹೂವು, ಹಣ್ಣು, ಹಾಲು, ತುಪ್ಪ, ಇವುಗಳ ಪರಿಮಳಕ್ಕೆ ನಾಲ್ಕಾರು ಜೇನುಹುಳುಗಳು ಎರಗಲೆಂದು ಹಾರಾಡತೊಡಗಿದ್ದುವು. ಸುತ್ತುಮುತ್ತಲೂ ದಟ್ಟಯಿಸಿದ್ದ ಹೊಂಗೆ, ಹಲಸು, ಬಸಿರಿ, ಆಲ, ಅರಳಿ ಮೊದಲಾದ ಮರಗಳಲ್ಲಿಯೂ ಕೇದಗೆಯ ಓಲೆ ಯೋಲೆ ಗರಿಗರಿಯಾಗಿದ್ದ ಮೆಳೆಗಳಲ್ಲಿಯೂ ಹಕ್ಕಿಗಳು ತುಮುಲಗಾನ ಮಾಡು ತ್ತಿದ್ದುವು.

ಎರಡು ಮೂರು ಫರ್ಲಾಂಗುಗಳ ಆಚೆಯಿದ್ದ ತಮ್ಮ ಮನೆಯಲ್ಲಿ ನಾಯಿಗಳು ಬೊಗಳುತ್ತಿದ್ದುದನ್ನು ಆಲಿಸಿ ಹೂವಯ್ಯ "ಏ ಸೋಮ, ಎಲ್ಲಾ ನಾಯಿನೂ ಕಟ್ಟೀಯೇನೊ ?" ಎಂದು ಕೇಳಿದನು.

"ಎಲ್ಲಾ ಕಟ್ಟಿದ್ದೇನೆ. ಆ ಮೋಟುಬಾಲದ ಹೊಸ ಮರಿ ಮಾತ್ರ ಕೈಗೇ ಸಿಕ್ಕಲಿಲ್ಲ. ಬೆರಸಿ ಬೆರಸಿ ಸಾಕಾಗಿ ಹೋಯ್ತಲ್ಲಾ ನನಗೆ."

ಹೂವಯ್ಯ ಸೋಮನ ಪ್ರತ್ಯುತ್ತರಕ್ಕೆ ಒಂದಿನಿತೂ ಗಮನ ಕೊಡದೆ ತಾಯಿ ಯೊಡನೆ ಮಾತಾಡತೊಡಗಿದ್ದನು. ಅವನು ಕೇಳಿದ್ದ ಪ್ರಶ್ನೆ ಕೂಡ ಜಾಗ್ರಚ್ಚಿತ್ತದ್ದಾ ಗಿತ್ತೊ ಇಲ್ಲವೊ ಹೇಳಲು ಸಾಧ್ಯವಿಲ್ಲ. ತಾಯಿಯೂ ಮಗನೂ ಗಾಢವಾದ ಮಾತುಕತೆಗಳಲ್ಲಿ ತೊಡಗಿದ್ದರು. ಅವರ ಸಂಭಾಷಣೆಯ ವಿಷಯ ಕಾನೂರು ಮುತ್ತಳ್ಳಿಗಳನ್ನು ಕುರಿತದ್ದಾಗಿತ್ತು.

ಮದುವೆಗೆ 'ವಿವಾಹ ಮಹೋತ್ಸವ ಆಹ್ವಾನ ಪತ್ರಿಕೆ'ಗಳನ್ನು ಕಳುಹಿಸುವುದರ ಜೊತೆಗೆ ಸಮೀಪದ ಬಂಧುಗಳನ್ನು ಮನೆಯವರೇ ಸ್ವತಃ ಹೋಗಿ ಕೈಜೋಡಿಸಿ ನಿಂತು ಕರೆದು ಬರುವುದು ಪದ್ಧತಿ. ಮುತ್ತಳ್ಳಿಯಿಂದಲೇನೊ ಆ ಕರೆ ಬಂದಿತ್ತು. ಆದರೆ ಕಾನೂರಿನಿಂದ ಲಗ್ನಪತ್ರಿಕೆಯೊಂದಲ್ಲದೆ 'ಕರೆ' ಬಂದಿರಲಿಲ್ಲ. ಆದ್ದರಿಂದ ನಾಗಮ್ಮನವರಿಗೆ ಬಹಳ ಅಸಮಾಧಾನವೂ ದುಃಖವೂ ಆಗಿತ್ತು. ತಮ್ಮ ಸ್ವಂತ ಮಗಳಂತಿದ್ದ ಪುಟ್ಟಮ್ಮನ ಮದುವೆಗೆ 'ಕರೆ' ಬರಲಿಲ್ಲವಲ್ಲಾ ಎಂದು ಕಣ್ಣೀರು ಹಾಕಿದರು.

ಹೂವಯ್ಯ ತಾಯಿಯನ್ನು ಸಮಾಧಾನಪಡಿಸಲೆಂದು "ನಿಮಗೆಲ್ಲ ಈ ಹಳೇ ಕಂದಾಚಾರ ಎಂದರೆ ಪ್ರಾಣ! ಲಗ್ನಪತ್ರಿಕೆ ಕಳುಹಿಸಿದಮೇಲೆ 'ಕರೆ' ಏಕೆ?" ಎಂದನು.

"ಬಿಳೀ ಕಾಗದದಮೇಲೆ ಕರೀ ಗೀಟು ಗೀಚಿ ಗೀಚಿ ಕೊಟ್ಟುಬಿಟ್ಟರೆ 'ಕರೆ' ಬಂದ ಹಾಂಗಾಯ್ತೇನು? ನಿನ್ನಂಥಾ ಬರಾವು ಬಂದವಗೆ ಅದೇ ಸಾಕಾಗಬೈದು. ನನ್ನಂಥಾ ಬರಾವು ಸರಾವು ಇಲ್ದವಳಿಗೆ?"

"'ಕರೆ' ಬಂದಿದ್ದರೂ ನೀನೇನು ಹೋಗುವ ಹಾಗಿತ್ತೇನು?"

"ಹೋಗ್ತಿರಲಿಲ್ಲ! ಆದ್ರೂ..."

"ಹೋ! ದಿಬ್ಬಣ ಬಂತು ಅಂತಾ ಕಾಣ್ತಾದೆ" ಎಂದು ಹೇಳಿದ ಸೋಮ ತನ್ನ ಉದ್ದವನ್ನೆಲ್ಲ ನಿಮಿರಿನಿಂತು ಕಿವಿಗೊಟ್ಟು ಆಲಿಸತೊಡಗಿದನು.

ಪುಟ್ಟಣ್ಣ ದೊಡ್ಡ ಬುಟ್ಟಿಯಲ್ಲಿದ್ದ ಲೋಟಗಳನ್ನು ಅನುಗೊಳಿಸಲಾರಂಭಿಸಿದನು.

ದೂರದ ಅರಣ್ಯಗಳ ಮಧ್ಯೆ ವಾಲಗ, ಕೊಂಬು, ತಂಬಟೆ ಮೊದಲಾದ ವಾದ್ಯಗಳ ಸದ್ದೂ ಗರ್ನಾಲು, ಕದಿನಿ ಮೊದಲಾದ 'ಮದ್ದು ಗುಂಡು'ಗಳ ಸದ್ದೂ ಕೇಳಬಂದಿತು. ನಾಗಮ್ಮ ಹೂವಯ್ಯರೂ ಎದ್ದುನಿಂತು ದಿಬ್ಬಣದ ಸದ್ದು ಕೇಳಿಬರುತ್ತಿದ್ದ ದಿಕ್ಕಿಗೆ ತಿರುಗಿ ನಿಂತು ನೋಡತೊಡಗಿದರು. ಮಲೆನಾಡಿನ ಹಸುರು ಮಲೆಗಳು ಬಿಸಿಲಿನಲ್ಲಿ ಮೆರೆಯುತ್ತಿದ್ದುವು.

"'ಕರೆ' ಬಂದಿದ್ದರೂ ನೀನೇನು ಹೋಗುವ ಹಾಗಿತ್ತೇನು" ಎಂದು ಹೂವಯ್ಯ ನಾಗಮ್ಮನವರಿಗೆ ಕೇಳಿದ ಪ್ರಶ್ನೆಯಲ್ಲಿ ಅನೇಕ ಪ್ರಸಂಗಗಳು ಅಡಗಿದ್ದುವು. ಹೂವಯ್ಯ ಕಾನೂರು ಮನೆಯನ್ನು ಬಿಟ್ಟು ಬಂದಿದ್ದರೂ ಅವನ ಪಾಲಿಗೆ ಬಂದಿದ್ದ ಗೃಹಭಾಗ ಅವನ ವಶದಲ್ಲಿಯೇ ಇದ್ದಿತಷ್ಟೆ! ಆ ಗೃಹಭಾಗವನ್ನು ಮದುವೆಯ ಕಾಲದಲ್ಲಿ ಉಪಯೋಗಿಸಿಕೊಳ್ಳಬಹುದೆಂದೂ, ಬೇಕಾದರೆ ಬೀಗದಲ್ಲಿದ್ದ ಕೊಟಡಿಗಳನ್ನು ಬಿಟ್ಟುಕೊಡುತ್ತೇನೆಂದೂ ಹೂವಯ್ಯ ಹೇಳಿಕಳುಹಿಸಿದ್ದನು.

ಚಂದ್ರಯ್ಯಗೌಡರು, ಯಾವ ತರ್ಕದ ಸಹಾಯದಿಂದಲೊ, ಹೂವಯ್ಯ ತನಗೆ

ಅವಮಾನ ಮಾಡುವುದಕ್ಕಾಗಿಯೆ ಹಾಗೆ ಹೇಳಿಕಳುಹಿಸಿದ್ದಾನೆ ಎಂದು ವಾದಿಸಿ, "ಅವನಿಗೆ ಹೇಳು: ಅವನ ನೆಲದಲ್ಲಿ ಒಂದಂಗುಲಾನೂ ನಮಗೆ ಬ್ಯಾಡ. ನಾನು ಚಪ್ಪರ ಹಾಕಿಸ್ತೀನಿ! ಏನೋ ದೇವರು ಕೊಟ್ಟಿದ್ದು ನಾಲ್ಕು ಆಳು ಕಾಳು ಇನ್ನೂ ಇದೆ! ಎಲ್ಲಾ ಹೋಗಿ ಗರೀಬರಾದಮೇಲೆ ಬೇಕಾದಾಗ ಕೇಳ್ತೀನಿ. ಆವಾಗ ಕೊಡಲಿ!" ಎಂದು ಪ್ರತಿ ಹೇಳಿಕಳುಹಿಸಿದ್ದರು.

ಅದುವರೆಗೆ ನಾಗಮ್ಮನವರು ಪುಟ್ಟಮ್ಮನ ಮನಸ್ತೃಪ್ತಿಗಾಗಿಯಾದರೂ ಅವಳ ಮದುವೆಗೆ ಹೋಗಬೇಕಾಗುತ್ತದೆ ಎಂದು ಮಗನೊಡನೆ ಹೇಳುತ್ತಿದ್ದರು. ನಿಜವಾಗಿಯೂ ಅವರಿಗೂ ಪುಟ್ಟಮ್ಮನಮೇಲೆ ವಾಸುವಿನಮೇಲೆ ಇದ್ದಷ್ಟೇ ಮಮತೆಯಿತ್ತು. ಆ ಮಮತೆ ಅವರನ್ನು ಮದುವೆಗೆ ಎಳೆಯುತ್ತಿತ್ತು. ಆದರೆ ಚಂದ್ರಯ್ಯಗೌಡರ ಕಟುವಾದ ಪ್ರತ್ಯುತ್ತರ ಬಂದಮೇಲೆ, ನಾಗಮ್ಮನವರ ಮನಸ್ಸು ಬದಲಾಯಿಸಿ ಮದುವೆಗೆ ಹೋಗಬಾರದೆಂದೇ ನಿರ್ಣಯಿಸಿದರು. ಆದರೆ ಒಂದು ವಾರದ ಹಿಂದೆ ಚಂದ್ರಯ್ಯಗೌಡರೂ ರಾಮಯ್ಯನೂ ಆಳುಗಳಿಗೂ ಮನೆಯವರಿಗೂ ಮದುಮಗಳಿಗೂ ಮದುವೆಗೆ ಬೇಕಾಗಿದ್ದ ಬಟ್ಟೆಬರೆ ಸಾಮಾನು ಸರಕುಗಳನ್ನು ತರಲೆಂದು ಹೊಸ ಗಾಡಿ ಎತ್ತುಗಳನ್ನು ಸಿಂಗರಿಸಿ ಕಟ್ಟಿಕೊಂಡು ತೀರ್ಥಹಳ್ಳಿಯ ಪೇಟೆಗೆ ಹೋಗಿದ್ದಾಗ, ಆ ದಿನ ಸಾಯಂಕಾಲ ಪುಟ್ಟಮ್ಮ, ವಾಸುವನ್ನೂ ಜೊತೆಗೆ ಕರೆದುಕೊಂಡು, ಸೇರೆಗಾರರು ಮೊದಲಾದ ಯಾರಿಗೂ ತಿಳಿಯದಂತೆ, ಗುಟ್ಟಾಗಿ ಕೆಳಕಾನೂರಿಗೆ ಬಂದಳು. ಹೂವಯ್ಯ, ಪುಟ್ಟಣ್ಣ, ಸೋಮ ಮೂವರೂ ಜೇನು ಹುಡುಕಲು ಕಾನಿಗೆ ಹೋಗಿದ್ದುದರಿಂದ, ಮನೆಯಲ್ಲಿ ನಾಗಮ್ಮನವರೊಬ್ಬರೆ ಇದ್ದರು. ಬೈರನ ಹೆಂಡತಿ ಸೇಸಿ ಹೊರಗಡೆ ಹಟ್ಟಿ ಬಾಚುವ ಕೆಲಸದಲ್ಲಿದ್ದವಳು ಪುಟ್ಟಮ್ಮ ವಾಸು ಇಬ್ಬರೇ ಬರುತ್ತಿದ್ದುದನ್ನು ಕಂಡು ಮಹದಾಶ್ಚರ್ಯದಿಂದ "ಏನ್ರಮ್ಮಾ, ಏನ್ರಯ್ಯಾ, ಅಪ್ರೂಪ ಬಂದು ಬಿಟ್ರಿ?" ಎಂದು ಕರಿಯ ಮುಖದಲ್ಲಿ ಬಿಳಿಯ ಹಲ್ಲಿನ ಸಾಲುಗಳನ್ನು ಪ್ರದರ್ಶಿಸಿದಳು.

ಪುಟ್ಟಮ್ಮ ವಾಸು ಇವರನ್ನು ಕಂಡೊಡನೆ ನಾಗಮ್ಮನವರಿಗೆ ಮಾತು ತೊದಲುವಷ್ಟು ಆನಂದವಾಯಿತು. ನಾಗಮ್ಮನವರು ಬೇಗ ಬೇಗನೆ ರೊಟ್ಟಿ, ಮೊಟ್ಟೆ ಪಲ್ಯಗಳನ್ನು ಮಾಡತೊಡಗಿದರು. ಪುಟ್ಟಮ್ಮ "ಬ್ಯಾಡ, ದೊಡ್ಡಮ್ಮ, ಹೊತ್ತಾಗ್ತದೆ! ಅಪ್ಪಯ್ಯಗೆ ಗೊತ್ತಾದ್ರೆ ನನ್ನ ಚಟಾ ತಗ್ದುಬಿಡ್ತಾರೆ!" ಎಂದು ಅಂಗಲಾಚಿಕೊಂಡರೂ ಬಿಡಲಿಲ್ಲ. ಕಡೆಗೆ, ದೊಡ್ಡಮ್ಮ ಬೇಡವೆಂದರೂ ಕೇಳದೆ, ಪುಟ್ಟಮ್ಮನೂ ಅವರಿಗೆ ನೆರವಾಗಿ ರೊಟ್ಟಿ ಸುಡುವ ಕಾರ್ಯದಲ್ಲಿ ಭಾಗವಹಿಸಿದಳು. ವಾಸುವೂ ಇದ್ದಕ್ಕಿದ್ದ ಹಾಗೆ ಬಲ್ಲವನಂತೆ ಗಂಭೀರವಾಗಿ ಅವರಿಬ್ಬರಿಗೂ ಸಹಾಯವಾದನು.

ಪುಟ್ಟಮ್ಮ ದೊಡ್ಡಮ್ಮನನ್ನು ತನ್ನ ಮದುವೆಗೆ ಬರುವಂತೆ ಕರೆದಳು. ನಾಗಮ್ಮನವರು ಸ್ತ್ರೀಸಹಜವಾದ ಹರಟೆಯೊಲ್ಮೆಯಿಂದ ತಮಗೂ ಚಂದ್ರಯ್ಯ ಗೌಡರಿಗೂ ನಡೆದಿದ್ದ ವ್ಯವಹಾರಗಳನ್ನೆಲ್ಲ ಹೇಳಿ "ನಾನು ಮನೆಗೆ ಬರಾದಿಲ್ಲವ್ವಾ! ನಿನ್ನ ದಿಬ್ಬಣ ಗಂಡನ ಮನೆಗೆ ಹೋಗುವಾಗ ದಾರೀಲೇ ನೋಡಿ ಸಂತೋಸ ಪಡ್ತೀನಿ! ದಿಬ್ಬಣ ಹೋಗಾದು ಬರಾದು ನಮ್ಮ ಗದ್ದೆಮೂಲೆ ಗಾಡಿ ರಸ್ತೇಲಸ್ಟೆ?" ಎಂದು ಹೇಳುತ್ತ ಕಣ್ಣುಜ್ಜಿಕೊಂಡರು.

ಇನ್ನೂ ಚೆನ್ನಾಗಿ ಕಪ್ಪಾಗಿರಲಿಲ್ಲ. ನಾಗಮ್ಮನವರು ವಾಸುವಿನ ಜೇಬಿಗೆ ತಿಂಡಿಗಳನ್ನು ತುರುಕಿ ತುರುಕಿ, ಅವನನ್ನೂ ಪುಟ್ಟಮ್ಮನನ್ನೂ ಕಳುಹಿಸಲೆಂದು ಹೊರ ಅಂಗಳಕ್ಕೆ ಬಂದು ನಿಂತಿದ್ದರು. ಪುಟ್ಟಮ್ಮ ಇದ್ದಕ್ಕಿದ್ದ ಹಾಗೆ ದೊಡ್ಡಮ್ಮನ ಸೆರಗು ಜಗ್ಗಿಸಿ ಎಳೆದು "ದೊಡ್ಡಮ್ಮಾ, ನೋಡಲ್ಲಿ ಸೇರೆಗಾರರು ಬರ್ತಿದ್ದಾರೆ!... ಏ ವಾಸೂ, ಒಳಗೆ ಬಾರೊ!" ಎಂದು ಅವನನ್ನೂ ಎಳೆದುಕೊಂಡು ಒಳ ನುಗ್ಗಿದಳು.

ಸೇರೆಗಾರ ರಂಗಪ್ಪಸೆಟ್ಟರು ರಾಮಯ್ಯನ ಆಜ್ಞೆಯಂತೆ ಅವನು ಹಿಂದೆ ಹೂವಯ್ಯನ ಹತ್ತಿರ ಬಿಟ್ಟಿದ್ದ ಪಟಗಳನ್ನೂ ಪುಸ್ತಕಗಳನ್ನೂ ಹೊರಿಸಿಕೊಂಡು ಹೋಗಲು ಆಳುಗಳೊಡನೆ ಬಂದಿದ್ದರು. ಆದರೆ ನಾಗಮ್ಮನವರು ಹೂವಯ್ಯ ಮನೆಯಲ್ಲಿಲ್ಲವೆಂದು ಮರುದಿನ ಬರುವಂತೆ ಹೇಳಿ ಕಳುಹಿಸಿದರು.

ಸೇರೆಗಾರರು ಆಳುಗಳೊಡನೆ ಹೋದ ತರುವಾಯ, ಪುಟ್ಟಮ್ಮ ವಾಸು ಇಬ್ಬರೂ ಸೇಸಿಯೊಡನೆ ಕತ್ತಲೆಯಲ್ಲಿ ನಿಶ್ಶಬ್ದವಾಗಿ ಕಾನೂರಿಗೆ ಕದ್ದು ನಡೆದರು.

ಈ ಸಂಗತಿಯನ್ನೆಲ್ಲ ನಾಗಮ್ಮನವರು ಮಗನಿಗೆ ಹೇಳಿ, ಕೆಳಕಾನೂರಿನ ಗದ್ದೆ ಮೂಲೆಯ ಗಾಡಿರಸ್ತೆಯಲ್ಲಿ ದಿಬ್ಬಣದ ಸತ್ಕಾರಕ್ಕೆ ಚಪ್ಪರ ಹಾಕಿಸುವಂತೆ ಮಾಡಿದರು. ಆ ಚಪ್ಪರದ ಮುಖ್ಯವಾದ ಉದ್ದೇಶ, ಹೊರಗಿನವರಿಗೆ ಹಾಗೆ ಕಂಡರೂ, ದಿಬ್ಬಣದ ಸತ್ಕಾರವಾಗಿರಲಿಲ್ಲ; ಕಾನೂರಿನಿಂದ ಗಂಡನೊಡನೆ ದಂಡಿಗೆ ಏರಿ ಮುತ್ತಳ್ಳಿಗೆ ಹೋಗುವಾಗ ಮದುವಣಗಿತ್ತಿ ಪುಟ್ಟಮ್ಮನನ್ನು ನಾಗಮ್ಮನವರು ಕಂಡು ಹರಸಿ ಸಂತೋಷಪಡಿಸುವ ಸಲುವಾಗಿತ್ತು.

ನೋಡುತ್ತ ನಿಂತಿದ್ದ ಹಾಗೆಯೆ ದಿಬ್ಬಣದ ಸದ್ದು ಹತ್ತಿರ ಹತ್ತಿರವಾಯಿತು. ದಂಡಿಗೆ ಹೊತ್ತು ಬರುತ್ತಿದ್ದ ಬೋಯಿಗಳ ಬಾಯಿಸದ್ದೂ ಕೇಳಿಸಿತು. ಕಡೆಗೆ ದಿಬ್ಬಣದ ಮೆರವಣಿಗೆಯೂ ಗೋಚರಿಸಿತು.

ದಿಬ್ಬಣ ಚಪ್ಪರವಿದ್ದಲ್ಲಿ ವಿಶ್ರಾಂತಿಗಾಗಿ ನಿಂತಿತು. ವಾದ್ಯದ ಶಬ್ದಗಳೂ ನಿಂತು ಮನುಷ್ಯರ ಮಾತಿನ ಸದ್ದು ತುಮುಲವಾಗಿ ಕೇಳಿ ಬಂದಿತು. ನಮಸ್ಕಾರಗಳೂ, 'ಬಂದ್ರೆ'ಗಳೂ, ಯೋಗಕ್ಷೇಮ ವಿಚಾರಗಳೂ ಪರಸ್ಪರವಾಗಿ ಸಾಗಿದುವು.

ಲಲನೆಯರ ಒಡವೆಗಳ ಉಲಿಯೂ, ಅದಕ್ಕೆ ಸಮಶ್ರುತಿಯಾಗಿದ್ದ ಅವರ ಕೊರಳ ದನಿಯೂ, ಅವರು ಉಟ್ಟುಕೊಂಡಿದ್ದ ಜಡ್ಡುಸೀರೆ, ಕಾಗಿನ ಸೀರೆ, ಜರತಾರಿಯ ಸೀರೆ, ತರ ತರದ ವಲ್ಲಿಗಳು, ಕುಪ್ಪಸಗಳು, ರವಕೆಗಳು ಮೊದಲಾದುವುಗಳಿಂದ ಉಗುತ್ತಿದ್ದ ಹೊಸ ಬಟ್ಟೆಯ ವಾಸನೆಯೂ, ಅಚ್ಚಕರಿಯ ಬಣ್ಣದಿಂದ ಹಿಡಿದು ನಸುಗೆಂಪು ಬಣ್ಣದವರೆಗೂ ಇದ್ದ ಅವರ ವಿವಿಧಾಕೃತಿಯ ಮುಖ ಸಮೂಹವೂ ಸೋಮನ ಕಣ್ಣಿಗೆ ನಾಟಕೀಯವಾಗಿ ತೋರಿದುವು. ಅವನು ಯಾರೊಬ್ಬರನೂ ನೋಡುತ್ತಿರಲಿಲ್ಲ; ಒಟ್ಟಿನ ಸಮೂಹವನ್ನೇ ನೋಡುತ್ತಿದ್ದನು. ಆದರೆ ಅವನ ಮನಸ್ಸಿಗೆ ಆ ಗುಂಪಿನಲ್ಲಿದ್ದ ಪ್ರತಿಯೊಬ್ಬರೂ ತನ್ನನ್ನೇ ನೋಡಿ ಮಾತಾಡಿಕೊಳ್ಳು ತ್ತಿದ್ದಾರೆಂದು ತೋರುತ್ತಿತ್ತು. ಏಕೆಂದರೆ, ಅವನು ಹಿಂದೆಂದೂ ಧರಿಸದೆ ಇದ್ದ ವಸನಗಳನ್ನು ಎಂದಿಗಿಂತಲೂ ಹೆಚ್ಚಾದ ನಾಜೋಕಿನಿಂದ ಉಟ್ಟುಕೊಂಡಿದ್ದನು. ಕೆಲವರು ಅವನನ್ನು 'ಸೆಟ್ಟರೆ' ಎಂದು ಬಹುವಚನದಲ್ಲಿ ಮಾತಾಡಿಸಿದಾಗ ಸೋಮ ಜನ್ಮಸಾರ್ಥಕವಾದಂತೆ ಹಿಗ್ಗಿದನು.

ಎಲ್ಲರೂ ನೆರಳಿನಲ್ಲಿ ಕುಳಿತುಕೊಂಡ ಮೇಲೆ ಪಾನಕಾದಿಗಳ ವಿನಿಯೋಗ ವಾಯಿತು. ಹೂವಯ್ಯ ಚಿನ್ನಯ್ಯನೊಡನೆಯೂ ಶ್ಯಾಮಯ್ಯಗೌಡರೊಡನೆಯೂ ಮಾತಾಡಿದನು. ಆದರೆ ಸೀತೆಯನ್ನು ಕುರಿತು ಅವರಾಗಲಿ ಅವನಾಗಲಿ ತುಟಿ ಪಿಟಕ್ಕೆನ್ನಲಿಲ್ಲ. ನಾಗಮ್ಮನವರೂ ಗೌರಮ್ಮನವರೊಡನೆ ಗೃಹಕೃತ್ಯದ ವಿಚಾರ ಗಳನ್ನು ಕುರಿತು ಮಾತಾಡುತ್ತಿದ್ದರು. ಮೊದಲೇ ಮಾತಾಡಿಕೊಂಡಿದ್ದಾರೆಯೋ ಎಂಬಂತೆ ಯಾರೂ ಮದುವೆಯ ವಿಚಾರವಾಗಿ ಪ್ರಸ್ತಾಪಿಸಲಿಲ್ಲ. ಕೆಳಕಾನೂರಿಗೂ ಕಾನೂರಿಗೂ ಇದ್ದ ಸಂಬಂಧವನ್ನು ಸ್ವಲ್ಪ ಹೆಚ್ಚು ಕಡಿಮೆ ಅಲ್ಲಿದ್ದವರೆಲ್ಲರೂ ಅರಿತಿದ್ದುದರಿಂದ, ಯಾರೊಬ್ಬರಾಗಲಿ, ಮರೆತು ಕೂಡ, ಆ ಗಾಯದ ಹುಣ್ಣಿನ ಮೇಲೆ ಕೈಯಿಡಲಿಲ್ಲ. ಒಬ್ಬರ ಕಣ್ಣನ್ನು ಮತ್ತೊಬ್ಬರು ಸಂಧಿಸದಂತೆಯೂ ಸೂಕ್ಷ್ಮವಾಗಿ ಪ್ರಯತ್ನಿಸುತ್ತಿದ್ದರು. ಚಿನ್ನಯ್ಯನಂತೂ ಹೂವಯ್ಯನೊಡನೆ ಮುಖದ ಕಡೆ ನೋಡಿ ಮಾತಾಡುತ್ತಿದ್ದಾಗ, ಅವನ ಹಣೆಯ ಮೇಲಿದ್ದ ನೀಲಿಯ ನರವನ್ನಲ್ಲದೆ ಕಣ್ಣುಗಳನ್ನು ನೋಡುತ್ತಿರಲಿಲ್ಲ. ಹೂವಯ್ಯನೆಲ್ಲಿ ಸೀತೆಯ ಯೋಗಕ್ಷೇಮವನ್ನು ಕೇಳಿಬಿಡುತ್ತಾನೆಯೋ ಎಂಬ ಹೆದರಿಕೆ ಅವನೆದೆಯಲ್ಲಿ ತುಡಿಯುತ್ತಿತ್ತು. ಏಕೆಂದರೆ, ಸೀತೆಯ ಯೋಗಕ್ಷೇಮ ಚಿನ್ನಯ್ಯ ಹೂವಯ್ಯನ ಕಣ್ಣು ನೋಡಿ ಹೇಳುವಷ್ಟು ಉತ್ತಮವಾಗಿರಲಿಲ್ಲ.

ಶ್ಯಾಮಯ್ಯಗೌಡರು, ಆ ಸ್ಥಳವನ್ನು ಬೇಗನೆ ಬಿಟ್ಟರೆ ಸಾಕು ಎನ್ನುವಂತೆ, ದಿಬ್ಬಣದವರಿಗೆ ಪಾನಕಾದಿಗಳನ್ನು ಬೇಗಬೇಗನೆ ಪೂರೈಸುವಂತೆ 'ತಾಕೀತು' ಮಾಡುತ್ತಿದ್ದರು.

ಸ್ವಲ್ಪ ಹೊತ್ತಿನೊಳಗಾಗಿ ಮತ್ತೆ ಕದಿನಿ ಹಾರಿದುವು; ವಾದ್ಯ ರವಗೈದುವು; ಬೋವಿಗಳು ಮದುಮಗನಿದ್ದ ದಂಡಿಗೆಯನ್ನು ಹೊತ್ತುಕೊಂಡು ಪಲ್ಲವಿಯ ಘೋಷದೊಡನೆ ಮುಂದೆ ಸಾಗಿದರು; 'ಗರತಿಗಿರಾಸ್ತ'ರೂ ಎದ್ದು ನಡೆದರು. ದಿಬ್ಬಣ ಕಾನೂರಿಗೆ ಸಂಭ್ರಮದಿಂದ ಸಾಗಿತು. ನಾಗಮ್ಮ, ಪುಟ್ಟಣ್ಣ, ಸೋಮ–ಇವರುಗಳು ನೋಡುತ್ತಿದ್ದಂತೆ ದೃಶ್ಯ ಕಣ್ಮರೆಯಾಗಿ, ಘೋಷ ಮಾತ್ರ ಕೇಳಿಸುತ್ತಿತ್ತು. ಹೂವಯ್ಯ ಅತ್ತಕಡೆ ನೋಡುತ್ತಲೂ ಇರಲಿಲ್ಲ; ಅವನ ಕಿವಿಗೆ ಆ ವಾದ್ಯಘೋಷ ಕೇಳಿಸುತ್ತಲೂ ಇರಲಿಲ್ಲ. ಅವನ ಮನಸ್ಸಿನ ಕಣ್ಣಿನ ಹನಿಯಲ್ಲಿ ಸೀತೆಯ ದುಃಖಪೂರ್ಣವಾದ ಚಿತ್ರವೊಂದೇ ವಿಕಂಪಿಸುತ್ತಿತ್ತು.

"ಅತ್ತಿಗದ್ದೆ ಹಿರಿಯಣ್ಣಗೌಡರ ಮಗಳು ರಂಗಮ್ಮನ್ನ ನೋಡ್ದೇನೋ? ಹುಡುಗಿ ಪೈನಾಗಿದ್ದಾಳೆ! ಸ್ವಲ್ಪ ಬಾಯಿ ಉಗ್ಗಂತೆ. ಉಗ್ಗಾಗ್ದ್ರೇನು? ದುಂಡು ಮುಖ; ಬಿಳಿ ಮೈ; ಕಣ್ಣು ಮೂಗು ಬಾಯಿ ಕಿವಿ ಎಲ್ಲಾ ನೆಟ್ಟಗಿಲ್ಲೇನು?" ಎಂದು ನಾಗಮ್ಮನವರು ಹೂವಯ್ಯನಿಗೆ ಕೇಳಿಸಲಿ ಎಂದೇ ಪುಟ್ಟಣ್ಣನೊಡನೆ ಗಟ್ಟಿಯಾಗಿ ಹೇಳಿದರು.

ಇಂಗಿತವರಿಯುವುದರಲ್ಲಿ ಅಷ್ಟೇನೂ ಚತುರನಲ್ಲದ ಒರಟು ಪುಟ್ಟಣ್ಣ ಒಂದು ಸಾರಿ ನಾಗಮ್ಮನವರ ಕಡೆಗೂ, ಮತ್ತೊಂದು ಸಾರಿ ಸೋಮನು ಕಡೆಗೂ ತಿರುಗಿ ತಿರುಗಿ ಕೆಲಸಮಾಡುತ್ತಲೇ ಮಾತಾಡತೊಡಗಿದನು. "ಯಾರು? ಮೂಗು ಸಿಂಡಾಗಿದೆಯಲ್ಲಾ ಅವರೇಯೇನು?—ಏ ಸೋಮ, ಆ ಗಾಜಿನ ಲೋಟ ಇತ್ತ ಕೊಡೊ.—ಅಮ್ಮಾ, ನಾಳೆ ಪಾನಕ ಇನ್ನೂ ಜಾಸ್ತಿ ಮಾಡ್ಬೇಕು! ಇವತ್ತು ಮಾಡಿದ್ದು ಅಲ್ಲಿಂದಲ್ಲಿಗಾಯ್ತು!—ಆ ಚಾಪೆ ಹಾಂಗಿರ್ಲ್ಲೋ; ಮೊದಲು ಈ ಜಮಖಾನ ಎತ್ತು. ನೀನೆಲ್ಲಿ ಕನ್ನಡಾ ಜಿಲ್ಲೆ ಮಡ್ಗು! ನಿನಗೆ ಹಾಳೆ ತೋಪೀನೇ ಸರಿ! ಹಾಸನ ತೋಪಿಗೀಪಿ ನಿನಗೆ ಯಾಕೋ? . . . ?"

* * * *

ಮರುದಿನವೂ ಮಧ್ಯಾಹ್ನ ಎರಡು ಗಂಟೆಯಿಂದಲೂ ನಾಗಮ್ಮ ಮೊದಲಾದವರು ಹಿಂದಿನ ದಿನಕ್ಕಿಂತಲೂ ಹೆಚ್ಚಾಗಿ ಸರಬರಾಯಿ ಒದಗಿಸಿಕೊಂಡು ಕಾನೂರಿನಿಂದ ಮುತ್ತಳ್ಳಿಗೆ ಹಿಂತಿರುಗುವ ಮರುದಿಬ್ಬಣವನ್ನೆ ಹಾರೈಸಿ, ಆ ಚಪ್ಪರದಡಿ ಕಾಯುತ್ತಾ ಎದುರು ನೋಡುತ್ತಿದ್ದರು. ನಾಗಮ್ಮನವರಿಗಂತೂ ಮದುಮಗಳಾಗಿ ಗಂಡನೊಡನೆ ದಂಡಿಗೆಯೇರಿ ಹೋಗುವ ಪುಟ್ಟಮ್ಮನನ್ನು ನೋಡುತ್ತೇನೆಂಬ ಆನಂದ, ಉದ್ವೇಗ, ಕಾತರತೆ. ಅವರ ಮಾತುಕತೆಗಳಲ್ಲಿಯೇ ಅಲ್ಲದೆ ಚಲನೆಯಲ್ಲಿಯೂ ಒಂದು ಲಘುತ್ವ ತೋರುತ್ತಿತ್ತು.

ಸುಮಾರು ಮೂರು ಗಂಟೆಯ ಸಮಯದಲ್ಲಿ ಕದನಿ, ವಾಲಗ, ಕೊಂಬು,

ತಂಬಟೆಗಳ ಸದ್ದು ಕೇಳಿಸಲು ಮರುದಿಬ್ಬಣ ಮನೆಯಿಂದ ಹೊರಟಿತೆಂದು ನಾಗಮ್ಮನವರು ಎದ್ದು ನಿಂತುಕೊಂಡು ಅತ್ತಕಡೆಗೇ ನೋಡತೊಡಗಿದರು. ಅವರ ಒಳಗಣ್ಣಿಗೆ ಸರ್ವಾಲಂಕಾರಭೂಷಿತೆಯಾಗಿ ಗಂಡನೆದುರು ದಂಡಿಗೆಯಲ್ಲಿ ತಲೆ ಬಾಗಿ, ಮುಡಿದ ಹೂವಿನ ಬಿಳಿಯ ಗುಚ್ಛವನ್ನು ಪ್ರದರ್ಶಿಸುತ್ತಾ, ನಾಚಿಗೆಯಿಂದ ಕೆಂಪೇರಿ ಕಂಬನಿ ಸೂಸುತ್ತ ಕುಳಿತಿದ್ದ ಪುಟ್ಟಮ್ಮನ ಚಿತ್ರ ರಂಜಿಸುತ್ತಿತ್ತೆಂದು ತೋರುತ್ತದೆ.

ಮೇಲುಗಡೆ ಹೊಂಗೆಯ ಮರದ ತರಗೆಲೆಯೊಂದು, ಮರ್ಮರ ನಾದದಿಂದ ಬೀಸುತ್ತಿದ್ದ ಗಾಳಿಯಲ್ಲಿ, ಕುಣಿಕುಣಿದು ತೇಲಿ ಕೆಳಗಿಳಿದು ಬಂದು ಅವರ ನೆತ್ತಿಯ ನರೆತ ಕೂದಲುಗಳ ಪೊದೆಯಲ್ಲಿ ಸಿಕ್ಕಿಕೊಂಡಿತು.

ಬಹಳ ಹೊತ್ತು ಕಾದರು. ಉಕ್ಕಿಬಂದಂತೆ ತೋರಿದ ದಿಬ್ಬಣದ ಸದ್ದು ಮತ್ತೆ ಇಳಿದುಹೋಗಿ ರವರಹಿತವಾಯಿತು. ನಾಗಮ್ಮನವರಿಗೆ ಉದ್ವೇಗ ಹೆಚ್ಚಿತು. ಉಳಿದವರಿಗೂ ನಾಲ್ಕಾರು ಫರ್ಲಾಂಗುಗಳ ಆಚೆಯಿಂದ ಹೊರಟ ದಿಬ್ಬಣ ಒಂದು ಗಂಟೆ ಕಳೆದರೂ ಬಾರದಿರಲು ಕಾರಣವೇನೆಂದು ಬೆಕ್ಕಸವಾಯಿತು. ಒಬ್ಬೊಬ್ಬರ ಮನದಲ್ಲಿ ಒಂದೊಂದು ತೆರನಾದ ಭೀತಿ ಮೂಡಿತು. ಆದರೆ ಯಾರೂ ತಮ್ಮ ಮನದ ಅಮಂಗಲವನ್ನು ಇತರರಿಗೆ ಹೇಳಲಿಲ್ಲ. ನಾಗಮ್ಮನವರು ಪುಟ್ಟಮ್ಮಗೆ ಏನೋ ಜಕ್ಕಿಣಿ ಗಿಕ್ಕಿಣಿ ಮೈಮೇಲೆ ಬಂದು ಕೇಡಾಗಿರಬೇಕೆಂದು ಹೆದರಿದರು. ಹೂವಯ್ಯ 'ಮದ್ದುಗುಂಡು' ಸುಡುವಾಗ ಯಾರಿಗಾದರೂ ಏನಾದರೂ ಅನಾಹುತವಾಯಿತೇ ಎಂದು ಶಂಕಿಸಿದನು. ಸೋಮ ಊಟ ತಡವಾಯಿತೋ ಏನೋ ಎಂಬ ಅಪಾಯವನ್ನು ಊಹಿಸಿ, ಒಬ್ಬರಿಗೂ ಹೇಳದೆ ಸುಮ್ಮನಾದನು. ಪುಟ್ಟಣ್ಣನೂ ಊಹಿಸಿ ಊಹಿಸಿ "ನಾ ನೋಡಿಕೊಂಡೇ ಬಂದು ಬಿಡ್ತೇನೆ!" ಎಂದು ಕಾನೂರಿನ ಕಡೆಗೆ ವೇಗವಾಗಿ ಸಾಗಿದನು.

ಅರ್ಧ ಘಂಟೆಯಮೇಲೆ ವ್ಯಸನಭಾರದಿಂದ ಕುಗ್ಗಿ ಕುಸಿದು ನಿಧಾನವಾಗಿ ಹಿಂತಿರುಗಿ ಬಂದ ಪುಟ್ಟಣ್ಣ "ದಿಬ್ಬಣ ಒಳದಾರೀಲಿ ಹೋಯ್ತಂತೆ!" ಎಂದು ತಿಳಿಸಿದನು. ನಾಗಮ್ಮನವರು ಬಸ ಬಸನೆ ಅಳತೊಡಗಿದರು.

ಚಂದ್ರಯ್ಯಗೌಡರು ದಾರಿಯಲ್ಲಿ ಹೂವಯ್ಯ ಹಾಕಿಸಿದ್ದ ಚಪ್ಪರದ ಮತ್ತು ಮಾಡಿದ್ದ ಇತರ ಸನ್ನಾಹಗಳ ವಿಷಯಗಳನ್ನೆಲ್ಲ ಕೇಳಿ, ಯಾವುದೋ ಒಂದು ಅನಿರ್ವಚನೀಯವಾದ ಈರ್ಷ್ಯೆಯಿಂದ, ಹೂವಯ್ಯ ನಾಗಮ್ಮನವರಿಗೆ ಆಶಾಭಂಗವುಂಟುಮಾಡುವ ಕ್ರೂರಸಂತೋಷಕ್ಕಾಗಿ, ದಿಬ್ಬಣವನ್ನು ಒಳದಾರಿಯಿಂದ ಸಾಗಿಸಿಕೊಂಡು ಮುತ್ತಳ್ಳಿಗೆ ಹೋಗುವಂತೆ ಬೆಸಸಿದ್ದರು. ಅದನ್ನು ತಿಳಿದೊಡನೆಯೆ ತಬ್ಬಲಿ ಪುಟ್ಟಮ್ಮ ಬಿಕ್ಕಿ ಬಿಕ್ಕಿ ಅತ್ತಳು. ಆದರೆ ಮದುಮಗಳು ತಾಯಿಯ

ಮನೆಯಿಂದ ಹೊರಡುವಾಗ ಕಣ್ಣೀರು ಹಾಕುವುದು ನಾಡಿನ ಪದ್ಧತಿಯಾಗಿದ್ದರಿಂದ ಯಾರೂ ಅದನ್ನು ಗಮನಿಸಲಿಲ್ಲ.

ನಾಗಮ್ಮನವರು ಅಳುತ್ತಲೇ ತಮ್ಮ ಹುಲ್ಲು ಮನೆಗೆ ಹಿಂತಿರುಗಿದರು. ಹೂವಯ್ಯ ಹಂಡೆಗಳಲ್ಲಿಯೂ ಕೌಳಿಗೆಗಳಲ್ಲಿಯೂ ತುಂಬಿದ್ದ ಪಾನಕವನ್ನೆಲ್ಲಾ ಅಲ್ಲಿಯೇ ಬೀದಿಯಮೇಲೆ ಚೆಲ್ಲಿಸಿ, ಸಾಮಾನುಗಳನ್ನೆಲ್ಲ ಮನೆಗೆ ಹೊರಿಸಿಕೊಂಡು ಹೋದನು. ಅನೇಕ ದಿನಗಳ ವರೆಗೆ ಹಾದಿಯಲ್ಲಿ ಹೋಗುವವರು, ಆ ಚಪ್ಪರದಡಿ ರಾಶಿ ರಾಶಿಯಾಗಿ, ಹಿಂಡು ಹಿಂಡಾಗಿ ನೆರೆದಿರುತ್ತಿದ್ದ ಗೊದ್ದ, ಕಟ್ಟಿರುವೆ, ಕೆಂಜಿರುವೆ, ಗಾಳಿಯಿರುವೆ, ಚಗಳಿಯಿರುವೆ, ನೊಣ, ಹೊನ್ನೊಣ, ಜೇನ್ನೊಣಗಳನ್ನು ಕಂಡು ಆಶ್ಚರ್ಯದಿಂದ, ಕ್ಷಣಮಾತ್ರವಾದರೂ, ನಿಂತು ನೋಡದೆ ಮುಂದುವರಿಯುತ್ತಿರಲಿಲ್ಲ.

## ೫೮

## ರಾಮಯ್ಯನಿಗೆ ಮದುವೆಯಾಯ್ತು

ಚಿನ್ನಯ್ಯನ ಮದುವೆ ಮುಗಿದ ಮೂರನೆಯ ದಿನ ಸಾಯಂಕಾಲ ಕಾನೂರಿನಿಂದ ಗಂಡಿನ ದಿಬ್ಬಣ ಮುತ್ತಳ್ಳಿಗೆ ಬಂದಿತು. ಜರಿಯ ಪೇಟ ಸುತ್ತಿ, ಇತ್ತೀಚೆಗೆ ಹೆಚ್ಚು ಹೆಚ್ಚು ಕೃಶವಾಗುತ್ತಿದ್ದ ಮಾಸಿದ ಮುಖದಲ್ಲಿ ಹೆಚ್ಚು ಹೆಚ್ಚು ದಪ್ಪವಾಗಿ ತೋರತೊಡಗಿದ್ದ ಹೆಮ್ಮಾಸೆಗಳನ್ನು ಹೊತ್ತು, ಕಪ್ಪುಗೀರಿನ ಹೊಸ ಕೋಟು, ಜರಿಯಂಚಿನ ಉತ್ತರೀಯ, ಬಣ್ಣದ ಕಂಬಿಯ ಪಂಚೆ ಮತ್ತು ಹೂ ಕೆತ್ತಿದ್ದ ಹುಂಚದಕಟ್ಟೆಯ ಮೆಟ್ಟುಗಳಿಂದ ಅಲಂಕೃತರಾಗಿ, ಎತ್ತರವಾಗಿ, ಕೆಚ್ಚು ಧೂರ್ತ ಭಾವಗಳಿಂದ ಕ್ರೂರರಾಗಿ ಕಾಣುತ್ತಿದ್ದ ಚಂದ್ರಯ್ಯಗೌಡರು, ಮುಂದೆ ನಸು ಕುಳ್ಳಾಗಿ, ಬೊಜ್ಜು ಡೊಳ್ಳುಗಳಿಂದ ಸ್ಥೂಲವಾಗಿ ಬೆಳೆದ ಕುಂಬಳಕಾಯಿಯಂತೆ ತುಂಬಿಕೊಂಡ ಮುಖದಲ್ಲಿ ಕಿರುಮೀಸೆವುಳ್ಳವರಾಗಿ, ಪಟ್ಟೆನಾಮಗಳಿಂದ ಶೋಭಿತರಾಗಿ, ಮನೆಯ ಯಜಮಾನರಿಗೆ ತಕ್ಕ ಉಡುಗೆ ತೊಡುಗೆಗಳಿಂದ ಅಲಂಕೃತರಾಗಿ, ಮೂರ್ಖತನದೊಡನೆ ಸ್ನೇಹ ಬೆಳೆಯಿಸುವಂತಿದ್ದ ಸರಳತೆ ಮುಗ್ಧತೆಗಳಿಂದ ಸ್ವಲ್ಪ ಪೆಚ್ಚಾಗಿದ್ದುದರಿಂದ ಭಗವದ್ಭಕ್ತಿಯಿಂದ ವಿನಮ್ರರಾದವರಂತೆ ತೋರುತ್ತಿದ್ದ ಶ್ಯಾಮಯ್ಯಗೌಡರು ಕೈಮುಗಿದು ನಿಂತು ಬೀಗರ ಕಡೆಯವರನ್ನು ಆದರೋಪಚಾರಗಳಿಂದ ಸಂತುಷ್ಟಿಪಡಿಸಿ ಮನೆಯೊಳಗೆ ಬರಮಾಡಿಕೊಂಡರು.

ಮದುವೆಗೆ ನೂರಾರು ಜನರು ನೆರೆದಿದ್ದರು. ಗರ್ನಾಲು, ಕದಿನಿ, ಬಾಣಬಿರುಸು,

ಕೊಂಬು, ಕಹಳೆ, ವಾಲಗ ಮೊದಲಾದುವುಗಳ ಸದ್ದಿಗಿಂತಲೂ ಅತಿಶಯವಾಗಿ ಅವಿಚ್ಛಿನ್ನವಾಗಿ ಮನುಷ್ಯ ಸಮೂಹದ ತುಮುಲನಾದ ಮನೆಯನ್ನೆಲ್ಲ ತುಂಬಿ ತುಳುಕುತ್ತಿದ್ದಿತು. ಮನೆಯ ಅಂಗಣದಲ್ಲಿ ರಚಿಸಿದ್ದ ವಿಸ್ತಾರವಾದ ಚಪ್ಪರದಡಿ, ಧಾರೆಯ ಮಂಟಪದ ಬಳಿ, ಜಗಲಿಯಲ್ಲಿ, ಮನೆಯ ಮೂಲೆ ಮೂಲೆಗಳಲ್ಲಿ ಲ್ಯಾಂಪು, ತೂಗು ಲ್ಯಾಂಪು, ಲಾಟೀನು, ಲಾಂದ್ರ, ಚಿಮಿನಿ, ಕಕ್ಕಡ, ದೊಂದಿ, ಹಣತೆ ಮೊದಲಾದ ತರ ತರದ ದೀಪಾವಳಿ ರಂಜಿಸುತ್ತಿದ್ದಿತು. ತಳಿರು ತೋರಣ ಗಳಿಂದಲೂ ಬಣ್ಣ ಬಣ್ಣದ ಬಟ್ಟೆಗಳಿಂದಲೂ ಮೆರೆಯುತ್ತಿದ್ದ ಚಪ್ಪರದಡಿ ಅಂಗಳದಲ್ಲಿ ದಿಬ್ಬಣದ ಜನರೆಲ್ಲರೂ ಅವರವರ ಅಂತಸ್ತಿಗೆ ತಕ್ಕ ತಕ್ಕ ಸ್ಥಾನಗಳಲ್ಲಿ ಕುಳಿತು ಸಲ್ಲಾಪಿಸುತ್ತಿದ್ದರು. ಅಂದಿನ ಮದುವೆಯ ಮದುಮಗಳಿಗೆ ದೆಯ್ಯ ಹಿಡಿದಿದ್ದ ವಿಚಾರವೇ ಆ ಮಾತುಕತೆಗಳಲ್ಲಿ ಮುಖ್ಯಪಾತ್ರ ವಹಿಸಿದ್ದಿತೆಂದು ಹೇಳಬಹುದು.

ಆ ರಾತ್ರಿ ಧಾರೆಯ ಮುಹೂರ್ತ ಹತ್ತು ಗಂಟೆಯಮೇಲೆ ಇದ್ದುದರಿಂದ ಧಾರೆಗೆ ಮೊದಲೇ ಊಟ ಮುಗಿದುಬಿಡಲಿ ಎಂದು ಚಂದ್ರಯ್ಯಗೌಡರ ಬಿರು ಸಾದ ಅಪ್ಪಣೆಯಾಯಿತು. ಶ್ಯಾಮಯ್ಯಗೌಡರು ಮನೆಯ ಯಜಮಾನರಾಗಿ ದ್ದರೂ ಬಾವನನ್ನು ಕೇಳದೆ ಅವರು ಏನೂ ಮಾಡುತ್ತಿದ್ದಿಲ್ಲ. ಆದ್ದರಿಂದಲೆ ಕಾನೂರು ಬಾವನೇ ಮುತ್ತಳ್ಳಿಯ ಯಾಜಮಾನ್ಯವನ್ನೂ ವಹಿಸಿಬಿಟ್ಟಿದ್ದರು. ಶ್ಯಾಮಯ್ಯ ಗೌಡರು, ಗೌರಮ್ಮ ಮತ್ತು ಚಿನ್ನಯ್ಯ ಇವರ ದಾಕ್ಷಿಣ್ಯದ ಅನಿವಾರ್ಯಕ್ಕೆ ಸಿಕ್ಕಿ ಸೀತೆಮನೆ ಸಿಂಗಪ್ಪಗೌಡರು ಮದುವೆಗೆ ಬಂದಿದ್ದರೂ ಅವರು ಯಾವ ಗೋಜಿಗೂ ಪಾರುಪತ್ಯಕ್ಕೂ ಹೋಗದೆ ಸಾಧಾರಣವಾದ ಇತರ ನೆಂಟರಂತೆ ಒಂದು ಕಡೆ ಅಜ್ಞಾತರಾಗಿ ಕುಳಿತು, ನೆಂಟರೊಡನೆ ಮಾತುಕತೆಗಳಲ್ಲಿ ತೊಡಗಿದ್ದರು. ಸಿಂಗಪ್ಪ ಗೌಡರ ಮಾತುಕತೆ ಎಂದರೆ ಚಂದ್ರಯ್ಯಗೌಡರ 'ಕುರಿಚೋರಿ', ಪತ್ನೀ ಪರಿತ್ಯಾಗ, ಇತ್ಯಾದಿ ವಿಷಯಗಳನ್ನು ಕುರಿತಿದ್ದಿತೆಂದು ಹೊಸದಾಗಿ ಹೇಳಬೇಕಾಗಿಲ್ಲ.

ಹೆಜ್ಜೇನಿನ ಗೂಡಿಗೆ ಹೊಗೆ ಹಾಕಿದರೆ ಜೇನ್ನೊಣಗಳ ಹಿಂಡು ಭೋರೆಂದು ಝೇಂಕರಿಸುತ್ತ ಎದ್ದು ಹಾರಾಡುವಂತೆ ಜನಗಳ ಸಮೂಹ, 'ಎಲ್ಲರೂ ಊಟ ಕ್ಕೇಳಬೇಕು' ಎಂಬ ಕೂಗು ಕಿವಿಗೆ ಬಿದ್ದಕೂಡಲೆ, ಉಕ್ಕಿ ಎದ್ದು, ಸಮೀಪದ ಗದ್ದೆಬಯಲಿಗೆ ದಾಳಿನಡೆಯಿತು.

ಆದರೆ ಕಾನೂರು ಚಂದ್ರಯ್ಯಗೌಡರು, ಬಾಳೂರು ಸಿಂಗೇಗೌಡರು, ಬೈದೂರು ಬಸವೇಗೌಡರು, ಎಂಟೂರು ಶೇಷೇಗೌಡರು, ಅತ್ತಿಗದ್ದೆ ಹಿರಿಯಣ್ಣಗೌಡರು, ನುಗ್ಗಿಮನೆ ತಮ್ಮಣ್ಣಗೌಡರು, ಸಂಪಗೆ ಪುಟ್ಟಯ್ಯಗೌಡರು—ಇತ್ಯಾದಿ ದೊಡ್ಡ ದೊಡ್ಡ ಗೌಡರುಗಳಿಗಾಗಿ ಶ್ಯಾಮಯ್ಯಗೌಡರು ಪ್ರತ್ಯೇಕವಾದ ಉಪಚಾರಗಳನ್ನು

ಏರ್ಪಡಿಸಿದ್ದರು. ಅದಕ್ಕಾಗಿ ಕೊಡಪಾನಗಟ್ಟಲೆ ಬಗನಿಕಳ್ಳು, ಹಂಡೆಗಟ್ಟಲೆ ಅಕ್ಕಿ ಹೆಂಡ, ಶೀಸೆಗಟ್ಟಲೆ ಸರಾಯಿ ಸಿದ್ಧವಾಗಿತ್ತು. ಬೇಕಾದಷ್ಟು ಕಂಬಳಿಕುರಿ ಸೊಪ್ಪು ಕುರಿಗಳೂ ಹತವಾಗಿದ್ದುವು.

ಗಳಿಗೆಬಟ್ಟಲ ಮುಂದೆ ಕುಳಿತು, ಆಗಾಗ ಅಲ್ಲಿ ನೆರೆದಿದ್ದ ಶೂದ್ರ ಸಮುದಾಯಕ್ಕೆ ಒಂದಿಷ್ಟೂ ಅರ್ಥವಾಗಲಾರದ ಸಂಸ್ಕೃತ ಮಂತ್ರಗಳನ್ನು ಅರ್ಥವಾಗಬಾರದ ರೀತಿಯಲ್ಲಿ ರಾಗಪೂರ್ಣವಾಗಿ ಆಘೋಷಿಸುತ್ತಿದ್ದ ಅಗ್ರಹಾರದ ಜೋಯಿಸರು ವೆಂಕಪ್ಪಯ್ಯನವರು, ಧಾರೆಯ ಮುಹೂರ್ತ ಬಳಿಸಾರಿತೆಂದು ತಿಳಿಸಿದರು. ತಾವೇ ಜಾತಕ ಗೀತಕ ನೋಡಿ ನಿರ್ಣಯಿಸಿ ಕೊಟ್ಟಿದ್ದ ವಧೂವರರ ಮಂಗಲ ವಿವಾಹ ಮಹೋತ್ಸವವನ್ನು ಸಾಂಗವಾಗಿ ನೆರವೇರಿಸಲು ಅವರೇ ದೊಡ್ಡಮನಸ್ಸು ಮಾಡಿ ಮದುವೆ ಮಾಡಿಸುವ ಜೋಯಿಸರಾಗಿಯೂ ಬಿಜಯಮಾಡಿದ್ದರು. ಜೋಯಿಸರ ಅಪ್ಪಣೆಯ ಮೇರೆಗೆ ಗಂಡು ಹೆಣ್ಣುಗಳನ್ನು ಧಾರೆಯ ಮಂಟಪಕ್ಕೆ ಕರೆದುತರುವ ಸಲುವಾಗಿ, ಅದಕ್ಕೆ ಗೊತ್ತಾಗಿದ್ದ ಜನರ ಓಡಾಟ ಸಸಂಭ್ರಮ ವಾಯಿತು. ಧಾರೆ ಇನ್ನೇನು ಪ್ರಾರಂಭವಾಗುತ್ತದೆ ಎಂದು ಗೊತ್ತಾದಕೂಡಲೆ ನೂರಾರು ಕಣ್ಣುಗಳು ನಿದ್ರೆಯನ್ನು ಕೊಡಹಿ, ಮಂಟಪದ ಕಡೆಗೆ ದೃಷ್ಟಿಯಿಟ್ಟುವು. ಮಲಗಿದ್ದವರನ್ನು, ಪಕ್ಕದಲ್ಲಿ ಎಚ್ಚತ್ತಿದ್ದವರು, ಎಬ್ಬಿಸಿದರು.

ಆ ಸಂಭ್ರಮದ ಕೋಲಾಹಲ ಕುತೂಹಲಗಳ ಮಧ್ಯೆ ಯಾರ ದೃಷ್ಟಿಯೂ ಸಿಂಗಪ್ಪಗೌಡರಲ್ಲಿಗೆ ಬಂದು ಗುಟ್ಟಾಗಿ ಮಾತಾಡುತ್ತಿದ್ದ ಸೋಮನ ಕಡೆಗೆ ಬೀಳಲಿಲ್ಲ. ಸೋಮ ಆ ದಿನ ಬೆಳಿಗ್ಗೆ ಹೂವಯ್ಯನೊಡನೆ "ಮುತ್ತಳ್ಳಿಗೆ 'ಧಾರೆ ನೋಡಲು' ಹೋಗುತ್ತೇನೆ" ಎಂದು ಹೇಳಿ ಕೆಳಕಾನೂರಿನಿಂದ ನೆಟ್ಟಗೆ ಸೀತೆಮನೆಗೆ ಹೋಗಿ, ಅಲ್ಲಿಂದ ಸಿಂಗಪ್ಪಗೌಡರೊಡಗೂಡಿ ಸಾಯಂಕಾಲಕ್ಕೆ ಮುತ್ತಳ್ಳಿಗೆ ಬಂದಿದ್ದನು. ತನ್ನ ನಚ್ಚಿನ ಒಡೆಯನಿಗೆ ಪ್ರತಿಕೂಲವಾಗಿ ನಿಶ್ಚಯ ವಾಗಿದ್ದ ಆ ಮದುವೆಯ ಪೂರ್ವಕಥೆಯನ್ನು ಚೆನ್ನಾಗಿ ಅರಿತಿದ್ದ ಸೋಮ 'ಧಾರೆ ನೋಡಲು' ಹೋದನೆಂದರೆ ಆಶ್ಚರ್ಯವಾಗುತ್ತದೆ. ಆದರೆ ಸಿಂಗಪ್ಪ ಗೌಡರು ಅವನನ್ನು ಒಳಗೆ ಹಾಕಿಕೊಂಡು ರಚಿಸಿದ್ದ ವ್ಯೂಹ ಗೊತ್ತಾದರೆ, ಎಲ್ಲವೂ ಅರ್ಥಪೂರ್ವಕವಾಗುವುದರಲ್ಲಿ ಸಂದೇಹವಿಲ್ಲ.

ಹಾಗೆ ಮಾಡುತ್ತೇನೆ; ಹೀಗೆ ಮಾಡುತ್ತೇನೆ; ಅವರನ್ನು ಮೆಟ್ಟಿನಿಂದ ಹೊಡೆಯಿಸುತ್ತೇನೆ; ಇವರನ್ನು ಗುಂಡಿನಿಂದ ಸುಡಿಸುತ್ತೇನೆ ಎಂದು ಮೊದಲಾಗಿ ಬಾಯಿ ಪಟಾಕಿ ಹೊಡೆಯುತ್ತಿದ್ದ ಸಿಂಗಪ್ಪಗೌಡರಲ್ಲಿಗೆ ಹೂವಯ್ಯ ಹೋಗಿ, ಉದಾತ್ತಭಾವಗಳನ್ನು ಉಪದೇಶಿಸಿ, ಅವರನ್ನು ತನ್ನ ಸಹಾಯಕ್ಕೆ ಬರುವಂತೆ ಒಪ್ಪಿಸಿದ್ದ ಸಂಗತಿ ಹಿಂದೆಯೆ ಗೊತ್ತಾಗಿದೆಯಷ್ಟೆ. ಆದರೆ ಸಿಂಗಪ್ಪಗೌಡರ

ಹೊಟ್ಟೆಯುರಿ, ಅವರೆಷ್ಟು ಪ್ರಯತ್ನಿಸಿದರೂ, ಸಂಪೂರ್ಣವಾಗಿ ನಂದಿಹೋಗಲಿಲ್ಲ. ಚಂದ್ರಯ್ಯಗೌಡರನ್ನು ಗುಂಡಿನಿಂದ ಸುಡಿಸುವುದೇ ಮೊದಲಾದ ಕ್ರೂರಕರ್ಮಗಳನ್ನೇನೋ ತ್ಯಜಿಸಿದರು ಎಂಬುದು ಸತ್ಯ. ಆದರೆ ಲಗ್ನದ ದಿವಸವಾದರೂ ಅದು ನಡೆಯದಂತೆ ತಡೆಯಲು ಗುಟ್ಟಾಗಿ ಪ್ರಯತ್ನಿಸಬೇಕೆಂದು ನಿಶ್ಚಯಿಸಿದರು. ಆ ಪ್ರಯತ್ನಕ್ಕೆ ಅವರು ಮೊಂಡಕೆಚ್ಚಿನ ಸರಳಬುದ್ಧಿಯ ಸೋಮನ ಸಹಾಯವನ್ನು ಸಂಪೂರ್ಣವಾಗಿ ಪಡೆದರು. ತನ್ನ ಒಡೆಯನಿಗೂ ಅದರಿಂದ ಉಪಕಾರವಾಗಿ, ಆತನ ಇಚ್ಛೆಯೂ ಕೈಗೂಡುತ್ತದೆ ಎಂದು ಸಿಂಗಪ್ಪಗೌಡರು ಉಪದೇಶ ಮಾಡಿದುದೇ ತಡ, ಸೋಮ ಸ್ವಾಮಿಭಕ್ತಿಯಿಂದ ಪ್ರೇರಿತನಾಗಿ ಮನಃಪೂರ್ವಕವಾದ ವೀರಾವೇಶದಿಂದ ಸಿಂಗಪ್ಪಗೌಡರ ಸಾಹಸಕ್ಕೆ, ಅವರ ಕೈಯ ಕೈದುವಾಗಲು ಸಮ್ಮತಿಸಿದನು. ಅವನು ಪದೇ ಪದೇ ಸೀತೆಮನೆಗೆ ಹೋಗಿ ಬರುತ್ತಿದ್ದುದನ್ನು ನೋಡಿ ಹೂವಯ್ಯ ಪ್ರಶ್ನಿಸಲು "ಸಿಂಗಪ್ಪಗೌಡರು ಮುಂದಿನ ವರ್ಷ ಕನ್ನಡ ಜಿಲ್ಲೆಯಿಂದ ಆಳುಗಳನ್ನು ತರುವ ವಿಚಾರವಾಗಿ ಮಾತಾಡುತ್ತಿದ್ದಾರೆ" ಎಂದು ಸಿಂಗಪ್ಪಗೌಡರೇ ಹೇಳಿಕೊಟ್ಟಿದ್ದ ಸುಳ್ಳನ್ನು ಸಂಕೋಚವಿಲ್ಲದೆ ಹೂವಯ್ಯನಿಗೆ ಒಪ್ಪಿಸಿದ್ದನು. ಚಿನ್ನಯ್ಯನ ಮದುವೆಯಲ್ಲಿ ಚಂದ್ರಯ್ಯಗೌಡರು ಮರುದಿಬ್ಬಣವನ್ನು ಒಳದಾರಿಯಲ್ಲಿ ಸಾಗಿಸಿದ ಮೇಲಂತೂ ಸೋಮನು ಸಿಂಗಪ್ಪಗೌಡರ ಸಹಾಸವನ್ನು ಕೈಕೊಳ್ಳುವುದರಲ್ಲಿ ಅವರಿಗಿಂತಲೂ ಹೆಚ್ಚು ಆಸಕ್ತಿಯುಳ್ಳವನಾಗಿದ್ದನು. ಅದನ್ನು ಕುರಿತೇ ಅವನು ಮದುವೆಯ ಚಪ್ಪರದಡಿ ಸಿಂಗಪ್ಪಗೌಡರೊಡನೆ ಮಂತ್ರಾಲೋಚನೆ ಮಾಡುತ್ತಿದ್ದುದು.

ಧಾರೆಯ ಸನ್ನಾಹ ಭರದಿಂದ ಸಾಗುತ್ತಿದ್ದಾಗಲೆ ಸೋಮ ಸಿಂಗಪ್ಪಗೌಡರೊಡನೆ ಮಾತು ಪೂರೈಸಿ, ಯಾರೂ ಸಮೀಕ್ಷಿಸದ ರೀತಿಯಲ್ಲಿ, ಮನೆಯ ಹೊರಗೆ ಹೊರಟುಹೋದನು. ಸಿಂಗಪ್ಪಗೌಡರು ಏನೂ ತಿಳಿಯದವರಂತೆ ಜನರ ಗುಂಪನ್ನು ಸೇರಿದರು.

ಗಂಡನ್ನು ಕರೆತಂದು ಮಂಟಪದೊಳಗೆ ನಿಲ್ಲಿಸಿದರು. ರಾಮಯ್ಯ ಬಾಸಿಂಗ, ಗುಂಡಿನ ಸರ ಇತ್ಯಾದಿಯಾದ ಭೂಷಣಗಳಿಂದ ಅಲಂಕೃತನಾಗಿ, ಸಂಪೂರ್ಣವಾಗಿ ಮದುಮಗನಾಗಿದ್ದನು. ಆ ಸಮಯದಲ್ಲಿ ಹೂವಯ್ಯನೆಲ್ಲಿಯಾದರೂ ಅವನನ್ನು ನೋಡಿದ್ದರೆ ಗುರುತು ಹಿಡಿಯುವುದೂ ಕಷ್ಟವಾಗುತ್ತಿದ್ದಿತೋ ಏನೋ?

ರಾಮಯ್ಯ ಬಹಳ ತೆಳ್ಳಗಾಗಿಹೋಗಿದ್ದನು. ಮುಖದಲ್ಲಿ ನಿರ್ವೀರ್ಯತೆ, ಖಿನ್ನತೆ, ಬಳಲಿಕೆಗಳು ಬರೆದಂತಿದ್ದುವು. ಕೆನ್ನೆಗಳೆರಡೂ ಬತ್ತಿಹೋಗಿದ್ದುದರಿಂದ, ಕಣ್ಣಿನ ಕೆಳಗೆ ಎಲುಬು ಹೊರಗೆ ಚಾಚಿಕೊಂಡಿತ್ತು. ಎಲ್ಲಕ್ಕಿಂತಲೂ ಆಶ್ಚರ್ಯಕರವಾದುದೆಂದರೆ — ಅವನ ಉಡುಪು! ಅದರಲ್ಲಿ ನವೀನತೆ ಎನ್ನುವುದು ಲವಲೇಶವೂ ಕಾಣುತ್ತಿರಲಿಲ್ಲ. ಅದರಲ್ಲಿಯೂ ಕೂಡ ತಂದೆಯ ಅಭಿರುಚಿಗೆ

ಸಂಪೂರ್ಣವಾಗಿ ಶರಣಾಗಿದ್ದಂತೆ ತೋರುತ್ತಿತ್ತು. ಅವನು ತೊಟ್ಟಿದ್ದ ಜರಿಯ ಪೇಟದ ಒಳಗಡೆ ಕ್ರಾಪಿನ ಹೊಸ ರೋಗಕ್ಕೆ ಜುಟ್ಟಿನ ಹಳೆಯ ರೋಗ ಹಿಡಿದಿತ್ತು! ಖಾದಿಬಟ್ಟೆ, ಗಾಂಧಿ ಟೋಪಿ, ಸ್ವದೇಶಿಗಳೆಲ್ಲ ಎಲ್ಲಿಯೋ ಗಾಳಿಯಲ್ಲಿ ಹಾರಿ ಹೋಗಿದ್ದುವು. ಅವುಗಳ ಕುರುಹು ಕೂಡ ಗೋಚರಿಸುತ್ತಿರಲಿಲ್ಲ. ಅದನ್ನು ನೋಡಿ, ಹೂವಯ್ಯನ ಸಹವಾಸದಿಂದ ಹೊಸದಾಗಿ ಸ್ವದೇಶೀ ವ್ರತವನ್ನು ಕೈಕೊಂಡು, ಖಾದಿಬಟ್ಟೆಗಳನ್ನು ಧರಿಸಲು ಪ್ರಾರಂಭಿಸಿದ್ದ ಸಿಂಗಪ್ಪಗೌಡರಿಗೂ 'ಇಸ್ಸಿ' ಎನ್ನಿಸಿಬಿಟ್ಟಿತು! ಒಟ್ಟಿನಲ್ಲಿ ಕನಿಕರಕ್ಕೆ ಯೋಗ್ಯವಾಗಿದ್ದನು ರಾಮಯ್ಯ.

ಮದುಮಗಳನ್ನು ಮಂಟಪಕ್ಕೆ ಎತ್ತಿಕೊಂಡು ಬಂದರು — ಹೊತ್ತು ತಂದರು. ಪದ್ಧತಿಯ ದೃಷ್ಟಿಯಿಂದ ಮಾತ್ರವಲ್ಲದೆ ಅದು ಆವಶ್ಯಕವಾಗಿಯೂ ಇತ್ತು. ಸೀತೆಯನ್ನು ಮದುಮಗಳಾಗಿ ಮಾಡಿದ್ದರು. ಆದರೆ ಸೀತೆ ಮದುಮಗಳಾಗಿಯೂ ಇರಲಿಲ್ಲ; ಮದುಮಗಳು ಸೀತೆಯಾಗಿಯೂ ಇರಲಿಲ್ಲ. ಆಕೆಗೆ ಬಾಹ್ಯಪ್ರಜ್ಞೆ ಇರಲಿಲ್ಲ. ಅಲ್ಲಿದ್ದವರು ಆಕೆಗೆ ಆಗತಾನೆ ಮೈಮೇಲೆ ಬಂದಿದೆ ಎನ್ನುತ್ತಿದ್ದರು. ಸಿಂಗಪ್ಪಗೌಡರ ಅಕ್ಕಪಕ್ಕದಲ್ಲಿದ್ದವರು ಅವರ ಕಡೆಗೆ ಕದ್ದು ಕದ್ದು ನೋಡುತ್ತಿದ್ದರು. ಏಕೆಂದರೆ, ಅವರ ಬಾಳದೆಹೋದ ಮಗನ ದೆಯ್ಯವಷ್ಟೇ ಸೀತೆಗೆ ಹಿಡಿದಿದ್ದುದು!

ಸಾಲಂಕೃತ ಶವವನ್ನು ಹೊತ್ತುಕೊಂಡು ಬಂದು ಆಪುಕೊಟ್ಟು ನಿಲ್ಲಿಸುವಂತೆ ಸೀತೆಯನ್ನು ಹೊತ್ತುತಂದು ರಾಮಯ್ಯನ ಪಕ್ಕದಲ್ಲಿ, ನಿಲ್ಲಿಸಲಿಲ್ಲ, ಹಿಡಿದು ಕೊಂಡು ನಿಂತರು. ಸೀತೆಯ ಆ ಸ್ಥಿತಿಯನ್ನು ನೋಡಿದೊಡನೆ ರಾಮಯ್ಯನ ಹೃದಯದಲ್ಲಿ ಹಠಾತ್ತಾಗಿ ಭೀತಿ ಸಂಚರಿಸಿತು. ಆದರೆ ಆ ಭೀತಿ, ಆಗ ಆತನಿಗೆ ಹಠಾತ್ತಾಗಿ ತೋರಿದರೂ, ನಿಜವಾಗಿಯೂ ಹಠಾತ್ತಾದುದಾಗಿರಲಿಲ್ಲ. ಬಹು ದಿನಗಳಿಂದಲೂ, ಆ ಭೀತಿ ತಲೆಯೆತ್ತಿದಂತೆಲ್ಲ ಅದನ್ನು ಅದುಮಿ ಅದುಮಿ ಒಳಗೆ ತಳ್ಳಿದ್ದನು. ಅವಕಾಶ ಸಿಕ್ಕಿದೊಡನೆ ಅದು ಹುತ್ತವೊಡೆದು ಮತ್ತೆ ಹೆಡೆಯೆತ್ತಿತ್ತು. ಅವನ ಮೈ ನಡುಗಿ, ಬೆವರಿತು. ಕಣ್ಣು ಮಂಜು ಮಂಜಾಯಿತು. ಮಿದುಳು ಕದಡಿದಂತಾಯಿತು. ನಿಂತಂತೆಯೆ ಕಡಿದುಕೊಂಡುಬೀಳುತ್ತೇನೆಯೋ ಎಂದು ಬೆದರಿದನು. ಇದ್ದಕ್ಕಿದ್ದಹಾಗೆ ಬಾಯಾರಿಕೆ ಹೆಚ್ಚಾಯಿತು. ಪಕ್ಕದಲ್ಲಿದ್ದವರೊಡನೆ ನೀರು ಕೇಳಿದನು. ಅವರು ಪಾನಕ ತಂದುಕೊಟ್ಟರು. ಆದರೆ ಮಾವನ ಮನೆಯ ಪಾನಕವಾದರೂ ಕೂಡ ದೇಹದ ಬಾಯಾರಿಕೆಯನ್ನು ಆರಿಸಬಲ್ಲುದೇ ಹೊರತು, ಆತ್ಮದ ತೃಷೆಯನ್ನು ನಿವಾರಿಸಬಲ್ಲುದೇ? ತನ್ನ ಕೈಗೆ ಬಿದ್ದಿದ್ದ, ಸೀತೆ ಹೂವಯ್ಯಗೆ ಬರೆದಿದ್ದ ಕಾಗದದ ನೆನಪಾಯಿತು. ಹೂವಯ್ಯನ ಧ್ಯಾನಪೂರ್ಣವಾದ ಸೌಮ್ಯ ಚಿತ್ರವೂ ಅವನ ಸ್ನೇಹಮಹಿಮೆಗಳೂ ಚಿತ್ತದಲ್ಲಿ ಸುತ್ತಿದುವು. ಮಡಿದಿದ್ದ ಕೃಷ್ಣಪ್ಪನ ನೆನಪೂ ಆಗಿ, ಹೆದರಿಕೆಯಾಯಿತು. ಮದುವೆ ಇದ್ದಕ್ಕಿದ್ದಂತೆ ಅಸಹ್ಯ

ವಾಗಿ ತೋರಿತು. ತಾನಾವುದೋ ಕ್ರೂರಕರ್ಮದಲ್ಲಿ ಭಾಗಿಯಾಗಿರುವಂತೆ ಭಾಸವಾಯಿತು. ಮಂತ್ರ ಹೇಳುತ್ತಿದ್ದ ಜೋಯಿಸರು ಮೊದಲುಗೊಂಡು ಗಟ್ಟಿಯಾಗಿ ಮಾತಾಡುತ್ತೇನೆ ಎಂದು ಬಾಯಿ ಮಾಡುತ್ತಿದ್ದ ತನ್ನ ತಂದೆ, ಧಾರೆಯೆರೆದು ಕೊಡಲು ಸಿದ್ಧರಾಗಿ ನಿಂತಿದ್ದ ಅತ್ತೆಮಾವಂದಿರು, ಸುತ್ತಲೂ ಗಾಳಿಯಾಡದಂತೆ ಮುತ್ತಿಕೊಂಡಿದ್ದ ಸ್ತ್ರೀ ಪುರುಷರ ಸಮುದಾಯ, ಆ ಮಂಟಪ, ಆ ಚಪ್ಪರ, ಆ ದೀಪಗಳು, ಆ ಗದ್ದಲ – ಎಲ್ಲರೂ ಎಲ್ಲವೂ ಹೇಯವಾಗಿ ಕಂಡುಬಂದು, ರಾಮಯ್ಯನಲ್ಲಿ ಮಹಾದ್ವೇಷಭಾವವುದಿಸಿತು. ತಾನು ಕಷ್ಟ ಸಂಕಟಗಳ ಇಕ್ಕಟ್ಟಿನಲ್ಲಿ ಸಿಕ್ಕಿ, ನುಗ್ಗುನುರಿಯಾಗುತ್ತಿದ್ದಂತೆ, ಉಸಿರು ಕಟ್ಟಿ ಸಾಯುತ್ತಿದ್ದಂತೆ ಭಾಸವಾಯಿತು. ಮುಳುಗಿ ಉಸಿರು ಕಟ್ಟಿಹೋಗುತ್ತಿದ್ದ ರಾಮಯ್ಯನಿಗೆ ಹೂವಯ್ಯನ ನೆನಪು ಗಾಳಿಯಂತೆ ಬೀಸಿತು. ಅದುವರೆಗೂ ಹಾಗೆ ಆಲೋಚಿಸದಿದ್ದವನು ಆಗ ಹೂವಯ್ಯ ಬಂದಿರಬಹುದೆಂದು ಸುತ್ತಲೂ ನೋಡಿದನು. ಜನಗಳ ಸಮೂಹ! ಜನಗಳ ಸಮೂಹ! ಮತ್ತೂ ಜನಗಳ ಸಮೂಹ! ಹೂವಯ್ಯನೆಲ್ಲಿರಬೇಕು ಅಲ್ಲಿ? ಹೂವಯ್ಯನಿಗೆ ಬದಲಾಗಿ ಮನೆಯ ಹೊರಗಡೆ, ಹತ್ತಾರು ಆಳೆತ್ತರದ ಮೇಲೆದ್ದ ಬೆಂಕಿಯ ಮಹಾಜ್ವಾಲೆ ಕಾಣಿಸಿತು!

ಬೆಂಕಿ! ಬೆಂಕಿ! ಬೆಂಕಿ! ಎಂದು ಕೂಗಿಕೊಂಡು ಜನಗಳೆಲ್ಲ ಗಾಬರಿಯಿಂದ ನುಗ್ಗಿದರು.

ಮಗಳನ್ನು ಧಾರೆಯೆರೆದುಕೊಡಲು ಸಿದ್ಧರಾಗಿ ನಿಂತಿದ್ದ ಶ್ಯಾಮಯ್ಯಗೌಡರು (ಮನೆಯುನ್ನು ಉಳಿಸಿಕೊಳ್ಳುವುದು ಅದಕ್ಕಿಂತಲೂ ಹೆಚ್ಚಾದ ಪ್ರಥಮ ಕರ್ತವ್ಯವಲ್ಲವೆ?) ಬೆಂಕಿ ಬಿದ್ದಿದ್ದ ಕಡೆಗೆ ಓಡಲೆಳಸಿದರು. ಗಡಿಬಿಡಿಯಲ್ಲಿ ತಮ್ಮ ದೋತ್ರದ ಸೆರಗನ್ನು ತಮ್ಮ ಹೆಂಡತಿ ಗೌರಮ್ಮನವರ ಸೆರಗಿಗೆ ಗಂಟುಹಾಕಿ ಕಟ್ಟಿದ್ದ ವಿಷಯ ಹೇಗೆತಾನೆ ಜ್ಞಾಪಕಕ್ಕೆ ಬರಬೇಕು? ಪಕ್ಕದಲ್ಲಿ ಜನರಿಲ್ಲದಿದ್ದರೆ ಗೌರಮ್ಮನವರು ನೆಲಕ್ಕುರುಳಿ ಅಪಾಯವಾಗುತ್ತಿತ್ತು. ಯಾರೋ ಸೆರಗು ಬಿಚ್ಚಿದರು. ಶ್ಯಾಮಯ್ಯಗೌಡರು ಆಳುಗಳನ್ನೂ ಜನರನ್ನೂ ಕರೆಯುತ್ತ ಡೊಳ್ಳು ಬೊಜ್ಜುಗಳಿಗೂ ಲಘುತ್ವ ಬಂದಿದ್ದಂತೆ ಧಾವಿಸಿದರು. ಚಂದ್ರಯ್ಯಗೌಡರೂ ಜೋಯಿಸರಿಗೆ ಧಾರೆಯೆರೆಯುವಂತೆ ಬೆಸಸಿ, ಕ್ಷಣ ಕ್ಷಣಕ್ಕೂ ಭಯಂಕರವಾಗುತ್ತಿದ್ದ ಬೆಂಕಿಯ ಕಡೆಗೆ, ಅಭ್ಯಾಸ ಬಲದಿಂದ ಸೇರೆಗಾರ ರಂಗಪ್ಪ ಸೆಟ್ಟರನ್ನು ಕರೆಯುತ್ತ, ನುಗ್ಗಿದರು. ರಂಗಪ್ಪ ಸೆಟ್ಟರು ಅದಕ್ಕೆ ಮೊದಲೇ ಆ ಸ್ಥಳಕ್ಕೆ ಓಡಿದ್ದರು.

ಮನೆಗೆ ಮುಟ್ಟಿಕೊಂಡಂತೆ ಸಮೀಪವಾಗಿದ್ದ ಕಣದಲ್ಲಿ ಬಿಸಿಲಿನಲ್ಲಿ ಚೆನ್ನಾಗಿ ಒಣಗಿ ನಿಂತಿದ್ದ ನೆಲ್ಲುಹುಲ್ಲಿನ ಬಣಬೆಗಳಲ್ಲಿ ಒಂದು ಹೊತ್ತಿಕೊಂಡು ಉರಿಯತೊಡಗಿದ್ದಿತು. ಬೆಂಕಿ ರಾಕ್ಷಸವಾಗಿ ಭಯಂಕರವಾಗಿ ಭೀಮಾಕಾರವಾಗಿ ಗರ್ಜಿ

ಸುತ್ತ ಕ್ಷಣ ಕ್ಷಣಕ್ಕೂ ಪ್ರಬಲವಾಗುತ್ತಿತ್ತು. ಕತ್ತಲೆಯಲ್ಲಿ ಅದರ ದೇದೀಪ್ಯಮಾನವಾದ ಕೆಂಪು ಜ್ವಾಲೆಗಳು ಆಕಾಶವನ್ನೇ ನೆಕ್ಕಿ ನೊಣೆಯಲು ಪ್ರಯತ್ನಿಸುವಂತೆ ತೋರುತ್ತಿದ್ದುವು. ಕಾಂತಿ ಬಹುದೂರದ ಮರಗಿಡಗಳನ್ನೂ ಬೆಳಗಿ ನೆರಳಾಡುವಂತೆ ಮಾಡಿದ್ದಿತು. ಬೆಂಕಿ ಹೊತ್ತಿದ್ದ ಹುಲ್ಲಿನ ಸಣ್ಣ ಸಣ್ಣ ಸಿಂಬೆಗಳೂ ಚೂರುಗಳೂ ಬೀಸತೊಡಗಿದ್ದ ಗಾಳಿಯಲ್ಲಿ ಹಾರಾಡುತ್ತಿದ್ದುವು. ಜನರ ಕೂಗಾಟ, ಕರೆದಾಟ, ಓಡಾಟ, ಬೊಬ್ಬೆ, ರೋದನ, ಅವಸರ, ಗಡಿಬಿಡಿಗಳಲ್ಲಿ ಆ ದೃಶ್ಯ ದಿಗ್ಭ್ರಾಂತಿಕರವಾಗಿತ್ತು.

ಸಾಹಸಿಗಳು ಮದುವೆಗೆಂದು ಕೊಪ್ಪರಿಗೆಗಳಲ್ಲಿ, ಕಡಾಯಿಗಳಲ್ಲಿ, ಹಂಡೆಗಳಲ್ಲಿ, ದೊಡ್ಡಕೌಳಿಗೆಗಳಲ್ಲಿ, ಕೊಡಪಾನಗಳಲ್ಲಿ ತುಂಬಿಟ್ಟಿದ್ದ ನೀರನ್ನು ಬಿಂದಿಗೆಗಳಲ್ಲಿ ತುಂಬಿತುಂಬಿ ಕೊಂಡೊಯ್ದು ಬೆಂಕಿಯನ್ನಾರಿಸಲು ತೊಡಗಿದರು. ಮತ್ತೆ ಕೆಲವರು ಬಾವಿಯಿಂದ ನೀರೆತ್ತಿ ಎತ್ತಿ ಪಾತ್ರೆಗಳಿಗೆ ತುಂಬ ತೊಡಗಿದರು. ಇನ್ನೂ ಕೆಲವರು ಹಸುರೆಲೆ ತುಂಬಿದ ಕೊಂಬೆಗಳ ಸಹಾಯದಿಂದ ಬೆಂಕಿ ಇತರ ಬಣಬೆಗಳಿಗೆ ಹಬ್ಬದಂತೆ ನೋಡಿಕೊಳ್ಳಲು ಸಿದ್ಧರಾಗಿ ನಿಂತರು. ಕೆಲವರು ಬಾಳೆಯ ಮರಗಳನ್ನು ಕಡಿದುತಂದು ಬೆಂಕಿಯಮೇಲೆ ಎಸೆದರು. ಆದರೂ ಅಗ್ನಿಭೈರವನ ಪ್ರಲಯ ತಾಂಡವ ಒಂದಿನಿತೂ ಹಿಮ್ಮೆಟ್ಟುವಂತೆ ತೋರಲಿಲ್ಲ. ಉರಿಯುತ್ತಿದ್ದ ಬಣಬೆಯಿಂದ ಬೆಂಕಿ ನೀಳವಾದ ತನ್ನ ಕೇಸುರಿ ನಾಲಗೆಯೊಂದನ್ನು ಚಾಚಿ ಪಕ್ಕದ ಬಣಬೆಯನ್ನೂ ನೆಕ್ಕಿಬಿಟ್ಟಿತು! ಒಡನೆಯೆ ಅದೂ ರುದ್ರವಾಗಿ ಹೊತ್ತಿಕೊಂಡಿತು. ಜನರು ಹತಾಶರಾದರು. ನೋಡುತ್ತಿದ್ದ ಹಾಗೆಯೆ ಮತ್ತೊಂದು ಬಣಬೆಯೂ ಹೊತ್ತಿಕೊಂಡಿತು!

ಶ್ಯಾಮಯ್ಯಗೌಡರು ಕೈ ಕೈ ಮುಗಿಯುತ್ತಾ ಎದೆ ಬಡಿದುಕೊಳ್ಳುತ್ತಾ "ಅಯ್ಯೋ, ನನ್ನ ಮನೇ ಉಳಿಸಿಕೊಡ್ರಪ್ಪಾ! ಹೋಯ್ತಲ್ಲೊ! ದೇವರೇ!" ಎಂದು ಮೊದಲಾಗಿ ಗೋಳಿಡುತ್ತಾ, ಒಂದುಸಾರಿ ನೆರೆದಿದ್ದ ಮನುಷ್ಯರನ್ನೂ ಮತ್ತೊಂದುಸಾರಿ ಅಗ್ನಿದೇವನನ್ನೂ, ಇನ್ನೊಮ್ಮೆ ಭೂತಪಂಜೊರ್ಳಿಗಳನ್ನೂ ಪ್ರಾರ್ಥಿಸತೊಡಗಿದರು. ಅವರನ್ನು ನೋಡಿ ಕನಿಕರದಿಂದ ಜನರು ಮತ್ತೆ ಉತ್ಸಾಹಗೊಂಡು, ಬೆಂಕಿ ಬೇರೆಯೆಡೆಗಳಿಗೆ ಹಬ್ಬದಂತೆ ತಡೆಯಲು ಉರಿಸೆಕೆಯಲ್ಲಿ ಬೆವರಿ ಬೆವರಿ ಬೇಗುದಿಗೊಂಡು ಭಗೀರಥ ಪ್ರಯತ್ನ ಮಾಡತೊಡಗಿದರು.

ಈ ಮಧ್ಯೆ ಕೆಲವರು ದನದ ಕೊಟ್ಟಿಗೆಗೆ ಬೆಂಕಿ ಬಿದ್ದರೆ ಜಾನುವಾರುಗಳಿಗೆ ಅಪಾಯವಾದೀತೆಂದು ಭಾವಿಸಿ, ಅವುಗಳ ಕೊರಳ ಕಣ್ಣಿಗಳನ್ನೆಲ್ಲ ಬೇಗ ಬೇಗನೆ ಕತ್ತಿಯಿಂದ ಕತ್ತರಿಸಿಹಾಕಿದರು. ಜನಗಳ ಮಧ್ಯೆ ದನಕರುಗಳೂ ನುಗ್ಗಿ ಗಲಿಬಿಲಿ 'ರಾಣಾರಂಪ'ವಾಗಿಬಿಟ್ಟಿತು.

ಇತ್ತ ಒಳ ಅಂಗಳದಲ್ಲಿ ವೆಂಕಪ್ಪಯ್ಯ ಜೋಯಿಸರು ಧಾರೆಯ ಸುಮುಹೂರ್ತಕ್ಕೆ ಚ್ಯುತಿಬಾರದಂತೆ ದಕ್ಷತೆಯಿಂದ ವರ್ತಿಸುತ್ತಿದ್ದರು. ಆದಷ್ಟು ಬೇಗ ಬೇಗನೆ ಆಪದ್ಧರ್ಮಕ್ಕನುಸಾರವಾಗಿ ಮಂತ್ರಗಳನ್ನೆಲ್ಲಾ ಚುಟುಕಿ ಚುಟುಕಿ ಮಾಡಿ ಹೇಳಿ ಪೂರೈಸಿ, ರಾಮಯ್ಯನ ಕೈಗೆ ಮಾಂಗಲ್ಯಸೂತ್ರವನ್ನು ಕೊಟ್ಟು, ಸೀತೆಯ ಕಂಠಕ್ಕೆ 'ತಾಳಿಕಟ್ಟು'ವಂತೆ ಹೇಳಿದರು. ಆ ಭಯಾನಕ ಸನ್ನಿವೇಶದಲ್ಲಿ ಬಗೆಗೆಟ್ಟಂತಿದ್ದ ರಾಮಯ್ಯನಿಗೆ ಯಾವುದೂ ಬೇಡವಾಗಿತ್ತು. ಮದುವೆಯ ಮಂಟಪ ಸುಡುಗಾಡಿನ ಚಿತೆಯಮೇಲೆ ಸ್ಥಾಪಿತವಾಗಿದ್ದಂತೆ ತೋರಿತು. ಜೋಯಿಸರು ಪಿಶಾಚಿಗಳ ಮುಖ್ಯಸ್ಥನಂತೆ ತೋರಿದರು. ಸುತ್ತ ಗಂಡಸರಾರೂ ಇರಲಿಲ್ಲ. ಎಲ್ಲರೂ ಬೆಂಕಿ ಬಿದ್ದಲ್ಲಿಗೆ ಓಡಿದ್ದರು. ಹೆಂಗಸರಲ್ಲಿ ಕೆಲರು ನಿರ್ವಾಹವಿಲ್ಲದೆ ಅಲ್ಲಿ ನಿಂತಿದ್ದರು. ಸೀತೆಯ ಅಲಂಕೃತ ಶರೀರವೂ ಅದನ್ನು ನೆಟ್ಟಗೆ ಹಿಡಿದು ನಿಲ್ಲಿಸಿಕೊಂಡಿದ್ದ ಕೈಗಳ ಮಧ್ಯೆ ನಿಂತಿತ್ತು!

ಜೋಯಿಸರು "ಹೂಂ, ಬೇಗ ಕಟ್ಟು!" ಎಂದು ಕೂಗಿದರು. ಆ ಗಲಾಟೆಯಲ್ಲಿ ಗಟ್ಟಿಯಾಗಿ ಕೂಗಿದಲ್ಲದೆ ಕೇಳಿಸುವಂತಿರಲಿಲ್ಲ.

ರಾಮಯ್ಯ ಮಂಕುಹಿಡಿದವನಂತೆ, ಬೇರೆ ಏನನ್ನೂ ಆಲೋಚಿಸಲಾರದೆ ಮಂತ್ರವಾದಿ ಹೇಳಿದಂತೆ ಆಚರಿಸುವ ಮಂತ್ರಮುಗ್ಧನಂತೆ, ಜೋಯಿಸರ ಅಪ್ಪಣೆಯ ಮೇರೆಗೆ ಸೀತೆಯ ಕೊರಳಿಗೆ ತಾಳಿ ಕಟ್ಟಲು ಕೈಯೆತ್ತುತ್ತಿದ್ದನು. ಅಷ್ಟರಲ್ಲಿ ಹೊರಗಡೆ ಏನೋ ಸಿಡಿದಂತೆ ಭಯಂಕರವಾದ ಆಸ್ಫೋಟನದ ಸದ್ದಾಗಿ, ಮನೆ ಝುಗ್ಗೆಂದು ನಡುಗಿತು. ಜನಗಳ ಕೂಗು, ಬೊಬ್ಬೆ, ಹಾಹಾಕಾರಗಳು ಮೈನೆತ್ತರು ಹೆಪ್ಪುಗಡುವಂತೆ ಕೇಳಿಬಂದಿತು. ಮಾಂಗಲ್ಯಸೂತ್ರ ರಾಮಯ್ಯನ ಕೈಯಿಂದ ಕಂಪಿಸಿ ಕಂಪಿಸಿ ಜಗುಳಿ ನೆಲಕ್ಕೆ ಬಿದ್ದಿತು. ರಾಮಯ್ಯ ಇದ್ದಕ್ಕಿದ್ದ ಹಾಗೆ ಅಧೀರನಾಗಿ ಹಸುಳೆಯಂತೆ ಅಳಲಾರಂಭಿಸಿದನು! ಜೋಯಿಸರು ಮಂತ್ರಹೇಳುತ್ತ ಕೋಪದಿಂದ ಕೆಳಗೆ ಬಿದ್ದಿದ್ದ ಮಾಂಗಲ್ಯಸೂತ್ರವನ್ನು ತುಡುಕಿ ಎತ್ತಿ ರಾಮಯ್ಯನ ಕೈಗೆ ಮುಟ್ಟಿಸಿ, ಸೀತೆಯ ಕುತ್ತಿಗೆಗೆ ತಾವೇ ಕಟ್ಟಿದರು!

ವೆಂಕಪ್ಪಯ್ಯನವರು ಸೀತೆರಾಮಯ್ಯರ ವಿವಾಹ ಮಹೋತ್ಸವವನ್ನು ಸಾಂಗಗೊಳಿಸಿದ್ದರೊ ಇಲ್ಲವೊ ಅಷ್ಟುಹೊತ್ತಿಗೆ ಕೆಲಮಂದಿ ಮೈಸುಟ್ಟುಹೋಗಿದ್ದ ಶ್ಯಾಮಯ್ಯಗೌಡರನ್ನು ಹೊತ್ತುಕೊಂಡು ಹೆಬ್ಬಾಗಿಲಿಂದ ಒಳಗೆ ಬಂದರು.

೭೯

# ಪರ್ವತ ಶೃಂಗದಲ್ಲಿ ಸೂರ್ಯೋದಯದ ಸೌಂದರ್ಯಾನುಭೂತಿ

ಮುತ್ತಳ್ಳಿಯಲ್ಲಿ ಮದುವೆಯ ಮತ್ತು ಬೆಂಕಿಯ ಅಪಾಯಗಳು ನಡೆದ ರಾತ್ರಿ ಕೆಳಕಾನೂರಿನಲ್ಲಿ ಹೂವಯ್ಯನ ಮನಸ್ಸು ಕುದಿಯುತ್ತಿದ್ದಿತು. ಶಾಂತಿಯನ್ನು ತಂದುಕೊಳ್ಳಲು ಮಾಡಿದ ಪ್ರಯತ್ನಗಳೊಂದೂ ಸಾಗಲಿಲ್ಲ. ಆ ರಾತ್ರಿ ಸೀತೆಯ ವಿವಾಹ—ಆಕೆಯ ಜೀವನ ಪ್ರಲಯ—ಮುತ್ತಳ್ಳಿಯಲ್ಲಿ ಜರುಗುತ್ತಿದೆ ಎಂಬ ಆಲೋಚನೆ ಅವನನ್ನು ಸಂಪೂರ್ಣ ಅಸ್ಥಿರವಾಗಿ ಮಾಡಿಬಿಟ್ಟಿದ್ದಿತು. ನಿದ್ದೆ ಮಾಡಲು ಯತ್ನಿಸಿದನು. ಅದೂ ಆಗಲಿಲ್ಲ; ಹಾಸಗೆಯಲ್ಲಿ ಹೊರಳಿ ಹೊರಳಿ ಬೇಸತ್ತನು. ಹಠಾತ್ತಾಗಿ ಆ ರಾತ್ರಿಯೇ ಮುತ್ತಳ್ಳಿಗೆ ಹೋಗಬೇಕೆಂದು ಪ್ರೇರಣೆ ಯಾಯಿತು. ಏಕೆ? ಏನು ಮಾಡುವುದಕ್ಕೆ? ಹೋಗಿ, ಹೇಗೆ, ಯಾರಿಗೆ ಮುಖ ತೋರಿಸುವುದು? ನಾಚಿಕೆಗೇಡಲ್ಲವೆ? ಅದೆಲ್ಲವೂ ಹೌದು! ಆದರೂ ಹೋಗಲೇಬೇಕೆಂದು ಮನಸ್ಸಾಯಿತು.

ಹೂವಯ್ಯ ಹೊರಡುತ್ತೇನೆ ಎಂದು ಮನಸ್ಸು ಮಾಡುತ್ತಿದ್ದಾಗಲೆ ಗಾಢ ನಿದ್ರೆ ತನ್ನನ್ನಾಕ್ರಮಿಸುವಂತೆ ತೋರಿ, ಅವನಿಗೆ ಆಶ್ಚರ್ಯವಾಯಿತು. ಯಾವುದೋ ಶಕ್ತಿ ನಿದ್ರೆಯ ನೆಪದಿಂದ ತನ್ನನ್ನು ಬಲಾತ್ಕಾರದಿಂದ ತಡೆಯುತ್ತಿದ್ದಂತೆ ಭಾಸ ವಾಯಿತು. ಏನನ್ನು ಮಾಡಲೂ ಕೈಲಾಗದವನಾಗಿ ಹಾಸಗೆಯ ಮೇಲೆ ಮಲಗಿ ನಿದ್ದೆಮಾಡಿದನು.

ಇದ್ದಕ್ಕಿದ್ದಹಾಗೆ ಎಲ್ಲಿಯೋ ಬೊಬ್ಬೆ ಕೇಳಿಸಿದಂತಾಗಿ ಹೂವಯ್ಯ ಬೆಚ್ಚಿಬಿದ್ದೆದ್ದು ಹಾಸಗೆಯ ಮೇಲೆ ಕುಳಿತನು. ನಿದ್ರಾವಸ್ಥೆ ತೊಲಗಿ ಚೆನ್ನಾಗಿ ಎಚ್ಚರವಾಗಿತ್ತು. ಅವನ ದೃಷ್ಟಿಗೆ ಕತ್ತಲೆಯಲ್ಲಿ ಧಗಧಗಿಸಿ ಉರಿಯುತ್ತಿದ್ದ ಹುಲ್ಲು ಬಣಬೆಗಳ ಭಯಂಕರ ದೃಶ್ಯವೂ ಅದರ ಸುತ್ತಲೂ ತುಮುಲವಾಗಿ ನೆರೆದು ಬೊಬ್ಬೆಯಿಡು ತ್ತಿದ್ದ ಮಾನವ ಸಮೂಹವೂ ಗೋಚರಿಸಿತು. ಕಂಡೊಡನೆ ಹೂವಯ್ಯ "ಮುತ್ತಳ್ಳಿ!" ಎಂದು ತನ್ನ ವಿಸ್ಮಯವನ್ನು ತನಗೇ ಕೂಗಿಕೊಂಡನು. ದೃಶ್ಯದಲ್ಲಿ ಪ್ರತಿಯೊಂದೂ ಪ್ರಸ್ಫುಟವಾಗಿತ್ತು; ಯಾವುದೂ ಅಸ್ಪಷ್ಟವಾಗಿರ ಲಿಲ್ಲ. ನಿಶ್ಚಯವಾಗಿಯೂ ಅದು ಕನಸಾಗಿರಲಿಲ್ಲ! ಒಂದೆರಡು ನಿಮಿಷಗಳ ಮಟ್ಟಿಗೆ, ಕೆಳಕಾನೂರಿನಿಂದ ಮುತ್ತಳ್ಳಿಗೆ, ಕಾಲದೇಶಗಳನ್ನು ಕೊರೆದುಮಾಡಿದ ಒಂದು ಮಾಯಾ ಸುರಂಗಮಾರ್ಗದ ಗವಾಕ್ಷ ನೇರ್ಪಟ್ಟ ಹಾಗಿದ್ದಿತು.

ಹೂವಯ್ಯ ಹಾಸಗೆಯಮೇಲೆ ಎದ್ದುನಿಲ್ಲುವಷ್ಟರೊಳಗಾಗಿ ಆ ದೃಶ್ಯ ಸಂಪೂರ್ಣವಾಗಿ ಮರೆಯಾಗಿ ಕೋಣೆ ಮಾತ್ರ ಕತ್ತಲೆಗವಿಯಾಗಿತ್ತು. ಅವನು ಅದ್ಭುತದಿಂದ ಸ್ತಂಭಿತನಾಗಿ ಮತ್ತೆ ಹಾಸಗೆಯಮೇಲೆ ಕುಳಿತು, ತಾನು ಕಂಡ ದ್ದನ್ನು ಕುರಿತು ವಿಚಾರಮಾಡತೊಡಗಿದನು. ಅದು ವಾಸ್ತವವಾಗಿ ತೋರ ಲಿಲ್ಲ; ಕನಸಂತೂ ಖಂಡಿತವಾಗಿಯೂ ಆಗಿರಲಿಲ್ಲ! ಬೇರೆ ಯಾವ ಹೆಸರನ್ನು ಕೊಡಲೂ ಅವನಿಗೆ ತೋಚಲಿಲ್ಲ. ಹಿಂದೆ ಅವನಿಗೆ ಆ ತರಹದ ಅನುಭವ ಎಂದೂ ಆಗಿರಲಿಲ್ಲ. ಕಳೆದ ವರ್ಷ ಮೈಸೂರಿನಿಂದ ಊರಿಗೆ ಬರುತ್ತಿದ್ದಾಗ ದಾರಿಯಲ್ಲಿ ಗಾಡಿ ಕೆರೆಗುರುಳಿಬಿದ್ದು ತನಗೆ ಅಪಾಯವಾಗಿ ಮುತ್ತಳ್ಳಿಯಲ್ಲಿ ಮಲಗಿದ್ದಾಗ, ರಾತ್ರಿ ಕನಸಿನಲ್ಲಿ ತಾನು ಕುಕ್ಕನಹಳ್ಳಿ ಕೆರೆಯಮೇಲೆ ನಡೆಯು ತ್ತಿದ್ದಾಗ ತನ್ನ ತಾಯಿಯನ್ನು ಸಂಧಿಸಿದಂತೆಯೂ ಆಕೆಯ ಹಣೆಗೆ ಗಾಯವಾಗಿ ಬಟ್ಟೆ ಕಟ್ಟಿದ್ದಂತೆಯೂ ತೋರಿ, ಮರುದಿನ ನಾಗಮ್ಮನವರು ಮುತ್ತಳ್ಳಿಗೆ ಬಂದಾಗ ಅವರ ಹಣೆ ವಾಸ್ತವವಾಗಿಯೂ ಗಾಯವಾಗಿದ್ದುದನ್ನು ಕಂಡು ಆಶ್ಚರ್ಯಪಟ್ಟಿದ್ದನು. ಅಂತಹ ಕನಸುಗಳೂ, ತರುವಾಯ ಅವುಗಳ ವಾಸ್ತವ ವಾದ ಅನುಭವಗಳೂ, ಅವನ ಜೀವನದಲ್ಲಿ ಹಲಕೆಲವು ನಡೆದಿದ್ದುವು. ಆದರೆ ಅವುಗಳನ್ನು ಆಕಸ್ಮಿಕ ಸಂಘಟನೆಗಳೆಂದು ತಿಳಿದು, ಹೆಚ್ಚು ಗಮನಿಸಿರಲಿಲ್ಲ. ಆದರೆ ರಾತ್ರಿ ತನಗಾದ ಅನುಭವ ಅತ್ಯಂತ ವಿಸ್ಮಯಕಾರಿಯಾಗಿತ್ತು.

ಹೂವಯ್ಯನ ಆತ್ಮದ ಮಹಾಮಂದಿರ ಮೆಲ್ಲ ಮೆಲ್ಲನೆ ಹೊಸ ಹೊಸ ಕಿಟಕಿ ಗಳನ್ನೂ ಬಾಗಿಲುಗಳನ್ನೂ ತೆರೆಯಲಾರಂಭಿಸಿತ್ತು. ಅದು ಅವನ ಎಚ್ಚತ್ತ ಚಿತ್ತಕ್ಕೆ ಇನ್ನೂ ಚೆನ್ನಾಗಿ ವೇದ್ಯವಾಗಿರಲಿಲ್ಲ. ಮುಂದೆ ಗೊತ್ತಾಗುತ್ತದೆ! ಒಂದೊಂದು ಹೊಸ ಕಿಟಕಿಯೂ ಹೊಸ ಬಾಗಿಲೂ ತೆರೆದಂತೆಲ್ಲಾ ಸಲಸಲವೂ ವಿಸ್ಮಯಪಡಬೇಕಾಗುತ್ತದೆ.

ಹೂವಯ್ಯ ಬೆಳಗಿನ ಜಾವದವರೆಗೂ ಹಾಸಗೆಯಮೇಲೆ ಬಿದ್ದುಕೊಂಡಿದ್ದನು. ಮಧ್ಯೆ ಮಧ್ಯೆ ನಿದ್ದೆ ಬಂದು ಬಂದು ಹೋಗುತ್ತಿತ್ತು. ಎಷ್ಟು ಹೊತ್ತಿಗೆ ಬೆಳಗಾ ದೀತು ಎಂದು ಕಾತರದಿಂದ ಇದಿರುನೋಡುತ್ತಿದ್ದ ಅವನು ಅಲಾರಂ ಗಡಿಯಾರ ದಲ್ಲಿ ಇನ್ನೂ ಐದು ಗಂಟೆ ಹೊಡೆಯುವ ಮೊದಲೆ ಎದ್ದು, ಹೊತ್ತಾರೆ ಆಳುಗಳು ಬಂದೊಡನೆ ಮಾಡಿಸಬೇಕಾಗಿದ್ದ ಕೆಲಸಗಳನ್ನೆಲ್ಲ ಪುಟ್ಟಣ್ಣನಿಗೆ ಪಟ್ಟಿ ಹೇಳಿ, ಬೇಟೆಗಾಗಿ ಅಲ್ಲದಿದ್ದರೂ ಅರಣ್ಯ ಪರ್ವತಗಳಲ್ಲಿ ಸಂಚರಿಸುವಾಗ ಕೈಯಲ್ಲಿದ್ದರೆ ಲೇಸು ಎಂದು ತೋಟಾ ಬಂದೂಕನ್ನು ಹೆಗಲಮೇಲೆ ಹಾಕಿಕೊಂಡು ಪ್ರಾತಃ ಕಾಲದ ಗಿರಿವನಯಾತ್ರೆಗೆ ಹೊರಟನು. ನಾಯಿಗಳೂ ಅವನ ಹಿಂದೆ ಹೊರಟುವು. ತಂಪುಗಾಳಿ ಬೀಸುತ್ತಿತ್ತು. ಹತ್ತಿರದ ಪೊದೆಯೊಂದರಲ್ಲಿ ಹಂಡ ಹಕ್ಕಿಯೊಂದು

ಸಿಳ್ಳುಹಾಕಲು ತೊಡಗಿದ್ದಿತು. ಪೂರ್ವದಿಕ್ಕಿನ ಬೆಟ್ಟಗಾಡುಗಳ ನೆತ್ತಿಯಲ್ಲಿ ದಿಗಂತರೇಖೆ ಇನ್ನೂ ಆಕಾಶಪಟದಲ್ಲಿ ಸ್ಪಷ್ಟವಾಗಿ ಖಚಿತವಾಗಿರಲಿಲ್ಲ. ಉಷಃ ಕಾಲದ ಶೀತಲ ವಾಯುಮಂಡಲದಲ್ಲಿ ರುಚಿಯಿಂದ ಉಸಿರೆಳೆದು ಬಿಡುತ್ತ ಹೂವಯ್ಯನೂ ನಾಯಿಗಳೂ ಅರಣ್ಯಗಳನ್ನೇರಿದರು.

ಹೂವಯ್ಯನ ಆತ್ಮದಲ್ಲಿ ಆಗುತ್ತಿದ್ದ ಬದಲಾವಣೆ ಏನು ? ಆ ಬದಲಾವಣೆಗೆ ಕಾರಣಗಳೇನು ? ಆ ಬದಲಾವಣೆಗಳು ಹಠಾತ್ತಾಗಿ ಸಂಭವಿಸುತ್ತಿದ್ದುವೊ? ಕ್ರಮವಾಗಿ ವಿಕಾಸಹೊಂದಿ ಹೊರಹೊಮ್ಮುತ್ತಿದ್ದುವೊ ?

ಮನುಷ್ಯನ ಅಂತಶ್ಚಿತ್ತ ಸಮುದ್ರದಂತೆ ಗಭೀರವಾಗಿದೆ, ಅಪಾರವಾಗಿದೆ. ಅಲ್ಲಿ ನಡೆಯುವ ವ್ಯಾಪಾರಗಳು ನಮಗೆ ಅಗೋಚರವೆಂದು ಹೇಳಬಹುದು. ಸಮುದ್ರದ ಒಳಗೆ ಜರುಗುವ ಘಟನೆಗಳ ಪರಿಣಾಮವಾಗಿ ಇದ್ದಕ್ಕಿದ್ದಂತೆ ದ್ವೀಪಗಳೇಳುತ್ತವೆ, ದ್ವೀಪಗಳು ಮುಳುಗುತ್ತವೆ; ನೀರು ಭೂಮಿಯನ್ನಾಕ್ರಮಿಸುತ್ತದೆ ಅಥವಾ ಭೂಮಿಯೆ ಕಡಲನ್ನು ತಳ್ಳಿದಂತಾಗಿ ನೀರು ಹಿಂಜರಿಯುತ್ತದೆ; ತೀರವು ಕುಸಿದುಬಿದ್ದು, ನೆಲವು ಕೊಚ್ಚಿಹೋಗುತ್ತದೆ; ಅಥವಾ ಸಮುದ್ರತಲದ ಅನರ್ಘ್ಯರತ್ನಗಳೊಡನೆ ಅಲ್ಲಿ ವಾಸಿಸುವ ವಿಚಿತ್ರವೂ ವಿಕಾರವೂ ಭಯಂಕರವೂ ಆದ ಪ್ರಾಣಿಗಳೂ ದಡಕ್ಕೆ ಚಿಮ್ಮಿ ಬೀಳುತ್ತವೆ. ಮೇಲೆ ನಿಂತು ನೋಡುವವರಿಗೆ ಈ ವ್ಯಾಪಾರಗಳು ಆಕಸ್ಮಿಕಗಳಂತೆ, ವಿಪ್ಲವಗಳಂತೆ, ಅದ್ಭುತಗಳಂತೆ ತೋರುತ್ತವೆ. ಆದರೆ ಭೂಗರ್ಭ ಸಮುದ್ರಗರ್ಭಗಳ ವಿಚಾರವಾದ ವಿಜ್ಞಾನವನ್ನು ತಿಳಿದ ಶಾಸ್ತ್ರಜ್ಞರಿಗೆ ಆ ವ್ಯಾಪಾರಗಳು ಅದ್ಭುತಗಳೂ ಅಲ್ಲ, ಆಕಸ್ಮಿಕಗಳೂ ಅಲ್ಲ, ವಿಪ್ಲವಗಳೂ ಅಲ್ಲ; ಸಕಾರಣವಾಗಿ ಕಾಲ ದೇಶಗಳಲ್ಲಿ ವಿಕಾಸಹೊಂದಿದ ಪ್ರಕೃತಿ ಘಟನೆಯ ಶಿಖರಗಳಾಗುತ್ತವೆ ! ಹಾಗೆಯೆ ಹೂವಯ್ಯನ ಅಂತರಾತ್ಮದ ನಿಗೂಢ ಗಹ್ವರದಲ್ಲಿ ಬಾಹ್ಯದೃಷ್ಟಿಗೆ ತಿಳಿಯದಂತೆ ಅನೇಕ ವ್ಯಾಪಾರಗಳು ಜರುಗುತ್ತಿದ್ದುವು. ಅವುಗಳು ಹೊರಗೆ ಪ್ರಕಾಶಿತವಾದಾಗ ಅವನಿಗೇ ವಿಸ್ಮಯವಾಗುತ್ತಿತ್ತು.

ಸೀತೆಯ ಪ್ರಸಂಗದಲ್ಲಿ ಅವನಿಗುಂಟಾಗಿದ್ದ ನಿರಾಶೆ ನಿಜವಾಗಿಯೂ ಅತಿ ದುಃಖಕರವಾಗಿತ್ತು. ಜಗತ್ತಿನ ಮಹಾಪುರುಷರ ಆಲೋಚನಾಪ್ರಪಂಚದ ಸಾನ್ನಿಧ್ಯ, ವಿದ್ಯೆಯ ಸಂಸ್ಕೃತಿ, ಮನಸ್ಸಿನ ಸಂಯಮ, ಉದ್ಧಾರಕ್ಕೆ ಒಂದು ಎಲ್ಲೆಯನ್ನು ಕಲ್ಪಿಸದೆ ನಿರಂತರವೂ ಮೇಲೇರಿ ಮುಂದುವರಿಯಬೇಕೆಂಬುವ ಉತ್ಕಟಾಕಾಂಕ್ಷೆ, ತೀವ್ರ ವ್ಯಾಕುಲತೆ, ಉದ್ದಾಮ ರಸಕಾವ್ಯಗಳ ಪರಿಚಯ, ಪ್ರಾರ್ಥನೆ, ಧ್ಯಾನ ಇವುಗಳ ಆಧಾರವೂ ಅಮೃತವೂ ಸಹಾಯಕ್ಕೆ ಬಾರದಿದ್ದಿದ್ದರೆ ಹೂವಯ್ಯನ ವ್ಯಕ್ತಿತ್ವ, ಪೆಟ್ಟು ತಗುಲಿದ ವಿಗ್ರಹದಂತೆ ಒಡೆದು ಚೂರು ಚೂರಾಗಿ ವಿಕಾರವಾಗಿ, ನಶಿಸುತ್ತಿತ್ತು. ಆತ್ಮ ಹೆಚ್ಚು ಹೆಚ್ಚು ಸಮಂಜಸವಾಗಿ, ಒಟ್ಟಾಗಿ, ಸಮನ್ವಿತವಾಗಿ,

ಅರ್ಥಪೂರ್ಣವೂ ಆನಂದಮಯವೂ ಆಗುವುದಕ್ಕೆ ಬದಲು ಸೀಳು ಸೀಳಾಗಿ ಹೋಗಿ, ವಿರೋಧಾಭಾಸವಾಗಿ, ಅನನ್ವಿತವಾಗಿ, ನಿರರ್ಥಕವೂ ದುಃಖಮಯವೂ ಆಗುತ್ತಿದ್ದುದರಲ್ಲಿ ಸಂದೇಹವಿರಲಿಲ್ಲ. ಹೂವಯ್ಯನಿಗಿದ್ದ ಸಹಾಯ ಸನ್ನಿವೇಶಗಳಿಲ್ಲದೆ, ನಿರಾಶೆಯ ಕೋರೆದಾಡೆಗಳಲ್ಲಿ ಸಿಕ್ಕಿಬಿದ್ದಿರುವ ಸೀತೆಯ ವ್ಯಕ್ತಿತ್ವ ದಿನ ದಿನಕ್ಕೂ ಬಿರುಕುಬಿಟ್ಟು, ಸೀಳಿ ಸೀಳಿ ವಿಕಾರವಾಗುತ್ತಿರುವುದನ್ನು ನೋಡಿದರೆ, ಹೂವಯ್ಯನ ವಿಚಾರವಾಗಿ ಹೇಳಿದ ಮಾತುಗಳ ಅರ್ಥಭಾವಗಳು ಚೆನ್ನಾಗಿ ಮುಂದಟ್ಟಾಗುತ್ತವೆ. ರಾಮಯ್ಯನ ಆತ್ಮವೂ ವಿಕಾರವಾಗಿ ಅನನ್ವಯವಾಗುತ್ತಿದೆ; ಆದರೆ ಅದಕ್ಕೆ ಕಾರಣ ನಿರಾಶೆ ಮಾತ್ರವಲ್ಲ, ದುರಾಶೆ ಮತ್ತು ಚಂಚಲತೆ—ಮತ್ತು ಮನೋಮಾಂದ್ಯ.

ಇತ್ತೀಚೆಗೆ ಹೂವಯ್ಯ ಆತ್ಮದ ಸಾಧನೆಯಲ್ಲಿ ಹೆಚ್ಚು ಹೆಚ್ಚು ನಿರತನಾಗಿದ್ದನು. ಸಂಸಾರದ ಕೆಲಸಗಳನ್ನೂ ನಿಷ್ಠೆಯಿಂದ ನೋಡಿಕೊಳ್ಳುವುದರ ಜೊತೆಗೆ ತನ್ನ ವಿದ್ಯಾಸಂಸ್ಕೃತಿಯನ್ನೂ (ಮೊನ್ನೆ ತಾನೆ ಶಿವಮೊಗ್ಗೆಗೆ ಅಡಕೆ ತುಂಬಿಕೊಂಡು ಹೋಗಿದ್ದ ಗಾಡಿಯಲ್ಲಿ ಒಂದು ಪೆಟ್ಟಿಗೆಯ ತುಂಬಾ ಹೊಸ ಪುಸ್ತಕಗಳ ಬಾಂಗಿ ಬಂದಿತ್ತು.) ರಸರುಚಿಯನ್ನೂ ಆತ್ಮಸಾಧನೆಯನ್ನೂ ವೀರಶ್ರದ್ಧೆಯಿಂದ ಅಭಿವೃದ್ಧಿಪಡಿಸಿಕೊಳ್ಳುತ್ತಿದ್ದನು. ಒಂದು ತಿಂಗಳಿಂದ ಪ್ರತಿ ರಾತ್ರಿಯೂ ನಾಗಮ್ಮ, ಪುಟ್ಟಣ್ಣ, ಸೋಮ — ಇವರಿಗೆ ಭಾರತ ರಾಮಾಯಣ ಮುಂತಾದ ಕಾವ್ಯಗಳನ್ನು ಸುಲಭ ವ್ಯಾಖ್ಯಾನ ಸಹಿತವಾಗಿ ಓದಿಹೇಳತೊಡಗಿದ್ದನು. ಅದನ್ನು ಕೇಳಲು ಕಾನೂರಿನಿಂದಲೂ ಹತ್ತಿರದ ಹಳ್ಳಿಗಳಿಂದಲೂ ಜನರು ಬರತೊಡಗಿದ್ದರು. ಸಿಂಗಪ್ಪಗೌಡರೂ ಅವರ ಮನೆಯವರೂ ಒಂದೆರಡು ಸಾರಿ ಕಥಾಶ್ರವಣಕ್ಕಾಗಿಯೆ ಬಂದಿದ್ದರು. ಇನ್ನೂ ಅನೇಕರಿಗೆ ಬರಬೇಕೆಂದು ಇಷ್ಟವಿದ್ದರೂ ಅಜ್ಞಾನಜನ್ಯವಾಗಿ ಹೂವಯ್ಯನ ಪ್ರತಿಪರವಾಗಿದ್ದ ಏನೊ ಒಂದು ಧರ್ಮಾಶಂಕೆಯಿಂದ ಬರಲಂಜುತ್ತಿದ್ದರು. ಹೂವಯ್ಯನ ಹೊಸ ಉದ್ಯಮವನ್ನು ಕೇಳಿದ ಅಗ್ರಹಾರದ ಜೋಯಿಸರು ವೆಂಕಪ್ಪಯ್ಯನವರು "ಗೋಹತ್ಯ ಮಾಡಿದವನು ಪುರಾಣ ಹೇಳಿದರೆ ಕೇಳಿದವರೆಲ್ಲರೂ ನರಕಕ್ಕೆ ಹೋಗಬೇಕಾಗುತ್ತದೆ" ಎಂದು ಬೇರೆ ಹೇಳಿದ್ದರಂತೆ! ಚಂದ್ರಯ್ಯಗೌಡರು ತಮ್ಮವರಿಗೆಲ್ಲ ಕೆಳಕಾನೂರಿಗೆ ಹೋಗಕೂಡದೆಂದು ಸುಗ್ರೀವಾಜ್ಞೆ ಮಾಡಿದ್ದರೂ ಸೇರೆಗಾರರ ಕಡೆಯ ಕನ್ನಡಜಿಲ್ಲೆಯಾಳುಗಳೂ ಬೇಲರಲ್ಲಿ ಕೆಲವರೂ ಆಗಾಗ್ಗೆ ಒಡೆಯರಿಗೆ ತಿಳಿಯದಂತೆ 'ಕದ್ದು ಬಂದು' ಹೂವಯ್ಯಗೌಡರ 'ಪರ್ಸಂಗ' ಕೇಳಿ, ಹಿರಿಹಿರಿ ಹಿಗ್ಗಿ ಹೋಗುತ್ತಿದ್ದರು. ಹೂವಯ್ಯ ಕಥೆ ಹೇಳುವ ಸಮಯದಲ್ಲಿ ಸಮಾಜದ ಏಳಿಗೆಗೆ ಆವಶ್ಯಕವಾದ ವಿಚಾರಗಳೆಲ್ಲವನ್ನೂ ಕುರಿತು ಸ್ವಾರಸ್ಯವಾಗಿ ಅಲ್ಲಲ್ಲಿ ಉಚಿತವಾದ ಹಾಸ್ಯದ ಮಾತುಗಳನ್ನು

ಸೇರಿಸಿ, ಎಲ್ಲರಿಗೂ ತಿಳಿಯುವಂತೆ ವಿವರಿಸುತ್ತಿದ್ದನು. ಹೀಗೆ ಪ್ರಣಯದಲ್ಲಿ ನಿರಾಶೆಹೊಂದಿದ್ದ ಹೂವಯ್ಯನ ಆತ್ಮ ವಿವಿಧ ಕಾರ್ಯಮಾರ್ಗಗಳಲ್ಲಿ ಸಾಹಸ ಪೂರ್ಣವಾಗಿ ಯಾತ್ರೆ ಹೊರಟಿದ್ದಿತು. ಆದರೆ ನಿರಾಶೆ ನಿರಾಶೆಯಾಗಿಯೇ ಇದ್ದು ಬಿಡಲಿಲ್ಲ. ಕ್ರಮಕ್ರಮೇಣ ಅದು ಆತನಾತ್ಮದ ಮಹಾ ಮಂಗಳಾರತಿಯ ಪರಿಮಳಿತ ಪಾವನಜ್ಯೋತಿಯನ್ನು ಪೋಷಿಸುವ ಕರ್ಪೂರವಾಗುತ್ತಿತ್ತು.

ಚೈತ್ರಮಾಸದ ವಿಪಿನರಾಜಿ; ಪರ್ವತಶ್ರೇಣಿ; ಪ್ರಾತಃಸಮಯ; ಸುಖ ಶೀತಲ ವಾಯುಮಂಡಲ; ಇನ್ನೇನು ಗಾನದ ತಾರಾಮಂಡಲದಂತೆ ಬಿರಿದು ಸಾವಿರಾರು ಪಕ್ಷಿಗಳ ತುಮುಲ ಕಲಗಾನವಾಗಿ ಪರಿಣಮಿಸಲಿರುವ ನಾದಗರ್ಭಿತವಾದ ಗಭೀರ ವನ್ಯಮೌನ... ಇವುಗಳ ಮಧ್ಯೆ ಹೂವಯ್ಯ ಒಮ್ಮೆ ರಾತ್ರಿಯಲ್ಲಿ ತನಗಾದ ಅನುಭವವನ್ನು ಕುರಿತು ಯೋಚಿಸಿ ಅಂತರ್ಮುಖಿಯಾಗುತ್ತ, ಮತ್ತೊಮ್ಮೆ ಅಂತರ್ಮುಖತೆಯಿಂದ ತಟಕ್ಕನೆ ಎಚ್ಚತ್ತು ಹೊರಗಣ ಪ್ರಕೃತಿರಮಣೀಯತೆಯನ್ನು—(ಕಾಡು ಕತ್ತಲೆಯಿಂದ ನಿಧಾನವಾಗಿ ಹೊರಹೊಮ್ಮುತ್ತಿತ್ತು; ಬಾನು ಮೆಲ್ಲಮೆಲ್ಲನೆ ಬೆಳಗಾಗಿ ಸಾಧಾರಣ ಪ್ರಕಾಶದ ತಾರೆಗಳೆಲ್ಲ ಅಡಗಿ, ಸಪ್ತರ್ಷಿ ಮಂಡಲದ ನಕ್ಷತ್ರಗಳು, ಚಿತ್ರಾ ಮತ್ತು ಸ್ವಾತಿ ನಕ್ಷತ್ರಗಳೇ ಮೊದಲಾದ ಪ್ರಥಮ ಮತ್ತು ದ್ವಿತೀಯ ವರ್ಗಕ್ಕೆ ಸೇರಿರುವ ಹಲಕೆಲವು ತಾರೆಗಳು ಮಾತ್ರ ರಾರಾಜಿಸುತ್ತಿದ್ದುವು) — ಆಸ್ವಾದಿಸುತ್ತ, ಶ್ವಾಸಕೋಶಗಳು ತುಂಬಿ ತುಳುಕುವಂತೆ ಉಸಿರೆಳೆದು ಬಿಡುತ್ತ ಬಿರುಬಿರನೆ ಮೇಲೇರಿ ಸಾಗಿದನು.

ವನದೇವಿಯ ಹೃದಯವೀಣೆಯ ತಂತಿಗಳನ್ನು ಮಿಡಿಯುವಂತೆ ಕಾಜಾಣಗಳು ಆಲಾಪನೆ ಮಾಡತೊಡಗಿದುವು. ಮರಗಳಲ್ಲಿ ಹೂಕುಡಿಯುತ್ತಿದ್ದ ಸಾವಿರಾರು, ಲಕ್ಷಲಕ್ಷ, ಕೋಟಿಕೋಟಿ ಜೇನ್ನೊಣಗಳ ಝೇಂಕಾರ ಪ್ರಾರಂಭ ವಾಯಿತು. ಕಣಿವೆಗಳಲ್ಲಿದ್ದ ಊರುಕೋಳಿಗಳ ಸಾಧಾರಣವಾದ ಕೂಗಿನ ಜೊತೆಗೆ ಕಾಡುಕೋಳಿಗಳ ಮಧುರಮನೋಹರವಾದ ಕೇಕೆಗಳೂ ಅಲ್ಲಲ್ಲಿ ಕೇಳಿ ಬಂದುವು. ಹೂವಯ್ಯನ ಹೃದಯ ಆನಂದಸ್ಪಂದಿತವಾಯ್ತು. ಹೊಸ ಚೇತನ ಎದೆಯಲ್ಲಿ ಮಿಂಚಿನಂತೆ ಸಂಚರಿಸಿತು. ಚೈತ್ರಪ್ರಕೃತಿಯ ಹುಚ್ಚಿನ ಕಿಚ್ಚು ಅವನೆದೆಗೆ ತಗುಲಿದಂತಾಯ್ತು. ಉಷಃಕಾಲ, ಅರುಣೋದಯ, ಸೂರ್ಯೋದಯಗಳ ಸಂಪತ್ತನ್ನು ಕಳೆದುಕೊಳ್ಳುವ ದಾರಿದ್ರ್ಯಕ್ಕೆ ಬೆದರಿ, ಬೇಗ ಬೇಗನೆ ಬೆಟ್ಟದ ನೆತ್ತಿಯ ಹಾಸುಬಂಡೆಯ ಉತ್ತುಂಗವೇದಿಕೆಗೆ ಏರಿ, ಏದುತ್ತ, ಆನಂದಪರವಶನಾಗಿ ದಿಟ್ಟಿಸುತ್ತ ನಿಂತನು.

ಮೈಲಿ ಮೈಲಿಗಳಾಚೆ, ವಿಸ್ತಾರವಾಗಿ, ಅನಂತವಾಗಿ, ದೃಶ್ಯತರಂಗ ವಿನ್ಯಾಸದಿಂದ ತುಂಗವಾಗಿ, ಉತ್ತುಂಗವಾಗಿ, ಮಹೋತ್ತುಂಗವಾಗಿ ಹಬ್ಬಿ ಹರಿದಿದ್ದ ಪರ್ವತಾರಣ್ಯಗಳು ಕೊನೆಮುಟ್ಟುವಂತೆ ತೋರುತ್ತಿದ್ದ ಪೂರ್ವದಿಕ್ಕಿನಲ್ಲಿ, ಅರಿಸಿನದ

ಧೂಳಿಯನ್ನೆರಚಿದಂತೆ ಹಳದಿಯ ಕಾಂತಿ ನಲಿಯುತ್ತಿದ್ದ ಗಗನ ಪಟಕ್ಕೆದುರಾಗಿ, ದಿಗಂತರೇಖೆ ಕಚ್ಚುಕಚ್ಚಾಗಿ ಗೋಚರಿಸತೊಡಗಿತ್ತು. ಆ ಮೈಮರೆಯಿಸುವ ದೃಶ್ಯದರ್ಶನದ ಅನಂತ ಆಹ್ವಾನವನ್ನು ಕೃತಜ್ಞತೆಯಿಂದ ಸ್ವೀಕರಿಸಿ ಹೂವಯ್ಯನ ಆತ್ಮ ರೆಕ್ಕೆಬಿಚ್ಚಿ ಗರಿಗೆದರಿ ಹಾರಲು ಅನುವಾಯಿತು. ಅವನಿಗೆ ತನ್ನ ಮುಖವೂ ಪೂರ್ವದಿಕ್ಕಾಗುತ್ತಿದ್ದಂತೆ ಭಾಸವಾಯಿತು. ಕೋವಿಯನ್ನು ದೂರವಿಟ್ಟು, ತಣ್ಣಗಿದ್ದ ಹಾಸುಬಂಡೆಯಮೇಲೆ ಪದ್ಮಾಸನಹಾಕಿ ಕುಳಿತು ಎವೆಯಿಕ್ಕದಾದನು.

ವರ್ಣನೆಗೆ ಅಸಾಧ್ಯವಾಗಿ ಬಣ್ಣಗಳ ಮೆರವಣಿಗೆ ಪ್ರಾರಂಭವಾಯಿತು. ಹೂವಯ್ಯನ ದೃಷ್ಟಿಗೆ ಭಾವಮಾತ್ರವಾಗಿದ್ದ ಭಗವಂತನ ಸೌಂದರ್ಯ ರೂಪುಗೊಂಡು ತನ್ನೆದುರು ಪ್ರತ್ಯಕ್ಷವಾಗುತ್ತಿದ್ದಂತೆ ಅನುಭವವಾಗಿ ಮೈ ಪುಲಕಿತವಾಗಿ, ಹೃದಯ ರಸಾರ್ದ್ರವಾಗಿ, ಕಣ್ಣು ಹನಿ ತುಂಬಿತು. ನೋಡುತ್ತಿದ್ದಂತೆ ಹಳದಿಯ ಬೆಳಕು ಕುಂಕುಮದ ಬಣ್ಣಕ್ಕೆ ತಿರುಗಿ, ಅಲ್ಲಿದ್ದ ಕಿರುಮುಗಿಲುಗಳು ಉರಿಯುವ ಚಿನ್ನದ ಬಣ್ಣವನ್ನು ತಾಳಿ ಉಜ್ವಲವಾದುವು. ಕತ್ತಲೆ ಎತ್ತಲೊ ಅಡಗಿ, ಬೆಳಕು ಬಾನಿನಿಂದ ನೆಲಕ್ಕೆ ತುಳುಕಿ ಹರಿದಂತಾಯಿತು. ದೂರದಲ್ಲಿ ಅದುವರೆಗೆ ಅಜ್ಞಾತವಾಗಿದ್ದ ಒಂದು ಕೆರೆಯ ನೀರು ಕರಗಿದ ಬೆಳ್ಳಿಯಾಗಿ ತಳತಳಸಿತು. ಬಹಳ ತೆಳ್ಳಗೆ ಎಲ್ಲೆಲ್ಲಿಯೂ ಹಬ್ಬಿ ಮುಸುಗಿದ್ದ ಹೊಗೆಮಂಜಿನಲ್ಲಿ ಹತ್ತಿರದ ಬೆಟ್ಟಗಾಡುಗಳೂ ಮೃದುವಾಗಿ ಕೋಮಲ ನೀಲವಾಗಿ ಕಾಣಿಸಿದುವು.

ನೋಡುತ್ತಿದ್ದ ಹಾಗೆ, ಹೂವಯ್ಯನ ಎದೆಯ ಗೂಡಿನಲ್ಲಿ ಹೃದಯವನ್ನು ಚಿಮ್ಮಿಸುತ್ತ, ಸೂರ್ಯನ ರಕ್ತಬಿಂಬ ದಿಗಂತರೇಖೆಯಮೇಲೆ ಇಣಿಕಿತು. ಇಣಿಕಿ ಮೇಲೆಮೇಲೆ ಮೇಲಕ್ಕೇರಿ, ಸಂಪೂರ್ಣಬಿಂಬ ವಿರಾಜಮಾನವಾಯಿತು. ಹೂವಯ್ಯನ ಹತ್ತಿರದಲ್ಲಿದ್ದ ಮರಗಳಿಗೆ ದೀರ್ಘಛಾಯೆಗಳೂ ಮೂಡಿದುವು. ಆ ಛಾಯೆಗಳು ನೆಲದಮೇಲೆ ಕಾಣಿಸಿದುದಕ್ಕಿಂತಲೂ ಹೊಗೆಮಂಜಿನಲ್ಲಿ ಬಿಸಿಲ್ಕೋಲುಗಳನ್ನು ಸೃಜಿಸಿ, ಚೆನ್ನಾಗಿ ಗೋಚರವಾದುವು. ಹಕ್ಕಿಗಳು ಹುಚ್ಚೆದ್ದು ಹಾಡಿದುವು. ಆನಂದಸ್ವರೂಪಿಯಾದ ಭಗವಂತ ಸೌಂದರ್ಯರೂಪಿಯಾಗಿ ಮೈದೋರಿ ಹೂವಯ್ಯನ ಆತ್ಮದಲ್ಲಿ ರಸವಾಗಿ ಪ್ರವಹಿಸಿದನು.

ಹೂವಯ್ಯನ ಕಣ್ಣುಗಳು ಮೆಲ್ಲಮೆಲ್ಲಗೆ ತಾವಾಗಿಯೆ ಮುಚ್ಚಿಕೊಂಡು ಅವನು ಧ್ಯಾನಮಗ್ನನಾದನು. ಆ ಧ್ಯಾನದಲ್ಲಿ ಆಲೋಚನೆ ಇರಲಿಲ್ಲ. ಅದು ಅನಿರ್ವಾಚನೀಯವಾದ ಅಖಂಡ ಭಾವಾನುಭವ ಮಾತ್ರವಾಗಿತ್ತು. ತಾನೆ ಎಲ್ಲವೂ ಆಗುತ್ತಿದ್ದಂತೆ ಮೊದಮೊದಲು ತೋರಿದ್ದರೂ ಕಡೆಕಡೆಗೆ 'ತಾನು' ಎಂಬ ಭಾವವೂ ಪ್ರಜ್ಞೆಯಿಂದ ಉರುಳಿ ಮಾಯವಾಯಿತು. ಆನಂದವನ್ನು ಅನುಭವಿಸುತ್ತಿದ್ದನೊ? ಆನಂದವೆ ಆಗಿದ್ದನೊ? ಏನೊ? ಎಂತೊ? ಯಾರಿಗೆ ಗೊತ್ತು?

ಅಂತೂ ಆ ಭಾವಸಮಾಧಿಯ ರಸಾಗ್ನಿಗಂಗೆಯಲ್ಲಿ ಮುಳುಗಿ ಮಿಂದು ಜ್ವಾಲಾಮಯಾತ್ಮನಾದ ಹೂವಯ್ಯ ಕಣ್ದೆರೆದಾಗ ಹೊತ್ತು ಆಗಲೆ ದಿಗಂತ ದಿಂದ ಎರಡು ಮೂರಾಳೆತ್ತರದಷ್ಟು ಮೇಲಕ್ಕೇರಿಬಿಟ್ಟಿತ್ತು. ಜಗತ್ತೆಲ್ಲವೂ ಶಾಂತಿ ಸೌಂದರ್ಯ ಆನಂದ ಮೈತ್ರಿ ಪ್ರೇಮಗಳಿಂದ ಪೂರ್ಣವಾಗಿದ್ದಂತೆ ಅನುಭವಿಸುತ್ತಿದ್ದ ಆತನ ಮುಖ ಮಿಂಚಿನ ಮುಗುಳುನಗೆಯಾಯಿತು. ಕಾಲು ಮರಗಟ್ಟಿದ್ದುವು. ಎದ್ದು ನಿಂತು, ಕೈಕಾಲುಗಳನ್ನು ಚೆನ್ನಾಗಿ ನೀಡಿ, ಸರಿಮಾಡಿ ಕೊಂಡು, ಭವ್ಯ ಸನ್ನಿವೇಶದ ಪ್ರಭಾವದಿಂದಲೊ ಎಂಬಂತೆ ಬಹಳ ಹೊತ್ತಿ ನಿಂದಲೂ ಸುಮ್ಮನೆ ಕುಳಿತಿದ್ದ ನಾಯಿಗಳನ್ನು ಕಂಡು, ಕೃತಜ್ಞತೆಯಿಂದ ಎಂಬಂತೆ ತಲೆ ತಟ್ಟಿ ಮುದ್ದಿಸಿ, ಕೋವಿಯನ್ನು ಹೆಗಲಮೇಲೆ ಹಾಕಿಕೊಂಡು ಮನೆಯ ಕಡೆಗೆ ಇಳಿಯತೊಡಗಿದನು. ಕಾಜಾಣಗಳ ಹಾಡು ನಿಂತಿತ್ತು. ಕುಟುರ, ಓಕಳಾರ, ಉರುಳಿ, ಕಾಮಳ್ಳಿ, ಗಿಣಿ — ಮೊದಲಾದ ಹಕ್ಕಿಗಳು ಕಾಡಿನ ತುಂಬಾ ಹಾಡಿನ ದೊಂಬಿಯೆಬ್ಬಿಸಿದ್ದುವು. ಬನದ ಮಧ್ಯೆ ಎರಡು ಕೋಗಿಲೆಗಳು ಒಂದನ್ನೊಂದು ಕೂಗಿ ಕರೆಯುತ್ತಿದ್ದುವು. ಹೂವಯ್ಯ ಕಾಡುಕಿಚ್ಚು ಬಿದ್ದು, ನೆಲವೆಲ್ಲ ಸುಟ್ಟು ಮಸಿಹೊಯ್ದಂತೆ ಕರ್‍ರಗಾಗಿದ್ದ ಸ್ಥಳವೊಂದನ್ನು ಕಂಡೊಡನೆ ತಾನು ರಾತ್ರಿ ಕನಸಿನಲ್ಲಿ ಅಲ್ಲ, ಕಣಸಿನಲ್ಲಿ, ಕಂಡಿದ್ದ ಬೆಂಕಿಯ ದೃಶ್ಯವನ್ನು ನೆನೆದನು. ಮೈ ಜುಮ್ಮೆಂದಿತು.

ಮುತ್ತಳ್ಳಿಯಿಂದ ಮದುವೆಯ ಕದನಿಗಳೇಕೆ ಕೇಳಿಸುತ್ತಿಲ್ಲ? ಎಂದು ಸೋಜಿಗಪಟ್ಟನು. ಸೀತೆ ರಾಮಯ್ಯನ ಪತ್ನಿಯಾಗಿ ಪರವಧುವಾಗಿದ್ದುದನ್ನು ನೆನೆದಾಗ, ಅವನಿಗೆ ಹಿಂದಿನ ದಿನ ಆಗಿದ್ದಂತೆ ಹೆಚ್ಚೇನೂ ಸಂಕಟವಾಗಲಿಲ್ಲ. ಹಣೆಯ ಬರಹವನ್ನು ಅಳಿಸುವುದು ಯಾರಿಂದ ತಾನೆ ಸಾಧ್ಯ? ಎಂದುಕೊಳ್ಳು ತ್ತಿದ್ದಾಗ, ಗಿಡದಿಂದ ಗಿಡಕ್ಕೆ ಅಡ್ಡವಾಗಿ ಹಬ್ಬಿದ್ದ ಜೇಡರ ಬಲೆಯೊಂದಕ್ಕೆ ಅವನ ಮೋರೆ ನುಗ್ಗಿಬಿಟ್ಟಿತು. ಆ ಬಲೆಯ ಸಣ್ಣ ಸಣ್ಣ ಊರ್ಣತಂತುಗಳು ಮುಖಕ್ಕೆ ಮುಟ್ಟಿದ ಜಾಗದಲ್ಲೆಲ್ಲಾ ತಣ್ಣಗಾಗಿ ಹೂವಯ್ಯ ಪದ್ಧತಿಯ ಮೇರೆಗೆ ಬಂದಿದ್ದ ಅಭ್ಯಾಸಬಲದಿಂದ 'ಒಳ್ತು!' ಎಂದುಕೊಂಡು ಮುಖವನ್ನು ಒರಸಿ ಕೊಂಡನು. ಮತ್ತೆ ತನ್ನ 'ಒಳ್ತು!'ವಿಗೆ ತಾನೆ ನಕ್ಕನು.

ಹೂವಯ್ಯ ಮನೆಯ ಅಂಗಳಕ್ಕೆ ಹೋಗಿದ್ದನೊ ಇಲ್ಲವೊ, ಸೋಮ ಒಳಗಿನಿಂದ ಅವಸರವಾಗಿ ಓಡಿಬಂದು ಮುತ್ತಳ್ಳಿಯಲ್ಲಿ ಕಳೆದ ರಾತ್ರಿ ನಡೆದಿದ್ದ ಬೆಂಕಿಯ ಅನಾಹುತವನ್ನೂ, ಶ್ಯಾಮಯ್ಯಗೌಡರಿಗಾದ ಅಪಾಯವನ್ನೂ, ಕದಿನಿ ಮಸಿಯಿದ್ದ ಚೀಲಕ್ಕೆ ಕಿಡಿಬಿದ್ದು ಸಿಡಿದು ಇಬ್ಬರು ಮಡಿದುದನ್ನೂ ವರ್ಣಿಸಿ ವರ್ಣಿಸಿ ಹೇಳತೊಡಗಿದನು. ಹೂವಯ್ಯ ವಿಸ್ಮಯಸ್ತಬ್ಧನಾಗಿ ಆಲಿಸಿದನು.

ನಾಗಮ್ಮನವರು, ಪುಟ್ಟಣ್ಣ, ಕೆಲಸದ ಆಳುಗಳು ಎಲ್ಲರೂ ಸುತ್ತಲೂ ಗುಂಪುಸೇರಿ ಆ ಕಥೆಯನ್ನು ಎರಡನೆಯ ಸಾರಿಯೂ ಭೀತರಾಗಿ ಕೇಳಿದರು.

ಹೂವಯ್ಯ ಮಾತಾಡದೆ ತನ್ನ ಕೊಟಡಿಗೆ ಹೋಗಿ, ಮುತ್ತಳ್ಳಿಗೆ ಹೊರಡಬೇಕೊ ಬೇಡವೊ ಎಂದು ಯೋಚಿಸತೊಡಗಿದನು. ಮನಸ್ಸು ಇಬ್ಭಾಗವಾಗಿ ಎರಡು ಪಕ್ಷಗಳೂ ಸಮವಾಗಿದ್ದುವು. ಕಷ್ಟಕಾಲದಲ್ಲಿ ನಂಟರನ್ನು ನೋಡಿ ವಿಚಾರಿಸಿಕೊಳ್ಳಬೇಕಾದುದೇನೊ ಹೌದು, ಆದರೆ...

ಹೂವಯ್ಯ ಹೊರಗೆ ಬಂದು ಸೋಮನನ್ನು ಕುರಿತು "ಹಾಗಾದರೆ ಥಾರೆ ಆಗಲಿಲ್ಲವೇನೊ?" ಎಂದು ಕೇಳಿದನು.

"ಕೆಲವರು ಆಯ್ತು ಅಂಬ್ರಪ್ಪಾ! ಆಗಲಿಲ್ಲ ಅಂಬರು ಕೆಲವರು! ಪರಮಾರ್ಥ" ಸೋಮ ಆಕಾಶದ ಕಡೆಗೆ ನೋಡಿ ಕೈತೋರಿ "ಆ ಸ್ವಾಮಿಗೇ ಗೊತ್ತು!" ಎಂದು ಸಿಂಗಪ್ಪಗೌಡರ ಶಿಕ್ಷಣದ ಪ್ರಭಾವವನ್ನು ಅವರಿಗೆ ಕೀರ್ತಿ ತರುವಂತೆ ಪ್ರದರ್ಶಿಸಿದನು.

ಹೂವಯ್ಯ ಒಳಗೆ ಹೋಗಿ ಒಂದು ಕಾಗದದ ಚೂರನ್ನು ಹರಿದುಕೊಂಡು ಒಂದು ಮಗ್ಗುಲಲ್ಲಿ 'ಬೇಕು' ಎಂದೂ ಮತ್ತೊಂದರಲ್ಲಿ 'ಬೇಡ' ಎಂದೂ ಬರೆದು ಮೇಲಕ್ಕೆಸೆದು 'ಚೀಟಿ' ಹಾಕಿದನು.

ಉದ್ವಿಗ್ನಚಿತ್ತತೆಯಿಂದ, ಕಾಗದದ ಚೂರು ಗಾಳಿಯಲ್ಲಿ ಕುಣಿಕುಣಿದಿಳಿದು ನೆಲ ಮುಟ್ಟುವುದನ್ನೆ ಕಾಯುತ್ತಿರಲು, ಚೀಟಿ "ಬೇಡ!" ಎಂದು ಬಿದ್ದಿತು. ಅವನು ಮುತ್ತಳ್ಳಿಗೆ ಹೊರಡಲಿಲ್ಲ.

## ೩೦

## ಮನಸ್ಸಿನ ಮಾಯಾಶಕ್ತಿ

ಮುತ್ತಳ್ಳಿಯಲ್ಲಿ ನೋವಿನ, ಸಾವಿನ, ಗೋಳಾಟದ ಮತ್ತು ಅನ್ಯಾಯ ಅಧರ್ಮಗಳ ಆ ದಾರುಣರಾತ್ರಿ ಬೆಳಗಾದ ಮಾರನೆಯ ದಿನದ ಸನ್ನಿವೇಶ ಭಯ ವಿಹ್ವಲವಾಗಿ ಶೋಕಪೂರ್ಣವಾಗಿತ್ತು. ಜನರು ಬಹಳ ಶ್ರಮದಿಂದ ಮನೆ ಸುಟ್ಟುಹೋಗದಂತೆ ನೋಡಿಕೊಂಡಿದ್ದರೂ ಕಣದಲ್ಲಿದ್ದ ಬಣಬೆಗಳೂ ಗಾಡಿಕೊಟ್ಟಿಗೆ ಸೌದೆಕೊಟ್ಟಿಗೆಗಳೂ ಉರಿಕರಿಯಾಗಿದ್ದ ದೃಶ್ಯ ಬಹುಜನರು ಮಡಿದುಬಿದ್ದ ಯುದ್ಧರಂಗದಂತೆ ಹತಾಶವಾಗಿತ್ತು. ಮದ್ದು ಸಿಡಿದು ಚರ್ಮ ಸುಟ್ಟು ಸುಲಿದು ಹೋಗಿ ಸತ್ತುಬಿದ್ದಿದ್ದ ಇಬ್ಬರು ಶ್ಯಾಮಯ್ಯಗೌಡರ ಜೀತ

ದಾಳುಗಳ ಶವಗಳಂತೂ, ಕಾಗೆಹಿಂಡಿಗೆ ಕಲ್ಲೆಸೆದಂತೆ, ಮದುವೆಗೆ ನೆರೆದಿದ್ದ ಜನರನ್ನು ಚೆದರಿಸಿ ಓಡಿಸಿಬಿಟ್ಟುವು. ಮಾಜರು ಮಾಡಲು ಪೋಲೀಸಿನವರು ಬರುತ್ತಾರೆಂಬ ಸುದ್ದಿ ಕಾಗೆ ಹಿಂಡಿಗೆಸೆದ ಆ ಕಲ್ಲಾಗಿತ್ತು. ಸಾಕ್ಷಿಗಾಗಿಯೂ ಧೈರ್ಯಕ್ಕಾಗಿಯೂ ದೊಡ್ಡ ದೊಡ್ಡ ಮುಂಡಾಸದ ಗೌಡರುಗಳನ್ನು ಉಳಿಸಿ ಕೊಳ್ಳುವುದೂ ಕೂಡ ಚಂದ್ರಯ್ಯಗೌಡರಿಗೆ ಪ್ರಯಾಸವಾಯಿತು. ಮೈಸುಟ್ಟ ಗಾಯದ ನೋವಿಗಿಂತಲೂ ಹೆಚ್ಚಾಗಿ, ಪೋಲೀಸಿನವರ ಆಗಮನದಿಂದಾಗುವ ಕಷ್ಟ ಸಂಕಟ ಹಿಂಸೆಗಳನ್ನು ನೆನೆದು ಹೆದರಿ, ಅಳುತ್ತಿದ್ದ ಶ್ಯಾಮಯ್ಯಗೌಡರಿಗೆ ಸಿಂಗಪ್ಪಗೌಡರು "ನಾವೆಲ್ಲಾ ಇದ್ದೇವೆ, ಹೆದರಬೇಡಿ" ಎಂದು ಎಷ್ಟು ಧೈರ್ಯ ಹೇಳಿದರೂ ಸಾಕಾಗಲಿಲ್ಲ. ಅಂತಹ ಘಟನೆಗಳೆಂದರೆ ಚಂದ್ರಯ್ಯಗೌಡರ ಸಾಹಸದ ನಾಲಗೆ ಉಪ್ಪಿನಕಾಯಿ ಸೆಕ್ಕಿದಂತೆ ರುಚಿಗೊಂಡು ನೀರಾಡಿ ಲೊಚ ಗುಟ್ಟುತ್ತಿತ್ತು. ಅವರು ತಮ್ಮ ಹೆಮ್ಮೀಸೆಗಳನ್ನು ಆಗಾಗ ತಿಕ್ಕುತ್ತಾ "ಬಿಡಿ, ಬಾವಾ, ನೀವ್ಯಾಕೆ ಹೆದರ್ತೀರಿ? ಯಾರೇನು ಖೂನಿ ಮಾಡಿದ್ದಲ್ಲ. ಖೂನಿ ಮಾಡಿದ್ದನ್ನೇ ನಿಬಾಯಿಸಿಕೊಳ್ಳಬಹುದಂತೆ? ಈ ಚಿಲ್ಲರೆ ಕೇಸಿಗೆಲ್ಲ ಯಾರು ಹೆದರ್ತಾರೆ?" (ಹುಲ್ಲುಬಣಬೆ, ಸೌದೆಕೊಟ್ಟಿಗೆ, ಗಾಡಿಕೊಟ್ಟಿಗೆಗಳು ಸುಟ್ಟು ಹೋಗಿ, ಇಬ್ಬರು ಸತ್ತು, ಮತ್ತೊಬ್ಬರಿಗೆ—ಅವರು ಮನೆಯ ಯಜಮಾನರು, ಸಾಯುವಷ್ಟು ಮೈಸುಟ್ಟುಹೋಗಿದ್ದುದು ಚಂದ್ರಯ್ಯಗೌಡರಿಗೆ ಚಿಲ್ಲರೆಕೇಸು.) ಎಂದು ನಶ್ಯ ಹಾಕಿಕೊಂಡು "ಈ ಇನಿಸ್ಪೆಕ್ಟರು, ಈ ಪೋಲೀಸು ಇವರೇನು ನಾ ಕಾಣದವರೇ? ಬ್ಯಾಳೆಕಾಳೆಲ್ಲ ನಂಗೊತ್ತಿದೆ. ಕೈ ಬಿಸಿಯಾಗಿ, ಮನಸ್ಸು ಖುಷಿಯಾದ್ರೆ, ಸೈ!" ಎಂದು ತಮ್ಮ ತಮ್ಮ ಮನೆಗಳಿಗೆ ಪರಾರಿಯಾಗಲು ಇಷ್ಟವಿದ್ದರೂ ದಾಕ್ಷಿಣ್ಯಕ್ಕೋಸ್ಕರಗಾಗಿ ಉಳಿದುಕೊಂಡಿದ್ದ ಗೌಡರುಗಳನ್ನೆಲ್ಲ ನೋಡಿ, ತಮ್ಮ ಪ್ರತಾಪದ ಪ್ರದರ್ಶನಕ್ಕೆ ಅವಕಾಶ ಸಿಕ್ಕಿದ್ದಕ್ಕಾಗಿ ಹಿಗ್ಗುತ್ತಿದ್ದರು.

ತೀರ್ಥಹಳ್ಳಿಯಿಂದ ಡಾಕ್ಟರೂ ಪೋಲೀಸಿನವರೂ ಬಂದರು. ಕಾಕಿ ಬಟ್ಟೆ, ಚರ್ಮದ ಬೆಲ್ಟು, ತಳಿಸುವ ಹಿತ್ತಾಳೆಯ ಗುಂಡಿಗಳು, ಆ ನಂಬರು ಬಿಲ್ಲೆಯ ಪೋಲೀಸು ರುಮಾಲು, ಪಶುಖುರಗಳನ್ನು ಜ್ಞಾಪಕಕ್ಕೆ ತರುವಂತೆ ಸದ್ದು ಮಾಡುವ ಬೂಟ್ಸು, ಬೆಲ್ಟಿಗೆ ಸಿಕ್ಕಿಸಿಕೊಂಡಿರುವ ದೊಣ್ಣೆ – ಇವುಗಳಿಂದಲೂ ಮತ್ತು ಅವರವರ ಅನಾಗರಿಕ ಕ್ರೂರಮುಖಭಾವಗಳಿಂದಲೂ ಹಳ್ಳಿಗರಿಗೆ ಭೀಷಣವಾಗಿ ತೋರುತ್ತಿದ್ದ ಪೋಲೀಸಿನವರ ನಡುವೆ ಆ ಸೌಮ್ಯವೇಷದ ಡಾಕ್ಟರು, ಅಷ್ಟೇನೂ ಮನಮೋಹಿಸುವ ವ್ಯಕ್ತಿಯಲ್ಲದಿದ್ದರೂ, ರಾಕ್ಷಸರ ಮಧ್ಯೆ ದೇವತೆ ಯಂತೆಯೂ ಅಥವಾ—ಜೈಮಿನಿಭಾರತದ ಪರಿಚಯವಿದ್ದ ಸಿಂಗಪ್ಪಗೌಡರಿಗೆ— 'ಕಾಕಸಂಘಾತದೊಳಗಿರ್ದ ಕೋಗಿಲೆ'ಯಂತೆಯೂ ಕಂಡುಬಂದರು.

ಹೆಣಗಳಿಗೂ ಕೂಡ ಬೇಜಾರಾಗುವಷ್ಟರ ಮಟ್ಟಿಗೆ ದೀರ್ಘವಾಗಿತ್ತು ಆ ಮಾಜರು! ವಿಚಾರಣೆಗೆ ಒಳಪಟ್ಟವರಲ್ಲಿ ಕೆಲವರಿಗಂತೂ ತಾವು ಹೆಣಗಳಾಗಿದ್ದರೇ ಲೇಸಾಗಿತ್ತು ಎಂದು ಕರುಬುವಷ್ಟರಮಟ್ಟಿಗಾಯಿತು. ಅಂತೂ ಸ್ವಲ್ಪ ಹೆಚ್ಚುಕಡಿಮೆ ಪೋಲೀಸಿನವರಂತೆಯೆ ಅಂತಃಕರಣವಿದ್ದುದರಿಂದ ಚಂದ್ರಯ್ಯ ಗೌಡರು ಇನಿಸ್ಪೆಕ್ಟರ ಅಂತರಂಗವನ್ನು ಚೆನ್ನಾಗಿ ತಿಳಿದು, ಅಂತರಂಗವಾಗಿ ಅವರನ್ನು ಸಂತೃಪ್ತಿಗೊಳಿಸಿ 'ಕೇಸು ಮೈಮೇಲೆ ಬರದಂತೆ ನಿಬಾಯಿಸಿದರು.'

ಆ ದಿನ ಮುತ್ತಳ್ಳಿಯಲ್ಲಿ ಪೋಲೀಸಿನವರು 'ಬಕ್ರೀದ್' ಮಾಡಿಬಿಟ್ಟರು! ಅವರು ಕೇಳಿದಷ್ಟು ಕೋಳಿಗಳು: ಅದರಲ್ಲಿಯೂ ಮೊಟ್ಟೆಯಿಡುವ ಹೇಂಟೆಗಳಂತೆ! ಗೋಧಿ, ತುಪ್ಪ, ಹಾಲು, ಸಕ್ಕರೆ—ಇತ್ಯಾದಿ ಅಡುಗೆಯ 'ಸಾಹಿತ್ಯ' ಕಾಮಧೇನು ಕಲ್ಪವೃಕ್ಷಗಳೂ ನಾಚುವಂತೆ ಸರಬರಾಯಿ ಆಯಿತು. ಸತ್ತವರು ಶಾಮಯ್ಯಗೌಡರ ಸ್ವಂತ ಜೀತದಾಳುಗಳಾಗಿದ್ದುದರಿಂದಲೂ, ಶಾಮಯ್ಯ ಗೌಡರು ನಾಲ್ಕು ಜನಕ್ಕೆ ಬೇಕಾಗಿದ್ದವರಾಗಿದ್ದುದರಿಂದಲೂ, ಕೋಟಲೆ ಮಾಡುವ ತಂಟೆಯ ಆಸಾಮಿಗಳನ್ನೂ ಮಾಜರಿಗೇ ಉಪಾಯವಾಗಿ ಸೇರಿಸಿಬಿಟ್ಟಿದ್ದುದರಿಂದಲೂ ಯಾರೂ ತಳ್ಳಿ ಅರ್ಜಿ ಗಿಳ್ಳಿ ಅರ್ಜಿಗಳನ್ನು ಹಾಕಿ ಕೆಸರೆಬ್ಬಿಸುವ ಉದ್ಯಮಕ್ಕೆ ಹೋಗಲಿಲ್ಲ.

ವಿಶೇಷ ಕಾರಣಗಳೊದಗಿದ್ದರಿಂದ ಮರುದಿಬ್ಬಣವೆ—ಮದುಮಕ್ಕಳು ಹಿಂದೆ ಮುಂದೆ ಬಂದು ಬಂದುಹೋಗುವುದು—ಮೊದಲಾದ ಪದ್ಧತಿಗಳೊಂದೂ ನಡೆಯಲಿಲ್ಲ. ಮದುಮಗನಾಗಿದ್ದ ರಾಮಯ್ಯನಿಗೆ ವಿವಾಹೋತ್ಸವದಲ್ಲಿ ನಡೆದ ಅನಾಹುತಗಳಿಗೂ ಅವಮಾನ ಕಷ್ಟ ಸಂಕಟಗಳಿಗೂ ತಾನೇ ಕೇಂದ್ರವೂ ಮುಖ್ಯ ಕಾರಣವೂ ಆಗಿದ್ದಂತೆ ತೋರಿ ಮಹಾ ಖಿನ್ನನಾದನು. ಇಬ್ಬರು ಜೀತದಾಳುಗಳ ಕೊಲೆಗೆ ಮಾತ್ರವಲ್ಲದೆ, ಪೋಲೀಸು ಗೀಲೀಸಿನವರಿಗೆ ಅವೇದ್ಯವಾದ ರೀತಿಯಲ್ಲಿ ಮತ್ತೊಂದು ಬಾಳ್ಗೊಲೆಗೂ ತಾನು ಕಾರಣವಾಗುತ್ತಿದ್ದಂತೆ ಅನುಭವವಾಯಿತು. ಮರುದಿನವೇ ಕಾನೂರಿಗೆ ಹಿಂತಿರುಗಿದವನು ಮುಂದೇನು ಮಾಡಬೇಕೆಂದು ಆಲೋಚಿಸತೊಡಗಿದನು.

ರಾಮಯ್ಯನ ಕಳ್ಳಮನಸ್ಸು ಮಾಡುತ್ತಿದ್ದ ಪ್ರಯತ್ನ ತಪ್ಪಿಸಿಕೊಳ್ಳುವುದಕ್ಕಾಗಿದ್ದಿತೇ ಹೊರತು ತಿದ್ದಿಕೊಳ್ಳುವುದಕ್ಕಾಗಿರಲಿಲ್ಲ. ಧಾರೆಯ ಮಂಟಪದಲ್ಲಿ ಉದ್ವೇಗದ ಜ್ವಾಲೆಗೆ ಸಿಕ್ಕಿದ್ದಾಗ, ಆಲೋಚನೆಗೆ ಸ್ವಲ್ಪವೂ ಅವಕಾಶವಿಲ್ಲದಿದ್ದಾಗ, ಅವನ ಹೃದಯ ಸ್ವಾಭಾವಿಕವಾಗಿಯೆ ಬಹುಕಾಲದಿಂದಲೂ ಬೆಸೆದಿದ್ದ ನಿಗೂಢ ಬಾಂಧವ್ಯದ ಮಹಿಮೆಯಿಂದ ಹೂವಯ್ಯನನ್ನು ನೆನೆದಿದ್ದಿತು: ಹೂವಯ್ಯನೊಡನೆ ತನ್ನ ಅಪರಾಧ ಮತ್ತು ದುರಾಲೋಚನೆಗಳನ್ನೆಲ್ಲ ಹೇಳಿ ತಪ್ಪನ್ನೊಪ್ಪಿ

ಕೊಂಡು, ಸೀತೆಯ ಕಾಗದವನ್ನೂ ಹೂವಯ್ಯನಿಗೆ ಕೊಟ್ಟು, ತಾನು ಆಕೆಗೆ ಮಾಂಗಲ್ಯಸೂತ್ರವನ್ನು ಕಟ್ಟದಿದ್ದ ವಿಷಯವನ್ನೂ ನಿರ್ವಂಚನೆಯಿಂದ ಧೈರ್ಯವಾಗಿ ಸಾರಿಹೇಳಿ, ತಂದೆಯ ಇಚ್ಛೆಗೆ ವಿರುದ್ಧವಾದರೂ ಚಿಂತೆಯಿಲ್ಲ, ಸೀತೆಯನ್ನು ಅಂಧಕಾರದಿಂದ ಪಾರುಗಾಣಿಸಿ, ತನ್ನ ಆತ್ಮವನ್ನು ರಕ್ಷಿಸಿಕೊಳ್ಳಬೇಕೆಂದು ಸನ್ಮನಸ್ಸು ಮಾಡಿದ್ದನು. ಆದರೆ ಮದುವೆ ಮುಗಿದು ಮನೆಗೆ ಬಂದು ಆಲೋಚನೆಗೆ ಪ್ರಾರಂಭ ಮಾಡಿದ ಮೇಲೆ ರಾಮಯ್ಯನ ಬುದ್ಧಿ ಅಡ್ಡದಾರಿ ಹಿಡಿಯಿತು. ಬೆಂಕಿಯ ಹೊಳೆಯನ್ನು ದಾಟಿಬಂದ ಅವನ ಮನಸ್ಸು ಇನಿತು ನೆಮ್ಮದಿಯಾಗಿ "ಕಪ್ಪೆಯನ್ನು ಹೇಗೋ ನುಂಗಿಬಿಟ್ಟದ್ದಂತೂ ಆಯಿತು. ನುಂಗುತ್ತಿದ್ದಾಗ ಕಪ್ಪೆ ಗಂಟಲಲ್ಲಿ ಸಿಕ್ಕಿ 'ಅಹಿಂಸೆಯೇ ಪರಮಧರ್ಮ' ಎಂದು ಅನ್ನಿಸಿತ್ತು. ಇನ್ನು ಕಕ್ಕುವುದೂ ಕಷ್ಟದ ವಿಷಯವೆ ಆದ್ದರಿಂದ ಅರಗಿಸಿಕೊಳ್ಳಲು ಪ್ರಯತ್ನಿಸುವುದೇ ಲೇಸು" ಎಂದು ಹೇಳಿಕೊಳ್ಳುವ ಹಾವಿನಂತಾಯಿತು. ಸೀತೆಯ ಪ್ರೇಮಕ್ಕಿಂತಲೂ ಹೆಚ್ಚಾಗಿ ಸೀತೆಯೆ ಬೇಕಾಗಿದ್ದ ಅವನು ಪ್ರಾಣ ಸಹಿತವಲ್ಲದಿದ್ದರೆ ಪ್ರಾಣರಹಿತವಾಗಿಯಾದರೂ ನವಿಲು ಸಿಕ್ಕಲಿ ಎನ್ನುವ ಬೇಡನಂತಾದನು. ಮೊದಲನೆಯದರಿಂದ ಲಾಭವಾದರೂ ಎರಡನೆಯದರಿಂದ ನಷ್ಟವಿಲ್ಲವಷ್ಟೆ? ಸೌಂದರ್ಯದ ವಸ್ತುವಾಗದಿದ್ದರೆ ಆಹಾರಕ್ಕಾದರೂ ಒದಗುತ್ತದೆಯಲ್ಲವೆ? ಸೀತೆಯ ಪರವಾಗಿ ರಾಮಯ್ಯನಲ್ಲಿದ್ದ ಭಾವಕ್ಕೆ 'ಎದೆಯ ಒಲುಮೆ' ಎನ್ನುವುದಕ್ಕಿಂತಲೂ 'ಮೆಯ್ಯ ಹಸಿವೆ' ಎಂದು ಹೆಸರಿಡಬಹುದಾಗಿತ್ತು. ಸೀತೆ ಮನದನ್ನಳಾಗಿರದಿದ್ದರೂ ಚಿಂತೆಯಿಲ್ಲ, ಇಂದ್ರಿಯ ಕ್ಷುಧೆಗೆ ಮೃಷ್ಟಾನ್ನವಾಗುತ್ತಾಳಷ್ಟೆ? ಹೊಳೆಯಲ್ಲಿ ಕೊಚ್ಚಿಕೊಂಡುಹೋಗುವವನು ತನ್ನ ಜೀವ ಸಂರಕ್ಷಣೆಗಾಗಿ, ಬದುಕಿಸುವ ಬೆಂಡುಮರವೆಂದು ಭಾವಿಸಿ, ತನ್ನನ್ನು ತಿನ್ನಲು ನುಗ್ಗಿಬರುವ ಮೊಸಳೆಯನ್ನೂ ಬಲವಾಗಿ ಅಪ್ಪಿಕೊಳ್ಳುವಂತೆ ರಾಮಯ್ಯ ತನ್ನ ಆಲೋಚನೆಗಳನ್ನು ಬಿಗಿಯಾಗಿ ತಬ್ಬಿಕೊಂಡನು. ತನ್ನ ಅಂತಸ್ಸಾಕ್ಷಿ ಎಲ್ಲಿಯಾದರೂ ಹೆಡೆಯೆತ್ತಿ ಎದೆಯಲ್ಲಿ ವಿಷವನ್ನು ಕಾರಿಬಿಟ್ಟೀತು ಎಂದುಕೊಂಡು ಅದನ್ನೂ ಮರ್ದಿಸಿ ಮಲಗಿಸಲು, ಆತ್ಮವಂಚನೆಯ ಉಪಾಯಗಳನ್ನೂ ಕೈಗೊಂಡನು. ಹಿಂದೆ ತಾನು ಸ್ವಲ್ಪವೂ ನಂಬದಿದ್ದ ವ್ರತ, ಪೂಜೆ, ಬಲಿ, ಹರಕೆ, ದೇವರು ಕೇಳಿಸುವುದು, ಹಣ್ಣುಕಾಯಿ ಹಾಕಿಸುವುದು, ಮಂತ್ರ ರಕ್ಷೆ ಕಟ್ಟಿಕೊಳ್ಳುವುದು, ದಾನ ಮಾಡುವುದು, ದಕ್ಷಿಣೆ ಕೊಡುವುದು ಮೊದಲಾದುವುಗಳ ಮಹಾಘಂಟಾನಾದದಿಂದ ಆತ್ಮದ ಅಂತರ್ವಾಣಿಯ ಕಿರುದನಿಯನ್ನು ಮುಚ್ಚಿ ಮುಳುಗಿಸಿ ಇಲ್ಲಗೈಯಲು ಹವಣಿಕೆ ಹೂಡಿದನು. ಮೊತ್ತಮೊದಲು, ಪೀಠಿಕೆಯ ರೂಪವಾಗಿ, ಆ ದಿನವೇ, ವೆಂಕಪ್ಪಯ್ಯನವರು ಮಂತ್ರಿಸಿ ಕೊಟ್ಟ ತಾಮ್ರದ ತಾಯಿತಿ

ಯೊಂದನ್ನು ತೋಳಿಗೆ ಕಟ್ಟಿಕೊಂಡನು. ಮತಾಂತರ ಹೊಂದಿದವರ ಮತ ಭ್ರಾಂತಿ ಅತ್ಯುಗ್ರವಾಗುತ್ತದೆಯಲ್ಲವೆ? ಸ್ವಪ್ರಯೋಜನವೂ ಅದಕ್ಕೆ ನೆರವಾದರೆ ಮಿತಿಯೇ ಇರುವುದಿಲ್ಲ!

ರಾಮಯ್ಯನ ಮನಸ್ಸು ತನ್ನ ಅಂತಸ್ಸಾಕ್ಷಿಗೆ ಕಳವಳವನ್ನುಂಟುಮಾಡುವ ಜಟಿಲ ಸನ್ನಿವೇಶದಿಂದ ಪಾರಾಗಲು ಹೇಗೆ ಒಂದು, ಹುಸಿಯಾದರೂ ಚಿಂತೆ ಯಿಲ್ಲ, ಹೊಸ ಹಾದಿಯನ್ನು ಕಂಡುಹಿಡಿದಿತ್ತೊ ಹಾಗೆಯೆ ಸೀತೆಯ ಮನಸ್ಸೂ ತನಗೆ ಅನಿಷ್ಟಕರವಾದ ಮದುವೆಯ ಪ್ರಕರಣದಿಂದ ಪಾರಾಗಲೋಸ್ಕರ ಅದರ ಮೇಲೆ ವಿಸ್ಮೃತಿಯ ಪರದೆಯನ್ನು ಎಳೆದುಬಿಟ್ಟಿತ್ತು. ಆ ಪರದೆ ಸಮಯ ಸಂದರ್ಭಗಳಿಗನುಸಾರವಾಗಿ ವಿವಿಧ ವೇಷಗಳನ್ನು ಧರಿಸುತ್ತಿತ್ತು. ಒಂದು ಸಾರಿ ಕೃಷ್ಣಪ್ಪನ ದೆಯ್ಯ ಮೈಮೇಲೆ ಬಂದಂತೆ; ಮತ್ತೊಂದುಸಾರಿ ಪ್ರಜ್ಞೆ ತಪ್ಪಿದಂತೆ; ಇನ್ನೊಂದುಸಾರಿ ಮೂರ್ಛೆರೋಗದಂತೆ; ಇತ್ಯಾದಿ. ಆದ್ದರಿಂದ ಆಕೆಯ ಜಾಗ್ರಚ್ಚಿತ್ತದಲ್ಲಿ ಮದುವೆಯ ಅರಿವು ಒಂದಿನಿತೂ ಇರಲಿಲ್ಲ. ಆಕೆ ಚೆನ್ನಾಗಿ ಮೈತಿಳಿದ ಸಮಯಗಳಲ್ಲಿ ತನ್ನ ಮೈಮೇಲೆಯೂ ಸುತ್ತಣ ಸನ್ನಿವೇಶ ಗಳಲ್ಲಿಯೂ ಆದ ಮತ್ತು ಆಗುತ್ತಲಿದ್ದ ಘಟನೆಗಳನ್ನು ತನ್ನ ಜಾಗ್ರಚ್ಚಿತ್ತಕ್ಕೆ ವಿರೋಧವಾಗದ ರೀತಿಯಲ್ಲಿ ವಿವರಿಸುತ್ತಿದ್ದಳು. ಯಾರಾದರೂ ತಿದ್ದಲೆಳಸಿದರೆ ರೇಗುತ್ತಿದ್ದಳು; ಬಾಯಿಗೆ ಬಂದಂತೆ ಬಯ್ಯುತ್ತಿದ್ದಳು; ಕೆಲವುಸಾರಿ ಮೈಮೇಲೆ ಬೀಳಲೂ ಹೋಗುತ್ತಿದ್ದಳು. ಜನರಿಗೆ ಆಗ ಅವಳ ಹುಚ್ಚು ಹೆಚ್ಚಾಗಿ ಕೆರಳಿದಂತೆ ತೋರುತ್ತಿತ್ತು.

ಮದುವೆ ನಡೆದ ಮಾರನೆಯ ದಿನ ಮುತ್ತಳ್ಳಿಯಲ್ಲಿ ಪೋಲೀಸಿನವರೂ ಡಾಕ್ಟರೂ ಬಂದು ಮಾಜರು ಮೊದಲಾದ ಕಾರ್ಯಗಳಲ್ಲಿ ತೊಡಗಿದ್ದಾಗ, ಚಂದ್ರಯ್ಯಗೌಡರು ಸಿಂಗಪ್ಪ ಗೌಡರಾದಿಯಾಗಿ ರಾಮಯ್ಯ, ಚಿನ್ನಯ್ಯ, ಸೇರೆ ಗಾರರು, ವಾಸು, ಎಲ್ಲರೂ ಅವರುಗಳ ಸೇವೆ ಶುಶ್ರೂಷೆಗಳಲ್ಲಿ ತೊಡಗಿದ್ದಾಗ, ಗೌರಮ್ಮನವರೂ ಮನೆಯಲ್ಲಿ ಉಳಿದಿದ್ದ ಇತರ ಸ್ತ್ರೀಯರೂ ಕಿಟಕಿಗಳಲ್ಲಿಯೂ ಬಾಗಿಲು ಸಂದಿಗಳಲ್ಲಿಯೂ ಕಿಕ್ಕಿರಿದು ನೆರೆದು ಭಯೋದ್ವಿಗ್ನರಾಗಿ ನೋಡುತ್ತಿ ದ್ದಾಗ, ಸೀತೆಯೊಬ್ಬಳೇ ಕೊಟಡಿಯಲ್ಲಿ ಕುಳಿತು ಲಕ್ಷ್ಮಿಯೊಡನೆ ಮಾತಾಡುತ್ತಿ ದ್ದಳು. ಆ ಮಾತಿನ ವಿಷಯವಿದು: ಸೀತೆ ಪ್ರಜ್ಞೆ ತಿಳಿದು ನೋಡುತ್ತಾಳೆ, ತಾನು ಮದುಮಗಳಂತೆ ಅಲಂಕೃತಳಾಗಿದ್ದಾಳೆ! ಅದನ್ನು ಹೇಗಾದರೂ ವಿವರಿಸಿದ ಹೊರತೂ ಆಕೆಯ ಮನಸ್ಸಿಗೆ ನೆಮ್ಮದಿಯೆಲ್ಲಿ? ತಾನು ಮೇಳಿಗೆ ತೇರು ನೋಡಲು ಹೋಗಿದ್ದಂತೆಯೂ, ಅದಕ್ಕಾಗಿ ಶೃಂಗಾರ ಮಾಡಿಕೊಂಡಿದ್ದಂತೆಯೂ ತಂಗಿಗೆ ಉಪಪತ್ತಿ ಹೇಳುತ್ತಿದ್ದಳು.

ಅಕ್ಕಯ್ಯನ ಮಾತು ಕೇಳಿ ಲಕ್ಷ್ಮಿಯ ಮನಸ್ಸಿಗೆ ಮೊದಲು ಸ್ವಲ್ಪ ಗಡಿಬಿಡಿಯಾಗಿ "ಹೌದು ಕಣೇ! ನಿನ್ನೆ ರಾತ್ರಿ ನಿಂಗೆ ಮದುವೆ ಆತು!" ಎಂದು ಒಂದೇ ಉಸಿರಿನಲ್ಲಿ ಅಕ್ಕನ ಮಾತನ್ನೂ ಸಮರ್ಥಿಸಿ, ತನ್ನ ತಿದ್ದುಪಡಿಯನ್ನೂ ಸೂಚಿಸಿದಳು.

ಸೀತೆ ನಕ್ಕು "ಮದುವೆ ಅಲ್ಲ ಕಣೇ. ತೇರಿಗೆ ಹೋಗಿದ್ದೆ! ಥೂ, ನಿನ್ನ! ನಾ ಹೇಳಿದ್ದು ನಿಂಗೆ ಗೊತ್ತಾಗುವುದೇ ಇಲ್ಲ!" ಎಂದು ತಂಗಿಯ ಕಡೆಗೆ ಮುದ್ದಾಗಿ ನೋಡಿದಳು.

ಲಕ್ಷ್ಮಿ ಸ್ವಲ್ಪವೂ ಹಿಂದುಮುಂದು ನೋಡದೆ "ಹ್ಞು! ನೀ ಹೇಳಿದ್ದೇ ನಾ ಹೇಳಿದ್ದೂ!" ಎಂದಳು.

ಬುದ್ಧಿವಂತರು ಅರಿಯಲಾರದ ಯಾವುದೋ ತರ್ಕದ ಸಹಾಯದಿಂದ ಆ ವಿಚಾರದಲ್ಲಿ ಇಬ್ಬರೂ ತೃಪ್ತರಾದರು.

ಲಕ್ಷ್ಮಿ ಮತ್ತೆ "ಅಪ್ಪಯ್ಯಗೆ ಮೈಯೆಲ್ಲ ಬೆಂಕಿಬಿದ್ದು ಸುಟ್ಟುಹೋಗ್ಯಾದೆ" ಎಂದು ಮುಖದಲ್ಲಿ ವ್ಯಸನದ ಡುಬ್ಬವನ್ನೇ ಪ್ರದರ್ಶಿಸಿ ಹೇಳಿದಳು.

ಸೀತೆ "ಹೌದು! ನಾವೆಲ್ಲ ತೇರಿಗೆ ಹೋಗಿದ್ದಾಗ ಅವರೆಲ್ಲ ಸೇರಿಕೊಂಡು ಚೆನ್ನಾಗಿ ಹೊಡೆದುಬಿಟ್ಟರು. ಅಪ್ಪಯ್ಯ ಸತ್ತುಹೋಗ್ತಿದ್ರು, ಹೂವಯ್ಯಬಾವ ಬಂದು ಬಿಡಿಸದಿದ್ದರೆ!" ಎಂದಳು.

'ಅವರೆಲ್ಲ ಸೇರಿಕೊಂಡು ಚೆನ್ನಾಗಿ ಹೊಡೆದುಬಿಟ್ಟರು!' ಎನ್ನುವಾಗ ಸೀತೆಯ ಮನಸ್ಸು ತನಗಾಗದವರನ್ನೆಲ್ಲ ವೈರಿಗಳನ್ನಾಗಿ ಗುಂಪುಕಟ್ಟಿತ್ತು.

ಜಾಗ್ರಚ್ಚಿತ್ತದ ತರ್ಕವೊಂದೇ ತರ್ಕವಲ್ಲವಷ್ಟೆ? ತರ್ಕವೂ ಬಹುರೂಪಿ, ಅಸಂಖ್ಯ ವೇಷಿ!

ಸೀತೆ ತನಗೆ ಸ್ವಸ್ಥವಿಲ್ಲದಿದ್ದರೂ ತಂದೆಯ ಶುಶ್ರೂಷೆ ಮಾಡಬೇಕೆಂದು ಹಟಹಿಡಿದು, ಅದನ್ನು ಕೈಕೊಂಡೇಬಿಟ್ಟಳು. ರಗಳೆ ಕಡಮೆಯಾದರೆ ಸಾಕೆಂದು ಎಲ್ಲರೂ ಸುಮ್ಮನಾದರು. ತನಗಾಗಿದ್ದ ಅಪಾಯದ ಅಗಾಧತೆ ಆಕೆಯಲ್ಲಿ ಚೆನ್ನಾಗಿ ಸ್ಫುರಿಸಿತ್ತು. ಆದರೆ ಅದರ ಉಪಪತ್ತಿ ಮಾತ್ರ ಆಕೆಯ ಇಚ್ಛೆಗನುಸಾರವಾಗಿ ಬೇರೆಯಾಗಿತ್ತು. ಅಷ್ಟೇ ಅಲ್ಲ; ಶ್ಯಾಮಯ್ಯಗೌಡರಿದ್ದ ಕೊಠಡಿಯಲ್ಲಿ ಚಂದ್ರಯ್ಯಗೌಡರಾಗಲಿ, ರಾಮಯ್ಯನಾಗಲಿ, ಸೀತೆಗೊಲ್ಲದ ಇತರರು ಯಾರೇ ಆಗಲಿ ಕುಳಿತಿದ್ದರೆ ಅವಳು ಅವರನ್ನು ಸ್ವಲ್ಪವೂ ಗಮನಿಸುವಂತೆ ತೋರುತ್ತಿರಲಿಲ್ಲ. ನವವಧುವಿಗಿರಬೇಕಾಗಿದ್ದ ಲಜ್ಜೆಯ ಸುಳಿವೂ ಇರಲಿಲ್ಲ. ಅದನ್ನೆಲ್ಲ ಕಂಡು ಚಂದ್ರಯ್ಯಗೌಡರಿಗೆ ಸ್ವಲ್ಪ ಹೊಟ್ಟೆಯುರಿಯಾಯಿತು. ಆದರೆ ಸನ್ನಿವೇಶ ಹುಕುಂ ಚಲಾಯಿಸುವುದಕ್ಕೆ ಸರಿಯಾಗಿರಲಿಲ್ಲವಾಗಿ ಸುಮ್ಮನಾದರು.

ಕೆಲ ದಿನಗಳಮೇಲೆ ಒಂದುಸಾರಿ ತಮ್ಮ ಸೊಸೆ ತಮ್ಮನ್ನು ಕಡೆಗಣ್ಣಿನಿಂದಲೂ

ಲೆಕ್ಕಿಸದೆ ತನ್ನ ತಂದೆಗೆ ಅನ್ನಪಾನಗಳನ್ನು ಕೊಟ್ಟು ದಿಟ್ಟತನದಿಂದ ಹೋಗುತ್ತಿರಲು, ಮುತ್ತಳ್ಳಿ ಬಾವನನ್ನು ಮಾತಾಡಿಸಿಕೊಂಡು ಹೋಗಲು ಬಂದಿದ್ದ ಚಂದ್ರಯ್ಯ ಗೌಡರು ಬೇಕಾಗಿ, 'ಸೀತೆ, ನಂಗೊಂದು ಲೋಟಾ ತಣ್ಣೀರು ತಗೊಂಡು ಬಾ, ಕುಡಿಯಕ್ಕೆ!' ಎಂದರು. ಆ ಧ್ವನಿಯನ್ನು ಕೇಳಿದ ಕೂಡಲೆ, ಬಾಲವನ್ನು ಮೆಟ್ಟಿದ ಸರ್ಪಿಣಿ ಹೆಡೆಯೆತ್ತಿ ತಿರುಗಿ ನಿಲ್ಲುವಂತೆ, ಸೀತೆ ತಲೆಯನ್ನು ಮಾತ್ರ ತಿರುಗಿಸಿ, ದುರುದುರನೆ ನೋಡಿ, ತಿರಸ್ಕಾರಪೂರ್ವಕವಾಗಿ ಅಲ್ಲಿಂದ ಹೊರಟು ಹೋದಳು. ನೀರನ್ನೂ ತರಲಿಲ್ಲ. ಚಂದ್ರಯ್ಯಗೌಡರು ನಾಲಗೆ ಕಚ್ಚಿಕೊಂಡು 'ಮನೆಗೆ ಬಾ ನೀನು. ದೆಯ್ಯ ಬಿಡಿಸ್ತೀನಿ.' ಎಂದು ಮನಸ್ಸಿನಲ್ಲಿಯೆ ಬುಸು ಗುಟ್ಟಿದರು.

ಮದುವೆ ಪೂರೈಸಿದ ಒಂದು ವಾರದೊಳಗಾಗಿ ಮತ್ತೊಂದು ಗಾಳಿಯ ಸುದ್ದಿಯೂ ಹಬ್ಬತೊಡಗಿತು: ಹುಲ್ಲುಬಣಬೆಗಳಿಗೆ ಬೆಂಕಿ ಬಿದ್ದುದಕ್ಕೆ ಕಾರಣ ಬಿರುಸು ಬಾಣಗಳಲ್ಲ, ಹೂವಯ್ಯ ಮತ್ತು ಅವನ ಪಕ್ಷದವರು ಎಂದು. ಅದಕ್ಕೆ ಮೂಲವೂ ಆಧಾರವೂ ಚಂದ್ರಯ್ಯಗೌಡರಿಗೆ ಮೊದಲು ದೊರಕಿದುದು ಸೇರೆಗಾರ ರಿಂದ. ಧಾರೆ ಪ್ರಾರಂಭವಾಗುವುದಕ್ಕೆ ಸ್ವಲ್ಪ ಮೊದಲು ಸೋಮನು ಸಿಂಗಪ್ಪ ಗೌಡರ ಹತ್ತಿರ ಪಿಸುಮಾತಾಡಿಕೊಂಡು ಹೋಗಿದ್ದನ್ನು ಸೇರೆಗಾರ ರಂಗಪ್ಪಸೆಟ್ಟರು ಅವಲೋಕಿಸಿದ್ದರು. ಆದರೆ ಆಗ ಅವರು ಅದಕ್ಕಷ್ಟು ಪ್ರಾಮುಖ್ಯತೆ ಕೊಟ್ಟಿರ ಲಿಲ್ಲ. ಹೋತದ ಕಳುವಿನ ಪ್ರಯತ್ನ ನಡೆದಂದಿನಿಂದ ಸೇರೆಗಾರರಿಗೆ ಸೋಮ ನಲ್ಲಿ ಅನೇಕ ಕಾರಣಗಳಿಂದ ದ್ವೇಷ ಹೆಚ್ಚುತ್ತಿತ್ತು. ಮದುವೆಯ ದಿನವಂತೂ ಸೋಮ 'ಸೋಮಯ್ಯ' ಎಂದು ಕರೆಯಿಸಿಕೊಂಡು ರಂಗಪ್ಪಸೆಟ್ಟರಿಗೆ ಸರಿ ಸಮಾನವಾದ ಉಡುಪು ವೈಭವಗಳಿಂದ ಮೆರೆಯುತ್ತಿದ್ದುದು ಅವರ ಹೊಟ್ಟೆ ಕಿಚ್ಚಿಗೆ ಕಾರಣವಾಗಿತ್ತು. ಒಂದೆರಡುಸಾರಿ, ಸೋಮನನ್ನು 'ಸೋಮಯ್ಯ' ಎಂದು ಕರೆದವರಿಗೆ "ಪೊಳ್ಳುಮುಂಡೇದು! ಅದನ್ನೇಕೆ 'ಸೋಮಯ್ಯ' ಅಂತಾ ಕರೆಯುತ್ತೀರಿ? 'ಸೋಮ' ಅಂತಾ ಕೂಗಿದರೆ ಸಾಕು! ಈ ಕನ್ನಡಜಿಲ್ಲೆ ಸೆಟ್ಟರು ಮಕ್ಕಳಿಗೆ ಗಟ್ಟದಮೇಲೆ ಬಂದ ಕೂಡಲೆ ತಲೆಗೆ ಕೋಡು ಮೂಡುತ್ತದೆ!" ಎಂದು, ತಮಗೂ ಅನ್ವಯಿಸುತ್ತದೆ ಎಂಬುದನ್ನೂ ಮರೆತು, ಬುದ್ಧಿವಾದ ಹೇಳಿದ್ದರು. ಆದ್ದರಿಂದಲೇ ಸೋಮ ಎಲ್ಲಿ ಸುಳಿದರೂ ಸೇರೆಗಾರರು ಕಣ್ಣು ಕೆಂಪಾಗಿ ಅವನನ್ನು ನೋಡುತ್ತಿದ್ದುದು. ಹಾಗೆಯೆ ಅವನು ಸಿಂಗಪ್ಪಗೌಡ ರೊಡನೆ ಗುಟ್ಟು ಮಾತಾಡಿಕೊಂಡು ಹೋದುದನ್ನೂ ನೋಡಿದ್ದರು. ಒಂದೆರಡು ದಿನಗಳ ತರುವಾಯ ಆ ದೃಶ್ಯ ಪ್ರಯೋಜನಕಾರಿಯಾಗಿಯೂ ಅರ್ಥಗರ್ಭಿತ ವಾಗಿಯೂ ತೋರಿ, ರಂಗಪ್ಪಸೆಟ್ಟರು ಚಂದ್ರಯ್ಯಗೌಡರ ಕಿವಿಯಲ್ಲಿ ಅದನ್ನು

ಊದಿದರು. ಅವರು ಸಿಂಗಪ್ಪಗೌಡರು ತಮ್ಮ ಮೇಲೆ 'ಕುರಿ ಚೋರಿ'ಯ ಆಪಾದನೆಯನ್ನು ಹಬ್ಬಿಸಿದುದಕ್ಕೆ ಇಮ್ಮಡಿಯಾಗಿ ಅವರ ಮೇಲೆ ಬೆಂಕಿ ಹಾಕಿದ ಆಪಾದನೆಯನ್ನು ಹಬ್ಬಿಸಿದರು. ಅನ್ಯಾಯಕ್ಕೆ ಪ್ರತಿಯಾಗಿ ಕಾರ್ಯತಃ ಅನ್ಯಾಯ ಮಾಡುತ್ತೇವೆ ಎಂದೂ ಅವರಿವರ ಹತ್ತಿರ ಮೀಸೆ ತಿರುಗಿಸಿ ಮಾತಾಡತೊಡಗಿದರು.

ಮುತ್ತಳ್ಳಿಯವರೊಬ್ಬರೂ — ಶಾಮಯ್ಯಗೌಡರಾಗಲಿ ಚಿನ್ನಯ್ಯನಾಗಲಿ ಗೌರಮ್ಮನವರಾಗಲಿ — ಸೇರೆಗಾರರ ಮಾತನ್ನು ಚಾಡಿಯೆಂದು ತಿಳಿದು, ನಂಬಲಿಲ್ಲ. ಆದರೆ ಚಂದ್ರಯ್ಯಗೌಡರು ವಿಷಯವನ್ನು ಅಲ್ಲಿಗೆ ಬಿಡದೆ ಆಪಾದಿತರೆಲ್ಲರೂ ದೇವರೆದುರು ನಿಂತು, ಹೊತ್ತಿಸಿಟ್ಟ ತುಪ್ಪದ ದೀಪಗಳನ್ನು ಆರಿಸಿ, ತಾವು ತಪ್ಪಿತಸ್ಥರಲ್ಲವೆಂದು ಪ್ರಮಾಣಮಾಡಲಿ ಎಂದು ತೋಳು ತಟ್ಟಿ ಮೂದಲಿಸಿದರು.

ಅದಕ್ಕೆ ಪ್ರತಿಯಾಗಿ ಸಿಂಗಪ್ಪಗೌಡರು "ಕಾನೂರು ಗೌಡರು ತಮ್ಮ ಸೊಸೆಗೆ ತಮ್ಮ ಮಗನೇ ತಾಳಿ ಕಟ್ಟಿದ್ದಾನೆಂದು ಪ್ರಮಾಣ ಮಾಡಲಿ!" ಎಂದು ಮೂದಲಿಸಿದರು.

ಆ ರಹಸ್ಯ ಕೂಡ ಬಯಲಿಗೆ ಬಿದ್ದಿತ್ತು!

ಸೇರೆಗಾರರು ಸೋಮನು ಸಿಂಗಪ್ಪಗೌಡರೊಡನೆ ಪಿಸುಮಾತಾಡಿ ಹೋದುದನ್ನು ಕಂಡಿದ್ದಂತೆ ಧಾರೆಯ ಮಂಟಪದ ಬಳಿಯಿದ್ದ ಮಹಿಳೆಯರಲ್ಲಿ ಒಬ್ಬಿಬ್ಬರು ಮದುಮಗಳಿಗೆ ಜೋಯಿಸರೇ ತಾಳಿ ಕಟ್ಟಿದ್ದುದನ್ನೂ ಕಂಡುಕೊಂಡಿದ್ದರು. ಅದು ಮೊದಮೊದಲು ಹೆಂಗಸರೊಳಗೇ ಗುಸುಗುಸು ಹಬ್ಬಿತು. ತಮ್ಮ ಪತ್ನಿಯಿಂದ ಆ ವಿಷಯವನ್ನು ತಿಳಿದುಕೊಂಡ ಸಿಂಗಪ್ಪಗೌಡರಿಗೆ ವಜ್ರದ ಕುಲಾವಿಯನ್ನು ಧರಿಸಿದಂತಾಯ್ತು. ಚಂದ್ರಯ್ಯಗೌಡರೊಡನೆ ಹಣಾ ಹಣಿಗೆ ಸಿದ್ಧವಾಗಿ ಗುಟುರು ಹಾಕಿದರು. ಗೂಳಿ ಗುಟುರು ಹಾಕಿದರೆ ಗುಟ್ಟೆಲ್ಲಿ?

ಚಂದ್ರಯ್ಯಗೌಡರೇನೋ ಪ್ರಮಾಣ ಮಾಡಲು ಸಿದ್ಧರಾಗಿ ಸಿಂಗಪ್ಪಗೌಡರನ್ನೂ ಪ್ರಮಾಣಕ್ಕೆ ಕರೆದರು. ಆದರೆ ಒಂದು ಪಕ್ಷದಲ್ಲಿ ರಾಮಯ್ಯನೂ ಮತ್ತೊಂದು ಪಕ್ಷದಲ್ಲಿ ಸೋಮನೂ ಹೆದರಿ ಕಣ್ಣೀರು ಹಾಕತೊಡಗಿದರು.

ವೆಂಕಪ್ಪಯ್ಯಜೋಯಿಸರನ್ನು ಕೇಳಿದಾಗ ಅವರು "ಚಂದ್ರಯ್ಯ, ನಾನೆಲ್ಲ ನೋಡಿಕೊಳ್ಳುತ್ತೇನೆ; ನೀನು ಪ್ರಮಾಣಗಿಮಾಣಕ್ಕೆ ಒಂದಕ್ಕೂ ಹೋಗಬೇಡ" ಎಂದರು.

ಎರಡು ಪಕ್ಷದವರಲ್ಲಿ ಒಬ್ಬೊಬ್ಬರಿಗೂ ತಾವಿರುವುದು ಗಾಜಿನಮನೆಯಲ್ಲಿ ಎಂದು ಗೊತ್ತಾಗಿ ಕಲ್ಲೆಸೆಯುವುದನ್ನು ನಿಲ್ಲಿಸಿದರು. ಆದರೆ ಆಗಲೆ ಎಸೆದಿದ್ದ ಕಲ್ಲುಗಳಿಂದ ಆಗಬೇಕಾಗಿದ್ದ ಅನಾಹುತವೆಲ್ಲ ತುಸುಮಟ್ಟಿಗೆ ಆಗಿಯೆ ಹೋಗಿತ್ತು.

೬೧

## ಅಗ್ರಹಾರದ ದೇವಸ್ಥಾನದಲ್ಲಿ

ಚೈತ್ರಮಾಸ ಕಳೆದು ವೈಶಾಖಮಾಸ ಪ್ರಾರಂಭವಾಗಿ ಮೊದಲನೆಯ ವಾರವೂ ಮುಗಿದಿತ್ತು. ಒಂದೆರಡು ಮಳೆ ಹನಿಹಾಕಿದ್ದರೂ ಬೇಸಗೆಯ ಬಿಸಿಲಿನ ಬೇಗೆ ಸ್ವಲ್ಪವೂ ಕಡಮೆಯಾಗಿರಲಿಲ್ಲ. ಹಳ್ಳಿಗಳಲ್ಲೆಲ್ಲ "ಈ ವರ್ಷ ಕ್ಷಾಮ ಖಂಡಿತ!" ಎಂದು ಭವಿಷ್ಯತ್ತು ಹೇಳಲೂ ಪ್ರಾರಂಭಿಸಿದ್ದರು. ಪ್ರತಿವರ್ಷವೂ ಅದೇ ರೀತಿ ಭವಿಷ್ಯತ್ತು ಹೇಳುವುದು ಅವರಿಗೆ ವಾಡಿಕೆಯಾಗಿದ್ದುದರಿಂದ ಅವರಲ್ಲಿಯೆ ಯಾರೂ ಅದನ್ನು ನಿಜವೆಂದು ನಂಬಿ ಭೀತಿಗೊಳ್ಳುವ ಅವಿವೇಕಕ್ಕೆ ಹೋಗುತ್ತಿರಲಿಲ್ಲ. ಆ ಭವಿಷ್ಯತ್ತು ಮಳೆಯ ದೇವತೆಗೆ ಎಚ್ಚರಿಕೆ ಕೊಡುವುದಕ್ಕಾಗಿದ್ದಿತೇ ಹೊರತು ವಾಯುಗುಣದ ಲಕ್ಷಣಗಳನ್ನು ವೈಜ್ಞಾನಿಕವಾಗಿ ವರ್ಣಿಸುವುದಕ್ಕಾಗಿರಲಿಲ್ಲ.

ಒಂದೆರಡು ಹುಸಿಮಳೆ ಬಂದುಹೋಗಿ, ಭೂಮಿಯ ತೃಷೆ ಇರ್ಮಡಿಸಿದಂತೆ 'ಉರಿ' ಹೆಚ್ಚಿತ್ತು. ಕಾಡು ಬೆಟ್ಟಗಳೆಲ್ಲ ದಟ್ಟವಾದ ಅರಣ್ಯಗಳಿಂದ ಯಾವಾಗಲೂ ಹಸುರಾಗಿದ್ದರೂ ನೆಲದಲ್ಲಿ ಹುಲ್ಲುಮೇವು ಇಲ್ಲದೆ, ಕರೆಯದಿದ್ದ ಕಾಲ್ನಡೆಗಳ ಮೈಯಲ್ಲಿ ಪಕ್ಕೆಲುಬುಗಳ ಜೋಡನೆಯ ಆಕಾರ ಪ್ರತ್ಯಕ್ಷವಾಗತೊಡಗಿತ್ತು. ತೊರೆಗಳಲ್ಲಿ ನೀರು ಹರಿಯುವುದು ನಿಂತು, ತೊರೆಯ ಜೀವನವೆ ತುಂಡುಗಡಿದಂತಾಗಿ, ಅಲ್ಲಲ್ಲಿ ಕೆಲವು ಗುಂಡಿಗಳಲ್ಲಿ ಮಾತ್ರ ನೀರು ಆಶ್ರಯಗೊಂಡಿತ್ತು. ಜನರು ಸಣ್ಣಸಣ್ಣ ಗುಂಡಿಗಳಲ್ಲಿ 'ಹೊಂಡತೊಳಕಿ'ಯೂ, ದೊಡ್ಡ ಗುಂಡಿಗಳಿಗೆ 'ಕಡುಹಾಕಿ'ಯೂ (ಕೆಲವು ಮರಗಳ ಕಾಯಿ, ತೊಗಟೆ ಸೊಪ್ಪುಗಳನ್ನು ಜಜ್ಜಿ ನೀರಿಗೆ ಹಾಕಿ ಕದಡುತ್ತಾರೆ. ಆ ವಿಷದಿಂದ ಮೀನು ಸತ್ತು ತೇಲುತ್ತವೆ. ಅಂತಹ ಗುಂಡಿಗಳಲ್ಲಿ ನೀರೆಲ್ಲ ಕಗ್ಗಾಗಿರುತ್ತದೆ.) ಮೀನು ಹಿಡಿಯುತ್ತಿದ್ದುದರಿಂದ ದನಕರುಗಳಿಗೆ ನೀರೂ ಸುಲಭವಾಗಿ ಸಿಕ್ಕುತ್ತಿರಲಿಲ್ಲ. ಅವು ನೀರಿಗಾಗಿ ಗುಡ್ಡದ ನೆತ್ತಿಯ ಕೆರೆಗಳಿಗೆ ಹೋಗಬೇಕಾಗಿತ್ತು.

ಆದರೆ ಅಗ್ರಹಾರದ ಪಕ್ಕದಲ್ಲಿಯೆ ತುಂಗಾನದಿ ಹರಿಯುತ್ತಿದ್ದುದರಿಂದ ಅಲ್ಲಿಯ ಜನರಿಗಾಗಲಿ ಜಾನುವಾರುಗಳಿಗಾಗಲಿ ನೀರಿನ ತೊಂದರೆ ಇರಲಿಲ್ಲ. ನದಿಯ ದಡದಲ್ಲಿದ್ದ ದೇವಸ್ಥಾನದ ಮುಂದೆ, ನೀರು ಮುಟ್ಟುವವರೆಗೂ ಇಳಿದು ಹೋಗುತ್ತಿದ್ದ ಸೋಪಾನ ಪಂಕ್ತಿಗಳ ಪಕ್ಕದಲ್ಲಿಯೆ, ದನಕರುಗಳು ನೀರಿಗೆ ಇಳಿದೂ ಇಳಿದೂ, ಹೆದ್ದಾರಿಯಾಗಿಬಿಟ್ಟಿತ್ತು. ವೆಂಕಪ್ಪಯ್ಯಜೋಯಿಸರು ಬೇಲಿ ಗೀಲಿ

ಹಾಕಿ ಬಹಳ ಪ್ರಯತ್ನಪಟ್ಟಿದ್ದರೂ ಜಾನುವಾರುಗಳು ತಮ್ಮ 'ಮಾಮೂಲ'ನ್ನು ಬಿಟ್ಟುಕೊಟ್ಟಿರಲಿಲ್ಲ. ಕಟ್ಟಕಡೆಗೆ ಸೋತ ಜೋಯಿಸರು ಗೋದೇವತೆಗೆ ನೀರು ಕುಡಿಯದಂತೆ ತಡೆಗಟ್ಟಿ ಪಾಪ ಕಟ್ಟಿಕೊಳ್ಳುವುದೇತಕ್ಕೆ ಎಂದು ಸುಮ್ಮನಾಗಿ ಪುಣ್ಯ ಕಟ್ಟಿಕೊಂಡಿದ್ದರು.

ಆ ದಿನ ಶನಿವಾರ. ಬೆಳಗ್ಗೆ ಸುಮಾರು ಹತ್ತುಗಂಟೆಯ ಸಮಯದಲ್ಲಿ ಹಸು ಎತ್ತು ಕರು ಕೋಣ ಎಮ್ಮೆಗಳ ಹಿಂಡೊಂದು ಹೊಳೆಗಿಳಿಯಲೆಂದು ದೇವಸ್ಥಾನದ ಮುಂದೆ ಬಂದಿತು. 'ಬಂದಿತು' ಎಂದರೂ ಸರಿಹೋಗುತ್ತದೆ; 'ಹೋಗುತ್ತಿತ್ತು' ಎಂದರೆ ಮತ್ತೂ ಸರಿಹೋಗುತ್ತದೆ. ಏಕೆಂದರೆ, ಆ ತುರು ಮಂದೆ ಚಲಿಸದಂತೆಯೆ ಚಲಿಸುತ್ತಿತ್ತು. ಎಮ್ಮೆಗಳ ಪಾಡಂತಿರಲಿ ದನಗಳೂ ಕೂಡ ಅಭ್ಯಾಸಬಲದಿಂದ ಮಾತ್ರ ಎಂಬಂತೆ ನಿಧಾನವಾಗಿ ಮೆಲಕುಹಾಕುತ್ತ ಸೋಮಾರಿತನದ ಚಿತ್ರಗಳಂತೆ ನಿಧಾನವಾಗಿ ಸಾಗುತ್ತಿದ್ದುವು. ನೂರಾರು ಗೊರಸುಗಳ ಗುಂಪುಸದ್ದಲ್ಲದೆ, ದನಗಳ 'ಅಂಬಾ', ಕರುಗಳ 'ಅಂಬೆ', ಗೂಳಿಗಳ ಗುಟುರು, ಎಮ್ಮೆ ಕೋಣಗಳ 'ವ್ಹಾ್ರಯ್' ಮೊದಲಾದ ಬೇರೆ ಬೇರೆಯ ಯಾವ ಸದ್ದೂ ಇರಲಿಲ್ಲ. ಆ ತುರುಮಂದೆಯ ವಾಸನೆಯೊಡನೆ ಮಾಸಿದ ಕೆಂಬಣ್ಣದ ದೂಳೂ ಮುಗಿಲು ಮುಗಿಲಾಗಿ ಎದ್ದು, ನಿಶ್ಚಲ ವಾಯು ಮಂಡಲದಲ್ಲಿ ಭಾರವಾಗಿ ನಿಧಾನವಾಗಿ ಚಲಿಸುತ್ತಿತ್ತು. ಕೆಲವೆಡೆ, ಆ ಮುಗಿಲು ಎಷ್ಟು ದಟ್ಟವಾಗಿತ್ತೆಂದರೆ ಅದರ ಛಾಯೆ ಕೂಡ ನೆಲದ ಮೇಲೆ ಬೀಳುತ್ತಿತ್ತು. ದೂಳ್ಮುಗಿಲು ದಟ್ಟವಾಗಿ ಮೇಲೆದ್ದಾಗ ಅದರ ನೆರಳಿನ ದೆಸೆಯಿಂದ ಕಾಲ್ನಡೆಗಳ ಛಾಯೆಗಳೂ ಮಾಸಲು ಮಾಸಲಾಗುತ್ತಿದ್ದುವು.

ಪೂಜೆಗೆ ಎಲ್ಲವನ್ನೂ ಅಣಿಮಾಡಿಕೊಂಡು, ದೇವಸ್ಥಾನದ ಮುಂಭಾಗದ ಒಂದು ಮುಂಡಿಗೆಗೆ ಒರಗಿ ನಿಂತು, ಕಾನೂರು ಮತ್ತು ಮುತ್ತಳ್ಳಿಗಳಿಂದ ಬರ ಬೇಕಾಗಿದ್ದ ಗಾಡಿಗಳನ್ನು ನಿರೀಕ್ಷಿಸುತ್ತಿದ್ದ ವೆಂಕಪ್ಪಯ್ಯನವರು, ದನದ ಹಿಂಡು ಮುಂಬರಿದು ಹೊಳೆಗಿಳಿದ ಮೇಲೆ, ನಿಡುಸುಯ್ದು, ಉತ್ತರದಿಕ್ಕಿನ ಗದ್ದೆಬಯಲು ಗಳಾಚೆ ಇದ್ದ ಕಾಡಿನ ಕಡೆಗೆ ನೋಡಿದರು. ಕಾಡಿನಿಂದ ಮೇಲೆ ಬಿಳಿಮುಗಿಲು ವಿರಳವಾಗಿದ್ದ ನೀಲಾಕಾಶಕ್ಕೆ ಎದುರಾಗಿ ಕರಿಯ ಚುಕ್ಕಿಗಳು ಚಲಿಸುತ್ತಿದ್ದುದು ಅವರ ಕಣ್ಣಿಗೆ ಬಿತ್ತು. ಕಾನೂರಿನಿಂದ ತಮಗೆ ದಾನವಾಗಿ ಬಂದಿದ್ದ ದನದ ಹೆಣಕ್ಕಾಗಿ ರಣಹದ್ದುಗಳು ಹಾರಾಡುತ್ತಿದ್ದುದು ಗೋಚರಿಸಿದೊಡನೆ ವೆಂಕಪ್ಪಯ್ಯ ನವರು ನಡುಗಿ "ಅಯ್ಯೋ, ಗೋಹತ್ಯವೂ ಆಗಿಹೋಯಿತೇ?" ಎಂದು ನರಳಿ ದೇವಸ್ಥಾನದ ಒಳಗೆ ನೋಡಿ "ನಮ್ಮಪ್ಪಾ, ನೀನೆ ಕಾಪಾಡಬೇಕು" ಎಂದು ಕೈಮುಗಿದರು.

ಜೋಯಿಸರು ಒಂದು ವಾರದ ಹಿಂದೆ ಕಾನೂರಿಗೆ ಹೋಗಿ, ಚಂದ್ರಯ್ಯಗೌಡರು ತಮ್ಮ, ತಮ್ಮ ಮಗನ ಮತ್ತು ಸೊಸೆಯ ಅನಿಷ್ಟ ಪರಿಹಾರಕ್ಕಾಗಿ (ವೆಂಕಪ್ಪಯ್ಯನವರೆ ಅದನ್ನೂ ಸೂಚಿಸಿದ್ದರು) ಕೊಟ್ಟ ಹಸುವೊಂದನ್ನು ಅದರ ಕರುವಿನೊಡನೆ ದಾನವಾಗಿ ಸ್ವೀಕರಿಸಿದ್ದರು. ಮರುದಿನ ತಾಯಿದನವನ್ನೂ ಕರುವನ್ನೂ ಅಗ್ರಹಾರಕ್ಕೆ ಕಳುಹಿಸಿಕೊಡುವಂತೆ ಹೇಳಿ, ಜೋಯಿಸರು ಹಿಂತಿರುಗಿದ್ದರು. ಮರುದಿನ ದಾನದ ಹಸು ಬರಲಿಲ್ಲ. ನಾಳೆ ಬರಬಹುದೆಂದು ಜೋಯಿಸರು ಸುಮ್ಮನಾದರು. ಆದರೆ ಆ ದಿನವೂ ಮಧ್ಯಾಹ್ನದವರೆಗೂ ಅದು ಬಾರದಿದ್ದುದನ್ನು ನೋಡಿ, ಜೋಯಿಸರು ತಾವೇ ಕಾನೂರಿಗೆ ಹೋಗಿ ವಿಚಾರಿಸಿದರು. ಆ ಹಸು ಆಳುಗಳೆಷ್ಟು ಪ್ರಯತ್ನಿಸಿದರೂ, ಕಾನೂರಿನ ಎಲ್ಲೆಯನ್ನು ದಾಟಲೊಲ್ಲದೆ ಹೋಯಿತೆಂದೂ, ಬಿದ್ದುಕೊಂಡಿತೆಂದೂ, ಹೊಡೆದರೂ ಬಡಿದರೂ ದರದರನೆ ಎಳೆದರೂ ಮೇಲಕ್ಕೇಳದೆ ಹೋಯಿತೆಂದೂ ಗೊತ್ತಾಯಿತು. ಸೇರೆಗಾರರು ತಾವು ಮಾಡಿದ ಮೆಹನತ್ತೆಲ್ಲವನ್ನೂ ಜೋಯಿಸರ ಎದೆ ಹೆದರುವಂತೆ ವರ್ಣಿಸಿದರು.

ಹಳೆಪೈಕದ ತಿಮ್ಮ "ಸ್ವಾಮಿ, ನಂಗಂತೂ ಬಾಲ ಮುರ್ದೂ ಮುರ್ದೂ ಸಾಕಾಯ್ತು! ಬಾಲೆಲ್ಲಾ ತುಂಡು ತುಂಡಾದ್ರೂ ಏಳ್ಬೇಕಲ್ಲಾ ಅದು? ನನ್ನ ಹೇಳಿಕಿ: ಏನೋ ದೆಯ್ಯದ ಕಾಟಾನೆ ಇರ್ಬೇಕು!" ಎಂದನು.

ಜೋಯಿಸರೊಡನೆ ದನವನ್ನು ಸಾಗಿಸಲು ಮತ್ತೆ ಪ್ರಯತ್ನಿಸಿದರು. ಆಗಲಿಲ್ಲ. ಹಸುವನ್ನು ಎಳೆಯುವುದು, ಹೊಡೆಯುವುದು, ಬಾಲ ಮುರಿಯುವುದು, ಕಣ್ಣಿಗೆ ಜೀರಿಗೆ ಮೆಣಸಿನಕಾಯಿ ತಿಕ್ಕುವುದು, ಇದನ್ನೆಲ್ಲಾ ನೋಡಿ ವೆಂಕಪ್ಪಯ್ಯನವರು, "ಅದು ಬರದೇ ಇದ್ದರೂ ಚಿಂತೆಯಿಲ್ಲ. ಹೊಡೆದು ಕೊಲ್ಲಬೇಡಿ" ಎಂದು ಹೇಳಿ ಹಿಂತಿರುಗುತ್ತಿರಲು, ಗೌಡರು "ನಾನು ನಾಳೆ ಗಾಡಿಮೇಲೆ ಹೇರಿ ಕಳಿಸ್ತೀನಿ. ಇವತ್ತಿಗೆ ನೀವು ಹೋಗಿ" ಎಂದರು.

ಮರುದಿನ ಅಗ್ರಹಾರದಲ್ಲಿ ಜೋಯಿಸರ ಮನೆಯಮುಂದೆ ಕಮಾನಿಲ್ಲದ ಗಾಡಿ ಬಂದು ನಿಂತಿತು. ಗಾಡಿಯಲ್ಲಿ ದನವನ್ನು ಕಾಲು ಮೇಲೆ ಮಾಡಿ ಕಟಿ ತಂದಿದ್ದರು. ಮುದ್ದಾದ ಅದರ ಎಳಗರು ಗಾಡಿಯ ಒಂದು ಮೂಲೆಯಲ್ಲಿ ಕರುಗಳು ಮಲಗುವಂತೆ ಮಲಗಿ, ಹಸಿವೆಯಿಂದ ತಾಯಿಯ ಮೊಲೆಗಾಗಿ ಕೂಗಿಕೊಳ್ಳುತ್ತಿತ್ತು. ಗಾಡಿಯ ಜೊತೆಯಲ್ಲಿ ಸೇರೆಗಾರರು, ಹಳೆಪೈಕದ ತಿಮ್ಮ, ಬೇಲರ ಸಿದ್ದ, ಇನ್ನಿಬ್ಬರು ಗಟ್ಟದಾಳುಗಳಿದ್ದರು.

ನಿಂಗ ಗಾಡಿ ನಿಲ್ಲಿಸಿ, ಕೊರಳು ಬಿಚ್ಚಿದನು. ಹತ್ತಾರು ಮನೆಗಳಿದ್ದ ಆ ಸಣ್ಣ ಅಗ್ರಹಾರದ ಬ್ರಾಹ್ಮಣರೂ ಬ್ರಾಹ್ಮಣ ಮಹಿಳೆಯರೂ ಮಕ್ಕಳೂ ಜೋಯಿಸರ

ಮನೆಗೆ ಹೊಸದಾಗಿ ಬಂದಿದ್ದ ದಾನದ ದನವನ್ನೂ ಅದರ ಹೆಂಗರುವನ್ನೂ ನೋಡಲು, ಒಬ್ಬೊಬ್ಬರಾಗಿ ಬಂದು ನೆರೆದರು.

ಗಟ್ಟಿದಾಳೊಬ್ಬನು ಕರುವನ್ನು ಕೆಳಗಿಳಿಸಿದನು. ಸೇರೆಗಾರರು ಗೋವನ್ನು ಕೆಳಗಿಳಿಸಲೆಂದು, ಸೇರಿಸಿ ಕಟ್ಟಿದ್ದ ಅದರ ನಾಲ್ಕು ಕಾಲುಗಳನ್ನೂ ಬಿಚ್ಚಿದರು. ಆದರೆ ಕಾಲುಗಳು ವಿಸ್ತರಿಸಲಿಲ್ಲ! ಸೆಟ್ಟರಿಗೆ ಗಾಬರಿಯಾಗಿ ನೋಡುತ್ತಾರೆ: ಹೊಟ್ಟೆ ಉಬ್ಬರಿಸಿದೆ. ಕಣ್ಣು ಮೆಳ್ಳೆಯಾಗಿದೆ. ಉಸಿರೂ ಆಡುವುದಿಲ್ಲ. ಎಳೆಗರುವಿನ ತಾಯಿ ಸತ್ತುಹೋಗಿತ್ತು!

ದೂರದಿಂದಲೆ, ಆಕಳು ಗಾಡಿಯಲ್ಲಿ ಕಾಲು ಮೇಲಾಗಿದ್ದ ರೀತಿಯನ್ನು ನೋಡಿ "ಅಯ್ಯಯ್ಯೊ" ಎಂದುಕೊಂಡು ವಿಷಾದದಿಂದ ಓಡಿಬಂದಿದ್ದ ವೃದ್ಧ ಬ್ರಾಹ್ಮಣ ಮಂಜಭಟ್ಟರು "ಮುಟ್ಠಾಳು ಮುಂಡೇಮಕ್ಕಳಿರಾ, ಯಾರಾದರೂ ಗೋವನ್ನು ಹೀಗೆ ಗಾಡಿಮೇಲೆ ಹಾಕಿಕೊಂಡು ತರುತ್ತಾರೆಯೇನ್ರೊ?— ಅಯ್ಯಯ್ಯೋ, ಗೋಹತ್ಯವಾಯ್ತಲ್ರೋ! ನಮ್ಮ ಅಗ್ರಹಾರದಲ್ಲಿ..." ಎನ್ನುತ್ತಿರಲು "ಇಲ್ರಯ್ಯಾ, ಅದು ಅಲ್ಲೇ ದಾರೀಮೇಲೆ ಪರಾಣಬಿಟ್ಟಿರಬೇಕು" ಎಂದು ಸಿದ್ದ ಮಂಜಭಟ್ಟರ ಭಯವನ್ನು ಪರಿಹರಿಸಲೆಂಬಂತೆ ಮಾತಾಡಿದನು.

ಮಂಜಭಟ್ಟರು ದುಃಖಕೋಪಗಳಿಂದ "ಥೂ ನೀಚ, ಮಾತಾಡಬೇಡ" ಎಂದರು.

"ನಾ ಹೇಳ್ದೆ. ಹೀಂಗೆ ಕಾಲು ಮೇಲಾಗಿ ಹಾಕಾದು ಬ್ಯಾಡ ಅಂತಾ. ನನ್ನ ಮಾತು ಎಲ್ಲಿ ಕೇಳ್ತಾರೆ ಈ ಸೇರೆಗಾರ್ರು?" ಎಂದು ತಿಮ್ಮ ಸೆಟ್ಟರ ಕಡೆಗೆ ನೋಡಿದನು.

ಒಬ್ಬರಮೇಲೊಬ್ಬರು ತಪ್ಪು ಹೊರಿಸಿ, ಎಳಗರುವನ್ನು ಜೋಯಿಸರಿಗೆ ಕೊಟ್ಟು, ದನದ ಹೆಣವನ್ನು ಗದ್ದೆಯಾಚೆಗೆ ಹಾಕಿಸಿ, ಸೇರೆಗಾರರು ದಾರಿಯುದ್ದಕ್ಕೂ ವಾರ್ತೆಯನ್ನು ಹಬ್ಬಿಸುತ್ತ ಕಾನೂರಿಗೆ ಗಾಡಿಬಿಟ್ಟಿದ್ದರು.

ಅಗ್ರಹಾರದಲ್ಲಿ ಆ ತಬ್ಬಲಿ ಕರುವನ್ನು ನೋಡಿ ನೋಡಿ ಕಣ್ಣೀರು ಹಾಕದಿದ್ದವರೇ ಇರಲಿಲ್ಲ.

ಇದನ್ನೆಲ್ಲ ನೆನೆದೇ ಜೋಯಿಸರು ದೇವಾಲಯದ ಮೂರ್ತಿಯ ಕಡೆಗೆ ನೋಡಿ, "ನಮ್ಮಪ್ಪಾ, ನೀನೇ ಕಾಪಾಡಬೇಕು" ಎಂದು ಕೈಮುಗಿದುದು.

ಜೋಯಿಸರು ಗುಡಿಯೊಳಗೆ ಹೋಗಿ, ದೀಪದ ಬತ್ತಿಯನ್ನು ಸ್ವಲ್ಪ ಮುಂದು ಮಾಡಿ ಮತ್ತೆ ಹೊರಗೆ ಬಂದು, ದಾರಿಯ ಕಡೆ ನೋಡಿದರು. ಸುಡುಬಿಸಿಲಿನಲ್ಲಿ, ದದ್ದು ಹಿಡಿದು ನೋಟಕ್ಕೆ ಅಸಹ್ಯವಾಗಿದ್ದ ನಾಯಿಯೊಂದು ನಾಲಗೆ ಚಾಚಿಕೊಂಡು ತನ್ನ ನೆರಳಿನಮೇಲೆ ಕುಂಟಿಕೊಂಡು ಬರುತ್ತಿದ್ದು, ಬೀದಿಯ ನಡುವೆ ನಿಂತು

ಸುತ್ತಲೂ ನೋಡಿತು. ಮತ್ತೆ ತನ್ನ ಹಿಂಭಾಗದ ಎಡಗಾಲಿನಿಂದ ಕುತ್ತಿಗೆಯ ಮೇಲೆ ಎಡಗಿವಿಯ ಹಿಂಭಾಗವನ್ನು ಪರಪರನೆ ಹಲ್ಲುಚಿಲಿಯುವಂತೆ ಕೆರೆದು ಕೊಳ್ಳತೊಡಗಿತು. ಅದಕ್ಕೆ ಕೊನೆಯಿರುತ್ತಿತ್ತೊ ಇಲ್ಲವೊ! ಆದರೆ ಪಕ್ಕದ ಮನೆಯೊಂದರಲ್ಲಿ ಯಾರೊ ಎಂಜಲೆಲೆ ಬಿಸಾಡಿದರು! ಜಡವಾಗಿ, ಕೆಲಸಕ್ಕೆ ಬಾರದಂತೆ ತೋರುವ, ಕರಿಮುದ್ದೆಯ ಕೋವಿಮುಸಿಗೆ ಕಿಡಿ ಮುಟ್ಟಿದರೆ ಸರಕ್ಕನೆ ಮಹಾಚಟುವಟಿಕೆಯಿಂದ ಸಿಡಿಯುವಂತೆ, ಎಂಜಲೆಲೆಯನ್ನು ಕಂಡ ನಾಯಿಯ ಸೋಮಾರಿತನವೇ ವಿವರ್ತಗೊಂಡು ತೇಜಸ್ವಿಯಾಯಿತು! ಕಣ್ಣು ಮುಚ್ಚಿ ಬಿಡುವಷ್ಟರಲ್ಲಿ ಅದು ಅಲ್ಲಿರಲಿಲ್ಲ. ಎಂಜಲೆಲೆಯ ರಣಾಂಗಣದಲ್ಲಿ ಕಚ್ಚಾಟದ ಸದ್ದು ಮಾತ್ರ ಕೇಳಿಸುತ್ತಿತ್ತು!

ಕಾದು ಕಾದು ಬೇಸರವಾಗಿ ಜೋಯಿಸರು ಒಳಗೆ ಹೋದಮೇಲೆ ಎರಡು ಗಾಡಿಗಳು ಬಂದು ಗುಡಿಯ ಮುಂದೆ ನಿಂತುವು. ಜೋಯಿಸರು ತಮ್ಮ ಕಾತರತೆಯನ್ನು ಪ್ರದರ್ಶಿಸಬಾರದೆಂದು ಚಂದ್ರಯ್ಯಗೌಡರ ಪರಿಚಿತಧ್ವನಿ ಕರೆಯುವವರೆಗೂ ಹೊರಗೆ ಹೋಗಲಿಲ್ಲ.

ಆಮೇಲೆ ಬಂದು "ಇದೇನು ಇಷ್ಟು ತಡವಾಯಿತು?" ಎಂದರು.

ಗಂಡಸರೆಲ್ಲರೂ ಜೋಯಿಸರಿಗೆ ನಮಸ್ಕಾರ ಮಾಡಿದರು. ಹೆಂಗಸರೆಲ್ಲ ತಾವು ಉಟ್ಟುಕೊಂಡು ಬಂದಿದ್ದ ಬೆಲೆಯುಳ್ಳ ಸೀರೆಗಳು ಗಾಡಿಯಲ್ಲಿ ಕೂತಿದ್ದಾಗ ಮುದುರಿಹೋಗಿದ್ದುದರಿಂದ ಅವುಗಳ ನಿರಿಯನ್ನು ನೀವಿ ಸರಿಮಾಡಿಕೊಳ್ಳುವುದರಲ್ಲಿದ್ದರು.

"ಏನು ಮಾಡಾದು ಹೇಳಿ. ಹೊರಡಾದೇ ಹೊತ್ತಾಯ್ತು! ಬಹಳ ತೊಂದರೆ ಕೊಟ್ಟುಬಿಟ್ಟಳು 'ನಾ ಬರೋದಿಲ್ಲ, ನಾ ಒಲ್ಲೆ!' ಅಂತಾ." ಎಂದು ಹೆಂಗಸರ ಗುಂಪಿನ ಕಡೆಗೆ ಸೀತೆಯನ್ನು ನಿರ್ದೇಶಿಸಿ ನೋಡಿದರು.

ಶ್ಯಾಮಯ್ಯಗೌಡರ ಮುಖದಮೇಲೆ ಪಟ್ಟೆಪಟ್ಟೆಯಾಗಿದ್ದ ಸುಟ್ಟ ಗಾಯದ ಕಲೆಗಳನ್ನು ನೋಡುತ್ತಿದ್ದ ವೆಂಕಪ್ಪಯ್ಯನವರು ಹೆಂಗಸರಿದ್ದ ಕಡೆಗೆ ತಿರುಗಿ ಸೀತೆಯನ್ನೇ ನಿರ್ದೇಶಿಸಿ ನೋಡಿ, "ಚಂದ್ರಮೌಳೀಶ್ವರನ ಕೃಪೆಯಿಂದ ಎಲ್ಲವೂ ಸರಿಯಾಗ್ತದೆ. ಅವರನ್ನೆಲ್ಲ ಬರಹೇಳು ಒಳಗೆ" ಎಂದು ಗುಡಿಯೊಳಗೆ ಹೋದರು.

ದೇವಸ್ಥಾನ ನಿಃಶಬ್ದವಾಗಿತ್ತು; ಸ್ವಲ್ಪ ಕತ್ತಲೆಯೂ ಆಗಿತ್ತು. ತಳತಳನೆ ಹೊಳೆಯುತ್ತಿದ್ದ ಹಿತ್ತಾಳೆಯ ದೀಪದ ಕಂಭದ ನೆತ್ತಿಯಲ್ಲಿ ಉರಿಯುತ್ತಿದ್ದ ಸೊಡರುಗಳ ಬೆಳಕು ತಂಪಾಗಿ ಹೊರಗಡೆಯ ಉರಿಬಿಸಿಲಿನ ಮರುಭೂಮಿಗೆ ನಂದನವನದಂತಾಗಿ ಆಪ್ಯಾಯಮಾನವಾಗಿತ್ತು. ಹೂವು, ಗಂಧ, ಕರ್ಪೂರ ಮೊದಲಾದುವುಗಳ ಪರಿಮಳ ದೇವರ ಕೃಪೆಯಂತೆ ಸರ್ವವ್ಯಾಪಿಯಾಗಿತ್ತು.

ಶ್ಯಾಮಯ್ಯಗೌಡರು ಪೇಟ ಕೋಟುಗಳನ್ನು ಕಳಚಿ, ದೂರವಿಟ್ಟು, ತಮ್ಮ ಸ್ಥೂಲ ಶರೀರವನ್ನು ನಿಧಾನವಾಗಿ ನೆಲಕ್ಕೆ ಚಾಚಿ, ದೇವರಿಗೆ ಸಾಷ್ಟಾಂಗ ನಮಸ್ಕಾರ ಮಾಡಿದರು. ಚಂದ್ರಯ್ಯಗೌಡರೂ, ಅವರಾದಮೇಲೆ ಚಿನ್ನಯ್ಯ ರಾಮಯ್ಯರೂ ಶ್ಯಾಮಯ್ಯಗೌಡರನ್ನು ಅನುಸರಿಸಿದರು. ಗಂಡಸರಿಗೆ ತುಸು ದೂರದಲ್ಲಿದ್ದ—ಗೌರಮ್ಮನವರು, ಸೀತೆ, ಲಕ್ಷ್ಮಿ, ಪುಟ್ಟಮ್ಮ ಮತ್ತು ಇನ್ನಿಬ್ಬರು ನೆಂಡತಿಯರು — ಹೆಂಗಸರ ಗುಂಪು ಅಡ್ಡಬಿದ್ದು ನಮಸ್ಕಾರ ಮಾಡಲಿಲ್ಲ. ನಿಂತಿದ್ದ ಹಾಗೆಯೇ ಕೈಮುಗಿದರು. ದೇವರ ವಿಗ್ರಹವನ್ನೂ ಅಲಂಕಾರಗಳನ್ನೂ ಎವೆಯಿಕ್ಕದೆ ನೋಡುತ್ತಿದ್ದ ವಾಸು, ಇತರರು ಅಡ್ಡಬೀಳುವುದನ್ನು ಲೆಕ್ಕಿಸಲಿಲ್ಲ.

"ಅಡ್ಡಬಿದ್ದೇನೊ?" ಎಂದು ಕೇಳಿದರು ಚಂದ್ರಯ್ಯಗೌಡರು.

ವಾಸು ಎಚ್ಚತ್ತವನಂತೆ ತಿರುಗಿ "ಆ್ಞ" ಎಂದನು.

"ಅಡ್ಡಬಿದ್ದೇನೊ ಅಂತೀನಿ!" ಎಂದು ಪಿಸುದನಿಗೈದು, ಗದರಿಸಿ, ಚಂದ್ರಯ್ಯ ಗೌಡರು ದುರುದುರನೆ ನೋಡಿದರು.

ಗುಡಿಯೊಳಗೆ ಯಾರೂ ಗಟ್ಟಿಯಾಗಿ ಮಾತಾಡುತ್ತಿರಲಿಲ್ಲ.

ವಾಸು ಒಂದು ಸಾರಿ ರಾಮಯ್ಯನ ಕಡೆಗೆ ನೋಡಿ, ದೇವರಿಗೆ ಅಡ್ಡಬಿದ್ದನು.

ಜೋಯಿಸರು ಎಲ್ಲರಿಗೂ ಕುಳಿತುಕೊಳ್ಳುವಂತೆ ಬೆಸಸಿ, ಪೂಜೆಗೆ ಅಣಿಮಾಡ ತೊಡಗಿದರು. ಯಾರೊಬ್ಬರೂ ಮಾತಾಡದೆ ಗುಡಿ ಸಂಪೂರ್ಣವಾಗಿ ಮೌನ ವಾಗಿತ್ತು. ಪೂಜಾರಿಯ ಮಂತ್ರಘೋಷ ಅದನ್ನು ಮತ್ತೂ ಹೆಚ್ಚಿಸಿತ್ತು. ವಾಸು ಲಕ್ಷ್ಮಿಯರನ್ನುಳಿದು ಉಳಿದವರೆಲ್ಲರೂ ತಮತಮಗೆ ಸಹಜವಾದ ಚಿಂತೆ ಗಳಲ್ಲಿ ಮಗ್ನರಾಗಿದ್ದರು. ಆ ಮೌನದಲ್ಲಿ ಭಕ್ತಿಗಿಂತಲೂ ಹೆಚ್ಚಾಗಿ ಭೀತಿಯೂ, ಕಷ್ಟದಿಂದ ಪಾರಾಗಬೇಕೆಂಬ ಪ್ರಾರ್ಥನೆಯೂ, ಆರ್ತಬುದ್ಧಿಯೂ ತುಂಬಿದ್ದುವು.

ಆದಕಾರಣವೆ ಹಲ್ಲಿಯೊಂದು ಲೊಚಗುಟ್ಟಿದಾಗ ಒಬ್ಬೊಬ್ಬರೂ ಬೆಚ್ಚಿಬಿದ್ದು ತಲೆಯೆತ್ತಿ ನೋಡಿದರು.

ಸ್ತ್ರೀಯರ ಗುಂಪಿನಲ್ಲಿ ಕುಳಿತೂ ಕುಳಿತೂ ಲಕ್ಷ್ಮಿಗೆ ಬೇಜಾರಾಗಿ ಮೆಲ್ಲಗೆ ತೆವಳಿ ಕೊಂಡು ವಾಸುವಿದ್ದಲ್ಲಿಗೆ ಬಂದಳು. ವಾಸು ಕಣ್ಣುಸನ್ನೆಯಿಂದ ಗಲಾಟೆಮಾಡದೆ ಸುಮ್ಮನಿರಬೇಕೆಂದು ಸೂಚಿಸಿದನು. ಆದರೂ ಲಕ್ಷ್ಮಿ ಮೆಲ್ಲಗೆ ಏನನ್ನೋ ಕೇಳಿದಳು. ವಾಸು ಎಡಗಡೆಗೆ ಬಾಗಿ ಅವಳ ಬಾಯಿ ಬಳಿ ಕಿವಿಯಿಟ್ಟು ಆಲಿಸಿ ದನು. ಮಾತಿಗಿಂತಲೂ ಹೆಚ್ಚಾಗಿ ಲಕ್ಷ್ಮಿಯ ಬೆಚ್ಚನೆಯ ಉಸಿರೆ ಕಿವಿಗೆ ತಾಗಿ ದುದರಿಂದ ಏನೂ ಅಭಿಪ್ರಾಯವಾಗಲಿಲ್ಲ.

ವಾಸು "ಸುಮ್ಮನಿರೇ! ಅಪ್ಪಯ್ಯ ಬಯ್ತಾರೆ!" ಎಂದನು.

ಲಕ್ಷ್ಮಿ ಮತ್ತೆ ಮಂಡಿಯೂರಿ ಕುಳಿತು, ಎತ್ತರವಾಗಿ, ವಾಸುವಿನ ಕಿವಿಯ ಬಳಿ "ಬಾಳೇಹಣ್ಣು ನಮಗೇ ಕೊಡ್ತಾರೇನು?" ಎಂದು ಕೇಳಿದಳು.

ಲಕ್ಷ್ಮಿಯ ಮನಸ್ಸಿಗೆ 'ವಾಸಬಾವ' ಅನಾವಶ್ಯಕವಾಗಿ ಬಹಳ ಎತ್ತರವಾಗಿ ಬೆಳೆದಿದ್ದಂತೆ ತೋರಿತು. ತಾನು ಮಂಡಿಯೂರಿ ನಿಂತಿದ್ದರೂ ಕುಳಿತಿದ್ದ ವಾಸುವಿನ ಕಿವಿ ಬಾಯಿಗೆ ನಿಟುಕುವುದಿಲ್ಲ!

ಆದರೆ ಈ ಸಾರಿ ವಾಸುವಿಗೆ ಲಕ್ಷ್ಮಿಯ ಪ್ರಶ್ನೆ ಕೇಳಿಸಿತ್ತು.

"ಹೌದು ಕಣೇ!" ಎಂದು ಪಕ್ಕಕ್ಕೆ ತಿರುಗಿ ತಂದೆಯ ಕಡೆಗೆ ಹೆದರಿ ನೋಡಿ, ಮತ್ತೆ ದೇವರ ಕಡೆ ನೋಡುತ್ತ ಕುಳಿತನು.

ಲಕ್ಷ್ಮಿ ಮತ್ತೆ ಅವನ ಕಿವಿಯಲ್ಲಿ "ದೇವರು ಹೆಂಗಸೇನು?" ಎಂದು ಕೇಳಿದಳು.

"ಅಲ್ಲ ಕಣೇ ಗಂಡಸು!" ಎಂದನು ವಾಸು.

"ಅಲ್ಲ; ಹೆಂಗಸು!" ಎಂದಳು ಲಕ್ಷ್ಮಿ ತುಸು ಮುನಿದು.

"ದೇವರು ಎಲ್ಲಾದರೂ ಹೆಂಗಸಾಗ್ತಾನೇನೆ?" ಎಂದು ವಾಸುವೂ ಪಿಸು ದನಿಯಲ್ಲಿಯೆ ಸಿಡುಕಿ ನುಡಿದನು.

ಪೂಜೆಯ ಘಂಟಾಧ್ವನಿ ಪ್ರಾರಂಭವಾದೊಡನೆ ಎಲ್ಲರೂ ಉಟ್ಟಬಟ್ಟೆ ಬರಬರನೆ ಸದ್ದಾಗುವಂತೆ ತಟಕ್ಕನೆ ಎದ್ದುನಿಂತರು. ಘಂಟಾನಾದದ ಮಧ್ಯೆ ಒಡವೆ ಬಳೆಗಳ ಸದ್ದೂ ಕೇಳಿಸಿತು. ವಾಸುವೂ, ಅವನನ್ನು ಹಿಡಿದುಕೊಂಡು ಲಕ್ಷ್ಮಿಯೂ ಎದ್ದು ನಿಂತರು.

ಪೂಜೆ ಪೂರೈಸಿ ಪ್ರಸಾದ ವಿನಿಯೋಗವಾಗುತ್ತಿದ್ದಾಗ ವೆಂಕಪ್ಪಯ್ಯನವರು ಮಂತ್ರಘೋಷವನ್ನು ನಿಲ್ಲಿಸಿ, ಮಾತಾಡತೊಡಗಿದರು: ಶಾಸ್ತ್ರ, ದೇವರು, ಧರ್ಮ, ವಿವಾಹವಿಧಿ, ಪತಿವ್ರತಾಧರ್ಮ, ಪತ್ನಿಗೆ ಪತಿಯೇ ದೈವ ಮೊದಲಾದುವು ಗಳನ್ನು ಕುರಿತು.

ರಾಮಯ್ಯನಿಗೆ ಒಂದು ವರ್ಷದ ಹಿಂದೆ ಮೂಢರೂ ಆಚಾರಭ್ರಾಂತರೂ ಆಗಿ ಕಂಡುಬಂದಿದ್ದ ವೆಂಕಪ್ಪಯ್ಯಜೋಯಿಸರು ಈಗ ಮೇಧಾವಿಗಳೂ ಪಂಡಿತರೂ ಧರ್ಮವೀರರೂ ಆಗಿ ತೋರಿಬಂದರು. ಏಕೆಂದರೆ ಜೋಯಿಸರು ಇತರರ ಕಡೆಗೆ ನೋಡುತ್ತ ಹೇಳುತ್ತಿದ್ದರೂ ಸೀತೆಯನ್ನೆ ನಿರ್ದೇಶಿಸಿ ಉಪದೇಶಿಸುತ್ತಿದ್ದಾರೆ ಎಂಬುದು ಎಲ್ಲರಿಗೂ ಗೊತ್ತಾಗಿತ್ತು. ಅಲ್ಲದೆ ಆ ಉಪದೇಶ ರಾಮಯ್ಯನಿಗೂ ಅನುಕೂಲವಾಗಿತ್ತು! ಅದು ಅವನ ಕರ್ತವ್ಯಗಳನ್ನು ಕುರಿತು ಹೇಳದೆ ಹಕ್ಕು ಬಾಧ್ಯತೆಗಳನ್ನೇ ಪ್ರಸ್ತಾಪಿಸಿ, ವಾದಿಸುವಂತಿತ್ತು!

ಈ ಮಧ್ಯೆ ವಿನೋದಕರವಾದರೂ ವಿಷಾದಕ್ಕೆ ಕಾರಣವಾದ ಒಂದು ಸಂಗತಿ

ಜರುಗಿತು. ಜೋಯಿಸರು ಹೂವು, ಗಂಧ, ತೀರ್ಥಗಳನ್ನು ಹಂಚಿದಮೇಲೆ ಪಂಚಾಮೃತವನ್ನು ಹಂಚಿದರು. ಆದರೆ ಅದನ್ನೂ ಇತರ ಪ್ರಸಾದಗಳಂತೆ ಕೊಂಚ ಕೊಂಚವೇ ಕೊಟ್ಟರು! ವಾಸುವಿನ ಪಕ್ಕದಲ್ಲಿದ್ದ ಲಕ್ಷ್ಮಿ ಅವನು ಮಾಡಿದಂತೆ ಮಾಡುತ್ತಿದ್ದಳು. ಹೂವನ್ನು ತಲೆಗೆ ಸಿಕ್ಕಿಸಿಕೊಂಡಳು (ವಾಸುವಿಗೆ ರಾಮಣ್ಣಯ್ಯ ಹೊಸದಾಗಿ ಬಿಟ್ಟಿದ್ದ ಜುಟ್ಟಿನ ಉಪಯೋಗದ ಗುಟ್ಟು ಆಗತಾನೆ ಗೊತ್ತಾಯಿತು); ಗಂಧವನ್ನು ಹಣೆಗೆ ಬಳಿದುಕೊಂಡಳು. ತೀರ್ಥವನ್ನು ಸಶಬ್ದವಾಗಿ ಕುಡಿದಳು — ಹಾಗೆಯೆ ಪಂಚಾಮೃತವನ್ನು ಬಾಯಿಗೆ ಹಾಕಿಕೊಂಡಳು. ಹಾಕಿಕೊಂಡದ್ದೇ ತಡ ಸಂತೋಷದಿಂದ ಕಣ್ಣರಳಿತು! ಎಷ್ಟು ಸಿಹಿ! ದೇವರ ಪ್ರಸಾದವನ್ನು ಬಿಟ್ಟರೆ ಇನ್ನಿಲ್ಲ! — ಕಾಲ ಮಿಂಚಿದಮೇಲೆ ವ್ಯರ್ಥವಲ್ಲವೆ?

ಲಕ್ಷ್ಮಿ ಮತ್ತೆ ಬೇಗಬೇಗನೆ ಕೈನೀಡಿ, ಬಹಳ ಎತ್ತರದ ಮೇಲಿದ್ದ ಭಟ್ಟರ ಕಿವಿಗೆ ಕೇಳಿಸುತ್ತದೆಯೊ ಇಲ್ಲವೊ ಎಂದಳುಕಿ ಗಟ್ಟಿಯಾಗಿ "ಇನ್ನೊಂದು ಸೊಪ್ಪಾ!" ಎಂದು ಕೇಳಿದಳು. 'ಸೊಪ್ಪ' ಎಂದರೆ 'ಸ್ವಲ್ಪ' ಎನ್ನುವುದರ ತದ್ಭವ!

"ಯಾರದು?" ಎಂದು ಗದರಿದರು ಚಂದ್ರಯ್ಯಗೌಡರು.

"ಈ ಹುಡುಗಿಗೇ!" ಎಂದು ದುರುಗುಟ್ಟಿದರು ಗೌರಮ್ಮನವರು.

"ಸುಮ್ಮನಿರೇ" ಎಂದನು ಚಿನ್ನಯ್ಯ.

ಹೀಗೆ ಎಲ್ಲರೂ ದುರುಗುಟ್ಟಿ ಛೀಮಾರಿ ಮಾಡಿದುದರಿಂದ ಲಕ್ಷ್ಮಿಗೆ ಅವಮಾನವೂ ಖೇದವೂ ಉಂಟಾಗಿ, ಸರಕ್ಕನೆ ಸೀತೆಯ ಹಿಂದೆ ಹೋಗಿ, ಆಕೆಯ ಸೀರೆಯನ್ನು ತಬ್ಬಿಹಿಡಿದು ಅವಿತುಕೊಂಡಳು. ಅದುವರೆಗೂ ಮೌನವಾಗಿದ್ದ ಸೀತೆ ಕಿಲಕ್ಕನೆ ನಕ್ಕಳು! ಸೀತೆ ಸೂಚನೆ ಕೊಟ್ಟಳೊ ಎಂಬಂತೆ ವಾಸುವೂ, ತಡೆದಿದ್ದ ನಗುವನ್ನು ಹೊಸಬಟ್ಟೆ ಹರಿದಂತೆ ಸದ್ದುಮಾಡಿ ಹೊರಗೆಹಾಕಿ, ನಗತೊಡಗಿದನು. ನಿಜವಾಗಿಯೂ ಹಾಸ್ಯಪೂರ್ಣವಾಗಿತ್ತು ಆ ಸನ್ನಿವೇಶ! ಆದರೆ ದೊಡ್ಡವರಾರೂ ನಗಲಿಲ್ಲ. ಚಂದ್ರಯ್ಯಗೌಡರು ವಾಸುವಿನ ತಲೆಗೆ ಪಟ್ಟನೆ ತಟ್ಟಿ ಹಲ್ಲುಕಚ್ಚಿ ಹೆದರಿಸಿದರು. ವಾಸು ತಲೆಯುಜ್ಜಿಕೊಳ್ಳುತ್ತ ಸುಮ್ಮನಾದನು.

ಸೀತೆಯಂತಹ ಮದುಮಗಳು ಇಷ್ಟೊಂದು ಜನರೆದುರು, ಗಂಡಸರೆದುರು, ಗಂಡನೆದುರು, ದೇವರೆದುರು, ತಮ್ಮೆದುರು ನಾಚದೆ ನಗಬೇಕಾದರೆ ಕೃಷ್ಣಪ್ಪನ ದೆಯ್ಯವೇ ಕಾರಣವಾಗಿರಬೇಕೆಂದು ಚಂದ್ರಯ್ಯಗೌಡರು ಊಹಿಸಿದರು. ಹಾಗೆಯೇ ಊಹಿಸಿದ್ದ ಜೋಯಿಸರೂ ಕೃಷ್ಣಪ್ಪನ ದೆಯ್ಯವನ್ನು ಕುರಿತು, "ಪರನಾರಿಯನ್ನು ಮುಟ್ಟಬಾರದು, . . . ಚಂದ್ರಮೌಳೀಶ್ವರನ ಮುಂದೆ ನೀನು ಬಂದು ಹೀಗೆಲ್ಲಾ

ಮಾಡಿ ನರಕಕ್ಕೆ ಬೀಳುತ್ತೀಯಾ! ನಿನಗೆ ಏನು ಬೇಕೊ ಹೇಳು; ಎಲ್ಲಾ ಕೊಡಿಸುತ್ತೇನೆ! ಪಾಪ, ಆ ಹುಡುಗಿಯನ್ನೇಕೆ ಪೀಡಿಸುತ್ತೀಯಾ? ಒಳ್ಳೆಯ ಮಾತಿಗೆ ನೀನು ಹೋಗದಿದ್ದರೆ ಆಮೇಲೆ ಕಠಿಣ ರೀತಿಯಿಂದ ಓಡಿಸಬೇಕಾಗುತ್ತದೆ..." ಎಂದು ಗಟ್ಟಿಯಾಗಿ ಅಧಿಕಾರವಾಣಿಯಿಂದ ಉಪನ್ಯಾಸಮಾಡಿ, ತಿರುಗಿ "ಹೌದೊ ಅಲ್ಲವೊ? ನೀನೇ ಹೇಳು ಚಂದ್ರಯ್ಯ!" ಎಂದು ಪ್ರಶ್ನಿಸಿದರು.

"ಇನ್ನುಮೇಲೆ ಮತ್ತೆ ಮತ್ತೆ ಹಿಂಗೇ ಬಂದು ತೊಂದ್ರೆ ಕೊಟ್ರೆ ಕಠಿಣಶಿಕ್ಷೇನೇ ವಿಧಿಸಬೇಕಾಗ್ತದೆ!" ಎಂದು ಚಂದ್ರಯ್ಯಗೌಡರೂ ಜೋಯಿಸರ ಮಾತನ್ನು ಸಮರ್ಥಿಸಿ, ಸೀತೆಯ ಕಡೆಗೆ ದೊಡ್ಡ ಕಣ್ಣು ಮಾಡಿ ನೋಡಿದರು.

ಅವರು ಹೇಳಿ ಮುಗಿಯಿಸಿ, ಸೀತೆಯ ಕಡೆಗೆ ನೋಡಿದ್ದರೊ ಇಲ್ಲವೊ, ವಾಸು, ಬಾಯಿಮುಚ್ಚಿ ಹಿಡಿದುಕೊಂಡು ಎಷ್ಟು ಪ್ರಯತ್ನಿಸಿದರೂ ಸಾಗದೆ, ಕಿಸಕಿಸಕಿಸನೆ ನಗಲಾರಂಭಿಸಿದನು. ಅವನ ನಗುವಿಗೆ ಲಕ್ಷ್ಮಿಯ "ಇನ್ನೊಂದು ಸೊಪ್ಪ!"ವು ಇನ್ನೂ ಕಚಗುಳಿಯಿಡುತ್ತಲೆ ಇತ್ತು!

ಚಂದ್ರಯ್ಯಗೌಡರಿಗೆ ರೇಗಿ ಅವನ ಕಿವಿಯನ್ನು ಚೆನ್ನಾಗಿ ಹಿಂಡಿ, ಬೆನ್ನಿನಮೇಲೆ ಗುದ್ದಿ, "ನಿನ್ನ ಉಪಟಳ ಹೆಚ್ಚಾಯ್ತು! ತಡೀ ನಿನ್ನ ಈ ವರ್ಷ ತೀರ್ಥಹಳ್ಳಿಗೆ ಓದಕ್ಕೆ ದಬ್ತೀನಿ!" ಎನ್ನುತ್ತಾ, ಗುಡಿಯ ಹೊರಗೆ ದಬ್ಬಿದರು. ವಾಸು ಅಳುತ್ತ ಹೊರಗೆ ಹೋದನು.

ಜೋಯಿಸರು ಬಾಯಲ್ಲಿ "ಬೇಡ! ಬೇಡ!" ಎಂದು ಹೇಳುತ್ತಿದ್ದರೂ ಮನಸ್ಸಿನಲ್ಲಿ "ಹಾಗೆ ಮಾಡದಿದ್ದರೆ ಹುಡುಗರು ಕೆಟ್ಟುಹೋಗ್ತಾರೆ" ಎಂದುಕೊಂಡರು.

ಪೂಜೆ ಮುಗಿದಮೇಲೆ ಮೊದಲೇ ನಿರ್ಣಯವಾಗಿದ್ದಂತೆ ಎಲ್ಲರೂ ಜೋಯಿಸರ ಮನೆಗೆ ಭೋಜನಕ್ಕೆ ಹೋದರು.

ಶೂದ್ರ ಅತಿಥಿಗಳಿಗೆ ಸಂಪ್ರದಾಯದಂತೆ ಕಿರುಜಗಲಿಯಲ್ಲಿ ಎಲೆಹಾಕಿ ಬಡಿಸಿದರು. ಊಟವೇನೊ ಬಹಳ ರುಚಿಕರವಾಗಿತ್ತು. ಹುಗ್ಗಿ, ಪಾಯಸ, ಹೋಳಿಗೆ ಇತ್ಯಾದಿಯಾದ ವಿಶೇಷಗಳೂ ಉಂಡು ತಣಿಯುವಷ್ಟು ಇದ್ದುವು. ವಾಸುವಿನ ಕಣ್ಣುಗಳಲ್ಲಿ ನೀರು ಸುರಿಯುತ್ತಿದ್ದರೂ ಅವನ ನಾಲಗೆಯೂ ನೀರು ಕರೆಯುವುದರಲ್ಲಿ ಹಿಂಬೀಳಲಿಲ್ಲ. ಅಳುತ್ತಳುತ್ತಲೆ ರಭಸದಿಂದಲೂ ರಾಗದಿಂದಲೂ ಊಟಮಾಡಿದನು. ಸ್ವಲ್ಪ ಹೆಚ್ಚುಕಡಮೆ ಗಂಡಸರೆಲ್ಲ ಪಟ್ಟಾಗಿಯೆ ಹೊಡೆದರು. ಆದರೆ ಬ್ರಾಹ್ಮಣರ ಮನೆಯಲ್ಲಿ ಗಂಡಸರೊಡನೆ ಊಟಕ್ಕೆ ಕುಳಿತಿದ್ದ ಶೂದ್ರ ಮಹಿಳೆಯರು ನಾಚಿಕೆ ದಾಕ್ಷಿಣ್ಯಗಳಿಂದ ಚೆನ್ನಾಗಿ ಊಟಮಾಡಲಾಗಲಿಲ್ಲ. ಊಟವೂ ಅವರಿಗೊಂದು ಕವಾತಿನಂತೆ ಕಂಡುಬಂದಿತು. ವೆಂಕಪ್ಪಯ್ಯ

ಜೋಯಿಸರ ಹೆಂಡತಿ ಅತ್ಯಾದರದಿಂದ ಉಪಚಾರದ ಮಾತುಗಳನ್ನು ಹೇಳು ತ್ತಿದ್ದರೂ, ಏನೊ ಒಂದು ಅನ್ಯತೆಯ ಭಾವ ಮನಸ್ಸಿಗೆ ತೋರಿ, ಮೂರು ಮಕ್ಕಳ ತಾಯಾಗಿದ್ದ ಗೌರಮ್ಮನವರೂ ಕೂಡ ಸರಿಯಾಗಿ ತಲೆಯೆತ್ತಿ ನೋಡದೆ ಊಟ ಮಾಡಿದರು.

ಮಾತಾಡುತ್ತಾ ಆಡುತ್ತ ಶ್ಯಾಮಯ್ಯಗೌಡರು ಜೋಯಿಸರೊಡನೆ ಅಗ್ರಹಾರ ದಲ್ಲಿದ್ದ ಇತರ ಬ್ರಾಹ್ಮಣರೊಬ್ಬರೂ ಪೂಜೆಗೆ ಬರದಿದ್ದುದಕ್ಕೆ ಕಾರಣ ಕೇಳಿದರು.

ಜೋಯಿಸರು "ಮಂಜಭಟ್ಟರಿಗೆ ಕಾಲು ಗಾಯವಾಗಿ ಬಾತುಕೊಂಡಿದೆ ಯಂತೆ... ಸಿಂಗಾ ಜೋಯಿಸರಿಗೆ ನಿನ್ನೆ ಸ್ವಲ್ಪ ಹೆಚ್ಚಾಗಿ 'ಹೊರಕಡೆ'ಯಾಗಿ ಬಹಳ ನಿಶ್ಶಕ್ತಿಯಂತೆ..." ಎಂದು ಮೊದಲಾಗಿ ನೆವಗಳನ್ನು ಹೇಳಿದರು. ಆದರೆ ನಿಜವಾದ ಸಂಗತಿಯನ್ನು ಮಾತ್ರ ಬಹಿರಂಗಪಡಿಸಲಿಲ್ಲ: ವೆಂಕಪ್ಪಯ್ಯ ಜೋಯಿಸರು ಮುತ್ತಳ್ಳಿಯ ಮದುವೆಯಲ್ಲಿ ಶೂದ್ರಕನ್ಯೆಯ ಕುತ್ತಿಗೆಗೆ ತಾಳಿ ಕಟ್ಟಿದರು ಎಂಬ ವಾರ್ತೆ ಹಬ್ಬಿದಮೇಲೆ ಅಗ್ರಹಾರದ ಬ್ರಾಹ್ಮಣರು ಅವರಿಂದ ದೂರವಾಗತೊಡಗಿದ್ದರು. ಪೌರೋಹಿತ್ಯ, ನಿಮಿತ್ತ ನೋಡುವುದು, ತಂತ್ರ ಮಂತ್ರ ಕಟ್ಟುವುದು ಇತ್ಯಾದಿಯಾದ ಧಾರ್ಮಿಕ ಕಾರ್ಯಗಳಲ್ಲಿ ತಮಗೆ ಅವಕಾಶ ವೀಯದಂತೆ ವೆಂಕಪ್ಪಯ್ಯನವರೊಬ್ಬರೆ ಸಂಪಾದಿಸುತ್ತಿದ್ದುದನ್ನು ಕಂಡು ಕೆಲವರಿಗೆ ಬಹಳ ಕಾಲದಿಂದಲೂ ಅವರಮೇಲೆ ಹೊಟ್ಟೆಕಿಚ್ಚು ಹುಟ್ಟಿತ್ತು. ಈಗ ಸಂದರ್ಭ ಪೊದಗಿ, ಶೂದ್ರ ಕನ್ಯೆಯ ಕುತ್ತಿಗೆಗೆ ತಾಳಿ ಕಟ್ಟಿದರೆಂದೂ, ದಾನದ ಗೋವಿನ ಹತ್ಯೆಗೆ ಮುಖ್ಯವಾಗಿ ಕಾರಣರಾದರೆಂದೂ ಅವರನ್ನು ದೂರಮಾಡಿದ್ದರು. ವೆಂಕಪ್ಪಯ್ಯನವರು ತಾವು ತಾಳಿ ಕಟ್ಟಲಿಲ್ಲವೆಂದೂ, ಕೆಳಗೆ ಬಿದ್ದಿದ್ದುದನ್ನು ಎತ್ತಿ ವರನ ಕೈಯಿಂದಲೇ ಕಟ್ಟಿಸಿದೆನೆಂದೂ ಹೇಳಿದರೂ ಹೆಚ್ಚು ಸಾರ್ಥಕವಾಗಲಿಲ್ಲ.

ಆ ವಿರೋಧಕ್ಕೆ ರಾಮಭಟ್ಟರೆಂಬುವರೆ ಮುಖ್ಯ ನೇತೃವಾಗಿದ್ದರು. ಅವರು ಇದೇ ಸುಸಮಯವೆಂದು ಸೀತೆಮನೆ ಸಿಂಗಪ್ಪಗೌಡರೊಡನೆ ಹೆಚ್ಚು ಬಳಕೆಯನ್ನು ಬೆಳೆಸಿ, ತಾವೇ ಒಂದು ಪ್ರತ್ಯೇಕ ಶೂದ್ರಪಕ್ಷವನ್ನು ನಿರ್ಮಿಸಿ ಅದಕ್ಕೆ ಪುರೋಹಿತ ರಾಗಲು ಹವಣಿಸಿ ಸಾಹಸಮಾಡುತ್ತಿದ್ದರು.

ಅನೇಕ ಜನರಿದ್ದುದರಿಂದ ವೆಂಕಪ್ಪಯ್ಯನವರು ಇದನ್ನೆಲ್ಲಾ ಹೇಳಲು ಹಿಂಜರಿದರು. ಅವರು ಹೇಳದಿದ್ದುದಕ್ಕೆ ಮತ್ತೊಂದು ಕಾರಣವೇನೆಂದರೆ, ಸೀತೆಯ ಸಾನ್ನಿಧ್ಯ! ಆಕೆಯೆ ಎಲ್ಲಿಯಾದರೂ ಸತ್ಯವನ್ನು ಹೇಳಿಬಿಟ್ಟರೆ! ಅವಳ ಹುಚ್ಚು ಜೋಯಿಸರಿಗೆ ಅರ್ಥಗರ್ಭಿತವಾಗಿತ್ತು!

ಜೋಯಿಸರು ವಿಷಯವನ್ನು ಬದಲಾಯಿಸಿ, ಯಾತ್ರೆ ಹೊರಡುವುದನ್ನು ಕುರಿತು ಮಾತಾಡತೊಡಗಿದರು. ಮುತ್ತಳ್ಳಿ ಮತ್ತು ಕಾನೂರು ಮನೆತನಗಳಿಗೆ

ಹಿಡಿದಿದ್ದ ಶನಿಯನ್ನು ಬಿಡಿಸುವುದಕ್ಕೆ ಜೋಯಿಸರು ಧರ್ಮಸ್ಥಳಕ್ಕೆ ಯಾತ್ರೆ ಹೋಗುವ ಉಪಾಯವನ್ನು ಈ ಮೊದಲೆ ಸೂಚಿಸಿದ್ದರು. ಶ್ಯಾಮಯ್ಯ ಗೌಡರೂ ಚಂದ್ರಯ್ಯಗೌಡರೂ ಅದಕ್ಕೆ ಸಮ್ಮತಿಸಿದ್ದರು.

ಯಾವಾಗ ಹೊರಡಬೇಕು? ಯಾರು ಯಾರು ಹೋಗಬೇಕು? ಯಾವ ಯಾವ ಕ್ಷೇತ್ರಗಳಲ್ಲಿ ಏನೇನು ಮಾಡಬೇಕು?— ಇವುಗಳನ್ನೆಲ್ಲ ಕುರಿತು ಭೋಜನ ಮುಗಿಸಿ, ತಾಂಬೂಲ ಹಾಕಿಕೊಂಡು, ಬೀಳ್ಕೊಳ್ಳುವವರೆಗೂ ಮಾತಾಡಿದರು.

ಮಳೆ ಹಿಡಿಯುವುದರೊಳಗೆ ಹಿಂದಕ್ಕೆ ಬರಬೇಕಾದ್ದರಿಂದ ಒಂದು ವಾರ ದಲ್ಲಿಯೆ ಹೊರಡಬೇಕೆಂದೂ, ಮುತ್ತಳ್ಳಿಯಿಂದ ಶ್ಯಾಮಯ್ಯಗೌಡರು ಗೌರಮ್ಮ ನವರು ಇಬ್ಬರು ಮಾತ್ರ ಹೊರಟರೆ ಸಾಕೆಂದೂ, ಕಾನೂರಿನಿಂದ ಚಂದ್ರಯ್ಯ ಗೌಡರು ರಾಮಯ್ಯ ಸೀತೆ (ಈಗವಳು ಕಾನೂರಿನವಳಷ್ಟೆ!) ಮೂವರೂ ಹೋಗಲೇಬೇಕೆಂದೂ ಸದ್ಯಕ್ಕೆ ನಿರ್ಣಯವಾಯಿತು.

ಜೋಯಿಸರಿಗೆ ಕೊಡಬೇಕಾಗಿದ್ದ ದಕ್ಷಿಣೆಯನ್ನು ಕೊಟ್ಟು, ಗಾಡಿಹತ್ತುತ್ತಿದ್ದಾಗ ಚಂದ್ರಯ್ಯಗೌಡರು "ವಾಸೂ! ವಾಸೂ!" ಎಂದು ಕರೆದರು. ಬ್ರಾಹ್ಮಣ ಶೂದ್ರರೆಂಬ ಕೃತಕ ತಾರತಮ್ಯವನ್ನು ಮರೆತು, ಬಾಲಸಹಜವಾದ ಕ್ರೀಡಾಭಾವ ದಿಂದ, ಜೋಯಿಸರ ಮಕ್ಕಳೊಡನೆ ಕಲೆತು ಸ್ವಲ್ಪ ದೂರದಲ್ಲಿದ್ದ ಹಲಸಿನ ಮರದ ನೆಳಲಿನಲ್ಲಿ ಆಟವಾಡುತ್ತಿದ್ದ ವಾಸು 'ಓ' ಕೊಂಡು, ಲಕ್ಷ್ಮಿಯನ್ನು ಎತ್ತಿ ಸೊಂಟದ ಮೇಲೆ ಕೂರಿಸಿಕೊಂಡು ವೇಗವಾಗಿ ಬಂದನು. ಜೋಯಿಸರ ಮಕ್ಕಳೂ ಅವನೊಡನೆಯೆ ಬಂದು ಗಾಡಿಯ ಬಳಿ ನೋಡುತ್ತ ನಿಂತರು.

ಲಕ್ಷ್ಮಿಯ ಲಂಗದ ತುಂಬ ದೂಳಾಗಿದ್ದುದನ್ನು ಕಂಡು, ಸೀತೆ "ಏನೇ ಇದು ಮೈತುಂಬಾ ಮಣ್ಣು" ಎನ್ನುತ್ತಾ ಕೊಡವಿದಳು.

ಗಾಡಿಯಮೇಲೆ ಹತ್ತಿ ಕೂತಿದ್ದ ವಾಸು, ಫಕ್ಕನೆ ಏನನ್ನೋ ಜ್ಞಾಪಿಸಿಕೊಂಡು, ಮುತ್ತಳ್ಳಿಯ ನಂಜನಾಗಲೇ ಎತ್ತುಕಟ್ಟಿ ಗಾಡಿಕತ್ತರಿಯ ಮೇಲೆ ನೆಗೆಯಲು ಸಿದ್ಧನಾಗಿ ನಿಂತಿದ್ದರಿಂದ, ತನ್ನಷ್ಟೇ ವಯಸ್ಸಾಗಿದ್ದ ಜೋಯಿಸರ ಮಗನನ್ನು ಕುರಿತು "ಸಣ್ಣ ಜೋಯಿಸರೆ, ಇಲ್ಲಿ ಬನ್ನಿ! ಇಲ್ಲಿ ಬನ್ನಿ!" ಎಂದು ಕರೆದು, ಗಂಡಸರೆಲ್ಲ ಕೂತಿದ್ದ ಕಾನೂರಿನ ಗಾಡಿಗೆ ಕೇಳಿಸಬಾರದೆಂದು, ಮೆಲ್ಲಗೆ ಉಸುರಿದನು.

ಸಣ್ಣ ಭಟ್ಟರು ಹಲಸಿನಮರದ ಬುಡಕ್ಕೆ ಓಡಿಹೋಗಿ, ಓಡಿಬಂದು, ವಾಸುವಿನ ಕೈಗೆ ಸಣ್ಣಗೆ ದುಂಡಾದ ಒಂದು ಕರಿಯ ಕಲ್ಲುಹರಳನ್ನು ಕೊಟ್ಟರು! ಅದು ಜೋಯಿಸರ ಮಗ ಹೊಳೆಯ ಮರಳುದಿಣ್ಣೆಯಲ್ಲಿ ಬಹು ದಿನಗಳ ಹಿಂದೆ ಸಂಪಾದಿಸಿ ಇಟ್ಟುಕೊಂಡಿದ್ದು, ಆ ದಿನ ವಾಸುವಿಗೆ ಕೊಟ್ಟಿದ್ದ ಸ್ನೇಹಗಾಣಿಕೆ ಯಾಗಿತ್ತು.

೬೨

# ಕೋಳಿಯಂಕದ ಪಟ್ಟೆಯಲ್ಲಿ

ಕಾನೂರು ಮತ್ತು ಮುತ್ತಳ್ಳಿಯ ಗಾಡಿಗಳೆರಡೂ ಧರ್ಮಸ್ಥಳಕ್ಕೆ ಯಾತ್ರೆ ಹೋಗಿ ಎರಡು ವಾರ ಕಳೆದಿತ್ತು. ಎರಡು ಮೂರು ಹದ ಮಳೆ ಬಿದ್ದು ಹವಾ ತಂಪಾಗಿತ್ತು. ತೊರೆಗಳಲ್ಲಿ ನಿಂತ ನೀರು ಹರಿಯತೊಡಗಿತ್ತು. ನೆಲದಮೇಲೆ ಗರುಕೆಹುಲ್ಲು ಚಿಗುರುತ್ತಿತ್ತು. ಅನೇಕರು ಅಗೆ ಹಾಕುವ ಗದ್ದೆಗಳನ್ನು ಉತ್ತು, ಹುಡಿಬೀಜ ಬಿತ್ತಿ, ಬೇಲಿಗಳನ್ನೂ ಕಟ್ಟಿದ್ದರು. ಕಾನೂರು ಸೇರೆಗಾರ ರಂಗಪ್ಪ ಸೆಟ್ಟರೂ — ಯಾತ್ರೆ ಹೊರಡುವಾಗ ಚಂದ್ರಯ್ಯಗೌಡರು ಮಾಡಿದ್ದ ಅಪ್ಪಣೆಯಂತೆ ಗದ್ದೆ ತೋಟಗಳ ಕಾಮಗಾರಿಯನ್ನೆಲ್ಲ ಅಚ್ಚುಕಟ್ಟಾಗಿ ಮೆಹನತ್ತಿನಿಂದ ಮಾಡಿಸಿದ್ದರು. ಚಂದ್ರಯ್ಯಗೌಡರು, ರಾಮಯ್ಯ, ಕಡೆಗೆ ವಾಸುವೂ ಕೂಡ, ಮನೆಯಲ್ಲಿ ಇಲ್ಲದಿದ್ದುದರಿಂದ ಸೇರೆಗಾರರ ಮನಸ್ಸಿನಲ್ಲಿ ತಾವೇ ಕಾನೂರಿನ ಯಜಮಾನರೆಂಬ ಹೆಚ್ಚುಗಾರಿಕೆ ಮೂಡಿ, ಕೆಲಸಗಳನ್ನೆಲ್ಲ ಸಾಂಗವಾಗಿ ಬಹಳ ಮುತುವರ್ಜಿಯಿಂದ ನೆರವೇರಿಸುತ್ತಿದ್ದರು.

ಅಂದ ಮಾತ್ರಕ್ಕೆ, ಅವರು ಮಜಾ ಮಾಡುವುದನ್ನು ಬಿಟ್ಟಿದ್ದರೆಂದು ಭಾವಿಸಬಾರದು. ಗೌಡರು ಯಾತ್ರೆ ಹೊರಟಂದಿನಿಂದ ಗಂಗೆಯೂ ಸೇರೆಗಾರರೂ ಸೇರಿ ಕಾನೂರು ಮನೆಯನ್ನು ಇಂದ್ರಿಯ ಸುಖಗಳಿಗೆ ನಂದನವನವನ್ನಾಗಿ ಮಾಡಿಬಿಟ್ಟಿದ್ದರು! ಪ್ರತಿದಿನವೂ ಔತಣ ತಪ್ಪುತ್ತಿರಲಿಲ್ಲ. ದಿನಕ್ಕೊಂದು ಕೋಳಿ ಖರ್ಚಾಗುತ್ತಿತ್ತು. ಕನ್ನಡ ಜಿಲ್ಲೆಯವರ ರೂಢಿಯಂತೆ ಒಂದು ಕೋಳಿ ಪಲ್ಯಕ್ಕೆ ಐದಾರು, ಕೆಲವು ಸಾರಿ ಇನ್ನೂ ಹೆಚ್ಚು ತೆಂಗಿನ ಕಾಯಿಗಳನ್ನು ಹಾಕುತ್ತಿದ್ದರು. ಈ ಔತಣಗಳಿಗೆ ಹಳೆಪೈಕದ ತಿಮ್ಮ ಮತ್ತು ಸೇರೆಗಾರರ ಆಳುಗಳಲ್ಲಿ ಮುಖ್ಯರಾದವರೂ ಸೇರುತ್ತಿದ್ದರು. ತಿಮ್ಮ ಕೈಯಲ್ಲಾದಷ್ಟು ಕಳ್ಳನ್ನು ತಂದೊದಗಿಸುತ್ತಿದ್ದನು. ಸಾಲದಿದ್ದುದಕ್ಕೆ ಬೇರೆ ಕಳ್ಳಂಗಡಿಯಿಂದ ಕಳ್ಳುಸಾರಾಯಿಗಳು ಸರಬರಾಯಿಯಾಗುತ್ತಿದ್ದುವು. ಸೇರೆಗಾರರು ಬತ್ತವನ್ನೂ ಅಡಕೆಯನ್ನೂ ಮಾಪಿಳ್ಳೆಯ ಕಳ್ಳವ್ಯಾಪಾರಗಾರರಿಗೆ ಮಾರಿ ಭೋಗಗಳಿಗೆ ಹಣ ಒದಗಿಸಿಕೊಂಡುದಲ್ಲದೆ, ಧನಸಂಗ್ರಹವನ್ನೂ ಕೂಡ ಮಾಡಿಬಿಟ್ಟರು. ಅನೇಕ ರಾತ್ರಿ ಕಾನೂರು ಮನೆಯಲ್ಲಿ ತಿಂದು ಕುಡಿದು ನೆತ್ತಿಗೇರಿದ ಆ ಜನರು ತಾಳ ಮದ್ದಳೆ ಬಡಿಯುವುದು, ಪ್ರಸಂಗ ಹೇಳುವುದು, ಭಾಗವತರಾಟ ಕುಣಿಯುವುದು, ಇಸ್ಪೀಟು ಆಡುವುದು — ಇತ್ಯಾದಿ ಆಮೋದ ಪ್ರಮೋದಗಳಲ್ಲಿ ತತ್ಪರರಾಗಿ ದಾಂದಲೆ ನಡೆಸುತ್ತಿದ್ದರು.

ಈ ಸಂಗತಿಗಳನ್ನೆಲ್ಲ ಸೋಮನಿಂದ ತಿಳಿದುಕೊಂಡ ಹೂವಯ್ಯ ಮುತ್ತಳ್ಳಿಗೆ ಹೇಳಿಕಳುಹಿಸಿದನು. ಚಿನ್ನಯ್ಯ (ಚಿನ್ನಯ್ಯ ಪುಟ್ಟಮ್ಮರು ಯಾತ್ರೆಗೆ ಹೋಗಿರ ಲಿಲ್ಲ.) ಮಾವನ ಮನೆಗೆ ಬಂದು ಸೇರೆಗಾರರನ್ನು ವಿಚಾರಿಸಲು, ಅವರು ಅದನ್ನೆಲ್ಲ ಸಂಪೂರ್ಣವಾಗಿ ಅಲ್ಲಗಳೆದು ಸುಳ್ಳಾಡಿದರು. ಆದರೆ ಆ ಸಾಯಂಕಾಲ ಚಿನ್ನಯ್ಯ ಮನೆಗೆ ಹೋಗುತ್ತೇನೆಂದು ಹುಸಿ ಹೇಳಿ, ಕೆಳಕಾನೂರಿಗೆ ಹೋಗಿ ಉಳಿದುಕೊಂಡು, ರಾತ್ರಿಯಾದಮೇಲೆ ಹೂವಯ್ಯ, ಪುಟ್ಟಣ್ಣ, ಸೋಮ ಇವರೊಡಗೂಡಿ ಕಾನೂರಿಗೆ ಬಂದು ನೋಡಿದಾಗ ದೃಶ್ಯ ಬೀಭತ್ಸಕರವಾಗಿತ್ತು. ಗಂಡಸರ ಮಾತಂತಿರಲಿ, ಗಂಗೆಯೂ ಕೂಡ ನೋಡಬಾರದ ಸ್ಥಿತಿಯಲ್ಲಿದ್ದಳು. ಒಬ್ಬರಿಗಾದರೂ ತಲೆ ನೆಟ್ಟಗಿರಲಿಲ್ಲ. ಕೆಲವರಿಗಂತೂ ಬಂದವರ ಗುರುತೇ ಸಿಕ್ಕಲಿಲ್ಲ. ಒಬ್ಬಿಬ್ಬರು ಅವರಿಗೇನಾಯಿತೊ ಏನೊ, ಚಿನ್ನಯ್ಯ ಹೂವಯ್ಯರನ್ನು ನೋಡಿ ಕಿಲಕಿಲನೆ ನಗತೊಡಗಿದರು. ಒಬ್ಬ ತೂರಾಡುತ್ತ ಬಂದು ಹೂವಯ್ಯನನ್ನು ಅಪ್ಪಿಕೊಳ್ಳಲು ಪ್ರಯತ್ನಿಸುತ್ತಿರಲು, ಸೋಮ ದಬ್ಬಿದುದರಿಂದ ಕೆಳಗುರುಳಿಬಿದ್ದು, ವಿಕಾರವಾಗಿ ಕೂಗಿಕೊಂಡನು. ಸೇರೆಗಾರರಂತೂ ಅರ್ಧನಗ್ನಾವಸ್ಥೆಯಲ್ಲಿ ಚಿನ್ನಯ್ಯ ನನ್ನಾಗಲಿ ಯಾರನ್ನಾಗಲಿ ಲಕ್ಷಿಸದೆ, ಕಣ್ಣು ಕೆಂಪಗೆ ಮಾಡಿಕೊಂಡು, ಮೈ ಮೇಲೆ ಬೀಳುವಷ್ಟರಮಟ್ಟಿಗಿದ್ದರು. ಹೂವಯ್ಯ ಕೆರಳಿದ ಚಿನ್ನಯ್ಯನನ್ನು ಸಮಾಧಾನ ಪಡಿಸಿ ಹಿಂದಕ್ಕೆ ಕರೆದೊಯ್ದನು. ಮರುದಿನ ಬೆಳಗ್ಗೆ ಪುನಃ ಬಂದಾಗ ಸೇರೆಗಾರರು ಚಿನ್ನಯ್ಯನ ಕಾಲು ಮುಟ್ಟಿ ಮುಟ್ಟಿ ಕ್ಷಮಾಪಣೆ ಕೇಳಿಕೊಂಡಮೇಲೆ, ಚಿನ್ನಯ್ಯ ಹಾಗೆಲ್ಲ ಮಾಡಬಾರದೆಂದು ಎಚ್ಚರಿಕೆ ಹೇಳಿ ಮುತ್ತಳ್ಳಿಗೆ ಹೊರಟುಹೋದನು.

ಆದರೆ ಸೇರೆಗಾರರು ತಮ್ಮ ಆಮೋದ ಪ್ರಮೋದಗಳನ್ನು ನಿಲ್ಲಿಸಿರಲಿಲ್ಲ. ಅವರಿಗೇನೊ ಅದನ್ನು ಸ್ವಲ್ಪಮಟ್ಟಿಗಾದರೂ ಕಡಮೆಮಾಡಬೇಕೆಂದು ಮನಸ್ಸಿದ್ದರೂ ಗಂಗೆ ಅದಕ್ಕೆ ಆಸ್ಪದ ಕೊಡಲಿಲ್ಲ. ಪತಿತಮಾತ್ರಳಾಗಿದ್ದ ಅವಳು ಇತ್ತೀಚೆಗೆ ಹೃದಯದಲ್ಲಿ ವಿಷಯಾಗ್ನಿ ಕುಂಡವನ್ನಿಟ್ಟುಕೊಂಡು ಕಾಮ ರಾಕ್ಷಸಿ ಯಾಗಿ ಬಿಟ್ಟಿದ್ದಳು. . . .

ಗೌಡರು ಯಾತ್ರೆ ಹೊರಟುಹೋಗಿ ಎರಡು ವಾರ ಕಳೆದಮೇಲೆ ಒಂದು ಶನಿವಾರ ಸಾಯಂಕಾಲವಾಗುತ್ತಿತ್ತು. ಕಳ್ಳಂಗಡಿಗೆ ಸಮೀಪದಲ್ಲಿ ಕಾಡಿನ ನಡುವೆ ಇದ್ದ ಒಂದು ಕಿರುಬಯಲು ಹೊಸಮಳೆಯಲ್ಲಿ ಮಿಂದು ಹಸುರುನಗೆ ಬೀರುತ್ತಿತ್ತು. ಇನ್ನೂ ನಾಲ್ಕು ಗಂಟೆಯಾಗಿರದಿದ್ದರೂ ಕಾಡಿನ ನೆಳಲು ಬಯಲನ್ನೆಲ್ಲ ಆವರಿಸಿತ್ತು. ಮರಗಳ ಸಂಧಿಯಲ್ಲಿ ಕೋಲುಕೋಲಾಗಿ ಇಣುಕು ತ್ತಿದ್ದ ಬಿಸಿಲು ಬಯಲಿನ ಹೊಸ ಹಸುರನ್ನು ಮನೋಹರವಾಗಿ ಮಾಡಿತ್ತು. ಒಂದೆರಡು ಪಿಕಳಾರ ಪಕ್ಷಿಗಳ ಧ್ವನಿ ಹೊರತೂ ಎಲ್ಲ ನೀರವವಾಗಿತ್ತು.

ಆ ಬಯಲಿನ ಹೆಸರು 'ಕೋಳಿ ಅಂಕದ ಪಟ್ಟೆ.' ಆ ಹೆಸರು ಮೊದಲು ಅನ್ವರ್ಥವಾಗಿ ಹುಟ್ಟಿ, ಕಡೆಗೆ ಅಂಕಿತವಾಗಿಬಿಟ್ಟಿತ್ತು. ಬಹುಕಾಲದಿಂದಲೂ ಆ ಬಯಲು ಕೋಳಿಗಳ ಕಾಳಗಕ್ಕೂ ಜೂಜಾಟಕ್ಕೂ ರಂಗವಾಗಿತ್ತು. ದೊಡ್ಡ ದೊಡ್ಡ ನಗರಗಳಲ್ಲಿ ರಾಜರುಗಳೂ ಶ್ರೀಮಂತರೂ ಸೇರಿ 'ಕುದುರೆ ಜೂಜು' ನಡೆಸುವಂತೆ ಗಟ್ಟದಮೇಲಕ್ಕೆ ಕೆಲಸದಾಳುಗಳನ್ನು ಕರೆತರುವ ಸೇರೆಗಾರರು 'ಕೋಳಿ ಅಂಕ'ಗಳನ್ನು ಹೂಡುವುದು ವಾಡಿಕೆಯಾಗಿತ್ತು. ಆ ಬಯಲು ಕಳ್ಳಂಗಡಿಗೆ ಸಮೀಪವಾಗಿದ್ದುದರಿಂದಲೂ, ಕಾಡಿನ ನಡುವೆ ಗೋಪ್ಯವಾಗಿದ್ದು ದರಿಂದಲೂ, ಜೂಜು ಜುಗಾರಿಯಾಡುವಾಗ ಎಲ್ಲಿಯಾದರೂ ಒಂದುವೇಳೆ ಕರಿಯ ಪೇಟದವರು (ಪೋಲೀಸಿನವರು) ಬಂದರೂ ಅರಣ್ಯದಲ್ಲಿ ಅವರ ಕಣ್ಣಿಗೆ ಮಣ್ಣೆರಚಿ ತಪ್ಪಿಸಿಕೊಳ್ಳಲು ಬೇಕಾದಷ್ಟು ಅನುಕೂಲಗಳಿದ್ದುದರಿಂದಲೂ, ಅದು 'ಕೋಳಿ ಅಂಕದ ಪಟ್ಟೆ'ಯಾಗಲು ಅತ್ಯಂತಾರ್ಹವಾಗಿತ್ತು.

ನಾಲ್ಕು ಗಂಟೆಯ ಹೊತ್ತಿಗೆ ಜನರು ಒಬ್ಬೊಬ್ಬರಾಗಿ ಇಬ್ಬಿಬ್ಬರಾಗಿ ಗೊಣ ಗೊಣನೆ ಮಾತಾಡಿಕೊಳ್ಳುತ್ತಾ 'ಕೋಳಿ ಅಂಕದ ಪಟ್ಟೆ'ಯಲ್ಲಿ ನೆರೆಯಲಾರಂಭಿ ಸಿದರು. ಕಳ್ಳಂಗಡಿಯವನು ಒಂದು ಮರದಡಿಯಲ್ಲಿ ಎತ್ತರವಾಗಿದ್ದ ದಿಬ್ಬದ ಮೇಲೆ, ಎಂದಿನಂತೆ ತನ್ನ ಅಂಗಡಿಯನ್ನು ಕಣ್ಣು ಮುಚ್ಚಿ ಬಿಡುವಷ್ಟರಲ್ಲಿಯೆ ಬಿಚ್ಚಿಬಿಟ್ಟನು: ಬಗನಿಯ ಕಳ್ಳು, ಸಾರಾಯಿ, ಅಕ್ಕಿಭೋಜ, ಹುರಿಗಡಲೆ, ಪುರಿ, ಓಲೆಬೆಲ್ಲ, ಹೊಗೆಸೊಪ್ಪು, ವೀಳೆಯದೆಲೆ, ಬೀಡಿ, ಬೆಂಕಿಪೆಟ್ಟಿಗೆ, ಬಾಳೆಯಹಣ್ಣು, ಬೇಯಿಸಿದ ಕೋಳಿಮೊಟ್ಟೆ, ಸ್ವಾರ್ಲುಮೀನು, ಚಾಕಣ, ಇಸ್ಪೀಟು ಪ್ಯಾಕುಗಳು —ಇತ್ಯಾದಿಯಾಗಿ ಅಂಕಕ್ಕೆ ಬರುವ ಆಟಗಾರರಿಗೂ ನೋಟಗಾರರಿಗೂ ಬೇಕಾಗುವ ಸಕಲ ಸಾಮಗ್ರಿಗಳನ್ನೂ ಅಣಿಮಾಡಿಕೊಂಡು, ಯಾರು ಬಂದರೆ ಅವರೊಡನೆ ಹಸನ್ಮುಖಿಯಾಗಿ ಮಾತಾಡಿ ಮೋಹಿಸುತ್ತ, ಅವರ, ಅವರ ನಂಟ ರಿಷ್ಟರ, ಅವರ ತೋಟ ಗದ್ದೆಗಳ, ಅವರ ನಾಯಿ ಕೋಳಿಗಳ ಯೋಗಕ್ಷೇಮ ಗಳನ್ನೆಲ್ಲ ವಿಚಾರಿಸುತ್ತ, ಬಲೆ ಬೀಸಿಕೊಂಡು ಕಾಯುವ ಬೆಸ್ತನಂತೆ ಕುಳಿತನು.

ಅರ್ಧ ಘಂಟೆಯೊಳಗಾಗಿ ಅರಣ್ಯ ಮಧ್ಯೆ ಮೌನವಾಗಿದ್ದ ಬಯಲು ಮನುಷ್ಯ ವಾಣಿಗಳಿಂದ ಸಶಬ್ದವಾಯಿತು. ತಲೆಗೆ ಹಾಳೆಟೋಪಿ ಹಾಕಿಕೊಂಡು ಶೈಶವದಲ್ಲಿ ಅರಿಸಿನದ ಕೊಂಬುಗಳಿಂದ ಸುಟ್ಟಿದ್ದು ಈಗ ವಿಸ್ತಾರವಾಗಿದ್ದ ಕಲೆಗಳುಳ್ಳ ಹೊಟ್ಟೆ ಯನ್ನು ಬಿಟ್ಟುಕೊಂಡು, ಎದುರಿಗೆ ತ್ರಿಕೋಣಾಕಾರವಾಗಿ ಕಾಣುವಂತೆ ಸೊಂಟದ ಪಂಚೆ ಸುತ್ತಿಕೊಂಡು, ಕಾಲುಗಳಿಗೆ ಬೆಳ್ಳಿಯ ಸರಿಗೆಯನ್ನೂ ಕಂಬಳಿಯ ಕರೆಯನ್ನೂ 'ಮುಷ್ಟ'ಮಾಡಿ ಕಟ್ಟಿಕೊಂಡು ಮುತ್ತಳ್ಳಿ ಸೇರೆಗಾರರ ಕಡೆಯ 'ಬಗಲಿ'ಯು, ಕೋಳಿಯಂಕದಲ್ಲಿ ತನ್ನ ಪ್ರಾಧಾನ್ಯವನ್ನು ತಾನೆ ಚೆನ್ನಾಗಿ ಅರಿತವನ ಠೀವಿಯಿಂದ,

ಇಬ್ಬರು ಮೂವರೊಡನೆ ಅವರ ಕೈಲಿ ಅಂಕದ ಕೋಳಿಹುಂಜಗಳನ್ನು ಹೊರಿಸಿ ಕೊಂಡು, ಗಟ್ಟಿಯಾಗಿ ಮಾತಾಡುತ್ತ ಬಂದನು. ಅವನ ಮೊಳಕಾಲಿನ ರೋಮ ಮಯವಾದ ಮಾಂಸಖಂಡದಲ್ಲಿ ಒಂದು ಕುಂಟನ ಹುಣ್ಣು ಇದ್ದು, ಅದಕ್ಕೆ ಇದ್ದಲನ್ನು ತೇದು ತಯಾರುಮಾಡಿದ ಕರಿಯ ಮದ್ದು ಬಳಿದಿತ್ತು. ಬಂದವನೆ ಅಂಕಕ್ಕಾಗಿ ನೆರೆದಿದ್ದ ಕೋಳಿಯ ಹುಂಜಗಳನ್ನು, ಅವುಗಳ ಕಾಲಿಗೆ ಹಗ್ಗಹಾಕಿ ಕಟ್ಟಿದ್ದ ಪೊದೆಗಳೆಡೆಗೆ ಹೋಗಿ, ಒಂದೊಂದರ ಬಳಿಯೂ ನಿಂತು ನಿಂತು ಪರೀಕ್ಷಿಸಿದನು. ಆ 'ಬಗಲಿ' ಅಂಕಕ್ಕೆ ಬಂದ ಕೋಳಿಗಳಿಗೆ ಜೊತೆ ಹಾಕುವುದರಲ್ಲಿ ಶಿಫಾರಸು ಸಂಪಾದಿಸಿದ್ದನು. ಆದ್ದರಿಂದ ಪ್ರತಿಯೊಂದು ಅಂಕದಲ್ಲಿಯೂ 'ಜೊತೆಹಾಕು'ವುದರಲ್ಲಿ ಅವನ ಅಭಿಪ್ರಾಯಕ್ಕೇ ಬಹಳ ಗೌರವವಿರುತ್ತಿತ್ತು. ಆದ್ದರಿಂದಲೆ ಅಂಕಕ್ಕೆ ಕೋಳಿಗಳನ್ನು ತಂದಿದ್ದವರೆಲ್ಲರೂ, ಅವರಲ್ಲಿ ಕೆಲವರು 'ಬಗಲಿ' ಗಿಂತಲೂ ವೇಷಭೂಷಣದಲ್ಲಿ ಎಷ್ಟೋ ಮಿಗಿಲಾಗಿದ್ದರೂ, 'ಬಗಲಿ'ಯ ಹಿಂದೆ, ಆತನನ್ನು 'ಸೀಸೀ' ಮಾಡಲೆಂದೊ ಏನೊ, ಪರಿವಾರ ಕಟ್ಟಿಕೊಂಡು ತಿರುಗತೊಡಗಿದ್ದರು. ಹಂದಿಗಳ ಮುಂದೆ ಮುತ್ತು ಚೆಲ್ಲುವವನ ಧೋರಣೆ ಯಿಂದ ಆ 'ಬಗಲಿ' ತನ್ನ ಅಮೂಲ್ಯವಾದ ಅಭಿಪ್ರಾಯಗಳನ್ನು ಎರಚುತ್ತ, ಹಿಂದೆ ಅನೇಕ ಅಂಕಗಳಲ್ಲಿ ಗೆದ್ದು ಹೆಸರುವಾಸಿಯಾಗಿ "ಅಭಿಮನ್ಯು" "ಕರ್ಣ" "ಅರ್ಜುನ" ಮೊದಲಾದ ಪೌರಾಣಿಕ ಬಿರುದಾವಳಿಗಳನ್ನೂ ಪಡೆದು, ನೋಡು ವುದಕ್ಕೆ ಲಕ್ಷಣವಾಗಿಯೂ ಧೀರವಾಗಿಯೂ ಇದ್ದು, ತಮ್ಮನ್ನು ಸಂದರ್ಶಿಸುವು ದಕ್ಕೆ ಬಂದ ನರಾಕೃತಿಗಳನ್ನು ಅದೇನೊ ಒಂದು ಅಹಂಭಾವದಿಂದ ನೋಡುತ್ತಿದ್ದ ಕೋಳಿಹುಂಜಗಳನ್ನು ಮೈನೀವಿ ಶ್ಲಾಘಿಸಿ ಹುರಿದುಂಬಿಸುತ್ತ, ಮುಂದೆ ಮುಂದೆ ಸರಿದನು.

ಇನ್ನೊಂದು ಅರ್ಧಗಂಟೆಯೊಳಗಾಗಿ ನೂರೈವತ್ತು ಇನ್ನೂರು ಜನಗಳ ಮೇಲೆ ನೆರೆಯಿತು. ಅಂಕದ ಕೋಳಿಗಳು ಇಪ್ಪತ್ತು ಮೂವತ್ತು ಜೊತೆಗಳಷ್ಟು ಬಂದಿದ್ದುವು. ಉಳಿದ ಜನಗಳಲ್ಲಿ ಅರೆಪಾಲು ಜುಗಾರಿಗಾಗಿ ಎಂದರೆ ಇಸ್ಪೀಟಿನ ಜೂಜಾಟಕ್ಕಾಗಿಯೇ ಬಂದಿದ್ದರು. ಅನೇಕರು ಅಂಕಕ್ಕಾಗಿ ತಾವೇ ಕೋಳಿಗಳನ್ನು ತರದಿದ್ದರೂ ಅಂಕಕ್ಕೆ ನಿಂತ ಹುಂಜಗಳ ಪಕ್ಷ ಪ್ರತಿಪಕ್ಷಗಳನ್ನು ವಹಿಸಿ, ಕುದುರೆಯ ಜೂಜಿನಲ್ಲಿ ನೆರೆದ ನೋಟಕರು 'ಆ ಕುದುರೆ ಗೆಲ್ಲುತ್ತದೆ' 'ಈ ಕುದುರೆ ಗೆಲ್ಲು ತ್ತದೆ' ಎಂದು ತಮ್ಮ ತಮ್ಮಲ್ಲಿಯೆ ಜೂಜು ಕಟ್ಟುವಂತೆ, 'ಮೇಲುಜೂಜು' ಕಟ್ಟಲು ಬಂದಿದ್ದರು.

ಅಷ್ಟೊಂದು ಜನರು ನೆರೆದಿದ್ದರೂ, ಹೊತ್ತು ಐದು ಗಂಟೆಯ ಮೇಲೆ ಆಗಿದ್ದರೂ, ಇನ್ನೂ 'ಕೋಳಿಯಂಕ' ಪ್ರಾರಂಭವಾಗಿರಲಿಲ್ಲ. ಎಲ್ಲರೂ

ಯಾರನ್ನೊ ನಿರೀಕ್ಷಿಸುತ್ತ ಹಾದಿ ನೋಡುತ್ತಿದ್ದರು. ಮುತ್ತಳ್ಳಿಯ ಸೇರೆಗಾರರೂ ಸೀತೆಮನೆಯ ಸೇರೆಗಾರರೂ ಬಂದಿದ್ದರೂ, ಕಾನೂರಿನ ಸೇರೆಗಾರ ರಂಗಪ್ಪಸೆಟ್ಟರು ಬರದೆ ಅಂಕ ಪ್ರಾರಂಭವಾಗುವಂತಿರಲಿಲ್ಲ. ಏಕೆಂದರೆ, ಅವರಿಗೆ ಆಳುಗಳ ಸೇರೆಗಾರಿಕೆ ಮಾತ್ರವಲ್ಲದೆ ಸೇರೆಗಾರರ ಸೇರೆಗಾರಿಕೆಯೂ ದೊರೆಕೊಂಡಿತ್ತು.

ಮುತ್ತಳ್ಳಿಯ 'ಬಗಲಿ' ತನ್ನ ಸೇರೆಗಾರರೊಡನೆ "ಹೌದಾ, ಕಾಂಬುದೇನು? ಕೇಂಬುದೇನು? ಸೇರೆಗಾರ್‍ರೆ! ಅಂಕಕ್ಕೆ ಕೈಹಾಕುವಾ!" ಎಂದನು.

ಆದರೆ ಮುತ್ತಳ್ಳಿಯ ಸೇರೆಗಾರರಿಗೆ ಕಾನೂರು ಸೇರೆಗಾರರನ್ನು ಬಿಟ್ಟು ಅಂಕವನ್ನು ನಡೆಸುವ ಎದೆಯಿರಲಿಲ್ಲ.

ಕಳ್ಳಂಗಡಿಯವನಿಗಂತೂ ವ್ಯಾಪಾರ ಸನ್ನಿಪಾತಜ್ವರದಂತೆ ಏರತೊಡಗಿತ್ತು.

ಬಯಲಿನ ತುಂಬ ಜನಗಳೂ, ಅವರ ಧ್ವನಿಯೂ, ಅವರ ವಾಸನೆಯೂ ತುಂಬಿತ್ತು. ಎಲೆಯಡಕೆಯ ವಾಸನೆ, ಬೀಡಿಯ ಹೊಗೆ ಮತ್ತು ಅದರ ವಾಸನೆ, ಸುಟ್ಟ ಒಣಮೀನಿನ ವಾಸನೆ, ಕಳ್ಳು ಮೊದಲಾದವುಗಳ ವಾಸನೆ! ಹುಂಜಗಳ ಕೂಗು, ರೆಕ್ಕೆಗಳ ಬಡಿದಾಟ! ಕೆಟ್ಟ ಮಾತಿನ ಬೈದಾಟ!

"ಹೋ ಬಂದರು! ಬಂದರು!"

"ಏನು ಮಹಾರಾಜರು ಬಂದ್ಹಾಂಗೆ ಬರ್‍ತಿದ್ದಾರೆ!"

"ಮತ್ತಿನ್ನೇನು? ಚಂದ್ರೇಗೌಡ್ರ ಪಟ್ಟಾನೆ ಸಿಕ್ಕಿಬಿಟ್ಟದೆ!"

"ಹಣೇಲಿ ಬರ್‍ದಿದ್ದು!"

ಇತ್ಯಾದಿ ವ್ಯಾಖ್ಯಾನಗಳೊಡನೆ ನೆರೆದಿದ್ದವರ ದೃಷ್ಟಿಗಳೆಲ್ಲ ಏಕಮುಖವಾಗುತ್ತಿರಲು, ಕಾನೂರು ಸೇರೆಗಾರ ರಂಗಪ್ಪ ಸೆಟ್ಟರು, ತಡಮಾಡಿ ಬಂದುದಕ್ಕೆ ಕ್ಷಮಾಪಣೆ ಕೇಳಿಕೊಳ್ಳುವ ಬದಲಾಗಿಯೋ ಎಂಬಂತೆ, ಸ್ವಲ್ಪ ಅವಸರ ಅವಸರವಾಗಿಯೆ ನಡೆದುಬಂದರು.

ಆದರೆ ಅವರ ಮುಖದಲ್ಲಿ ಅವಸರದ ಭಾವವಿರಲಿಲ್ಲ. ಅದಕ್ಕೆ ಬದಲಾಗಿ ತೃಪ್ತಿ, ಹೆಮ್ಮೆ, ಅಟ್ಟಹಾಸ, ತಾವು ಮುಖ್ಯವ್ಯಕ್ತಿ ಎಂಬೊಂದು ಅಭಿಮಾನ, ತಮ್ಮ ಆಗಮನಕ್ಕಾಗಿ ಅಷ್ಟೊಂದು ಜನರು ಅಷ್ಟಂಹೊತ್ತು ಕಾದಿದ್ದಾರಲ್ಲ, ಪರ್ವಾ ಇಲ್ಲ, ಎಂಬೊಂದು ದಂಭ — ಇವುಗಳೆಲ್ಲ ನಗುತ್ತಿದ್ದ ಅವರ ಹಲ್ಲುಬ್ಬು ಮುಖದಲ್ಲಿ ಚಿತ್ರಿತವಾಗಿದ್ದುವು. ಅವರು ತಲೆಗೆ ಸುತ್ತಿಕೊಂಡಿದ್ದ ಕೆಂಪು ವಸ್ತ್ರ, ಅವರ ಕಿವಿಗಳಲ್ಲಿ ಹೊಳೆಯುತ್ತಿದ್ದ ದೊಡ್ಡ ಹರಳೊಂಟಿಗಳು, ಮುಡಿದಿದ್ದ ಹೂವು, ಆಗಾಗ ನೀವುತ್ತಿದ್ದರೂ ಅತಿ ಸಾಧಾರಣವಾಗಿದ್ದ ಮೀಸೆಗಳು, ಕ್ಷೌರ ಮಾಡಿಸಿದ್ದ ಕುಳಿಗೆನ್ನೆ, ಮತ್ತು ದೃಢತೆಯನ್ನಾಗಲಿ ಕ್ರಿಯಾಶಕ್ತಿಯನ್ನಾಗಲಿ ಸೂಚಿಸದ ಮೋಸದ ಗಲ್ಲ, ಹಾಕಿಕೊಂಡಿದ್ದ ಕರಿಯ ಕೋಟು, ಮೊಳಕಾಲಿನಿಂದ

ಸ್ವಲ್ಪ ಕೆಳಗೆ ಇಳಿದಿದ್ದ ಕಚ್ಚೆ, ಒಂದು ಕಾಲಿನಲ್ಲಿದ್ದ ಬೆಳ್ಳಿಯ ಸರಿಗೆ, ಗಿರಕು ಬರಕು ಸದ್ದು ಮಾಡುತ್ತ ತಮ್ಮ ಇರುವಿಕೆಯನ್ನು ಕೂಗಿ ಹೇಳುವಂತಿದ್ದ ತಳುಕಿನ ಮೆಟ್ಟುಗಳು, ಕೈಯಲ್ಲಿ ಹಿಡಿದಿದ್ದ ಬೆಳ್ಳಿಕಟ್ಟಿನ ಬೆತ್ತ—ಈ ಒಂದೊಂದೂ ನಾಗರಿಕತೆಯನ್ನು ಅನುಸರಿಸಲು ಪ್ರಯತ್ನಿಸುತ್ತಿದ್ದ ಅನಾಗರಿಕ ಅಸಂಸ್ಕೃತನನ್ನು ಚೆನ್ನಾಗಿ ಪ್ರದರ್ಶಿಸುತ್ತಿದ್ದರೂ, ಅಲ್ಲಿ ನೆರೆದಿದ್ದವರಿಗೆ ಸೇರೆಗಾರರು ಆದರ್ಶ ಮೂರ್ತಿಯಾಗಿ ರಾರಾಜಿಸಿದರು.

ರಂಗಪ್ಪ ಸೆಟ್ಟರ ಹಿಂದೆಯೂ ಅಕ್ಕಪಕ್ಕಗಳಲ್ಲಿಯೂ ಅವರ 'ಬಗಲಿ' ಮತ್ತು ಆಳುಗಳೂ, ಹಳೆಪೈಕದ ತಿಮ್ಮನೇ ಮೊದಲಾದ ಕಾನೂರಿನ ಸ್ವತಂತ್ರಿಗಳೂ ಬರುತ್ತಿದ್ದರು. ತಿಮ್ಮ ಕಂಕುಳಲ್ಲಿ ಒಂದು ಸಣ್ಣ ಜಾತಿಯ ಅಂಕದ ಹುಂಜವನ್ನು ಅವುಚಿಕೊಂಡಿದ್ದನು. ಆಳುಗಳೂ ಇನ್ನೆರಡು ದೊಡ್ಡ ದೊಡ್ಡ ಹುಂಜಗಳನ್ನು ಹಿಡಿದುಕೊಂಡಿದ್ದರು. ಮರಗಳ ನಡುವೆ ಗುಂಪು ನಡೆದು ಬರುತ್ತಿದ್ದಾಗ ಒಂದೆರಡು ಎಡೆಗಳಲ್ಲಿ ತೂರಿಬರುತ್ತಿದ್ದ ಸಂಜೆಯ ಬಿಸಿಲಿನಲ್ಲಿ, ಹುಂಜಗಳ ರಕ್ತ ಗರ್ಭಿತವಾದ ಕೆಂಗೆಂಪು ಜೊಟ್ಟುಗಳು ಸೇರೆಗಾರರ ತಲೆವಸ್ತ್ರಕ್ಕಿಂತಲೂ ಕೆಂಪಾಗಿ ರಂಜಿಸಿದುವು.

ಅಂಕದ ಸಮಯಗಳಲ್ಲಿ ಸಾಮಾನ್ಯವಾಗಿ ರಂಗಪ್ಪ ಸೆಟ್ಟರು ಸ್ವಲ್ಪ ಹೆಚ್ಚಾಗಿಯೇ ಹರ್ಷದಿಂದಿರುತ್ತಿದ್ದರೂ ಆ ದಿನ ಅವರು ಎಂದಿಗಿಂತಲೂ ಅತಿಶಯವಾಗಿ ಸಂತೋಷವಾಗಿದ್ದಂತೆ ಕಾಣುತ್ತಿತ್ತು. ಹೆಂಗಸರ ಹಾಗೆ ತಲೆಯ ತುಂಬಾ ಕೂದಲಿದ್ದು, ಹೊಸದಾಗಿ ಕ್ಷೌರಮಾಡಿಸಿದ್ದ ಅವರ ಚಪ್ಪಟೆ ಮುಖದಮೇಲೆ, ತನ್ನ ಸಲುವಾಗಿ ಪಾತ್ರೆಯಲ್ಲಿ ಪಲಾವ್ನ್ನು ತೆಗೆದುಕೊಂಡು ಬರುವ ಯಜಮಾನನನ್ನು ಕಂಡು ಬಾಲವಲ್ಲಾಡಿಸುತ್ತ ಮುಖವನ್ನೇ ಅಭೀಪ್ಸಕವಾಗಿ ವೀಕ್ಷಿಸುವ ನಾಯಿಯ ಮೋರೆಯ ಮೇಲೆ ಕಣ್ಣುಗಳಲ್ಲಿ ತೋರುವ, ವಿಷಯಲಾಲಸೆಯ ಕಳೆಯೊಂದು ಮಿರುಗುತ್ತಿತ್ತು. ಆ ಮಿರುಗು ಅವರ ತಲೆಯೊಳಗೆ ಮಿದುಳಿನಲ್ಲಿ ಸಂಚರಿಸುತ್ತಿದ್ದ ವ್ಯಭಿಚಾರೀ ಭಾವದ ಪ್ರತಿಬಿಂಬವಾಗಿತ್ತು.

ಕೋಳಿಯಂಕವೆಂದರೆ ರಂಗಪ್ಪ ಸೆಟ್ಟರಿಗೆ ಪ್ರಾಣ. ಆದರೂ ಆ ದಿನ ಅವರು ಮನಸ್ಸಿಲ್ಲದ ಮನಸ್ಸಿನಿಂದ ಅಂಕಕ್ಕೆ ಬಂದಿದ್ದರು! ಕಾರಣವೇನೆಂದರೆ, ಅವರು ಹಾಕಿದ್ದ ಗಾಳಕ್ಕೆ ಅವರಿಗೆ ಬೇಕಾಗಿದ್ದ ಪ್ರೀತಿಯ ಮೀನು ಮುಲುಮುಲುಮುಲು ಕಚ್ಚಲಾರಂಭಿಸಿತ್ತು. ಗಾಳದ ನೇಣಿಗೆ ಕಟ್ಟಿದ್ದ ಬೆಂಡು ನೀರಿನಮೇಲೆ ಕುಣಿಯತೊಡಗಿತ್ತು! ಇನ್ನೇನು ಗಾಳದ ಚಳೆಯನ್ನು ಎಳೆದರೆ ಸೈ ಮೀನು ದಡಕ್ಕೆ ಬಿದ್ದು ಕೈಸೇರುತ್ತದೆ! ಅದನ್ನು ಹಾಗೆಯೆ ನಿಲ್ಲಿಸಿಬಿಟ್ಟು ಕೋಳಿ ಅಂಕಕ್ಕೆ ಬಂದಿದ್ದ ಸೇರೆಗಾರರಿಗೆ ಮನಸ್ಸು ಹಿಂದು ಹಿಂದಕ್ಕೆ ನೀಳ್ಕುಳಿಗೊಳ್ಳುತ್ತಿತ್ತು.

ಅಷ್ಟಾದರೂ 'ಕೋಳಿಯಂಕದ ಪಟ್ಟೆ'ಗೆ ಪ್ರವೇಶಿಸಿದ ತರುವಾಯ ಆ ನೆರೆದ ಜನರ ಉತ್ಸಾಹ ಉದ್ರೇಕ ಪ್ರಶಂಸೆ ಖಂಡನೆ ಮಾತು ನಗೆಗಳನ್ನೂ, ಅಂಕದ ಹುಂಜಗಳ ಸಮೂಹವನ್ನೂ, ಮುತ್ತಳ್ಳಿ ಸೇರೆಗಾರರು ಸೀತೆಮನೆ ಸೇರೆಗಾರರು ಮೊದಲಾದವರು ತಮಗೆ ತೋರುತ್ತಿದ್ದ ಭಯ ಭಕ್ತಿ ಗೌರವಗಳನ್ನೂ, ಮುಂದೆ ತಮಗೊದಗಲಿರುವ ಜಯ ಮತ್ತು ಲಾಭಗಳನ್ನೂ, ಕಳ್ಳು ಸಾರಾಯಿಗಳ ಕಂಪನ್ನೂ ಕಂಡ ಸೇರೆಗಾರರ ಮನಸ್ಸು ಆ ದಿನ ಮಧ್ಯಾಹ್ನ ತನ್ನ ತಾಯಿಯ ಜೊತೆ ಕಾನೂರಿಗೆ ಬಂದಿದ್ದ ನೆಲ್ಲುಹಳ್ಳಿಯ ಸುಬ್ಬಮ್ಮನನ್ನು ಸದ್ಯಕ್ಕೆ ಮರೆತು ಬಿಟ್ಟಿತು.

"ಹೌದಾ, ಸೇರಿಗಾರ್ರೆ, ತಡಮಾಡೂದ್ಯಾಕೆ?" ಎಂದು ಕೇಳಿದ ಮುತ್ತಳ್ಳಿಯ 'ಬಗಲಿ'ಗೆ ರಂಗಪ್ಪ ಸೆಟ್ಟರು "ಹೌದು, ಮಗಾ, ಕೈಹಚ್ಚಿನಿ! ತಡ ಮಾಡೂದ್ಯಾಕೆ?" ಎಂದು ಅಂಕ ಪ್ರಾರಂಭವಾಗುವಂತೆ ಮೀಸೆಯಮೇಲೆ ಕೈಯಾಡಿಸುತ ಬೆಸನಿತ್ತರು.

ಮುತ್ತಳ್ಳಿಯ 'ಬಗಲಿ'ಯೇ ಮೊದಲಾದ ಪ್ರವೀಣರು ಅಂಕದ ಹುಂಜಗಳಿಗೆ ಜೊತೆಹಾಕಲು ತೊಡಗಿದರು. ತುಳುಮಾತುಗಳ ಸುರಿಮಳೆ ಸುರಿಯಲಾರಂಭಿಸಿತು. 'ಆ ಕೆಂಪು ಹುಂಜಕ್ಕೆ ಈ ಬಿಳಿಯ ಹುಂಜ ಸಮುಗೈಯಲ್ಲ; ಏಕೆಂದರೆ ಅದರ ಕಾಲು ಉದ್ದ.' 'ಆ ಬಣ್ಣದ ಹುಂಜಕ್ಕೂ ಈ ಬಣ್ಣದ ಹುಂಜಕ್ಕೂ ಇವತ್ತು ಪಂಚಾಂಗ ಬರುವುದಿಲ್ಲ.' (ಕೋಳಿಗಳನ್ನು ಕಾಳಗಕ್ಕೆ ಬಿಡುವಾಗ ಪಂಚಾಂಗ ನೋಡಿ ಘಳಿಗೆ, ತಿಥಿ, ರಾಹುಕಾಲ, ಗುಳಿಕಕಾಲ ಇತ್ಯಾದಿಗಳನ್ನೂ, ಯಾವ ಬಣ್ಣದ ಕೋಳಿ ಯಾವ ಬಣ್ಣದ ಕೋಳಿಯನ್ನು ಯಾವಾಗ ಸೋಲಿಸುತ್ತದೆ ಮೊದಲಾದ ವಿಚಾರಗಳನ್ನೂ ನಿರ್ಣಯಿಸಿಕೊಡುವ ಶೂದ್ರ ಜೋಯಿಸರುಗಳೂ ಅಂಕಕ್ಕೆ ಬರುತ್ತಾರೆ.) 'ಇದು ನಾಲ್ಕು ಅಂಕಗಳನ್ನು ಗೆದ್ದ ಕೋಳಿ, ಅದು ಇವತ್ತು ತಾನೇ ಒಡ್ಡಿಯಿಂದ ಹಿಡಿದುಕೊಂಡುಬಂದಿದ್ದು.' ಹೀಗೆ ತರತರವಾಗಿ ವಾದವಿವಾದಗಳಿಗೂ ಭಿನ್ನಾಭಿಪ್ರಾಯಗಳಿಗೂ ಮೊದಲಾಯಿತು. ಪ್ರತಿಯೊಬ್ಬನೂ ತನ್ನ ಹುಂಜ ಸೋಲದ ರೀತಿಯಲ್ಲಿಯೆ ಜೊತೆ ಹಾಕಿಸಿಕೊಳ್ಳಬೇಕೆಂದು ಪ್ರಯತ್ನಿಸುತ್ತಿದ್ದನು. ಏಕೆಂದರೆ, ಯಾರ ಹುಂಜ ಅಂಕದಲ್ಲಿ ಸೋಲುವುದೊ, ಓಡುವುದೊ ಅಥವಾ ಸಾಯುವುದೊ ಅದು ಗೆದ್ದ ಹುಂಜದವನಿಗೆ ಸೇರಬೇಕಾದುದು ಅಂಕದ ಕಾನೂನು. ಆದ್ದರಿಂದಲೆ ಒಬ್ಬೊಬ್ಬ ಜೂಜುಗಾರನೂ ತನ್ನ ಕೋಳಿಯ ಸೋಲಿನಿಂದುಂಟಾಗುವ ನಷ್ಟದಿಂದಲೂ ಅವಮಾನದಿಂದಲೂ ಪಾರಾಗಿ, ಅದರ ಗೆಲುವಿನಿಂದುಂಟಾಗುವ ಲಾಭವನ್ನೂ ಕೀರ್ತಿಯನ್ನೂ ಸಂಪಾದಿಸಲು ಕಾತರನಾಗಿದ್ದನು. ಅಲ್ಲದೆ ಎರಡು ಮೂರು

ಅಂಕಗಳಲ್ಲಿ ಗೆದ್ದ ಕೋಳಿಗಳಿಗೆ ಬಹಳ ಬೆಲೆ ಬರುತ್ತದೆ. ಅದಕ್ಕಾಗಿ ಕಸಬು ದಾರರು ಹುಂಜಗಳನ್ನು ಕಟ್ಟಿ, ಸಾಕಿ, ತರಬಿಯತ್ತು ಮಾಡುತ್ತಾರೆ. ಅಂತಹ ಒಂದೊಂದು ವೀರ ಹುಂಜಗಳಿಂದ ಒಬ್ಬೊಬ್ಬನಿಗೆ ಮೂವತ್ತು ನಾಲ್ವತ್ತು ಐವತ್ತು ಹುಂಜಗಳೂ ದಕ್ಕುವುದುಂಟು! ಆಮೇಲೆ ಅವುಗಳಿಗೆ 'ಅರ್ಜುನ' 'ಕರ್ಣ' 'ಅಭಿಮನ್ಯು' ಮೊದಲಾದ ಬಿರುದುಗಳೂ ಬರುತ್ತವೆ! ಅಂತಹ ಬಿರುದುಗಳನ್ನು ಪಡೆದ ಹುಂಜಗಳ ಒಡೆಯರಿಗೆ ಎಷ್ಟು ಗೌರವ! ಅಂತಹ ಹುಂಜಗಳ ಕಾಳೆಗದಲ್ಲಿ ಪ್ರೇಕ್ಷಕರು ನೂರಾರು ರೂಪಾಯಿಗಳ 'ಮೇಲು ಜೂಜು' ಕಟ್ಟುತ್ತಾರೆ ಅಂದರೆ!

ಅಂತೂ ಆದಷ್ಟು ಜಾಗ್ರತೆಯಾಗಿ ಅಂಕದ ಹುಂಜಗಳಿಗೆ ಜೊತೆ ಹಾಕಿದರು. ಜೂಜುಗಾರರು ತಮ್ಮ ತಮ್ಮ ಹುಂಜಗಳ ಕಾಲಿಗೆ ವಾಡಿಕೆಯಂತೆ ಎರಡಂಗುಲ ದಷ್ಟು ಉದ್ದವಾಗಿ, ಕಾಲಂಗುಲದಷ್ಟು ಅಗಲವಾಗಿ, ಕ್ಷೌರದ ಕತ್ತಿಗಿಂತಲೂ ನಿಶಿತವಾಗಿ, ಬೆಳ್ಳಗೆ ತಳತಳಿಸುವ ಕತ್ತಿಗಳನ್ನು ಕಟ್ಟಲು ಪ್ರಾರಂಭಿಸಿದರು.

ಬಯಲಿನ ಏಳೆಂಟೆಡೆಗಳಲ್ಲಿ ಅಂಕ ಪ್ರಾರಂಭವಾಯಿತು. ಒಂದೊಂದು ಜೊತೆಯ ಸುತ್ತಲೂ ಆಟಗಾರರೂ ನೋಟಗಾರರೂ ಚಕ್ರಾಕಾರವಾಗಿ ಕಿಕ್ಕಿರಿ ದರು. ಪ್ರೇಕ್ಷಕರಲ್ಲಿ ಸ್ವಾಭಾವಿಕವಾಗಿಯೆ ಪಕ್ಷಪ್ರತಿಪಕ್ಷಗಳಾಗಿ 'ಮೇಲು ಜೂಜು' ಕಟ್ಟತೊಡಗಿದರು.

ಕಾನೂರು ಸೇರೆಗಾರರು ಸ್ವತಃ ಅಧ್ಯಕ್ಷರಾಗಿದ್ದ ಅಂಕಸ್ಥಾನದಲ್ಲಿ ಹೆಚ್ಚು ಜನ ನೋಟಕರು ಸೇರಿದರು. ಏಕೆಂದರೆ, ಅವರು ಯಾವಾಗಲೂ ರೂಪಾಯಿಗಟ್ಟಲೆ ಮೇಲುಜೂಜು ಕಟ್ಟಿ, ಸಹಜವಾಗಿಯೆ ಕುತೂಹಲಪೂರ್ಣವಾಗಿರುತ್ತಿದ್ದ ಅಂಕಕ್ಕೆ ಮತ್ತೂ ಒಂದು ಹೊಸ ಹುರುಪು ಕೊಡುತ್ತಿದ್ದರು. ಅಲ್ಲದೆ ಅವರ ಅಧ್ಯಕ್ಷತೆ ಯಲ್ಲಿ ಅತ್ಯುತ್ತಮವಾದ ಅಂಕದ ಕೋಳಿಗಳನ್ನೇ ಚುನಾಯಿಸಿ ಕಾಳೆಗಕ್ಕೆ ಬಿಡು ತ್ತಿದ್ದರು.

ಇಬ್ಬರು ಜೂಜುಗಾರರು ತಮ್ಮ ತಮ್ಮ ಕೋಳಿಗಳಿಗೆ ಕತ್ತಿ ಕಟ್ಟಿ, ಅವುಗಳನ್ನು ಎರಡು ಕೈಗಳಿಂದಲೂ ಭದ್ರವಾಗಿ ಹಿಡಿದು ಎದೆಗವುಚಿಕೊಂಡು ರಣರಂಗಕ್ಕೆ ಇಳಿದರು. ಇಬ್ಬರೂ ಒಬ್ಬರ ಮುಖವನ್ನೊಬ್ಬರು ಸ್ಪರ್ಧೆಯಿಂದ ಮಲೆತು ನೋಡಿದರು. ಒಬ್ಬನದು ಬಡಕಲು ಮುಖ, ಮೆಳ್ಳೆಗಣ್ಣು, ಧೂಳಿ ಹಿಡಿದಂತೆ ನಸುಕೆಂಪಾಗಿ ಗಲ್ಲದವರೆಗೂ ಎಂಬಂತೆ ನೀಳವಾಗಿ ಜೋಲುತ್ತಿದ್ದ ಮೀಸೆ. ಮತ್ತೊಬ್ಬನದು ಮೈಲಿಯೆದ್ದು ಕುಳಿಕುಳಿಯಾಗಿದ್ದ ಕರಿಯ ಮುಖ, ಅತಿ ವಿರಳವಾದ ಕಿರುಮೀಸೆ, ಸದಾ ಮದ್ಯಪಾನ ಮಾಡಿದುದರಿಂದ ಉಂಟಾದ ಹೊಳಪಿನ ತೇಲುಗಣ್ಣು. ವಿಕಾರದಲ್ಲಿ, ಕೊಳಕಿನಲ್ಲಿ, ರೋಷ ಕೋಪ ಹಟ

ಧೂರ್ತತನಗಳಲ್ಲಿ ಇಬ್ಬರೂ ಸಮಗೈಯಾಗುವ ಸ್ಪರ್ಧಿಗಳಂತೆ ತೋರುತ್ತಿದ್ದರು. ನಗ್ನವಾದ ಇಬ್ಬರ ತೋಳುಗಳಲ್ಲಿಯೂ ಜಯಲಕ್ಷ್ಮೀ ವಶೀಕರಣ ಮಂತ್ರದ ತಾಯಿತಿಗಳು ಕೊಳೆ ಹಿಡಿದು ಅಸಹ್ಯವಾಗಿ ಕಾಣುತ್ತಿದ್ದುವು.

ನೋಡುತ್ತ ನೋಡುತ್ತ ಒಬ್ಬರನ್ನೊಬ್ಬರು ಮೈ ಮೈ ಮುಟ್ಟುವಂತೆ ಸಮೀಪಿಸಿದರು. ಮೆಳ್ಳೆಗಣ್ಣಿನವನು ಹಿಡಿದಿದ್ದ ಕರಿಗೆರೆಯ ಕೆಂಪುಹುಂಜದ ಮುಖವೂ, ಮೈಲಿಕಜ್ಜಿ ಮುಖದವನು ಹಿಡಿದಿದ್ದ ಅಚ್ಚ ಬಿಳಿಯ ಹುಂಜದ ಮುಖವೂ ಎದುರುಬದುರಾದುವು. ಕೆಂಪುಹುಂಜದ ಚೊಟ್ಟಿಗಿಂತಲೂ ಬಿಳಿಯ ಹುಂಜದ ಚೊಟ್ಟಿ ವರ್ಣತಾರತಮ್ಯದಿಂದ ಬಹಳ ಚೆನ್ನಾಗಿ ರಂಜಿಸುತ್ತಿತ್ತು. ಮೆಳ್ಳೆಗಣ್ಣಿನವನ ಕೆಂಪು ಹುಂಜ ಮೈಲಿಕಜ್ಜಿಯವನ ಬಿಳಿಯ ಹುಂಜದ ತಲೆಯನ್ನು ಒಂದುಸಾರಿ ಕೊಕ್ಕಿನಿಂದ ಕುಕ್ಕಿತು. ಪ್ರೇಕ್ಷಕರಲ್ಲಿ ಕೆಲರು ಜಯಘೋಷ ಮಾಡಿ, ಭವಿಷ್ಯತ್ತು ಹೇಳತೊಡಗಿದರು. ಬಿಳಿಯ ಹುಂಜವೂ ಕುಕ್ಕಲು ಪ್ರಯತ್ನಿಸಿತು. ಆದರೆ ಅಷ್ಟರಲ್ಲಿಯೆ ಜೂಜುಗಾರರು ಹಿಂದೆ ಹಿಂದೆ ಸರಿದು, ಸಮ್ಮುಖವಾಗಿ ನಿಂತರು. ಅಂಕಕ್ಕೆ ಬಿಡುವ ಮೊದಲು, ಅಂಕವಾಡುವ ಹುಂಜಗಳನ್ನು ಹಾಗೆ ಕೆರಳಿಸುವುದು ಒಂದು ರೂಢಿ.

ಜೂಜುಗಾರರು ರಂಗದ ಮಧ್ಯೆ ತುಸು ದೂರ ದೂರವಾಗಿ ನಿಂತು ಹುಂಜಗಳನ್ನು ಹಿಂದಕ್ಕೂ ಮುಂದಕ್ಕೂ ಸರಿಸಿ, ಪುಕ್ಕಗಳನ್ನು ನೀವಿ, ಕೋಳಿಗಳನ್ನುದ್ದೇಶಿಸಿ ಸಮಯೋಚಿತವಾದ ಉತ್ತೇಜನದ ಮಾತುಗಳನ್ನು ಹೇಳುತ್ತ ಅಂಕಕ್ಕೆ ಅಣುವಾಗುತ್ತಿರಲು, ಪ್ರೇಕ್ಷಕರಲ್ಲೊಬ್ಬ ಸ್ವಲ್ಪ ಮುಂದೆ ಬಾಗಿ ಎಲ್ಲರೂ ಕಾಣುವಂತೆ ಕೈಯಲ್ಲಿ ಬೆಳ್ಳಿಯ ಎರಡಾಣೆಯೊಂದನ್ನು ಹಿಡಿದು ನೋಡಿ "ಕೆಂಪಿನ ಮೇಲೆ ಎರಡಾಣೆ ಮೇಲುಜೂಜು! ಯಾರು ಕಟ್ತೀರಿ?" ಎಂದು ಕೂಗಿದನು.

ಮತ್ತೊಬ್ಬ "ಬಿಳಿಯದರ ಮೇಲೆ ನಾಲ್ಕಾಣೆ!" ಎಂದು ಬೆಳ್ಳಿಯ ನಾಣ್ಯವನ್ನು ಮೇಲಕ್ಕೆ ಟಣ್ಣನೆ ಹಾರಿಸಿ ಹಿಡಿದನು.

ನಾಲ್ಕೈದು ಜನರು ಮಾತ್ರವೆ ಸ್ಪರ್ಧೆಯಿಂದ ಮೇಲುಜೂಜು ಹೂಡಿದರು. ಉಳಿದವರು ಬಿರುದಿನ ಕೋಳಿಗಳ ಮೇಲೆ ಜೂಜು ಕಟ್ಟಲೆಂದು, ಯಃಕಶ್ಚಿತಗಳ ಗೋಜಿಗೆ ಹೋಗದೆ, ಸುಮ್ಮನೆ ನೋಡುತ್ತಿದ್ದರು.

ಅಂಕ ಪ್ರಾರಂಭವಾಯಿತು. ಹಿಂದಕ್ಕೂ ಮುಂದಕ್ಕೂ ತೂಗಿ, ಪುಕ್ಕಗಳನ್ನು ನೀವಿ, ನೆಲಕ್ಕೆ ಬಿಟ್ಟೊಡನೆಯೆ ಹುಂಜಗಳೆರಡೂ ಒಂದನ್ನೊಂದು ಮಲೆತು ನೋಡುತ್ತ, ನಟನೆಗಾಗಿ ನೆಲವನ್ನು ಕುಕ್ಕುತ್ತ, ಕುಸ್ತಿಯಾಡುವ ಜಟ್ಟಿಗಳು ಪಟ್ಟು ನೋಡಿ ಒಬ್ಬರನ್ನೊಬ್ಬರು ಸೆಣಸುವಂತೆ ಹೊಂಚಿ ಸೆಣಸುತ್ತ, ಕ್ಷಣಕ್ಷಣಕ್ಕೂ ಹತ್ತಿರಹತ್ತಿರವಾಗಿ, ಕುತ್ತಿಗೆಯ ಕೇಸರಗಳನ್ನು ಕೆದರಿ ನಿಮಿರಿಸಿಕೊಂಡು,

ಒಂದರ ಮುಖದ ಬಳಿ ಮತ್ತೊಂದು ಮುಖವಿಟ್ಟು, ಮುಖವೆತ್ತಿ, ದೃಷ್ಟಿಯುದ್ಧ ಮಾಡುತ್ತ, ಹಠಾತ್ತಾಗಿ, ಕಣ್ಣು ಮುಚ್ಚಿ ಬಿಡುವಷ್ಟರಲ್ಲಿ, ನೆರೆದಿದ್ದವರೆಲ್ಲರೂ ಬೆಚ್ಚಿ ಬೆರಗಾಗುವಂತೆ, ಒಂದರ ಎದೆಗೆ ಮತ್ತೊಂದು ರಪ್ಪರಪ್ಪನೆ ಒದೆದುಕೊಳ್ಳ ಲಾರಂಭಿಸಿದುವು. ಮೂರು ಸಾರಿ ಒದೆದುಕೊಂಡು ನಾಲ್ಕನೆಯ ಸಾರಿ ಎರಗುವಷ್ಟರಲ್ಲಿ, ಮೈಲಿಕಜ್ಜಿ ಮುಖದವನು ತನ್ನ ಬಿಳಿಯ ಹುಂಜವನ್ನು ಪುಕ್ಕ ಹಿಡಿದು ಎಳೆದು ಎತ್ತಿಕೊಂಡನು. ಮೆಳ್ಳೆಗಣ್ಣನವನು ತನ್ನ ಹುಂಜವನ್ನು ಎತ್ತಿಕೊಳ್ಳುವಷ್ಟರಲ್ಲಿ, ಅದು ರೋಷದಿಂದ ಅಟ್ಟಿಬಂದು ಮೈಲಿಕಜ್ಜಿಯವನ ಕೈಲಿದ್ದ ಬಿಳಿಯ ಹುಂಜಕ್ಕೆ ಒದೆಯುತ್ತೇನೆಂದು ಹಾರಿ ಒದೆಯಿತು. ಮೈಲಿ ಕಜ್ಜಿಯವನು ತನ್ನ ಹುಂಜವನ್ನು ಬೇಗನೆ ಮೇಲಕ್ಕೆತ್ತಿ ಪೆಟ್ಟು ಬೀಳದಂತೆ ತಪ್ಪಿ ಸಿದನು. ಆದರೆ ಕೆಂಪು ಹುಂಜದ ಕಾಲ್ಗತ್ತಿಯ ಮೊನೆ ಕೋಳಿಗೆ ತಪ್ಪಿದುದು ಅವನ ಕೈಗೇ ಗೀರಿ ನೆತ್ತರು ಸುರಿಯಲಾರಂಭಿಸಿತು. ಅಷ್ಟರಲ್ಲಿ ಮೆಳ್ಳೆಗಣ್ಣ ನವನೂ ತನ್ನ ಹುಂಜವನ್ನು ಹಿಂದಕ್ಕೆ ಸೆಳೆದುಕೊಂಡನು. ಮೈಲಿಕಜ್ಜಿಯವನಿಗೆ ರೇಗಿತು. ಸೇರೆಗಾರ ರಂಗಪ್ಪಸೆಟ್ಟರು ಜಗಳಕ್ಕೆ ಅವಕಾಶಕೊಡದೆ ಮತ್ತೆ ಕೋಳಿ ಗಳನ್ನು ಅಂಕಕ್ಕೆ ಬಿಡುವಂತೆ ಅಪ್ಪಣೆಮಾಡಿದರು.

ಮೊದಲಿನಂತೆ ಎರಡನೆಯ ಸಾರಿಯೂ ಹುಂಜಗಳು ಒಂದನ್ನೊಂದು ಸಂಧಿಸಿ ಅಂಕವಾಡಿದುವು. ಒಂದು ನಿಮಿಷದೊಳಗಾಗಿ ಬಿಳಿಯ ಹುಂಜದ ಎದೆಯ ತಿಪ್ಪುಳು ಕೆಂಪಾಯಿತು. "ಹೋ ಹೋ ಹಿಡಿ ಹಿಡಿ" ಎನ್ನುವಷ್ಟರಲ್ಲಿ ಮೈಲಿ ಕಜ್ಜಿಯವನು ತನ್ನ ಹುಂಜವನ್ನು ಹಿಡಿದೆತ್ತಿಕೊಂಡು ಪರೀಕ್ಷಿಸಿದನು. ಬಹಳ ಕಷ್ಟಪಟ್ಟು ಹುಡುಕಿದ ಮೇಲೆ ಅದರ ಎದೆಗೆ ಕತ್ತಿಯ ಅಲಗು ಒಂದಂಗುಲದಷ್ಟು ಒಳಹೊಕ್ಕಿದ್ದುದು ಗೊತ್ತಾಯಿತು. ಕೋಳಿಯ ಬಾಯಲ್ಲಿ ರಕ್ತ ಬರತೊಡ ಗಿತ್ತು. ಅದರ ಯಜಮಾನನಿಗೆ ತನ್ನ ಕೋಳಿ ಸಾಯುತ್ತದೆಂದು ಸ್ಪಷ್ಟವಾಗಿ ತಿಳಿದುಹೋಯಿತು. ಏನಾದರಾಗಲಿ ಎಂದು ಸ್ವಲ್ಪ ನೀರು ಕುಡಿಸಿ, ಮೈಗೂ ಪುಕ್ಕದ ಗಡ್ಡೆಗೂ ನೀರು ಚಿಮುಕಿಸಿ ಶಿಶಿರೋಪಚಾರಮಾಡಿ, ಕಣ್ಣುಮುಚ್ಚಿ ಬಿಡುವುದರೊಳಗೆ ಮತ್ತೆ ಕಾಳಗಕ್ಕೆ ಬಿಟ್ಟನು. ಆ ಹುಂಜವಾದರೊ ಸ್ವಲ್ಪವೂ ಹಿಂದೆಗೆಯದೆ, ತನಗಾಗಿದ್ದ ಎದೆಗಾಯದ ಅರಿವೂ ಇಲ್ಲದೆ, ಮತ್ತೆ ಅಂಕವಾಡಿತು. ಒಂದೆರಡು ನಿಮಿಷಗಳಲ್ಲಿ ನೆತ್ತರು ಕಾರಿಕೊಂಡು ಕೆಳಗುರುಳಿತು. ಅದನ್ನೆತ್ತಿ ಕೊಂಡು ಪರೀಕ್ಷಿಸಿದರು. ಎದೆಗೆ ಮೂರು ಗಾಯಗಳಾಗಿದ್ದುವು. ಕತ್ತಿಯ ಒಂದೊಂದು ಗಾಯವೂ ಸುಮಾರು ಒಂದಂಗುಲಕ್ಕೆ ಹೆಚ್ಚಾಗಿ ಮೈಯೊಳಗೆ ಚುಚ್ಚಿತ್ತು. ಆದರೂ ಆ ಹುಂಜ ಸಾಯುವವರೆಗೂ ಹೋರಾಡಿ ಮಡಿಯಿತು. ಓಡಿಹೋಗಲಿಲ್ಲ. ಅದಕ್ಕೇ 'ಕೋಳಿಯ ಶೌರ್ಯ'ವೆಂದು ಗಾದೆಯಾಗಿರುವುದಲ್ಲವೆ?

ಮೆಳ್ಳೆಗಣ್ಣಿನವನು ತನ್ನ ಹುಂಜ ಗೆದ್ದಿದ್ದ ಬಿಳಿಯ ಹುಂಜದ ಶವವನ್ನು ಎತ್ತಿಕೊಂಡು ಹೋಗಿ ಅದರ ಮುಂದೆ ವಿಜಯೋನ್ಮತ್ತನಾಗಿ ಎಸೆದನು. ಆದರೆ ಕೆಂಪು ಹುಂಜಕ್ಕೂ ಪೆಟ್ಟಾಗಿದ್ದುದರಿಂದ ಅದೂ ಕೆಳಗೆ ಬೀಳುವಂತೆ ತಲೆದೂಗಲಾರಂಭಿಸಿತು. ಬೇಗಬೇಗನೆ ಎತ್ತಿಕೊಂಡು ಪರೀಕ್ಷಿಸುತ್ತಿದ್ದಹಾಗೆ ಕೈಮೇಲೆಯೆ ಪ್ರಾಣಬಿಟ್ಟಿತು. ಬಿಳಿಯ ಹುಂಜದ ಸಾವಿಗೆ ಹಿಗ್ಗಿದ ಮೆಳ್ಳೆಗಣ್ಣ, ಎತ್ತಿದ ಕೈಮೇಲೆಯೆ ಸತ್ತೊರಗಿದ ತನ್ನ ಕೆಂಪು ಹುಂಜವನ್ನು ದುಃಖದೃಷ್ಟಿಯಿಂದ ವೀಕ್ಷಿಸುತ್ತಿರಲು, ಹಿಂದಿನಿಂದ ಯಾರೊ ತುಳುಮಾತಿನಲ್ಲಿ "ಹೌದಾ, ಕುದುಕಾ, ಪೆಟ್ಟಾಗಿತ್ತಾ?" ಎಂದು ಪ್ರಶ್ನಿಸಿದರು.

ಬಿಲ್ಲವರ ಜಾತಿಗೆ ಸೇರಿದ್ದ ಕುದುಕ ತನ್ನ ಮೆಳ್ಳೆಗಣ್ಣನ್ನು ಮೇಲೆತ್ತಿ ತಿರುಗಿ ನೋಡಿದನು: ಗಟ್ಟದಮೇಲಿನವರಂತೆ ಉಡುಪು ಹಾಕಿಕೊಂಡಿದ್ದ ಸೋಮ ಕೈಲಿದ್ದ ಕೆಂಪು ಹುಂಜದ ಯೋಗಕ್ಷೇಮವನ್ನು ವಿಚಾರಿಸುತ್ತಿದ್ದರೂ ಕೆಳಗೆ ನೆಲದ ಮೇಲೆ ಸತ್ತು ಬಿದ್ದಿದ್ದ ಬಿಳಿಯ ಹುಂಜವನ್ನು ಆಶಾದೃಷ್ಟಿಯಿಂದ ನೋಡುತ್ತ ಹತ್ತಿರ ಬಂದು ನಿಂತನು.

## ೬೩

# ಸೋಮನಮೇಲೆ ಪ್ರಲೋಭನ ಪಿಶಾಚಿ

ಹೂವಯ್ಯ ಬರೆದಿದ್ದ ಕಾಗದದ ಪ್ರಕಾರ ಸಿಂಗಪ್ಪ ಗೌಡರು ಕೊಟ್ಟಿದ್ದ ಐವತ್ತು ರೂಪಾಯಿಗಳನ್ನೂ ಕೈಕಾಗದವನ್ನೂ ತೆಗೆದುಕೊಂಡು ಸೀತೆಮನೆಯಿಂದ ಕೆಳಕಾನೂರಿಗೆ ಹೋಗುತ್ತಿದ್ದ ಸೋಮನಿಗೆ ನಡುದಾರಿಯಲ್ಲಿ ಒಂದು ಪ್ರಲೋಭನ ಭೂತವೆದುರಾಯಿತು. ಶನಿವಾರ ಸಂಧ್ಯಾಕಾಲ ಕೋಳಿ ಅಂಕ ನಡೆಯುವುದೆಂದು ಆತನಿಗೆ ಗೊತ್ತಿತ್ತು. ಕನ್ನಡ ಜಿಲ್ಲೆಯವನಾಗಿದ್ದ ಅವನಿಗೆ ಸ್ವಾಭಾವಿಕವಾಗಿಯೆ ಕೋಳಿಯಂಕದಲ್ಲಿ ಹೆಚ್ಚು ಆಸಕ್ತಿ. ಆದರೆ ಹೂವಯ್ಯನಿಗೆ ಅಂತಹ ವಿಚಾರಗಳಲ್ಲಿ ದ್ವೇಷವಿದ್ದುದರಿಂದ ಸೋಮ ಅತ್ತಕಡೆಗೆಳೆಯುತ್ತಿದ್ದ ತನ್ನ ಮನಸ್ಸನ್ನು ಬಹು ಪ್ರಯತ್ನದಿಂದ ಬಿಗಿಹಿಡಿದಿದ್ದನು. ಆದರೂ ಅವಕಾಶ ಸಿಕ್ಕಿದರೆ ಅಂಕದ ಮೋಹಕ್ಕೆ ಒಳಗಾಗದಿರುವಷ್ಟು ದೃಢವಾಗಿರಲಿಲ್ಲ ಆ ಮನಸ್ಸು.

ಹೂವಯ್ಯ ತನ್ನ ಜಮೀನಿನ ಕಾಮಗಾರಿಗೆ ಬೇಕಾಗಿದ್ದ ಹಣವನ್ನು ಸಿಂಗಪ್ಪ ಗೌಡರಿಂದ ತರಿಸಿಕೊಳ್ಳಲು ಬರೆದಿದ್ದ ಕಾಗದವನ್ನು ಪುಟ್ಟಣ್ಣನ ಕೈಯ್ಯಲ್ಲಿ ಕೊಟ್ಟು ಕಳುಹಿಸಬೇಕೆಂದಿದ್ದನು. ಆದರೆ ಸೋಮ ತಾನೇ ಹೋಗಿ ಬರುವುದಾಗಿ ಹೇಳಿ

ಸೀತೆಮನೆಗೆ ಹೋಗಿದ್ದನು. ಹೋಗುವಾಗ ಅವನಿಗೆ ಕೋಳಿಯಂಕಕ್ಕೆ ಹೋಗುವ ಬುದ್ಧಿ ನಿಜವಾಗಿಯೂ ಇರಲಿಲ್ಲ. ಅಥವಾ ಗೊತ್ತಿರಲಿಲ್ಲ. ಆದರೆ ಸೀತೆಮನೆಯಿಂದ ಹಿಂತಿರುಗುತ್ತಿದ್ದಾಗ, ಅಂತರಂಗದಲ್ಲಿ ಅವಿತುಕೊಂಡಿದ್ದ ಆ 'ಹುನಾರು' ಮೆಲ್ಲಗೆ ಹೊರಗೆ ತಲೆಹಾಕಿತು.

"ಏನು, ಹೋಗಿ ನೋಡಿಕೊಂಡು ಬಂದರಾಯಿತು! ಒಂದು ಎಲೆಯಡಕೆ ಹಾಕುವಷ್ಟು ದೂರವೂ ಇಲ್ಲ. ನಾನು ಹೋಗಿ ಬಂದಿದ್ದು ಯಾರಿಗೆ ಗೊತ್ತಾಗುತ್ತದೆ? ನಾನೇನು ಅಂಕಕ್ಕೆ ಕೋಳಿ ತೆಗೆದುಕೊಂಡು ಹೋಗುವುದಿಲ್ಲ; ಮೇಲುಜೂಜಿನ ಗೋಜಿಗೂ ಹೋಗುವುದಿಲ್ಲ! ಮೇಲುಜೂಜಿಗೆ ಹೋಗುವುದಕ್ಕೆ ನನ್ನ ಹತ್ತಿರ ದುಡ್ಡಾದರೂ ಎಲ್ಲಿದೆ?" ಎಂದು ಆಲೋಚಿಸುತ್ತಿದ್ದಾಗ, ತನ್ನ ಜೇಬಿನಲ್ಲಿದ್ದ ಐವತ್ತು ರೂಪಾಯಿಗಳ ನೆನಪಾಯಿತು. ಆದರೆ ಅದು ತನ್ನ ಒಡೆಯನಿಗೆ ಸೇರಿದುದು; ಆ ದುಡ್ಡು ತನ್ನಲ್ಲಿದ್ದರೂ ಒಂದೇ ಇಲ್ಲದಿದ್ದರೂ ಒಂದೇ ಎಂದು ಯೋಚಿಸಿ, ಸೋಮ ಕೋಳಿಯಂಕದ ಪಟ್ಟೆಯ ಕಡೆಗೆ ಚುರುಕಾಗಿ ನಡೆದನು. ಮುಂದುವರಿದಂತೆಲ್ಲ ಅಂಕವನ್ನು ನೋಡುವ ಆಸಕ್ತಿಯೂ ಉದ್ವೇಗವೂ ಹೆಚ್ಚು ಹೆಚ್ಚಾಗಿ, ಬೇಗಬೇಗನೆ ಕುಕ್ಕೋಟ ಓಡತೊಡಗಿದನು. ಅಂಕದ ಪಟ್ಟೆ ಸಮಿಾಪವಾದಾಗ ಮಾತ್ರ ಒಂದು ಸಾರಿ ನಿಂತು, ತನ್ನ ಉಡುಪನ್ನು ಚೆನ್ನಾಗಿ ನೀವಿ ಸರಿಮಾಡಿಕೊಂಡು, ಪ್ರಶಂಸಾದೃಷ್ಟಿಯಿಂದ ಅವಲೋಕಿಸಿ ಮುಂದುವರಿದನು.

ಅವನು ಬರುವಷ್ಟರಲ್ಲಿಯೆ ನಾಲ್ಕಾರು ಕಡೆಗಳಲ್ಲಿ ಅಂಕಗಳು ಶುರುವಾಗಿದ್ದುವು. ಅಂಕವಾಡುವ ಕೋಳಿಗಳನ್ನೆ ನಟ್ಟನೋಟದಿಂದ ನೋಡುತ್ತಿದ್ದ ಮಂದಿ, ಸೋಮನನ್ನಾಗಲಿ ಅವನ ಉಡುಪನ್ನಾಗಲಿ ಹೆಚ್ಚೇನೂ ಲೆಕ್ಕಿಸಲಿಲ್ಲ. ಒಳ್ಳೆಯದೆ ಆಯಿತೆಂದುಕೊಂಡು ಸೋಮ ಒಂದುಕಡೆ ನಿಂತು ನೋಡದೆ, ಅಲ್ಲಲ್ಲಿ ನೆರೆದಿದ್ದ ಗುಂಪಿನಿಂದ ಗುಂಪಿಗೆ ಚರಿಸತೊಡಗಿದನು. ಅವನಿಗಾಗಲೆ ಬರಿಯ ಪ್ರೇಕ್ಷಕನಾಗಿರುವುದರಲ್ಲಿ ರುಚಿಯೂ ಆಸಕ್ತಿಯೂ ಅಳಿದುಹೋಗಿ ಮನಸ್ಸು ಅಸ್ಥಿರವಾಗುತ್ತಿತ್ತು.

ಅಂಕಗಳೇನೊ ಒಂದೊಂದೂ ಒಂದೊಂದು ವಿಶೇಷ ರೀತಿಯಿಂದ ಮನೋಹರವಾಗಿದ್ದುವು. ಒಂದೆಡೆ ಕಾಳಗಕ್ಕೆ ಪ್ರಾರಂಭವಾದ ಒಂದೆರಡು ಕ್ಷಣಗಳಲ್ಲಿ ಒಂದು ಹುಂಜ ಹೆದರಿ ಕಾಲಿಗೆ ಬುದ್ಧಿಹೇಳಿ ಪೊದೆಗಳಲ್ಲಿ ತಲೆಮರಸಿಕೊಂಡು, ಮೇಲುಜೂಜಿನಲ್ಲಿ ಗೆದ್ದವರ ನಗೆ ಮತ್ತು ಕೈಚಪ್ಪಾಳೆಗಳಿಗೂ, ಸೋತವರ ವಿಷಾದ ಮತ್ತು ಬೈಗುಳಗಳಿಗೂ, ತನ್ನ ಒಡೆಯನ ಅವಮಾನ ಮತ್ತು ಕ್ರೋಧಗಳಿಗೂ ಕಾರಣವಾಯಿತು. ಮತ್ತೊಂದೆಡೆ ಎರಡು ಹುಂಜಗಳಿಗೂ ಖಾಡಾಖಾಡಿ ಯುದ್ಧ

ವಾಗಿ, ಒಂದರ ಹೊಟ್ಟೆ ಸೀಳಿತು. ಒಡನೆಯೆ ಅದರ ಯಜಮಾನನೂ ಮತ್ತು ಅದರ ಪರವಾಗಿ ಮೇಲುಜೂಜು ಕಟ್ಟಿದ್ದವರೂ ಸೇರಿ, ಗಾಯವನ್ನು ಹೊಲಿದು ಔಷಧಿ ಹಾಕಿ, ನೀರು ಕುಡಿಸಿ, ಮತ್ತೆ ಅಂಕಕ್ಕೆ ಬಿಡಲು, ಒಂದೆರಡು ನಿಮಿಷ ಗಳಲ್ಲಿಯೆ ಎದುರಾಳಿಯನ್ನೂ ಕೊಂದು ತಾನೂ ಬದುಕಿಕೊಂಡಿತು. ಇನ್ನೊಂದೆಡೆ ಮೇಲುಜೂಜು ಕಟ್ಟಿದ್ದವರಲ್ಲಿಯೆ ಪರಸ್ಪರ ಮಾತುಕತೆಗಳಾಗಿ, ಜಗಳವಾಗುವು ದರಲ್ಲಿತ್ತು. ಮಗುದೊಂದೆಡೆ ಕೋಳಿಗೆ ನೀರು ಕುಡಿಯಿಸುವುದರ ಬದಲು ಹೆಂಡವನ್ನು ಕುಡಿಸಿದುದರ ಫಲವಾಗಿ ಅದು–ನೆರೆದವರೆಲ್ಲರೂ ಹುಂಜಗಳಾಗಿ ಕಂಡರೇನೊ ಅದರ ಕಣ್ಣಿಗೆ — ಎದುರು ಹುಂಜವನ್ನು ಬಿಟ್ಟು ಜನರಮೇಲೆಯೆ ನುಗ್ಗಿ, ಅದರ ಕಾಲಿನ ಕತ್ತಿಯಿಂದ ಒಬ್ಬಿಬ್ಬರಿಗೆ ಗಾಯಗಳೂ ಆದುವು!

ಹೀಗೆ ಎಲ್ಲ ಅಂಕಸ್ಥಾನಗಳಲ್ಲಿಯೂ ಸಾಕಾದಷ್ಟು ಉದ್ವೇಗೋಲ್ಲಾಸಗಳಿದ್ದರೂ ಸೋಮನ ಮನಸ್ಸಿಗೆ ನೆಮ್ಮದಿಯುಂಟಾಗಲಿಲ್ಲ. ತನ್ನನ್ನು ಎಲ್ಲರೂ ನೋಡು ತ್ತಾರೆ ಎಂದು ಭಾವಿಸಿದ್ದುದು ವ್ಯರ್ಥವಾಗಿತ್ತು. ತಾನೊಬ್ಬ ಯಃಕಶ್ಚಿತನಾಗಿ ಬಿಟ್ಟೆನೆಂದು ಮನಸ್ಸಿಗೆ ನೋವಾಯಿತು. ತನ್ನ ಜೇಬಿನಲ್ಲಿ ಐವತ್ತು ರೂಪಾಯಿ ಗಳು — ಒಂದಲ್ಲ, ಎರಡಲ್ಲ, ಐವತ್ತು ರೂಪಾಯಿಗಳು ಇವೆ ಎಂದು ಗೊತ್ತಾಗಿ ದ್ದರೆ, ಈ ಜನರು ತನ್ನನ್ನು ಈ ರೀತಿ ನಿರ್ಲಕ್ಷಿಸುತ್ತಿದ್ದರೆ? ನಾನೀಗ ಒಂದೆರಡು ರೂಪಾಯಿಗಳಷ್ಟು ಮೇಲುಜೂಜು ಕಟ್ಟಿದರಾಗಲಿ ಅಥವಾ ಒಂದು ಅಂಕದ ಹುಂಜವನ್ನು ಕೊಂಡುಕೊಂಡು ರಂಗಕ್ಕಿಳಿದರಾಗಲಿ, ಇವರೆಲ್ಲರೂ ಸೇರಿ ಸಂಚು ಹೂಡಿದರೂ ನನ್ನನ್ನು ಕಃಪದಾರ್ಥವನ್ನಾಗಿ ಮಾಡಲು ಸಾಧ್ಯವಾದೀತೆ? ಹೋಗಲಿ, ಇದು ಸಮಯವಲ್ಲ; ಇನ್ನೊಂದುಸಾರಿ ಅಂಕವಾದಾಗ ನೋಡುತ್ತೇನೆ– ಎಂದು ಮನಸ್ಸಿನಲ್ಲಿಯೆ ಮಂಡಿಗೆ ತಿನ್ನುತ್ತ ಸೋಮ ಕಾನೂರು ರಂಗಪ್ಪ ಸೆಟ್ಟರು ಅಧ್ಯಕ್ಷರಾಗಿದ್ದ ಅಂಕಸ್ಥಾನಕ್ಕೆ ಬಂದನು. ಅವರನ್ನು ಕಂಡಕೂಡಲೆ ಅವನ ಮನಸ್ಸು ಅನಿರೀಕ್ಷಿತವಾಗಿಯೆ ಮಲೆತು ನಿಂತು ಗುಟುರುಹಾಕಿತು. ಮುಂದುವರಿಯದೆ ಹಿಂದುಗಡೆ ನಿಂತುಕೊಂಡು ಸೇರೆಗಾರರ 'ಜಬರದಸ್ತ'ನ್ನು ಮಾತ್ಸರ್ಯ ತಿರಸ್ಕಾರಗಳಿಂದ ನೋಡುತ್ತಿದ್ದನು. ಅವನು ಮನಸ್ಸಿನಲ್ಲಿ ಸೇರೆ ಗಾರರೆಲ್ಲಿಯಾದರೂ ಮೇಲುಜೂಜು ಕಟ್ಟಿದರೆ, ಏನಾದರಾಗಲಿ, ಅವರಿಗೆ ಪ್ರತಿ ಯಾಗಿ ತಾನೂ ಮೇಲುಜೂಜು ಕಟ್ಟದೆ ಬಿಡುವುದಿಲ್ಲ ಎಂದು ಆಲೋಚಿಸಿ, ಹಲ್ಲುಮಟ್ಟೆ ಕಚ್ಚಿದನು. ಅದೃಷ್ಟಕ್ಕೆ ಸರಿಯಾಗಿ ಸೇರೆಗಾರರು ಆ ಜೊತೆಗೆ ಮೇಲುಜೂಜು ಕಟ್ಟಲಿಲ್ಲ.

ಆದರೂ ಸೋಮನ ಮನಸ್ಸಿನಲ್ಲಿಯೆ ಸೇರೆಗಾರರದು ಬಿಳಿಯಕೋಳಿಯೆಂದೂ ತನ್ನದು ಕೆಂಪು ಕೋಳಿಯೆಂದೂ ಭಾವಿಸಿಕೊಂಡು, ಅಂಕದ ಪರ್ಯವಸಾನವನ್ನೇ

ಉತ್ಸುಕತೆಯಿಂದ ಕಾಯುತ್ತಿದ್ದನು. ಬಿಳಿಯಕೋಳಿ ಸತ್ತುಬೀಳಲು, ಸೋಮನ ಮನಸ್ಸಿಗೆ ಸೇರೆಗಾರರನ್ನು ತಾನೇ ಕೊಂದುಹಾಕಿದಷ್ಟು ಹರ್ಷವಾಯಿತು! ಆದ್ದರಿಂದಲೆ ಅವನು ಗೆದ್ದವನ (ಅವನ ಹೆಸರು 'ಕುದುಕ') ಬಳಿಗೆ ಹೋಗಿ "ಹೌದಾ, ಕುದುಕ್ಕಾ, ಪೆಟ್ಟಾಗಿತ್ತಾ" ಎಂದು ಕುಶಲಪ್ರಶ್ನೆಗೈದು ಸಹಾನುಭೂತಿ ತೋರಿಸಿದುದು. ಮಡಿದು ಬಿದ್ದಿದ್ದ, ಸುಪುಷ್ಟವಾದ ಬಿಳಿಯ ಹುಂಜವನ್ನು ನೋಡುತ್ತಿದ್ದ ಸೋಮನಲ್ಲಿ ಜಯಮದದ ಜೊತೆಗೆ ಕೆಲವು ಕಾಲದ ಹಿಂದೆ ವಿಶೇಷವಾಗಿದ್ದು ಇತ್ತೀಚೆಗೆ ಸ್ವಲ್ಪ ಕಡಿಮೆಯಾಗಿದ್ದ ಮಾಂಸಲೋಭವೂ ಮೂಡಿತು. ತತ್ಕಾಲದಲ್ಲಿ ಅವನಿಗೆ ತನ್ನ ಪರಿಸ್ಥಿತಿಯೆಲ್ಲ ಮರೆತು ಹೋಯಿತು.

ತಾನೂ ಒಂದು ಅಂಕದ ಕೋಳಿಯನ್ನು ಕೊಂಡುಕೊಂಡು, ರಂಗಕ್ಕಿಳಿದು, ಕಡೆಯಪಕ್ಷ ಒಂದು ಕೋಳಿಯನ್ನಾದರೂ ಗೆಲ್ಲಬೇಕೆಂದು ಮನಸ್ಸು ಪೀಡಿಸ ತೊಡಗಿತು. ಜೇಬಿನೊಳಗಿದ್ದ ಐವತ್ತು ರೂಪಾಯಿಗಳ ನೋಟಿನ ಕಟ್ಟನ್ನು ಮುಟ್ಟಿ ನೋಡಿಕೊಂಡನು. ಅವನ ಒಳಗಣ್ಣಿಗೆ ಹೂವಯ್ಯನ ಚಿತ್ರ ಕಾಣಿಸಿ ಕೊಂಡಿತು. ಸ್ವಾಮಿಗೆ, ತನ್ನನ್ನು ಕಾಡುತನದಿಂದ ಈ ನಾಗರಿಕಸ್ಥಿತಿಗೆ ತಂದು ಪೊರೆದ ಸ್ವಾಮಿಗೆ, ಯಾರಿಗೂ ಕೇಡೆಣಿಸದೆ ಎಲ್ಲರನ್ನೂ ಉದ್ಧಾರಮಾಡಬೇಕೆಂದು ಯತ್ನಿಸುತ್ತಿರುವ ಸ್ವಾಮಿಗೆ, ಕೀಳುಜಾತಿಯ ಬಡಬಗ್ಗರ ಮುರುಕಲು ಹರಕಲು ಗುಡಿಸಲುಗಳಿಗೆ ಔಷಧಿ ಪಥ್ಯಗಳನ್ನು ಕೊಂಡೊಯ್ದು ನೀಡಿ, ಕಾಪಾಡಿ, ದೇವ ರಂತಿರುವ ಸ್ವಾಮಿಗೆ ದ್ರೋಹವೆಸಗಿದಂತಾಗುತ್ತದಲ್ಲವೆ? ಎಂಬ ಆಲೋಚನೆ ಮನಸ್ಸಿನಲ್ಲಿ ಸುಳಿಯಿತು. ಆದರೆ ಅದಕ್ಕೆ ತಕ್ಕ ಸಮಾಧಾನವೂ ಒಡನೆಯೆ ಸುಳಿಯತೊಡಗಿ, ಜಯಶೀಲವಾಯಿತು.

"ಏನು ಒಂದೆರಡು ರೂಪಾಯಿ ಖರ್ಚಾಗುತ್ತದೆ ಒಂದು ಅಂಕದ ಹುಂಜಕ್ಕೆ! ಅದರ ಜೊತೆಗೆ ಮತ್ತೊಂದು ಹುಂಜವನ್ನೂ ಗೆದ್ದುಕೊಂಡು ಹೋಗಿ ಕೊಟ್ಟರೆ, ಎರಡು ರೂಪಾಯಿಗೆ ನಾಲ್ಕು ರೂಪಾಯಿ ಕೊಟ್ಟಹಾಗಾಗುತ್ತದೆ... ಸ್ವಲ್ಪ ಗದ್ದಲಮಾಡಿ ಬೈಯ್ತಾರೆ! ಬೈದರೆ ಬೈದರು; ಒಡೆಯರಷ್ಟೆ!... ನಾನೇನು ಮೇಲುಜೂಜು ಕಟ್ಟುವುದಕ್ಕಾಗಲಿ, ಕಳ್ಳು ಕುಡಿಯುವುದಕ್ಕಾಗಲಿ, ಇಸ್ಪೀಟು ಜುಗಾರಿಗಾಗಲಿ ಹೋಗುವುದಿಲ್ಲ!— ಒಂದುವೇಳೆ ಎರಡು ರೂಪಾಯಿ ಕೊಟ್ಟೇ ಬಿಡಬೇಕು ಎಂದರೆ, ನನ್ನ ಸಂಬಳದಲ್ಲಿ ಮುರಿಹಾಕಿಕೊಳ್ಳಿ, ಎಂದು ಹೇಳಿದ ರಾಯಿತು."

ಈ ಆಲೋಚನೆಗಳೂ ಭಯಗಳೂ ಸಮಾಧಾನಗಳೂ ಕ್ಷಣಮಾತ್ರದಲ್ಲಿ ಸೋಮನ ಮೆದುಳಿನಲ್ಲಿ ಸಂಚರಿಸಿದ್ದುವು.

ಸೋಮ ನೆಲದಮೇಲೆ ಬಿದ್ದಿದ್ದ ಬಿಳಿಯಹುಂಜದ ಮೇಲಿದ್ದ ತನ್ನ ದೃಷ್ಟಿ

ಯನ್ನು ಮೇಲಕ್ಕೆ ತಿರುಗಿಸಿ ಕುದುಕನ ಕೈಯಲ್ಲಿ ಪ್ರಾಣಬಿಟ್ಟಿದ್ದ ಹುಂಜವನ್ನು ನೋಡುತ್ತ, "ಪೆಟ್ಟು ಎಲ್ಲಿಗೆ ಬಿದ್ದಿತ್ತೊ?" ಎಂದು ಮತ್ತೂ ಸಮೀಪಿಸಿದನು.

ಮೆಳ್ಳೆಗಣ್ಣನು ಸೋಮನನ್ನು ನೋಡದೆ, ತನ್ನ ಕೆಂಪುಹುಂಜವನ್ನು ಬಿಳಿಯ ಹುಂಜದ ಪಕ್ಕದಲ್ಲಿ ಬೀಸಾಡಿ, ಕರಿಯ ಕಂಬಳಿಯಮೇಲೆ ಕುಳಿತು ಎಲೆಯಡಕೆ ಹಾಕಿಕೊಳ್ಳತೊಡಗಿದನು.

ಅಷ್ಟರಲ್ಲಿ ಸ್ವಲ್ಪದೂರದಲ್ಲಿದ್ದ ಒಂದು ಅಂಕಸ್ಥಾನದಿಂದ ಅನೇಕ ಜನರ ಕೂಗಾಟದ ಸದ್ದೂ ಹೊಡೆದಾಟದ ಸದ್ದೂ ಅಲ್ಲಿ ಸಾಮಾನ್ಯವಾಗಿದ್ದ ಸದ್ದು ಗದ್ದಲದ ಪ್ರಸ್ಥಭೂಮಿಯಲ್ಲಿ ಉತ್ತುಂಗ ಶಿಖರವಾಗೆದ್ದಿತು. ಸೋಮ ನೋಡುತ್ತಿದ್ದ ಹಾಗೆ ಇತರ ಅಂಕಸ್ಥಾನಗಳಿಂದಲೂ ಜನರು ಆ ಎಡೆಗೆ ಓಡುತ್ತಿರಲು, ತಾನೂ ಅಲ್ಲಿಗೆ ಓಡಿದನು.

ಪ್ರೇಕ್ಷಕರಲ್ಲಿ ಮೇಲುಜೂಜು ಕಟ್ಟಿದ್ದ ಇಬ್ಬರಿಗೆ ಬಿಸಿಬಿಸಿ ಮಾತಾಗಿ ಕೈಕೈಯಾಗಲಾರಂಭವಾಗಿತ್ತು. ಕಾರಣವೇನೆಂದರೆ, ಜೂಜಿನಲ್ಲಿ ಸೋತವನ ಬಳಿ ಗೆದ್ದವನಿಗೆ ಕೊಡಲು ದುಡ್ಡಿರಲಿಲ್ಲವಂತೆ. ಗೆದ್ದವನು ಹಣವನ್ನೊಡನೆ ಕೊಡಬೇಕೆಂದೂ, ಸೋತವನು ಮತ್ತೊಂದು ಜೊತೆ ಅಂಕವಾಡುವಾಗ ಜೂಜು ಕಟ್ಟಿ, ಗೆದ್ದು, ಸಾಲ ತೀರಿಸುತ್ತೇನೆಂದೂ, ಜಗಳವಾಡಿದರು. ಇಬ್ಬರೂ ಕುಡಿದಿದ್ದರು. ಸೋತವನಿಗೆ ರೇಗಿ (ಗೆದ್ದವನು ಮಲೆತು ಬಳಿ ಬರಲು ಎಂದು ಅವನ ಹೇಳಿಕೆ) ಎದೆಗೆ ಕೈಹಾಕಿ ದಬ್ಬಿದನಂತೆ. ಗೆದ್ದವನಿಗೆ ಸಿಟ್ಟೇರಿ ಸೋತವನ ಮೂಗಿಗೆ ಗುದ್ದಲು, ನೆತ್ತರು ಸುರಿಯತೊಡಗಿತು! ಸುರಿಯುತ್ತಿದ್ದ ನೆತ್ತರನ್ನು ಕೊಳಕು ಬಟ್ಟೆಯೂ ಕೆಂಪೇರುವಂತೆ ಒರಸಿಕೊಳ್ಳುತ್ತಾ ಸೋತವನು ಜೇಬಿನಿಂದ ಚೂರಿಯೊಂದನ್ನು ಹೊರಗೆಳೆಯಲು, ಹಾಹಾಕಾರವೆದ್ದು ಜನರು ಸುತ್ತಲೂ ಮುತ್ತಿ, ಅವನ ಕೈಯಿಂದ ಚೂರಿಯನ್ನು ಕಸಿದುಕೊಂಡು, ಜಗಳಗಂಟಿಗಳಿಬ್ಬರನ್ನೂ ಬೇರೆಬೇರೆ ಮಾಡಿದರು.

ಜನರು ಜಗಳದ ವಿಚಾರವಾಗಿ, ಪರವಾಗಿ, ಪ್ರತಿಯಾಗಿ, ನಾನಾಪರಿಯಾಗಿ ಮಾತಾಡಿಕೊಳ್ಳುತ್ತಾ ಬೇರೆ ಬೇರೆ ಅಂಕಸ್ಥಾನಗಳಿಗೆ ಚೆದರುತ್ತಿದ್ದಾಗಲೆ ಸೋಮನೂ ಬೆಲೆಗೆ ದೊರಕುವ ಅಂಕದ ಹುಂಜವನ್ನು ಹುಡುಕತೊಡಗಿದನು. ಎಲ್ಲಿ ಹುಡುಕಿದರೂ ಯಾರನ್ನು ಕೇಳಿದರೂ ಪ್ರಯೋಜನವಾಗಲಿಲ್ಲ. ಕಡೆಗೆ ಕಳ್ಳಂಗಡಿಯವನಲ್ಲಿಗೆ ಹೋಗಿ ಕೇಳಿದನು.

ಅವನು ಪ್ರಶ್ನೆಗೆ ತಕ್ಕ ಉತ್ತರ ಕೊಡುವ ಬದಲು "ಏನು ಸೋಮಯ್ಯ ಸೆಟ್ಟರೆ, ಈಗೀಗ ನಮ್ಮನ್ನು ಮರತೇಬಿಟ್ಟಿರಿ!" ಎಂದು ಪ್ರಾರಂಭಿಸಿದನು.

"ಮಾರಾಯಾ, ಒಂದು ಅಂಕದ ಹುಂಜ ಹುಡುಕೀ ಹುಡುಕೀ ಸಾಕಾಯ್ತು

...ನಿನ್ನ ಹತ್ತಿರ ಇಲ್ಲೇನು? ದುಡ್ಡು ಕೊಡುತ್ತೀನಿ! ನಗದು!" ಎಂದ ಸೋಮನ ಮಾತಿಗೆ ಕಳ್ಳಂಗಡಿಯವನು ಒಂದು ಕರಟದಲ್ಲಿ ಒಳ್ಳೆಯ ನೊರೆಗಳ್ಳನ್ನು ತುಂಬಿ ಪ್ರತ್ಯುತ್ತರವಾಗಿ ನೀಡಿದನು.

ಸೋಮ ಬೇಡವೆಂದು ತಲೆಯಾಡಿಸಿ, ತಾನು ಕಳ್ಳು ಕುಡಿಯುವುದನ್ನು ಬಿಟ್ಟಿದ್ದೇನೆಂದು ತಿಳಿಸಿದನು.

ಅಂಗಡಿಯವನು "ಪರ್ವಾಇಲ್ಲ. ಇದೊಂದುಸಾರಿ ಕುಡಿದರೇನಂತೆ? ಅದರಲ್ಲಿಯೂ ಇದೇನು ನಿಶಾ ಬರುವ ಕಳ್ಳಲ್ಲ. ಈಗತಾನೇ ಇಳಿಸಿದ್ದು. ಸೀಯಾಗದೆ!" ಎಂದು ಮೊದಲಾಗಿ ಹೇಳುತ್ತ, ಕಳ್ಳು ತುಂಬಿದ್ದ ಕರಟವನ್ನು ಹಿಡಿದಿದ್ದ ತನ್ನ ಕೈಯ್ಯನ್ನು ಇನ್ನೂ ಮುಂದಕ್ಕೆ ಸೋಮನ ಮುಖಕ್ಕೆ ಸಮೀಪವಾಗಿ ಚಾಚಿದನು. ಮೂಗಿಗೆ ಕಳ್ಳಿನ ಕಂಪು ನುಗ್ಗಿತು. ಸೋಮ ಕಳ್ಳಂಗಡಿಯವನ ಸತ್ಕಾರದ ಬಲಾತ್ಕಾರಕ್ಕೂ ಕಳ್ಳಿನ ವಾಸನೆಯ ಸಮ್ಮೋಹಕ್ಕೂ ಅಲ್ಲಿದ್ದ ಇನ್ನಿಬ್ಬರು ಮೂವರ ಪ್ರೇರಣೆ ಪ್ರೋತ್ಸಾಹಗಳಿಗೂ ಒಳಗಾಗಿ ಹೂವಯ್ಯನ ಸಂಗ ಸಹವಾಸದ ಮಹಿಮೆಯಿಂದ ಬಹುದಿನಗಳಿಂದಲೂ ತ್ಯಜಿಸಿಬಿಟ್ಟಿದ್ದ ಮಾದಕ ಪದಾರ್ಥವನ್ನು ಮತ್ತೆ ಸೇವಿಸಿದನು. ಕಳ್ಳು ಬಹಳ ರುಚಿಯಾಗಿತ್ತು.

ಕಳ್ಳಂಗಡಿಯವನು ಒಬ್ಬ ಆಳನ್ನು ತನ್ನ ಮನೆಗೆ ಕಳುಹಿಸಿ, ಅಂಕದ ಕೋಳಿಯೆಂದು ಒಂದು ಹುಂಜವನ್ನು ತರಿಸಿದನು. ಅದನ್ನು ಕಾಲಿಗೆ ಹಗ್ಗಹಾಕಿ ಕಟ್ಟಿ ಸಾಕಿದ್ದರೆಂಬುದಕ್ಕೆ ಬೇಕಾದಷ್ಟು ಗುರುತುಸಾಕ್ಷಿಯಿತ್ತು. ಅದರ ಕೆಂಪು ಜೊಟ್ಟಿಯನ್ನು ಬುಡಕ್ಕೆ ಸಮವಾಗಿ ಕೊಯ್ದುಹಾಕಿದ್ದರು. ಏಕೆ ಎಂದು ಕೇಳಲು, 'ಅದರಮೇಲೆ ಒಂದು ದೆಯ್ಯಬರುತ್ತಿತ್ತು, ಅದನ್ನು ಓಡಿಸಲು ಹಾಗೆ ಮಾಡಿದೆ' ಎಂದು ಅಂಗಡಿಯವನು ವಿವರಿಸಿದನು. ಹುಂಜದ ಪುಕ್ಕಗಳೆಲ್ಲ ಉದುರಿ ಹೋಗಿದ್ದುವು. ಹುಂಜವೇನೋ ನೋಡುವುದಕ್ಕೆ ದಪ್ಪವಾಗಿತ್ತು. ಆದರೆ ಅದು ಬೊಜ್ಜಲ್ಲದೆ ನಿಜವಾದ ಪುಷ್ಟಿಯಾಗಿರಲಿಲ್ಲ.

ಸೋಮನಿಗೆ ಹುಂಜದ ಗುರುತು ಸಿಕ್ಕಲಿಲ್ಲ. ಸಿಕ್ಕಿದ್ದರೆ ತಾನು ಕೆಲವು ತಿಂಗಳುಗಳ ಹಿಂದೆ ಹಳೆಪೈಕದ ತಿಮ್ಮನ ಒಡ್ಡಿಯಿಂದ ಕದ್ದುಕೊಂಡು ಹೋಗಿ ಕೊಟ್ಟಿದ್ದ ಹುಂಜವೇ ಅದು ಎಂಬುದು ಗೊತ್ತಾಗುತ್ತಿತ್ತು! ಕತ್ತಲೆಯಲ್ಲಿ ಕದ್ದುಕೊಂಡುಹೋಗಿ ಮುಚ್ಚುಮರೆಮಾಡಿ ಗಾಬರಿಯಿಂದ ಕೊಟ್ಟುಬಂದಿದ್ದುದರಿಂದ ಆಗ ಅವನು ಆ ಹುಂಜವನ್ನು ಚೆನ್ನಾಗಿ ನೋಡಿಯೂ ಇರಲಿಲ್ಲ. ನೋಡಿದ್ದರೂ ಜೊಟ್ಟಿ ಪುಕ್ಕಗಳನ್ನು ಕತ್ತರಿಸಿ, ಯಾರೂ ಕಾಣದಂತೆ ಕತ್ತಲೆಯಲ್ಲಿ ಕಟ್ಟಿ ಸಾಕಿದ್ದರಿಂದ ಅಸಹ್ಯವಾಗಿ ಬೊಜ್ಜು ಬೆಳೆದಿದ್ದ ಅದನ್ನು ಈಗ ಗುರುತಿಸುವುದೂ ಸೋಮನಿಂದ ಸಾಧ್ಯವಾಗುತ್ತಿರಲಿಲ್ಲ.

ಅಂತೂ ಕೊಯ್ದು ತಿನ್ನುವುದಕ್ಕೆ ಮಾತ್ರ ಲಾಯಖ್ಖಾಗಿದ್ದ 'ಬೊಜ್ಜಣ್ಣ'ನನ್ನು 'ಕಟ್ಟಿ ಸಾಕಿದ ಅಂಕದ ಹುಂಜ'ವೆಂದು ಸುಳ್ಳುಹೇಳಿ ಅಂಗಡಿಯವನು ಸೋಮನಿಗೆ ಮೂರು ರೂಪಾಯಿಗೆ ಮಾರಿದನು. ಅವನು ಪ್ರಾರಂಭದಲ್ಲಿ ಕೊಟ್ಟಿದ್ದ ಕಳ್ಳೂ ಸೋಮನ ತಲೆಯಲ್ಲಿ ಅಂಗಡಿಯವನ ಪರವಾಗಿ ಕೆಲಸಮಾಡದೆ ಇರಲಿಲ್ಲ.

ಸೋಮ ಒಂದು ಪೊದೆಯ ಹಿಂದೆ ಹೋಗಿ, ಒಂದಕ್ಕೆ ಕೂರುವವನಂತೆ ನಟಿಸಿ, ನೋಟಿನ ಕಟ್ಟನ್ನು ಬಿಚ್ಚಿ, ಐದು ರೂಪಾಯಿನ ಒಂದು ನೋಟನ್ನು ತೆಗೆದುಕೊಂಡುಬಂದು ಕಳ್ಳಂಗಡಿಯವನ ಬಳಿ "ಚಿಲ್ರೆ ಇದೆಯೇನು ಲೋಟಿಗೆ!" ಎಂದು ಕೇಳಿದನು.

ಕಳ್ಳಂಗಡಿಯವನು ಅರ್ಥಪೂರ್ಣವಾದ ಆಶ್ಚರ್ಯದಿಂದ ಸೋಮನ ಮುಖವನ್ನೇ ನೋಡುತ್ತ 'ಲೋಟಿಗೆ' ಚಿಲ್ಲರೆ ಕೊಟ್ಟು, ಮೂರು ರೂಪಾಯಿಗಳನ್ನು ಒಕ್ಕಣಕ್ಕೆ ಇಳಿಬಿಟ್ಟನು.

ಸೋಮ ಕಳ್ಳಂಗಡಿಯವನು ಕೊಟ್ಟ ಮತ್ತಷ್ಟು ಕಳ್ಳನ್ನೂ ಬಿಟ್ಟಿಯೆಂದು ಭಾವಿಸಿ ಕುಡಿದು, ತನ್ನ ಬೊಜ್ಜಿನ ಹುಂಜವನ್ನು ಬಗಲಲ್ಲಿ ಇರುಕಿಕೊಂಡು ಹೆಮ್ಮೆಯ ಧೋರಣೆಯಿಂದ ರಂಗಕ್ಕಿಳಿದನು. ಕೋಳಿಯಂಕದ ಪಟ್ಟೆ ಮೊದಲಿಗಿಂತಲೂ ಹೆಚ್ಚಿನ ಉತ್ಸಾಹದಿಂದಲೂ ವೀರರಸದಿಂದಲೂ ಕಳಕಳಧ್ವನಿಯಿಂದಲೂ ಕೂಡಿ, ಮೊದಲಿಗಿಂತಲೂ ಹೆಚ್ಚು ಜೀವಪೂರ್ಣವಾಗಿ ಮನೋಹರವಾಗಿ ಕಂಡುಬಂದಿತು. ಸೋಮ ಆ ಗಲಿಬಿಲಿಯಲ್ಲಿ ತನ್ನಷ್ಟಕ್ಕೆ ತಾನೇ "ಮನೇ ಸುತ್ತ ಪಾಗಾರುಂಡು! ಅಂಕಕ್ಕೆ ಕೋಳಿ ಉಂಡು! ಬೆಳ್ಳಿಕಟ್ಟಿನ ಬೆತ್ತ ಉಂಡು!" ಎಂದು ಮೊದಲಾಗಿ ಹಾಡುತ್ತಲೂ, ನಡುನಡುವೆ ಸಿಳ್ಳು ಹಾಕುತ್ತಲೂ, ಸಂದಣಿಯಲ್ಲಿ ಮುಂದೆ ನುಗ್ಗಿದನು.

ಕೋಳಿ ಅಂಕದ ಅನುಭವಶಾಲಿಗಳು ಸೋಮನ ಹುಂಜವನ್ನು ನೋಡಿ ನಗತೊಡಗಿದರು. ಕೆಲವರು "ಇದೆಲ್ಲಿಂದ ತಂದೆಯೋ ಈ ಒಡ್ಡಿ ಹುಂಜನ್ನ?" ಎಂದು ಗೇಲಿಮಾಡಿದರು. ಕೆಲವರು ಆ ಹುಂಜಕ್ಕೆ 'ಕುಂಭಕರ್ಣ' ಎಂದು ಬಿರುದುಕೊಟ್ಟರು. ಸೋಮ ಮಾತ್ರ ಯಾರ ಹಾಸ್ಯಕ್ಕೂ ಗೇಲಿಗೂ ಜಗ್ಗದೆ, ತನ್ನ ಹುಂಜಕ್ಕೆ ಜೊತೆ ಕಟ್ಟಬೇಕೆಂದು ಮುತ್ತಳ್ಳಿ ಸೇರೆಗಾರರ 'ಬಗಲಿ'ಯನ್ನು ಕೇಳಿದನು. ಆ 'ಬಗಲಿ' ಬೊಜ್ಜು ಬಂದಿದ್ದ ಸೋಮನ ಅಂಕದ ಹುಂಜವನ್ನು ನೋಡಿ, ಒಳಗೆ ಉಕ್ಕಿಬರುತ್ತಿದ್ದ ನಗುವನ್ನು ಬೇರೆಯ ನೆವಗಳಿಂದ ಹೊರ ಹೊಮ್ಮಿಸುತ್ತಾ, ಹಳೆಪೈಕದ ತಿಮ್ಮನನ್ನು ಕರೆದು ಅವನ ಕೋಳಿಗೆ ಜೊತೆಕಟ್ಟಿದನು. ಹಳೆಪೈಕದ ತಿಮ್ಮನ ಕೋಳಿ ನೋಡುವುದಕ್ಕೆ ಬಹಳ ಸಣ್ಣದಾಗಿತ್ತು.

ಸೋಮನ ಕೋಳಿಯ ತೂಕದಲ್ಲಿ ಅರ್ಧಪಾಲೂ ಇರಲಿಲ್ಲ. ಅದನ್ನು ಕಂಡು ಸೋಮನಿಗೆ ಆನಂದವಾಯಿತು, ತನ್ನ ಮಹಾಕಾಯದ ಕುಕ್ಕುಟವೀರ ತಿಮ್ಮನ ಬಡಕಲು ಹುಂಜವನ್ನು ನಿಮಿಷಾರ್ಧದಲ್ಲಿ ನೆಲಕ್ಕುರುಳಿಸಿಬಿಡುತ್ತದೆ ಎಂದು; ತಿಮ್ಮನ ಹುಂಜ ತನಗೆ ದಕ್ಕುತ್ತದೆ ಎಂದು; ರಾತ್ರಿ ಕೋಳಿಯ ಪಲ್ಯ ಮಜ ವಾಗಿರುತ್ತದೆ ಎಂದು !

ಸರಿ ! ಸೋಮ ಒಂದು ಕೋಳಿಕತ್ತಿಯನ್ನು ಕೊಂಡುತಂದು ತನ್ನ ಹುಂಜದ ಕಾಲಿಗೆ ಸಂಭ್ರಮದಿಂದ ಕಟ್ಟಿದನು. ಬಿಗಿದು ಕಟ್ಟಿದ ಮೇಲೆ ಹೆಚ್ಚು ಹೊತ್ತಾದರೆ ಕಾಲು ಮರವಟ್ಟುತ್ತದೆ ಎಂದು ಗಟ್ಟಿಯಾಗಿ ಬಾಯಿಮಾಡುತ್ತ, ತಿಮ್ಮನಿಗೆ ಚುರುಕು ಮಾಡುವಂತೆ ಬೆಸಸಿದನು. ತಿಮ್ಮನ ಹುಂಜ ಸಿದ್ಧವಾಯಿತು.

ಸೋಮ ಕಾಳೆಗಕ್ಕೆ ಮೊದಲು ತನ್ನ ಕೋಳಿಯನ್ನು ಪರೀಕ್ಷೆಗಾಗಿ ನೆಲದ ಮೇಲೆ ಬಿಟ್ಟೊಡನೆ ನೆರೆದಿದ್ದವರೆಲ್ಲರೂ ಗೊಳ್ಳೆಂದು ನಕ್ಕರು. ಹುಂಜ ಚೊಟ್ಟೆ ಯಿಲ್ಲದೆ ಪುಕ್ಕವಿಲ್ಲದೆ ಬೊಜ್ಜು ಬೆಳೆದು ನೋಟಕ್ಕೆ ವಿಕಾರವಾಗಿದ್ದುದಲ್ಲದೆ, ಕಾಲಿಗೆ ಎಂದೆಂದೂ ಕತ್ತಿ ಕಟ್ಟಿಸಿಕೊಂಡು ಅಭ್ಯಾಸವಿಲ್ಲದಿದ್ದ ಆ ಸ್ಥೂಲಪ್ರಾಣಿಗೆ ಸರಿಯಾಗಿ ಅಡಿಯಿಡಲಸಾಧ್ಯವಾಗಿ, ಕುಂಟುತ್ತ, ಅತ್ತಿತ್ತ ಒಲೆಯತೊಡಗಿತು.

ಎರಡು ಹುಂಜಗಳನ್ನೂ ಅಂಕಕ್ಕೆ ಬಿಟ್ಟರು ! ಹುಟ್ಟಿದಂದಿನಿಂದ ಅಂಕ ವೇನೆಂಬುದನ್ನು ಕನಸಿನಲ್ಲಿಯೂ ಅರಿಯದಿದ್ದ ಸೋಮನ ಹುಂಜ (ಅದಕ್ಕೆ 'ಕುಂಭಕರ್ಣ' ಎಂಬ ಹೆಸರು ಬಂದಾಗಿತ್ತು !) ಮೇವು ಹೆರಕಲು ತೊಡಗಿತು ! ನೆರೆದವರು ಗಟ್ಟಿಯಾಗಿ ನಿಂದನೆಯ ನುಡಿಗಳನ್ನು ಆಡುತ್ತಾ ನಗುತ್ತಿದ್ದುದನ್ನು ಕಂಡು ಸೋಮನಿಗೆ ಬಲುರೇಗಿತು ! ತನ್ನ ಹುಂಜದ ಪರವಾಗಿ ಯಾರೂ ಮೇಲುಜೂಜು ಕಟ್ಟದಿದ್ದುದನ್ನು ನೋಡಿ, ಸಿಟ್ಟಿನಿಂದ ತಾನೇ ತನ್ನ ಹುಂಜದ ಪರವಾಗಿ "ಎಂಟಾಣೆ ! ಮೇಲುಜೂಜು !" ಎಂದು ಕೂಗಿದನು.

ಸೇರೆಗಾರ ರಂಗಪ್ಪಸೆಟ್ಟರು ತಿಮ್ಮನ ಹುಂಜದ ಪರವಾಗಿ "ಹನ್ನೆರಡಾಣೆ" ಎಂದು ಪ್ರತಿಕೂಗು ಕೂಗಿದರು.

ಸೋಮ "ಒಂದು ರೂಪಾಯಿ !" ಎಂದು ಕೂಗಿದನು.

ಸೇರೆಗಾರರೂ "ಸೈ" ಎಂದರು.

ಸೋಮ ಮತ್ತೆ ತನ್ನ ಹುಂಜವನ್ನು ಹುರಿದುಂಬಿಸಿ ಅಂಕಕ್ಕೆ ಬಿಟ್ಟನು. ಆ ಹುಂಜಕ್ಕೆ ಬಹುಕಾಲದಿಂದ ಬಲಾತ್ಕಾರದ ಬ್ರಹ್ಮಚರ್ಯವಾಗಿದ್ದುದರಿಂದಲೊ ಏನೊ, ಎದುರು ಹುಂಜವನ್ನು ಹೇಂಟೆಯೆಂದು ತಿಳಿದು ಕೊಕ್ ಕೊಕ್ ಕೊಕ್ ಎಂದು ಲೊಟಗುಟ್ಟಿ, ತನ್ನೊಂದು ರೆಕ್ಕೆಯನ್ನು ಸ್ವಲ್ಪ ಎತ್ತಿ, ಪ್ರಣಯಚೇಷ್ಟೆ ಗೈಯುತ್ತ ಮುಂಬರಿಯಿತು. ನೆರೆದವರು ಪರ್ವತಾರಣ್ಯಗಳೆಲ್ಲ ಪ್ರತಿಧ್ವನಿ

ಗೈಯುವಂತೆ ಕೇಕೆಹಾಕಿ ಚಪ್ಪಾಳೆ ತಟ್ಟಿ, ಕುಣಿಕುಣಿದು ನಗತೊಡಗಿದರು. ಕೆಲವರು 'ಅನಿಷ್ಟಾ! ಅನಿಷ್ಟಾ!' ಎಂದು ಬೈದರು. ಆ ಅಟ್ಟಹಾಸವನ್ನು ಕೇಳಿ ಇತರ ಅಂಕಸ್ಥಾನಗಳಲ್ಲಿದ್ದ ಜನರೂ ತಂಡ ತಂಡ ತಂಡವಾಗಿ ಓಡಿ ಬಂದು ಕಿಕ್ಕಿರಿದು ನೆರೆದರು!

ಕುಂಭಕರ್ಣ ಪ್ರಣಯಚೇಷ್ಟೆ ಮಾಡುತ್ತ ಮುಂಬರಿಯಿತು. ಸೋಮ ಅದನ್ನೂ ಒಂದು ಸಮರವಿಧಾನವೆಂದು ಭಾವಿಸುತ್ತ ನಾಚದೆ ನಿಂತನು. ತಿಮ್ಮನ ಹುಂಜ ಕುಂಭಕರ್ಣನ ಪ್ರಣಯಭಿಕ್ಷಾಪಾತ್ರೆಗೆ ಬಿಡಿಕಾಸನ್ನೂ ಹಾಕದೆ ಒಂದು ಸಾರಿ ಝಾಡಿಸಿ ಒದೆಯಿತು. ಕುಂಭಕರ್ಣ ಜನರ ನಗೆಯ ಕೋಲಾಹಲದ ಮಧ್ಯೆ ಎರಡು ಉರುಳು ಉರಳಿಬಿದ್ದಿತು. ರೆಕ್ಕೆಯ ಬಳಿ ಅರ್ಧ ಅಂಗುಲ ಗಾಯವಾಗಿ ನೆತ್ತರು ಸೋರಹತ್ತಿತು.

ಸೋಮ ಗಾಯಕ್ಕೆ ಮದ್ದು ಹಚ್ಚಿ ಮತ್ತೆ ಅಂಕಕ್ಕೆ ಬಿಟ್ಟನು. ಈ ಸಾರಿ ಕುಂಭಕರ್ಣ ಕಾಳೆಗಕೊಟ್ಟಿತು. ಆದರೆ ಮೂರನೆಯ ಸಾರಿ ಸಂಧಿಸುವುದರೊಳಗೆ ತಿಮ್ಮನ ಹುಂಜದ ಕತ್ತಿ ಎದೆಗೆ ಹೊಕ್ಕು ಬಾಯಲ್ಲಿ ಕೆನ್ನೊರೆ ಕಾರುತ್ತ ಪಕ್ಕ ಕ್ಕೊರಗಿತು!

ಸೋಮನಿಗೆ ಹತಾಶೆಯಿಂದ ರೋಷವೇರಿತು. ನೆಲಕ್ಕುರುಳಿ ಒದ್ದಾಡಿಕೊಳ್ಳುತ್ತಿದ್ದ ಹುಂಜವನ್ನು ಎತ್ತಿ ನೀರುಕುಡಿಸಿ, ಗಾಯಗಳಿಗೆ ಮದ್ದು ಹಚ್ಚಿ, ಹುಮ್ಮಸ್ಸು ಬರಬೇಕೆಂದು ಸ್ವಲ್ಪ ಸಾರಾಯಿಯನ್ನೂ ಕುಡಿಸಿದನು. ಆದರೆ ಅಂಕಕ್ಕೆಂದು ಪುನಃ ನೆಲಕ್ಕೆ ಬಿಡುತ್ತಿದ್ದಹಾಗೆಯೆ ಹುಂಜದ ಗೋಣು ಮುರಿದು ಜೋಲಿತು. ಅಂಕದ ಕಾನೂನಿನಂತೆ ಹಳೆಪೈಕದ ತಿಮ್ಮ ಆ ಹುಂಜವನ್ನು ವಶಪಡಿಸಿಕೊಂಡನು. ಸೇರೆಗಾರರೂ ಮೇಲುಜೂಜಿನ ಒಂದುರೂಪಾಯಿಯನ್ನು ಇಸುಕೊಂಡರು.

ಸೋಮ ಸಪ್ಪೆಮೋರೆ ಹಾಕಿಕೊಂಡು ಕೆಳಕಾನೂರಿನ ಕಡೆಗೆ ತಿರುಗಲೆಂದು ಹವಣಿಸುತ್ತಿದ್ದನು. ಗುರುತಿನವರಲ್ಲಿ ಕೆಲವರು, "ಇನ್ನೇನು ಕರ್ಣಾರ್ಜುನರ ಕಾಳಗವೂ ಪ್ರಾರಂಭವಾಗುತ್ತದೆ. ನೋಡಿಕೊಂಡು ಹೋದರಾಯಿತು" ಎಂದರು. ಅಂತಹ ಅದ್ಭುತ ದೃಶ್ಯವನ್ನು ನೋಡದಿರಬಾರದು ಎಂದು ಸೋಮ ಅವರೊಡನೆ ಕರ್ಣಾರ್ಜುನರ ಅಂಕಸ್ಥಾನಕ್ಕೆ ನಡೆದನು.

ಅನೇಕ ಅಂಕಗಳಲ್ಲಿ ಅನೇಕ ಹುಂಜಗಳನ್ನು ಗೆದ್ದು 'ಕರ್ಣ' ಮತ್ತು 'ಅರ್ಜುನ' ಎಂಬ ಬಿರುದಾಂಕಿತಗಳನ್ನು ಪಡೆದಿದ್ದ ಆ ಹುಂಜಗಳ ಆ ಅಂಕ ಅತ್ಯದ್ಭುತವಾಗಿ ರುದ್ರ ರಮಣೀಯವಾಗಿತ್ತು! ಮೇಲುಜೂಜಿ ಹತ್ತಿಪ್ಪತ್ತು ರೂಪಾಯಿಗಳವರೆಗೂ ಏರಿತ್ತು. ನೆರೆದ ಜನರೆಲ್ಲರೂ ರೋಮಾಂಚಿತರಾಗಿ ನೋಡುತ್ತಿದ್ದರು.

ಒಮ್ಮೆ ಅರ್ಜುನನ ಹೊಟ್ಟೆ ಸೀಳಿ, ಕರುಳು ಕಾಣುವಂತಾಗಲು, ಅದನ್ನು ಹೊಲಿದು, ಮದ್ದು ಹಾಕಿ, ನೀರು ಕುಡಿಸಿ ಹುಷಾರುಮಾಡಿ ಮತ್ತೆ ಅಂಕಕ್ಕೆ ಬಿಟ್ಟಿದ್ದರು.

ಸೋಮ ತನಗೆ ಒದಗಿದ್ದ ಮತ್ತು ಒದಗಲಿರುವ ಕಷ್ಟಗಳನ್ನೂ ಅವಮಾನಗಳನ್ನೂ ಮರೆತು, ತತ್ಪರನಾಗಿ ನೋಡುತ್ತಾ ಜನಸಂದಣಿಯಲ್ಲಿ ನಿಂತಿದ್ದನು. ಯಾರೋ ತನ್ನ ಹೆಗಲಮೇಲೆ ಕೈಹಾಕಿದಂತಾಯಿತು. ತಿರುಗಿ ನೋಡಿದನು. ಯಾರೂ ಇರಲಿಲ್ಲ. ಮತ್ತೊಂದುಸಾರಿ ಅಂಗಿಯನ್ನು ಎಳೆದಂತಾಯಿತು. ಆಗಲೂ ತಿರುಗಿನೋಡಿದಾಗ ಯಾರೂ ಇರಲಿಲ್ಲ. ಪಕ್ಕದಲ್ಲಿದ್ದ ಕಳ್ಳಂಗಡಿಯವನ ಭಾವಮೈದುನನು ಅಂಕವಾಡುತ್ತಿದ್ದ ಹುಂಜಗಳನ್ನೇ ದೃಷ್ಟಿಸಿ ನೋಡುತ್ತಿದ್ದನು. ಸೋಮನೂ ನೋಡತೊಡಗಿದನು.

ಕಾಳಗ ಶಿಖರಕ್ಕೇರಿತ್ತು. ಹಿಂದಿನಿಂದ ಬಂದು ಹಳೆಪೈಕದ ತಿಮ್ಮ ಸೋಮನನ್ನು ಕರೆದನು. ತನ್ನ ಕೋಳಿಯನ್ನು ಅಪಹರಿಸಿದುದಲ್ಲದೆ ಹಂಗಿಸುವುದಕ್ಕೆ ಬಂದಿದ್ದಾನೆ ಎಂದು ಊಹಿಸಿ, ಸೋಮ ಕೋಪದಿಂದ, ತಾನು ಬರುವುದಿಲ್ಲವೆಂದು ತಲೆಯಲ್ಲಾಡಿಸಿದನು. ಆಗಲೆ ಕತ್ತಲಾಗತೊಡಗಿದ್ದುದರಿಂದ ಅವನಿಗೆ ಆ ಮಬ್ಬು ಬೆಳಕಿನಲ್ಲಿ ದೂರದಲ್ಲಿ ನಿಂತು ಕರೆಯುತ್ತಿದ್ದ ತಿಮ್ಮನ ಮುಖದಲ್ಲಿದ್ದ ರೋಷದ ಛಾಯೆ ಕಾಣಿಸಲಿಲ್ಲ.

ತಿಮ್ಮ ಸರಸರನೆ ಹತ್ತಿರ ಬಂದು ಸೋಮನನ್ನು ಬಲಾತ್ಕಾರದಿಂದ ದರದರನೆ ಎಳೆದುಕೊಂಡು ಹೋದನು. ಸೋಮ ಪ್ರತಿಭಟಿಸುತ್ತಾ ಬೈಯುತ್ತಾ ಅವನೊಡನೆ ಹೋಗಬೇಕಾಯಿತು. ಇಬ್ಬರೂ ಮರದ ಕೆಳಗಿದ್ದ ಕಳ್ಳಂಗಡಿಗೆ ಹೋದರು. ಅಲ್ಲಿ ಕೆಂಪಗೆ ಉರಿಯತೊಡಗಿದ್ದ ಚಿಮಿನಿ ದೀಪಗಳ ಬೆಳಕಿನಲ್ಲಿ ಬಿದ್ದಿದ್ದ 'ಕುಂಭಕರ್ಣ'ನ ಶವವನ್ನು ತೋರುತ್ತಾ ತಿಮ್ಮ "ಇದು ಯಾರದ್ದು ಈ ಕೋಳಿ?" ಎಂದು ಭೀಷಣವಾಗಿ ಕೇಳಿದನು.

ಸೋಮ ತಾನು ಕಳ್ಳಂಗಡಿಯವನಿಂದ ಕ್ರಯಕ್ಕೆ ಕೊಂಡುಕೊಂಡಿದ್ದು ಎಂದು ಹೇಳಿದನು.

"ಅವರಿಗೆ ಯಾರು ತಂದುಕೊಟ್ಟಿದ್ದು?" ಎಂದು ತಿಮ್ಮ ಗರ್ಜಿಸಿದನು.

"ನನ್ನ ಹತ್ತಿರ ಏನು ಕೇಳುತ್ತೀಯಾ? ಬೇಕಾದರೆ ಅವನನ್ನೇ ಕೇಳು!" ಎಂದು ಸೋಮ ಕಳ್ಳಂಗಡಿಯವನ ಕಡೆಗೆ ನೋಡಿದನು.

ಕಳ್ಳಂಗಡಿಯವನು "ನನ್ನ ಸಾಲಕ್ಕೆ ನೀವೇ ತಂದುಕೊಟ್ಟಿದ್ದಿರಿ!" ಎಂದುಬಿಟ್ಟನು.

ಕ್ಷಣಮಾತ್ರದಲ್ಲಿ ನಡೆದಿದ್ದ ಅಚಾತುರ್ಯವೆಲ್ಲ ಸೋಮನ ಮನಸ್ಸಿಗೆ ಹೊಳೆಯಿತು; ತಾನು ಕೆಲತಿಂಗಳ ಹಿಂದೆ ಹಳೆಪೈಕದ ತಿಮ್ಮನ ಒಡ್ಡಿಯಿಂದ ಕದ್ದು

ತಂದುಕೊಟ್ಟಿದ್ದ ಹುಂಜವನ್ನೆ, ಚೊಟ್ಟೆ ಪುಕ್ಕಗಳನ್ನು ಕತ್ತರಿಸಿ, ಕಟ್ಟಿಹಾಕಿ ಸಾಕಿ, ಈಗ ತನಗೇ ಮಾರಿಬಿಟ್ಟು, ವಿಷಯವನ್ನು ತಿಮ್ಮನಿಗೆ ಹೇಳಿಬಿಟ್ಟಿದ್ದಾನೆ ಈ ಕಪಟಿ ಕಳ್ಳಂಗಡಿಯವನು! ಅಯ್ಯೋ, ಮೋಸಹೋದೆ! ಇನ್ನು ಮಾಡುವು ದೇನು? ಸುಳ್ಳು ಎಂದು ಸಾಧಿಸುವುದೊಂದೇ ಹಾದಿ!

ಸೋಮ ಕಳ್ಳಂಗಡಿಯವನು ಹೇಳುವುದೆಲ್ಲ ಸುಳ್ಳು ಎಂದು ಸಾಧಿಸತೊಡಗಿದನು.

ಕಳ್ಳಂಗಡಿಯವನೊಂದು ಕಡೆ, ತಿಮ್ಮನೊಂದು ಕಡೆ ಇಬ್ಬರೂ ಜೋರು ಜೋರಾಗಿ ಮಾತಾಡುತ್ತಾ ಮಾತಾಡುತ್ತಾ, ಹತ್ತಿರ ಹತ್ತಿರಕ್ಕೆ ಬಂದು ಸೋಮನ ಮೈಮೇಲೆ ಬಿದ್ದು ಹೊಡೆಯತೊಡಗಿದರು. ಸೋಮ ಗಟ್ಟಿಯಾಗಿ ಒರಲಿದನು.

ಸೀತೆಮನೆ ಸೇರೆಗಾರರು ತಮ್ಮ ಕಡೆಯವರ ಸಹಾಯದಿಂದ ಸೋಮನನ್ನು ಬಿಡಿಸಿದರು. ಅವನ ಅಂಗಿ ಪಂಚೆಗಳೆಲ್ಲ ಹರಿದುಹೋಗಿದ್ದುವು. ತಲೆಯುಡುಗೆ ಎಲ್ಲಿಯೋ ಹಾರಿಹೋಗಿತ್ತು! ಸೋಮ ಬಿಕ್ಕಿ ಬಿಕ್ಕಿ ಅಳುತ್ತ, ಬಟ್ಟೆಬರೆಗಳನ್ನು ಸರಿಮಾಡಿಕೊಂಡು, ಕತ್ತಲೆಯಲ್ಲಿ, ಒಂಟಿಯಾಗಿ, ಮನೆಯ ಕಡೆಗೆ ಹೊರಟನು.

ದಾರಿಯಲ್ಲಿ ಹೂವಯ್ಯನ ಪಾದಗಳ ಮೇಲೆ ಬಿದ್ದು ಕ್ಷಮಾಪಣೆ ಕೇಳಿಕೊಳ್ಳ ಬೇಕೆಂದೂ, ಐವತ್ತು ರೂಪಾಯಿಗಳಲ್ಲಿ ತಾನು ಖರ್ಚುಮಾಡಿದ್ದ ನಾಲ್ಕು ರೂಪಾಯಿಗಳನ್ನು (ಕೋಳಿಗೆ ಮೂರು, ಮೇಲುಜೂಜಿಗೆ ಒಂದು!) ತನ್ನ ಲೆಕ್ಕಕ್ಕೆ ಖರ್ಚು ಹಾಕಿಕೊಳ್ಳುವಂತೆ ಪ್ರಾರ್ಥಿಸಬೇಕೆಂದೂ, ಹೇಗಾದರೂಮಾಡಿ ಹಳೆಪೈಕದ ತಿಮ್ಮನಿಗೂ ಕಳ್ಳಂಗಡಿಯವನಿಗೂ ಪ್ರತೀಕಾರ ಮಾಡಬೇಕೆಂದೂ ನಾನಾ ಮಾರ್ಗಗಳನ್ನು ಯೋಚಿಸುತ್ತ, ನಡುನಡುವೆ ಬಿಕ್ಕಿ ಬಿಕ್ಕಿ ಅಳುತ್ತ, ಕಾಲು ಹಾಕಿದನು.

ಬರಬರುತ್ತ ಕತ್ತಲೆ ದಟ್ಟವಾಯಿತು. ಆಕಾಶದಲ್ಲಿ ಅಸಂಖ್ಯ ನಕ್ಷತ್ರಗಳು ವಜ್ರಸೂಜಿಯ ಮೊನೆಗಳಂತೆ ಮಿಣುಮಿಣುಕಿ ಕಣ್ಣು ತಿವಿಯುತ್ತಿದ್ದುವು. ಒಂದೆಡೆ ತನ್ನ ಜೇಬಿಗೆ ಕೈಹಾಕಿ ನೋಡಿಕೊಂಡ ಸೋಮ ತಟಕ್ಕನೆ ಭೂತಬಡಿದವನ ಹಾಗೆ ನಿಂತುಬಿಟ್ಟನು! ಜೇಬಿನಲ್ಲಿದ್ದ ನೋಟುಗಳ ಕಟ್ಟಿಗೆ ಕಟ್ಟೇ ಮಾಯವಾಗಿತ್ತು!

## ೩೪

## ಸುಬ್ಬಮ್ಮ ಮತ್ತು ಗಂಗೆಯರಿಗೆ ನಡೆದ ಕುಸ್ತಿ

ತನ್ನ ಗಂಡ ಯಾತ್ರೆ ಹೋದ ವಿಚಾರವನ್ನು ಕೇಳಿದಂದಿನಿಂದಲೂ ಸುಬ್ಬಮ್ಮಗೆ ಕಾನೂರಿನಲ್ಲಿರುವ ತನ್ನ ಒಡವೆ ವಸ್ತುಗಳನ್ನು ಹೇಗಾದರೂ ಮಾಡಿ ನೆಲ್ಲುಹಳ್ಳಿಗೆ ಸಾಗಿಸಬೇಕೆಂದು ಮನಸ್ಸಾಗಿತ್ತು. ಆ ವಿಚಾರವನ್ನು ತನ್ನ ತಂದೆ ತಾಯಿಗಳಿಗೂ ಹೇಳಿದ್ದಳು. ಪೆದ್ದೇಗೌಡರು ಜುಗುಪ್ಸೆಯಿಂದ ಮಗಳ ಮಾತನ್ನು ತಿರಸ್ಕರಿಸಿ, "ಅವರ ವಡವೆವಸ್ತು ಅವರ ಹೆಣಕ್ಕೆ ಹಾಕಿಕೊಳ್ಳಲಿ! ನಿನಗ್ಯಾಕೆ? ನನ್ನ ಮನೇಲಿ ನಿನಗೆ ಹೊಟ್ಟೆಗೆ ಬಟ್ಟೆಗೆ ಕಡಮೆಯಾಗಿದ್ದೇನು?" ಎಂದುಬಿಟ್ಟಿದ್ದರು. ತಾಯಿ ಮಾತ್ರ ಮಗಳ ಮಾತಿಗೆ ಒಪ್ಪಿಗೆಕೊಟ್ಟು ಸಮಯ ಕಾಯುತ್ತಿದ್ದಳು.

ಕರೆಯದೆಯೆ ತಾವೇ ಕಾನೂರಿಗೆ ಹೋದರೆ ಸಂಶಯಕ್ಕೆ ಕಾರಣವಾಗಿ ಕೆಲಸ ಕೆಟ್ಟುಹೋಗುತ್ತದೆ ಎಂದು ಆಲೋಚಿಸುತ್ತಿದ್ದಾಗಲೆ, ಸೇರೆಗಾರ ರಂಗಪ್ಪಸೆಟ್ಟರು ಯಾತ್ರೆಗೆ ಹೊರಡುವಾಗ ಚಂದ್ರಯ್ಯಗೌಡರು ತಮಗೆ ಅಪ್ಪಣೆಮಾಡಿದ್ದರೆಂದು ಹೇಳಿ, ಕಾನೂರಿಗೆ ಬರುವಂತೆ ಸುಬ್ಬಮ್ಮಗೆ ಹೇಳಿಕಳುಹಿಸಿದರು. ಸುಬ್ಬಮ್ಮಗೆ ಸೇರೆಗಾರರು ಕರೆಕಳುಹಿಸಿದ್ದಕ್ಕೆ ಕಾರಣವಾದ ಮನೋಭಾವ ಅರ್ಥವಾಗದಿರಲಿಲ್ಲ. ತನ್ನ ಗಂಡ ಹಾಗೆ ಹೇಳಿದ್ದೂ ಸುಳ್ಳು ಎಂಬುದನ್ನು ಚೆನ್ನಾಗಿ ಅರಿತಿದ್ದಳು. ಆದರೂ ತನ್ನ ಕಾರ್ಯಸಾಧನೆಗೆ ಒದಗಿದ್ದ ಸಮಯವನ್ನು ಬಿಡಬಾರದೆಂದು ತಾಯಿಯೊಡಗೂಡಿ ಕಾನೂರಿಗೆ ಬಂದಳು. ಆಕೆಯ ಅದೃಷ್ಟಕ್ಕೆ ಸರಿಯಾಗಿ ಆ ದಿನವೆ ಕೋಳಿಯಂಕದ ದಿನವಾಗಿದ್ದುದರಿಂದ ಸೇರೆಗಾರರೂ, ಅವರ ಆಳುಗಳೂ, ಹಳೆಪೈಕದ ತಿಮ್ಮನೇ ಮೊದಲಾದ ಇತರ ಗಂಡಸರೂ, ಅಪರಾಹ್ನದಲ್ಲಿ ಕಾನೂರಿನಿಂದ ಹೊರಟುಹೋದರು. ಮನೆಯಲ್ಲಿ ಮುಖ್ಯ ವ್ಯಕ್ತಿಯಾಗಿ ಗಂಗೆಯೊಬ್ಬಳಿದ್ದಳು.

ಗಂಗೆಯನ್ನು ನೋಡಿದೊಡನೆಯೆ ಸುಬ್ಬಮ್ಮನ ಎದೆಯಲ್ಲಿ ಮಾತ್ಸರ್ಯ ದ್ವೇಷಗಳ ಉರಿ ಹೊತ್ತಿತ್ತು. ಕನ್ನಡಜಿಲ್ಲೆಯ ಆ ಹೆಂಗಸು ಗಟ್ಟದ ಮೇಲಿನವಳಂತೆ ಉಡುಗೆತೊಡುಗೆಗಳನ್ನು ಉಟ್ಟು, ತೊಟ್ಟು, ಮನೆಗೆ ತಾನೆ ಹೆಗ್ಗಡಿತಿ ಎಂಬಂತೆ ಆಚರಿಸುತ್ತಿದ್ದುದನ್ನು ಕಂಡಾಗ, ತನ್ನ ಕಷ್ಟ ಸಂಕಟಗಳಿಗೆ ಈ ಹಾದರಗಿತ್ತಿಯೆ ಮೂಲಕಾರಣವೆಂದು ನಿರ್ಣಯಿಸಿದಳು. ಅವಳನ್ನು ಅಲ್ಲಿಯೆ ಹಿಡಿದು ಕೆಡಹಿ ಕಚ್ಚಿ ಅಲುಬಬೇಕೆಂದು ಮನಸ್ಸಾಯಿತು. ಆದರೆ ಈಗಿನ ಸುಬ್ಬಮ್ಮ ಆಗಿನ ಸುಬ್ಬಮ್ಮನಾಗಿರಲಿಲ್ಲ. ಕಷ್ಟದ ಗರಡಿಯಲ್ಲಿ ಪಳಗಿದ್ದ ಆಕೆ ತನ್ನ ದುಡುಕನ್ನು ಬಿಟ್ಟು ಇಷ್ಟಸಾಧನೆಗೆ ಆವಶ್ಯಕವಾದ ಮಾರ್ಗವನ್ನು ಸಾವಧಾನವಾಗಿ ಕೈಕೊಳ್ಳಲು ಕಲಿತಿದ್ದಳು.

ಎಷ್ಟರಮಟ್ಟಿಗೆ ಕಲಿತಿದ್ದಳೆಂದರೆ, ಗಂಗೆ ತನ್ನ ವಜ್ರದ ಬೆಂಡೋಲೆ ಹಾಕಿಕೊಂಡಿದ್ದನ್ನು ಕಂಡು, "ಅದು ಯಾರದು? ಹೇಗೆ ಬಂತು?" ಎಂಬುದೊಂದನ್ನೂ ವಿಚಾರಿಸದೆ, "ನನ್ನ ಬೆಂಡೋಲೆ ನಿನ್ನ ಕಿವಿಗೆ ಎಷ್ಟು ಚೆನ್ನಾಗಿ ಒಪ್ಪತದೆ!" ಎಂದು ನಗೆಮೊಗದಿಂದ ಪ್ರಶಂಸಿಸಿದಳು. ಅವಳು ಉಟ್ಟಿದ್ದ ತನ್ನ ಮದುವೆಸೀರೆಯನ್ನು ನೋಡಿ, "ನೀರಿಗೆ ಹಾಕಿದಾಗ ಬಣ್ಣ ಬಿಡಲಿಲ್ಲೇನು?" ಎಂದು ಕೇಳಿದಳು. ಇದನ್ನೆಲ್ಲಾ ನೋಡಿ ಗಂಗೆ ಸುಬ್ಬಮ್ಮ ಮೊದಲಿನಂತೆ ಪೆಚ್ಚು ಎಂದು ಭಾವಿಸಿ ನಿಶ್ಯಂಕೆಯಿಂದ ವರ್ತಿಸತೊಡಗಿದಳು.

ಸೇರೆಗಾರರಿಗಂತೂ ಸುಬ್ಬಮ್ಮನ ಆಗಮನದಿಂದ ಕಳ್ಳು ನೆತ್ತಿಗೇರಿದಂತಾಯಿತು. ತನ್ನನ್ನು ಪ್ರೀತಿಸಿಯೆ ಗಂಡನಿಲ್ಲದ ವೇಳೆ ಬಂದಿದ್ದಾಳೆಂದು ಅವರ ಅಂತರಂಗದಲ್ಲಿ ಆಸೆಯ ಜಿರಾಫೆ ಇಂದ್ರಲೋಕದ ನಂದನ ವನದ ಕಲ್ಪವೃಕ್ಷದ ಹಸುರೆಲೆಗಳನ್ನು ಮೇಯಲೋಸುಗ ಆಕಾಶಕ್ಕೆ ಕತ್ತೆತ್ತಿತು. ತಾಯಿಯೂ ಮಗಳೂ ಮನೆಗೆ ಬಂದೊಡನೆ ಕೂತುಕೊಳ್ಳಲು ತಾವೇ ಜಮಖಾನ ಹಾಸಿಕೊಟ್ಟರು. ಕಾಲು ತೊಳೆದುಕೊಳ್ಳಲು ನೀರು ತರುವಂತೆ ಗಂಗೆಗೆ ಬೆಸಸಿದರು; ತಾವೇ ಹೋಗಿ ಹರಿವಾಣದಲ್ಲಿ ಎಲೆಯಡಕೆಗಳನ್ನಿಟ್ಟು ತಂದು, ವೀಳೆಯ ಕೊಟ್ಟರು. ಹೀಗೆ ನಾನಾ ರೀತಿಗಳಿಂದ ಉಪಚಾರ ಮಾಡಿದ್ದಲ್ಲದೆ, ಅನೇಕ ಸಮಾಧಾನದ ಮಾತುಗಳನ್ನೂ ಹೇಳಿ ಸಹಾನುಭೂತಿ ತೋರಿದರು. ಅವರ ಮನದಲ್ಲಿ ಇಷ್ಟ ಪ್ರಾಪ್ತಿಯಾಗುತ್ತದೆಂಬ ಆನಂದವೂ, ಏನೋ ಎಂತೋ ಎಂಬ ಆಶಂಕೆಯೂ ಎಣೆಯಾಡುತ್ತಿದ್ದುವು.

ಅಂಕಕ್ಕೆ ಹೋಗುವುದೆ ಬೇಡವೆ ಎಂದು ಸೇರೆಗಾರರು ಹಿಂದು ಮುಂದು ನೋಡುತ್ತಿರಲು, ಸುಬ್ಬಮ್ಮನೆ ಮುಂದೆ ಬಂದು ಅವರನ್ನು ಹೋಗುವಂತೆ ಹುರಿದುಂಬಿಸಿ "ಹೋಗಿ, ಎರಡು ಕೋಳಿಹುಂಜ ಗೆದ್ದುಕೊಂಡು ಬನ್ನಿ, ನೋಡಾನ! ರಾತ್ರಿಗೆ ಘನಾಗಿ ತುಂಡುಕಡುಬು ಅಂವುತ್ಲ (ಔತಣ) ಮಾಡಾನ" ಎಂದು ಮರುಳ್ಮಾಡಿದಳು. 'ರಾತ್ರಿಗೆ' 'ಘನಾಗಿ' ಮೊದಲಾದ ಮಾತುಗಳಿಗೆ ಏನೇನೋ ಅರ್ಥಗಳನ್ನೂ ಕಲ್ಪನೆಗಳನ್ನೂ ಕಟ್ಟಿಕೊಂಡು ರೋಮಾಂಚನವನ್ನು ಅನುಭವಿಸುತ್ತ, ಸೇರೆಗಾರರು ಅಂಕಕ್ಕೆ ನಡೆದರು.

ನಿಂಗನ ಮಗ ಪುಟ್ಟನನ್ನು ಗುಟ್ಟಾಗಿ ಕರೆದು, ತಿಂಡಿಕೊಟ್ಟು ಪುಸಲಾಯಿಸಿ, ತಾನು ಕೊಡುವ ಸಾಮಾನುಗಳನ್ನು ಕಿಟಕಿಯಾಚೆ ಅವಿತು ನಿಂತು, ತೆಗೆದುಕೊಂಡು ಹೋಗಿ ದೂರದ ಒಂದು ಪೊದೆಯಲ್ಲಿ ಯಾರಿಗೂ ಕಾಣದಂತೆ ಬಚ್ಚಿಡಬೇಕೆಂದು ಸಂಚುಮಾಡಿ, ಸುಬ್ಬಮ್ಮ ಅಡುಗೆಮನೆಗೆ ಹೋದಳು. ಅಲ್ಲಿ ಎಲ್ಲರೂ ಸೇರಿ ಸ್ವಾವಲ್ರ್ಮೀನು ನಂಚಿಕೊಂಡು ಹೆಂಡ ಕುಡಿದರು. ತಾನು ಮಾತ್ರ ಸ್ವಲ್ಪ

ಕಡಮೆ ಕುಡಿದು, ಗಂಗೆಗೆ ಉಪಚಾರಮಾಡಿ ಹೆಚ್ಚಾಗಿ ಕುಡಿಸಿದಳು. ತನ್ನ ತಾಯಿಗೂ ಹೆಚ್ಚಾಗಿ ಕುಡಿಯದಂತೆ ಸನ್ನೆಯಿಂದ ಎಚ್ಚರಿಸಿದಳು. ತರುವಾಯ ಸಾಯಂಕಾಲ ಸೇರೆಗಾರರು ಅಂಕದಲ್ಲಿ ಗೆದ್ದು ತರುವ ಕೋಳಿಗಳ ಪಲ್ಯಕ್ಕಾಗಿ ಕಾರ ಕಡೆದಿಡಬೇಕೆಂದೂ, ಕಡುಬು ಮಾಡಬೇಕೆಂದೂ ಸುಬ್ಬಮ್ಮ 'ಹುನಾರು' ಮಾಡಿ, ಗಂಗೆಗೆ ಕಾರ ಕಡೆಯುವ ಕೆಲಸವನ್ನು ವಹಿಸಿ, ತಾನು ಕಡುಬುಮಾಡುವುದನ್ನು ವಹಿಸಿಕೊಂಡಳು.

ಗಂಗೆ ಹಿತ್ತಲಕಡೆಯ ಒರಳಿನಲ್ಲಿ ಕಾರ ಕಡೆಯತೊಡಗಿದಳು. ಸುಬ್ಬಮ್ಮ ಅಡುಗೆಮನೆಯಲ್ಲಿ ಒಲೆಯ ಹತ್ತಿರ ಕುಳಿತು ಕಡುಬು ಮಾಡತೊಡಗಿದಳು.

ಈ ಮಧ್ಯೆ, ತನ್ನ ತಾಯಿಗೆ ಹಿಟ್ಟು ನುರಿಯುವಂತೆ ಹೇಳಿ, ಗಂಗೆ ಎಲ್ಲಿಯಾದರೂ ಒಂದುವೇಳೆ ಒಳಗೆ ಬಂದು ಕೇಳಿದರೆ, ತಾನು 'ಹೊರಕಡೆ' ಗೆ ಹೋಗಿರುವುದಾಗಿ ಹೇಳುವಂತೆ ತಿಳಿಸಿ, ಸುಬ್ಬಮ್ಮ ತನ್ನ ಮಲಗುವ ಕೋಣೆಗೆ ಹೋಗಿ ಕೆಲಸಕ್ಕಾರಂಭಿಸಿದಳು. ಕಿಟಕಿಯಾಚೆ ಕದ್ದು ನಿಂತಿದ್ದ ಪುಟ್ಟ, ತನ್ನ ಕೈಗೆ ಬರತೊಡಗಿದ ಚಿನ್ನದ ಬೆಳ್ಳಿಯ ಒಡವೆಗಳನ್ನೂ, ಬೆಲೆಯುಳ್ಳ ಬಟ್ಟೆಗಳನ್ನೂ ಬಾಯಗಲಿಸಿ ಕಣ್ಣರಳಿಸಿ ನೋಡುತ್ತ, ಎದೆಗಪ್ಪಿಕೊಂಡು ಹಿಗ್ಗತೊಡಗಿದನು!

ಸುಬ್ಬಮ್ಮ ಆದಷ್ಟು ಅವಸರವಾಗಿಯೆ ತನ್ನ ಒಡವೆ ವಸ್ತುಗಳನ್ನು ಹುಡುಕಿ ಹುಡುಕಿ ಕಿಟಕಿಯಾಚೆಗೆ ನೀಡುತ್ತಿದ್ದಳು. ಆದರೆ ಕೆಲವು ಪೆಟ್ಟಿಗೆಗಳಿಗೆ ಬೀಗಗಳನ್ನು ಬದಲಾಯಿಸಿದ್ದುದರಿಂದ, ಮುಚ್ಚಳ ತೆಗೆಯಲು ಸಾಧ್ಯವಾಗದೆ ಬೀಗ ಮುರಿಯಲು ಪ್ರಯತ್ನಿಸಿದಳು. ಯಾರೂ ಒಳಗೆ ಬಾರದಂತೆ ಕೋಣೆಯ ಬಾಗಿಲನ್ನು ಭದ್ರವಾಗಿ ಹಾಕಿಕೊಂಡಿದ್ದಳು. ಆದರೂ ಬೀಗ ಮುರಿಯುವ ಸದ್ದು ಹಿತ್ತಲು ಕಡೆಯಲ್ಲಿ ಕಾರ ಕಡೆಯುತ್ತಿದ್ದವಳ ಕಿವಿಗೂ ಬಿದ್ದಿತು. ಗಂಗೆ ಒಂದು ಸಾರಿ ಏನೋ ಪದಾರ್ಥವನ್ನು ತೆಗೆದುಕೊಂಡು ಹೋಗುವ ನೆವದಿಂದ ಒಳಗೆ ಬಂದು 'ಸುಬ್ಬಮ್ಮ ಎಲ್ಲಿ?' ಎಂದು ಕೇಳಿದಳು. ಸುಬ್ಬಮ್ಮನ ತಾಯಿ 'ಹೊರಕಡೆ ಹೋಗ್ತೀನಿ ಅಂಥಾ ಹೋತಪ್ಪಾ!' ಎಂದಳು. ಗಂಗೆ ಮತ್ತೊಮ್ಮೆ ಒಳಗೆ ಬಂದು ನೋಡಿದಾಗಲೂ ಸುಬ್ಬಮ್ಮ ಇರಲಿಲ್ಲ. ನೇರವಾಗಿ ನಡೆದು ಚಂದ್ರಯ್ಯಗೌಡರ ಕೋಣೆಯ ಬಾಗಿಲನ್ನು ತಳ್ಳಿದಳು. ಎಷ್ಟಾದರೂ ಬಹುಕಾಲದಿಂದಲೂ ರಹಸ್ಯವೃತ್ತಿಯಲ್ಲಿ ಪಳಗಿದ ಪ್ರವೀಣೆ!

ಮೊದಮೊದಲು ಸುಬ್ಬಮ್ಮನಿಗೆ ಬೀಗ ಮುರಿಯುವ ಗಲಾಟೆಯಲ್ಲಿ ಬಾಗಿಲು ತಟ್ಟಿದ ಸದ್ದು ಕೇಳಿಸಲಿಲ್ಲ. ಕಡೆಗೆ ಕೇಳಿಸಲು ಸದ್ದುಮಾಡುವುದನ್ನೆಲ್ಲ ನಿಲ್ಲಿಸಿಬಿಟ್ಟಳು. ಆದರೆ ಬಾಗಿಲು ತೆರೆಯಲಿಲ್ಲ.

ಗಂಗೆ ಮಾತಾಡದೆ ಬಾಗಿಲನ್ನು ತಳ್ಳಿದಳು, ನೂಕಿದಳು, ಗುದ್ದಿದಳು, ಕಡೆಗೆ

ಒದೆಯತೊಡಗಿದಳು. ಆದರೂ ಸುಬ್ಬಮ್ಮ ಬಾಗಿಲು ತೆರೆಯಲಿಲ್ಲ, ಕಿಟಕಿಯಾಚೆಯಿದ್ದ ಪುಟ್ಟನಿಗೆ ಬೇಗನೆ ಕಣ್ಮರೆಯಾಗುವಂತೆ ಪಿಸುಮಾತಿನಲ್ಲಿ ಹೇಳಿದಳು. ಅವನು ಮೆಲ್ಲನೆ ನುಸುಳಿ ಓಡಿ ಕಣ್ಮರೆಯಾದಮೇಲೆ, ಕತ್ತಲೆಯ ಕೋಣೆಯಲ್ಲಿ ತಾನು ಹೊತ್ತಿಸಿಕೊಂಡಿದ್ದ ಚಿಮಿನಿ ದೀಪವನ್ನು ಆರಿಸಿ, ತಾಳವನ್ನು ಎಳೆದಳು. ಬಾಗಿಲು ದಢಾರನೆ ತೆರೆಯಿತು.

ಗಂಗೆಯ ಕಣ್ಣಿಗೆ ಆ ಕತ್ತಲೆಯಲ್ಲಿ ಯಾರೂ ಕಾಣಿಸದಿದ್ದರೂ ಕೋಣೆಯಲ್ಲಿ ತುಂಬಿಕೊಂಡಿದ್ದ ಚಿಮಿನಿದೀಪದ ಹೊಗೆಯವಾಸನೆಯಿಂದ ಸುಬ್ಬಮ್ಮ ಆಗತಾನೆ ದೀಪ ಆರಿಸಿದ್ದಾಳೆಂದು ಗೊತ್ತಾಗಿ, "ಯಾರದು? ಬಾಗಿಲು ಹಾಕಿಕೊಂಡಿದ್ದೋರು?" ಎಂದಳು.

ಕತ್ತಲೆಯ ಮೂಲೆಯಿಂದ ಸುಬ್ಬಮ್ಮ "ನಾನು ಕಣೇ, ನನ್ನ ಕೋಣೇಲಿ ನಾನಿದ್ರೆ ನಿಂಗೇನು?" ಎಂದು ಮಲೆತು ಮಾತಾಡಿದಳು.

"ಇದಕ್ಕೇ ಏನು ನೀವು ಬಂದಿದ್ದು ಗೌಡರಿಲ್ಲದ ವೇಳೆ?" ಎಂದವಳೆ ಬೆಂಕಿಕಡ್ಡಿ ಕೆರೆದು ದೀಪ ಹೊತ್ತಿಸಿ ನೋಡಿದಳು. ಕೋಣೆ ಸೂರೆಹೋಗಿದ್ದುದು ಸ್ಪಷ್ಟವಾಗಿತ್ತು.

ಕೋಣೆಯಿಂದಾಚೆಗೆ ಹೋಗಲೆಂದು ಹೊಸ್ತಿಲಿಗೆ ಬಂದಿದ್ದ ಸುಬ್ಬಮ್ಮನ ಮೇಲೆ ರೇಗಿದ ಬೆಕ್ಕಿನಂತೆ ಹಾರಿ, ಗಂಗೆ ಅವಳ ಕೈಯನ್ನು ಬಲವಾಗಿ ಹಿಡಿದೆಳೆದಳು. ಸುಬ್ಬಮ್ಮ ಗಂಗೆಯ ಕೂದಲನ್ನು ಹಿಡಿದು ಜಗ್ಗಿದಳು. ಬೈದಾಟ, ಕೂಗಾಟ, ಹೊಡೆದಾಟಗಳು ಪ್ರಾರಂಭವಾದುವು. ಸುಬ್ಬಮ್ಮನ ತಾಯಿ ಜಗಳವನ್ನು ಬಿಡಿಸಲೆಂದು ಪ್ರಯತ್ನಿಸಿ ಸೋತುಹೋಗಿ, ಗಂಗೆಯನ್ನು ಶಪಿಸುತ್ತ ದೂರ ನಿಂತಳು.

ಎಷ್ಟಾದರೂ ಚೆನ್ನಾಗಿ ಮೈ ಬಗ್ಗಿಸಿ ದುಡಿದು, ಗರತಿಯ ಬಾಳನ್ನು ಬಾಳಿದ, ಯೌವನೆ ಸುಬ್ಬಮ್ಮನ ಮುಂದೆ, ಜೀವಶಕ್ತಿಯನ್ನೆಲ್ಲ ಅತಿಕಾಮಲಾಲಸೆಯಿಂದ ನೀಗಿಕೊಂಡಿದ್ದ ಗಂಗೆ ಹೊಡೆದಾಟದಲ್ಲಿ ನಿಲ್ಲಲು ಸಾಧ್ಯವೆ? ಕೆಲ ನಿಮಿಷಗಳಲ್ಲಿ ಹೊಡೆದು, ಗುದ್ದಿ, ಸೆಳೆದು, ಕೂದಲನ್ನು ಹಿಡಿದೆಳೆದು ಗಂಗೆಯನ್ನು ನೆಲಕ್ಕಪ್ಪಳಿಸಿ, ಸುಬ್ಬಮ್ಮ ಕಾನೂರಿನಿಂದ ಹೊರಟೇಬಿಟ್ಟಳು. ಗಂಗೆ ನೋವಿನಿಂದ ನರಳುತ್ತ, ಬಾಯಿಗೆ ಬಂದಂತೆ ಬೈಯುತ್ತ, ಸೇರೆಗಾರರನ್ನೂ ಚಂದ್ರಯ್ಯಗೌಡರನ್ನೂ ಕೂಗಿ ಕರೆಯುತ್ತ ಬಿದ್ದಿದ್ದಳು. ಗಲಭೆಯನ್ನು ಕೇಳಿ ನಾಯಿಗಳೂ ಬಳ್ಳಿಕ್ಕುತ್ತಿದ್ದುವು.

ಆ ಸಮಯದಲ್ಲಿ ಚಂದ್ರಯ್ಯಗೌಡರು ಬಹುಶಃ ಧರ್ಮಸ್ಥಳದಲ್ಲಿ ತುಲಾಭಾರ ತೂಗಿಸಿಕೊಳ್ಳುತ್ತಿದ್ದರೋ ಏನೊ?

ಸುಬ್ಬಮ್ಮ ನೆಟ್ಟಗೆ ನೆಲ್ಲುಹಳ್ಳಿಗೆ ಹೋಗಬೇಕೆಂದು ಮನಸ್ಸು ಮಾಡಿದ್ದಳು. ಆದರೆ ಬೈಗಾಗಿದ್ದುದರಿಂದಲೂ, ಸೇರೆಗಾರರೆಲ್ಲಿಯಾದರೂ ಬಂದು ಬಿಟ್ಟರೆ ತನಗೆ ರಕ್ಷಣೆ ಸಿಕ್ಕದೆ ಹೋಗಿಬಿಡಬಹುದೆಂಬ ಭೀತಿಯಿಂದಲೂ, ನಾಗಮ್ಮನವರನ್ನು ನೋಡದೆ ಬಹಳ ದಿನಗಳಾಗಿದ್ದುದರಿಂದಲೂ, ಹಾಗೆಯೆ ಹೂವಯ್ಯನನ್ನೂ ನೋಡಿದಂತಾಗುತ್ತದೆ ಎಂಬಾಸೆಯಿಂದಲೂ, ಪೊದೆಗಳ ನಡುವೆ ಅವಿತಿದ್ದ ಪುಟ್ಟನಿಂದ 'ವಡವೆವಸ್ತು'ಗಳನ್ನು ತೆಗೆದುಕೊಂಡು ಕೆಳಕಾನೂರಿಗೆ ಹೋದಳು.

ನಾಗಮ್ಮನವರು ಎಲೆಯಡಕೆ ಬುಟ್ಟಿಯನ್ನು ಎದುರಿಗಿಟ್ಟುಕೊಂಡು ವೀಳ್ಯ ಹಾಕಿಕೊಳ್ಳುತ್ತ ಹೊನಗೊನೆಸೊಪ್ಪನ್ನು ಸೋಸುತ್ತಿದ್ದ ಬೇಲರ ಸೇಸಿಯೊಡನೆ ಮಾತಾಡುತ್ತ ಕುಳಿತಿದ್ದರು. ನಂಟರಾಗಿ ಬಂದ ತಾಯಿ ಮಗಳಿಬ್ಬರನ್ನೂ ಆದರದಿಂದ ಬರಮಾಡಿಕೊಂಡು, ಕಾಲು ತೊಳೆಯಲು ನೀರು ಕೊಟ್ಟು, ಚಾಪೆ ಹಾಕಿ ಕುಳಿತುಕೊಳ್ಳಲು ಹೇಳಿ, ಹರಿವಾಣದಲ್ಲಿ ಎಲೆಯಡಕೆಯನ್ನು ತಂದು ಮುಂದಿಟ್ಟರು.

ಅದು ಇದು ಮಾತಾಡುತ್ತ ಸುಬ್ಬಮ್ಮ ಆ ದಿನ ನಡೆದ ಕಥೆಯೆಲ್ಲವನ್ನೂ ಹೇಳತೊಡಗಿದಳು. ನಡುನಡುವೆ ಕಣ್ಣೀರು ಮಿಡಿಯುತ್ತ ಗೋಳಾಡಿಕೊಂಡಳು.

ಚೆನ್ನಾಗಿ ಕತ್ತಲೆಯಾದಮೇಲೆ ಹೂವಯ್ಯ ಪುಟ್ಟಣ್ಣರು, ಮೈಯೆಲ್ಲ ಮಣ್ಣಾಗಿ, ಗದ್ದೆಯಿಂದ ಮನೆಗೆ ಬಂದರು. ಬಿಸಿನೀರಿನಲ್ಲಿ ಸ್ನಾನಮಾಡಿ, ಬಟ್ಟೆಬದಲಾಯಿಸಿಕೊಂಡು, ಜಗಲಿಗೆ ಬಂದಮೇಲೆ ನಾಗಮ್ಮನವರು ಮಗನಿಗೆ ಸುಬ್ಬಮ್ಮ ಮತ್ತು ಅವಳ ತಾಯಿ ಬಂದಿರುವುದನ್ನೂ, ಸುಬ್ಬಮ್ಮನಿಂದ ತಾವು ಕೇಳಿದ್ದ ವಿಷಯಗಳನ್ನೂ ಸಂಕ್ಷೇಪವಾಗಿ ಹೇಳಿದರು. ಹೂವಯ್ಯ ಉತ್ಸಾಹವನ್ನಾಗಲಿ ಉದಾಸೀನವನ್ನಾಗಲಿ ತೋರಿಸದೆ ಸುಮ್ಮನೆ ಆಲಿಸಿದನು. ಇತ್ತೀಚೆಗೆ ಅವನು ಹೆಚ್ಚುಹೆಚ್ಚು ಮೌನಿಯಾಗತೊಡಗಿದ್ದನು.

"ಸೀತೆಮನೆಯಿಂದ ಸೋಮ ಬಂದನೇನು ?" ಎಂದು ಕನ್ನಡಿಯ ಕಡೆಗೆ ನೋಡುತ್ತ ಕ್ರಾಪು ಬಾಚಿಕೊಳ್ಳುತ್ತ ಕೇಳಿದನು.

"ಇಲ್ಲ. ಇನ್ನೂ ಬರಲಿಲ್ಲ. ಆಗಲೇ ಹೋದವನು ಇಷ್ಟು ಹೊತ್ತಿಗೆ ಬರಬೇಕಾಗಿತ್ತಪ್ಪಾ."

"ಆ್ಞ! ಏನಂದೆ ?"

ತಾಯಿಯ ಉತ್ತರ ಹೂವಯ್ಯನಿಗೆ ಕೇಳಿಸಲಿಲ್ಲ. 'ಸೀತೆಮನೆಯಿಂದ ಸೋಮ ಬಂದನೇನು ?' ಎಂದು ಕೇಳಿದೊಡನೆಯೆ ಅವನ ಮನಸ್ಸು ಮಿಂಚಿನ ವೇಗದಿಂದ ಸೀತೆಯ ವಿಷಯಕವಾದ ಅನೇಕ ಚಿತ್ರಗಳನ್ನೂ ಭಾವಗಳನ್ನೂ ನೆನೆಯತೊಡಗಿದ್ದಿತು.

ತಾಯಿ ಅದನ್ನೆ ಮತ್ತೆ ಹೇಳಿದಳು.

"ಇಷ್ಟು ಹೊತ್ತು ಏನು ಮಾಡ್ತಾನೆ ಅಲ್ಲಿ?" ಎಂದು ಹೂವಯ್ಯ ತನ್ನ ಕೊಟಡಿಗೆ ಹೋಗಿ ಬಾಗಿಲು ಹಾಕಿಕೊಂಡನು.

ನಾಗಮ್ಮನವರು ಪುಟ್ಟಣ್ಣನನ್ನು ಕುರಿತು "ನೀನಾದರೂ ಹೋಗಬಾರದಿತ್ತೇನೊ?" ಎಂದರು.

"ಅವನೇ ನಾನು ಮುಂದೆ ತಾನು ಮುಂದೆ ಅಂತಾ ದುಂಬಾಲು ಬಿದ್ದು ಕಾಗದ ಈಸಿಕೊಂಡು ಹೋಗ್ಯಾನೆ?"

ನಾಗಮ್ಮನವರು ಇದ್ದಕ್ಕಿದ್ದಹಾಗೆ ವಿಷಯವನ್ನು ಸಂಪೂರ್ಣವಾಗಿ ಬದಲಾಯಿಸಿ "ಏನು ಪುಟ್ಟಣ್ಣಾ, ನಿನ್ನ ಗೌಡರು ಮದುವೆಯಾಗೋದಿಲ್ಲಂತೇನು?" ಎಂದು ಕೇಳಿದರು.

ಪುಟ್ಟಣ್ಣ ಮುಗುಳುನಗುತ್ತ "ನನ್ನ ಹತ್ತಿರ ಕೇಳಿದರೆ! ಅವರನ್ನೇ ಕೇಳಿ!" ಎಂದನು.

ನಾಗಮ್ಮನವರು ಮರುಮಾತಾಡದೆ ನಿಡುಸುಯ್ಯುತ್ತ ಅಡುಗೆಮನೆಯ ಕಡೆಗೆ ಹೋದರು. ಅವರ ಹೃದಯ 'ಮಗ ಮದುವೆಮಾಡಿಕೊಳ್ಳದೆ ಹೀಗಾಗುತ್ತಿದ್ದಾನಲ್ಲಾ' ಎಂದು ಕಾತರವಾಗಿತ್ತು.

ಹೂವಯ್ಯ ಮೇಲೆಮೇಲೆ ಶಾಂತನೂ ಮೌನಿಯೂ ಆಗುತ್ತ ಬಂದಹಾಗೆಲ್ಲ, ಒಳಗೊಳಗೆ ಕುದಿಯೂ ಉರಿಯೂ ಹೆಚ್ಚಾಗುತ್ತಿತ್ತು. ಮೊದಮೊದಲು ಸೀತೆ ಕೈಬಿಟ್ಟುಹೋದ ಹತಾಶೆಯನ್ನು ಲಘುವಾಗಿ, ತಾತ್ತ್ವಿಕವಾಗಿ, ಸಂಯಮಿ ತಾನೆಂಬ ಹೆಮ್ಮೆಯಿಂದ ಉದಾಸೀನಗೈಯಲು ಪ್ರಯತ್ನಿಸಿದ್ದರೂ ಬರುಬರುತ್ತಾ ಅದು ಎದೆಯನ್ನು ಕೊರೆಯಲಾರಂಭಿಸಿದ್ದಿತು. ಆದ್ದರಿಂದಲೆ ಅವನು ಯಾರೊಡನೆಯೂ ಹೆಚ್ಚು ಮಾತಾಡದೆ ಸಮಯ ಸಿಕ್ಕಿದಾಗಲೆಲ್ಲ ಏಕಾಂಗಿಯಾಗಿ ಎಲ್ಲಿಯಾದರಲ್ಲಿ ಕುಳಿತು ತನ್ನನ್ನು ಹೇಗಾದರೂ ಈ ಬೇಗೆಯಿಂದ ಪಾರುಮಾಡಬೇಕೆಂದು ಈಶ್ವರನಿಗೆ ಮೊರೆಯಿಡುತ್ತಿದ್ದನು. ಕೆಲವು ಸಾರಿ ಬನಬೆಟ್ಟಗಳ ರಮಣೀಯ ಪ್ರಕೃತಿ ಸಾನ್ನಿಧ್ಯದಲ್ಲಿ, ಬಣ್ಣ ಬಣ್ಣದ ಹೂವು ಹಕ್ಕಿಗಳ ಸೊಂಪಿನಿಂಪಿನ ಸನ್ನಿವೇಶದಲ್ಲಿ, ರಾತ್ರಿಯ ಗಭೀರಧ್ಯಾನಮಯ ಜಗತ್ತಿನಲ್ಲಿ, ಅವನ ಮನಸ್ಸು ಇದ್ದಕ್ಕಿದ್ದಂತೆ ಪ್ರಶಾಂತವಾಗಿ, ಅವನಿಗೆ ಯಾವುದೋ ಒಂದು ಅನಿರ್ವಚನೀಯವಾದ ಮಧುರ ಸುಖಾನುಭವವಾಗುತ್ತಿತ್ತು. ಆದರೆ ಆ ಸುಖ ಶಾಶ್ವತವಾಗಿರುತ್ತಿರಲಿಲ್ಲ. ಹಾರುವ ಹಕ್ಕಿ ಮೇವು ತಿನ್ನಲು ನೆಲಕ್ಕಿಳಿದೊಡನೆಯೆ ಇರುವೆಗಳು ಮುತ್ತಿ ಕೋಟಲೆಗೆಯ್ಯುತ್ತಿದ್ದುವು. ಆ ಕೋಟಲೆಯಿಂದ ತಪ್ಪಿಸಿಕೊಳ್ಳಲೆಂದು ಅವನು ಬೇಸಾಯದ ಕೆಲಸದಲ್ಲಿ ಹೆಚ್ಚುಹೆಚ್ಚಾಗಿ ಆಸಕ್ತಿ ತೆಗೆದುಕೊಳ್ಳ

ಹತ್ತಿದನು. ಗದ್ದೆ ತೋಟಗಳಲ್ಲಿ ಮೈ ಬಗ್ಗಿ ದಣಿದು ದುಡಿಯುತ್ತಿದ್ದಾಗ ಮನಸ್ಸು ಚಿಂತೆಯ ಪೀಡೆಯಿಂದ ಪಾರಾಗುತ್ತಿತ್ತು. ಅಲ್ಲದೆ ಚೆನ್ನಾಗಿ ಕೆಲಸ ಮಾಡಿ ಆಯಾಸಗೊಂಡು ಮನೆಗೆ ಬಂದರೆ ಸ್ವಲ್ಪ ನೆಮ್ಮದಿಯಾಗುತ್ತಿತ್ತು. ಹಾಗೆಯೆ ಕಾವ್ಯಗಳನ್ನೂ ತತ್ವಗ್ರಂಥಗಳನ್ನೂ ಜೀವನ ಚರಿತ್ರೆಗಳನ್ನೂ ಓದು ತ್ತಿದ್ದಾಗ ಮನಸ್ಸು ಉನ್ನತಾವಸ್ಥೆಗೇರುತಿದ್ದುದರಿಂದಲೂ, ಮಹಾಪುರುಷರ ಸಂಗಸಂಪರ್ಕದಿಂದ ಆತ್ಮ ಆಕಾಶಗಾಮಿಯಾಗುತ್ತಿದ್ದುದರಿಂದಲೂ, ಅದರ ಲ್ಲಿಯೂ ಬಹಳಕಾಲ ಕಳೆಯುತ್ತಿದ್ದನು. ಒಂದೊಂದು ಸಾರಿ ರಾತ್ರಿ ಎರಡು ಅಥವಾ ಮೂರು ಗಂಟೆಯವರೆಗೂ ಅವನ ಕೊಠಡಿಯಲ್ಲಿ ದೀಪವುರಿಯು ತ್ತಿತ್ತು.

ಚೆನ್ನಾಗಿ ಕತ್ತಲೆಯಾಗಿ ಒಂದು ಗಂಟೆಯ ಮೇಲಾಗಿತ್ತು. ಸೋಮನ ಧ್ವನಿಯನ್ನು ಆಲಿಸಿದ ಹೂವಯ್ಯ, ಓದುತ್ತಿದ್ದ ಹೊತ್ತಗೆಯನ್ನು ಗುರುತು ಕಾಗದ ಹಾಕಿ ಮುಚ್ಚಿಟ್ಟು, ಹೊರಗೆ ಜಗಲಿಗೆ ಬಂದನು.

ಕೂದಲು ಕೆದರಿ, ಬಟ್ಟೆ ಹರಿದು, ನೆತ್ತರುಕಲೆಯಾಗಿ, ನಡುಗುತ್ತ ನಿಂತಿದ್ದ ದುಃಸ್ಥಿತಿಯ ಸೋಮನನ್ನು ಕಂಡು ಬೆರಗಾಗಿ "ಏನೋ ಇದು? ಏನಾಯ್ತೊ?" ಎಂದು ಹತ್ತಿರಕ್ಕೋಡಿದನು.

ಸೋಮ ಮಾತಾಡಲಾರದೆ ಅಡ್ಡಬಿದ್ದು ಹೂವಯ್ಯನ ಕಾಲುಹಿಡಿದುಕೊಂಡು ಬಸ ಬಸ ಬಸನೆ ಅಳತೊಡಗಿದನು. ಅವನನ್ನು ಮಾತನಾಡಿಸಬೇಕಾದರೆ ಬಹಳ ಶ್ರಮವಾಯ್ತು.

ಸೋಮ ಏನನ್ನೂ ಮುಚ್ಚುಮರೆಮಾಡದೆ, ಎಲ್ಲವನ್ನೂ ಅಳುತ್ತಳುತ್ತಲೆ ಹೇಳಿದನು. ತಾನು ಹಿಂತಿರುಗಿ ಮನೆಗೆ ಬರುತ್ತಿದ್ದಾಗ ದಾರಿಯಲ್ಲಿ ಜೇಬಿಗೆ ಕೈಹಾಕಿ ನೋಡಿಕೊಳ್ಳಲು 'ಲೋಟಿನ ಕಟ್ಟು' ಮಾಯವಾಗಿದ್ದುದು ಗೊತ್ತಾಗಿ, ಮತ್ತೆ 'ಕೋಳಿಯಂಕದ ಪಟ್ಟೆ'ಗೆ ಹೋಗಿ ಕಳ್ಳಂಗಡಿಯವನನ್ನೂ ತಿಮ್ಮನನ್ನೂ 'ಲೋಟಿನ ಕಟ್ಟು' ಕೊಡುವಂತೆ ಜೋರುಮಾಡಿ ಕೇಳಿದನಂತೆ! ಅವರು ಲೋಟಿನ ಕಟ್ಟಿಗೆ ಬದಲಾಗಿ ಮೈಮುರಿಯುವಂತೆ ಚೆನ್ನಾಗಿ ಕಟ್ಟಿಗೆಯಿಂದ ಪೆಟ್ಟುಕೊಟ್ಟು, ಕಳುಹಿಸಿದ್ದರಂತೆ!

ಸೋಮ ಆ ಹಣವನ್ನು ತಾನು ದುಡಿದು ತೀರಿಸುವುದಾಗಿ ಮತ್ತೆ ಮತ್ತೆ ಹೂವಯ್ಯನ ಕಾಲುಮುಟ್ಟಿ ಕೇಳಿಕೊಂಡನು.

ಹೂವಯ್ಯ ಏನನ್ನೂ ನುಡಿಯಲಾರದೆ, ಸೋಮನ ಗಾಯಗಳಿಗೆ ಔಷಧಿ ಹಚ್ಚಿ, ಯೋಗಕ್ಷೇಮವನ್ನು ನೋಡಿಕೋ ಎಂಬಂತೆ ಪುಟ್ಟಣ್ಣನ ಕಡೆಗೆ ನೋಡಿ ತನ್ನ ಕೊಟಡಿಗೆ ಹೋದನು.

೬೫

## ಕುಡಿದಿದ್ದ ಸೇರೆಗಾರರಿಂದ ಪುಟ್ಟನ ಖೂನಿ ?

ಇರುಳು ಚೆನ್ನಾಗಿ ಹೊಯ್ದಿದ್ದ ಮಳೆಯಲ್ಲಿ ತೊಯ್ದು ಒದ್ದೆಯಾಗಿದ್ದ ಹಸುರಾದ ಮಲೆಗಾಡುಗಳ ಮೇಲೆಯೂ ಹಚ್ಚನೆಯ ಗದ್ದೆಬಯಲುಗಳ ಮೇಲೆಯೂ ಬೆಳಗಾಯಿತು. ಹಾಸಗೆಯಮೇಲೆ ಕುಳಿತು ಕೊಟಡಿಯ ಕಿಟಕಿಯಿಂದ ಹೊರಗೆ ನೋಡುತ್ತಿದ್ದ ಹೂವಯ್ಯನ ಹೃದಯಕ್ಕೆ ಗಿರಿನೆತ್ತಿಯ ದಿಗಂತದೆಡೆ ಹೊಗರೇರುತ್ತಿದ್ದ ಶೀತಲವಾದ ಅರುಣಕಾಂತಿ ಅನಂತಾಕಾಶದ ಪ್ರೇಮದಾಹ್ವಾನದಂತೆ ಮಧುರವಾಗಿ ಶೋಭಿಸಿತು. ಹತ್ತಿರದ ಕಾಡಿನಿಂದ ಕಾಜಾಣದ ವೀಣಾಗಾನ ಮಡಿವಾಳ ಹಕ್ಕಿಯ ಸಿಳ್ಳಿನಾಲಾಪನೆಯೊಡನೆ ಕೇಳಿಬರುತ್ತಿತ್ತು. ಮನೆಯ ಸುತ್ತಲೂ ಪೊದೆ ಗಿಡಮರಗಳಲ್ಲಿ ಪಿಕಳಾರ ಹಕ್ಕಿಗಳು ಸ್ವರಮೇಳ ಕೈಕೊಂಡಿದ್ದುವು. ಪ್ರಾತಃಕಾಲದ ಪ್ರಶಾಂತತೆಯಲ್ಲಿ ನಾಯಿಯೊಂದು ತೀಕ್ಷ್ಣವಾಗಿ ಬೊಗಳುತ್ತಿತ್ತು.

ಯಾರೋ ಬಾಗಿಲು ತಟ್ಟಿದರು. ಹೂವಯ್ಯನೆದ್ದು ಬಾಗಿಲು ತೆರೆದನು. ಸುಬ್ಬಮ್ಮ ತವರೂರಿಗೆ ಹೊರಡಲು ಸಿದ್ಧಳಾಗಿ ನಿಂತಿದ್ದವಳು ಒಳಗೆ ಬಂದು ತನ್ನ ಕೈಯಲ್ಲಿದ್ದ ಗಂಟೊಂದನ್ನು ಕೊಟ್ಟು, ಇಟ್ಟುಕೊಂಡಿರುವಂತೆ ಹೇಳಿದಳು.

ಹೂವಯ್ಯ "ಏನದು ?" ಎಂದನು.

ಸುಬ್ಬಮ್ಮ ತಾನು ಕಾನೂರಿನಿಂದ ತೆಗೆದುಕೊಂಡು ಬಂದ ತನ್ನೊಡವೆಗಳೆಂದು ಹೇಳಿದಳು.

"ನನ್ನ ಹತ್ತಿರ ಯಾಕೆ ?"

ಸುಬ್ಬಮ್ಮ ತನ್ನ ತವರುಮನೆ ಒಡವೆಗಳಿಗೆ ಸುರಕ್ಷಿತವಾದ ಸ್ಥಳವಲ್ಲವೆಂದು ಹೇಳುವ ಬದಲು "ಯಾಕೂ ಇಲ್ಲ. ಇಲ್ಲೇ ಇರಲಿ !" ಎಂದು, ಮುಂದೆ ಹೂವಯ್ಯನಿಗೆ ಮಾತಾಡಲು ಅವಕಾಶಕೊಡದೆ "ನಾ ಹೋಗಿ ಬತ್ತೀನಿ !" ಎಂದಳು. ಅವಳ ಕಣ್ಣಿನಲ್ಲಿ ನೀರಾಡುತ್ತಿತ್ತು. ಕಂಠ ಗದ್ಗದವಾಗುವುದರಲ್ಲಿತ್ತು.

ಹೂವಯ್ಯನ ಹೃದಯದಲ್ಲಿಯೂ ಸ್ವಲ್ಪ ಉದ್ವೇಗ ಸಂಚಾರವಾದಂತಾಗಿ "ಹ್ಞು, ಆಗಲಿ ; ಹೋಗಿ ಬನ್ನಿ." ಎಂದು ಆಭರಣದ ಗಂಟನ್ನು ಪೆಟ್ಟಿಗೆಯಲ್ಲಿಡಲೆಂದು ಸರಿದನು.

ಸುಬ್ಬಮ್ಮ ಬಿರುಬಿರನೆ ಹೊರಗೆ ನಡೆದು ತನ್ನ ತಾಯಿಯೊಡಗೂಡಿ ನೆಲ್ಲುಹಳ್ಳಿಯ ಕಡೆಗೆ ಹೊರಟಳು. ಆಕೆಯಲ್ಲಿ ಸ್ವಾತಂತ್ರ್ಯ ಧೈರ್ಯ ಸಾಹಸಗಳು ಹೊಸದಾಗಿ ಹೊಮ್ಮುತ್ತಿರುವಂತೆ ತೋರಿತು ಹೂವಯ್ಯನಿಗೆ.

ಅವನಿಗೆ ಆಕೆಯಲ್ಲಿ ತೋರಿದ ಮತ್ತೊಂದು ವಿಶೇಷವೆಂದರೆ — ಆಕೆಯ ಸೌಂದರ್ಯ ! ಆಕೆಯ ಮೈಕಟ್ಟು ಮೊದಲಿದ್ದಂತೆಯೆ ಬಲಶಾಲಿಯಾಗಿತ್ತು. ಆದರೆ ಮುಖದಲ್ಲಿ ಮೊದಲು ಇರದಿದ್ದ ಒಂದು ಚೆಲುವು ವಿಕಸಿತವಾಗಿದ್ದಂತೆ ತೋರಿತು. ಹಾಸಗೆಯಮೇಲೆ ಕುಳಿತು ಯೋಚಿಸುತ್ತಿದ್ದ ಹೂವಯ್ಯ ತನ್ನ ಮನಸ್ಸಿನಲ್ಲಿ ಸುಳಿದ ಒಂದು ಅಶ್ಲೀಲ ಭಾವನೆಗಾಗಿ ಬಹಳ ನಾಚಿಗೆಪಟ್ಟುಕೊಂಡು "ಇಸ್ಸಿ ! ಏನು ಮನಸ್ಸು !" ಎಂದು ಬಾಯಲ್ಲಿ ಹೇಳುತ್ತ ಸರಕ್ಕನೆ ಮೇಲೆದ್ದು ಹಾಸಗೆಯನ್ನು ಸುತ್ತಿಟ್ಟು ಬಚ್ಚಲಿಗೆ ಹೋದನು.

ಅಂತಹ ಅಶ್ಲೀಲವಾದ ಆಲೋಚನೆ ಅದೇ ಮೊದಲನೆಯದಾಗಿರಲಿಲ್ಲ. ಅನೇಕಸಾರಿ ಆಗಾಗ್ಗೆ ಉದಾತ್ತ ಆಲೋಚನೆಗಳ ಮಧ್ಯೆ ದುರ್ಭಾವನೆಗಳೂ ನುಸುಳಿ ಬರುತ್ತಿದ್ದುವು. ಹೂವಯ್ಯ ಧ್ಯಾನದ ನಡುವೆ ತಟಕ್ಕನೆ ಎಚ್ಚತ್ತು ಕೊಂಡು, ಅವುಗಳನ್ನು ಕಳ್ಳರನ್ನು ಹಿಡಿಯುವಂತೆ ಹಿಡಿದು ಹೊರಗೆ ದಬ್ಬು ತ್ತಿದ್ದನು. ಆದರೆ ಈ ಸಾರಿಯ ಅಶ್ಲೀಲ ಭಾವನೆ ಹೊರಗೆ ದಬ್ಬಿದಂತೆಲ್ಲ ಮತ್ತೆ ಮತ್ತೆ ಒಳಗೆ ನುಗ್ಗುತ್ತಿದ್ದಿತು. ಹೊರನೂಕಲು ಹೆಚ್ಚಾಗಿ ಪ್ರಯತ್ನಪಟ್ಟಷ್ಟೂ ಹೆಚ್ಚಾಗಿ ಒಳಗೆ ನುಗ್ಗಿ ಹೂವಯ್ಯನನ್ನು ಅಣಕಿಸತೊಡಗಿತು. 'ನುಗ್ಗಿದರೆ ನುಗ್ಗು' ಎಂದು ಉದಾಸೀನನಾದ ಮೇಲೆಯೆ ಅದರಿಂದ ಪಾರಾಗಲು ಸಾಧ್ಯವಾಯಿತು.

ಕಾಫಿ ತಿಂಡಿ ಪೂರೈಸಿಕೊಂಡು, ಮೂಲೆಯಲ್ಲಿ ಕಂಬಳಿ ಹೊದೆದು ಮಲಗಿದ್ದ ಸೋಮನ ಯೋಗಕ್ಷೇಮವನ್ನು ವಿಚಾರಿಸಿ, ಹೂವಯ್ಯ ಪುಟ್ಟಣ್ಣನನ್ನು ಕರೆದು ಗದ್ದೆಗೆ ಹೋಗಲು ಹವಣಿಸುತ್ತಿದ್ದಾಗ ಕಾನೂರಿನ ಬೇಲರ ಕೇರಿಯಿಂದ ಬೈರ ಏದುತ್ತಾ ಓಡಿಬಂದು "ರಾತ್ರಿ ಸೇರೆಗಾರರು ಗಾಡಿನಿಂಗಯ್ಯನ ಮಗ ಪುಟ್ಟಯ್ಯ ನನ್ನು ಹೊಡೆದು ಕೊಂದುಹಾಕಿದ್ದಾರೆ!" ಎಂಬ ವರ್ತಮಾನವನ್ನು ಗಡಿಬಿಡಿ ಯಿಂದ ಹೆದರಿ ಬೆದರಿ ತೊದಲು ತೊದಲಾಗಿ, ಹದಿನೈದು ನಿಮಿಷ ಹೇಳಿದನು. ಕೇಳಿದವರಿಗೆ ಎದೆಗೆ ಸಿಡಿಲು ಬಡಿದಂತಾಯಿತು !

ಸೀತೆಮನೆಗೂ ಮುತ್ತಳ್ಳಿಗೂ ಹೋಗಿ ಸಿಂಗಪ್ಪಗೌಡರಿಗೂ ಚಿನ್ನಯ್ಯನಿಗೂ ವರ್ತಮಾನ ತಿಳಿಸಿ, ಅವರಿಬ್ಬರನ್ನೂ ಜಾಗ್ರತೆಯಾಗಿ ಕರೆದುಕೊಂಡು ಕಾನೂರಿಗೆ ಬರುವಂತೆ ಹೇಳಿ ಬೈರನನ್ನು ಕಳಿಸಿ, ಹೂವಯ್ಯ ಪುಟ್ಟಣ್ಣನೊಡನೆ ಒಡನೆಯೆ ಬಂದೂಕು ಸಮೇತನಾಗಿ ಕಾನೂರಿಗೆ ನಡೆದನು.

ಕಾನೂರಿಗೆ ಹೋಗಿ ವಿಚಾರಿಸಿದಾಗ ಗಂಗೆಯಾಗಲಿ ಸೇರೆಗಾರರಾಗಲಿ ಮೊದಲು ತಲೆತೋರಿಸಲಿಲ್ಲ. ಗಟ್ಟಿಯಾಗಿ ಕರೆಯುತ್ತ ಹುಡುಕತೊಡಗಲು ಏನೂ ಅರಿಯದವರಂತೆ ಒಬ್ಬೊಬ್ಬರು ಒಂದೊಂದು ಕಡೆಯಿಂದ ಬಂದರು. ಪುಟ್ಟನೆಲ್ಲಿ ಎಂದು ಕೇಳಿದಾಗ, ಬೆಳಗ್ಗೆ ಗಂಜಿಯುಂಡುಕೊಂಡು ಏಡಿ ಹಿಡಿಯಲು ಹಳ್ಳಕ್ಕೆ

ಹೋದನೆಂದು ಹೇಳಿದರು. ಆಳುಗಳನ್ನು ಅಟ್ಟಿ ಎಷ್ಟು ಹುಡುಕಿಸಿದರೂ ಸಿಕ್ಕ ಲಿಲ್ಲ. ಎಷ್ಟು ಕರೆದರೂ ಓಕೊಳ್ಳಲಿಲ್ಲ. ಕಡೆಗೆ ಪುಟ್ಟಣ್ಣನೂ ಹೂವಯ್ಯನೂ ಸೇರಿ ಮನೆಯನ್ನೆಲ್ಲ ಹುಡುಕಿದರು. ಪ್ರಯೋಜನವಾಗಲಿಲ್ಲ.

ಹೂವಯ್ಯ ಬೆಂಕಿಬೆಂಕಿಯಾಗಿ ಸೇರೆಗಾರರನ್ನು ಕುರಿತು "ಒಳ್ಳೆಯ ಮಾತಿಗೆ ಹೇಳುತ್ತೀರೊ? ಅಥವಾ ತೀರ್ಥಹಳ್ಳಿಯಿಂದ ಪೋಲೀಸು ಕರೆಸಬೇಕೊ?" ಎಂದು ಗದರಿಸಿದನು.

ಸೇರೆಗಾರರು ಕೊರಮಬುದ್ಧಿಯಿಂದ "ಬೇಕಾದರೆ ಕರೆಸಬೇಕಪ್ಪಾ! ನನಗೆ ಗೊತ್ತಾಗುವುದಾದರೂ ಹ್ಯಾಂಗೆ?" ಎಂದು ಮಲೆತು ಮಾತಾಡಿದರು.

ಗಂಗೆಯನ್ನೂ ಹತ್ತಿರಕ್ಕೆ ಕರೆದು ಕೇಳಿದನು. ಅವಳು ನಡುಕು ತುಟಿಯಿಂದ ಅಸಂಬದ್ಧವಾಗಿ ಮಾತಾಡಿದಳು.

ಸ್ವಲ್ಪ ಜೋರು ಮಾಡಿದರೆ ಸತ್ಯ ಹೊರಬೀಳುತ್ತದೆಂದು ತಿಳಿದು ಒಂದು ಬೆತ್ತವನ್ನು ತೆಗೆದುಕೊಂಡು "ಹೇಳುತ್ತೀಯೊ ಇಲ್ಲವೊ?" ಎಂದು ಒಂದು ಬಿಗಿತ ಬಿಗಿದನು.

ಸೇರೆಗಾರರು "ಏನ್ರೀ ನೀವು ಕಂಡವರ ಹೆಂಡಿರನ್ನು ಹೊಡೆಯುವುದು?" ಎನ್ನುತ್ತಾ ಮೇಲ್ವಾಯುತ್ತಿರಲು, ಅವರ ಹಲ್ಲುಬ್ಬು ಮೋರೆಗೆ ಒಂದು ಬಲವಾದ ಪೆಟ್ಟುಕೊಟ್ಟನು.

ಅಷ್ಟರಲ್ಲಿಯೆ ಪುಟ್ಟಣ್ಣ ಅವರನ್ನು ಹಿಡಿದು ದೂರಕ್ಕೆ ದಬ್ಬಿದನು. ಗಂಗೆ ಮತ್ತೊಂದು ಬಿಗಿತ ಬೀಳಬೇಕಾದರೆ ಮೊದಲು ಎಲ್ಲವನ್ನೂ ಒದರಿಬಿಟ್ಟಳು:

"ಸೇರೆಗಾರರು ಪುಟ್ಟನನ್ನು ಹೊಡೆದು ಆ ಕೋಣೆಗೆ ಹಾಕಿ ಬೀಗಹಾಕಿದ್ದಾರೆ!"

ಸೇರೆಗಾರರಿಂದ ಬಲಾತ್ಕಾರವಾಗಿ ಕೋಣೆಯ ಬೀಗವನ್ನು ಕಸಿದುಕೊಂಡು ಬೀಗ ತೆಗೆದು, ಕಂಬಳಿಯಲ್ಲಿ ಸುತ್ತಿದ್ದ ಪುಟ್ಟನ ಕಳೇಬರವನ್ನು ಬಯಲಿಗೆ ತಂದರು.

ಆದರೆ ಪುಟ್ಟನಿಗೆ ಪ್ರಾಣಹೋಗಿರಲಿಲ್ಲ!

ಪೆಟ್ಟು ಬಿದ್ದು ಮೂರ್ಛೆಹೋಗಿದ್ದ ಅವನನ್ನು ಸೇರೆಗಾರರು ಆ ಇರುಳಿನಲ್ಲಿ ಗಡಿಬಿಡಿಯಲ್ಲಿ ಕುಡಿದು ತಲೆಗೇರಿದ್ದ ಮತ್ತಿನಲ್ಲಿ ಸತ್ತನೆಂದೇ ಭಾವಿಸಿ, ತರುವಾಯ ಗೋಪ್ಯವಾಗಿ ಹೂಳಲೆಂದು ಕಂಬಳಿಯಲ್ಲಿ ಸುತ್ತಿ ಕೋಣೆಗೆ ಹಾಕಿದರು. ರಾತ್ರಿ ಕಾನೂರಿನ ಒಡ್ಡಿಯಿಂದ ಕೋಳಿಗಳನ್ನು ಕದಿಯಲು ಬಂದಿದ್ದ ಬೇಲರ ಬೈರ ಹೊರಗೆ ನಿಂತು ಕಿಟಕಿಯಲ್ಲಿ ಎಲ್ಲವನ್ನೂ ನೋಡಿ ಪುಟ್ಟ ಸತ್ತನೆಂದೇ ಭಾವಿಸಿ, ವರದಿ ಹೇಳಿದ್ದನು.

ಗೊತ್ತಿದ್ದ ಮಟ್ಟಿಗೆ ಚಿಕಿತ್ಸೆ ಮಾಡಿದಮೇಲೆ ಪುಟ್ಟ ಸ್ವಲ್ಪ ಚೇತರಿಸಿಕೊಂಡನು. ಆದರೂ ಡೊಳ್ಳುಹೊಟ್ಟೆಯ ಬಡಕಲು ದೇಹದ ಆ ಹುಡುಗ ಮಾತಾಡಲಾರದೆ

ಕಣ್ಣುಗಳನ್ನು ಮಿಳ್ಮಿಳನೆ ಬಿಡುತ್ತಿದ್ದನು. ಕಣ್ಣುಗಳಿಂದ ನೀರು ಧಾರೆಧಾರೆಯಾಗಿ ಸುರಿಯುತ್ತಿದ್ದುದರಿಂದ ಮಾತ್ರ ಅವನ ಒಡಲಬೇನೆ ಪ್ರಕಾಶವಾಗುತ್ತಿತ್ತು.

ಸುಮಾರು ಒಂದೂವರೆ ಎರಡು ಗಂಟೆಯ ತರುವಾಯ ಸಿಂಗಪ್ಪಗೌಡರೂ ಚಿನ್ನಯ್ಯನೂ ಗಾಬರಿಯಿಂದ ಏದುತ್ತ ಬೈರನೊಡನೆ ಬಂದರು. ಪುಟ್ಟನಿಗೆ ಪ್ರಾಣ ಹೋಗದಿದ್ದುದನ್ನು ಕಂಡಮೇಲೆಯೆ ಅವರ ದಿಗಿಲು ಒಂದಿನಿತು ಕಡಮೆಯಾದುದು.

ಚಿನ್ನಯ್ಯ "ಪುಟ್ಟನ ಪ್ರಾಣವೆಲ್ಲಿಯಾದರೂ ಹೋಗಿಬಿಟ್ಟರೆ ಖೂನಿಮಾಡಿದ ಅಪರಾಧಕ್ಕೆ ನಾವೆಲ್ಲರೂ ಹೊಣೆಯಾಗಿ ದಣೆಯಬೇಕಾಗುತ್ತದೆ; ಆದ್ದರಿಂದ ಮೊದಲೆ ಪೋಲೀಸಿಗೆ ತಿಳಿಸಿ ಹೇಳಿಕೆ ತೆಗೆದುಕೊಂಡುಬಿಟ್ಟರೆ ಲೇಸು" ಎಂದು ಸೂಚಿಸಿದನು.

ಗಂಗೆ ಸೇರೆಗಾರರಿಬ್ಬರೂ 'ಪೋಲೀಸು,' 'ಹೇಳಿಕೆ' ಮೊದಲಾದ ಮಾತುಗಳನ್ನು ಕೇಳಿದೊಡನೆಯೆ ಕಣ್ಣೀರು ಕರೆಯುತ್ತ ಸಿಂಗಪ್ಪಗೌಡರ, ಚಿನ್ನಯ್ಯನ ಮತ್ತು ಹೂವಯ್ಯನ ಕಾಲುಗಳಮೇಲೆ ಬಿದ್ದುಬಿದ್ದು "ತಮ್ಮಿಂದ ಅಪರಾಧವಾಯಿತು. ಕುಡಿದಾಗ ತಲೆ ನೆಟ್ಟಗಿರಲಿಲ್ಲ" ಎಂದು ಮೊದಲಾಗಿ ಸಬೂಬು ತಂದೊಡ್ಡಿ, 'ಪೋಲೀಸರ ಕೈಗೆ ಕೊಡುವುದು ಬೇಡ' ಎಂದು ಕೈ ಕೈ ಮುಗಿಯ ತೊಡಗಿದರು.

ಮೊದಮೊದಲು ಸಿಂಗಪ್ಪಗೌಡರು ಸೇರೆಗಾರರಮೇಲೆ ತಮಗಿದ್ದ ಜಿದ್ದಿನಿಂದ ಮನಕರಗದಿದ್ದರೂ ಕಡೆಗೆ ಹೂವಯ್ಯ ಚಿನ್ನಯ್ಯರನ್ನು ಸಮಾಧಾನಗೊಳಿಸಿ, ಪೋಲೀಸಿಗೆ ವರದಿ ಕಳುಹಿಸಲಿಲ್ಲ! ಗಂಗೆ ಸೇರೆಗಾರರಿಬ್ಬರೂ ಕಾನೂರುಮನೆಯನ್ನು ಬಿಟ್ಟು, ಅವರು ಮೊದಲು ವಾಸಿಸುತ್ತಿದ್ದ ಗಟ್ಟದವರ ಬಿಡಾರಗಳಲ್ಲಿಯೆ ವಾಸಿಸಬೇಕೆಂದು ನಿರ್ಧಾರವಾಯಿತು. ಧರ್ಮಸ್ಥಳಕ್ಕೆ ಯಾತ್ರೆ ಹೋದವರು ಹಿಂದಿರುಗುವತನಕ ಪುಟ್ಟಣ್ಣ ಕಾನೂರಿನಲ್ಲಿ ಇರಲಿ ಎಂದು ಚಿನ್ನಯ್ಯ ಸೂಚಿಸಿದನು. ಆದರೆ ಅದಕ್ಕೆ ಪುಟ್ಟಣ್ಣನೂ ಇಷ್ಟಪಡಲಿಲ್ಲ; ಹೂವಯ್ಯನೂ ಸಮ್ಮತಿಸಲಿಲ್ಲ. ಚಂದ್ರಯ್ಯಗೌಡರು ಅನ್ಯರೀತಿ ಭಾವಿಸಿಬಿಟ್ಟರೆ!— ಸದ್ಯಕ್ಕೆ ಚಿನ್ನಯ್ಯನೇ ಅಲ್ಲಿರುವುದೆಂದು ಗೊತ್ತಾಯಿತು.

ಇಷ್ಟೆಲ್ಲ ನಡೆಯುತ್ತಿದ್ದಾಗಲೆ ಕೆಳಕಾನೂರಿನಿಂದ ಸೋಮನೂ ಕುಂಟುತ್ತ ನರಳುತ್ತ ಕಂಬಳಿ ಹೊದೆದುಕೊಂಡು ನಡೆದುಬಂದು, ಹಿಂದಿನ ಸಾಯಂಕಾಲ ತನ್ನ 'ಲೋಟಿನ ಕಟ್ಟು' ಕಳುವಾದುದನ್ನೂ ತನ್ನನ್ನು ಹೊಡೆದು ಗುದ್ದಿ ನೆಲಕ್ಕೆ ಹಾಕಿ ತೀಡಿದುದನ್ನೂ ಹೇಳಿ, ಸೇರೆಗಾರರು, ಹಳೆಪೈಕದ ತಿಮ್ಮ, ಕಳ್ಳಂಗಡಿಯವನು, ಅವರಿಗೆ ನೆರವಾದ ಇನ್ನಿಬ್ಬರು ಗಟ್ಟದಾಳುಗಳು — ಇಷ್ಟು ಜನಗಳನ್ನೂ 'ಇಚಾರಣೆ' ಮಾಡಬೇಕೆಂದು ಅಳತೊಡಗಿದನು.

ಸಿಂಗಪ್ಪಗೌಡರು ಜನ ಕಳುಹಿಸಿ ಕಳ್ಳಂಗಡಿಯವನನ್ನೂ ತಿಮ್ಮನನ್ನೂ ಕರೆಸಿ, ಎಲ್ಲರನ್ನೂ 'ಇಚಾರಿಸಿದರು.' ಆದರೆ ಇತರ ಅಪರಾಧಗಳನ್ನು ಒಪ್ಪಿಕೊಂಡು ಅದಕ್ಕಾಗಿ ಸೋಮನಿಗೆ ದಂಡಕೊಡಲು ಸಮ್ಮತಿಸಿದರೂ ಯಾರೊಬ್ಬರೂ 'ಲೋಟಿನ ಕಟ್ಟು' ಕಳುವಾದುದಕ್ಕೆ ಜವಾಬುದಾರರಾಗಲೊಲ್ಲದೆ ಹೋದರು.

ಸೋಮ 'ಹಾಂಗಾದ್ರೆ ಪರ್ಮಾಣ ಮಾಡಬೇಕು!' ಎಂದು ಹಟ ಹಿಡಿದನು. ಅವರಲ್ಲಿ ಯಾರೂ ಪ್ರಮಾಣ ಮಾಡಲು ಒಪ್ಪಲಿಲ್ಲ. ಚಿನ್ನಯ್ಯ "ನೀವು ಕದಿಯದಿದ್ದರೆ ನಿಮಗೇನು ಹೆದರಿಕೆ? ಪ್ರಮಾಣ ಮಾಡೋಕೆ ಹೆದರಿದಮೇಲೆ ನೀವೇ ಕದ್ದಿರಬೇಕು" ಎಂದು ಗದರಿಸಿದಮೇಲೆ ಪ್ರಮಾಣ ಮಾಡಲು ಒಪ್ಪಿದರು.

ಚೆನ್ನಾಗಿ ಬೆಳಗಿದ ನೀಲಾಂಜನಗಳಿಗೆ ತುಪ್ಪದಲ್ಲಿ ಅದ್ದಿದ ಹತ್ತಿಯ ಬತ್ತಿಗಳನ್ನು ಹಾಕಿ, ಸೊಡರು ಹೊತ್ತಿಸಿ, ತುಳಸಿಕಟ್ಟೆಯಮೇಲೆ ಸಾಲಾಗಿಟ್ಟರು. ದೇವರಿಗೆ ಹೂಮುಡಿಸಿ, ಗಂಧ ಹಚ್ಚಿ, ಮಂಗಳಾರತಿ ಮಾಡಿದರು. ಸೇರೆಗಾರರು, ಹಳೆಪೈಕದ ತಿಮ್ಮ, ಕಳ್ಳಂಗಡಿಯವನು ಮೂವರೂ ತುಳಸಿಕಟ್ಟೆಗೆ ಬಲವಂದು ಪ್ರದಕ್ಷಿಣೆಮಾಡಿ, "ದೇವರಾಣೆಯಾಗಿಯೂ ಸೋಮನ ದುಡ್ಡನ್ನು ನಾ ಕದಿಯಲಿಲ್ಲ" ಎಂದು ಹೇಳುತ್ತ ಒಬ್ಬೊಬ್ಬರೂ ಒಂದೊಂದು ನೀಲಾಂಜನದ ದೀಪವನ್ನು ಆರಿಸಿದರು.

ಪ್ರೇಕ್ಷಕರೆಲ್ಲರೂ ಸ್ತಬ್ಧರಾಗಿ, ನಿಃಶಬ್ದರಾಗಿ, ಆ ಮಹಾಸಾಕ್ಷ್ಯವನ್ನು ಪೂಜ್ಯಬುದ್ಧಿಯಿಂದಲೂ ಭಯಗೌರವಗಳಿಂದಲೂ ನೋಡುತ್ತ ಕುಳಿತಿದ್ದರು. ಅಲ್ಲಿದ್ದ ನಾಯಿಗಳಿಗೂ ಕೂಡ ಆ ಅನುಭವ ಮುಟ್ಟಿದಂತೆ ತೋರುತ್ತಿತ್ತು. ತತ್ಕಾಲದಲ್ಲಿ ಅಲ್ಲಿ ನೆರೆದಿದ್ದವರೆಲ್ಲರೂ ಬೇರೊಂದು ಪ್ರಪಂಚದ ಬೇರೊಂದು ಶುದ್ಧ ಸಾನ್ನಿಧ್ಯದಲ್ಲಿ ಇದ್ದಂತಿದ್ದರು!

## ೭೬

## ಓಬಯ್ಯನ ಕಥೆ

ಧರ್ಮಸ್ಥಳಕ್ಕೆ ಯಾತ್ರೆ ಹೋಗಿದ್ದವರು ನಿನ್ನೆ ಮುತ್ತಳ್ಳಿಗೆ ಬಂದರಂತೆ ಎಂಬ ವಾರ್ತೆಯನ್ನು ಕೇಳಿದ ಪುಟ್ಟ ತನ್ನ ತಂದೆಯನ್ನು ನೋಡುತ್ತೇನೆಂದು ಹಿಗ್ಗಿ ಹೆಬ್ಬಾಗಿಲಾದನು. ತಾಯಿ ತೀರಿಹೋಗಿದ್ದ ಆ ಹುಡುಗನಿಗೆ ತಂದೆಯೇ ತಾಯಿಯೂ ಆದಂತಿದ್ದನು. ಅಲ್ಲದೆ ಸೇರೆಗಾರರು ರಾತ್ರಿ ಮಲಗಿ ನಿದ್ದೆಮಾಡುತ್ತಿದ್ದ ತನ್ನನ್ನು ದೊಣ್ಣೆಯಿಂದ ದನ ಹೊಡೆದಂತೆ ಹೊಡೆದಂದಿನಿಂದಲೂ ಅವನಿಗೆ

ತನ್ನ ತಂದೆಯನ್ನು ಎಂದಿಗೆ ನೋಡೇನು? ಎಂದಿಗೆ ಮುಟ್ಟಿಯೇನು? ಎಂದಿಗೆ ಮಾತಾಡಿಸಿಯೇನು? ಎಂದು ಮೊದಲಾಗಿ ಗಿರ ಹಿಡಿದಿತ್ತು. ಹೂವಯ್ಯ ಚಿನ್ನಯ್ಯ ಮೊದಲಾದವರು ಅವನ ಗಾಯಗಳಿಗೆ ಔಷಧಿಹಾಕಿ ಶುಶ್ರೂಷೆ ಮಾಡುತ್ತಿದ್ದರೂ, ಆ ಶುಶ್ರೂಷೆಯಿಂದ ದಿನೇ ದಿನೇ ಅವನು ಗುಣಮುಖ ನಾಗುತ್ತಿದ್ದರೂ ಅವನಿಗೆ ತನ್ನ ತಂದೆಯನ್ನು ನೋಡಿ, ಎಲ್ಲವನ್ನೂ ಹೇಳಿ, ಕಣ್ಣೀರು ಕರೆಯಬೇಕೆಂಬ ಹಾರೈಕೆ ಮಿಗಿಲಾಗಿತ್ತು. ಎಷ್ಟೋಸಾರಿ ತನ್ನ ತಂದೆಯನ್ನು ನೆನೆದೂ ನೆನೆದೂ ಯಾರಿಗೂ ಗೊತ್ತಾಗದಂತೆ ಮೂಲೆ ಸೇರಿ ಅಳುತ್ತಿದ್ದನು. ಆದ್ದರಿಂದ ಯಾತ್ರೆ ಹೋಗಿದ್ದವರು ಮುತ್ತಳ್ಳಿಗೆ ಬಂದರೆಂದು ವಾರ್ತೆ ಕೇಳಿ, ನಾಳೆ ಅಪ್ಪಯ್ಯ ಬರುತ್ತಾನೆ ಎಂದು ಅವನು ಹಿಗ್ಗಿ ಹಿಗ್ಗಿ ಹೆಬ್ಬಾಗಿಲಾದುದು.

ಆ ರಾತ್ರಿಯಲ್ಲಿ ಪುಟ್ಟನಿಗೆ ಏನೇನೊ ಕನಸುಗಳು. ಸರಿಯಾಗಿ ನಿದ್ದೆಯೆ ಬರಲಿಲ್ಲ. ಎಲ್ಲ ಕನಸುಗಳಿಗೂ ಅವನ ಅಪ್ಪಯ್ಯನೆ ಕೇಂದ್ರವಾದಂತಿದ್ದನು. ಒಮ್ಮೆ ಅಪ್ಪಯ್ಯ ಬಂದಂತೆಯೂ, ತಾನು ಅವನ ಬೆಚ್ಚನೆಯ ಮೈಯನ್ನು ಅಪ್ಪಿದ್ದಂತೆಯೂ, ತನಗಾದ ಮೈಗಾಯಗಳ ಕಥೆಯನ್ನು ಹೇಳುತ್ತಿದ್ದಂತೆಯೂ, ಅಪ್ಪಯ್ಯ ಕಣ್ಣೀರು ಕರೆಯುತ್ತ, ಸಮಾಧಾನ ಹೇಳುತ್ತ, ತನ್ನ ಕಣ್ಣೀರನ್ನು ಒರಸುತ್ತಿದ್ದ ಹಾಗೆಯೂ ಕನಸು! ಮತ್ತೊಮ್ಮೆ ಅಪ್ಪಯ್ಯ ಎಲ್ಲಿಗೊ ಹೋಗಿ ಬಿಟ್ಟಂತೆಯೂ, ತನ್ನೊಡನೆ ಸಿಟ್ಟುಮಾಡಿಕೊಂಡು ತನ್ನನ್ನು ಹೊಡೆದು ತಳ್ಳಿ ದಂತೆಯೂ, ಯಾವುದೋ ಹೊಳೆಯಲ್ಲಿ ಬಿದ್ದು ತೇಲಿಹೋದಂತೆಯೂ, ಏನೇನೊ ಭಯಂಕರ ದುಸ್ವಪ್ನಗಳು! ಅಂತೂ ಬೆಳಕು ಬಿಡುವ ಮೊದಲೆ ಮೇಲೆದ್ದ ಪುಟ್ಟ ಕಾನೂರಿಗೆ ಗಾಡಿ ಬರುವುದನ್ನೇ ಕಾಯತೊಡಗಿದನು.

ಅನೇಕಸಾರಿ ಗಾಡಿ ಬಂದಂತೆ ಸದ್ದು ಕೇಳಿ, ಉತ್ಕಂಠೆಯಿಂದ ನಿರೀಕ್ಷಿಸಿ ನಿರೀಕ್ಷಿಸಿ ಸೋತು ಹತಾಶನಾಗುತ್ತಿದ್ದರೂ ಕತ್ತಲಾಗುವವರೆಗೂ ಕಾಯುವುದನ್ನು ಬಿಡಲಿಲ್ಲ. ಕತ್ತಲೆಯಾದಮೇಲೆ ಹೊರಗಿರಲು ಹೆದರಿ ಮನೆಯೊಳಗೆ ಹೋಗಿ ದ್ದನು. ಮೂಲೆಯಲ್ಲಿ ಕುಳಿತು ಬಿಕ್ಕಿ ಬಿಕ್ಕಿ ಅಳುತ್ತಿದ್ದಾಗಲೆ ಗಾಡಿಯ ಸದ್ದು ಕೇಳಿಸಿತು. ಎದೆಯುಬ್ಬಿ ಬೀಳುವಂತೆ ಉಸಿರೆಳೆಯುತ್ತ, ಇತರರು ಲಾಟೀನು ತರುವ ಮೊದಲೆ, ಗಾಡಿ ನಿಲ್ಲುವ ಹೊರ ಅಂಗಳಕ್ಕೆ ಓಡಿದನು.

ಗಾಡಿ ನಿಂತಿತು. ಗಾಡಿ ಹೊಡೆಯುವವನು ಎತ್ತುಗಳನ್ನು ನೊಗದಿಂದ ಕಳಚಿದನು. ಹೊಗೆ ಹಿಡಿದ ಲಾಟೀನಿನ ಮಬ್ಬಿನಲ್ಲಿ ಏನೊಂದೂ ಯಾರೊ ಬ್ಬರೂ ಸ್ಪಷ್ಟವಾಗಿ ಕಾಣಿಸುತ್ತಿರಲಿಲ್ಲ. ಗಾಡಿಯಿಂದ ಒಬ್ಬೊಬ್ಬರಾಗಿ ಜನರು ಇಳಿದರು. ಅವರ ಮಾತಿನ ಧ್ವನಿಯಿಂದ ಚಂದ್ರಯ್ಯಗೌಡರು, ರಾಮಯ್ಯ, ವಾಸು, ಪುಟ್ಟಮ್ಮ (ಅವಳನ್ನು ಮುತ್ತಳ್ಳಿಯಿಂದ ತವರುಮನೆಗೆ ಕರೆತಂದಿದ್ದರು)

ಇವರೆಂದು ಗೊತ್ತಾಯಿತು. ಆದರೆ ಪುಟ್ಟನಿಗೆ ಚಿರಪರಿಚಿತವಾಗಿದ್ದ ನಿಂಗನ ಧ್ವನಿಯೇ ಕೇಳಿಸಲಿಲ್ಲ. ಅದಕ್ಕೆ ಬದಲಾಗಿ ಗಾಡಿ ಹೊಡೆಯುವವನ ಧ್ವನಿ ಸಂಪೂರ್ಣವಾಗಿ ಅಪರಿಚಿತವಾಗಿದೆ! ಇದೇನಿದು? ನನ್ನ ಅಪ್ಪಯ್ಯನೆಲ್ಲಿ? ಥೆ! ಗಾಡಿ ಹೊಡೆಯುವವನೇ ಅಪ್ಪಯ್ಯನಿರಬೇಕು! ಹೊಸ ನೀರು ಕುಡಿದು ಗಂಟಲು ಒಡೆದುಹೋಗಿರಬಹುದು! ಅಪ್ಪಯ್ಯನಲ್ಲದೆ ಮತ್ತೆ ಯಾರು ಬರಬೇಕು ಕಾನೂರು ಗಾಡಿ ಹೊಡೆಯುವುದಕ್ಕೆ!

ಸ್ವಲ್ಪ ದೂರವಾಗಿಯೆ ನಿಂತು ನೋಡುತ್ತಿದ್ದ ಪುಟ್ಟ ಎಲ್ಲರೂ ಮನೆಯೊಳಗೆ ಹೋದಮೇಲೆ (ಸೇರೆಗಾರ ರಂಗಪ್ಪಸೆಟ್ಟರಂತೆಯೆ ಅವರ ಜೊತೆಯಲ್ಲಿ ಗೌಡರನ್ನು ಎದುರುಗೊಂಡು ಸೀಸೀಮಾಡಲು ಬಂದಿದ್ದ ಕೆಲವರು ಗಟ್ಟದಾಳುಗಳು ಇನ್ನೂ ಅಲ್ಲಿಯೇ ಇದ್ದರು.) ಅಪ್ಪಯ್ಯಾ ಅಪ್ಪಯ್ಯಾ, ಎಂದು ಮೋಹದಿಂದ ಕರೆಯುತ್ತ ಮುಂದೆ ಹೋಗಿ, ಮಬ್ಬು ಬೆಳಕಿನಲ್ಲಿ ಗಾಡಿಯಿಂದ ಸಾಮಾನು ಸರಕುಗಳನ್ನು ಇಳಿಸುತ್ತಿದ್ದ ಗಾಡಿಯವನ ಅಂಗಿಯ ತುದಿಯನ್ನು ಹಿಡಿದೆಳೆದನು. .ಗಾಡಿಯವನು ತಾನು ಗಾಡಿಯಿಂದ ಹೊರಗೆ ಅರ್ಧ ಎಳೆದಿದ್ದ ಸಾಮಾನನ್ನು ಹಾಗೆಯೆ ಹಿಡಿದು ಕೊಂಡು, ಕತ್ತು ತಿರುಗಿಸಿ, ಹುಬ್ಬನ್ನು ಸುಕ್ಕುಗೈದು ನೋಡಿದನು. ಚೆನ್ನಾಗಿ ಬೆಳಕಿದ್ದಿದ್ದರೆ ಆ ಮುಖವನ್ನು ಕಂಡು ಪುಟ್ಟ ಕಿಟ್ಟನೆ ಕಿರಿಚಿಕೊಳ್ಳುತ್ತಿದ್ದನು. ಕತ್ತಲೆಯಲ್ಲಿಯೂ ಕೂಡ ಹೆದರಿ ಎರಡು ಹೆಜ್ಜೆ ಹಿಂದಕ್ಕೆ ಸರಿದು ನಿಂತನು. ಲಾಟೀನಿನ ಮಬ್ಬು ಬೆಳಕಿನಲ್ಲಿಯೂ ಕೂಡ ಮೈಲಿ ಕಜ್ಜಿಯಿಂದ ವಿಕಾರವಾಗಿದ್ದ ಆ ಮುಖದಲ್ಲಿ ಒಂದು ಕಣ್ಣು ಹೂಕೂತು ಕುರುಡಾಗಿದ್ದುದು ಗೊತ್ತಾಗು ವಂತಿತ್ತು.

"ಯಾರು? ಪುಟ್ಟನೇನೊ? ನಿನ್ನಪ್ಪಯ್ಯ ಹಿಂದಿನಿಂದ ಬರ್‍ತಾನೋ. ಇವತ್ತು ಬರಲಿಲ್ಲ" ಎಂದಿತು ಗಾಡಿಯವನ ಕರ್ಕಶ ಧ್ವನಿ. ಪುಟ್ಟನ ಕಿವಿಗೆ ಆ ಧ್ವನಿಯಂತೆ ಆ ಸುದ್ದಿಯೂ ಕಲ್ಲಿಗೆ ಕಲ್ಲು ತೀಡಿದಂತಿತ್ತು.

"ಇವನು ಯಾರಿವನು? ನನ್ನ ಹೆಸರು ಹಿಡಿದು ಕೂಗ್ತಿದಾನೆ?" ಎಂದು ಕ್ಷಣಕಾಲ ಆಶ್ಚರ್ಯಪಟ್ಟ ಪುಟ್ಟ ಕಣ್ಣೀರು ಕರೆಯುತ್ತ ಜಗಲಿಗೆ ಹೋದನು.

ಜಗಲಿಯಲ್ಲಿ, ಕೆಸರುಹಲಗೆಯಮೇಲೆ ಹಾಸಿದ್ದ ಚಾಪೆಯ ಮೇಲೆ ಲ್ಯಾಂಪಿನ ಕೆಂಬೆಳಕಿನಲ್ಲಿ, ಮುಂಡಿಗೆಗೆ ಒರಗಿಕೊಂಡು, ಚಂದ್ರಯ್ಯಗೌಡರು ವಿಶ್ರಮಿಸಿ ಕೊಳ್ಳುತ್ತ, ಪ್ರಯಾಣದ ಪೆಟ್ಟಿಗೆಯಿಂದ ಬಟ್ಟೆಗಳನ್ನೂ ಇತರ ಸಾಮಾನುಗಳನ್ನೂ ತೆಗೆಯುತ್ತಿದ್ದ ರಾಮಯ್ಯ ಮತ್ತು ವಾಸು ಇವರೊಡನೆ ಮಾತಾಡುತ್ತಿದ್ದವರು, ದೂರ ನಸುಗತ್ತಲೆಯಲ್ಲಿ ಮುಂಡಿಗೆಯ ಹಿಂದೆ ನಿಂತು ಬಿಕ್ಕಿ ಬಿಕ್ಕಿ ಅಳುತ್ತಿದ್ದ ಪುಟ್ಟನನ್ನು ಅತ್ಯಂತ ವಿಶ್ವಾಸಪೂರ್ವಕವಾದ ಧ್ವನಿಯಿಂದ ಬಳಿಗೆ ಕರೆದರು.

ಗೌಡರ ಧ್ವನಿ ಸಕರುಣವಾಗಿದ್ದರೂ ಹಿಂದಿನ ಅವರ ಕಠಿನ ಪ್ರಕೃತಿಯ ಪರಿಚಯ ವಿದ್ದ ಪುಟ್ಟ ಬಳಿಸಾರಲು ಅಂಜಿ, ಅಲ್ಲಿಯೆ ಮತ್ತೂ ಹೆಚ್ಚಾಗಿ ಅಳುತ್ತ ನಿಂತನು. ಗೌಡರು ತಮ್ಮ ಕಿರಿಮಗನಿಗೆ 'ಹೋಗೋ, ಅವನ್ನ ಇಲ್ಲಿ ಕರಕೊಂಡು ಬಾರೋ' ಎಂದು ಹೇಳಲು, ವಾಸುವೂ ಅತ್ಯಂತ ಸಹಾನುಭೂತಿಯಿಂದ ಪುಟ್ಟನ ಬಳಿಗೆ ಹೋಗಿ, ಮೃದುವಾದ ಮಾತುಗಳಿಂದ ಅವನನ್ನು ಸಂತೈಸುತ್ತ, ಕೈಹಿಡಿದು ತಂದೆಯ ಬಳಿಗೆ ಕರೆತಂದನು. ಚಂದ್ರಯ್ಯಗೌಡರು, ನೋಡುತ್ತಿದ್ದ ಸೇರೆಗಾರರು ಗಂಗೆ ಮೊದಲಾದವರಿಗೆ ಆಶ್ಚರ್ಯವಾಗುವಷ್ಟರಮಟ್ಟಿಗೆ, ಪುಟ್ಟನ ಕೈಹಿಡಿದು ಪಕ್ಕದಲ್ಲಿ ಕೂರಿಸಿಕೊಂಡು, ಕೂರ್ಮೆಯ ಮುದ್ದು ಮಾತುಗಳನ್ನಾಡಿ ಸಂತೈಸುತ್ತ, ಅವನ ಮೈಗಾಯಗಳನ್ನು ಮುಟ್ಟಿನೋಡಿ ಉಪಚಾರಮಾಡಿದರು. ನೋಡು ತ್ತಿದ್ದವರಿಗೆ ಕಲ್ಲಾಗಿ ಹೋಗಿದ್ದ ಚಂದ್ರಯ್ಯಗೌಡರು ಬೆಣ್ಣೆಯಾಗಿ ಹಿಂತಿರುಗಿ ದ್ದಂತೆ ತೋರಿತು. ಸೇರೆಗಾರರನ್ನು ಕುರಿತು, ತಾವಿಲ್ಲದಿದ್ದಾಗ ಮನೆಯಲ್ಲಿ ಅವರು ನಡೆಸಿದ ದುರ್ವ್ಯಾಪಾರಗಳಿಗಾಗಿ ಕೆಲವು ಕಠಿನ ವಾಕ್ಯಗಳನ್ನಾಡಿದರೂ ಅದರಲ್ಲಿ ಹಿಂದಿರುತ್ತಿದ್ದ ರೌದ್ರವಿರಲಿಲ್ಲ. ನೋಟಕ್ಕೆ ಹೆಚ್ಚು ಕೃಶರಾಗಿ ಕಂಡು ಬರುತ್ತಿದ್ದ ಅವರು ಸ್ವಭಾವದಲ್ಲಿಯೂ ಕರ್ಕಶತೆಯನ್ನು ಬಿಟ್ಟಿರುವಂತೆ ಕಂಡು ಬಂದಿತು. ಸುಬ್ಬಮ್ಮನಮೇಲೆ ಚಾಡಿ ಹೇಳಿ ತಮ್ಮ ಪೂರ್ವದ ಪ್ರಶಸ್ತಿಯನ್ನು ಸಂಪಾದಿಸಬೇಕೆಂದಿದ್ದ ರಂಗಪ್ಪಸೆಟ್ಟರಿಗೆ ಸ್ವಲ್ಪ ಆಶಾಭಂಗವಾಯಿತು. ಯಾತ್ರೆ ಹೋದ ಮಾತ್ರದಿಂದ ಗೌಡರು ಇಷ್ಟರಮಟ್ಟಿಗೆ ಸಾತ್ತ್ವಿಕರಾಗುತ್ತಾರೆಂದು ಗಂಗೆ ಕನಸಿನಲ್ಲಿಯೂ ಭಾವಿಸಿರಲಿಲ್ಲ. ಆದರೇನು? ತನ್ನ ಸ್ತ್ರೀತ್ವದ ಮುಂದೆ ಧರ್ಮಸ್ಥಳದ ಯಾತ್ರೆಯಿಂದೇನಾಗುತ್ತದೆ? ನೋಡುತ್ತೇನೆ ಎಂದುಕೊಂಡಳು.

ಗೌಡರು ಪುಟ್ಟನೊಡನೆ ಆತನ ತಂದೆಯ ವಿಚಾರವಾಗಿ ಏನೊಂದು ಮಾತನ್ನೂ ಹೇಳಲಿಲ್ಲ. ಆ ಪ್ರಸ್ತಾಪದ ಕಡೆಗೆ ಸ್ವಲ್ಪವೂ ಸುಳಿಯಲಿಲ್ಲ. ಅದಕ್ಕೆ ಬದಲಾಗಿ ಬೇರೆ ಏನೇನೋ ಮಾತುಗಳನ್ನಾಡಿ ಅವನಿಗೆ ವಾಸುವಿನಿಂದ ಒಂದು ಹೊಸ ಅಂಗಿ ಮತ್ತು ಪಂಚೆಯನ್ನು ಇನಾಮಾಗಿ ಕೊಡಿಸಿದರು. ಆ ಸಂತೋಷದಲ್ಲಿ ಪುಟ್ಟ ತನ್ನ ದುಃಖವನ್ನು ತಕ್ಕಮಟ್ಟಿಗೆ ಮರೆತನು.

ಆದರೆ ಮಧ್ಯರಾತ್ರಿ, ಎಲ್ಲರೂ ಮಲಗಿದ್ದಾಗ, ಎಲ್ಲೆಲ್ಲಿಯೂ ಪಸರಿಸಿದ್ದ ಕತ್ತಲೆಯ ನಿಶ್ಶಬ್ದತೆಗೆ ಸುರಿಯುತ್ತಿದ್ದ ಜಡಿಮಳೆಯಿಂದ ಮಾತ್ರ ಭಂಗ ಬರು ತ್ತಿದ್ದಾಗ, ಕೆಟ್ಟ ಕನಸೊಂದರಿಂದ ಎಚ್ಚತ್ತು ಹಾಸಗೆಯಮೇಲೆ ಎದ್ದು ಕುಳಿತ ಪುಟ್ಟ ರೋದಿಸತೊಡಗಿದನು. ಆ ಮಳೆಯ ಸದ್ದಿನಲ್ಲಿ ಅದು ಯಾರೊಬ್ಬರಿಗೂ ಕೇಳಿಸುವಂತಿರಲಿಲ್ಲ.

ಮರುದಿನ ಬೆಳಗ್ಗೆ ಪುಟ್ಟ ತನ್ನ ತಂದೆಯ ವಿಚಾರವೇನೆಂದು ತಿಳಿಯುವುದಕ್ಕಾಗಿ,

ಹಿಂದಿನ ರಾತ್ರಿ ತಾನು ನೋಡಿದ್ದ, ಮೈಲಿಕಜ್ಜಿ ಮುಖದ ಒಕ್ಕಣ್ಣು ಕುರುಡಿನ ವಿಕಾರರೂಪದ ಗಾಡಿಯವನ ಬಳಿಗೆ ಹೋದನು. ಪುಟ್ಟ ಅವನನ್ನು ಮಾತನಾಡಿಸುವ ಮೊದಲೆ ಆ ಗಾಡಿಯವನು "ಏನೋ ಪುಟ್ಟಾ, ನನ್ನ ಗುರುತು ಹತ್ತಲಿಲ್ಲವೇನೊ ನಿನಗೆ?" ಎಂದನು.

ಪುಟ್ಟ ಮಿಕಿಮಿಕಿ ಮುಖದ ಕಡೆ ನೋಡುತ್ತಾ ನಿಂತನು.

"ಕೆಳಕಾನೂರು ಅಣ್ಣಯ್ಯಗೌಡರ ಮಗ ಓಬಯ್ಯಗೌಡರು ಗೊತ್ತಿತ್ತೇನು ನಿನಗೆ?"

"ಗೊತ್ತು" ಎನ್ನುತ್ತಾ ಪುಟ್ಟ ಬೆಪ್ಪುಬೆರಗಾಗಿ ಅವನ ಮುಖವನ್ನೇ ದುರುದುರನೆ ನೋಡತೊಡಗಿದನು. ಏನೋ ಒಂದು ಬಹುದೂರದ ಪರಿಚಯ ರೇಖೆ ಅವನ ಸ್ಮೃತಿಯಲ್ಲಿ ಮೂಡುತ್ತಿದ್ದ ಹಾಗಿತ್ತು.

"ನಾನೇ ಓಬಯ್ಯಗೌಡ್ರೂ ಕಣೋ" ಎಂದು ಚಿಂದಿಗಳನ್ನೆ ಸೇರಿಸಿ ಹೊಲಿದು ಮಾಡಿದ್ದ ಅಂಗಿಯ ಆ ಗಾಡಿಯವನು ಬೆಳ್ಳನೆ ನಕ್ಕನು.

ಮುಖವನ್ನೆ ನೋಡುತ್ತಿದ್ದ ಪುಟ್ಟ "ಸುಳ್ಳು ಹೇಳ್ತೀರಿ!" ಎಂದು ತಾನೂ ನಸುನಕ್ಕನು.

"ಹೌದು ಕಣೋ. ಬೇಕಾದರೆ ನಿನ್ನ ವಾಸಯ್ಯನ್ನೇ ಕೇಳು" ಎಂದು ಆ ಗಾಡಿಯವನು ಅಲ್ಲಿಗೆ ಬರುತ್ತಿದ್ದ ವಾಸುವಿನ ಕಡೆಗೆ ನೋಡಿ, "ಪುಟ್ಟಗೆ ನನ್ನ ಗುರುತು ಸಿಕ್ಕಲೇ ಇಲ್ಲ. ಹೇಳಿದರೂ ನಂಬಾದಿಲ್ಲ!" ಎಂದನು.

ವಾಸುವೂ ಓಬಯ್ಯನೂ ಒಬ್ಬರ ಮುಖವನ್ನೊಬ್ಬರು ನೋಡಿಕೊಳ್ಳುತ್ತ ಇಬ್ಬರೂ ಸೇರಿ ಹೇಳಿದ ಕಥೆಯಿಂದ ಪುಟ್ಟನಿಗೆ 'ನಿಂಗನಿಗೆ ಕಾಯಿಲೆಯಾದ್ದರಿಂಧ ಅವನು ಆಗುಂಬೆಯ ಆಸ್ಪತ್ರೆಯಲ್ಲಿದ್ದಾನೆ' ಎಂಬುದು ಮಾತ್ರ ಗೊತ್ತಾಯಿತು. ಜೊತೆಗೆ ಓಬಯ್ಯನ ದಾರುಣ ದುಃಖದ ವೃತ್ತಾಂತವೂ ಕಣ್ಣೀರು ತಂದಿತು. ತನ್ನ ಕಥೆಯನ್ನು ಹೇಳುತ್ತ ಹೇಳುತ್ತ ಓಬಯ್ಯನೂ ಕಂಬನಿಗರೆಯತೊಡಗಿದನು. ಕಠಿನ ದೇಹದ ಆ ಕ್ರೂರ ಮುಖದಿಂದ ಕರುಣಧಾರೆ ಇಳಿಯುತ್ತಿದ್ದುದನ್ನು ಕಂಡು ಕೋಮಲ ಹೃದಯಧ ಮಕ್ಕಳಿಬ್ಬರೂ ಕಣ್ಣೊರಸಿಕೊಳ್ಳುತ್ತಲೇ ಕಥೆ ಕೇಳಿದರು.

ಕೆಳಕಾನೂರು ಅಣ್ಣಯ್ಯಗೌಡರೂ ಓಬಯ್ಯನೂ ಸೇರಿ ಸೀತೆಮನೆ ಸಿಂಗಪ್ಪ ಗೌಡರೊಡನೆ ಒಳಸಂಚು ನಡೆಯಿಸಿ, ಸಿಂಗಪ್ಪಗೌಡರ ಗಾಡಿಯ ಮೇಲೆಯೆ ತಮ್ಮ ಸಾಮಾನು ಸರಕುಗಳನ್ನೆಲ್ಲ ಚಂದ್ರಯ್ಯಗೌಡರಿಗೆ ತಿಳಿಯದಂತೆ ರಾತ್ರಾ ರಾತ್ರಿ ಸಾಗಿಸಿ, ಸಾಲಕ್ಕೆ ಮೋಸಮಾಡಿ ಒಕ್ಕಲು ಹೋಗಲು ಪ್ರಯತ್ನಿಸಿದುದೂ, ಸಿಂಗಪ್ಪಗೌಡರು ಕಳ್ಳನಾಟ ಕಡ್ದಿಟ್ಟಿದ್ದ ಜಾಗವನ್ನು ಪತ್ತೆಮಾಡಿ ರೇಂಜರಿಗೆ

ಅವರನ್ನು ಹಿಡಿದುಕೊಡಲೆಂದು ಅದೇ ರಾತ್ರಿ ಚಂದ್ರಯ್ಯಗೌಡರು ಸಪರಿವಾರ ವಾಗಿ ಹೊರಟು, ದಾರಿಯಲ್ಲಿ ಮೋಸಮಾಡಿ ಒಕ್ಕಲು ಹೋಗುತ್ತಿದ್ದವರನ್ನು ಹಿಡಿದು, ಹಿಂದಕ್ಕೆ ಕರೆತಂದು, ಅವರ ಸಾಮಾನು ಸರಕು ಜಾನುವಾರುಗಳನ್ನು ತಮ್ಮ ಸಾಲಕ್ಕೆ ಮುರಿಹಾಕಿಕೊಂಡು, ಮುದಿ ತಂದೆಯನ್ನೂ ಮಗನನ್ನೂ ಅರಿಯದ ಬಡಕಲು ಹುಡುಗಿ ಓಬಯ್ಯನ ಮಲತಂಗಿಯನ್ನೂ ಊರುಬಿಡಿಸಿ ಅಟ್ಟಿದ ವಿಷಯ ನಮಗೆ ಹಿಂದೆಯೆ ಗೊತ್ತಾಗಿದೆ. ಆಮೇಲೆಯೂ ಅಣ್ಣಯ್ಯ ಗೌಡರು ಸಿಂಗಪ್ಪಗೌಡರ ಒಕ್ಕಲಾಗಿ, ಅವರ ಆಶ್ರಯದಲ್ಲಿರಬೇಕೆಂದು ಮನಸ್ಸ ನ್ನೇನೊ ಮಾಡಿದ್ದರು. ಆದರೆ ಅವರ ದುರದೃಷ್ಟದಿಂದ ಮರುದಿನವೆ ಸಿಂಗಪ್ಪ ಗೌಡರಿಗೆ ಮಹಾದುಃಖ ಬಂದೊದಗಿತು. ಮದುವೆ ನಿಶ್ಚಯವಾಗಿದ್ದ ಅವರ ಮಗ ಕೃಷ್ಣಪ್ಪ ಕೋವಿಕಟ್ಟಿ ಗಾಯವಾಗಿದ್ದ ಹುಲಿಯನ್ನು ಹುಡುಕಲು ಜಾಕಿ ಯೊಡನೆ ಹೋಗಿ, ಅದರ ಬಾಯ್ಗೆ ಸಿಕ್ಕಿ ಸತ್ತು ಹೋದನು. ಆ ದಾರುಣ ಯಾತನೆಯಿಂದ ಹುಚ್ಚುಹುಚ್ಚಾಗಿದ್ದ ಸಿಂಗಪ್ಪಗೌಡರನ್ನು ಮಾತಾಡಿಸುವುದಕ್ಕೂ ಧೈರ್ಯವಾಗದೆ ಅಣ್ಣಯ್ಯಗೌಡರು ಓಬಯ್ಯನನ್ನೂ ಕ್ಷಯಹಿಡಿದಂತೆ ಕೃಶವಾಗಿದ್ದ ತಮ್ಮ ಕಿರಿಮಗಳನ್ನೂ ಕರೆದುಕೊಂಡು ಆಶ್ರಯ ಹುಡುಕುತ್ತ ಮುಂಬರಿದರು. ಆಶ್ರಯ ದೊರೆಯುವುದಂತಿರಲಿ, ಹೊಟ್ಟೆಗೆ ಸಿಕ್ಕುವುದೂ ಒಮ್ಮೊಮ್ಮೆ ಬಹು ಪ್ರಯಾಸವಾಯಿತು. ಅಲ್ಲಿ ಇಲ್ಲಿ ಅಲೆದು ಒಂದು ತಿಂಗಳ ಮೇಲೆ ಮೇಗರವಳ್ಳಿಗೆ ಹೋಗಿ, ಅಲ್ಲಿ ಒಬ್ಬ ಹೆಗ್ಗಡೆಯವರ ಮನೆಯಲ್ಲಿ ಸಂಬಳಕ್ಕೆ ನಿಂತರು. ಜಿಪುಣರೆಂದು ಪ್ರಸಿದ್ಧರಾಗಿದ್ದರೂ ಅವರು ಓಬಯ್ಯನನ್ನು ತಿಂಗಳಿಗೆ ಒಂದು ರೂಪಾಯಿನ ಸಂಬಳದಂತೆ ಕೆಲಸಕ್ಕೆ ನೇಮಿಸಿಕೊಂಡರು. ಅಣ್ಣಯ್ಯಗೌಡರಿಗೆ ಕೆಲಸಕ್ಕೆ ಬಂದ ದಿನ ಪಡಿ ಕೊಡಲು ಮಾತ್ರ ಒಪ್ಪಿದರು. ಅಂತೂ ಅಲ್ಲಿ ಮಳೆಗಾಲ ಕಳೆಯು ವುದೇ ಕಷ್ಟವಾಯಿತು. ಆ ಹೆಗ್ಗಡೆಯವರು ಸಂಬಳ ಕೊಡುವ ವಿಚಾರದಲ್ಲಿ ಬಹಳ ಜಿಪುಣರಾಗಿದ್ದರೂ ಕೆಲಸ ತೆಗೆದುಕೊಳ್ಳುವುದರಲ್ಲಿ ಅತ್ಯಂತ ಉದಾರಿ ಯಾಗಿದ್ದರು. ಹುಡುಗರು ಮುದುಕರು ಎಂಬ ಪಕ್ಷಪಾತವಿಲ್ಲದೆ ಎಲ್ಲರಿಂದಲೂ ಬೆನ್ನುಮುರಿ ಕೆಲಸ ಮಾಡಿಸುತ್ತಿದ್ದರು. ಅಷ್ಟು ಮಾಡಿದರೂ ಪ್ರತಿ ಸಾಯಂಕಾಲವೂ ಬೈಗುಳ ತಪ್ಪುತ್ತಿರಲಿಲ್ಲ. ಕುಡಿಯುವುದರಲ್ಲಿ ಹೆಗ್ಗಡೆಯವರ ಮುಂದೆ ಚಂದ್ರಯ್ಯಗೌಡರು ಯಃಕಶ್ಚಿತರಾಗಿದ್ದರು!

ಒಂದು ತಿಂಗಳು ಕಳೆದಿತ್ತೋ ಇಲ್ಲವೋ ಓಬಯ್ಯನ ಮಲತಂಗಿಗೆ ಜಡ ಷುರು ವಾಯಿತು. 'ಔಸ್ತಿ, ಚೀಟಿಬುತ್ತಿ' ಏನೇನು ಮಾಡಿದರೂ ಗುಣವಾಗಲಿಲ್ಲ. ದನದ ಕೊಟ್ಟಿಗೆಗೆ ಸೇರಿದ್ದ ಗಾಡಿಕೊಟ್ಟಿಗೆಯಲ್ಲಿ ಅವರಿಗೆ ಬಿಡಾರ ಮಾಡಿಕೊಟ್ಟಿದ್ದ ರಿಂದ ಯಾವಾಗಲೂ ತೇವ ತಪ್ಪುತ್ತಿರಲಿಲ್ಲ. ದಿನವೂ ಅಡುಗೆ ಮಾಡುತ್ತಿದ್ದ

ಒಲೆಯ ಮೇಲೆ ಕೂಡ ಹಳು ಬೆಳೆಯುತ್ತಿತ್ತು! ಗಂಜಲ, ಸೆಗಣಿ, ಕೆಸರು, ಮುರು ಇವುಗಳ ದುರ್ವಾಸನೆ ಗುಮ್ಮೆಂದು ಮುತ್ತಿರುತ್ತಿತ್ತು. ಸೊಳ್ಳೆಗಳಂತೂ ಹೇಳತೀರದು!... "ಮೊದಲು 'ಜರ' 'ಜರ' ಎಂದು 'ಹೇಳ್ತಿದ್ರಪ್ಪಾ,' ಕಡೆಗೆ 'ರೇಷ್ಮೆ ಕಾಯಿಲೆ' ಅಂದರು... ಅಂತೂ ಕಡೆಗೆ ಏನು ಮಾಡಿದರೂ ಬದುಕಲೇ ಇಲ್ಲ. ಸತ್ತೇಹೋ'ತು."

ಮಲತಂಗಿ ಸತ್ತ ಕೆಲದಿನಗಳಲ್ಲಿಯೆ ಓಬಯ್ಯ ಹೆಗ್ಗಡೆಯವರ ಕಾಟವನ್ನು ಸಹಿಸಲಾರದೆ ಮುದಿತಂದೆಯನ್ನು ಕರೆದುಕೊಂಡು ಆಗುಂಬೆಗೆ ಹೋದನು. ಅಲ್ಲಿ ಒಬ್ಬ ಬ್ರಾಹ್ಮಣ ಸಾಹುಕಾರರಲ್ಲಿ ಕೆಲಸಕ್ಕೆ ಸೇರಿಕೊಂಡನು. ಜೀವನ ನೆಮ್ಮದಿಯಾಗಿ ಸಾಗುತಿತ್ತು.

"ಆದರೆ, ನಮ್ಮ ಗಿರಾಚಾರ!" ಆ ಊರಿಗೆ ಮಾರಿ ಬಂದುಬಿಟ್ಟಳು. ಎಲ್ಲೆಲ್ಲಿಯೂ ಮೈಲಿ ಹಬ್ಬಿತು. 'ಅಯ್ಯೋ ದೇವ್ರೆ, ಆ ಗೋಳು ನೋಡೋ ಹಾಂಗಿರ್ಲಿಲ್ಲಾ!' ಅಣ್ಣಯ್ಯಗೌಡರಿಗೂ ಮೈಲಿ ಎದ್ದಿತು. ಮೈಮೇಲೆ ಸೂಜಿಮೊನೆ ಊರಲೂ ಜಾಗವಿಲ್ಲದಂತೆ ಬೊಕ್ಕೆಗಳೆದ್ದು ಚರ್ಮವೇ ಕರಗಿ ಹೋಯಿತು.... ಅವರನ್ನು ಸುಡುಗಾಡಿನಲ್ಲಿ ಹೂಳಿ ಬರುವಷ್ಟರಲ್ಲಿಯೆ ಓಬಯ್ಯನಿಗೂ ಜ್ವರ ಕಾಣಿಸಿಕೊಂಡಿತು. ಅವನಿಗೂ ಮೈಲಿಯಾಯಿತು. ಪ್ರಜ್ಞೆ ತಪ್ಪಿತು. ಯಾರು ಶುಶ್ರೂಷೆ ಮಾಡಿದರೊ ಏನೊ ಒಂದೂ ಅವನಿಗೆ ಗೊತ್ತಿರಲಿಲ್ಲ. "ಅಂತೂ ನಂಗೆ ಪರ್ಜ್ಞೆ ಬಂದಾಗ ಒಂದು ತರಾ ಹುಚ್ಚು ಹಿಡ್ದಿತ್ತಂತೆ." ಮೈಲಿಯ ದೆಸೆಯಿಂದಲೆ ಓಬಯ್ಯನಿಗೆ ಒಕ್ಕಣ್ಣಾಯಿತು; ಮುಖ ಮೋರೆ ವಿಕಾರವಾಯಿತು!... ಧರ್ಮಸ್ಥಳಕ್ಕೆ ಯಾತ್ರೆ ಹೋಗಿ ಹಿಂತಿರುಗಿ ಬರುತ್ತ ಚಂದ್ರಯ್ಯಗೌಡರ ಗಾಡಿಯವನಿಗೆ ಕಾಯಿಲೆ ಜೋರಾಗಲು, ಅವನನ್ನು ಆಗುಂಬೆಯಲ್ಲಿ ಬಿಟ್ಟು, ಸಂತೋಷದಿಂದ ಬರುತ್ತೇನೆಂದು ಒಪ್ಪಿಕೊಂಡ ಓಬಯ್ಯನನ್ನು ಗಾಡಿಯವನನ್ನಾಗಿ ಮತ್ತೆ ಕಾನೂರಿಗೆ ಕರೆತಂದರು.

ಓಬಯ್ಯ ಕಣ್ಣೀರು ಕರೆಯುತ್ತ ಕಥೆ ಹೇಳಿದನು. ಮಕ್ಕಳಿಬ್ಬರೂ ಕಣ್ಣೀರು ಸುರಿಸುತ್ತ ಕಥೆ ಕೇಳಿದರು.

೬೭

## ರಾಮಯ್ಯ ಸೀತೆಯನ್ನು ಕಾನೂರಿಗೆ ಕರೆತಂದಿದ್ದು

ಧರ್ಮಸ್ಥಳಕ್ಕೆ ಯಾತ್ರೆ ಹೋಗಿದ್ದವರು ಹಿಂತಿರುಗಿ ಬಂದು ಸುಮಾರು ಒಂದು ತಿಂಗಳು ಮುಗಿದಿತ್ತು. ಮಳೆ ಚೆನ್ನಾಗಿ ಹಿಡಿದು ಹೊಡೆಯುತ್ತಿತ್ತು. ನಾಡೆಲ್ಲ ನಿರ್ಮಲವಾಗಿ ನೆಲ ಹಸುರುಗಟ್ಟಿಹೋಗಿತ್ತು. ಬೇಸಾಯವೂ ಬಹು ವೇಗವಾಗಿ ಮುಂದುವರಿದಿತ್ತು. ಆಳುಕಾಳಿದ್ದವರು ಕೆಲವರು ಆಗಲೇ ಸಸಿ ನಟ್ಟಿ ಪೂರೈಸಿದ್ದರು. ಸೂರ್ಯನ ದರ್ಶನವೂ ಬಹಳ ಅಪೂರ್ವವಾಗಿತ್ತು.

ಈ ನಡುವೆ ವಾಸು ಕಣ್ಣೀರು ಒರಸಿಕೊಳ್ಳುತ್ತ ತೀರ್ಥಹಳ್ಳಿಗೆ ಓದುವುದಕ್ಕೆ ಹೋಗಿ ಸ್ಕೂಲಿಗೆ ಸೇರಿದ್ದನು.

ಅಪ್ಪ ಬರುತ್ತಾನೆಂದು ನಿರೀಕ್ಷಿಸಿ ನಿರೀಕ್ಷಿಸಿ ಮರುಗುತ್ತಿದ್ದ ಪುಟ್ಟ ಯಾರಿಗೂ ತಿಳಿಯದಂತೆ ಮುತ್ತಳ್ಳಿಗೆ ಹೋಗಿ ಸೀತಮ್ಮನನ್ನು ವಿಚಾರಿಸಿದನು. ನಿಂಗನಿಗೆ ಕಾಯಿಲೆಯಾಗಿ ಆಗುಂಬೆಯ ಆಸ್ಪತ್ರೆಗೆ ಸೇರಿಸಿದ್ದುದು ಸುಳ್ಳೆಂದೂ, ಆಗುಂಬೆಗೆ ಬರಬೇಕಾದರೆ ಮೊದಲೇ ಸೋಮೇಶ್ವರದಲ್ಲಿಯೆ ವಾಂತಿಭೇದಿಯಾಗಿ ತೀರಿ ಕೊಂಡನೆಂದೂ, ಎಲ್ಲರೂ ಗುಟ್ಟಾಗಿಟ್ಟಿದ್ದ ಆ ಸಂಗತಿಯನ್ನು ತಾನು ಹೇಳಿದೆನೆಂದು ಯಾರೊಡನೆಯೂ ಹೇಳಬಾರದೆಂದೂ ಹೇಳಿ, ಸೀತೆ ಬಿಕ್ಕಿ ಬಿಕ್ಕಿ ಅಳುತ್ತಿದ್ದ ಅನಾಥ ಬಾಲಕನನ್ನು ಅಕ್ಕನಂತೆ ಉಪಚರಿಸಿ ತಿಂಡಿಕೊಟ್ಟು ಸಮಾಧಾನಮಾಡಲು ಪ್ರಯತ್ನಿಸಿದಳು. ಆದರೆ ಪುಟ್ಟ ಅಳುತ್ತಲೆ ಮಳೆಗಾಲದ ಸಂಜೆಯ ಮಬ್ಬು ಗತ್ತಲೆಯಲ್ಲಿ ಕಾನೂರಿಗೆ ಹಿಂತಿರುಗಿದ್ದನು.

ವಿಕಾರಮುಖದ ಒಕ್ಕಣ್ಣಿನ ಓಬಯ್ಯ ನಿಂಗನ ಬದಲು ಸಂಬಳದವನಾಗಿ ಕಾನೂರಿನಲ್ಲಿಯೆ ನಿಂತಿದ್ದನು.

ಗಂಗೆ ಸೇರೆಗಾರರಿಬ್ಬರೂ ಮತ್ತೆ ತಮ್ಮ ಬಿಡಾರಗಳನ್ನು ತ್ಯಜಿಸಿ, ಕಾನೂರು ಮನೆಯನ್ನೆ ಸೇರಿಬಿಟ್ಟಿದ್ದರು.

ಚಂದ್ರಯ್ಯಗೌಡರು ಬರಬರುತ್ತಾ ಹೆಚ್ಚು ಹೆಚ್ಚು ಕೃಶರಾಗಿಯೂ ಸಾಧು ವಾಗಿಯೂ ಪರಿಣಮಿಸುತ್ತಿದ್ದರು. ಎರಡನೆಯದಕ್ಕೆ ಮೊದಲನೆಯದೇ ಮುಖ್ಯ ಕಾರಣವಾಗಿತ್ತು. ಗಂಗೆಯ ಪ್ರಸಾದದಿಂದ ಅವರಿಗೆ ಯಾವುದೋ ಒಂದು ರಹಸ್ಯ ರೋಗ ಹಿಡಿದಿತ್ತು. ಅದು ಅವರ ಮೊದಲಿನ ಶಕ್ತಿಯನ್ನೆಲ್ಲ ಶೋಷಿಸಿ, ಉದ್ಧಟತನವನ್ನು ಕೊರೆದು ಮುರಿಯುತ್ತಿತ್ತು. ಅದನ್ನು ನೋಡಿದವರೆಲ್ಲರೂ ಧರ್ಮಸ್ಥಳಕ್ಕೆ ಯಾತ್ರೆ ಹೋಗಿ ಬಂದಮೇಲೆ ಗೌಡರು ಬಹಳ 'ಯತ್ವಾಸ'

ಆಗಿಬಿಟ್ಟಿದ್ದಾರೆ, ಧರ್ಮಿಷ್ಠರಾಗಿದ್ದಾರೆ, ಬಹಳ ಒಳ್ಳೆ ಬುದ್ಧಿ ಬಂದಿದೆ, ಋಷಿಗಳಾಗುತ್ತಿದ್ದಾರೆ ಎಂದು ಮೊದಲಾಗಿ ಮಾತಾಡಿಕೊಳ್ಳುತ್ತಿದ್ದರು.

ರಾಮಯ್ಯನೂ ಯಾತ್ರೆಗೆ ಹೋಗಿಬಂದಮೇಲೆ ಹಸನ್ಮುಖಿಯಾಗಿಯೂ ಆರೋಗ್ಯಶಾಲಿಯಾಗಿಯೂ ಕರ್ತೃತ್ವಶಾಲಿಯಾಗಿಯೂ ಆಗಿದ್ದನು. ಅದಕ್ಕೆ ಪ್ರಯಾಣದ ಕಾರಣವೊಂದಲ್ಲದೆ ಇನ್ನೆರಡು ಮುಖ್ಯ ಕಾರಣಗಳಿದ್ದುವು. ಒಂದನೆಯದು, ಸೀತೆ ಯಾತ್ರೆಗೆ ಹೊರಟಂದಿನಿಂದ ಬಹಳ ಮಾರ್ಪಾಡಾಗಿದ್ದಳು; ಹರ್ಷಚಿತ್ತೆಯಾಗಿದ್ದಳು; ಎಲ್ಲರೊಡನೆಯೂ ಮದುವೆಯಾಗುವುದಕ್ಕೆ ಮೊದಲು ತರಳೆಯಾಗಿದ್ದಾಗ ಹೇಗೋ ಹಾಗೆ ವರ್ತಿಸುತ್ತಿದ್ದಳು. ಅಷ್ಟು ಬೇಗನೆ ಆಕೆಯಲ್ಲಿ ಅಂತಹ ಮಾರ್ಪಾಡಾದುದನ್ನು ಕಂಡು ಎಲ್ಲರಿಗೂ ಯಾತ್ರೆಯಲ್ಲಿಯೂ ಧರ್ಮಸ್ಥಳದ ದೇವರಲ್ಲಿಯೂ ನಂಬುಗೆ ಹೆಚ್ಚಿತ್ತು. ರಾಮಯ್ಯನಂತೂ ಹೂವಯ್ಯನ ಸಹವಾಸದಲ್ಲಿದ್ದಾಗ ಯಾತ್ರೆಗಳು ಕ್ಷೇತ್ರಗಳು ಮತ್ತು ದೇವರುಗಳನ್ನು ತಾನು ಹಳಿಯುತ್ತಿದ್ದುದು ಅಥವಾ ಉದಾಸೀನಭಾವದಿಂದ ಕಾಣುತ್ತಿದ್ದುದು ಶುದ್ಧ ಮೂರ್ಖತನವೆಂದೂ ಇನ್ನು ಮುಂದೆ ಎಂದೆಂದಿಗೂ ಹಾಗೆ ಮಾಡುವುದಿಲ್ಲವೆಂದೂ ಗಟ್ಟಿಮನಸ್ಸು ಮಾಡಿಕೊಂಡನು. ಧರ್ಮಸ್ಥಳದಲ್ಲಿ ಒಂದೊಂದು ತಲೆಗೆ ನೂರು ನೂರೈವತ್ತು ರೂಪಾಯಿಗಳವರೆಗೂ ಕಾಣಿಕೆ ತೆಗೆದುಕೊಂಡಿದ್ದರೂ ಕೂಡ ಯಾರೊಬ್ಬರಿಗೂ ದುಃಖವಾಗಲಿಲ್ಲ. ಅಥವಾ ಆದವರು ಬಾಯಿಬಿಟ್ಟು ಹೇಳಿದರೆ ದೇವರಿಗೆ ಮುನಿಸಾಗುತ್ತದೆಂದು ಹೇಳಲಿಲ್ಲ!

ಒಲ್ಲದ ಹೆಂಡಿರನ್ನು ಒಲಿಸಿಕೊಡುವುದಕ್ಕಿಂತಲೂ ಶ್ರೇಷ್ಠತರವಾದ ಕಾರ್ಯ ಇನ್ನಾವುದಿದೆ ಆ ದೇವರಿಗೆ? ಅವನು ಹಾಗೆ ಮಾಡುತ್ತ ಬರಲಿ: ನಾಸ್ತಿಕರೆಲ್ಲ ಆಸ್ತಿಕರಾಗುತ್ತಾರೆ!

ರಾಮಯ್ಯನ ಮಾರ್ಪಾಟಿಗೆ ಎರಡನೆಯ ಕಾರಣವೆಂದರೆ, ತಂದೆ ಚಂದ್ರಯ್ಯಗೌಡರ ದುರ್ಬಲಸ್ಥಿತಿ. ಶಕ್ತಿಗುಂದುತ್ತ ಬಂದಹಾಗೆಲ್ಲ, ಚಂದ್ರಯ್ಯಗೌಡರಲ್ಲಿ ಮೊದಲಿದ್ದ ದರ್ಪವೂ ಕ್ರೌರ್ಯವೂ ಕಠಿನತೆಯೂ ಕಡಮೆಯಾಗುತ್ತ ಬಂದುದರಿಂದ ರಾಮಯ್ಯನೆ ಮುಖ್ಯವ್ಯಕ್ತಿಯಾಗಬೇಕಾಯಿತು. ಕಡೆ ಕಡೆಗೆ ಚಂದ್ರಯ್ಯಗೌಡರು ಏನು ಮಾಡುತ್ತಿದ್ದರೂ ಮಗನನ್ನು ಕೇಳಿ, ಅವನು ಹೇಳಿದಂತೆ ಮಾಡತೊಡಗಿದರು. ಈ ಸ್ಥಾನವ್ಯತ್ಯಾಸದಿಂದ, ಹಿಂದೆ ಕುಬ್ಜವಾಗಿದ್ದ, ರಾಮಯ್ಯನ ವ್ಯಕ್ತಿತ್ವ ವಿಕಾಸಹೊಂದಿ ತಲೆಯೆತ್ತಿತ್ತು.

ರಾಮಯ್ಯ ತನ್ನ ಹೆಂಡತಿಯನ್ನು ಎಂದಿಗೆ ಮನೆಗೆ ಕರೆದು ತಂದೇನೆಂದು ಕಾತರನಾಗಿದ್ದನು. ಅಲ್ಲದೆ, ತನ್ನ ತಂದೆಗೆ ಅನ್ಯರೀತಿಯಿಂದ ಅದನ್ನು ತಿಳಿಸುತ್ತಲೂ ಇದ್ದನು.

ಆದ್ದರಿಂದಲೆ ಧರ್ಮಸ್ಥಳದಿಂದ ಹಿಂತಿರುಗಿ ಬಂದು ಒಂದು ತಿಂಗಳಾದಮೇಲೆ, ಒಂದು ದಿನ ಬೆಳಗ್ಗೆ, ಶೃಂಗಾರ ಮಾಡಿಕೊಂಡು, ಕಮಾನು ಗಾಡಿ ಕಟ್ಟಿಸಿಕೊಂಡು, ಅದರಲ್ಲಿ ದಿಂಬೊರಗಿ ಕುಳಿತು, ಎತ್ತುಗಳ ಕೊರಳ ಗಂಟೆಯ ಸರಗಳುಲಿ ಗ್ಯೆಲು ಗ್ಯೆಲೆಂದು ಘೋಷಿಸುತ್ತಿರಲು, ಹೆಂಡತಿಯನ್ನು ಮನೆಗೆ ಕರೆತರಲೋಸುಗ ರಾಮಯ್ಯ ಮುತ್ತಳ್ಳಿಗೆ ಹೋದನು.

ಆ ದಿನ ಮುತ್ತಳ್ಳಿಯಲ್ಲಿ ರಾಮಯ್ಯನ ಎದೆ ಔದಾರ್ಯದ ಪರಮಾವಧಿ ಮುಟ್ಟಿದಂತಿತ್ತು. ಬಂಧುಗಳೊಡನೆ ಇರಲಿ, ಆಳುಗಳೊಡನೆಯೂ ಕೂಡ ಅತ್ಯಂತ ಹರ್ಷದಿಂದ, ಸರಸದಿಂದ, ಕೃಪಾದೃಷ್ಟಿಯಿಂದ ಮಾತಾಡಿ, ಅವರನ್ನೆಲ್ಲ ಮರುಳುಗೊಳಿಸಿದನು. ಇಂತಹ ಅಳಿಯಂದಿರು ತಪಸ್ಸುಮಾಡಿದರೂ ಸಿಕ್ಕುತ್ತಾರೆಯೆ ಎಂದುಕೊಂಡರು, ನಂಜ ಕಾಳ ಮೊದಲಾದವರು.

ಆದರೆ ಸೀತೆಗೆ ಅದೊಂದು ಮಹಾ ದುರ್ದಿನವಾಗಿತ್ತು. ಆಕೆಯ ಮನಸ್ಸಿನಲ್ಲಿ ವರ್ಣಿಸಲಾರದಷ್ಟು ಯಾತನೆ ಕುದಿಯುತ್ತಿತ್ತು. ಮೆದುಳಿನಲ್ಲಿ ಭಯಂಕರ ವಾದ ಆಲೋಚನೆಗಳ ವೈಹಾಳಿಯಾಗುತ್ತಿತ್ತು. ಆದರೂ ಆಕೆಯ ಹೊರಗಣ ವರ್ತನೆಯಲ್ಲಿ ಯಾರೊಬ್ಬರಿಗೂ ಅದರ ಸುಳಿವು ತಿಳಿಯುವಂತಿರಲಿಲ್ಲ. ಮಿಂಚು ಗುಡುಗು ಸಿಡಿಲುಗಳನ್ನು ಒಡಲೊಳಗೆ ಅಡಗಿಸಿಟ್ಟುಕೊಂಡು ಮೌನವಾಗಿ ಆದರೂ ಬದ್ಧಭ್ರುಕುಟಿ ದಾರ್ಢ್ಯದಿಂದ ಸಂಚರಿಸುವ ಮಳೆಮುಗಿಲಿನಂತೆ ಸೀತೆ, ಯಾಂತ್ರಿಕವಾಗಿ, ಮಾಡಬೇಕಾದ ಕೆಲಸಗಳನ್ನೆಲ್ಲ ಒಳ್ಳೆಯ ಹುಡುಗಿಯಂತೆ ಮಾಡುತ್ತಿದ್ದಳು.

ಸಂಜೆ ಐದು ಗಂಟೆಗೆ ಕಾನೂರಿಗೆ ಹಿಂತಿರುಗಿತು, ಆ ದಿನ ಬೆಳಗ್ಗೆ ಹೋಗಿದ್ದ ಕಮಾನುಗಾಡಿ. ಅದರಲ್ಲಿ ರಾಮಯ್ಯ, ಚಿನ್ನಯ್ಯ, ಸೀತೆ, ಗೌರಮ್ಮನವರು, ಲಕ್ಷ್ಮಿ—ಇಷ್ಟು ಜನರೂ ಸ್ವಲ್ಪ ಇಕ್ಕಟ್ಟಾಗಿಯೆ ಕುಳಿತಿದ್ದರು. ಸೀತೆ ಗಂಡನ ಮನೆಗೆ ಹೋಗುವುದು ಅದೇ ಮೊದಲನೆಯ ಸಲವಾಗಿದ್ದರಿಂದ ತಾಯಿ ಅಣ್ಣ ತಂಗಿ ಮೂವರೂ ಅವಳ ಜೊತೆ ಹೊರಟಿದ್ದರು.

ಕಪ್ಪಾಗಿದ್ದರೂ ಇನ್ನೂ ಕಗ್ಗತ್ತಲೆಯಾಗಿರಲಿಲ್ಲ. ಆ ದಿನ ಬೆಳಗ್ಗೆಯಿಂದಲೂ ಹಿಡಿದು ಹೊಡೆಯುತ್ತಿದ್ದ ಜಡಿ ಒಮ್ಮೆ ಸೋನೆಯಾಗಿ ಒಮ್ಮೆ ಮಳೆಯಾಗಿ ಸುರಿಯುತ್ತಲೆ ಇತ್ತು. ಗಾಡಿ ಮನೆಯ ಅಂಗಳದಲ್ಲಿ ನಿಲ್ಲಲು, ಗಂಡನ ಮನೆಯನ್ನು ಮೊತ್ತಮೊದಲು ಪ್ರವೇಶಿಸುವ ಹೆಣ್ಣಿಗೆ ಮಾಡಬೇಕಾದ ವಿಧಿಗಳನ್ನೆಲ್ಲ ಸೀತೆಗೆ ಮಾಡಿ, ಒಳಗೆ ಕರೆದುಕೊಂಡರು. ಕಲ್ಲಿನ ಗೊಂಬೆಯ ಕಣ್ಣುಗಳಿಂದ ನೀರು ಸುರಿಯುವಂತೆ ಆಕೆಯ ಕಣ್ಣುಗಳಿಂದ ನೀರು ಸುರಿಯುತ್ತಿದ್ದುದನ್ನು ಯಾರೂ ಹೆಚ್ಚು ಗಮನಿಸಲಿಲ್ಲ. ತವರೂರನ್ನು ಬಿಟ್ಟು ಗಂಡನ ಮನೆಗೆ ಸೇರುವ

ಹೆಣ್ಣಿಗೆ ಕಣ್ಣೀರು ಹಾಕುವುದೊಂದು ಅಲಂಕಾರದ ಆವಶ್ಯಕವಾದ ಪದ್ಧತಿಯಲ್ಲವೆ? ಮದುವಣಗಿತ್ತಿಯನ್ನು ನೋಡಲೂ ಸ್ವಾಗತಿಸಲೂ ನೆರೆದಿದ್ದವರೆಲ್ಲರಿಗೂ ಸೀತಮ್ಮನವರನ್ನು ನೋಡಿ ಮಹದಾನಂದವಾಯಿತು.

ಹಿಂದೆ, ಹೂವಯ್ಯ ಆ ಮನೆಯಲ್ಲಿ ಇದ್ದಂದು, ಕಾನೂರಿಗೆ ಬರುವುದೆಂದರೆ ಸೀತೆಗೊಂದು ಹಬ್ಬವಾಗುತ್ತಿದ್ದಿತು. ಇಂದು ಆ ಮನೆ ಅಪಶಕುನಗರ್ಭಿತವಾದ ಗೋರಿಯಂತೆ ತೋರುತ್ತಿತ್ತು. ಆ ಕಂಬಗಳೂ ತೊಲೆಗಳೂ ಮುಂಡಿಗೆಗಳೂ, ಗೋಡೆಯಿಂದೆದ್ದು ನಾಮದ ಪಟ್ಟೆಗಳಿಂದ ಅಲಂಕೃತವಾಗಿ ದೀಪದ ಬೆಳಕಿನಲ್ಲಿ 'ನಾನಿದ್ದೇನೆ' ಎಂದು ಸಾರಿಹೇಳುವಂತಿದ್ದ ಆ ಹುತ್ತವೂ, ಗೋಡೆಗಳ ಮೇಲೆ ಚಲಿಸಾಡುತ್ತಿದ್ದ ಕಂಬಗಳ ಮತ್ತು ಮನುಷ್ಯರ ಹಿರಿ ನೆಳಲುಗಳೂ ಸೀತೆಯ ಮನಸ್ಸಿಗೆ ತನಗೆ ಬಂದೊದಗಲಿರುವ ಕ್ಲೇಶಗಳ ಪ್ರತೀಕಗಳಂತೆಯೂ ದುರಂತತೆಯ ಛಾಯೆಗಳಂತೆಯೂ ತೋರಿ ಭೀಷಣವಾದುವು. ಯಾವುದೊ ಒಂದು ಅನಿರ್ದಿಷ್ಟವಾದ ಭೀಮಾಕೃತಿಯ ಭೀತಿ ಅವಳೆದೆಯನ್ನು ತುಡುಕಿತು. ಬೆವರಿ ಕಿಟ್ಟನೆ ಕಿರಿಚಿಕೊಂಡು ತಾಯಿಯ ತೋಳುಗಳಲ್ಲಿಯೆ ಮೂರ್ಛೆಹೋದಳು. ಬಾಯಲ್ಲಿ ನೊರೆಯೂ ತೋರಿತು. ಗಾಳಿ ಬೀಸಿದರು. ಭೂತರಾಯನಿಗೆ ಹೇಳಿಕೊಂಡರು. ಪಟಿಕಾರ ಸುಟ್ಟು ಮೂಗಿಗೆ ಹಿಡಿದರು. ಏನೇನೊ ಮಾಡಿದರು.

ಕೆಲ ಹೊತ್ತಿನಮೇಲೆ ಆಕೆಗೆ ಎಚ್ಚರವಾದರೂ ಹಿಡಿದಿದ್ದ ಗೌರಮ್ಮನವರ ಸೆರಗನು ಆಕೆ ಬಿಡಲಿಲ್ಲ. ಆ ರಾತ್ರಿಯೆಲ್ಲ ತಾಯಿಯ ಸೆರಗನ್ನು ಹಿಡಿದುಕೊಂಡೇ ಮಲಗಿದ್ದಳು. ಮರುದಿನವೂ ತಾಯಿಯ ಸೆರಗು ಹಿಡಿದುದನ್ನು ಬಿಡಲಿಲ್ಲ. ಏನೇನು ಹೇಳಿದರೂ, ಎಷ್ಟೆಷ್ಟು ಸಮಾಧಾನ ಮಾಡಿದರೂ, ಗದರಿಸಿದರೂ ಬಿಡಲೊಲ್ಲದೆ ಹೋದಳು. ಚಂದ್ರಯ್ಯಗೌಡರಿಗೆ ಅದನ್ನೆಲ್ಲಾ ಕಂಡು ಬಹಳ ರೇಗಿತು. ಎಲ್ಲವೂ ತಮ್ಮ ವೈರಿಯಾದ ಸಿಂಗಪ್ಪಗೌಡರ ಮಗ ಕೃಷ್ಣಪ್ಪನ ಪ್ರೇತದ ಕುಚೇಷ್ಟೆ ಎಂದುಕೊಂಡು ಹಲ್ಲು ಹಲ್ಲುಕಡಿದರು. ತಾಯಿ ಅಣ್ಣ ಇವರು ಯಾರೂ ಇಲ್ಲದಿದ್ದರೆ ಸೀತೆಯ ಗತಿ ಏನಾಗುತ್ತಿತ್ತೊ?

ಮದುವೆಗೆ ಮೊದಲು ಸೀತೆ ಹೂವಯ್ಯನಿಗೆ ಬರೆದಿದ್ದ ಕಾಗದವನ್ನು ನೆನೆದ ರಾಮಯ್ಯನಿಗೂ ಸಿಟ್ಟು ಕೆರಳಿ, ಕ್ರೂರವಾದ ಆಲೋಚನೆಗಳು ಮನಸ್ಸಿನಲ್ಲಿ ಮೂಡಿದುವು. ಸೇರೆಗಾರರನ್ನು ಕರೆದು, ಅವರಿಗೆ ಏನೊ ಕಿವಿಮಾತು ಹೇಳಿ, ಕೈಗೆ ಒಂದು ಕೋವಿ ಕೊಟ್ಟು, ಕೆಳಕಾನೂರಿನ ಕಡೆಗೆ ಕಳುಹಿಸಿದನು.

ಮಧ್ಯಾಹ್ನ ಅಗ್ರಹಾರದ ವೆಂಕಪ್ಪಯ್ಯಜೋಯಿಸರು ಬಂದು ತಮ್ಮ ಕೈಯಲ್ಲಾದ ಮಂತ್ರ ತಂತ್ರಗಳ ವೈದ್ಯವನ್ನೆಲ್ಲಾ ಮಾಡಿದರೂ ಏನೂ ಉಪಯೋಗವಾದಂತೆ ತೋರಲಿಲ್ಲ. ಸಾಯಂಕಾಲ ಅಗ್ರಹಾರಕ್ಕೆ ಹಿಂತಿರುಗುವಾಗ

ಅವರು ಗೌಡರನ್ನು ಹತ್ತಿರಕ್ಕೆ ಕರೆದು "ನೋಡು, ಚಂದ್ರಯ್ಯ, ನನಗೆ ಯಾಕೋ ಸಂಶಯವಾಗ್ತದೆ. ಇದು ನಿಜವಾಗಿಯೂ ಗ್ರಹದ ಕಾಟ ಅಥವಾ ದೈವದ ಕಾಟವಾಗಿದ್ದ ಪಕ್ಷದಲ್ಲಿ, ನಾನು ಹಾಕಿದ ಮಂತ್ರಗಳ ಮುಂದೆ ನಿಲ್ಲುತ್ತಿರಲಿಲ್ಲ. ಹುಡುಗಿಗೆ ಯಾರೋ ಹೇಳಿಕೊಟ್ಟಿರಬೇಕು; ಅಥವಾ ಅವಳೇ ಹೀಗೆಲ್ಲ ನಟನೆ ಮಾಡುತ್ತಿದ್ದಾಳೊ ಏನೊ? ಆದ್ದರಿಂದ ಒಂದು ಉಪಾಯ ಹೇಳ್ತೀನಿ, ಮಾಡಿ ನೋಡು. (ಕೆಮ್ಮಿ) ನಮ್ಮ ಬ್ರಾಹ್ಮಣರಲ್ಲಿ ಇಂಥದೆಷ್ಟೋ ಆಗ್ತದೆ. ನನಗೆ ಚೆನ್ನಾಗಿ ಅನುಭವ ಇದೆ. (ಕೆಮ್ಮಿ) ಸ್ವಲ್ಪ ಕ್ರೂರವಾಗಿ ಕಾಣಬಹುದು. ಆದರೂ ರೋಗ ಪರೀಕ್ಷೆಯಾಗಬೇಕಾದರೆ ಮಾಡಲೇಬೇಕು. ಒಂದು ಕೆಲಸ ಮಾಡು. ಅವರ ಮನೆಯವರನ್ನೆಲ್ಲಾ ಹೇಗಾದರೂ ಮಾಡಿ ಒಪ್ಪಿಸಿ, ಹಿಂದಕ್ಕೆ ಕಳಿಸಿಬಿಡು. ಆಮೇಲೆ ದೆಯ್ಯ ಬಿಟ್ಟುಹೋಗುವವರೆಗೂ ಒಂದೊಂದು ಬರೆ ಹಾಕಬೇಕು ಅಂತಾ ಜೋಯಿಸರು ಹೇಳಿದ್ದಾರೆ ಅಂತಾ ಹೇಳಿ, ದಿನಕ್ಕೆ ಒಂದೊಂದು ಬರೆ ಎಳೆದೇಬಿಡು! ಒಂದೆರಡೇ ದಿನದಲ್ಲಿ ಎಲ್ಲ ಸರಿಹೋಗ್ತದೆ!" ಎಂದು ಗುಟ್ಟಾಗಿ ಹೇಳಿದರು.

ಸೇರೆಗಾರರೂ ದಿನವೆಲ್ಲಾ ಹಕ್ಕಿ ಹೊಡೆಯುವ ನೆವದಿಂದ ಅಲ್ಲಲ್ಲಿ ತಿರುಗಾಡುತ್ತ ಎಷ್ಟು ಹೊಂಚಿದರೂ ಪ್ರಯೋಜನವಾಗದೆ, ಸಾಯಂಕಾಲ ಹಿಂತಿರುಗಿ ಬಂದು ರಾಮಯ್ಯನಿಗೆ ನಡೆದದ್ದನ್ನು ವರದಿ ಹೇಳಿದರು. ರಾಮಯ್ಯ, "ಇವತ್ತಲ್ಲ ದಿದ್ದರೆ ನಾಳೆ! ಅದನ್ನು ಮಾಡಿದ ಹೊರತೂ...!" ಎಂದು ಹುಬ್ಬು ಗಂಟುಹಾಕಿದನು.

ಚಂದ್ರಯ್ಯಗೌಡರು ಚಿನ್ನಯ್ಯನನ್ನು ಕುರಿತು "ನೀವೆಲ್ಲ ಇದ್ದರೆ ಅವಳು ಸರಿಹೋಗುವುದಿಲ್ಲ" ಎಂದು ಮೊದಲಾಗಿ ಅನೇಕವಾಗಿ ವಾದಿಸಿ, ಆ ರಾತ್ರಿಯೆ ಅವರೆಲ್ಲ ಗುಟ್ಟಾಗಿ ಮುತ್ತಳ್ಳಿಗೆ ಹಿಂತಿರುಗುವಂತೆ ಪ್ರೇರಿಸಿದರು. ಚಿನ್ನಯ್ಯನೂ ಯಾವ ಪ್ರಮಾದವನ್ನೂ ಮುಂಗಾಣದೆ ಮಾವನ ಮಾತಿಗೆ ಒಪ್ಪಿದನು.

ರಾತ್ರಿ ಹನ್ನೆರಡರ ಮೇಲೆ ಒಂದು ಗಂಟೆಯಾಗಿತ್ತು. ಮಳೆ ಸುರಿಯುತ್ತಿತ್ತು. ಕಾನೂರಿನ ಕಮಾನುಗಾಡಿ ಮುತ್ತಳ್ಳಿಗೆ ಹೊರಟು ಸಿದ್ಧವಾಗಿತ್ತು. ಗಾಢ ನಿದ್ದೆಯಲ್ಲಿದ್ದ ಲಕ್ಷ್ಮಿಯನ್ನು ಚಿನ್ನಯ್ಯ ಎತ್ತಿತಂದು ಗಾಡಿಯಲ್ಲಿ ಮಲಗಿಸಿದನು. ಗೌರಮ್ಮನವರು ಗುಟ್ಟಾಗಿ ಎದ್ದುಬರಲು ಎರಡು ಸಲ ಯತ್ನಿಸಿದಾಗಲೂ ನಿದ್ದೆಮಾಡುತ್ತಿದ್ದ ಸೀತೆ ಅವರ ಸೆರಗನ್ನು ಭದ್ರವಾಗಿ ಹಿಡಿದಿದ್ದಳು. ಕಡೆಗೆ ಗೌಡರ ಸಲಹೆಯಂತೆ ಸೆರಗನ್ನು ಕತ್ತರಿಯಿಂದ ನಿಃಶಬ್ದವಾಗಿ ಕತ್ತರಿಸಿದರು. ತಾಯಿಯ ಸೀರೆಯ ಸೆರಗಿನ ಚೂರನ್ನು ಹಿಡಿದುಕೊಂಡು ಸೀತೆ ನಿರ್ಭರತೆಯಿಂದ ನಿದ್ರಿಸುತ್ತಿದ್ದಳು.

ಎತ್ತಿನ ಕೊರಳ ಗಂಟೆಯ ಸರಗಳನ್ನು ಬಿಚ್ಚಿಬಿಟ್ಟಿದ್ದರಿಂದ ಗಾಡಿ ನೀರವವಾಗಿ ಮುತ್ತಳ್ಳಿಗೆ ನಡೆಯಿತು.

ಮುಂಡಿಗೆಯ ಮರೆಯಲ್ಲಿ ಒರಗಿ ನಿಂತುಕೊಂಡು ಯಾರ ಗಮನಕ್ಕೂ ಬೀಳದೆ ಎಲ್ಲವನ್ನೂ ನೋಡುತ್ತಿದ್ದ ಪುಟ್ಟ ಮತ್ತೆ ತನ್ನ ತಾವಿಗೆ ಹೋಗಿ ಮಲಗಿಕೊಂಡನು. ಆದರವನಿಗೆ ನಿದ್ದೆ ಹತ್ತಲಿಲ್ಲ. ಸೀತಮ್ಮನನ್ನು ಏತಕ್ಕೆ ಹೀಗೆ ಗೋಳಾಡಿಸುತ್ತಾರೆ ಎಂಬುದು ಅವನಿಗೆ ಅರ್ಥವಾಗಲಿಲ್ಲ.

ಗಾಡಿ ಹೋಗಿ ಅರ್ಧಗಂಟೆಯಾಗಿರಬಹುದು, ಅಷ್ಟು ಹೊತ್ತಿಗೆ ಬಾಗಿಲು ಹಾಕಿ ಚಿಲಕ ಹಾಕಿದ್ದ ಕೊಟಡಿಯೊಳಗೆ ಸೀತೆ 'ಅವ್ವಾ ಅವ್ವಾ' ಎಂದು ಗಟ್ಟಿಯಾಗಿ ಕರೆಯುತ್ತಿದ್ದುದು ಪುಟ್ಟನ ಕಿವಿಗೆ ಬಿತ್ತು! ಪುಟ್ಟನಿಗೆ ಎದ್ದುಹೋಗಿ ತಾನು ಕಂಡಿದ್ದನೆಲ್ಲ ಸೀತಮ್ಮಗೆ ಹೇಳಬೇಕೆಂದು ಇಚ್ಛೆಯಾಯಿತು. ಆದರೆ ಚಂದ್ರಯ್ಯಗೌಡರ ಹೆದರಿಕೆಯಿಂದ ಸುಮ್ಮನೆ ಮಲಗಿದನು. ಸೀತೆ ಕೊಟಡಿಯಲ್ಲಿ ಗಟ್ಟಿಯಾಗಿ ಕೂಗುತ್ತಾ, ಅಳುತ್ತಾ, ಕರೆಯುತ್ತಾ, ಹೊರಗೆ ಬರಲೆಂದು ಬಾಗಿಲು ಹುಡುಕುತ್ತಾ, ಕತ್ತಲೆಯಲ್ಲಿ ಕಣ್ಣುಕಾಣದೆ ಗೋಡೆಗೆ ಢಿಕ್ಕಿಹೊಡೆದು ಬಾಯಿ ಬಡಿದುಕೊಂಡು ರೋದಿಸುತ್ತಾ ಇದ್ದುದನ್ನು ಕೇಳುತ್ತ ಕೇಳುತ್ತ ಪುಟ್ಟನಿಗೆ ಕಣ್ಣೀರು ಬಂತು. ಅವನ ಎದೆ ಡವಡವ ಹೊಡೆದುಕೊಳ್ಳಲಾರಂಭಿಸಿತು. ಏನಾದರಾಗಲಿ ಎಂದು, ಬೊಗಳುತ್ತಿದ್ದ ನಾಯಿಗಳ ಸದ್ದಿನ ಧೈರ್ಯದಿಂದ ಮೇಲೆದ್ದು, ಜಗಲಿಯ ಮೇಲೆ ಮಲಗಿದ್ದ ರಾಮಯ್ಯನ ಬಳಿಗೆ ತಡವುತ್ತ ನಡೆದು, "ಅಯ್ಯಾ! ಅಯ್ಯಾ! ಅಯ್ಯಾ!' ಎಂದು ಗಾಬರಿಯಿಂದ ಕೂಗಿದನು.

ಎಚ್ಚರವಾಗಿಯೆ ಇದ್ದ ರಾಮಯ್ಯ "ಏನಾಗಿದೆಯೋ ನಿನಗೆ!" ಎಂದು ಗದರಿಸಿದನು.

"ಸೀತಮ್ಮ ಅಳ್ತಾರೆ!"

"ಅತ್ತರೆ ಅಳಲಿ! ನೀ ತೆಪ್ಪಗೆ ಹೋಗಿ ಮಲಗಿಕೊ!"

ಪುಟ್ಟನಿಗೆ ಅದೂ ಅರ್ಥವಾಗಲಿಲ್ಲ. ಯಾರಾದರೂ ಆಗಲಿ, ಅತ್ತರೆ ಕೂಗಿಕೊಂಡರೆ, ಸಂತೈಸದೆ ಸುಮ್ಮನಿರುವುದೆ? ಅದರಲ್ಲಿಯೂ ಮುತ್ತಳ್ಳಿ ಸೀತಮ್ಮ! ಹೊಸದಾಗಿ ಮನೆಗೆ ಬಂದ ನಂಟರು!— ಇಲ್ಲ; ಪುಟ್ಟನಿಗೆ ಅರ್ಥವಾಗಲಿಲ್ಲ! ಆಶ್ಚರ್ಯಪಡುತ್ತ ಹೋಗಿ ಮತ್ತೆ ಮಲಗಿಕೊಂಡನು.

ಸೀತೆ ಕೂಗಿ ರೋದಿಸುತ್ತಲೇ ಇದ್ದಳು.

## ೬೮

## ಸೀತೆಗೆ ನರಕ ಶಿಕ್ಷೆ

ಮರುದಿನ ಬೆಳಗಾಯಿತು. ಇರುಳು ನಡೆದಿದ್ದ ಸಂಗತಿಯ ಅರಿವೂ ಸೀತೆಗೆ ಚೆನ್ನಾಗಿ ಆಯಿತು. ತಾಯಿಯೂ ಅಣ್ಣನೂ ಈ ರೀತಿ ತನ್ನನ್ನು ತ್ಯಜಿಸಿ ಹೋಗುತ್ತಾರೆಂದು ಆಕೆ ತಿಳಿದಿರಲಿಲ್ಲ. ಕತ್ತರಿಯಿಂದ ಕತ್ತರಿಸಲ್ಪಟ್ಟು ತನ್ನ ಕೈಯಲ್ಲಿ ಉಳಿದುಕೊಂಡಿದ್ದ ತಾಯಿಯ ಸೀರೆಯ ಸೆರಗನ್ನು ನೋಡಿ ನೋಡಿ, ಮುಖಕ್ಕೂ ಎದೆಗೂ ಒತ್ತಿಯೊತ್ತಿಕೊಂಡು ಬಿಕ್ಕಿಬಿಕ್ಕಿ ಎದೆ ಬಿರಿಯುವಂತೆ ಅಳುತ್ತಾ, ಮೂಲೆಯಲ್ಲಿ ನೆಲದಮೇಲೆ ಬಿದ್ದುಕೊಂಡಳು.

ಹೊರಗಡೆಯಿಂದ ಹಾಕಿಕೊಂಡಿದ್ದ ಚಿಲಕವನ್ನು ಕಣಕಣ ಸದ್ದುಮಾಡಿ ಕಳಚಿ ತೆಗೆದು, ಬಾಗಿಲು ತೆರೆದು, ಗಂಗೆ ಕೊಟಡಿಯೊಳಗೆ ಬಂದು ಮುಖ ತೊಳೆದುಕೊಳ್ಳುವಂತೆಯೂ ಕಾಫಿ ಕುಡಿಯುವಂತೆಯೂ ಉಪಚಾರಮಾಡಿ ಹೇಳಿದಳು. ಸೀತೆ ಅವಳ ಕಡೆ ಕಣ್ಣು ಕೂಡ ಇಡದೆ ತನ್ನಷ್ಟಕ್ಕೆ ತಾನೆ ಅಳುತ್ತಲೇ ಇದ್ದಳು. ಗಂಗೆ ಹೊರಟುಹೋಗಿ ಮತ್ತೆ ಮತ್ತೆ ಬಂದು ಅನೇಕ ಸಮಾಧಾನದ ಮಾತುಗಳನ್ನು ಹೇಳಿ ಹೇಳಿ ಕರೆಯುತ್ತಿದ್ದಳು. ಹೊರಗಡೆ ಇದ್ದವರ ಸಲಹೆಯಂತೆ ಆಕೆ ವರ್ತಿಸುತ್ತಿದ್ದಳೆಂಬುದು ಸೀತೆಗೆ ಬಹು ಬೇಗನೆ ಗೊತ್ತಾಯಿತು.

ಬೆಳಿಗ್ಗೆಯ ಕಾಫಿಗಂತಿರಲಿ, ಮಧ್ಯಾಹ್ನ ಊಟಕ್ಕೂ ಸೀತೆ ಕೂತಲ್ಲಿಂದ ಕದಲಲಿಲ್ಲ.

ಹಗಲು ಎಲ್ಲರ ಊಟವೂ ಪೂರೈಸಿದಮೇಲೆ ಗಂಗೆ ಮತ್ತೆ ಕೊಟಡಿಗೆ ಬಂದು 'ನೀವು ಊಟಮಾಡಿ ತಲೆ ಬಾಚಿಕೊಳ್ಳಬೇಕಂತೆ; ಮುತ್ತಳ್ಳಿಗೆ ವಾಪಸು ಕಳಿಸುತ್ತಾರಂತೆ' ಎಂದಳು.

ಸೀತೆಗೆ ಕಾನೂರಿನಿಂದ ಹೇಗಾದರೂ ಒಮ್ಮೆ ತಪ್ಪಿಸಿಕೊಂಡರೆ ಸಾಕಾಗಿತ್ತು. ಗಂಗೆಯ ಮಾತನ್ನು ನಂಬಿ ಬಚ್ಚಲಿಗೆ ಹೋಗಿ, ಕೈಕಾಲು ತೊಳೆದುಕೊಂಡು ಬಂದು, ಊಟಮಾಡಿ, ತಲೆ ಬಾಚಿಕೊಂಡು ತವರುಮನೆಗೆ ಹೊರಡಲು ಸಿದ್ಧಳಾದಳು.

"ನಿನ್ನೆ ರಾತ್ರಿ ನಿಮ್ಮ ಅವ್ವ ಅಣ್ಣಯ್ಯರನ್ನು ಕರೆದುಕೊಂಡುಹೋದ ಗಾಡಿ ಇನ್ನೂ ಬರಲೇ ಇಲ್ಲಂತೆ. ಗಾಡಿ ಬಂದ ಕೂಡಲೆ ನಿಮ್ಮನ್ನು ರವಾನೆ ಹಾಕ್ತಾರಂತೆ!" ಎಂದಳು ಗಂಗೆ ಸೀತೆಯ ಪ್ರಶ್ನೆಗೆ.

ವಾಸ್ತವವಾಗಿ ಗಾಡಿಯೇನೊ ಹಿಂತಿರುಗಿ ಬೆಳಗ್ಗೆಯೆ ಬಂದಿತ್ತು. "ಪುಟ್ಟನ್ನ ಕಳಿಸಿದರೆ ಸಾಕು ಜೊತೆಗೆ, ನಾನು ನಡಕೊಂಡೇ ಹೋಗ್ತೀನಿ" ಎಂದಳು ಸೀತೆ.

"ಛೇ ಛೇ, ಆಮೇಲೆ ನಿಮ್ಮಪ್ಪಯ್ಯ ಏನಂದಾರು?"

"ದಮ್ಮಯ್ಯ ಗಂಗೆ. ನಿನ್ನ ಕಾಲಿಗೆ ಬೀಳ್ತೀನಿ. ಹೆಂಗಾದರೂಮಾಡಿ ಅವ್ವನ ಹತ್ತಿರಕ್ಕೆ ಕಳಿಸು ನನ್ನ. ಬೇಕಾದರೆ ನಿನಗೆ ನನ್ನ ಗುಂಡಿನಸರ ಕೊಡ್ತೇನೆ!" ಎಂದು ಸೀತೆ ಕಣ್ಣೀರು ಸುರಿಸುತ್ತ ಗಂಗೆಯ ಕಾಲುಮುಟ್ಟಿ, ತನ್ನ ಕೊರಳಲ್ಲಿದ್ದ ಚಿನ್ನದ ಗುಂಡಿನ ಸರವನ್ನು ಹಿಡಿದು ತೋರಿದಳು.

ಗುಂಡಿನ ಸರದ ತಳತಳನೆ ಹೊಳೆಯುವ ಹಳದಿಯ ಬಣ್ಣ ಎಂಥವರನ್ನೂ ಮರುಳುಗೊಳಿಸುವಂತಿತ್ತು. ಗಂಗೆಯ ಮನಸ್ಸಿಗೂ ಸ್ವಲ್ಪ ಹಾಗೆಹಾಗೆ ಆಯಿತು. ಗಂಗೆಯ ಎದೆಗರಗಲು ಗುಂಡಿನಸರ ಮಾತ್ರವೇ ಅಲ್ಲದೆ ಸೀತೆ ಕಾಲುಮುಟ್ಟಿದ್ದೂ ಒಂದು ದೊಡ್ಡ ಕಾರಣವಾಗಿತ್ತು. ಇದ್ದಕ್ಕಿದ್ದಹಾಗೆ ಸೀತೆಯನ್ನು ನೋಡಿ ಆಕೆಗೆ ಮರುಕ ಹುಟ್ಟಿತು. ಸೀತೆಯ ಸ್ಥಿತಿ ಚತುರಳಾಗಿದ್ದ ಗಂಗೆಗೆ ಚೆನ್ನಾಗಿ ಅರ್ಥವಾಯಿತು. ಸ್ಫುರದ್ರೂಪದ ಭದ್ರಭಾವದ ಹೂವಯ್ಯನನ್ನು ನೆನೆದಳು. ದೆವ್ವವೂ ಅಲ್ಲ, ಪಿಶಾಚವೂ ಅಲ್ಲ, ಕೃಷ್ಣಪ್ಪನ ಪ್ರೇತವೂ ಅಲ್ಲ, ಹೂವಯ್ಯ ಸಾಕಿದ ಬಲೀಂದ್ರ ಹೋತದ ಮೇಲಿರುವ ಭೂತದ ಚೇಷ್ಟೆಯೂ ಅಲ್ಲ; ಪ್ರಣಯ ಭಂಗವೇ ಸೀತೆಯ ಈ ಸ್ಥಿತಿಗೆ ಮುಖ್ಯ ಕಾರಣವೆಂಬುದು ಆಕೆಗೆ ಮೊದಲಿನಿಂದಲೆ ಗೊತ್ತಿತ್ತು. ಹೆಂಗಸಿಗೆ ಹೆಂಗಸಿನೆದೆ ಅರ್ಥವಾಗದೆ? ಅದರಲ್ಲೂ ಗಂಗೆಯಂತಹ ಪ್ರಣಯ ಪ್ರವೀಣೆಗೆ?

ಸೀತೆಗೆ ಸಹಾಯಮಾಡಬೇಕೆಂದು ಗಂಗೆಗೆ ಮನಸ್ಸಾದರೂ ಚಂದ್ರಯ್ಯಗೌಡರ ಭಯ ಗುಂಡಿನಸರದ ಮೋಹವನ್ನು ಮೀರಿತ್ತು. ಮತ್ತೇನು ನೆನೆದಳೊ ಏನೊ ಮಾತನಾಡದೆ ಜಗಲಿಗೆ ಹೋದಳು.

ಅಲ್ಲಿ ಚಂದ್ರಯ್ಯಗೌಡರೂ ರಾಮಯ್ಯನೂ ಕೋವಿ ಹಿಡಿದಿದ್ದ ಸೇರೆಗಾರರು ಪಿಸುಮಾತಿನಲ್ಲಿ ಹೇಳುತ್ತಿದ್ದ ತಮ್ಮ ಸಾಹಸದ ಕಥೆಯನ್ನು ಕೇಳುತ್ತಿದ್ದರು: ಹಿಂದಿನ ದಿನ ರಾಮಯ್ಯ ಬಲೀಂದ್ರ ಹೋತವನ್ನು ಗುಂಡಿನಿಂದ ಹೊಡೆದು ಕೊಂದುಹಾಕಲು ಅವರಿಗೆ ಕಟ್ಟಾಜ್ಞೆ ಮಾಡಿದ್ದನು. ಸೇರೆಗಾರರು ಎಷ್ಟು ಹೊಂಚಿದರೂ ಆ ದಿನ ಹೋತವನ್ನು ಕೊಲ್ಲಲಾಗಲಿಲ್ಲ. ಮರುದಿನ ಪ್ರಾತಃಕಾಲದಿಂದಲೂ ಸಾಹಸಮಾಡಿ, ಹೊಂಚಿ ಹೊಂಚಿ, ಕೆಳಕಾನೂರಿಗೆ ಸ್ವಲ್ಪ ದೂರದಲ್ಲಿ, ಕಾಡಿನಂಚಿನಲ್ಲಿ ಸೊಪ್ಪು ಮೇಯುತ್ತಿದ್ದ ಅದನ್ನು ಗುಂಡಿನಿಂದ ಹೊಡೆದು ಕೊಂದು, ಯಾರೂ ಕಾಣದಂತೆ ತಪ್ಪಿಸಿಕೊಂಡು ಬಂದಿದ್ದರು!— ಅದನ್ನು ಕೇಳಿ, ರಾಮಯ್ಯನಿಗೆ ಇನ್ನು ಮೇಲೆ ತನ್ನ ಹೆಂಡತಿ ತನ್ನನ್ನೊಲಿಯುತ್ತಾಳೆ

ಎಂದು ಮಹದಾನಂದವಾಯಿತು. ಹೋತದ ರಕ್ತ ತಂದಿದ್ದರೆ ಸೀತೆಯ ಹಣೆಗೆ ಹಚ್ಚಿ ಶನಿ ಬಿಡಿಸಬಹುದಾಗಿತ್ತಲ್ಲ ಎಂದುಕೊಂಡನು! ಚಂದ್ರಯ್ಯಗೌಡರು ರಾಮಯ್ಯ ಇವರೊಡನೆ ಮಾತನಾಡಿಕೊಂಡು ಹಿಂದಕ್ಕೆ ಬಂದ ಗಂಗೆ "ಇವತ್ತು ಗಾಡಿ ಒಂದುವೇಳೆ ಹೊತ್ತಾಗಿ ಬಂದ್ರೆ ನಾಳೆ ಬೆಳಗ್ಗೆ ಮುಂಚೆ ಕಳಿಸ್ತಾರಂತೆ" ಎಂದು ಭರವಸೆ ಕೊಟ್ಟಳು.

ಧಾರಾಕಾರವಾಗಿ ಅಳುತ್ತಾ ಸೀತೆ ಮತ್ತೆ ಗಂಗೆಯ ಕಾಲು ಹಿಡಿದಳು.

ರಾತ್ರಿಯಾಯಿತು. ಎಲ್ಲರಿಗೂ ಊಟವಾಯಿತು. ಸೀತೆಯೂ ಮರುದಿನ ಬೆಳಗ್ಗೆ ತಾನು ಮುತ್ತಳ್ಳಿಗೆ ಹೋಗುತ್ತೇನೆ ಎಂಬ ಗಂಗೆಯ ಭರವಸೆಯ ಮೇಲೆ ಕುಳಿತು ತಾನೂ ಊಟಮಾಡಿದಂತೆ ಅಭಿನಯಿಸಿದಳು.

ಮನೆಯ ಸುತ್ತಲೂ ಇದ್ದ ಹೆಗ್ಗಾಡುಗಳ ಮೇಲೆ ಮಳೆ ಜಿರ್ರೆಂದು ಸುರಿಯು ತ್ತಿತ್ತು.

ತಾನೂ ಅಲ್ಲಿಯೆ ಜೊತೆ ಮಲಗಿಕೊಳ್ಳುತ್ತೇನೆ ಎಂದು ಗಂಗೆ ಸೀತೆಯನ್ನು ಪುಸಲಾಯಿಸಿ ಒಂದು ಕೋಣೆಗೆ ಕರೆದೊಯ್ದಳು. ಅದನ್ನು ಪ್ರವೇಶಿಸಿದೊಡನೆ ಸೀತೆ ಕಿಟ್ಟನೆ ಕೂಗಿಕೊಂಡು ಹಿಂದಕ್ಕೋಡತೊಡಗಿದಳು. (ಅದು ರಾಮಯ್ಯನ ಸಜ್ಜೆವನೆ ಎಂಬುದು ಆಕೆಗೆ ತಟಕ್ಕನೆ ಹೊಳೆದಿತ್ತು!) ಆದರೆ ಗಂಗೆ ಅವಳನ್ನು ಬಲವಾಗಿ ಹಿಡಿದುಕೊಂಡಳು. ಕಿರುಹುಡುಗಿಗೆ ಅಸಾಧ್ಯವಾದ ಒಂದು ಅಮಾನುಷ ಶಕ್ತಿಯಿಂದ ಸೀತೆ ತನಗಿಂತಲೂ ಬಲವಾಗಿದ್ದ ಗಂಗೆಯನ್ನು ಕೆದರಿ ತಳ್ಳಿ, ಕೋಣೆಯಿಂದ ಹೊರಗೆ ಓಡಿದಳು. ಗೋಡೆಗೆ ತಗುಲಿದ ಪೆಟ್ಟಿನ ನೋವಿಗೆ ಗಂಗೆ ಅಯ್ಯೊ ಎಂದು ಕೂಗಿಕೊಂಡಳು. ರಾಮಯ್ಯ, ಸೇರೆಗಾರರು, ಚಂದ್ರಯ್ಯಗೌಡರು, ಪುಟ್ಟ, ಓಬಯ್ಯ – ಎಲ್ಲರೂ ಅಲ್ಲಿಗೆ ಓಡಿಬಂದರು.

ವಿಷಯ ತಿಳಿದೊಡನೆ ಚಂದ್ರಯ್ಯಗೌಡರು ಕಿಡಿಕಿಡಿಯಾದರು. ರಾಮಯ್ಯನ ಹೃದಯದಲ್ಲಿಯೂ ಭಗ್ನವಾದ ವಿಷಯಲೋಲುಪತೆಯ ಪ್ರತೀಕಾರದ ಕರಾಳ ಪಿಶಾಚ ಹಲ್ಲುಮಸೆದು ನಖವೆತ್ತಿ ನಿಂತಿತು.

ಚಂದ್ರಯ್ಯಗೌಡರು ತುಟಿಕಚ್ಚಿಕೊಳ್ಳುತ್ತಾ ನುಗ್ಗಿಹೋಗಿ ಸೀತೆಯ ಕೈಯನ್ನು ತುಡುಕಿಹಿಡಿದರು. 'ಕಾನೂರುಮಾವ' ಎಂದರೆ ಹೆದರಿ ನಡುಗುತ್ತಿದ್ದ ಅವಳು ತನ್ನ ಕೈಯನ್ನು ಹಿಡಿದಿದ್ದ ಗೌಡರ ಕೈಯನ್ನು ಬಲವಾಗಿ ಕೊಡಹಿದಳು. ಚಂದ್ರಯ್ಯ ಗೌಡರು ಒಂದುಮಾರು ಆಚೆಗೆ ನೆಗೆದು ನಿಲ್ಲಬೇಕಾಯಿತು! ಮತ್ತೆ ಬಂದು ಎರಡು ಕೈಗಳಿಂದಲೂ ಒತ್ತಿ ಬಲವಾಗಿ ಹಿಡಿದರು. ಸೀತೆ ಹಲ್ಲುಮುಟ್ಟೆ ಕಚ್ಚಿ ಕೊಂಡು ಮತ್ತೊಮ್ಮೆ ಅವರನ್ನು ಕೊಡಹಿ ದಬ್ಬಿಬಿಟ್ಟಳು! ಹುಡುಗಿಗೆ ಎಲ್ಲಿಂದ ಬರಬೇಕು ಆ ಶಕ್ತಿ? ತನ್ನ ವೈರಿಯ ಮಗನಾದ ಕೃಷ್ಣಪ್ಪನ ಪ್ರೇತವೆ

ಆಕೆಯಮೇಲೆ ಬಂದು ಇಷ್ಟೆಲ್ಲ ಆಟ ಮಾಡುತ್ತಿದೆ ಎಂದು ದೃಢನಿಶ್ಚಯ ಮಾಡಿಕೊಂಡ ಗೌಡರು, "ಏನು ನೋಡ್ತೀರೊ ಹಿಡಿದು ಕಟ್ಟಿ . . ." ಎಂದು ಕೂಗಿದರು.

ಹಿಡಿದು ಕಟ್ಟುವ ಆವಶ್ಯಕತೆ ಬರಲಿಲ್ಲ. ತನ್ನ ಸಮಸ್ತ ಸತ್ವವೂ ವ್ಯಯವಾಗಿ ಹೋದಹಾಗಾಗಿ ಸೀತೆ 'ಅಯ್ಯೋ ಅವ್ವಾ' ಎಂದು ಕೋಮಲ ಕಂಠದಿಂದ ಹೃದಯ ವಿದ್ರಾವಕವಾಗುವಂತೆ ಕೂಗಿಕೊಂಡು, ಬಾಡಿದ ಹೂವಿನಂತೆ ನೆಲಕ್ಕುರುಳಿಬಿಟ್ಟಳು. ಆ ಕೂಗು ರಾಮಯ್ಯ ಆರೋಪಿಸಿಕೊಂಡಿದ್ದ ಕಾಠಿಣ್ಯದ ಚಿಪ್ಪನ್ನು ಕೊರೆದುಕೊಂಡು ಒಳನುಗ್ಗಿ ಅವನನ್ನು ಒಂದಿನಿತು ಅಳುಕಿಸಿ ಬಿಟ್ಟಿತು. ಚಂದ್ರಯ್ಯಗೌಡರಂತೆ ಅವನು ಕಳ್ಳು ಕುಡಿದೂ ಇರಲಿಲ್ಲ.

ರಾಮಯ್ಯ 'ಬೇಡ, ಅಪ್ಪಯ್ಯಾ, ಬೇಡ' ಎಂದು ಬೇಡಿದರೂ ಕೇಳದೆ, ವೆಂಕಪ್ಪಯ್ಯಜೋಯಿಸರ ಸೂಚನೆಯಂತೆ, ಚಂದ್ರಯ್ಯಗೌಡರು ಒಂದು ಕಬ್ಬಿಣದ ಬರೆಗುಳವನ್ನು ಕೆಂಪಗೆ ಕಾಯಿಸಿ ತರುವಂತೆ ಸೇರೆಗಾರರಿಗೆ ಅಪ್ಪಣೆಮಾಡಿದರು.

ಇದನ್ನೆಲ್ಲ ನೋಡುತ್ತಿದ್ದ ಪುಟ್ಟ, ಮುತ್ತಳ್ಳಿಯಲ್ಲಿ ತನ್ನನ್ನು ಕರುಣೆಯಿಂದ ಕಂಡು, ಅಕ್ಕನಂತೆ ಉಪಚರಿಸಿದ್ದ ತನ್ನ ಸೀತಮ್ಮಗೆ ಯಾವ ರೀತಿಯಿಂದ ನೆರವಾಗಬೇಕೆಂಬುದನ್ನು ಅರಿಯದೆ ಬರಿದೆ ಅಳತೊಡಗಿದ್ದನು. ಸೇರೆಗಾರರು ಬರೆಗುಳವನ್ನು ಕಾಯಿಸುತ್ತಿದ್ದಾಗಲೆ ಅವನಿಗೊಂದು ಆಲೋಚನೆ ಮಿಂಚಿನಂತೆ ಹೊಳೆಯಿತು. ಕೆಳಕಾನೂರಿಗೆ ಓಡಿಹೋಗಿ ಹೂವಯ್ಯಗೌಡರಿಗೆ ಸಂಗತಿಯನ್ನು ಹೇಳಿದರೆ!

ಕಿರುಹರಯದ ಆ ಹುಡುಗ ಹೆಬ್ಬಾಗಿಲು ದಾಟಿ ಹೊರಗೆ ಬಂದನು. ಕಗ್ಗತ್ತಲೆ, ಜಡಿಮಳೆ, ನಿರ್ಜನತೆ, ಭೂತ ಪಿಶಾಚಿಗಳ ಭೀತಿ — ಇವುಗಳಿಂದ ಬಾಲಕನ ಎದೆ ಹಿಂಜರಿಯಿತು. ಹೊರಗೆ ನಿಲ್ಲಲಾರದೆ ಒಳಗೆ ಓಡಿಬಂದನು. 'ಅಯ್ಯೊ ನಾನು ಓಬಯ್ಯಗೌಡರಂತೆ ದೊಡ್ಡವನಾಗಿದ್ದಿದ್ದರೆ!' ಎಂದುಕೊಂಡನು.

ಪ್ರಜ್ಞೆತಪ್ಪಿ ಬಿದ್ದಿದ್ದ ಸೀತೆಯ ರವಿಕೆಯನ್ನು ಮೇಲಕ್ಕೆಳೆದು, ಸಂಪಗೆ ಹೂವಿನ ಬಣ್ಣದಂತೆ ನಳನಳಿಸುತ್ತಿದ್ದ ಆಕೆಯ ನಳಿತೋಳಿನ ಮೇಲೆ, ಕೆಂಪಗೆ ಕಾಯಿಸಿದ್ದ ಬರೆಗುಳದಿಂದ ಚಂದ್ರಯ್ಯಗೌಡರು, ಕೃಷ್ಣಪ್ಪನ ಪ್ರೇತದ ಮೇಲೆ ಮುಯ್ಯಿ ತೀರಿಸಿಕೊಳ್ಳಲೆಂಬಂತೆ, ಒಂದು ಬರೆ ಹಾಕಿದರು.

ಸೀತೆ ನೆತ್ತರು ಹೆಪ್ಪುಗಡುವಂತೆ ಚಿಟಾರನೆ ಚೀರಿಕೊಂಡು, "ಅಯ್ಯೊ ದಮ್ಮಯ್ಯಾ, ಮಾವ, ದಮ್ಮಯ್ಯ! ನೀವು ಹೇಳಿದಹಾಗೆ ಕೇಳ್ತೀನಿ! ಅಯ್ಯೊ, ಅಯ್ಯೋ, ಅಯ್ಯೋ" ಎಂದು ಬೊಬ್ಬೆ ಹಾಕುತ್ತಿರಲು, ಗೌಡರು ಸ್ವಲ್ಪ ಅಣಕದ ಧ್ವನಿಯಿಂದಲೂ ರೋಷದಿಂದಲೂ "ಕೇಳ್ತೀಯೇನು? ಕೇಳ್ತೀಯೇನು?" ಎನ್ನುತ್ತಾ ಮತ್ತೊಂದು ಬರೆ ಎಳೆದರು. ಸೀತೆ ಮೊದಲಿಗಿಂತಲೂ ಸಾವಿರ ಪಾಲು ಹೆಚ್ಚಾಗಿ, ಆಲಿಸುತ್ತಿದ್ದವರ ಎದೆ ಬಿರಿಯುವಂತೆ ಕೂಗಿಕೊಂಡಳು.

ಹಾರಿ ಹಾರಿ ಬಿದ್ದಳು. ಚಂದ್ರಯ್ಯಗೌಡರು ದಿನಕ್ಕೊಂದರಂತೆ ವಾರಕ್ಕೆ ಏಳು ಬರೆ ಹಾಕುವುದನ್ನು ಮರೆತು ಒಮ್ಮೆಯೇ ಏಳೂ ಬರೆಗಳನ್ನೂ ಹಾಕಿ ಪೂರೈಸಿ ಬಿಡುತ್ತಾರೆಯೊ ಎಂಬಂತೆ ಮತ್ತೊಂದು ಬರೆ ಹಾಕಲು ಹವಣಿಸುತ್ತಿದ್ದರು.

ಅಲ್ಲಿಯವರೆಗೆ ತಾಳಿಕೊಂಡಿದ್ದ ರಾಮಯ್ಯನ ಸಹನೆ ಸಹಿಸದಾಯಿತು. "ಅಯ್ಯೊ ಅಪ್ಪಯ್ಯಾ, ಕೊಲ್ತೀಯೇನೊ!" ಎಂದವನೆ ಬರೆಗುಳ ಹಿಡಿದಿದ್ದ ಗೌಡರ ಕೈಯನ್ನು ತನ್ನೆರಡು ಕೈಗಳಿಂದಲೂ ಮಂಗಮುಷ್ಟಿಯಿಂದ ಹಿಡಿದು ಮೇಲೆತ್ತಿ ನಿಲ್ಲಿಸಿಬಿಟ್ಟನು. ನಿರ್ವೀರ್ಯರಾಗಿದ್ದ ಗೌಡರಿಗೆ ಕೈಯನ್ನು ಒಂದಿನಿತೂ ಅಲುಗಾಡಿಸಲಾಗಲಿಲ್ಲ.

ಚಂದ್ರಯ್ಯಗೌಡರು ಸಿಟ್ಟುಗೊಂಡು ಕೈಲಿದ್ದ ಬರೆಗುಳವನ್ನು ಕೆಳಗೆಸೆದು ತಮ್ಮ ಕೋಣೆಗೆ ಹೋಗಿ ಬಾಗಿಲು ಹಾಕಿಕೊಂಡರು. ರಾಮಯ್ಯನೂ ಅಲ್ಲಿ ನಿಲ್ಲಲಿಲ್ಲ. ಗಂಗೆಗೆ ಏನನ್ನೊ ಅಸ್ಪಷ್ಟವಾಗಿ ಹೇಳಿ ಉಪ್ಪರಿಗೆ ಏರಿದನು. ಸೇರೆಗಾರರು, ನಾಯಿಯ ಹಿಂದೆ ಅದರ ಬಾಲವೂ ಹೋಗುವಂತೆ, ಗೌಡರು ಕಣ್ಮರೆಯಾದೊಡನೆ ಕಣ್ಮರೆಯಾದರು. ಗಂಗೆ ಸೀತೆಯನ್ನು ಅವಳು ಹಿಂದಿನ ರಾತ್ರಿ ತನ್ನ ತಾಯಿಯೊಡನೆ ಮಲಗಿದ್ದ ಕೊಟಡಿಗೆ ಕರೆದುಕೊಂಡು ಹೋಗಿ, ರಾಮಯ್ಯ ಹೇಳಿದಂತೆ, ಬರೆಯ ಗಾಯಗಳಿಗೆ ಎಣ್ಣೆಹಚ್ಚಿ ಶುಶ್ರೂಷೆ ಮಾಡಲೆಂದು, ರೋದಿಸುತ್ತಿದ್ದ ಸೀತೆಯನ್ನು ಎಬ್ಬಿಸಲು ಪ್ರಯತ್ನಿಸಲು, ಸೀತೆ ಅವಳ ಮುಖಕ್ಕೆ ಉಗುಳಿ, ಒದೆದು ನೂಕಿಬಿಟ್ಟಳು! "ಏನಾದರೂ ಹಾಳಾಗಿ ಹೋಗಿ" ಎನ್ನುತ್ತಾ ಅವಳು ಮುನಿದುಕೊಂಡು ಗೌಡರು ಹೋದತ್ತ ಕಡೆ ಸಾಗಿದಳು.

ಒಕ್ಕಣ್ಣಿನ ಮೈಲಿಕಜ್ಜಿಯ ವಿಕಾರಮುಖದ ಓಬಯ್ಯನೂ, ಅರಿಯದ ಹುಡುಗ ಪುಟ್ಟನೂ ಅಲ್ಲಿಯೆ ನಿಂತಿದ್ದರು. ಓಬಯ್ಯ ಕಲ್ಲುನಿಂತಹಾಗೆ ಕಲ್ಲಾಗಿ ನಿಂತಿದ್ದನು. ಪುಟ್ಟ ಬಿಕ್ಕಿಬಿಕ್ಕಿ ಬಸಬಸನೆ ಅಳುತ್ತ ನಿಂತಿದ್ದನು. ದೀಪದ ಕುಡಿ ಅತ್ತಯಿತ್ತ ಬಳುಕುತ್ತ ಉರಿಯುತ್ತಿತ್ತು. ಸುತ್ತಲೂ ಕತ್ತಲೆ ಕವಿದಿತ್ತು. ಮಳೆ ಸುರಿದಿತ್ತು.

ಓಬಯ್ಯ ಪುಟ್ಟನ ಕಡೆ ತಿರುಗಿ, "ತೆಂಗಿನೆಣ್ಣೆ ಎಲ್ಲಿಡ್ತಾರೆ ಗೊತ್ತೇನೊ?" ಎಂದು ಕೇಳಿದನು.

ಪುಟ್ಟ ತಲೆಯಲ್ಲಾಡಿಸಿ, ಗೊತ್ತಿದೆ ಎಂಬುದನ್ನು ಸೂಚಿಸಲು, "ಹೋಗಿ ತಗೊಂಡು ಬಾ" ಎಂದನು.

ಅಡುಗೆ ಮನೆಗೆ ಹೋಗಿ ಬಂದು, "ನನ್ನ ಕೈಗೆ ಸಿಕ್ಕಾದಿಲ್ಲ" ಎಂದೊರೆದ ಪುಟ್ಟನೊಡಗೂಡಿ ಹೋಗಿ, ಓಬಯ್ಯ ಎಣ್ಣೆಯ ಕುಡಿಕೆಯನ್ನೂ ಒಂದು ಕೋಳಿ ಪುಕ್ಕವನ್ನೂ ತಂದನು.

ಪುಟ್ಟನೇ ಪುಕ್ಕವನ್ನು ಎಣ್ಣೆಗೆ ಅದ್ದಿ ಸೀತಮ್ಮನ ಎಡತೋಳಿನ ಮೇಲೆ ಕಪ್ಪಗೆ

ಕಾಣುತ್ತಿದ್ದ ಬರೆಗಾಯಗಳಿಗೆ ಮೆಲ್ಲಗೆ ಸವರಿದನು. ಉರಿಯನ್ನು ತಾಳಲಾರದ ಸೀತೆ ಮುಖ ಸಿಂಡರಿಸಿಕೊಳ್ಳುತ್ತಿರಲು, ಗಾಯಕ್ಕೆ ತಣ್ಣಗಾಗುವಂತೆ ಉಃಫೆಂದು ಗಾಳಿಯೂದಿದನು. . . .

ಸೀತೆ ಪುಟ್ಟನೊಡಗೂಡಿ ತಾನು ಹಿಂದಿನ ರಾತ್ರಿ ಮಲಗಿದ್ದ ಕೊಟಡಿಗೆ ಹೋಗಲು ಓಬಯ್ಯ ತನ್ನ ಜಾಗಕ್ಕೆ ಹೋಗಿ ಮಲಗಿಕೊಂಡನು.

ಕೊಟಡಿಯಲ್ಲಿ ದೀಪವನ್ನಾರಿಸಲಿಲ್ಲ. ಸೀತೆಯೊಂದು ಕಡೆ ಮಲಗಿ ನೋವಿನಿಂದಲೂ ದುಃಖದಿಂದಲೂ ನರಳುತ್ತಿದ್ದಳು. ಪುಟ್ಟನೂ ದೂರದಲ್ಲಿ ಒಂದು ಚಾಪೆಯಮೇಲೆ ಸುತ್ತಿಕೊಂಡು ಮಲಗಿದ್ದನು.

ಸ್ವಲ್ಪ ಹೊತ್ತಿನಮೇಲೆ ಸೀತೆ ಪುಟ್ಟನನ್ನು ಮುಟ್ಟಿ ಎಬ್ಬಿಸಿದಳು. ಪುಟ್ಟ ಕಣ್ಣುಜ್ಜಿಕೊಳ್ಳುತ್ತಾ ಎದ್ದು ಕುಳಿತು, "ಏನ್ರಮ್ಮಾ" ಎಂದನು.

"ಕೆಳಕಾನೂರಿಗೆ ದಾರಿ ಗೊತ್ತೇನೋ ನಿನಗೆ?"

"ಗೊತ್ತಮ್ಮ."

"ಹೂವಯ್ಯಬಾವ, ನಾಗತ್ತಮ್ಮ ಇದ್ದಾರೇನಲ್ಲಿ?"

"ಇದ್ದಾರೆ."

"ನನ್ನ ಅಲ್ಲಿಗೆ ಕರೆಕೊಂಡುಹೋಗಿ ಬಿಡ್ತೀಯಾ?"

ಪುಟ್ಟ ಬೆಪ್ಪುಬೆರಗಾಗಿ ಸೀತೆಯ ಕಡೆ ನೋಡತೊಡಗಿದನು.

"ನೀ ಹೆದರಬೇಡ. ಹೂವಯ್ಯ ಬಾವನ ಜೊತೆ ಇದ್ದಮೇಲೆ ನಿನಗೇನೂ ಆಗೋದಿಲ್ಲ."

ಪುಟ್ಟನ ತುಟಿ ನಡುಗಿದುವು. ಮಾತಾಡಲಿಲ್ಲ. ಒಂದು ಕಡೆ ಸೀತಮ್ಮನಿಗೆ ಸಹಾಯ ಮಾಡಬೇಕೆಂದು ಅವನ ಎದೆ ಹಾತೊರೆಯುತ್ತಿತ್ತು. ಆದರೆ ಮತ್ತೊಂದು ಕಡೆ ಚಂದ್ರಯ್ಯಗೌಡರ ಭೀತಿ ಕಣ್ಣು ಕೆರಳಿಸಿ ಹೆದರಿಸುತ್ತಿತ್ತು.

"ಹೋಗಲಿ, ನನ್ನ ಅಲ್ಲಿವರೆಗೆ ಕಳಿಸಿ, ನೀನು ಹಿಂದಕ್ಕೆ ಬಂದು, ಒಬ್ಬರಿಗೂ ಗೊತ್ತಾಗದಹಾಗೆ ಮಲಗಿಬಿಡು. ರಾತ್ರೆ ನಾನೊಬ್ಬಳೇ ಎದ್ದುಹೋದೆ ಅಂತಾ ತಿಳುಕೊಳ್ತಾರೆ.— ಹೆದರಿಕೆ ಆಗ್ತದೇನು ಒಬ್ಬನೆ ಹಿಂದಕ್ಕೆ ಬರಾಕೆ?"

ಪುಟ್ಟನಿಗೆ ನಿಜವಾಗಿಯೂ ಹೆದರಿಕೆಯಿತ್ತು. ಆದರೂ "ಇಲ್ಲ" ಎಂದನು. ಮಹತ್ಕಾರ್ಯ ಮಾಡುವ ಸಾಹಸದಿಂದ ಅವನಲ್ಲೊಂದು ಕೆಚ್ಚು ಮೂಡುತ್ತಿತ್ತು.

ಇಬ್ಬರೂ ಹಾಸಗೆಯಲ್ಲಿದ್ದ ಒಂದೊಂದು ಕಂಬಳಿಯನ್ನು ಕೊಪ್ಪೆ ಹಾಕಿಕೊಂಡು ಹಿತ್ತಲ ಕಡೆಯ ಬಾಗಿಲಿನಿಂದ ಹೊರಬಿದ್ದರು. ಮಳೆಯಲ್ಲಿ ಕತ್ತಲೆಯಲ್ಲಿ ಕೆಸರಿನಲ್ಲಿ ಗಾಳಿಯಲ್ಲಿ ಕೆಳಕಾನೂರಿನ ಕಡೆಗೆ ತಡವುತ್ತ ಎಡವುತ್ತ ನಡೆದರು. ಸೀತೆಯ ತೋಳ ಗಾಯಗಳು ಸಹಿಸಲಸಾಧ್ಯವಾಗಿ ಉರಿಯತೊಡಗಿದುವು.

ಕಪ್ಪೆ ಕ್ರಿಮಿ ಕೀಟಗಳ ಕರ್ಕಶಧ್ವನಿಸೂತ್ರಗಳಂತೂ ಕಿವಿ ಮುಚ್ಚಿಹೋಗುವಂತೆ ಹಾಸುಹೊಕ್ಕಾಗಿತ್ತು. ಪುಟ್ಟ ಅಲ್ಲಲ್ಲಿ ನಿಂತು ಪರಿಚಿತ ವಸ್ತುಗಳನ್ನೂ ಮರಗಳನ್ನೂ ಗುರುತಿಸುತ್ತಾ ದಾರಿ ತಪ್ಪದಂತೆ ನೋಡಿಕೊಳ್ಳುತ್ತಾ ಮುಂದುವರಿದನು.

ದೂರ ಕತ್ತಲೆಯಲ್ಲಿ ಕೊಟಡಿಯೊಂದರಲ್ಲಿ ಉರಿಯುತ್ತಿದ್ದ ದೀಪದಿಂದ ಕೆಳಕಾನೂರುಮನೆ ಇರುವ ಸ್ಥಳ ಕಾಣಿಸಿತು. ಕೋಣೆಯ ಎರಡು ಕಿಟಕಿಗಳೂ ಎರಡು ಕಣ್ಣುಗಳಂತೆ ದುರುದುರನೆ ಎವೆಯಿಕ್ಕದೆ ನೋಡುತ್ತಿದ್ದುವು.

ಪುಟ್ಟ ಸೀತಮ್ಮಗೆ ದಾರಿ ತೋರಿಸಿ ಹಿಂತಿರುಗುತ್ತಿದ್ದಾಗ, "ನಾಯಿ ಬಗುಳಿದರೆ ಹಚೀ ಅಂತಾ ಹೆದರಿಸಿಬಿಡಿ" ಎಂದು ಎಚ್ಚರಿಕೆ ಹೇಳಿದನು.

ರಾತ್ರಿ ಅಷ್ಟು ಹೊತ್ತಿನಲ್ಲಿ ಹೂವಯ್ಯನ ಕೋಣೆಯಲ್ಲಿ ದೀಪ ಉರಿಯುತ್ತಿದ್ದುದೇಕೆ?

## ೬೯

# ರುದ್ರವಾದರೂ ಮಧುರ ರಾತ್ರಿ

ಒಂದು ದಿನ ಬೆಳಗ್ಗೆ ಹಾಸಗೆಯಮೇಲೆ ಎದ್ದು ಕುಳಿತು ದೇವರಿಗೆ ಕೈಮುಗಿಯುತ್ತಿದ್ದಾಗ, ನಾಗಮ್ಮನವರು ತಮ್ಮ ಎಡ ತೋಳಿನಮೇಲೆ ಒಂದು ಬಿಲ್ಲೆಯಗಲದ ಹಸುರುಮಚ್ಚೆ ಮೂಡಿದ್ದುದನ್ನು ಕಂಡು ನಿಟ್ಟುಸಿರುಬಿಟ್ಟರು. ಮಗನಿಗೆ ಅದನ್ನು ತೋರಿಸುತ್ತ, "ದೆಯ್ಯ ಆಯುಸ್ಸೆಷ್ಟಿದೆ ಅಂತಾ ಮೂಸಿನೋಡಿಕೊಂಡು ಹೋಗ್ಯದೆ. ಇನ್ನೇನು ನನ್ನ ಕಾಲ ಹತ್ತಿರ ಬಂತು" ಎಂದು ಮರುಕದಿಂದ ಆಡಿದರು.

ಹೂವಯ್ಯ ನಗೆಯನ್ನು ತಡೆಯಲಾರದೆ ಮುಗುಳು ನಗುತ್ತ, "ನಿನಗೇನು ಹುಚ್ಚೇನವ್ವಾ? ದೆಯ್ಯ ಮೂಸುತ್ತದಂತೆ! ಆಯುಸ್ಸು ನೋಡಿಕೊಂಡು ಹೋಗ್ತದಂತೆ! ಇದೆಲ್ಲಾ ಯಾರು ಹೇಳ್ದೋರು ನಿನಗೆ? ದೇಹದೊಳಗೆ ಏನೋ ವ್ಯತ್ಯಾಸವಾಗುವುದರಿಂದ ಕಜ್ಜಿ, ಕುರು, ಇಸಬು, ಹುಳುಕಡ್ಡಿ — ಎಲ್ಲಾ ಏಳುವಹಾಗೆ ಈ ಹಸುರುಮಚ್ಚೆಯೂ ಕಾಣಿಸಿಕೊಳ್ಳುತ್ತದೆ. ಅದಕ್ಕೆ ನೀನಿಷ್ಟೊಂದು ಹೆದರಿಬಿಟ್ರೆ?" ಎಂದನು.

ನಾಗಮ್ಮನವರು ಮಗನ ಕಣ್ಣುಗಳನ್ನೆ ನೋಡುತ್ತಾ "ಹೆದರಿಕೆಯಾಕಪ್ಪಾ ಸಾಯೋಕೆ? ಇದ್ದೇನು ಸೌಭಾಗ್ಯವಾಗಬೇಕಾಗಿದೆ. ದೆಯ್ಯ ಮೂಸಿನೋಡಿಕೊಂಡು ಹೋಗಿದ್ದು ಒಳ್ಳೇದೆ ಆಯ್ತು!" ಎಂದು ಕಣ್ಣೀರು ಹಾಕಿದರು.

ಹೂವಯ್ಯನಿಗೆ ಮಾತೆಯ ಮಾತಿನ ಒಳ ಅಭಿಪ್ರಾಯ ಅರ್ಥವಾಯ್ತು. ದೆವ್ವ ಮೈಮೂಸಿ ಆಯುಸ್ಸು ಅಜಮಾಯಿಸಿ ಮಾಡಿಕೊಂಡು ಹೋದುದಕ್ಕೆ ತೋಳಿನ ಮೇಲಿದ್ದ ಹಸರು ಮಚ್ಚೆ ಒಂದು ಸೂಚನೆ ಎಂಬುವುದರಲ್ಲಿ ಅವನಿಗೆ ಒಂದಿನಿತೂ ವಿಶ್ವಾಸವಿರದಿದ್ದರೂ, ತಾಯಿಯ ಮಾತೂ ಕಣ್ಣೀರೂ ಆಕೆಯ ಹೃದಯ ವೇಧೆಯ ಸ್ಥಿತಿಯನ್ನು ಚೆನ್ನಾಗಿ ಸೂಚಿಸುತ್ತಿದ್ದುವು. ಮಗನು ಮದುವೆಗೊಪ್ಪದೆ ಹೆಚ್ಚು ಹೆಚ್ಚು ನಿಸ್ಸಂಗಿಯಾಗುತ್ತಿದ್ದುದನ್ನು ಕಂಡು ನಾಗಮ್ಮ ನವರು ಒಳಗೊಳಗೆ ಮರುಗಿ ಮರುಗಿ ಇಳಿದು ಹೋಗುತ್ತಿದ್ದರು.

ಹುಟ್ಟುವುದು, ತಂದೆತಾಯಂದಿರ ಅಕ್ಕರೆಯ ಸಕ್ಕರೆಯನ್ನು ಸವಿದು ಬೆಳೆಯುವುದು, ಅವರು ಒಲಿದಿತ್ತ ಚೆಲುವೆಯಾದ ನಲ್ಲೆಯನ್ನು ಕೈಹಿಡಿಯುವುದು, ಚೆನ್ನಾಗಿ ದುಡಿದು ಸಂಪಾದಿಸಿ ನೆಮ್ಮದಿಯಿಂದ ಬಾಳುವುದು, ಮಕ್ಕಳನ್ನು ಹೆತ್ತು ಸಾಕಿ ಸಲಹಿ ದೊಡ್ಡವರನ್ನಾಗಿ ಮಾಡುವುದು, ಮತ್ತೆ ಅವರಿಗೆ ಮದುವೆ ಮಾಡುವುದು—ಇದೇ ತಾನೆ ಬಾಳಿನ ಹೆದ್ದಾರಿ ಮತ್ತು ಗುರಿ. ಸಾಮಾನ್ಯರಿಗೆ ಆ ಗುರಿ ತಪ್ಪಿದಮೇಲೆ ಜೀವನ ಉದ್ದೇಶವಿಲ್ಲದೆ ಅರ್ಥಹೀನವಾಗುತ್ತದೆ; ಶೂನ್ಯವಾಗುತ್ತದೆ. ಜನ ತುಂಬಿ ತುಳುಕುತ್ತಿದ್ದ ಮನೆಯಲ್ಲಿ ಹೆಗ್ಗಡಿತಿಯಾಗಿದ್ದು, ನಾಲ್ಕಾರು ಸಮಾನ ಸ್ತ್ರೀಯರಮೇಲೆ ಅಧಿಕಾರ ನಡೆಸಿ, ತನ್ನ ಮತ್ತು ಇತರರ ಮಕ್ಕಳನ್ನು ಸಾಕಿ ಸಲಹಿ, ಮುಂದೆ ಸೊಸೆಯನ್ನಾಳಬೇಕೆಂದು ಹಾರೈಸಿದ್ದ ನಾಗಮ್ಮನವರಿಗೆ ಮಗನ ಸಂನ್ಯಾಸಚಿಂತೆ ತಮ್ಮ ಶ್ಮಶಾನ ಚಿತೆಯಾಗಿ ಪರಿಣಮಿಸಿದಂತಿತ್ತು. ಅವರು ಮೊದಲಿನಂತೆಯೆ ಮನೆಗೆಲಸ ಮತ್ತು ಆಳುಕಾಳುಗಳ ಹೊರಗಿನ ಕೆಲಸಗಳಲ್ಲಿ ಮುತುವರ್ಜಿ ವಹಿಸಿ ಆಸಕ್ತಿಯಿಂದ ಕೆಲಸಮಾಡುತ್ತಿದ್ದಂತೆ ತೋರಿದರೂ ಆ ಕ್ರಿಯೆಯ ಹಿಂದುಗಡೆ ಉತ್ಸಾಹವಿರಲಿಲ್ಲ. ಉಗಿಯಂತ್ರ ನಿಂತುಹೋದ ಮೇಲೆಯೂ ಚಕ್ರಗಳು ಸ್ವಲ್ಪ ದೂರ ಉರುಳಿ ಚಲಿಸುವಂತೆ ಅವರ ಜೀವನ ಸಾಗುತ್ತಿತ್ತು.

ನಾಗಮ್ಮನವರಿಗೆ ಪ್ರಪಂಚದ ಕಲ್ಯಾಣವೆಲ್ಲ ತಮ್ಮ ಮಗನ ಮದುವೆಯ ಮೇಲೆ ನಿಂತಹಾಗಿತ್ತು. ಎಲ್ಲಿ ಯಾರಿಗೆ ಏನು ಅನಾಹುತವಾದುದನ್ನು ಕೇಳಿದರೂ ಸರಿ, 'ಪ್ರಾಯಕ್ಕೆ ಬಂದವರು ಮದುವೆಯಾಗದಿದ್ದರೆ ಮತ್ತೇನಾಗ್ತದೆ!' ಎನ್ನುತ್ತಿದ್ದರು. ಒಮ್ಮೆ ಹೂವಯ್ಯ ಜಾರಿಬಿದ್ದು ಪೆಟ್ಟಾದಾಗಲೂ 'ಮದುವೆ ಮಾಡಿಕೊಂಡಿದ್ರೆ ಹೀಂಗೆಲ್ಲಾ ಆಗ್ತಿತ್ತೇನು?' ಎಂದರಂತೆ. ಇನ್ನೊಮ್ಮೆ 'ನಂದಿ' ಎತ್ತು ಅಗಳಿಗೆ ಬಿದ್ದು ಕಾಲು ಮುರಿದುಕೊಂಡಾಗ "ನೀನು ಲಗ್ನಾಗಿದ್ದರೆ ಹೀಂಗೆಲ್ಲಾ ಆಗ್ಬೇಕಿತ್ತೇನೋ? ಈಗಲಾದ್ರೂ ಮಾಡಿಕೊಂಡ್ರೆ, ಪಾಪ, ಆ ಗೋವಿನ ಕಾಲಾದ್ರು ಸರಿಯಾಗ್ತದೆ" ಎಂದು ಬುದ್ಧಿ ಹೇಳಿದರಂತೆ. ಮಳೆ

ಯಾಗದಿದ್ದರೆ, ಮಳೆ ಹೆಚ್ಚಾಗಿ ಬಂದು ಗದ್ದೆಯ ಅಂಚು ಕೋಡಿಬಿದ್ದರೆ, ಅಡಕೆಯ ತೋಟಕ್ಕೆ ಕೊಳೆ ರೋಗ ಬಂದರೆ, ರಾತ್ರಿ ಗೂಬೆ ಕೂಗಿದರೆ, ನಾಯಿ ವಿಕಟವಾಗಿ ಬಳ್ಳಿಕ್ಕಿದರೆ, ಸಂತೆಯಲ್ಲಿ ಪದಾರ್ಥಗಳಿಗೆ ಬೆಲೆ ಹೆಚ್ಚಿದರೆ — ಎಲ್ಲಕ್ಕೂ ಹೂವಯ್ಯ ಮದುವೆಯಾಗದಿರುವುದೇ ಮುಖ್ಯ ಕಾರಣವೆಂದು ಹೇಳುತ್ತಿದ್ದರು. ಅವರಿಗೆ ಇನ್ನು ಎರಡು ಮೂರು ವರ್ಷಗಳಲ್ಲಿ ಯೂರೋಪು ಖಂಡದಲ್ಲಿ ಘೋರಯುದ್ಧ ಪ್ರಾರಂಭವಾಗುತ್ತದೆ ಎಂದು ಗೊತ್ತಿದ್ದಿದ್ದರೆ, ಅದಕ್ಕೂ ತನ್ನ ಮಗ ಮದುವೆ ಯಾಗದಿರುವುದನ್ನೇ ಏಕಮಾತ್ರ ಕಾರಣವನ್ನಾಗಿ ಒಡ್ಡುತ್ತಿದ್ದರೆಂದು ತೋರುತ್ತದೆ!

ಸುಮಾರು ಒಂದು ತಿಂಗಳ ಹಿಂದೆ ಇದ್ದಿರಬಹುದು, ಸಸಿನಟ್ಟಿಯ ಕಾಲದಲ್ಲಿ, ಹೂವಯ್ಯನಾದಿಯಾಗಿ ಸರ್ವರೂ ಎಷ್ಟು ಬೇಡವೆಂದರೂ ಕೇಳದೆ ಬೆಳಗಿನಿಂದ ಕಪ್ಪಾಗುವವರೆಗೆ ಗದ್ದೆಯಲ್ಲಿ, ಮೊಳಕಾಲೆತ್ತರ ನೀರಿನಲ್ಲಿ, ಜಿರ್ರೆಂದು ಹೊಯ್ಯು ತ್ತಿದ್ದ ಮಳೆಯಲ್ಲಿ, ಬಗ್ಗಿ ಎದ್ದು, ಎದ್ದು ಬಗ್ಗಿ ನಾಗಮ್ಮ ನಾಟಿಕೆಲಸಮಾಡಿದರು. ಅಂದಿನಿಂದ ಮೈನೋವು ಎಂದು ಹಾಸಗೆ ಹಿಡಿದರು. ಕಡೆಗೆ ಜ್ವರವೂ ಬಿಟ್ಟು ಬಿಟ್ಟು ಬರತೊಡಗಿತು. ಔಷಧಿಗಳನ್ನು ಕೊಟ್ಟರೆ ಕುಡಿಯಲೊಲ್ಲದೆ ಹೋದರು. ತಮಗೆ ತಿಳಿದಿದ್ದ ದೆವ್ವಭೂತಗಳಿಗೆಲ್ಲ ಹರಕೆ ಹೇಳಿಕೊಳ್ಳುವುದು; ಆ ಭಟ್ಟರಿಂದ, ಈ ಜೋಯಿಸರಿಂದ, ಕೂಳೂರಿಂದ, ಸಿದ್ಧರಮಠದಿಂದ ಚೀಟಿ ವಿಭೂತಿ, ಅಂತ್ರ ತಂತ್ರ ಮಂತ್ರ ತರಿಸುವುದು — ಹೀಗೆಲ್ಲ ಮಾಡುತ್ತ ಬಂದರು. ಪುಟ್ಟಣ್ಣ ನಿಗಂತೂ ಹಿಂದಕ್ಕೂ ಮುಂದಕ್ಕೂ ತಿರುಗೀ ತಿರುಗೀ ಸಾಕಾಯಿತು. ಮಗ ಹೇಳಿದ ಮಾತನ್ನಂತೂ ಕೇಳುತ್ತಲೇ ಇರಲಿಲ್ಲ. ಅವನ ಮೇಲಿನ ಒಂದು ವಿಧವಾದ ಹಟಕ್ಕಾಗಿಯೆ ಹಾಗೆ ಮಾಡುತ್ತಿದ್ದಾರೆಯೊ ಎಂಬಂತೆಯೂ ತೋರು ತ್ತಿತ್ತು. ಒಮ್ಮೊಮ್ಮೆ ಅವರಿವರ ಹತ್ತಿರ ಹೂವಯ್ಯ ಸಾಕಿದ್ದ ಬಲೀಂದ್ರ ಹೋತದ ಭೂತದ ಚೇಷ್ಟೆಯೇ ತಮ್ಮ ಕಾಯಿಲೆಗೆ ಕಾರಣವೆಂದೂ, ಅದನ್ನು ಬಲಿಕೊಟ್ಟರೆ ಎಲ್ಲ ಸರಿಹೋಗುತ್ತದೆಂದೂ ಗೊಣಗುತ್ತಿದ್ದರು. ಅಂತೂ ಇಂತೂ ಅವರ ದೇಹಸ್ಥಿತಿ ಮೆಲ್ಲಗೆ ವಿಷಮವಾಗುತ್ತಿತ್ತು.

ನಾಗಮ್ಮನವರಿಗೆ ತಮ್ಮ ಮಗನಮೇಲೆ ಅಗಾಧವಾದ ಪ್ರೀತಿಯಿದ್ದಿತ್ತೇ ಹೊರತು, ಆತನ ವ್ಯಕ್ತಿತ್ವವನ್ನು ಗ್ರಹಿಸುವ ಬುದ್ಧಿಶಕ್ತಿಯಿರಲಿಲ್ಲ. ಹೂವಯ್ಯನ ಹೃದಯದ ತುಮುಲಗಳೂ ಮನಸ್ಸಿನ ಜಟಿಲಗಳೂ ಅವರ ಸರಳ ದೃಷ್ಟಿಗೆ ಎಟುಕುವಂತೆಯೂ ಇರಲಿಲ್ಲ. ಅವನ ಜೀವನಪಕ್ಷಿ ಕನಸುಮೊಟ್ಟೆಗಳನ್ನು ಒಡೆದು ಕೊಂಡು ಇನ್ನೂ ಹೊರಗೆ ಹಾರಿರಲಿಲ್ಲ. ಮೊದಲು ಅವನ ಹೃದಯದಲ್ಲಿದ್ದುದು ತಾನು ವಿದ್ಯಾವಂತನಾಗಬೇಕು, ಪ್ರತಿಭಾಶಾಲಿಯಾಗಬೇಕು, ಕೀರ್ತಿ ಸಂಪಾದಿಸ ಬೇಕು, ಲೋಕದ ಮಹಾಪುರುಷರಂತಾಗಬೇಕು, ಸ್ವಾರ್ಥತ್ಯಾಗದಿಂದ ಜೀವನ

ವನ್ನು ಪರಮಸಾರ್ಥಕತೆಗೆ ಬಲಿದಾನ ಕೊಡಬೇಕು — ಎಂಬ ಹೆಗ್ಗನಸು. ಅದು ಬಿರಿದು ಇನ್ನೊಂದು ಸಿಂಗಾರದ ಹೊಂಗನಸಿಗೆ ಎಡೆಗೊಟ್ಟಿತು.— ಸೀತೆಯ ಒಲುಮೆ! ಆ ಹೊಂಗನಸೂ ನೋಡೆ ನೋಡೆ ಕಣ್ಣುಮುಂದೆಯೆ ಸಿಡಿದೊಡೆಯಿತು. ಹೂವಯ್ಯ ಮತ್ತೊಂದು ಕನಸನ್ನು ಕಟ್ಟಿ, ಅದನ್ನು ಸುತ್ತಿಕೊಂಡು, ತನಗೊದಗಿದ ನಿಷ್ಠುರ ನಿರಾಶೆಯನ್ನು ಮರೆಯಲೆಳಸಿದನು. ಪ್ರಕೃತಿಪ್ರಪಂಚದ ಸೌಂದರ್ಯದಲ್ಲಿಯೂ ಭಾವಸಮಾಧಿಯಲ್ಲಿಯೂ ಅಧ್ಯಯನ ಆಲೋಚನೆಗಳಲ್ಲಿಯೂ ಕೃಷಿಯಲ್ಲಿಯೂ ಹಳ್ಳಿಗರ ಜೀವನ ಸುಧಾರಣೆಯ ಕೆಲಸದಲ್ಲಿಯೂ ಕಲ್ಪನಾ ಸ್ವರ್ಗವೊಂದನ್ನು ನಿರ್ಮಿಸಿಕೊಂಡು ಅಲ್ಲಿ ವಾಸಿಸಲೆಳಸಿದನು. ತಾನೆ ವಿಶ್ವಾಮಿತ್ರನೂ ತ್ರಿಶಂಕುವೂ ಇಬ್ಬರೂ ಆಗಲು ಪ್ರಯತ್ನಿಸಿದನು. ಹತಾಶೆಗೇ ಹೂಮಾಲೆಯನ್ನು ಹಾಕಿ ಮಣಿಕಿರೀಟವನ್ನು ತೊಡಿಸಿ ಸಿಂಗಾರಗೆಯ್ದು, ಅದನ್ನೇ ತನ್ನ ಇಷ್ಟದೇವತೆಯನ್ನಾಗಿ ಮಾಡಿ ಪೂಜಿಸುತ್ತೇನೆಂದು ಸಾಧನೆಮಾಡಿದನು. ಆದರೆ ಆ ಹೂಮಾಲೆ ಬಾಡಿ, ಆ ಮಣಿಕಿರೀಟದ ಕಾಂತಿ ಮಸುಳಿ, ಆ ಸಿಂಗಾರವುಡಿದು, ಇಷ್ಟದೇವತೆಗೆ ಬದಲಾಗಿ ಹತಾಶೆಯ ಹಲ್ಲುಕಿರಿಯುವ ವಿಕಟಾಕೃತಿ ಮತ್ತೆ ಮತ್ತೆ ಸುಳಿದಾಡತೊಡಗಿತು. ಕೆಲದಿನಗಳು ಹಳ್ಳಿಗರನ್ನೆಲ್ಲ ಒಟ್ಟುಗೂಡಿ ಹರಿಕಥೆ ಹೇಳುತ್ತೇನೆಂದು ಅವರ ಮೂಢಾಚಾರಗಳನ್ನು ಖಂಡಿಸಿದನು. ಅದೂ ಬೇಜಾರಾಯಿತು. ಮತ್ತೆ ಹಗಲೂ ಬೈಗೂ ಕೋವಿ ಹಿಡಿದು ಕಾಡು ಬೆಟ್ಟಗಳನ್ನು ಅಲೆದಲೆದು ನೋಡಿದನು. ಅದರಿಂದಲೂ ತೃಪ್ತಿಯಾಗಲಿಲ್ಲ. ಉದ್ದಾಮ ಕಾವ್ಯಗಳನ್ನೂ ಗ್ರಂಥಗಳನ್ನೂ ಅಧ್ಯಯನಮಾಡಲು ಪ್ರಯತ್ನಿಸಿದನು. ಆದರೆ ಮನಸ್ಸು ಸಂಚಲವಾಗತೊಡಗಿತು. ಪ್ರಾರ್ಥನೆ ಧ್ಯಾನಗಳೂ ಕೂಡ ಸಕಾಮವಾಗತೊಡಗಿದುವು. ಸೀತೆಯ ಪ್ರೇಮರಾಹು ಅವನನ್ನು ಎಲ್ಲಿ ಹೋದರೂ ಏನು ಮಾಡಿದರೂ ಬಿಡದೆ ಹಿಂಬಾಲಿಸುತ್ತಿತ್ತು. ಮಧ್ಯೆ ಮಧ್ಯೆ ಇತರ ಅನಿಷ್ಟ ಪಿಶಾಚಿಗಳೂ ಆತ್ಮಭಿತ್ತಿಯ ಬಿರುಕುಗಳಲ್ಲಿ ಇಣಿಕಿ ನೋಡಿ, ಕಣ್ಣುಸನ್ನೆ ಮಾಡಲಾರಂಭಿಸಿದುವು. ಸುಬ್ಬಮ್ಮ ಕಾನೂರಿನಿಂದ ಚಿನ್ನದ ಒಡವೆಗಳನ್ನು ತಂದು ತನ್ನ ಕೈಯಲ್ಲಿ ಇಡಲು ಕೊಟ್ಟಂದಿನಿಂದ ಹೂವಯ್ಯನ ಹೃದಯದಲ್ಲಿ ಒಂದು ಅಸಹ್ಯವಾದ ದುರಾಶಾಪಿಶಾಚಿ ತಲೆಹಾಕತೊಡಗಿತ್ತು. ಸಲಸಲವೂ ದೃಢಚಿತ್ತದಿಂದ, ಮುಖಕ್ಕೆ ಉಗುಳಿ ಅದನ್ನು ಓಡಿಸುತ್ತಿದ್ದನು. ಧರ್ಮಸ್ಥಳಕ್ಕೆ ಯಾತ್ರೆಹೋಗಿ ಹಿಂತಿರುಗಿ ಬಂದಮೇಲೆ ಸೀತೆ ಸರಿಯಾಗಿಬಿಟ್ಟಿದ್ದಾಳೆ ಎಂಬುದನ್ನು ಕೇಳಿದೊಡನೆ ಹೂವಯ್ಯನಿಗೆ ಮಹಾ ಯಾತನೆಯಾಯಿತು. ಹಾಗಾದರೆ ಸೀತೆ ಮನಃಪೂರ್ವಕವಾಗಿ ರಾಮಯ್ಯನನ್ನು ಒಲಿದೇಬಿಟ್ಟಳಷ್ಟೆ! ಅಯ್ಯೊ ಅವಳು ಮೊದಲಿನಹಾಗೆ ಹುಚ್ಚಿಯಾಗಬಾರದೇಕೆ ಎಂದೂ ಹಂಬಲಿಸಿದನು. ಈ ಎಲ್ಲ

ಭಯಂಕರ ಜ್ವಾಲಾಮುಖಿಗಳನ್ನು ಹೊತ್ತುಕೊಂಡು ಹೂವಯ್ಯ ಅಗ್ನಿಪರ್ವತ ದಂತೆ ಮೇಲೆ ಮೇಲೆ ಶಾಂತಮೂರ್ತಿಯಾಗಿ, ದಿನಚರಿಯ ಕರ್ತವ್ಯ ಕಾರ್ಯ ಗಳನ್ನು ನಿರ್ವಹಿಸುತ್ತಿದ್ದನು.

ಆ ದಿನ ಸಿಂಗಪ್ಪಗೌಡರ ಗಂಡುಕೂಸನ್ನು ತೊಟ್ಟಿಲಿಗೆ ಹಾಕುವ ದಿನವಾಗಿದ್ದ ರಿಂದ, ಅವರ ಆಹ್ವಾನವನ್ನು ಮನ್ನಿಸಿ, ತಾಯಿಗೆ ಕಾಹಿಲೆಯಾದ್ದರಿಂದ ರಾತ್ರಿಯೆ ಹಿಂತಿರುಗಿ ಬರಲೋಸ್ಕರವಾಗಿ ಸೋಮನನ್ನು ಜೊತೆಗೆ ಕರೆದುಕೊಂಡು, ಸೀತೆ ಮನೆಗೆ ಹೋಗಿದ್ದನು. ಅಲ್ಲಿ ಊಟವಾಗುವುದೆ ಹೊತ್ತಾಯಿತು. ಸಿಂಗಪ್ಪ ಗೌಡರೂ 'ಇಷ್ಟು ರಾತ್ರಿಮೇಲೆ ಏನು ಹೋಗುವುದೊ? ಉಳಿದುಕೊಂಡು ನಾಳೆ ಬೆಳಗ್ಗೆ ಕತ್ತಲೆ ಕತ್ತಲೆ ಇದ್ದಹಾಂಗೆ ಹೋದರಾಯ್ತು' ಎಂದು ಉಪಚಾರ ಮಾಡಿದರು. ಆದರೆ ಹೂವಯ್ಯ 'ಅವ್ವಗೆ ಕಾಹಿಲೆ ಕಣೋ' ಎಂದು ಅಲ್ಲಿ ನಿಲ್ಲದೆ ಸೋಮನೊಡಗೂಡಿ ಕೆಳಕಾನೂರಿಗೆ ಇರುಳು ಬಹಳ ಹೊತ್ತಾಗಿ ಹಿಂತಿರುಗಿ ಬಂದಿದ್ದನು. ನಾಗಮ್ಮನವರು ಮಲಗಿ ನಿದ್ರಿಸುತ್ತಿದ್ದರು. ಪುಟ್ಟಣ್ಣನನ್ನು ವಿಚಾರಿಸಲು ಅವರು ಔಷಧ ಕುಡಿಯಲಿಲ್ಲವೆಂದೂ ಬೇಡವೆಂದರೂ ಕೇಳದೆ ಬಾಯಾರಿಕೆಯಾಗುತ್ತದೆಂದು ತಣ್ಣೀರು ಕುಡಿದರೆಂದೂ ಹೇಳಿದನು. ಅದನ್ನು ಕೇಳಿ ಹೂವಯ್ಯ ಆಳುಮೊಗವಾಗಿ ನಿಟ್ಟುಸಿರು ಬಿಟ್ಟನು. ಪುಟ್ಟಣ್ಣ ಬಲೀಂದ್ರನ ವಿಚಾರವನ್ನು ಹೇಳಲಿಲ್ಲ. ಏಕೆಂದರೆ, ಅವನಿಗೆ ಅದು ಗೊತ್ತಿರಲಿಲ್ಲ.

ಇತರರೆಲ್ಲರೂ ಮಲಗಿದ್ದರು. ಹೂವಯ್ಯ ತನ್ನ ಕೋಣೆಯಲ್ಲಿ ಹಾಸಗೆ ಹಾಸಿಕೊಂಡು, ದೀಪದ ಮುಂದೆ ಕುರ್ಚಿಯಮೇಲೆ ಕುಳಿತು, ತಾನು ಸೀತೆಮನೆ ಯಲ್ಲಿ ಕೇಳಿದ ಒಂದು ವಿಚಾರವನ್ನು ಕುರಿತು ದೀರ್ಘಾಲೋಚನೆ ಮಾಡ ತೊಡಗಿದ್ದನು. ಅದೇ ಸಮಯದಲ್ಲಿ, ಅವನು ಯಾವ ವ್ಯಕ್ತಿಯನ್ನು ಕುರಿತು ಆಲೋಚಿಸುತ್ತಿದ್ದನೊ ಆ ವ್ಯಕ್ತಿ ಕಾನೂರಿನಿಂದ ಪುಟ್ಟನೊಡಗೂಡಿ ಹೊರಬಿದ್ದು ಬರುತ್ತಾ, ಕೋಣೆಯ ಕಣ್ಣುಗಳಂತಿದ್ದ ಕಿಟಕಿಗಳಲ್ಲಿ ದೀಪದ ಬೆಳಕನ್ನು ಕಂಡು, ತೋಳಿನ ಮೇಲೆ ಹಾಕಿದ್ದ ಬರೆಗಳ ಯಾತನೆಯಿದ್ದರೂ ಹರ್ಷೋನ್ಮಾದದಿಂದ ಮುಂದುವರಿಯುತ್ತಿತ್ತು!

ಮಳೆಯಿರುಳಿನಲ್ಲಿ ಬೆಚ್ಚಗೆ ಮುದುರಿಕೊಂಡು ಮಲಗಿರುವ ನಾಯಿಗಳು ಇತರ ಸಮಯಗಳಲ್ಲಿ ಬೊಗಳುವಂತೆ ಸುಮ್ಮಸುಮ್ಮನೆ ಅಲ್ಪ ಕಾರಣಗಳಿಗೆಲ್ಲ ಕೂಗಾಡುವುದಿಲ್ಲ. ಎಷ್ಟು ಸುಖವಾಗಿರುತ್ತದೆ ಬೆಚ್ಚನೆಯ ಬೂದಿಯ ಗುಡ್ಡೆ! ನಾಯಿಗಳ ಪ್ರಚಂಡವಾದ ಕೂಗಾಟವನ್ನೂ, ಯಾರೋ ಅವುಗಳನ್ನು ಹೆದರಿಸು ತ್ತಿದ್ದುದನ್ನೂ ಕೇಳಿ ವಿಸ್ಮಯಚಕಿತನಾಗಿ, ತಟಕ್ಕನೆ ಚಿಮ್ಮಿ ಎದ್ದು, ಬಾಗಿಲು ತೆರೆದು ಹೊಸ್ತಿಲು ದಾಟಿದ ಹೂವಯ್ಯನಿಗೆ, ಬಾಗಿಲಿನಿಂದ ಹರಿದುಬಂದ ದೀಪದ

ಬೆಳಕಿನಲ್ಲಿ ಕಂಬಳಿಕೊಪ್ಪೆ ಹಾಕಿಕೊಂಡು ನಿಂತಿದ್ದ ನರಾಕೃತಿಯೊಂದು ತನ್ನ ಕಡೆಗೆ ನುಗ್ಗಿ ಬರುತ್ತಿದ್ದುದನ್ನು ಕಂಡು, ಮೈನೆತ್ತರು ತಣ್ಣಗಾದಂತಾಗಿ ಕೂದಲು ನಿಮಿರಿ ನಿಂತಿತು. ಆ ಆಕೃತಿ ಕ್ಷಣಮಾತ್ರದಲ್ಲಿ 'ಹೂವಯ್ಯ ಬಾವಾ' ಎಂದು ತೊದಲುತ್ತ ಓಡಿಬಂದು, ಅವನನ್ನು ಬಿಗಿದಪ್ಪಿತು! ಹೂವಯ್ಯನಿಗೆ ಮೈಬೆವರು ಕಿತ್ತು ಕೊಂಡಿತು; ನಡ ನಡ ನಡ ನಡುಗಿದನು. ಸುತ್ತ ನಾಯಿಗಳಿಲ್ಲದಿದ್ದರೆ 'ಹೂವಯ್ಯ ಬಾವ' ಎಂಬ ತೊದಲುಕೂಗಿನಲ್ಲಿ ಪರಿಚಿತಧ್ವನಿ ಕೇಳಿಸದಿದ್ದಿದ್ದರೆ, ಅವನು ಮೂರ್ಛೆಹೋಗುತ್ತಿದ್ದನೊ ಏನೊ!

ಕಂಬಳಿಕೊಪ್ಪೆ ನೆಲಕ್ಕೆ ಜಗುಳಿಬಿತ್ತು. ಸೀತೆಯನ್ನು ಗುರುತಿಸಿ ಹೂವಯ್ಯ ಬೆರಗುಹೊಡೆದುಹೋದನು. ಮಾತಾಡಲು ಹವಣಿಸಿದನು. ನಾಲಗೆ ಬರಲಿಲ್ಲ. ಅತಲಜಲದಲ್ಲಿ ಮುಳುಗಿಹೋದ ಸ್ವರ್ಗ ಮತ್ತೆ ಕೈಗೆ ಸಿಕ್ಕಿದಾಗ ಅದನ್ನು ಎಂದಿಗೂ ಎಂದೆಂದಿಗೂ ಬಿಡೆನೆಂಬ ವಜ್ರಮುಷ್ಟಿಯ ಅಚಲನಿಶ್ಚಯತೆಯಿಂದ ಸೀತೆ ಹೂವಯ್ಯನನ್ನು ಬಿಗಿದಪ್ಪಿದ್ದಳು! ಆದರೂ ಅವಳಿಗೆ ಬಾಹ್ಯಪ್ರಜ್ಞೆಯಿರಲಿಲ್ಲ. ಹೂವಯ್ಯನಿಗಂತೂ ಮೆದುಳು ಕದಡಿಹೋದಂತಿತ್ತು. ಆನಂದ, ಆಶ್ಚರ್ಯ, ದುಃಖ, ಅಳು, ನಗು — ಇವುಗಳ ತಾಂಡವದಿಂದ ಅವನ ತಲೆ ತಿರುಗುತ್ತಿತ್ತು. ಏನೊಂದೂ ಅರ್ಥವಾಗುತ್ತಿರಲಿಲ್ಲ. ಎಷ್ಟು ಮಧುರವಾಗಿತ್ತೋ ಅಷ್ಟೇ ಅರ್ಥವಿಲ್ಲದಾಗಿತ್ತು! ಕನಸಿನಲ್ಲಿಯೂ ಕೂಡ ಇಂತಹ ಅಸಮಂಜಸಗಳ ಸಂಯೋಗ ಒದಗುವುದು ಅಸಾಧ್ಯ! ಅವರಿಬ್ಬರಿಗೂ ಅದೊಂದು ಭಾಷಾ ತೀತವಾದ ಭಾವಮಯವಾದ ಮಹದಾನಂದದ ದಿವ್ಯಮುಹೂರ್ತವಾಗಿತ್ತು!

ಹೂವಯ್ಯ ಸೀತೆಯನ್ನು ಮೆಲ್ಲನೆ ಎತ್ತಿಕೊಂಡುಹೋಗಿ ತನ್ನ ಹಾಸಗೆಯ ಮೇಲೆಯೇ ಮಲಗಿಸಿ, ಬಹು ಪ್ರಯತ್ನದಿಂದ ತನ್ನನ್ನಪ್ಪಿದ ಕೈಗಳನ್ನು ಬಿಡಿಸಿದನು. ಹತ್ತಿರ ಕುಳಿತು ನೋಡಿದನು.

ಸೀತೆಯ ಉಸಿರಿನಲ್ಲಿ ಉದ್ವಿಗ್ನತೆಯಿತ್ತು. ಕಣ್ಣುಮುಚ್ಚಿಕೊಂಡು ನಿದ್ರಿಸು ವಂತಿದ್ದಳು. ನೋಡುತ್ತಾ ನೋಡುತ್ತಾ ಹೂವಯ್ಯ ನೀರವವಾಗಿ ರೋದಿಸ ತೊಡಗಿದನು. ಕಣ್ಣೀರು ಹೊಳೆಯಾಗಿ ಹರಿಯಿತು. ದೀಪದ ಬೆಳಕಿನಲ್ಲಿ ಸೀತೆ ಅಪಾರ್ಥಿವ ದೇವವಿಗ್ರಹವಾಗಿದ್ದಳು. ಸೀರೆ ಅಲ್ಲಲ್ಲಿ ತೊಯ್ದುಹೋಗಿತ್ತು. ಕೆಸರು ಹಾರಿ ಮಣ್ಣೂ ಹಿಡಿದಿತ್ತು. ಕಾಲೆಲ್ಲ ಕೆಸರಾಗಿತ್ತು. ಬಾಚಿ ಜಡೆ ಹೆಣೆದಿದ್ದರೂ ಕೂದಲು ಕಿತ್ತಲ ಪತ್ತಲವಾಗಿತ್ತು. ತೋಳಿನ ಮೇಲೆ ಕಾಣುತ್ತಿದ್ದ ಕರಿಯ ಬರೆಗಳನ್ನು ನೋಡಿ ಹೂವಯ್ಯನಿಗೆ ಬೆರಗಾಯಿತು; ಎದೆ ಹಿಂಡಿದಂತಾ ಯಿತು; ಕರುಳು ಕಿತ್ತಂತಾಯಿತು! ಆಕೆ ತೊಟ್ಟುಕೊಂಡಿದ್ದ ಚಿನ್ನದೊಡವೆಗಳ ಹೊಳಪು ಅಸಮಂಜಸವಾಗಿ ಅನರ್ಥಕರವಾಗಿತ್ತು!

ಕಾಲಿನ ಕೆಸರನ್ನು ಕಣ್ಣೀರಿನಲ್ಲಿ ತೊಳೆಯಬೇಕೆನ್ನಿಸಿತು. ತೋಳಿನ ಗಾಯಗಳನ್ನು ತುಟಿಯಿಂದೊತ್ತಿ ಅಳಿಸಬೇಕೆನ್ನಿಸಿತು. ಎಷ್ಟು ಸೇವೆ ಮಾಡಿದರೂ ಸಾಲದು ಎನ್ನಿಸಿತು. ಆದರೆ ಸೀತೆ ಸೇವೆ ಮಾಡಿಸಿಕೊಳ್ಳುವ ಸ್ಥಿತಿಯಲ್ಲಿ ಇರಲಿಲ್ಲ. ಹೂವಯ್ಯ ಬಹಳ ಹೊತ್ತು ಕಾದರೂ ಆಕೆ ಕಣ್ದೆರೆಯಲಿಲ್ಲ. ಗಾಢ ನಿದ್ರೆಯಲ್ಲಿದ್ದಳೇನೊ!

ಹೂವಯ್ಯ ಸೀತೆಗೆ ಎಚ್ಚರವಾದೊಡನೆ ಕುಡಿಯಲು ಕೊಡಲೆಂದು ಮೆಲ್ಲಗೆ ಅಡುಗೆಮನೆಗೆ ಹೋಗಿ ಸ್ವಲ್ಪ ಹಾಲನ್ನು ತಂದನು. ಮನೆಯಲ್ಲಿ ಯಾರೊಬ್ಬರಿಗೂ ಇತ್ತಣ ಪ್ರಜ್ಞೆಯಿರಲಿಲ್ಲ. ಎಷ್ಟೆಂದರೂ ಮಳೆಗಾಲದ ನಿದ್ದೆ!

ಹಾಸಗೆಯ ಪಕ್ಕದಲ್ಲಿ ಕುಳಿತು ಎಷ್ಟು ಕಾದರೂ ಸೀತೆಗೆ ಎಚ್ಚರವಾಗದಿದ್ದುದನ್ನು ನೋಡಿ ಹೂವಯ್ಯ ಕರೆದು ಎಚ್ಚರ ಮಾಡುತ್ತೇನೆಂದು ಬಗೆದನು. ಮೆಲ್ಲಗೆ ಕರೆದನು 'ಸೀತೆ, ಸೀತೆ, ಸೀತೆ' ಎಂದು. ಎಷ್ಟು ಸಾರಿ ಕರೆದರೂ ಅವನಿಗೆ ತಣಿವಾಗಲಿಲ್ಲ; ಆಕೆಗೆ ಎಚ್ಚರವಾಗಲಿಲ್ಲ. ಆ ಹೆಸರು ಅಷ್ಟೊಂದು ಸವಿಯಾಗಿತ್ತು. ಆ ಪ್ರಯತ್ನವನ್ನು ನಿಲ್ಲಿಸಿ, ತನ್ನ ಶಾಲನ್ನು ಬೆಚ್ಚಗೆ ಆಕೆಗೆ ಹೊದಿಸಿ, ಪಕ್ಕದಲ್ಲಿ ಕುಳಿತು ನೋಡುತ್ತಾ ಕಾದನು. ಅವನಿಗೆ ನಿದ್ದೆ ಬರಲೂ ಇಲ್ಲ; ನಿದ್ದೆ ಮಾಡಲೂ ಇಲ್ಲ. ಯಾವ ಆಲೋಚನೆ ಮಾಡುತ್ತಲೂ ಇರಲಿಲ್ಲ. ಸೀತೆಯ ಮುಖವನ್ನೇ ನಿರಂತರವಾಗಿ ನೋಡುತ್ತಿದ್ದನು.

ಬೆಳಗಾಗುತ್ತಿದ್ದುದನ್ನು ನೋಡಿದಾಗ ಅವನಿಗೆ ಆಶ್ಚರ್ಯವಾಯಿತು, ಇವತ್ತು ಎಷ್ಟು ಬೇಗನೆ ಇರುಳು ಕಳೆಯಿತೆಂದು! ಅನಂತವಾಗಿಯೆ ಇದ್ದಿದ್ದರೆ ಆ ಮಧುರ ರಾತ್ರಿ?

## ೭೦

## ತಾಯಿಯ ಮರಣಶಯ್ಯೆಯ ಬಳಿ ಮಗನು ಮಾತುಕೊಟ್ಟದ್ದು

ಬೆಳಗ್ಗೆ ಮುಂಚೆ ಬೈರ ತಂದುಕೊಟ್ಟ ಹೂವಯ್ಯನ ಕಾಗದವನ್ನು ಓದಿದೊಡನೆ, ಚಿನ್ನಯ್ಯನಿಗೆ ಅಳಲೂ ಮುನಿಸೂ ಒಂದರಮೇಲೊಂದು ಉಕ್ಕಿಬಂದುವು. ಸೀತೆಯಿಂದ ನಡೆದುದನ್ನೆಲ್ಲ ತಿಳಿದು ಹೂವಯ್ಯ, ತನ್ನೆದೆಯ ಬಣ್ಣವನ್ನೂ ಒಂದಿನಿತು ಸೇರಿಸಿ, ಕಥೆಯನ್ನು ವಿವರವಾಗಿ ಬರೆದಿದ್ದನು. ಓದುತ್ತ ಓದುತ್ತ, ತಂಗಿಯ ಗೋಳಿನ ಗರಗಸದಮೇಲೆ ಅಣ್ಣನ ಎದೆ ಎಳೆದಂತಾಯಿತು. ಮನೆಯವರೆಲ್ಲರಿಗೂ ತಿಳಿಸಿದನು. ಇಡೀ ಮುತ್ತಳ್ಳಿಗೇ ಸುದ್ದಿಯ ಸಿಡಿಲು ಬಡಿದಂತಾಯಿತು.

ಗಾಡಿ ಕಟ್ಟಿಸಿಕೊಂಡು ಶ್ಯಾಮಯ್ಯಗೌಡರೂ ಗೌರಮ್ಮನವರೂ ಚಿನ್ನಯ್ಯನೂ ಕೆಳಕಾನೂರಿಗೆ ಏದುತ್ತಾ ಬಂದರು.

ಸೀತೆಗೆ ಹಿಂದಿನ ದಿನ ಒದಗಿದ ಘಟನೆಗಳ ಪರಿಣಾಮವಾಗಿ ನೂರು ಮೂರು ನೂರುನಾಲ್ಕು ಡಿಗ್ರಿಗಳಷ್ಟು ಜ್ವರವೇರಿತ್ತು. ಜ್ವರದಿಂದಲೂ ದಣಿವಿನಿಂದಲೂ ಹೆಚ್ಚು ಮಾತನಾಡಲೂ ಆಗುತ್ತಿರಲಿಲ್ಲ. ಹೂವಯ್ಯ ಪಕ್ಕದಲ್ಲಿ ಕುಳಿತು ವೈದ್ಯ ಶುಶ್ರೂಷೆ ಮಾಡುತ್ತಿದ್ದನು. ತಂದೆ ತಾಯಿ ಅಣ್ಣಂದಿರು ಬಂದಾಗ ಅವಳು ಧಾರಾಕಾರವಾಗಿ ಕಣ್ಣೀರು ಸುರಿಸಿದಳೇ ಹೊರತು ಯಾವಮಾತನ್ನೂ ಆಡಲಿಲ್ಲ. ಆ ಮೌನದಲ್ಲಿ ಬೇಕಾದಷ್ಟು ವಾಗ್ಮಿತೆಯಿತ್ತು; ಭರ್ತ್ಸನೆಯಿತ್ತು.

ಸ್ವಲ್ಪ ಹೊತ್ತಿನಮೇಲೆ ಓಬಯ್ಯ ಬಂದು 'ಸೀತಮ್ಮ ಮನೆಯಲ್ಲಿ ಇಲ್ಲ. ನಿನ್ನೆ ರಾತ್ರಿ ಮಲಗಿಕೊಂಡವರು ಬೆಳಗ್ಗೆ ನೋಡಿದರೆ ಮಾಯವಾಗಿ ಬಿಟ್ಟಾರೆ. ಭೂತರಾಯನ ಚೇಷ್ಟೆಯೋ ಏನೋ ಗೊತ್ತಿಲ್ಲ! ಬೆಳಿಗ್ಗೆ ಎಲ್ಲೆಲ್ಲಿ ಹುಡುಕಿದರೂ ಸಿಕ್ಕಲಿಲ್ಲ. ಇಲ್ಲಿಗೇನಾದರೂ ಬಂದಾರೇನು ಕೇಳಿಕೊಂಡು ಬಾ ಎಂದು ಗೌಡರು ಹೇಳಿಕಳ್ಸಿದರು' ಎಂದು ಕಲ್ಲು ಕಣ್ಣೀರು ಕರೆಯುವಂತೆ ಅತ್ತನು. ತಾನು ಹಿಂದಿದ್ದ ಮನೆಯನ್ನು ನೋಡಿದೊಡನೆ ಅವನ ಮನಸ್ಸಿನಲ್ಲಿ ದುಃಖೋದ್ರೇಕವಾದ ಸ್ಮೃತಿ ಮೂಡಿದ್ದಿತು.

ಸೋಮನಿಂದ ಎಲ್ಲವನ್ನೂ ತಿಳಿದುಕೊಂಡ ಓಬಯ್ಯ ಕಾನೂರಿಗೆ ಹಿಂತಿರುಗಿ ಬಂದು, ಕಣ್ಣೀರು ಕರೆಯುತ್ತಿದ್ದ ರಾಮಯ್ಯನಿಗೂ ಖಿನ್ನರಾಗಿದ್ದ ಚಂದ್ರಯ್ಯ ಗೌಡರಿಗೂ ನಡೆದುದನ್ನೆಲ್ಲ ವಿಶದವಾಗಿ ತಿಳಿಸಿ, ಮುತ್ತಳ್ಳಿಯಿಂದ ಶಾಮಯ್ಯ ಗೌಡರೆ ಮೊದಲಾದವರು ಬಂದಿರುವುದನ್ನು ಹೇಳಿದನು. ಸೀತೆ ಬದುಕಿದ್ದಾಳೆ ಎಂಬುದನ್ನು ಕೇಳಿ ತಂದೆ ಮಕ್ಕಳಿಬ್ಬರಿಗೂ ಒಂದು ಎದೆ ಭಾರ ತೊಲಗಿದಂತಾಯಿತು.

ಜೊತೆಗೆ, ಚಂದ್ರಯ್ಯಗೌಡರಲ್ಲಿ — ತನ್ನ ಸೊಸೆ ಅನ್ಯರ, ಅದರಲ್ಲಿಯೂ ತನಗಾಗದವರ, ಮನೆಗೆ ರಾತ್ರಿ ಓಡಿಹೋಗಿ ಅಲ್ಲಿರುವುದೆಂದರೇನು? ಎಂಥ ನಾಚಿಕೆಗೇಡು? ಅವಳನ್ನು ಕೂಡಲೇ ಹಿಂದಕ್ಕೆ ಕರತರಬೇಕು. ಇಲ್ಲದಿದ್ದರೆ ತವರು ಮನೆಗೆ ಕಳಿಸಬೇಕು — ಎಂಬಾಲೋಚನೆಯ ಕರುಬೂ ತಲೆಯೆತ್ತಿತು.

ಮತ್ತೆ ಓಬಯ್ಯನೊಡನೆ ತಮ್ಮ ಇಷ್ಟವನ್ನು ಅಪ್ಪಣೆಯ ರೀತಿಯಿಂದ ಹೇಳಿ ಕಳಿಸಿದರು. ಅವನು ಹೋಗಿ ಹಿಂತಿರುಗಿ ಬಂದು, 'ನಮ್ಮ ಹುಡುಗಿಯನ್ನು ನಾವು ಏನಾದರೂ ಮಾಡುತ್ತೇವೆ; ಎಲ್ಲಿಯಾದರೂ ಇಡುತ್ತೇವೆ. ಬಾಯಿ ಮುಚ್ಚಿಕೊಂಡು ತೆಪ್ಪಗೆ ಕೂತುಕೊಳ್ಳಬೇಕಂತೆ ಅಂತಾ ಹೇಳು ನಿಮ್ಮ ಗೌಡರಿಗೆ' ಎಂದು ಹೇಳಿದರೆಂದೂ, ನಿಮ್ಮ ಮೇಲೆ ಕ್ರಿಮಿನಲ್ ಕೇಸು ಮಾಡುತ್ತಾರಂತೆ

ಎಂದೂ, ನೀವು ಅವರಿಗೆ ಕೊಡಬೇಕಾದ ಸಾಲಕ್ಕೆ ದಾವಾ ಹಾಕುತ್ತಾರಂತೆ ಎಂದೂ ವರದಿ ಹೇಳಿದನು.

ಒಂದೆರಡು ವರ್ಷಗಳ ಹಿಂದೆ ಆಗಿದ್ದರೆ ಚಂದ್ರಯ್ಯಗೌಡರು ಎಷ್ಟು ಪ್ರತಾಪ ತೋರಿಸುತ್ತಿದ್ದರೋ, ಮೀಸೆ ತಿರುವುತ್ತಿದ್ದರೋ, ದೊಂಬಿ ನಡೆಸುತ್ತಿದ್ದರೋ? ಆದರೆ ಈಗ ಹಾಗೇನೂ ಮಾಡಲಿಲ್ಲ. "ಹೆಣ್ಣುಗಳಿಗೇನಂತೆ ಬರಗಾಲ? ಅವರ ಹುಡುಗೀನ ಅವರು ಉಪ್ಪಿನಕಾಯಿ ಹಾಕಿ ಇಟ್ಟುಕೊಳ್ಳಲಿ. ನನ್ನ ಮಗನಿಗೆ ಬೇರೆಕಡೆ ಹೆಣ್ಣು ಸಿಕ್ಕೋದಿಲ್ಲೇನು ನೋಡುತ್ತೇನೆ!" ಎಂದು ಸೇರೆಗಾರರ ಕಡೆ ತಿರುಗಿ, "ಇವತ್ತು ಆ ಹಳ್ಳ ಸರಿಮಾಡಬೇಕಿತ್ತು. ಆಳುಗಳು ಬಂದ್ರೇನ್ರೀ?" ಎಂದರು.

"ಹೌದಲ್ದಾ, ಆಗ್ಲೆ ಕೆಲಸಕ್ಕೆ ಹೋಗಿದ್ದಾರಂಬ್ರು" ಎಂದು ಸೇರೆಗಾರರು ಅಂಗಳಕ್ಕೆ ಪಿಚಕ್ಕನೆ ಎಲೆಯಡಿಕೆ ಉಗುಳಿ ಹೊರಗೆ ಹೋದರು.

ಅಲ್ಲಿಯೆ ಕೆಸರುಹಲಗೆಯಮೇಲೆ ತಲೆಬಾಗಿ ಕುಳಿತಿದ್ದ ರಾಮಯ್ಯ ಎಲ್ಲವನ್ನೂ ಆಲಿಸಿದ್ದನು. ಆದರೆ ಒಂದು ಮಾತನ್ನೂ ಆಡಿರಲಿಲ್ಲ. ತಂದೆಯ ಮೇಲೆ ಜುಗುಪ್ಸೆ, ಕೋಪ, ತಿರಸ್ಕಾರ ಎಲ್ಲವೂ ಒಟ್ಟಿಗೆ ಉಕ್ಕುತ್ತಿದ್ದುವು ಅವನ ಹೃದಯದಲ್ಲಿ.

ಸೇರೆಗಾರರು ಕಣ್ಮರೆಯಾದೊಡನೆ ತಂದೆಯ ಕಡೆ ತಿರುಗಿ, "ಅಂತೂ ನಿಮ್ಮಿಂದ ಮನೆ ಹಾಳಾಯ್ತು!" ಎಂದನು.

"ನಿನ್ನಜ್ಜನ ಮನೆ ಗಂಟಲ್ಲೋ; ನಾ ಮಾಡಿದ್ದು ನಾ ಹಾಳುಮಾಡ್ದೆ. ನೀನ್ಯಾರೋ ಕೇಳೋಕೆ?" ಎಂದರು ಗೌಡರು.

"ನೀವೊಬ್ಬರೇ ಹಾಳಾಗಿಹೋಗಿದ್ರೆ ನನ್ನ....ಹೋಯ್ತು ಅಂತಿದ್ದೆ. ನನ್ನನ್ನೂ ಹಾಳುಮಾಡಿದಿರಿ. ಕೈಹಿಡಿದವರನ್ನೂ ಹಾಳು ಮಾಡಿದಿರಿ. ಮನೆಯನ್ನೆಲ್ಲ ಒಡೆದು ಪಾಲುಮಾಡಿದಿರಿ. ನಿಮ್ಮ ದೆಸೆಯಿಂದ ಎಷ್ಟು ಜನ ಹಾಳಾಗಿ ಹೋದರು? ಇನ್ನೆಷ್ಟು ಹಾಳಾಗಿಹೋಗ್ಬೇಕೋ ಆ ದೇವರಿಗೇ ಗೊತ್ತು? ನೀವು ನರಳೀ ನರಳೀ ಕೊಳತೇ ಸಾಯ್ತೀರಿ ಅಂತ ಕಾಣ್ತದೆ!" ಎಂದು ರಾಮಯ್ಯ ಮುಖಕ್ಕೆ ಕಲ್ಲೆಸೆಯುವಂತೆ ಕ್ರೂರವಾಗಿ ಮಾತುಗಳನ್ನೆಸೆದನು.

ಆ ಒಂದೊಂದು ಮಾತೂ ಸತ್ಯವಾಗಿ ತೋರಿದ್ದರಿಂದಲೆ ಚಂದ್ರಯ್ಯಗೌಡರಿಗೆ ಸಿಟ್ಟು ಮತ್ತೂ ಉಕ್ಕಿತು. ಬಾಯಿಗೆ ಬಂದಹಾಗೆ ಬಯ್ಯತೊಡಗಿದರು; ಶಾಪ ಹಾಕಿದರು. ದೇಹ ತುಂಬಾ ನಿರ್ಬಲವಾಗಿದ್ದುದರಿಂದ ಇನ್ನೇನನ್ನು ಮಾಡಲೂ ಅವರಿಂದ ಸಾಧ್ಯವಾಗುವಂತಿರಲಿಲ್ಲ.

ರಾಮಯ್ಯ ಪರಸ್ಪರ ವಿರುದ್ಧವಾದ ಭಾವಾವೇಗಗಳಿಂದ ಹರಿದ ಹೃದಯ

ನಾಗಿ ಉರಿಯುತ್ತಾ, ಅಳುತ್ತಾ ದಡದಡನೆ ಏಣಿಮೆಟ್ಟಲು ಏರಿ, ಉಪ್ಪರಿಗೆಗೆ ಹೋದನು. ಅವನಿಗೆ ಯಾರಾದರೊಬ್ಬರನ್ನು ಗುಂಡಿನಿಂದ ಹೊಡೆಯಬೇಕೆನ್ನಿಸಿತ್ತು. ತನ್ನನ್ನೋ? ತಂದೆಯನ್ನೋ? ಹೂವಯ್ಯನನ್ನೋ? ಸೀತೆಯನ್ನೋ? ಯಾರನ್ನೋ?

ಹಿಂದಿನ ರಾತ್ರಿಯ ತನ್ನ ಆಲೋಚನೆಗಳು ಮತ್ತೆ ಮನಸ್ಸಿಗೆ ಬಂದುವು. ಮೊಳೆಗೆ ತಗುಲಿಹಾಕಿದ್ದ ತನ್ನ ಅಂಗಿಯ ಜೇಬಿಗೆ ಕೈಹಾಕಿ ಒಂದು ಕಾಗದವನ್ನು ಹೊರಗೆ ತೆಗೆದನು. ಓದಿದನು. ಆ ಕಾಗದ ಸೀತೆ ತನ್ನ ಮದುವೆಗೆ ಮೊದಲು, ಅದರಿಂದ ತನ್ನನ್ನು ಪಾರುಮಾಡಬೇಕೆಂದು ಬೇಡಿ, ಹೂವಯ್ಯನಿಗೆ ಬರೆದಿದ್ದು, ಬಿದಿಯ ಮೋಸದಿಂದ ತನ್ನ ಕೈಗೆ ಬಿದ್ದುದಾಗಿತ್ತು.

"ಇದನ್ನು ಹೂವಯ್ಯನಿಗೆ ಕೊಡುತ್ತೇನೆ. ಸೀತೆ ತನ್ನನ್ನು ಎಂದೂ ಒಲಿದುದಿಲ್ಲವೆಂದು ಹೇಳುತ್ತೇನೆ. ತಾನು ಅವಳನ್ನು ನಿಜವಾಗಿಯೂ ಮದುವೆಯಾಗಿಲ್ಲವೆಂದೂ, ತಾನು ತಾಳಿ ಕಟ್ಟಲಿಲ್ಲವೆಂದೂ, ಎಲ್ಲವೂ ವೆಂಕಪ್ಪಯ್ಯ ಜೋಯಿಸರ ಮತ್ತು ತನ್ನ ತಂದೆಯ ಒಳಸಂಚಿನ ಪ್ರಸಾದವೆಂದೂ ತಿಳಿಸುತ್ತೇನೆ. ಮದುವೆಯ ಧಾರಾಮಂಟಪದಲ್ಲಿ ತನಗಾದ ಅನುಭವವನ್ನೂ ಹೇಳಿ ತಪ್ಪನ್ನೊಪ್ಪಿಕೊಂಡು, ಅಣ್ಣಯ್ಯನ ಕ್ಷಮೆಬೇಡಿ, ಈ ದುಃಸ್ವಪ್ನದಿಂದ ಪಾರಾಗುತ್ತೇನೆ" ಎಂದು ಮೊದಲಾದ ಚಿಂತನೆಗಳನ್ನು ಹೊತ್ತುಕೊಂಡೇ ಉಪ್ಪರಿಗೆಯಿಂದ ದಡಬಡನೆ ಕೆಳಗಿಳಿದನು.

ಚಂದ್ರಯ್ಯಗೌಡರು ಮೊದಲಿದ್ದಲ್ಲಿಯೇ ಬೈಯುತ್ತಾ ಕೂತಿದ್ದುದನ್ನು ಕಂಡು, ಹಟಕ್ಕಾಗಿಯೆ ಅವರ ಮುಂದೆ ಹೋಗಿ ನಿಂತು, ತಾನು ಕೆಳಕಾನೂರಿಗೆ ಹೊರಟಿದ್ದ ಉದ್ದೇಶವನ್ನೆಲ್ಲಾ ಒದರಿಬಿಟ್ಟು, ಅಲ್ಲಿಂದ ತಟಕ್ಕನೆ ಹೆಬ್ಬಾಗಿಲಿನ ಕಡೆಗೆ ತಿರುಗಿ ನಡೆದನು.

ಗೌಡರು ಸಿಡಿಲೆರಗಿದವರಂತೆ ಅಪ್ರತಿಭರಾದರು. ಯಾರಾದರೂ ಘಕ್ಕನೆ ಅವರ ಹೃದಯ ಶ್ವಾಸಕೋಶಗಳನ್ನು ಕಿತ್ತುಹಾಕಿದ್ದರೂ ಅವರಿಗೆ ಹಾಗಾಗುತ್ತಿರಲಿಲ್ಲ. ವಿಕಾರಧ್ವನಿಯಿಂದ "ದಮ್ಮಯ್ಯ, ಮಾರಾಯ, ಅಷ್ಟುಪಕಾರ ಮಾಡೂ! ನಿನ್ನ ಕಾಲಿಗೆ ಬೀಳ್ತೀನಿ! ಖಂಡಿತಾ ಬೇಡ! ಬೇಡಾ!" ಎಂದು ಕೂಗುತ್ತಾ ಓಡಿಹೋಗಿ ರಾಮಯ್ಯನ ಕೈಗಳನ್ನು ಭದ್ರವಾಗಿ ಹಿಡಿದು ಅಳುದನಿಯಿಂದ "ಅಯ್ಯೋ, ಮಗನೆ, ನಿನಗಾಗಿ ಅಲ್ಲೇನೋ ನಾ ಇಷ್ಟೆಲ್ಲ ಮಾಡಿದ್ದು. ನನ್ನ ಕುತ್ತಿಗೆ ಕುಯ್ಯಬೇಡೋ, ಹೆತ್ತ ಹೊಟ್ಟೆಗೆ ಕಿಚ್ಚಿಡ ಬೇಡೋ. ನಿನ್ನ ದಮ್ಮಯ್ಯ, ತಣ್ಣಗೆ ಕಣ್ಣು ಮುಚ್ಚಿಕೊಳ್ತೀನಿ! ಆಮೇಲೆ ಏನಾದ್ರೂ ಮಾಡಿಕೊ. ನಿನ್ನ ಮನೆ, ನಿನ್ನ ಆಸ್ತಿ ಎಲ್ಲಾ ನಿನ್ದೇ; ನನ್ದೇನಿದೆಯೋ, ಅಯ್ಯೋ" ಎಂದು ಸುಸ್ತಾಗಿ ಕುಳಿತುಬಿಟ್ಟರು.

ರಾಮಯ್ಯ ಹೆಬ್ಬಾಗಿಲು ದಾಟಲಿಲ್ಲ. ಇದ್ದಕ್ಕಿದ್ದಹಾಗೆ ದಿನದಿನವೂ, ಉರಿಯುವ ಮೇಣದ ಬತ್ತಿ ಕರಗುವಂತೆ, ಹೆಚ್ಚು ಹೆಚ್ಚು ಕೃಶವಾಗುತ್ತಿದ್ದ ತಂದೆಯ ಮೇಲಣ ಕನಿಕರದಿಂದ ಅಕ್ಕರೆಯುಕ್ಕಿದಂತಾಯಿತು. ಕುಸಿದು ಕುಳಿತಿದ್ದ ಅವರನ್ನು ಕೈಹಿಡಿದು ಜಗುಲಿಗೆ ನಡೆಸಿಕೊಂಡು ಹೋಗಿ ಮಲಗಿಸಿದನು.

* * * *

ರಾಮಯ್ಯ ಒಂದುವೇಳೆ ಕೆಳಕಾನೂರಿಗೆ ಹೋಗಿದ್ದರೂ ಅವನು ಹಾರೈಸಿದ್ದಂತೆ ಮಾಡಲಾಗುತ್ತಿರಲಿಲ್ಲ. ಹೂವಯ್ಯನಿಗೆ ಸೀತೆಯ ಕಾಗದವನ್ನು ಕೊಟ್ಟು, ಮದುವೆಯ ಮೋಸವನ್ನೆಲ್ಲ ವಿಸ್ತರಿಸಿ ಹೇಳಿ, ತಪ್ಪನ್ನೊಪ್ಪಿಕೊಂಡು, ಅವನ ಕ್ಷಮೆ ಬೇಡುತ್ತೇನೆ ಎಂದು ಮೊದಲಾಗಿ ತಾನು ಕಲ್ಪಿಸಿದ್ದಂತೆ ನಾಟಕೀಯವಾಗಿ ವರ್ತಿಸಲು ತಕ್ಕ ರಂಗವಾಗಲಿ, ಸನ್ನಿವೇಶವಾಗಲಿ ಅಲ್ಲಿರುತ್ತಿರಲಿಲ್ಲ. ಅದಕ್ಕೆ ಬದಲಾಗಿ ನಾಗಮ್ಮನವರ ಮರಣಶಯ್ಯೆಯ ಪಕ್ಕದಲ್ಲಿ ದುಃಖಭಾರದಿಂದ ಕುಸಿದು ಕುಗ್ಗಿ ಕುಳ್ಳಿರುತ್ತಿದ್ದ ಹೂವಯ್ಯನನ್ನು ಕಾಣುತ್ತಿದ್ದನು!

ಹಿಂದಿನ ದಿನ ಹೂವಯ್ಯ ಸೀತೆಮನೆಗೆ ಹೋಗಿದ್ದಾಗ ತಾವು ಮಾಡಿಕೊಂಡಿದ್ದ ಅಪಥ್ಯಗಳ ದೆಸೆಯಿಂದ ನಾಗಮ್ಮನವರಿಗೆ ಕಾಯಿಲೆ ಮರುದಿನ ಜೋರಾಯಿತು. ಅವನು ಸೀತೆಗೆ ಶುಶ್ರೂಷೆ ಮಾಡುತ್ತಿದ್ದಾಗಲೆ ಪುಟ್ಟಣ್ಣ ಬಂದು ಹೂವಯ್ಯನ ಕಿವಿಯಲ್ಲಿ ಪಿಸುಮಾತನಾಡಿದನು. ಸ್ವಲ್ಪ ಹೊತ್ತಿನೊಳಗಾಗಿ ಶಾಮಯ್ಯಗೌಡರು, ಗೌರಮ್ಮನವರು, ಚಿನ್ನಯ್ಯ ಇವರನ್ನು ತನ್ನ ಕೊಟಡಿಯಲ್ಲಿ ಸೀತೆಯ ಬಳಿ ಬಿಟ್ಟು, ತಾನು ತಾಯಿಯ ಬಳಿಗೆ ಹೋದನು.

ನಾಗಮ್ಮನವರಿಗೆ ವಾಂತಿ, ಓಕರಿಕೆ, ಕೆಮ್ಮು, ಬದಿಶೂಲೆ ಎಲ್ಲವೂ ಅಗುರ್ವಿಸಿ, ಜ್ವರ ವಿಷಮಾವಸ್ಥೆಗೆ ಏರುತ್ತಿತ್ತು. ಹೂವಯ್ಯ ತನಗೆ ತಿಳಿದಿದ್ದ ಔಷಧಿಗಳಲ್ಲಿ ನಾಗಮ್ಮನವರು ಸಮ್ಮತಿಸಿದವುಗಳನ್ನು ಪ್ರಯೋಗ ಮಾಡತೊಡಗಿದನು. ಆದರೂ ಸನ್ನಿಯ ಛಾಯೆಗೆ ತಿರುಗಿ, ನಾಗಮ್ಮನವರು ಅಸಂಬದ್ಧವಾಗಿ ಹಲವರಿಯತೊಡಗಿದರು.

"ಎಲ್ಲ ಭೂತರಾಯನ ಚೇಷ್ಟೆ ಕಣೋ! ಅದಕ್ಕೆ ಕೊಡೋ ಆಯಾರಾನ ಕೊಡದೆ ಮೋಸಮಾಡಿ ಇಟ್ಟುಕೊಂಡಿಯಲ್ಲೋ! ಅದಕ್ಕೆ ಬದಲಾಗಿ ನನ್ನ ತಗೊಂಡುಹೋಗ್ದೆ ಇರ್‍ತದೇನೋ? ಸಾಕು ಬಿಡೋ ನಿನ್ನ ಔಸ್ತೀ! ಔಸ್ತಿಯಿಂದ ಏನಾಗ್ತದೊ? . . . ನಾನು ಹೋದ್ರೂ ಚಿಂತೆಯಿಲ್ಲ ಕಣೋ! ನೀನು, ನಿನ್ನ ಹೋತ, ಸುಖವಾಗಿರ್‍ರೋ" ಎಂದು ಮೊದಲಾಗಿ ದೀರ್ಘವಾಗಿ ನರಳಲಾರಂಭಿಸಿದರು.

ಅದುವರೆಗೆ ಗಟ್ಟಿಮನಸ್ಸು ಮಾಡಿಕೊಂಡಿದ್ದ ಹೂವಯ್ಯನ ಎದೆ ಅಂದು

ಕರಗಿಹೋಯಿತು. ಅವನಿಗೆ ತನ್ನ ತಾಯಿಯ ಜೀವ ನೂರು ಬಲೀಂದ್ರ ಹೋತಗಳ ಜೀವಕ್ಕಿಂತಲೂ ಹೆಚ್ಚು ಪ್ರಿಯಕರವಾಗಿತ್ತು. ಹಿಂದೆ ತಾಯಿ ಎಷ್ಟು ಹೇಳಿದ್ದರೂ ಅದನ್ನು ಭೂತಕ್ಕೆ ಬಲಿಕೊಡದೆ ಇದ್ದುದು ಒಂದು ತತ್ತ್ವಕ್ಕಾಗಿದ್ದಿತೇ ಹೊರತು ಮತ್ತೇನೂ ಅಲ್ಲ. ಮನಃಶಾಸ್ತ್ರದ ಪರಿಚಯವಿದ್ದ ಆತನಿಗೆ ಈಗಲಾದರೂ ಬಲೀಂದ್ರ ಹೋತವನ್ನು ಬಲಿಕೊಟ್ಟರೆ ತಾಯಿಯ ನಂಬುಗೆಯ ಬಲದಿಂದ ರೋಗ ಗುಣವಾದರೂ ಆಗಬಹುದು ಎಂದು ಆಲೋಚಿಸಿ, ಬಲೀಂದ್ರ ಹೋತವನ್ನು ಭೂತಕ್ಕೆ ಒಡನೆಯೆ ಬಲಿಕೊಡುವುದಾಗಿ ತಾಯಿಗೆ ಮಾತು ಕೊಟ್ಟು, ಆ ಕಾರ್ಯಕ್ಕೆ ಸೋಮನನ್ನೂ ಬೈರನನ್ನೂ ನೇಮಿಸಿದನು!

ಅದನ್ನು ಕೇಳಿದೊಡನೆ ನಾಗಮ್ಮನವರಲ್ಲಿ ಬದಲಾವಣೆ ಕಾಣಿಸಿಕೊಂಡಿತು. ಬಹುಕಾಲದಿಂದಲೂ ತಮ್ಮಿಂದ ಸಾಧ್ಯವಾಗದಿದ್ದ ಒಂದು ವಿಷಯದಲ್ಲಿ ಕಟ್ಟಕಡೆಗೆ ಜಯಹೊಂದಿದ ಅನುಭವವಾಗಿ, ಅವರಿಗೆ ಹರ್ಷವಾಯಿತು.

ಆದರೆ ಎಲ್ಲೆಲ್ಲಿ ಹುಡುಕಿದರೂ ಎಷ್ಟು ಕರೆದರೂ ಬಲೀಂದ್ರ ಹೋತದ ಸುಳಿವೇ ಸಿಕ್ಕಲಿಲ್ಲ. ಆ ಉದ್ವೇಗದಲ್ಲಿ, ಆ ಗಡಿಬಿಡಿಯಲ್ಲಿ, ಕೆಳಕಾನೂರಿಗೆ ಅನತಿದೂರದಲ್ಲಿ, ಕಾಡಿನಂಚಿನಲ್ಲಿ ಹೊದರು ಗಿಡಗಳ ಮಧ್ಯೆ ಸೇರೆಗಾರರ ಗುಂಡಿನೇಟಿನಿಂದ ಮಡಿದು ಬಿದ್ದಿದ್ದ ಬಲೀಂದ್ರನನ್ನು ಪತ್ತೆಮಾಡುವ ತಾಳ್ಮೆಯಾಗಲಿ, ತೆರಪಾಗಲಿ ಯಾರಿಗೂ ಇರಲಿಲ್ಲ. ಆ ವಿಚಾರವನ್ನು ತಿಳಿದಿದ್ದ ನಾಯಿಗಳಿಗೆ (ಅವುಗಳಾಗಲೆ ಹೋತದ ಭಾಗವನ್ನು ಫಳಾರಮಾಡಿದ್ದುವು.) ಹೇಳಲು ಬಾಯಿರಲಿಲ್ಲ.

ಸಾಯಂಕಾಲದ ಹೊತ್ತಿಗೆ ಬಲೀಂದ್ರ ಕಣ್ಮರೆಯಾದ ಸಂಗತಿ ನಾಗಮ್ಮನವರಿಗೂ ತಿಳಿಯಿತು. ಈ ಮಧ್ಯೆ ರೋಗದ ತೀವ್ರತೆಯ ಚಿಹ್ನೆ ಯಾವ ವಿಧದಲ್ಲಿಯೂ ಕಡಮೆಯಾಗಿರದಿದ್ದರೂ ಹಲವರಿಯುವುದು ಕಡಮೆಯಾಗಿತ್ತು. ವಿಷಯ ತಿಳಿದಮೇಲೆ ಅದೂ ಹೆಚ್ಚಾಗುತ್ತಾ ಬಂದಿತು.

ರಾತ್ರಿ ಕಾಹಿಲೆಯ ಸ್ಥಿತಿ ಇನ್ನೂ ಜೋರಾಯಿತು. ಸರದಿಯ ಮೇಲೆ ಜನರು ಕಾಯುತ್ತಿದ್ದರು. ಸುಮಾರು ಎರಡು ಗಂಟೆಯ ಹೊತ್ತಿಗೆ ಹೂವಯ್ಯ ಎಚ್ಚತ್ತು, ಕಾವಲು ಕೂತು ಶುಶ್ರೂಷೆ ಮಾಡುತ್ತಿದ್ದಾಗ, ನಾಗಮ್ಮನವರು ಮಗನ ಕೈಹಿಡಿದುಕೊಂಡು "ಅಪ್ಪಾ, ನಾನೇನೊ ಹೋಗ್ತೀನಿ. ನಿನ್ನ ಗತಿ ಏನು?" ಎಂದರು. ಅವರ ಕಣ್ಣಿನಲ್ಲಿ ನೀರು ಸುರಿದಿತ್ತು.

ಹೂವಯ್ಯ ಮಾರ್ನುಡಿಯದೆ ಅಳುತ್ತಿದ್ದನು.

ನಾಗಮ್ಮನವರು ತುಸು ಹೊತ್ತು ಸುಮ್ಮನಿದ್ದು "ನೀನು ಮದುವೆ ಮಾಡಿಕೊಳ್ತೀನಿ ಅಂತಾ ಮಾತುಕೊಟ್ಟಿದ್ರೆ ಯತೆಯಿಲ್ಲದೆ ಸಾಯ್ತಿದ್ದೆ" ಎಂದು ಮಗನನ್ನು

ಅನಂತ ಆಕಾಂಕ್ಷೆಯಿಂದ ನಿರೀಕ್ಷಿಸಿ "ಅವರಿದ್ದಿದ್ರೆ (ಹೂವಯ್ಯನ ತಂದೆ) ನಿನಗೆ ಮದುವೆಯಾಗ್ತಿತ್ತು. ನಾನೂ ಮೊಮ್ಮಕ್ಕಳನ್ನು ನೋಡಿಕೊಂಡೇ ಸಂತೋಷ ದಿಂದ ಸಾಯ್ತಿದ್ದೆ" ಎಂದು ಬಿಕ್ಕಿ ಬಿಕ್ಕಿ ಅಳತೊಡಗಿದರು.

ಆ ಜ್ವರದ ಸ್ಥಿತಿಯಲ್ಲಿ ಅವರಿಗೆ ಅಳುವುದು ತುಂಬಾ ಆಯಾಸಕರವಾಗಿತ್ತು. ಹೂವಯ್ಯನಿಗೆ ಸಹಿಸಲಾಗಲಿಲ್ಲ.

"ಆಗಲವ್ವಾ ನೀ ಹೇಳಿದಹಾಗೇ ಮಾಡ್ತೀನಿ!... ಅಳಬೇಡ... ಕಾಯಿಲೆ ಜೋರಾಗ್ತದೆ" ಎಂದು ಸಾಯುತ್ತಿದ್ದ ತಾಯಿಗೆ ಗಡಿಬಿಡಿಯಲ್ಲಿ ತಾನು ಕೊಡುವ ಮಾತಿನ ವ್ಯಾಪನೆಯನ್ನಾಗಲಿ ಜಟಿಲತೆಯನ್ನಾಗಲಿ ಅರಿಯಲವಕಾಶವಿಲ್ಲದೆ, ಕುದಿಬಗೆಯಲ್ಲಿ ಮಾತುಕೊಟ್ಟುಬಿಟ್ಟನು. ಆದರೆ ಹಾಗೆ ಮಾಡಿದ್ದು ಮಂತ್ರ ದಂತೆ ಕೆಲಸಮಾಡಿತು. ಇದ್ದಕ್ಕಿದ್ದಂತೆ ಯಾವುದೊ ಒಂದು ಸಂತೃಪ್ತಿಯ ಶಾಂತಿ ಮಾತೆಯ ಮುಖದ ಸುತ್ತಲೂ ಸುಳಿದಾಡಿತು.

ಮರುದಿನ ಮಧ್ಯಾಹ್ನ ನಾಗಮ್ಮನವರು ತೀರಿಕೊಂಡರು. ಸಾಯುವ ಸಮಯದಲ್ಲಿ ಮಗನನ್ನು ಪ್ರೀತಿಯಿಂದ ನೋಡುತ್ತಾ, ಸಂತೋಷವಾಗಿ ಕಣ್ಣು ಮುಚ್ಚಿಕೊಂಡರಂತೆ.

## ೭೧

## ತವರುಮನೆಯ ಮುಳ್ಳಿನ ಹಾಸಗೆ

ಗದ್ದೆಯ ಕೊಯ್ಲಿನ ಕಾಲದ ಬಾನು ತಿಳಿದಿತ್ತು; ನೀಲಿ ಬೆಳೆದಿತ್ತು. ಅಲ್ಲಲ್ಲಿ, ಹೊಂದೆನೆಯ ಹಳದಿಯ ಪೈರನ್ನು ಕತ್ತರಿಸಿದ್ದುದರಿಂದ, ತಲೆಯ ಮೇಲೆ ಕ್ಷೌರದ ಪಟ್ಟೆ ಎಳೆದಿದ್ದಂತೆ ಬೋಳಾಗಿ ಕಾಣಿಸುತ್ತಿದ್ದರೂ, ಸುತ್ತಲೂ ವಿಸ್ತಾರವಾಗಿ ಅನಂತವಾಗಿ ಬೆಳೆದಿದ್ದ ಅರಣ್ಯಗಳಿಂದಲೂ ಕಣಿವೆಯ ಹುಲ್ಲುಗಾವಲುಗಳಿಂದಲೂ ನೆಲವೆಲ್ಲ ಹಸುರಾಗಿತ್ತು. ಇನ್ನೂ ನಡುಹಗಲಾಗಿರದಿದ್ದರೂ ಬಿಸಿಲು ಪ್ರಖರ ವಾಗಿಯೆ ಇತ್ತು. ಗದ್ದೆಯ ಕೋಗಿನಿಂದ ಮನೆಯ ಕಡೆಗೆ ಮರಗಳ ನಡುನಡುವೆ ತೂರಿಹೋಗುವ ಕಾಲ್ದಾರಿಯಲ್ಲಿ ತುಂಬು ಯೌವನದ ಗ್ರಾಮ್ಯತರುಣಿಯೊಬ್ಬಳು ನೆಲ್ಲುಹುಲ್ಲಿನ ಒಂದು ದೊಡ್ಡ ಹೊರೆಯನ್ನು ಹೊತ್ತು ಸ್ವಲ್ಪ ನಿಧಾನವಾಗಿಯೆ ಎಂಬಂತೆ ಸಾಗುತ್ತಿದ್ದಳು. ಆಕೆ ಮೆಲ್ಲಗೆ ಹೋಗುತ್ತಿದ್ದುದು ಹೊರೆಯ ಭಾರ ದಿಂದಾಗಿರಲಿಲ್ಲ; ಆಯಾಸದಿಂದಾಗಿರಲಿಲ್ಲ; ಚಿಂತೆಯಿಂದಾಗಿತ್ತು.

ಹೊತ್ತ ಹುಲ್ಲಿನ ಹೊರೆಯ ದೆಸೆಯಿಂದ ಕರಿಯ ಸೀರೆಯ ತುಂಡಿನಿಂದ

ಬಿಗಿದು ತಳಾಲೆ (ಹೆಂಗಸರು ಕೆಲಸ ಮಾಡುವಾಗ ಹಾಕಿಕೊಳ್ಳುವ ಹಾಳೆಯ ತಲೆಯುಡೆ; ಒಂದು ತೆರನಾದ ಶಿರತ್ರ) ಹಾಕಿಕೊಂಡಿದ್ದ ಆಕೆಯ ಮಂಡೆಯಾಗಲಿ ಮುಖವಾಗಲಿ ಹೊರಗೆ ಕಾಣುತ್ತಿರಲಿಲ್ಲ. ಆಕೆಗೂ ಕಾಣಿಸುತ್ತಿದ್ದುದು ತನ್ನ ಮುಂದಿರುತ್ತಿದ್ದ ಒಂದೆರಡು ಮಾರು ದೂರದ ದಾರಿ ಮಾತ್ರ. ಹುಲ್ಲಿನ ಹೊರೆ ನಾಲ್ಕು ಕಡೆ ಬಾಗಿ ಮುಚ್ಚಿಕೊಂಡಿತ್ತು. ಹೆಜ್ಜೆಯಿಟ್ಟಂತೆಲ್ಲ ಅದರ ತೆನೆಯ ತುದಿಗಳು ಕುಣಿದಾಡಿ ಸದ್ದುಗೈಯುತ್ತಿದ್ದುವು.

ಕಂಠದ ಕೆಳಗೆ ಕಾಣಿಸುತ್ತಿದ್ದ ಆಕೆಯ ಆಕೃತಿ ತುಂಬಾ ವಾಗ್ಮಿಯಾಗಿತ್ತು. ಆಕೆಯ ಮೈಕಟ್ಟು ಸುಪುಷ್ಟವಾಗಿ ರಸ ತುಂಬಿ ತುಳುಕಲಿರುವ ಹಣ್ಣಿನ ನೆನಪು ತರುವಂತಿತ್ತು. ಹಾಕಿಕೊಂಡಿದ್ದ ಮಾಸಲುರವಕೆ ತೋಳುಗಳನ್ನು ಬಿಗಿದು ಕಚ್ಚಿ ಹಿಡಿದುಕೊಂಡಂತಿತ್ತು. ಮತ್ತೂ, ಬಿರಿಯುವಂತೆ ಉಬ್ಬಿದ ಎದೆಗಳನ್ನು ಇನ್ನೇನು ಸೋತುಬಿಡುತ್ತೇನೆ, ಹರಿದುಹೋಗುತ್ತೇನೆ ಎಂಬಂತೆ ತಬ್ಬಿ ಹಿಡಿದಿತ್ತು. ಎದೆಯ ಮಧ್ಯೆ ಕರಿಮಣಿ ತಾಳಿಯೊಂದು ನೇತಾಡುತ್ತಿತ್ತು. ಆಕೆಯುಟ್ಟು ಕೊಂಡಿದ್ದ ಮಲೆನಾಡಿನುಡುಗೆಯ ಸೀರೆಯನ್ನು ನಸುಮೇಲೆಳೆದು ಸೊಂಟಕ್ಕೆ ಸಿಕ್ಕಿಸಿ ಬಿಗಿದಿದ್ದುದರಿಂದ, ನೆಲದಿಂದ ಮೇಲೆ ಸುಮಾರು ಒಂದು ಅಡಿಯವರೆಗೂ ಮಾಂಸಖಂಡಗಳಿಂದ ಸುತ್ತುವರಿದಿದ್ದ ಬಲವಾದ ಎಲುಬಿನ ಕಾಲುಗಳು ದಿಟ್ಟ ವಾಗಿ ಕಾಣುತ್ತಿದ್ದುವು. ನೆತ್ತಿಯಮೇಲಿದ್ದ ಹುಲ್ಲುಹೊರೆಯನ್ನು ತಬ್ಬಿಬಿಗಿದು ಹಿಡಿದುಕೊಂಡಿದ್ದ ಎರಡು ಕೈಗಳಲ್ಲಿಯೂ ಕಡಗಗಳೂ ಬಳೆಗಳೂ ಸದ್ದು ಮಾಡಲಾರದೆ ಬಾಯಿಮುಚ್ಚಿ ಹಿಡಿದುಕೊಂಡಂತಿದ್ದುವು. ರವಕೆಯಾಚೆಗೆ ಬರಿದಾಗಿದ್ದ ತೋಳುಗಳಲ್ಲಿ ಹಚ್ಚೆ ಕುಚ್ಚಿಸಿಕೊಂಡಿದ್ದ ಕರಿನೀಲ ಚಿತ್ರಗಳೂ ಚೆನ್ನಾಗಿ ಕಾಣುತ್ತಿದ್ದುವು.

ದೀರ್ಘವಾಗಿ ಆಲೋಚನೆ ಮಾಡುತ್ತ ಮಾಡುತ್ತ ತರುಣಿಯ ಚಲನೆ ಅತಿ ಮಂದವಾಗುತ್ತ ಬಂದಿತು. ಆಕೆ ತಾನಿದ್ದ ಸನ್ನಿವೇಶವನ್ನೆ ಮರೆತು ಬೇರೊಂದು ಜಗತ್ತಿನ ನಿವಾಸಿಯಾಗಿದ್ದಳು.

ಹಿಂದಿನಿಂದ 'ಓಹೋ ಏನಿದು, ಸುಬ್ಬಕ್ಕ? ಕುಗುರ್ತಾ ಹೋಗ್ತಿದ್ದೀಯಾ! ಬಿರುಬಿರನೆ ಹೋಗಬಾರ್ದೆ? ಗಂಡಸರು ಹೇಳಾಕೂ ನೀವು ಮಾಡಾಕೂ ಸರಿ ಯಾಗ್ತದೆ!' ಎಂಬ ಗಟ್ಟಿ ಮಾತುಗಳನ್ನು ಕೇಳಿ ಅತ್ತಿಗೆಯ ದನಿಯನ್ನು ಗುರುತಿಸಿಯೂ ತರುಣಿ ಮಾತಾಡದೆ, ಹಿಂತಿರುಗಿ ನೋಡದೆ, ಕನಸಿನಿಂದ ತಟಕ್ಕನೆ ಎಚ್ಚತ್ತವಳಂತಾಗಿ ಬೇಗ ಬೇಗನೆ ಕಾಲುಹಾಕತೊಡಗಿದಳು. ಹಿಂದಿನಿಂದ ಹುಲ್ಲು ಹೊರೆಯನ್ನು ಹೊತ್ತು ಬರುತ್ತಿದ್ದವಳೂ ಬೇಗ ಬೇಗನೆ ಬಳಿ ಸಾರಿದಳು. ಅವಳು ನೆಲ್ಲುಹಳ್ಳಿಯ ನೆರೆಮನೆ ಹೊರಮನೆ ವಿಚಾರಗಳನ್ನೆತ್ತಿ ಮಾತಾಡತೊಡಗಿದಳು.

ಆದರೆ ತರುಣಿ ಪಡಿನುಡಿಯದೆ ಸರಸರನೆ ಮುಂಬರಿದಳು. ಬತ್ತದ ತೆನೆಯ ಭಾರದ ನೆಲ್ಲುಹುಲ್ಲಿನ ಹೊರೆಗಳೆರಡೂ ಹೆಜ್ಜೆಹೆಜ್ಜೆಗೂ ತೆನೆಯುಜ್ಜಿ, ಒಣ ಹುಲ್ಲುಜ್ಜಿ, ಗಾಳಿಗೆ ಸುಯ್ ಸುಯ್ ಸದ್ದುಮಾಡುತ್ತಿದ್ದುವು.

ಆ ದಿನ ನೆಲ್ಲುಹಳ್ಳಿಯ ಪೆದ್ದೇಗೌಡರ ಮನೆಯಲ್ಲಿ ಕಂಬಳವಾಗಿತ್ತು. ವಾಡಿಕೆಯಂತೆ ನೆರೆಹೊರೆಯ ಮನೆಯವರೂ ಅವರ ಮನೆಗೆ ಪಡಿಗೆಲಸ ಮಾಡಿಕೊಡಲು ಬಂದಿದ್ದರು. ಎಲ್ಲರೂ ಸೇರಿ, ಮೂವತ್ತು ಜನರಮೇಲೆ ಪೈರು ಕುಯಿದು ಗದ್ದೆಯಿಂದ ಮನೆಯಬಳಿಯ ಕಣಕ್ಕೆ ಸಾಗಿಸುತ್ತಿದ್ದರು. ಗಂಡನ ಕ್ರೌರ್ಯಕ್ಕಂಜಿ ತವರು ಸೇರಿದ್ದ ಸುಬ್ಬಮ್ಮನೂ ಎಲ್ಲರಂತೆಯೆ ಗದ್ದೆಯಿಂದ ಹುಲ್ಲುಹೊರೆ ಹೊತ್ತುತಂದು ಕಣದಲ್ಲಿ ಬಣಬೆ ಹಾಕುತ್ತಿದ್ದವರಿಗೆ ಅವುಗಳನ್ನು ಕೊಡುವ ಕೆಲಸದಲ್ಲಿ ಬೆಳಗಿನಿಂದಲೂ ತೊಡಗಿದ್ದಳು.

ನೆಲ್ಲುಹಳ್ಳಿ ಕಾನೂರಿನಂತೆ ಒಂದೇ ಒಂದು ದೊಡ್ಡ ಹೆಂಚಿನ ಮನೆಯ ಹಳ್ಳಿಯಾಗಿರಲಿಲ್ಲ. ಸ್ವಲ್ಪ ದೂರ ದೂರವಾಗಿದ್ದರೂ ನಾಲ್ಕಾರು ಬಡ ಹುಲ್ಲು ಮನೆಗಳಿರುವ ಹಳ್ಳಿಯಾಗಿತ್ತು. ಆದ್ದರಿಂದ ಅಲ್ಲಿ ತಮ್ಮ ಮನೆಯವರಲ್ಲದವರ ವಿಚಾರವಾಗಿಯೂ ನಿಂದೆ ಕುತ್ಸಿತಗಳನ್ನೆಸಗಲು ಹೆಚ್ಚು ಅವಕಾಶವಿರುತ್ತಿತ್ತು; ಹಾಗೆಯೆ ಸ್ನೇಹಕ್ಕೂ ಅವಕಾಶವಿರುತ್ತಿತ್ತು.

ಬಣಬೆಯ ಮೇಲೆ ನಿಂತು ಕುತ್ತುರೆ ಹಾಕುತ್ತಿದ್ದ ದೂರದ ನೆರೆಯ ಯುವಕನೊಬ್ಬ ಹೊರೆ ಹೊತ್ತು ಬರುತ್ತಿದ್ದ ಸುಬ್ಬಮ್ಮನನ್ನು ದೂರದಿಂದಲೆ ಗುರುತಿಸಿ ಗಟ್ಟಿಯಾಗಿ, “ ಓ ಹೋ ಹೋ ನೋಡ್ರಪ್ಪಾ, ನಮ್ಮ ಕಾನೂರು ಹೆಗ್ಗಡಿತಮ್ಮನೋರು ಹೊರಲಾರದೆ ಹೊತ್ತುಕೊಂಡು ಬತ್ತಾರೆ ! ಏನಿದು ಹೆಗ್ಗಡಿತಮ್ಮೋರೇ ? ಗಂಟೆಗೊಂದು ಹುಲ್ಲುಹೊರೆ ತತ್ತೀರಿ ! ದೊಡ್ಡೋರು ಕೈಹಿಡಿದ ಕೂಡ್ಲೆ ಬಡೋರಿಗೆ ಬೊಜ್ಜು ಬಂದುಬಿಡ್ತದೆ ! ಆಮೇಲೆ ಒಂದು ಹೆಜ್ಜೆ ಹೋಗ್ಬೇಕಾದ್ರೆ ದಂಡಿಗೇನೆ ಬರಬೇಕು ” ಎಂದು ಮೊದಲಾಗಿ ಲೇವಡಿ ಮಾಡಿದನು.

ತನ್ನ ಒಂದೊಂದು ಮಾತಿನೇಟಿಯ ತಿವಿತಕ್ಕೂ ಸುಬ್ಬಮ್ಮನ ಹೃದಯ ಜಜ್ಜರಿತವಾಗಿ ನೆತ್ತರು ಬಸಿಯುತ್ತದೆ ಎಂಬುದು ಅವನ ಒರಟು ಬುದ್ಧಿಗೆ ಹೇಗೆ ತಿಳಿಯಬೇಕು ? ಅದರಲ್ಲಿಯೂ ಸಾಹುಕಾರರಾದ ಕಾನೂರು ಚಂದ್ರಯ್ಯಗೌಡರು ಕೇಳುವುದಕ್ಕೆ ಮೊದಲು ಸುಬ್ಬಮ್ಮನನ್ನು ತನಗೇ ಮದುವೆಮಾಡಿಕೊಡುತ್ತಾರೆಂದು ಗಾಳಿವದಂತಿ ಬೇರೆ ಇದ್ದಿತಂತೆ ಆ ಗ್ರಾಮ್ಯ ಯುವಕನಿಗೆ ! ಅದು ಬೇರೆ ಅವನ ಸರಸದ ಮಂಗನಿಗೆ ಏಣಿ ಹಾಕಿಕೊಟ್ಟಂತಿತ್ತು.

ಸುಬ್ಬಮ್ಮ ಹುಲ್ಲುಹೊರೆಯನ್ನು ಹೊತ್ತುತಂದು, ನಿಮಿಷ ನಿಮಿಷಕ್ಕೂ ಬೆಳೆಯುತ್ತಿದ್ದ ಬಣಬೆಗೆ ಚಾಚಿದ್ದ ಬಿದಿರೇಣಿಯನ್ನು ಮೆಲ್ಲನೆ ಏರಿ, ಹೊರೆಯನ್ನು

ಕುತ್ತುರೆ ಹಾಕುತ್ತಿದ್ದವರ ಬಳಿ ಹೊತ್ತುಹಾಕಿ, ಮುಖದಮೇಲೆ ಇಳಿಯುತ್ತಿದ್ದ ಬೆವರನ್ನು ಒರಸಿಕೊಳ್ಳುತ್ತಾ ಮರಳಿ ಏಣಿಯನ್ನಿಳಿಯುತ್ತಿದ್ದಳು. ಎರಡು ಮೆಟ್ಟಿಲಿಳಿಯುವುದರೊಳಗಾಗಿ ನಡುಹರೆಯದವನೊಬ್ಬ ಹುಲ್ಲುಹೊರೆ ಹೊತ್ತು ತಂದು ಏಣಿಯನ್ನೇರತೊಡಗಿದನು. ಸುಬ್ಬಮ್ಮ ಇಳಿಯುತ್ತಿದ್ದುದನ್ನು ಅವನು ನೋಡಿದ್ದರೂ ಬೇಕೆಂತಲೆ, ಒಂದು ಅರೆನಿಮಿಷ ನಿಂತು ಆಕೆಗೆ ಜಾಗ ಕೊಡಬಾರದೆಂದೇ ಏಣಿಯನ್ನೇರತೊಡಗಿದ್ದನು. ಕುತ್ತುರೆ ಹಾಕುತ್ತಿದ್ದವರೂ ಕೆಳಗಿದ್ದವರೂ ಹೆಂಗಸರೂ ಗಂಡಸರೂ ಎಲ್ಲರೂ ಸೇರಿ ಸುಬ್ಬಮ್ಮನದೇ ಉದ್ಧಟ ತನವೆಂದು ನಿರ್ಧರಿಸಿ, ಮೇಲೇರುತ್ತಿದ್ದವರಿಗೆ ಜಾಗ ಬಿಟ್ಟುಕೊಡುವಂತೆ ಗದರಿಸಿ ಕೂಗಿಕೊಂಡರು.

"ಏನು ದೌಲತ್ತು ಅವಳಿಗೆ ಹಾಂಗಾದ್ರೆ? ಒಬ್ಬ ಹೊರೆ ಹೊತ್ತುಕೊಂಡು ಹತ್ತುತ್ತಿರುವಾಗಲೆ ಬೇಕೆಂತ ಇಳೀತಿದ್ದಾಳಲ್ಲಾ!"

"ದೊಡ್ಡವರ ಕೈಹಿಡಿದ ಪಿತ್ತ ಇನ್ನೂ ಇಳೀಲಿಲ್ಲ ಅಂತ ಕಾಣ್ತದೆ."

"ಬರ್‍ತಾ ಬರ್‍ತಾ ಗಂಡುಬೀರಿ ಆಗ್ತಿದ್ದಾಳೆ?"

"ಯಾವನಾದ್ರೂ ಒಬ್ಬ ಕೈಕೊಟ್ರೆ, ಸೊಕ್ಕೆಲ್ಲ ಇಳಿದು ಹೋಗ್ತದೆ."

ಮಾತುಗಳಲ್ಲಿ ಒಂದೊಂದೂ ಸುಬ್ಬಮ್ಮನ ಕಿವಿಗೆ ಬೀಳದಿರಲಿಲ್ಲ. ಮಾತಾಡುತ್ತಿದ್ದವರ ಇಷ್ಟವೂ ಅವಳ ಕಿವಿಗೆ ಬೀಳಬೇಕೆಂಬುದೇ ಆಗಿತ್ತು.

ಸುಬ್ಬಮ್ಮ ಮತ್ತೆ ಏಣಿಯನ್ನೇರಿ ಹುಲ್ಲು ಬಣಬೆಯಮೇಲೆ ಅರುಗಾಗಿ ನಿಂತಳು. ಹೊರೆ ತಂದಿದ್ದವನು ಮೇಲೇರಿದ ತರುವಾಯ ಮತ್ತೆ ಕೆಳಗಿಳಿದು, ಸೀರೆಯಮೇಲೆಯೂ ಮೈಮೇಲೆಯೂ ಹಿಡಿದಿದ್ದ ಹುಲ್ಲಿನ ದೂಳನ್ನೂ ಚೂರುಗಳನ್ನೂ ಕೊಡಹಿಕೊಳ್ಳುತ್ತಾ, ಅಲ್ಲಿ ಸ್ವಲ್ಪವೂ ನಿಲ್ಲದೆ, ಬಂದ ಹಾದಿಯಲ್ಲಿಯೆ ಗದ್ದೆಯಕಡೆಗೆ ಹಿಂತಿರುಗಿದಳು. ಇತರರಂತೆ ಬಸಿರಿಮರದ ನೆರಳಿನಲ್ಲಿ ಕುಳಿತು ಸ್ವಲ್ಪ ದಣಿವಾರಿಸಿಕೊಳ್ಳಲೂ ಆಕೆಗೆ ಮನಸ್ಸಾಗಲಿಲ್ಲ. ಏಕೆಂದರೆ, ಅಲ್ಲಿದ್ದವರೆಲ್ಲರೂ ತನ್ನ ವಿಷಯವಾಗಿಯೇ ನಿಷ್ಠುರವಾಡಿಕೊಳ್ಳುತ್ತಿದ್ದಾರೆಂಬುದು ಆಕೆಗೆ ಚೆನ್ನಾಗಿ ಗೊತ್ತಾಗಿತ್ತು.

ಸ್ವಲ್ಪ ದೂರ ಸಾಗುವುದರೊಳಗಾಗಿ ಅದುವರೆಗೆ ಕಟ್ಟಿಹಾಕಿ ತಡೆದಿದ್ದ ನೋವು ಎದೆಯನ್ನು ಬಿರಿದಂತಾಗಿ ದುಃಖ ಉಕ್ಕಿಬಂದು, ಬಿಕ್ಕಿ ಬಿಕ್ಕಿ ಅಳುತ್ತಾ, ಸುತ್ತಲೂ ನೋಡಿ, ಯಾರೂ ಕಾಣಿಸದಿದ್ದುದನ್ನು ಕಂಡು, ದಾರಿಯಿಂದ ಅಡ್ಡವಾಗಿ ಹೋಗಿ, ಒಂದು ದೊಡ್ಡ ಹಲಸಿನಮರದಡಿ ಅದರ ಹೆಬ್ಬೇರಿನ ಮೇಲೆ ಹೊದೆಗಳ ಮರೆಯಲ್ಲಿ ಕುಳಿತು, ಯಾತನೆಯ ಮೊಳೆಯ ಹಾಸಗೆಯಲ್ಲಿ ಬಿದ್ದು ಬಿದ್ದು ಹೊರಳಾಡಿ ಕಣ್ಣು ಕೀಸುವವರೆಗೂ ಮುಖವನ್ನು ತೀಡಿಬಿಟ್ಟಳು.

ಚಂದ್ರಯ್ಯಗೌಡರ ಕ್ರೌರ್ಯದ ಕತ್ತಿಯಿಂದ ತಪ್ಪಿಸಿಕೊಂಡು, ಇರುಳಿನಲ್ಲಿ ಸುಬ್ಬಮ್ಮ ಕೆಳಕಾನೂರಿಗೆ ಬಂದು, ಅಲ್ಲಿಂದ ನೆಲ್ಲುಹಳ್ಳಿಗೆ ಬಂದಂದು ನೆರೆ ಹೊರೆಯುವರೆಲ್ಲರೂ ಮನೆಯುವರಿಗಿಂತಲೂ ವಿಶೇಷವಾಗಿ ಆಕೆಯಮೇಲೆ ಕನಿಕರ ತೋರಿದ್ದರು. ಆದರೆ ದುರದೃಷ್ಟ: ಪರಿಚಯದಿಂದ ಭಾವಗಳು ಬಹಳ ಉಪಯೋಗಿಸುವ ಹಾರೆಯಂತೆ ಮೊನೆ ಮಾಸಿಹೋಗುತ್ತವೆ. ಅಷ್ಟೇ ಅಲ್ಲ; ಹಾರೆಯ ಮೊನೆಗೆ ಜಡೆಮಡಿಯುವಂತೆ, ಎದುರು ಭಾವಗಳೂ ಮೂಡುತ್ತವೆ. ನೆಲ್ಲುಹಳ್ಳಿಯವರು ಮೊದಮೊದಲು ತೋರಿದ್ದ ಸಹಾನುಭೂತಿ ಬರುಬರುತ್ತಾ, ಶ್ರೀಮಂತರಾದ ಚಂದ್ರಯ್ಯಗೌಡರು ಆಕೆಯನ್ನು ಸಂಪೂರ್ಣವಾಗಿ ತ್ಯಜಿಸಿದ ರೆಂದು ತಿಳಿದಮೇಲೆ, ಉದಾಸೀನವಾಗಿಯೂ, ತಿರಸ್ಕಾರವಾಗಿಯೂ, ದ್ವೇಷ ವಾಗಿಯೂ ಪರಿಣಮಿಸಿಬಿಟ್ಟಿತು. ನೆಲ್ಲುಹಳ್ಳಿಯ ಸುಬ್ಬಿ ಇದ್ದಕ್ಕಿದ್ದಹಾಗೆ ಕಾನೂರು ಹೆಗ್ಗಡಿತಿಯಾಗಿ, ತರುವಾಯ ಅದಕ್ಕಿಂತಲೂ ಹಠಾತ್ತಾಗಿ ಮನೆ ಯಿಲ್ಲದ ಸುಬ್ಬಕ್ಕನಾಗಿಬಿಟ್ಟಳು.

ಗಂಡನನ್ನು ಬಿಟ್ಟುಬರುವ ತರುಣಿ ಬಹುಬೇಗ ನಿಂದೆಗೀಡಾಗುತ್ತಾಳೆ. ಸುಬ್ಬಮ್ಮನ ವಿಚಾರವಾಗಿ ಅಲ್ಲಿ ಇಲ್ಲಿ, ಅವರು ಇವರು, ಗುಸು ಗುಸು ಕೆಟ್ಟ ಮಾತಾಡಿಕೊಳ್ಳತೊಡಗಿದರು. ಕೆಲವರಂತೂ ಸುಬ್ಬಮ್ಮ ಕಾನೂರಿನಲ್ಲಿ ಕೆಟ್ಟ ಕೆಲಸ ಮಾಡಿದುದರಿಂದಲೇ ಗೌಡರು ಅವಳನ್ನು ಓಡಿಸಿಬಿಟ್ಟರೆಂದೂ, ಇಲ್ಲದಿದ್ದರ ಅಂತಹ ದೊಡ್ಡಮನುಷ್ಯರು ಕೈಹಿಡಿದ ಹೆಂಡತಿಯನ್ನು ಕೈಬಿಟ್ಟು, ಅವಮಾನಕ್ಕೆ ಗುರಿಯಾಗುತ್ತಿದ್ದರೇ ಎಂದೂ, ಇಲ್ಲದ ಸಲ್ಲದ ದುರೂಹೆಗಳನ್ನು ಸಿಕ್ಕಿದ ಕಡೆ ಬಿತ್ತಿಬಿಟ್ಟರು. ಸಾಲದಿದ್ದುದಕ್ಕೆ ಬೇರೆ ಕೆಟ್ಟನಾಲಗೆಗಳ ಜೊತೆಗೆ ಕೆಲವರ ಕೆಟ್ಟ ಕಣ್ಣೂ ಸುಬ್ಬಮ್ಮನಮೇಲೆ ಬೀಳತೊಡಗಿತ್ತು. ಆಕೆಯ ಮನಸ್ಸೂ ಒಂದೆರಡು ಸಾರಿ ಅತ್ತಯಿತ್ತ ಅಲೆದಾಡಿ, ಅಳುಕಿ ಬಳುಕಿ, ಸೋಲಿನಂಚಿನವರೆಗೂ ಜಾರಿ ಬಹು ಕಷ್ಟದಿಂದ ಕೆಳಗೆ ಬೀಳದೆ ಆತುಕೊಂಡಿತ್ತು.

ಹೊರಗಿನವರ ಮಾತಿರಲಿ. ತವರುಮನೆಯವರು ಕೂಡ ಆಕೆಯ ವಿಚಾರ ದಲ್ಲಿ ಮುರಿದ ಮನಸ್ಸಾಗಿದ್ದರು. ಆಕೆಯ ಅತ್ತಿಗೆಯೊಬ್ಬಳಂತೂ ಪಕ್ಕೆಯಲ್ಲಿ ಚುಚ್ಚಿಕೊಂಡ ಬಾಣದಂತೆ ಕೊರೆದು ಕೊರೆದು ಕಿರುಕುಳ ಕೊಡುತ್ತಿದ್ದಳು. ಚಂದ್ರಯ್ಯಗೌಡರು ಯಾತ್ರೆಗೆ ಹೋಗಿದ್ದಾಗ, ಸುಬ್ಬಮ್ಮ ಕಾನೂರಿಗೆ ಹೋಗಿ ತನ್ನ ಒಡವೆಗಳನ್ನು ತಂದು ಹೂವಯ್ಯನ ಕೈಯಲ್ಲಿ ಜೋಪಾನವಾಗಿಡಲು ಕೊಟ್ಟು ಬಂದಂದಿನಿಂದಲಂತೂ ಆಕೆಗೆ ಕಿರುಕುಳ ಅಸಹನೀಯವಾಗಿತ್ತು. ತಾಯಿಯಾದಿ ಯಾಗಿ ಎಲ್ಲರೂ ಸಿಡುಗುಟ್ಟುತ್ತಿದ್ದರು. ಎಲ್ಲರಿಗೂ ಸುಬ್ಬಮ್ಮ ತನ್ನ ಬೆಲೆ ಬಾಳುವ ಒಡವೆ ವಸ್ತುಗಳನ್ನು ಮನೆಗೆ ತರಲಿಲ್ಲವಲ್ಲಾ ಎಂದು ಹೊಟ್ಟೆ

ಯುರಿಯತೊಡಗಿತ್ತು. ತವರುಮನೆಗೆ ತೆಗೆದುಕೊಂಡು ಹೋದರೆ ಒಡವೆ ಗಳೆಲ್ಲ ತನ್ನ ಕೈತಪ್ಪಿ ಹೋಗುತ್ತವೆಂದೇ ಸುಬ್ಬಮ್ಮ ಅವುಗಳನ್ನು ಜಾಣ್ಮೆಯಿಂದ ಹೂವಯ್ಯನ ವಶದಲ್ಲಿಟ್ಟು ಹೋಗಿದ್ದಳು.

ಮನೆಯವರಿಗೆ ಎಂದು ಆಶಾಭಂಗವಾಯಿತೊ ಅಂದಿನಿಂದ ಅವರೂ ಇತರ ರೊಡನೆ ಸೇರಿ ಸುಬ್ಬಮ್ಮನನ್ನು ಪೀಡಿಸತೊಡಗಿದರು. ಅವಳ ಕೈಲಿ ಕೂಲಿಯಂತೆ ಕೆಲಸ ಮಾಡಿಸತೊಡಗಿದರು. ಸ್ವಲ್ಪ ಅವಕಾಶ ಸಿಕ್ಕಿದರೂ ಸಾಕು 'ಅವ್ವಾ, ಇದೇನು ನಿನ್ನ ಗಂಡನ ಮನೆ ಅಲ್ಲಾ! ನಾವು ಬಡೋರು! ಅಚ್ಚುಕಟ್ಟಾಗಿ ಕೂತುಕೊಂಡು ತಿನ್ನಬೇಕಾದರೆ ನಿನ್ನ ಗಂಡನ ಮನೀಗೇ ಹೋಗು! ಇಲ್ಲದಿದ್ದರೆ ಒಡವೆಯೆಲ್ಲಾ ಕೊಟ್ಟುಬಂದೀಯಲ್ಲಾ ಅವರ ಹತ್ತಿರಕ್ಕೆ ಹೋಗು!' ಎಂದು ಮೊದಲಾಗಿ ಮೂದಲಿಸಿ ಮಾತಾಡುತ್ತಿದ್ದರು. ಸುಬ್ಬಮ್ಮನಿಗೂ ಇದನ್ನೆಲ್ಲಾ ಕೇಳಿ ಕೇಳಿ ಮನಸ್ಸು ರೇಗಿ ತವರುಮನೆಯನ್ನು ಬಿಟ್ಟು ಕೆಳಕಾನೂರಿಗೆ ಹೋಗಿ ಹೂವಯ್ಯನ ಆಶ್ರಯದಲ್ಲಿ ನಾಗಮ್ಮನವರೊಡನೆ ಅವರ ಜೀತದಾಳಾಗಿಯಾದರೂ ಇದ್ದುಬಿಡುತ್ತೇನೆಂದು ಯೋಚಿಸಿದ್ದಳು. ಆದರೆ ಅಷ್ಟರಲ್ಲಿಯೆ ನಾಗಮ್ಮನವರೂ ತೀರಿಕೊಂಡ ವಾರ್ತೆ ಬಂದುದರಿಂದ ಮುಂದೇನೂ ತೋಚದೆ ಸುಮ್ಮನಾಗಿದ್ದಳು. ಮದುವೆಯಾಗದಿದ್ದ ಗಂಡಸರ ಮಧ್ಯೆ ಗಂಡನನ್ನು ಬಿಟ್ಟ ಯುವತಿ ತಾನೊಬ್ಬಳೇ ಇದ್ದರೆ, ನಿಂದೆಗೆ ಸವಾರಿಮಾಡಲು ಜೂಜಿನ ಕುದುರೆಯನ್ನೇ ಕೊಂಡುಕೊಟ್ಟಂತಾಗು ತ್ತದಲ್ಲವೆ?

ಹಲಸಿನ ಮರದಡಿ ಕುಳಿತು ಯೋಚಿಸಿ ಯೋಚಿಸಿ ಅಳುತ್ತಿದ್ದ ಸುಬ್ಬಮ್ಮ ನಿಗೆ ಏನೆ ಆಗಲಿ ತನ್ನ ಗಂಡನ ಮನೆಯೋ ಸ್ವರ್ಗವೆಂಬುದಾಗಿ ತೋರಿತು. ಈ ನಿಂದೆಯ ಒಳ ಇರಿತದ ಮುಂದೆ ಆ ಗಂಡನ ಹೊರಗುದ್ದು ಮೃದುವಾಗಿ ತೋರಿತು. ಈ ಅವಮಾನದ ಎದುರು ಆ ಕಷ್ಟ ಸಂಕಟಗಳೆಲ್ಲ ಬೇಜಾರು ಪರಿಹಾರವಾಗುವ ಸಾಹಸಗಳಾಗಿ ತೋರಿದುವು. ಗಂಡನ ಗುದ್ದೊಂದನ್ನು ಸಹಿಸಿಕೊಂಡರಾಯಿತು, ತಾನೆ ಕಾನೂರಿನ ಆಡಳಿತಕ್ಕೆಲ್ಲ ಹೆಗ್ಗಡಿತಿಯಾಗಿರ ಬಹುದಲ್ಲವೆ? ಅದೂ ಅಲ್ಲದೆ, ಈಗ ಚಂದ್ರಯ್ಯಗೌಡರು ಮೊದಲಿದ್ದಂತೆ ಕ್ರೂರ ವಾಗಿಲ್ಲವಂತೆ; ಧರ್ಮಸ್ಥಳಕ್ಕೆ ಯಾತ್ರೆ ಹೋಗಿ ಬಂದಮೇಲೆ ಅವರ ಬುದ್ಧಿ ಬೇರೆಯಾಗಿದೆಯಂತೆ. ಬಹಳ ಸಾತ್ವಿಕರಾಗಿದ್ದಾರಂತೆ. ಆ ಸುದ್ದಿ ನಿಜವಾಗಿಯೆ ಇರಬೇಕು. ಹಾಗಿಲ್ಲದಿದ್ದರೆ, ಮೊದಲಿನ ಚಂದ್ರಯ್ಯಗೌಡರೇ ಆಗಿದ್ದರೆ, ನಾನು ತಂದಿದ್ದ ಒಡವೆ ವಸ್ತುಗಳನ್ನು ಹಿಂದಕ್ಕೆ ಪಡೆಯುವ ಸಾಹಸ ಮಾಡದೆ ಇರು ತ್ತಿದ್ದರೆ? ಪ್ರತೀಕಾರಮಾಡದೆ ಸುಮ್ಮನಿರುತ್ತಿದ್ದರೆ? ಒಡವೆಗಳನ್ನು ಹಿಂದಕ್ಕೆ ಕೊಡಬೇಕೆಂದು ಹೇಳಿ ಒಬ್ಬ ಆಳನ್ನೂ ಕೂಡ ಕಳುಹಿಸಲಿಲ್ಲ!

ಆಲೋಚಿಸುತ್ತಿದ್ದ ಹಾಗೆ, ಸುಬ್ಬಮ್ಮನ ಕಂಬನಿಯಲ್ಲಿ ಹೊಸದಾಗಿ ಸೌಜನ್ಯ ಮೂರ್ತಿಯಾಗಿ ಸಾತ್ವಿಕರಾಗಿದ್ದ ಚಂದ್ರಯ್ಯಗೌಡರ ಮಧುರಾಕೃತಿ ಕಂಗೊಳಿಸಿ ಮನಂಗೊಳಿಸಿತು. ಅವರಿಂದ ಹಿಂದೆ ತನಗಾಗಿದ್ದ ಅನ್ಯಾಯಗಳನ್ನೂ ಯಾತನೆಗಳನ್ನೂ ಸಂಪೂರ್ಣವಾಗಿ ಕ್ಷಮಿಸಿಬಿಟ್ಟಳು. ಅವರ ಪರವಾಗಿ ಆಕೆಯ ಹೃದಯದಲ್ಲಿ ಅಲಂಪೊಂದು ಹೂ ಮೂಡುವಂತೆ ಮೂಡಿತು. ಪುನಃ ತಾನು ಕಾನೂರಿನ ಹೆಗ್ಗಡಿತಿಯಾಗಿ ಎಲ್ಲರ ಗೌರವ ಭಯಗಳಿಗೆ ಪಾತ್ರಳಾಗಿರುವಂತೆ ಭಾಸವಾಯಿತು. 'ಹಾಗಾದರೆ, ದೇವರ ದಯೆಯಿಂದ ಹಾಗಾದರೆ, ಇವತ್ತು ನನ್ನನ್ನು ಹಾಸ್ಯಮಾಡಿ ನಿಂದಿಸಿದ ಈ ನೆಲ್ಲುಹಳ್ಳಿಯ ಕುರಿಗಳೆಲ್ಲ, ನಾನು ಮಾತಾಡಿಸಿದರೆ ಸಾಕು ತಾವು ಧನ್ಯರಾದೆವೆಂದುಕೊಂಡು ನಾಯಿಮರಿಗಳಂತೆ, ನನ್ನ ಕಾಲಬಳಿ ಮೂಲಗಿಸುವುದನ್ನು ನೋಡುತ್ತೇನೆ!' ಎಂದುಕೊಂಡಳು.

ಸ್ವಲ್ಪ ಹೊತ್ತಿನಿಂದ ನಿದ್ರಿಸುತ್ತಿದ್ದ ಸುಬ್ಬಮ್ಮ ತನ್ನ ಅತ್ತಿಗೆಯ ಕಠಿನವಾದ ಕೂಗಿನಿಂದ ಎಚ್ಚತ್ತಳು. ಅವಳ ಬೈಗುಳಕ್ಕೆ ಒಂದಿನಿತೂ ಕಿವಿಗೊಡದೆ ಹುಲ್ಲು ಹೊರೆಯನ್ನು ಹೊತ್ತು ತರಲು ಗದ್ದೆಗೆ ಹೊರಟಳು. ಆಕೆಯ ಮನಸ್ಸಿಗೆ ಒಂದು ಆಶಾಧೈರ್ಯದ ಕವಚ ದೊರೆಕೊಂಡಿತ್ತು.

ಆದರೂ ಸುಬ್ಬಮ್ಮ ಕಾನೂರಿಗೆ ಹೊರಡಲಿಲ್ಲ. ಹಲಸಿನ ಮರದಡಿ ತಾನು ಕಟ್ಟಿದ್ದ ತನ್ನ ಗಂಡನ ಚಿತ್ರದಲ್ಲಿ ತರುವಾಯ ಆಕೆಗೆ ಸಂಪೂರ್ಣ ನಂಬುಗೆ ಹುಟ್ಟಲಿಲ್ಲ. ಅಲ್ಲದೆ ಅಲ್ಲಿ ಕಟ್ಟಿದ್ದ ಕಾನೂರಿನ ಚಿತ್ರದಲ್ಲಿ ಹಲ್ಲುಬ್ಬಿನ ಸೇರೆಗಾರರನ್ನು ಹೊರಬಿಟ್ಟಿದ್ದಳು. ಅವರನ್ನು ನೆನೆದೊಡನೆಯೆ ಆಕೆಗೆ ಜುಗುಪ್ಸೆಯಾಯಿತು. ಎಲ್ಲಕ್ಕಿಂತಲೂ ಮುಖ್ಯ ಕಾರಣವಾಗಿ ಆಕೆಯಭಿಮಾನವಿತ್ತು. ಗಂಡನ ಮನೆಯಿಂದ ಒಂದು ಗಾಡಿ ಬರುವುದಂತೂ ಇರಲಿ, ಕರೆಯಲು ಜನ ಬರುವುದೂ ಬೇಡ, ಕಡೆಗೆ ಒಂದು ಗಾಳಿ ಸುದ್ದಿಯಾದರೂ ಬೇಡವೆ ತನ್ನನ್ನು ಅಲ್ಲಿಗೆ ಕೊಂಡೊಯ್ಯುವುದಕ್ಕೆ?

ಅಂತಹ ನಿಮಿತ್ತ ಮಾತ್ರದ ಕರೆಗಾಗಿ ಕಾಯುತ್ತಾ ಅನಂತ ನಿರೀಕ್ಷೆಯಿಂದಿದ್ದಳು ಸುಬ್ಬಮ್ಮ.

ಕೆಲವು ತಿಂಗಳಮೇಲೆ ವೈಶಾಖಮಾಸದಲ್ಲಿ ಒಂದು ಸಂಜೆ ಕಮಾನುಗಾಡಿಯೊಂದು ನೆಲ್ಲುಹಳ್ಳಿಗೆ ಬಂದಿತು. ಅವನ ಒಕ್ಕಣ್ಣಿನ ವಿಕಾರ ಮುಖದ ದೆಸೆಯಿಂದ ಯಾರಿಗೂ ಮೊದಮೊದಲು ಗುರುತು ಸಿಕ್ಕದಿದ್ದರೂ ಗಾಡಿ ಹೊಡೆಯುತ್ತಿದ್ದವನು ಓಬಯ್ಯನಾಗಿದ್ದನು. ಗಾಡಿ ಪೆದ್ದೇಗೌಡರ ಮನೆಯ ಅಂಗಳದಲ್ಲಿ ನಿಂತಿತು. ಗಾಡಿಯವನು ಎತ್ತುಗಳ ಕೊರಳು ಬಿಚ್ಚಿದನು. ಕಾನೂರು ಸೇರೆಗಾರ ರಂಗಪ್ಪಸೆಟ್ಟರು ಮೆಲ್ಲಗೆ ಹೊರಗೆ ತಲೆಹಾಕಿ, ಎರಡು

ಮೆಟ್ಟುಗಳನ್ನೂ ನೆಲಕ್ಕೆ ರಪ್ಪನೆಸೆದು, ಗಾಡಿಯ ಕತ್ತರಿಯ ಮೇಲೆ ನಡೆದು ಬಂದು, ಮೂಕಿಯ ತುದಿಯಲ್ಲಿ ಕೆಳಗಿಳಿದರು.

ಚಂದ್ರಯ್ಯಗೌಡರು ಬಹುದಿನಗಳಿಂದಲೂ ರೋಗಗ್ರಸ್ತರಾಗಿ ಹಾಸಗೆ ಹಿಡಿದಿದ್ದುದರಿಂದ ಅವರ ಅಪೇಕ್ಷೆಯಂತೆ ಅವರ ಶುಶ್ರೂಷೆಗಾಗಿ ಅವರ ಹೆಂಡತಿಯನ್ನು ಕರೆತರಲು ಅವರ ಮಗ ರಾಮಯ್ಯ ಗಾಡಿ ಕಳುಹಿಸಿದ್ದನು. ಸೇರೆಗಾರರನ್ನು ಕಂಡು ಗಾಬರಿಯಾದರೂ ಓಬಯ್ಯನನ್ನು ಗುರುತಿಸಿದ ಮೇಲೆ ಸುಬ್ಬಮ್ಮನಿಗೆ ಧೈರ್ಯವಾಯಿತು. ಮರುದಿನ ಬೆಳಿಗ್ಗೆ ಕಮಾನುಗಾಡಿಯಲ್ಲಿ ಕುಳಿತು ಕಾನೂರಿಗೆ ಹೊರಟಳು. ದಾರಿಯಲ್ಲಿ ಓಬಯ್ಯನಿಂದ ಮನೆಯ ವಿಷಯಗಳನ್ನೆಲ್ಲಾ ಅನೇಕವಾಗಿ ಅರಿತುಕೊಂಡಳು. ನಡು ನಡುವೆ, ಗಾಡಿಯ ಹಿಂಭಾಗದಲ್ಲಿ ಕುಳಿತಿದ್ದ ಸೇರೆಗಾರರೂ ಬಾಯಿಹಾಕಿ ಮಾತಾಡುತ್ತಿದ್ದರು. ಆದರೆ ಅವರ ನಡತೆ ದೂರವಾಗಿ ಗಂಭೀರವಾಗಿ ವಿನಯಪೂರ್ವಕವಾಗಿತ್ತು. ಬಹುಶಃ ಸುಬ್ಬಮ್ಮನ ಮುಖದಲ್ಲಿ ನೋವಿನ ತಪಸ್ಸಿನಿಂದ ಬರುವ ಒಂದು ಅಧಿಕಾರದ ಗಾಂಭೀರ್ಯವಿದ್ದಿತೆಂದು ತೋರುತ್ತದೆ. ಅಲ್ಲದೆ ಇತ್ತೀಚೆಗೆ ಚಂದ್ರಯ್ಯಗೌಡರ ದರ್ಪ ಕುಂದಿದ ಹಾಗೆಲ್ಲಾ ಸೇರೆಗಾರರ ಬಲವೂ ಸ್ವಲ್ಪ ಸ್ವಲ್ಪವಾಗಿ ಮುದುರಿಕೊಳ್ಳತೊಡಗಿತ್ತು.

## ೭೨

## ಬೇಸಗೆಯ ನಡುಗಾಡಿನ ಸರಲಿನಲ್ಲಿ ಬೈರ ಸಿದ್ದರ ಏಡಿ ಷಿಕಾರಿ

"ಇಸ್ಸಿ! ಇದರ ಹೊಟ್ಟೆ ಹಾಳಾಗಲೋ!"

ಎಂದು ತಾನು ಎತ್ತಿ ಉರುಳಿಸಿದ್ದ ಕಲ್ಲೊಂದನ್ನು ಶಪಿಸುತ್ತಾ ನೆಟ್ಟಗೆ ನಿಂತು, ಮುಖಕ್ಕೂ ಕಣ್ಣಿಗೂ ಹಾರಿದ್ದ ಕೆಸರನ್ನು ಉಜ್ಜಿ ಒರಸಿಕೊಂಡ್ಮ ಬೈರ ಮತ್ತೆ ಬಾಗಿ, ಕಲ್ಲೆತ್ತಿದ್ದ ಸ್ಥಳದಲ್ಲಿ ತುಂಬಿಕೊಂಡಿದ್ದ ಬಗ್ಗಡವಾದ ನೀರಿನೊಳಗೆ ಕೈಯಾಡಿಸುತ್ತಾ, ಕಲ್ಲುಸಂದಿಗಳಲ್ಲಿ ಏಡಿಗಳನ್ನು ಹುಡುಕತೊಡಗಿದನು. ಅವನಿಗೆ ತುಸು ದೂರದಲ್ಲಿ ಸಿದ್ದನೂ ಅದೇ ಕೆಲಸದಲ್ಲಿ ತೊಡಗಿ, ಸರಲಿನಲ್ಲಿ ಕಲ್ಲುಗಳನ್ನು ಬಡಗುಡಿಸುತ್ತಿದ್ದನು.

ಬೆಟ್ಟಬೇಸಗೆಯಾಗಿತ್ತು. ತೊಳಕಬೇಕಾದ ಹೊಂಡಗಳನ್ನೆಲ್ಲ ತೊಳಕಿ ಮುಗಿಸಿ, ಒಂದು ಸಣ್ಣ ಚಟ್ಟಂಗಿಯನ್ನೂ ಕೂಡ ಬಿಡದೆ ಪೂರೈಸಿಬಿಟ್ಟಿದ್ದರಿಂದ ಬೈರನೂ ಸಿದ್ದನೂ ಇಬ್ಬರೂ ಸೇರಿ, ಆ ದಿನ ಹಗಲಿನಲ್ಲಿ ಮಲೆಯ ಸರಲುಗಳಲ್ಲಿ ಕಲ್ಲು ಮಗುಚಿ ಏಡಿ ಹಿಡಿಯಲು ಹೊರಟು ಬಹುದೂರ ಏರಿ ಸಾಗಿಸಿದ್ದರು. ಅಭ್ಯಾಸ

ದಿಂದ ಅವರ ಕೈಕಾಲುಗಳು ಯಾಂತ್ರಿಕವಾಗಿ ಕೆಲಸಮಾಡುತ್ತಿದ್ದುವು. ಸದ್ದಿಲ್ಲದಿದ್ದ ಆ ಕಾಡಿನಲ್ಲಿ ಅವರು ಎತ್ತಿ ಎತ್ತಿ ಮಗುಚುತ್ತಿದ್ದ ಕಲ್ಲುಗಳ ಸದ್ದಿನೊಡನೆ ಅವರ ಹರಟೆಯೂ ಬಿಡುವಿಲ್ಲದೆ ಸರ್ವತೋಮುಖವಾಗಿ ಸಾಗಿತ್ತು.

ಅವರ ಹರಟೆ ಅತ್ತಯಿತ್ತ ಅಲೆದು ಕಡೆಗೆ ಕಾನೂರು ಕೆಳಕಾನೂರು ಮುತ್ತಳ್ಳಿಗಳ ವಿಚಾರದಲ್ಲಿ ಸಿಕ್ಕಿಕೊಂಡಿತ್ತು. ಚಂದ್ರಯ್ಯಗೌಡರ ಜೀತದಾಳಾಗಿದ್ದ ಸಿದ್ದ ತನ್ನ ಒಡೆಯರ ವಿಚಾರವಾಗಿಯೂ ಪಕ್ಷವಾಗಿಯೂ, ಹೂವಯ್ಯನ ಆಳಾಗಿದ್ದ ಬೈರ ತನ್ನ ಒಡೆಯರನ್ನು ಕುರಿತೂ ಪ್ರಸ್ತಾಪಿಸುತ್ತಿದ್ದರು. ಭಿನ್ನಾಭಿಪ್ರಾಯಗಳು ಬಂದಾಗ ಅವನ್ನು ವಾದಿಸಿ ಇತ್ಯರ್ಥಮಾಡುವ ಗೋಜಿಗೆ ಹೋಗದೆ, ಕೆಮ್ಮಿಯೋ ಎಲೆಯಡಿಕೆ ಹಾಕಿಕೊಂಡೋ ಅಥವಾ ಹಿಡಿಯುತ್ತಿದ್ದ ಏಡಿಗಳ ವಿಚಾರವಾಗಿ ಮಾತಾಡಿಯೋ ಕೊನೆಗಾಣಿಸಿಬಿಟ್ಟು ಮುಂದುವರಿಯುತ್ತಿದ್ದರು.

ಸಿದ್ದನು, ರಾಮಯ್ಯನಿಗೂ ಚಂದ್ರಯ್ಯಗೌಡರಿಗೂ ಜಗಳವಾಗಿದ್ದುದು, ಸೇರೆಗಾರರ ಒಳಸಂಚು, ಗಂಗೆಯ ಕಿಲಾಡಿತನ, ಸುಬ್ಬಮ್ಮನನ್ನು ಕಾನೂರಿಗೆ ಕರೆಯಿಸಿದುದು, ಚಂದ್ರಯ್ಯಗೌಡರು ಹಾಸಗೆ ಹಿಡಿದು ದಿನ ದಿನಕ್ಕೂ 'ಕಾಡು ಹತ್ತಿರ ಊರು ದೂರವಾಗುತ್ತಿರುವುದು,' ಮೊದಲಾದುದನ್ನೆಲ್ಲ ಉಪ್ಪುಕಾರ ಹಚ್ಚಿ ಹೇಳಿ "ನಂಗೆಬ್ಯಾರೆ ಆರ್ತಾಗದಿಲ್ಲಪ್ಪಾ, ಈ ದೊಡ್ಡೋರ ಮನೆ ಗಿಜರು!" ಎಂದನು.

"ಅಲ್ಲಾ! ನಿಮ್ಮ ರಾಮೇಗೌಡ್ರಿಗೆ ಮತ್ತೊಂದು ಮದೇ ಮಾಡ್ತಾರಂತೆ, ಹೌದೇನೋ? ಹಾಂಗಾಂತ ಊರೆಲ್ಲ ಸುದ್ದಿಯಪ್ಪಾ!" ಎಂದು ಬೈರ ತಾನು ಹಿಡಿದಿದ್ದ ಏಡಿಯೊಂದರ ಕಾಲುಗಳನ್ನು, ಅದರ ಕಡೆ ಒಂದಿನಿತೂ ಲಕ್ಷ್ಯಕೊಡದೆ, ಒಂದೊಂದನ್ನಾಗಿ ಕಡ್ಡಿ ಮುರಿಯುವಂತೆ ಮುರಿದು ಮುರಿದು ಬಿಸಾಡತೊಡಗಿದನು. ಕಾಯಿಪಲ್ಯಗಳನ್ನು ಕತ್ತರಿಸುವವರಾದರೂ ಕೂಡ ಅಷ್ಟೊಂದು ನಿರ್ದಾಕ್ಷಿಣ್ಯವಾಗಿರುವುದಿಲ್ಲವೆಂದು ತೋರುತ್ತದೆ.

"ಅದೇ ಈಗೊಂದು ದೊಡ್ಡ ಕಿಸಾಕೊಳ್ಳಿ ಆಗ್‌ಕೊಂಡು ಕೂತದಂತೆ. ಮುತ್ತಳ್ಳಿ ಗೌಡ್ರು ಸೀತಮ್ಮನ ಕಳಿಸಾದಿಲ್ಲ ಅಂತಾರಂತೆ. ಅದಕ್ಕಿವರು ಹಂಗಾದ್ರೆ ಮತ್ತೊಬ್ಬ ಸೊಸೆ ತಂದೇಬಿಡ್ತೀನಿ ಅಂತಾರಂತೆ. ರಾಮಯ್ಯೋರೆ ಒಪ್ಪೋದಿಲ್ಲಂತೆ. ಅವರೊಪ್ಪಿದ್ರೆ ಈ ಹೊತ್ತಿಗಾಗ್ಲೆ ಮದೇಮನೆ ತುಂಡು ಕಡ್ಪೂ ಹೊಡೀಬ್ಯೆದಿತ್ತಲ್ಲಾ!... ಈ ದೊಡ್ಡೋರ ಮಕ್ಕಳೀಗೆ ಏನಾಗ್ತದೋ ಏನಪ್ಪಾ, ಮದೇ ಮಾಡಿಕೊಂಡ್ರೆ? ನಾನಾಗಿದ್ರಾ? ಒಂದಲ್ಲ ಎಳ್ಡಲ್ಲ, ಹತ್ತು ಮದೇ ಬೇಕಾದ್ರೂ 'ಹೂಂ ಸೈ' ಅಂತಿದ್ದೆ ಮೀಸೆ ಮ್ಯಾಲೆ ಕೈಹಾಕಿ! ಈಗ ನೋಡು ಬೈರಣ್ಣಾ, ನಾ ಮದೆ ಆಗ್ಬೇಕು ಅಂತಾ ಏಟು ದಿನದಿಂದ ಹುನಾರು

ಮಾಡ್ತಿದ್ದೀನಿ. ಗೌಡರು 'ನಿಂಗೀಗಾಗ್ಲೆ ಮೂರುಮದುವೆಗೆ ಸಾಲ...ಕೊಟ್ಟಾಗದೆ. ಇನ್ನು ಕೊಡೋದಿಲ್ಲ' ಅಂತಾರೆ. ನಾ ಏನು ಮಾಡ್ಲಿ ನೀನೆ ಹೇಳಣ್ಣಾ, ಆ ರಂಡೇರು ಒಬ್ಬೊಬ್ಬರಾಗಿ ಸತ್ತುಹೋದ್ರುಲ್ಲಾ, ಅದಕ್ಕೆ ನಾನೇನು ಮಾಡ್ಲಿ? ಅವರು ಸರಿಯಾಗಿ ಭೂತದ ಹರಕೆ ಮಾಡದೆ ಇದ್ರೆ ನನ್ದೇನ್ ತಪ್ಪು...?" ಎಂದು ಮೊದಲಾಗಿ ತನ್ನ ಕಷ್ಟಸಂಕಟಗಳನ್ನೇ ಬಹಳ ಹೊತ್ತು ಹೇಳಿಕೊಂಡನು.

"ನೀ ಹೇಳಿದ್ದೂ ಹೌದೇ! ನೋಡು, ನಮ್ಮ ಹೂವೇಗೌಡ್ರು ಇದ್ದಾರಲ್ಲಾ ಅವರಿಗೆ ದೇವರಂತಾ ಬುದ್ಧಿ. ಆದ್ರೂ ಮದೇ ಮಾಡಿಕೊಳ್ಳದೇ ಅವರಪ್ಪನ್ನೇ ಕೊಂದುಬಿಟ್ರು ಪಾಪ! ಅವರದ್ದೆಲ್ಲಾ ಸರಿ; ಆದರೆ ಮದೇ ಮಾಡಿಕೊಂಡು ಬಿಟ್ಟಿದ್ರೆ!...ನೋಡು, ಮನ್ನೆ ಅದು (ಎಂದರೆ, ಅವನ ಹೆಂಡತಿ) ಹಡೆದಾಗ ಹೂವಯ್ಯಗೌಡರು ಎಷ್ಟು ಉಪಚಾರ (ಉಪಕಾರ ಎನ್ನುವುದಕ್ಕೆ ಬದಲಾಗಿ) ಮಾಡಿದ್ರೂ ಅಂದ್ರೆ! ಅಕ್ಕಿ, ಬೆಲ್ಲ, ತುಪ್ಪ, ಕಾಫಿ, ಹಾಲು, ಔಸ್ತಿ, ಏನು ನಮ್ಮ ಬಿಡಾರ ಮನೆಯಾಗಿ ಹೋಗಿತ್ತು. ನಂಗಂತು ನನ್ಹೆಡ್ತಿ ದಿನಾ ಹಡೀತಾನೆ ಇದ್ದಿದ್ರೆ ಅನ್ನಿಸಿಬಿಡ್ತು...ನಗಬೇಡ ಅಂತೀನಿ....ನಿಂಗೊತ್ತಿಲ್ಲ ಅವರ ಮೈಮೆ!"

"ಅಲ್ಲೋ! ನಮ್ಮ ಸುಬ್ಬಮ್ಮ ಹೆಗ್ಗಡಿತಮ್ಮೋರು ಯಾಕೋ ದಿನಾ ಕೆಳಕಾನೂರಿಗೆ ಹೋಗ್ತಾರಂತಲ್ಲಾ!" ಎಂದು ಸಿದ್ದ ವ್ಯಂಗ್ಯಪೂರ್ಣ ದೃಷ್ಟಿಯಿಂದ ಬೈರನ ಕಡೆಗೆ ನೋಡಿದನು.

"ಹೂವಯ್ಯಗೌಡರ ಕೈಲಿ ನಗಾ ಇಡಾಕೆ ಕೊಟ್ಟಾರಂತೆ ಕಣೋ! ಅದನ್ನು ಈಸಿಕೊಂಡು ಬಾರಾಕಂತಾ ಕಾಣ್ತದೆ. ಜನಗೋಳಿಗೇನು ಆಡಿಕೊಳ್ಳಾಕೆ!"

"ಹಾಂಗಾರೆ, ಮುತ್ತಳ್ಳಿಗೌಡ್ರು ಸೀತಮ್ಮೋರನ್ನ ಗಂಡನ ಮನೆಗೆ ಕಳಿಸೋದೆ ಇಲ್ಲಂತೇನು?"

"ಸೀತಮ್ಮೋರೆ ಗಂಡನ ಮನೇಗೆ ಹೋಗಾಕೆ ಒಲ್ಲೆ ಅಂತಾರಂತೆ."

"ಮತ್ತೇನ್ಮಾಡ್ತಾರಂತೆ?" ಸಿದ್ದ ಬೆರಗಾಗಿ ಕೇಳಿದನು.

"ತವರುಮನೇಲಿ ಇರ್ತಾರೆ!"

"ಇರ್ತಾರೆ? ನಂಗೆ ಬೇರೆ ಅರ್ತ್ವಾಗಾದಿಲ್ಲಪ್ಪಾ ಈ ದೊಡ್ಡೋರ ಮರ್ಜಿ."

"ನಿಂಗೆ ಅರ್ತ ಆಗೋದಾಗಿದ್ರೆ ಬೇಲರ ಕೇರೀಲಿ ನಮ್ಮ ಜೊತೆ ಯಾಕಿರ್ತಿದ್ದೆ?" ಎಂದು ಬೈರ ನಕ್ಕನು.

"ಕೆಳಕಾನೂರಿನಾಗೆ ಒಂದು ತಿಂಗಳು ಇದ್ರುಲ್ಲಾ ಸೀತಮ್ಮ ಕಾಯಿಲೆಯಾಗಿ..."

"ಅದೇ ನಿಮ್ಮ ಗೌಡ್ರು ಬರೇ ಹಾಕ್ದಾಗ!"

"ಆವಾಗಲೆ ಹೂವಯ್ಯಗೌಡರು ಸೀತಮ್ಮಗೆ ಏನೇನೊ ಹೇಳಿಕೊಟ್ಟುಬಿಟ್ಟಾರಂತೆ. ಮಾಯಾಮಂತ್ರಾನೂ ಹಾಕ್ಯಾರೆ ಅಂತಾನೂ ಹೇಳ್ತಾರೆ! ಇಲ್ದಿದ್ರೆ

ಸೀತಮ್ಮಾಗೆ ಹ್ಯಾಂಗೆ ತಿಳೀಬೇಕೋ ರಾಮಯ್ಯಗೌಡ್ರೂ ತಾಳೀ ಕಟ್ಲಿಲ್ಲಾ, ಅಗ್ರಹಾರದ ದೋಯಿಸರೇ ಕಟ್ಟಿದ್ರೂ ಅಂತಾ? ಧಾರೆ ಮಂಟಪದಾಗೆ ಅವರಿಗೆ ಮೈಮೇಲೆ ಬಂದಿತ್ತಂತೆ. ಪಜ್ಞೆ ಇರಲಿಲ್ಲಂತೆ!"

"ನೀನು ಸುಮ್ಮಸುಮ್ಮನೆ ಹೂವಯ್ಯಗೌಡರಮೇಲೆ ಇಲ್ದಿದ್ದನ್ನೆಲ್ಲಾ ಹೇಳ್ಬೇಡ! ತಾಯಿ ಸತ್ತ ದುಃಖದಲ್ಲಿದ್ರೂ ಕೂಡ ಹಗಲೂ ರಾತ್ರಿ ಸೀತಮ್ನೋರ ಪಕ್ಕದಲ್ಲೇ ಕೂತು ಅನುಪಾನಮಾಡಿ ಅವರನ್ನು ಬದುಕಿಸಿದರಲ್ಲ! ಇನ್ನಾರು ಹಾಂಗೆ ಮಾಡ್ತಿದ್ರು ಹೇಳು? ನ್ಯಾಯವಾಗಿ ಸೀತಮ್ನೋರನ್ನ ಹೂವಯ್ಯ ಗೌಡ್ರಿಗೆ ಕೊಡಬೇಕಾಗಿತ್ತಂತೆ. ನಿಮ್ಮ ಗೌಡ್ರು ಪಿತೂರಿ ನಡೆಸಿ ತಮ್ಮ ಮಗಗೆ ತಂದುಕೊಂಡ್ರಂತೆ! ದೋಯಿಸರೂ ಅವರ ಕಡೇನೇ ಸೇರಿಕೊಂಡಿದ್ರಂತೆ! ಗುಟ್ಟೆಲ್ಲ ಈಗೀಗ ರಟ್ಟಾಗದೆ!"

"ನಿನ್ನ ಗೌಡ್ರಿಗೂ ಸೀತಮ್ಮಾಗೂ ಜಾತಕ ಬರಲಿಲ್ಲಂತೊ!"

"ಜಾತಕ ಬರಾದಂದ್ರೆ ಎಂತದೋ? ದೋಯಿಸರು ಹೇಳಿದ್ರೆ ಆಯ್ತು! ದೋಯಿಸ್ರೂ ನಿಮ್ಮ ಗೌಡರ ಕಡೇಗೇ ಸೇರಿಕೊಂಡಿದ್ರಂತೆ ಅಂತೀನಿ!"

"ಥೂ! ನಂಗೆ ಬೇರೆ ಅರ್ತಾಗದಿಲ್ಲಪ್ಪಾ, ಈ ದೊಡ್ಡೋರು ಪಂಚಾಯ್ತಿ! ನಮ್ಮ ಜಾತೀಲಾದ್ರೆ ಎಲ್ಲ ಸಲೀಸು!" ಎಂದು ಸಿದ್ದ ತನ್ನ ಕೆಲವು ಅನುಭವ ಗಳನ್ನು ಕುರಿತು ಕಥೆ ಹೇಳತೊಡಗಿದನು.

ಏಡಿ ಹಿಡಿಯುತ್ತಾ ಹಿಡಿಯುತ್ತಾ, ಸರಲಿನಲ್ಲಿ ಬಹುದೂರ ಮುಂದುವರಿದು, ಬನಗತ್ತಲೆ ಕವಿದಿದ್ದ ನಡುಮಲೆಯ ದಟ್ಟಗಾಡಿಗೆ ಬಂದಿದ್ದರು. ಹೊರಗಡೆ ಬಿರುಬೇಸಗೆ ಸುಡುತ್ತಿದ್ದರೂ ಅಲ್ಲಿ ಬಿಸಿಲಿನ ಸುಳಿವಿರಲಿಲ್ಲ. ಕರಿನೆಳಲು ತಣ್ಣಗೆ ಹಗಲುನಿದ್ದೆ ಮಾಡುತ್ತಿತ್ತು.

ಸರಲಿನಲ್ಲಿ ಅಲ್ಲೊಂದೆಡೆ ಕಾಡುಹಂದಿಗಳು ಬಿಸಿಲಿನ ಝಳಕ್ಕೆ ಬಸವಳಿದು ದಿನವೂ ಬಂದು ಬಂದು ಮಗ್ಗುಲಿಕ್ಕಿ ಇಕ್ಕಿ ಕಿರಿದಾದೊಂದು ಕೆಸರಿನ ಕೊಳವಾಗಿ ಬಿಟ್ಟಿತ್ತು. ಆ ಕೆಸರಿನಲ್ಲಿ ಒಂದು ಕಲ್ಲು ಕೆಸರೂಡಿಕೊಂಡು ಬಿದ್ದಿದ್ದುದನ್ನು ಕಂಡು ಸಿದ್ದ 'ಬೈರಣ್ಣಾ! ಇಲ್ಲಿ ಬಾ, ಇಲ್ಲೊಂದು ಹೆಗ್ಗಲ್ಲದೆ ಈ ಕೆಸರಿನಾಗೆ. ಏಡಿ ಗೀಡಿ ಇರಬೈದು, ಎತ್ತಿ ನೋಡಾನ' ಎಂದು ಕರೆದನು.

ಬೈರ ದೂರದಿಂದಲೆ 'ತಡೀ, ಬತ್ತೀನಿ ತಡೀ. ಇಲ್ಲೆಲ್ಲೋ ಒಂದೇಡಿ ಇತ್ತಪ್ಪಾ. ಹಿಡ್ದೆ, ಚಕ್ಕಬೆಳ್ಳು ಮುರುಕುಂಡು ಹೋತಪ್ಪ' ಎನ್ನುತ್ತಾ ಕಲ್ಲು ಸಂದಿಯಲ್ಲಿ ಕೈಹಾಕಿ ತಡವಾಡತೊಡಗಿದ್ದನು.

ಅಷ್ಟರಲ್ಲಿ ಸಿದ್ದ ಕೆಸರಿನ ಮಧ್ಯೆ ಬಿದ್ದಿದ್ದ ಕಲ್ಲುಗುಂಡನ್ನು ಎತ್ತಲೆಂದು ಅದರ ಸಮೀಪಕ್ಕೆ ಹೋಗಿ ನಿಂತು, ಅದನ್ನು ಮುಟ್ಟಿದ್ದನೋ ಇಲ್ಲವೋ, ಆ ಕಲ್ಲು

ಇದ್ದಕ್ಕಿದ್ದ ಹಾಗೆ ಕಾಡುಹಂದಿಯಾಗಿ ಹುಹುಕ್ಕೆಂದು ಹೂಂಕರಿಸಿ ಮೈಕೊಡವಿ ಎದ್ದು, ಬೇರೆ ಯಾವ ಕಡೆಯೂ ತಪ್ಪಿಸಿಕೊಂಡು ಹೋಗಲು ಅವಕಾಶವಿಲ್ಲದಂತೆ ದರೆ ಇದ್ದುದರಿಂದ, ಸಿದ್ದನ ಕಡೆಗೇ ನುಗ್ಗಿ, ಅವನನ್ನು ತುಸು ದೂರ ಹೊತ್ತು ಕೊಂಡುಹೋಗಿ, ಕುಸಿದುಹಾಕಿ, ಪರಾರಿಯಾಯಿತು.

ಸಿದ್ದ 'ಅಯ್ಯೋ, ಬೈರಣ್ಣಾ, ಸತ್ತೆನಲ್ಲೋ!' ಎಂದು ಕೂಗಿಕೊಂಡನು. ಪುಣ್ಯವಶದಿಂದ ಅವನಿಗೆ ಪ್ರಾಣಾಪಾಯ ಸಂಭವಿಸುವ ಗಾಯವಾಗಲಿ ಪೆಟ್ಟಾಗಲಿ ಆಗಿರಲಿಲ್ಲ. ತೊಡೆ ಮಾತ್ರ ಹಂದಿಯ ಕೋರೆದಾಡೆಗಳಿಂದ ಸುಮಾರು ಅರೆ ಅಡಿಯಷ್ಟು ಮಟ್ಟಿಗೆ ಸಿಗಿದುಹೋಗಿ, ನೆತ್ತರು ಕೋಡಿ ಹರಿಯು ತ್ತಿತ್ತು.

"ಅದೆಲ್ಲಿ ಶನಿಮುಂಡೆಗಂಡಂದು ಬಂದು ಮಲಗಿತ್ತು ಮಾರಾಯ ಅಲ್ಲಿ! ನಿಂಗಷ್ಟೂ ಕಣ್ಣು ಕಾಣದೇಹೋಯ್ತು? ಹಾಳ್ ಗಿರಾಚಾರಾನಾ ಬಿಸಾಕ! ಹೋದಲ್ಲಿ ತಂಕಾನೂ ಇದೆ!" ಎಂದು ದೀರ್ಘಸ್ವರದಿಂದ ಶನಿಯನ್ನೂ ಹಂದಿಯನ್ನೂ ದಾರಿಯುದ್ದಕ್ಕೂ ಶಪಿಸುತ್ತಾ ಬೈರ ಸಿದ್ದನನ್ನು, ಅವನ ಗಾಯಕ್ಕೆ ಎಲೆಮದ್ದು ಹಾಕಿ ಕಟ್ಟಿ, ಮೆಲ್ಲಗೆ, ಅಲ್ಲಲ್ಲಿ ಕುಳಿತೂ ಕುಳಿತೂ, ಬಿಡಾರಕ್ಕೆ ಹಿಡಿದು ನಡೆಸಿಕೊಂಡು ಬಂದನು.

## ೭೩

## ಕಣ್ಣೀರಿನ ಗಂಗಾತೀರ್ಥದಲ್ಲಿ ಕಟ್ಟಕಡೆಯ ಸ್ನಾನ

ಗಂಡನ ಕೋಟಲೆಗೆ ಸಹಿಸಲಾರದೆ ತವರು ಸೇರಿದ್ದ ಸುಬ್ಬಮ್ಮಗೆ ತವರು ಮನೆಯೂ ಸಾಕೋಸಾಕಾಗಿ, ಮನಸ್ಸಿನಲ್ಲಿಯೆ ಮುಂದಿನ ಸುಖದ ಹೊಂಗನಸು ಗಳನ್ನು ಕಟ್ಟುತ್ತಾ, ಮರಳಿ ಗಂಡನ ಮನೆಗೆ ಬಂದಿದ್ದಳು. ಕಾನೂರುಮನೆ ತಾನು ಬಿಟ್ಟುಹೋದಾಗ ಇದ್ದುದಕ್ಕಿಂತಲೂ ಈಗ ಹೆಚ್ಚು ಪಾಳಾಗಿ, ಗಾಳಾಗಿ ತೋರಿತು. ಮನೆಯ ಬಾಳಿನ ಬಾನಿನಲ್ಲಿ ದುಃಖದ ಮೋಡವೊಂದು ದಟ್ಟವಾಗಿ ಕವಿದು ಕೊಂಡಂತಿತ್ತು. ನಾಯಿಗಳು ಕೂಡ ಬೊಗಳಲೂ ಇಲ್ಲ; ಬಾಲವಲ್ಲಾಡಿಸಲೂ ಇಲ್ಲ. ಪ್ರತಿಯೊಬ್ಬರ ಮುಖಭಾವವೂ ಚಿಂತೆಯ ಭಾವದಿಂದ ಕುಸಿದು ಕುಗ್ಗಿದಂತಿತ್ತು.

ನಡುಹಗಲಿನಲ್ಲಿಯೂ ನಸುಗತ್ತಲಾಗಿರುತ್ತಿದ್ದ ಒಂದೇ ಕಿಟಕಿಯ ತಮ್ಮ ಕೋಣೆಯಲ್ಲಿ ಮಲಗಿದ್ದ ತನ್ನ ಗಂಡನಿಗೆ ಶುಶ್ರೂಷೆ ಮಾಡುತ್ತಿದ್ದ ಗಂಗೆಯನ್ನು

ಕಂಡೊಡನೆ ಸುಬ್ಬಮ್ಮನ ಮನಸ್ಸು ಹಲ್ಲು ಹಲ್ಲು ಕಡಿದುಕೊಂಡಿತು. ಆದರೆ ಅದೊಂದನ್ನೂ ಹೊರತೋರದೆ ರೋಗಿಯ ಹಾಸಗೆಯ ಬಳಿಗೆ ಹೋಗಿ, ಸ್ವಲ್ಪ ದೂರವಾಗಿ, ಸಂಕೋಚದಿಂದ, ಗೋಡೆಗೆ ಒರಗಿಕೊಂಡು ನಿಂತಳು. ಆ ಕಪ್ಪಿನಲ್ಲಿ ರೋಗಿಯ ಮುಖ ಸ್ಪಷ್ಟವಾಗಿ ಕಾಣುತ್ತಿರಲಿಲ್ಲ.

ಚಂದ್ರಯ್ಯಗೌಡರು ಬಡದನಿಯಿಂದ "ಯಾರದು?" ಎಂದರು.

ಆ ದನಿಯನ್ನು ಕೇಳಿದೊಡನೆ ಸುಬ್ಬಮ್ಮಗೆ ಆಶ್ಚರ್ಯವಾಯಿತು; ಧೈರ್ಯವಾಯಿತು. ಒಂದು ತೆರನಾದ ಕನಿಕರವೂ ಉಂಟಾಯಿತು. ಅಷ್ಟು ದೀನತೆ, ಅಷ್ಟು ನೋವು, ಅಷ್ಟು ಪ್ರಾರ್ಥನೆ, ಅಷ್ಟೊಂದು ಪಶ್ಚಾತ್ತಾಪವಿತ್ತು ಆ ದನಿಯಲ್ಲಿ; ಸುಪರಿಚಿತವಾಗಿದ್ದ ದರ್ಪವಾಗಲಿ ಕ್ರೌರ್ಯವಾಗಲಿ ಒಂದಿನಿತೂ ಇರಲಿಲ್ಲ.

ಸುಬ್ಬಮ್ಮ "ನಾನು" ಎಂದವಳೆ ಬಿಕ್ಕಿ ಬಿಕ್ಕಿ ಅಳತೊಡಗಿದಳು.

"ಬಂದೆಯಾ? ಒಳ್ಳೇದು!" ಎಂದು ಚಂದ್ರಯ್ಯಗೌಡರು ಸುಮ್ಮನಾದರು. ಆ ಕೋಣೆಯ ಕತ್ತಲೆಯಲ್ಲಿ ಗಂಡನ ಕಣ್ಣುಗಳಿಂದ ಸುರಿಯುತ್ತಿದ್ದ ನೀರು ಸುಬ್ಬಮ್ಮಗೆ ಕಾಣಿಸಲಿಲ್ಲ.

ಸ್ವಲ್ಪ ಹೊತ್ತಾದಮೇಲೆ ಚಂದ್ರಯ್ಯಗೌಡರು ಬಿಸಿನೀರು ಸಿದ್ಧಮಾಡುವಂತೆ ಹೇಳಿ ಗಂಗೆಯನ್ನು ಹೊರಗೆ ಕಳುಹಿಸಿದರು.

ಗೌಡರು ದೀರ್ಘವಾಗಿ ನಿಟ್ಟುಸಿರುಬಿಟ್ಟು, "ಬಂದೆಯಾ? ಒಳ್ಳೇದು!" ಎಂದು ಮತ್ತೊಮ್ಮೆ ನುಡಿದು "ಸ್ವಲ್ಪ ಹಿಡಿದುಕೊಳ್ತೀಯಾ ಎದ್ದು ಕೂತುಕೊಳ್ತೀನಿ" ಎಂದರು.

ಅಷ್ಟು ಹೇಳಿದ್ದೆ ಸಾಕು ಎಂದು ನಿಂತಿದ್ದ ಸುಬ್ಬಮ್ಮ ಬೇಗ ಬೇಗನೆ ಶಯ್ಯೆಯ ಬಳಿಗೆ ಬಂದು ಗಂಡನನ್ನು ಹಿಡಿದು ಎಬ್ಬಿಸಿ, ದಿಂಬಿಗೆ ಒರಗಿ ಕೂತುಕೊಳ್ಳುವಂತೆ ಮಾಡಿದಳು. ಗಂಡನ ದೇಹ ಎಷ್ಟು ಶೀರ್ಣವಾಗಿದೆ ಎಂಬುದನ್ನು ಸ್ಪರ್ಶಮಾತ್ರದಿಂದಲೇ ಅರಿತು ಬಹಳ ಗಾಬರಿಗೊಂಡು ನೊಂದು "ಈಗ ಹ್ಯಾಂಗದೆ?" ಎಂದಳು.

"ಹ್ಯಾಂಗಿರೋದು? ಇದ್ದ್ಹಾಂಗೆ ಇದೆ!" ಎಂದು ಗೌಡರು ದುಃಖಧ್ವನಿಯಿಂದ ಹೇಳಿ, ಕಣ್ಣೀರು ಸುರಿಸುತ್ತ "ನಾನು ಮಾಡಿದ ಪಾಪಕ್ಕೆ ಪ್ರಾಯಶ್ಚಿತ್ತ ಮಾಡಿಕೊಳ್ತಿದ್ದೀನಿ" ಎಂದರು.

ಮುಖದ ಮೇಲೆ ಬಿದ್ದಿದ್ದ ನಸುಬೆಳಕಿನಲ್ಲಿ ಕಂಬನಿಗಳು ಮಿರುಗುತ್ತಿದ್ದುದು ಸುಬ್ಬಮ್ಮಗೆ ಕಾಣಿಸಿತು. ಆಕೆಯೂ ಅತ್ತಳು.

ಮುಖದಮೇಲೆ ಗಡ್ಡ ಮೀಸೆಗಳು ಹೊದೆಯಾಗಿ ಬೆಳೆದು, ತಲೆ ಕೂದಲೆಲ್ಲ ಕೆದರಿಕೊಂಡು, ಬಡಕಲಾಗಿ, ವಿಕಾರವಾಗಿ ಕಾಣಿಸುತ್ತಿದ್ದ ಗಂಡನನ್ನು ನೋಡಿ

ನೋಡಿ ಮತ್ತೂ ಅತ್ತಳು. ತಾನು ಕಟ್ಟಿದ್ದ ಕನಸಿನ ಚಿತ್ರಕ್ಕೂ ವಾಸ್ತವಕ್ಕೂ ಸ್ವರ್ಗ ನರಕಗಳ ತಾರತಮ್ಯವಿತ್ತು.

ಅದುವರೆಗೆ ಆಕೆಯ ಪ್ರೀತಿಯಲ್ಲಿದ್ದ ಪ್ರಣಯದ ಭಾವ ಗಾಳಿಯಿಲ್ಲದ ದೀಪದಂತೆ ಉಸಿರುಕಟ್ಟಿ ನಂದಿಹೋಯಿತು. ತಾಯಿ ಕಷ್ಟದಲ್ಲಿರುವ ಮಗುವನ್ನು ಕಂಡು ಮನಕರಗುವಂತೆ, ಸರಿಯಾಗಿರುವವರು ರೋಗದಿಂದ ನರಳುತ್ತಿರುವ ಯಾರನ್ನಾದರೂ ಕಂಡು ಅನುಕಂಪಿಸುವಂತೆ, ಸುಬ್ಬಮ್ಮಗೆ ಗೌಡರಮೇಲೆ ಕನಿಕರವುಕ್ಕಿತು.

ಅಂದಿನಿಂದ ಸುಬ್ಬಮ್ಮ ಹಗಲಿರುಳೂ ಗಂಡನ ಪಕ್ಕದಲ್ಲಿ ಕುಳಿತು ಶುಶ್ರೂಷೆ ಮಾಡತೊಡಗಿದಳು. ರೋಗ ಹೆಚ್ಚಾಗುತ್ತಿದ್ದರೂ ಚಂದ್ರಯ್ಯಗೌಡರೇನೊ ಹೆಚ್ಚು ಹೆಚ್ಚು ಹರ್ಷಚಿತ್ತರಾಗಲಾರಂಭಿಸಿದರು.

ಗಂಗೆಯ ವಿಚಾರವಾಗಿ ಸುಬ್ಬಮ್ಮ ತಟಸ್ಥಭಾವದಿಂದಿದ್ದಳು. ಗಂಡನೊಡನೆ ಆಗಲಿ, ಇತರರೊಡನೆ ಆಗಲಿ, ಆ ಪ್ರಸ್ತಾಪವನ್ನಾಗಲಿ ಹಿಂದೆ ನಡೆದಿದ್ದ ಇನ್ನಾವ ಪ್ರಸ್ತಾಪವನ್ನಾಗಲಿ ಎತ್ತಲಿಲ್ಲ. ಆದರೂ ಗೌಡರಲ್ಲಿ ಒಂದು ವಿಚಿತ್ರ ಪರಿವರ್ತನೆ ತಲೆದೋರಿ ಪ್ರಬಲವಾಯಿತು. ಅವರು ಮೊದಲು ಮೊದಲು ಗಂಗೆಯ ವಿಚಾರವಾಗಿ ಉದಾಸೀನರಾಗುತ್ತಾ ಬಂದು ಕಡೆಕಡೆಗೆ ಅವಳನ್ನು ತಿರಸ್ಕರಿಸತೊಡಗಿದರು. ನೆವಗಳನ್ನು ತಂದೊಡ್ಡಿ ಆಕೆ ತಾವು ಮಲಗಿದ್ದ ಕೋಣೆಗೆ ಕಾಲಿಡಬಾರದೆಂದು ಕಟ್ಟಪ್ಪಣೆ ಮಾಡಿಬಿಟ್ಟರು. ಜೊತೆಗೆ ಸುಬ್ಬಮ್ಮನನ್ನು ದೇವತೆಯಂತೆ ಭಾವಿಸತೊಡಗಿದರು. ಆಕೆ ಮಾಡುತ್ತಿದ್ದ ಶುಶ್ರೂಷೆಗೆ ಮನಸೋತು, ದಿನ ದಿನವೂ ಆಕೆಯನ್ನು ಒಲವಿನಿಂದ ನಿಡಿದಾಗಿ ನೋಡಿ, ಆನಂದದಿಂದ ಕಣ್ಣೀರಿಡದೆ ಇರುತ್ತಿರಲಿಲ್ಲ. ಕೆಲವು ಸಾರಿ ಸುಬ್ಬಮ್ಮನೊಡನೆ ಚಿಕ್ಕ ಮಕ್ಕಳ ಹಾಗೆ ಏನೇನೊ ಆಲಾಪಿಸುತ್ತಿದ್ದರು:

"ನನ್ನ ಕಾಯಿಲೆ ಗುಣಾದ ಕೂಡ್ಲೆ ನಾವು ಬ್ಯಾರೆ ಹೋಗಾನ. ಇವರ ಸಾವಾಸವೆ ನಮಗೆ ಬ್ಯಾಡ. ಇಬ್ಬರೇ ಇದ್ದುಬಿಡಾನ ನಾನು ನೀನು!... ಒಂದು ಸಣ್ಣ ಹೆಂಚಿನಮನೆ ಕಟ್ಟಿಕೊಂಡ್ರೆ ಸಾಲ್ದೇನು? ... ಆ ತ್ವಾಟದಾಚೆ ದಿಬ್ಬ ನೋಡೀಯಲ್ಲಾ ನೀನು? ಆ ಜಾಗ ಲಾಯ್ಕಾಗ್ತದೆ... ವೆಂಕಪ್ಪಯ್ಯ ಜೋಯಿಸರಕ್ಕೈಲಿ ಜಾಗ ನೋಡಿಸಬೇಕು... ಈ ಮನೇಲಿ ರೇಜಿಗೆ ತಪ್ಪದು!... ಯಾರೋ ನಮ್ಮಮೇಲೆ ಮಾಟ ಮಾಡಿರಬೇಕು. ಇಲ್ಲದಿದ್ರೆ ನಾ ನಿನ್ನ ಮನೆ ಬಿಟ್ಟು ಓಡಿಸ್ತಿದ್ದೆನೆ? ..."

ಹೀಗೆಲ್ಲಾ ಮಾತಾಡಿ ಸುಬ್ಬಮ್ಮನ ಕೈಯನ್ನು ತೆಗೆದು ಹಿಡಿದು ತಮ್ಮ ಗಡ್ಡ ಮೀಸೆಗಳ ನಡುವೆ ಮುಖದ ಮೇಲೆ ಆಡಿಸಿಕೊಳ್ಳುತ್ತಿದ್ದರು. ಅಂತಹ ಸಮಯಗಳಲ್ಲಿ ಸುಬ್ಬಮ್ಮಗೆ ಅವರು ಗಡ್ಡ ಮೀಸೆ ಬಂದ ಕೈಕೂಸಿನಂತೆ ತೋರುತ್ತಿದ್ದರು!

ಗಂಗೆಯಾದರೊ ಅನ್ಯರೀತಿಯಾಗಿ ಭಾವಿಸಿದಳು, ಸುಬ್ಬಮ್ಮನ ಪಿತೂರಿಯೆ ಚಂದ್ರಯ್ಯಗೌಡರು ತನ್ನನ್ನು ತಿರಸ್ಕರಿಸಲು ಮುಖ್ಯ ಕಾರಣವೆಂದು! ಅಂತೂ ಸುಬ್ಬಮ್ಮ ಬಂದು ಮೂರು ನಾಲ್ಕು ತಿಂಗಳೊಳಗಾಗಿ ಅವಳು ಕಾನೂರು ಮನೆಯಲ್ಲಿ ವಾಸಿಸುವುದನ್ನೂ ಬಿಟ್ಟು ಮೊದಲಿನಂತೆ ತನ್ನ ಬಿಡಾರದಲ್ಲಿ ಇರತೊಡಗಿದಳು. ಜೇನು ಸೋರಿಹೋದ ಹಲ್ಲೆಯಂತೆ ನೀರಸರಾಗಿದ್ದ ಚಂದ್ರಯ್ಯಗೌಡರಲ್ಲಿ ಆಕೆಗೆ ತಕ್ಕಷ್ಟು ಬೇಸರವೂ ಹುಟ್ಟಿದ್ದಿತೆಂದು ತೋರುತ್ತದೆ.

ಚಂದ್ರಯ್ಯಗೌಡರು ಗಂಗೆಯ ವಿಚಾರದಲ್ಲಿ ಮಾತ್ರವೆ ಅಲ್ಲದೆ ಸೇರೆಗಾರರನ್ನೂ ಬಹಳ ಬಿಗಿಯಿಂದ ನೋಡತೊಡಗಿದರು. ಅವರನ್ನೂ ಮುಖನೋಡದಂತೆ ಓಡಿಸಿಬಿಡುತ್ತಿದ್ದರೋ ಏನೋ! ಆದರೆ ದಿನವೂ ಸಾಯಂಕಾಲ ಅವರು ಹಳೆಪೈಕದ ತಿಮ್ಮನಿಂದ ಕಳ್ಳು ತಂದುಕೊಡುತ್ತಿದ್ದರು. ಕೀಳುಜಾತಿಯ ತಿಮ್ಮ ಮನೆಯೊಳಕ್ಕೆ ಬರುವಂತಿರಲಿಲ್ಲ. ಗೌಡರು ಕಾಯಿಲೆಯ ದೆಸೆಯಿಂದ ಹೊರಕ್ಕೆ ಹೋಗುವಂತಿರಲಿಲ್ಲ. ಅಲ್ಲದೆ ರೋಗದ ಪ್ರಾರಂಭದಲ್ಲಿ ರಾಮಯ್ಯ ಆಸ್ಪತ್ರೆಯಿಂದ ಔಷಧಿಗಳನ್ನು ತರಿಸಿಕೊಟ್ಟು, ಪಥ್ಯ ಹೇಳಿದಾಗ, ಡಾಕ್ಟರು ಕಳ್ಳು ಕುಡಿಯಬಾರದೆಂದು ಹೇಳಿದ್ದಾರೆ ಎಂದಿದ್ದರೂ, ಗೌಡರು ಸೇರೆಗಾರರ ಸಹಾಯದಿಂದ ತಮಗೆ ಬೇಕಾದಷ್ಟನ್ನು ತರಿಸಿಕೊಂಡು ಗುಟ್ಟಾಗಿ ಕುಡಿಯುತ್ತಿದ್ದರು. ನಾಲಗೆಗೆ ರುಚಿಸದಿದ್ದ ಔಷಧಿಗಳನ್ನು ಗುಟ್ಟಾಗಿ ಹೊರಗೆಸೆಯಿಸುತ್ತಿದ್ದರು. ಅದು ರಾಮಯ್ಯನಿಗೆ ಹೇಗೋ ಗೊತ್ತಾಗಿ ತಂದೆಯನ್ನು ಬಾಯಿಗೆ ಬಂದಂತೆ ಅಂದನು. ತಂದೆಗೂ ಮಗನಿಗೂ ಮೊದಲೇ ಹೊಗೆಯುತ್ತಿದ್ದ ಮನಸ್ತಾಪ ಮತ್ತೂ ಹೆಚ್ಚಾಯಿತು.

ಸೀತೆಯನ್ನು ಕಳುಹಿಸುವುದಿಲ್ಲವೆಂದು ಮುತ್ತಳ್ಳಿಯವರು ಹೇಳಿದಮೇಲೆ ಚಂದ್ರಯ್ಯಗೌಡರು ಮತ್ತೊಂದು ಮದುವೆಮಾಡಿಕೊಳ್ಳುವಂತೆ ರಾಮಯ್ಯನಿಗೆ ದಿನವೂ ಕಾಟ ಕೊಡುತ್ತಿದ್ದರು. ಆ ವಿಚಾರದಲ್ಲಿ ತಂದೆಗೂ ಮಗನಿಗೂ ಅನೇಕ ವೇಳೆ ಬಿಸಿಮಾತುಗಳಾಗಿದ್ದುವು. ಗೌಡರಿಗೆ ರೋಗ ಹಿಡಿಯದಿದ್ದಿದ್ದರೆ, ಹೆಣ್ಣು ಕೇಳಿ ಮಗನ ಮದುವೆಗೆ ಹಲವು ಪ್ರಯತ್ನಗಳನ್ನು ಮಾಡಿಯೆ ಮಾಡುತ್ತಿದ್ದರು. ಆದರೆ ರಾಮಯ್ಯನ ಪುಣ್ಯಕ್ಕೊ ಎಂಬಂತೆ ಅವರು ಹಾಸಗೆ ಹಿಡಿದುಬಿಟ್ಟರು. ಆದರೂ ಸಮಯ ಸನ್ನಿವೇಶಗಳೊಂದನ್ನೂ ಗಣನೆಗೆ ತಾರದೆ, ಯಾರಿದ್ದಾರೆ ಯಾರಿಲ್ಲ ಎಂಬುದೊಂದನ್ನೂ ನೋಡದೆ, ಮಗನ ಮದುವೆಯ ವಿಚಾರವಾಗಿ ಮಾತಾಡುತ್ತಿದ್ದರು. ಕಾಯಿಲೆ ನೋಡಲು ಬಂದವರೊಡನೆಯೆಲ್ಲಾ ಮಗನನ್ನು ಹೇಗಾದರೂ ಮಾಡಿ ಮದುವೆಗೊಪ್ಪಿಸಿ ಎಂದು ಬೇಡುತ್ತಿದ್ದರು. ಅವಕಾಶ ಸಿಕ್ಕಿದಾಗೆಲ್ಲಾ ರಾಮಯ್ಯನನ್ನು ಅವನ ಮುಂದೆಯೇ ಬಾಯಿಗೆ ಬಂದಂತಾಡು

ತ್ತಿದ್ದರು. ಕೆಲವು ಮಾತುಗಳಂತೂ ರಾಮಯ್ಯನ ಹೃದಯದ ನರಗಳನ್ನು ಚುಚ್ಚಿ ನೋಯಿಸುತ್ತಿದ್ದುವು. ರಾಮಯ್ಯನ ಹೆಂಡತಿಯನ್ನು ಅವನ ಕಣ್ಣು ಮುಂದೆಯೇ ಮತ್ತೊಬ್ಬನಿಗೆ ಕೂಡಿಕೆ ಮಾಡಿ ಕೊಡುತ್ತಾರೆಂದೂ, ಬೆನ್ನಹಿಂದೆ ಹುಟ್ಟಿದ ತಂಗಿಯನ್ನು ಅವಳ ಗಂಡನ ಮನೆಯವರು ಸೆರೆಯಲ್ಲಿಟ್ಟಿದ್ದರೂ ಮಲತಾಯಿಯ ಮಗಳೆಂಬ ಹೊಟ್ಟೆಕಿಚ್ಚಿನಿಂದ ತುಟಿಪಿಟಕ್ಕೆನ್ನದೆ ಸುಮ್ಮನಿರುವ ರಾಮಯ್ಯನನ್ನು ಹೇಡಿಯೆಂದೂ (ಸೀತೆಯ ವಿಷಾದ ಪ್ರಸಂಗ ನಡೆದ ತರುವಾಯ ಚಿನ್ನಯ್ಯ ಪುಟ್ಟಮ್ಮನನ್ನು ತವರುಮನೆಗೆ ಹೋಗಕೂಡದೆಂದೂ ತಡೆದಿದ್ದನು.) ಅವರ ಮೇಲಿನ ಹಟಕ್ಕಾದರೂ ಮತ್ತೊಂದು ಹೆಣ್ಣನ್ನು ಮದುವೆಯಾಗಿ ಆಳದಿರುವವನು ಶಿಖಂಡಿ ಎಂದೂ ಹೇಳಿ ಹೇಳಿ ಮಗನ ಜೀವವನ್ನು ಹಿಂಡಿ ಬಿಟ್ಟಿದ್ದರು.

ಕ್ರಮೇಣ ರಾಮಯ್ಯ ತಂದೆ ಮಲಗಿದ್ದ ಕೋಣೆಗೆ ಹೋಗುವುದನ್ನೆ ಕಡಿಮೆ ಮಾಡಿಬಿಟ್ಟನು. ಆಮೇಲೆ ದಿನಕ್ಕೊಂದು ಸಾರಿ ಮಾತ್ರ ಅಲ್ಲಿ ಹೊರಗಿನವರು ಯಾರು ಇಲ್ಲದಿದ್ದಾಗ ಹೋಗಿ ನೋಡಿಕೊಂಡು ಬರುತ್ತಿದ್ದನು. ಸುಬ್ಬಮ್ಮ ಮನೆಗೆ ಬಂದು ಚಂದ್ರಯ್ಯಗೌಡರಿಗೆ ಆಕೆಯ ಗೀಳು ಹಿಡಿದಮೇಲೆ ಆ ಕೋಣೆಗೆ ಹೋಗುವುದನ್ನೆ ಬಿಟ್ಟು, ಹೊರಗಿನಿಂದಲೆ ವಿಚಾರಿಸಿಕೊಳ್ಳತೊಡಗಿದನು.

ನಿಜವಾಗಿಯೂ ಅದಕ್ಕೆ ಮುಖ್ಯ ಕಾರಣ ರಾಮಯ್ಯನ ತಾತ್ಸಾರವಾಗಿರಲಿಲ್ಲ; ಗೌಡರಿಗೆ ಹೆಂಡತಿಯ ಸಂಗ ಹೊರತೂ ಉಳಿದ ಯಾರ ಗೊಡವೆಯೂ ಬೇಡ ವಾಗುತ್ತ ಬಂದುದರಿಂದ, ಅವರನ್ನು ನೋಡಲು ಹೋದವರ ಮೇಲೆಲ್ಲಾ ನಿರ್ನಿಮಿತ್ತವಾಗಿ ಸಿಡಿದುಬೀಳುತ್ತಿದ್ದರು. ಅವರಿಗೆ ಸುಬ್ಬಮ್ಮನೊಬ್ಬಳೆ ಸರ್ವ ಪ್ರಪಂಚವೂ ಆಗಿಬಿಟ್ಟಿದ್ದಳು. ಕಡೆ ಕಡೆಗೆ, ಪಿಶಾಚಿ ಹಿಡಿದಂತೆ ಅವರನ್ನು ಹಿಡಿದಿದ್ದ, ಮಗನ ಮದುವೆಯ ವಿಚಾರವನ್ನೂ ಕೂಡ ಕೈಬಿಟ್ಟರು. ಮುತ್ತಳ್ಳಿ ಯವರನ್ನೂ ಹೂವಯ್ಯನನ್ನೂ ಹಿಂದಿನಂತೆ ಬಾಯಿಗೆ ಬಂದಂತೆ ನಿಂದಿಸುವ ಹವ್ಯಾಸವನ್ನೂ ಬಿಟ್ಟರು. ಆದರೆ ಒಂದು ವಿಚಾರ ಮಾತ್ರ ಅವರೆದೆಗೆ ಬಲ ವಾಗಿ ನಾಟಿದಂತಿತ್ತು: ಪುಟ್ಟಮ್ಮನನ್ನು ಹೆತ್ತ ತಂದೆಯ ಕಾಯಿಲೆ ನೋಡುವು ದಕ್ಕಾಗಿಯಾದರೂ ತವರುಮನೆಗೆ ಕಳುಹಿಸದಿದ್ದದ್ದು.

ಬೇಸಗೆಯ ರಜಾಕ್ಕೆ ಮನೆಗೆ ಬಂದಿದ್ದ ವಾಸುವಿನೊಡನೆ "ನಿನ್ನ ಅಕ್ಕಯ್ಯನ್ನ ಕರಕೊಂಡುಬಂದು ತೋರಿಸ್ತೀಯಾ ಒಂದು ಸಾರಿ? ನೋಡಬೇಕೂ ಅಂತ ನಂಗೆ ಬಾಳ ಆಸೆಯಾಗ್ತದೆ" ಎಂದು ಹೇಳಿ ಅಳುತ್ತಿದ್ದರಂತೆ. ಸದಾ ಗಂಟು ಮೋರೆ ಹಾಕಿಕೊಂಡಿರುತ್ತಿದ್ದ ರಾಮಯ್ಯನನ್ನು ಮಾತಾಡಿಸಿ ರೇಗಿಸುವ ಗೋಜಿಗೆ ಹೋಗದೆ ವಾಸು ಕೆಳಕಾನೂರಿಗೆ ಹೋಗಿ ಹೂವಯ್ಯನೊಡನೆ ಅದನ್ನು

ಹೇಳಿದ್ದನು. ಅವನು ಚಿನ್ನಯ್ಯನಿಗೆ ರೋಗದಿಂದ ನರಳುತ್ತಿದ್ದ, ಮಗಳನ್ನು ನೋಡಲಾಶಿಸುವ ತಂದೆಯನ್ನು ಕಾಣಲು ಕಾತರೆಯಾಗಿರುವ ಮಗಳನ್ನು ತಡೆಯುವುದು ಮಹಾ ಪಾಪವೆಂದು ಎಷ್ಟು ಹೇಳಿದರೂ ಕೇಳದೆ, ಅವನು ತನ್ನ ಹಿಡಿದ ಹಟವನ್ನೇ ಸಾಧಿಸಿಬಿಟ್ಟಿದ್ದನು....

ವಾಸು ಬೇಸಗೆ ರಜಾ ಮುಗಿಸಿಕೊಂಡು ಮತ್ತೆ ತೀರ್ಥಹಳ್ಳಿಗೆ ಓದಲು ಹೋದನು. ಹಿಂದೆ ಮನೆ ಬಿಟ್ಟುಹೋಗುತ್ತಿದ್ದಾಗ ಕಣ್ಣೀರು ಸುರಿಸುತ್ತಿದ್ದವನು ಈ ಸಾರಿ ಸಂತೋಷದಿಂದಲೆ ಹೋದನು. ಅವನಿಗೆ ಕಾನೂರು ಮನೆ ರೇಜಿಗೆಯ ಗೂಡಾಗಿ ಕಾಣುತ್ತಿತ್ತು. ಆದ್ದರಿಂದಲೆ ಅವನು ಬೇಸಗೆಯ ರಜದಲ್ಲೆಲ್ಲಾ ಸಮಯ ಸಿಕ್ಕಿದರೆ ಸಾಕೆಂದು ಕೆಳಕಾನೂರಿಗೆ ಹೋಗಿ ಹೂವಯ್ಯನೊಡನೆ ಕಾಲ ಕಳೆಯುತ್ತಿದ್ದದ್ದು.

ಚಿಂತೆ ಹಿಡಿದ ರಾಮಯ್ಯ ಯಾಂತ್ರಿಕವಾಗಿ ಮನೆಗೆಲಸಗಳ ಮೇಲ್ವಿಚಾರಣೆಯನ್ನು ನೋಡಿಕೊಳ್ಳುತ್ತಿದ್ದರೂ ಸಂಪೂರ್ಣವಾಗಿ ಉದಾಸೀನನಾಗುತ್ತಿದ್ದನು. ಕೆಲವು ಸಾರಿ ಚಿಂತೆಮಾಡುವುದನ್ನೂ ಬಿಟ್ಟು ಶೂನ್ಯಚಿತ್ತನಾಗಿ ಮಂಕುಹಿಡಿದವನಂತೆ ಉಪ್ಪರಿಗೆಯ ಮೂಲೆಯಲ್ಲಿ ಬಹಳ ಹೊತ್ತಿನವರೆಗೂ ಕುಳಿತುಬಿಡುತ್ತಿದ್ದನು.

ವೆಂಕಪ್ಪಯ್ಯ ಜೋಯಿಸರೂ ಮತ್ತು ಇತರ ಕೆಲವು ಹಳ್ಳಿಯ ಅಳಲೆಕಾಯಿ ಪಂಡಿತರೂ ತಮಗೆ ಇಷ್ಟವಾದಾಗ ಬಂದೂ ಬಂದೂ ಗೌಡರ ರೋಗನಿವಾರಣೆಗಾಗಿ ಪ್ರಯತ್ನಿಸಿ ಸಂತೃಪ್ತರಾಗಿ ಹೋಗುತ್ತಿದ್ದರು. ರಾಮಯ್ಯ ಅದಾವುದನ್ನೂ ಗಮನಕ್ಕೇ ತೆಗೆದುಕೊಳ್ಳುತ್ತಿರಲಿಲ್ಲ.

ತಿಂಗಳಮೇಲೆ ತಿಂಗಳು ಕಳೆದುಹೋಗುತ್ತಿತ್ತು. ಗೌಡರ ರೋಗ ಪ್ರಬಲವಾಗುತ್ತಲೇ ಇತ್ತು. ರೋಗ ಪ್ರಬಲವಾದಂತೆ ಅವರು ಭಯಗೊಂಡ ಮಗು ತಾಯಿಯನ್ನು ಹೆಚ್ಚು ಹೆಚ್ಚಾಗಿ ಬಿಗಿಹಿಡಿಯುವಂತೆ ಸುಬ್ಬಮ್ಮನನ್ನು ಬಿಗಿಹಿಡಿದರು. ಮೂರು ಹೊತ್ತೂ ಸುಬ್ಬಮ್ಮ ಅವರ ಬಳಿ ಇರಬೇಕಾಗಿತ್ತು. ಆಕೆ ಹೊರಗೆ ಹೋಗಿ ಬರುವುದು ಒಂದಿನಿತು ತಡವಾದರೆ, ಕೂಗಲಾರದ ಗಂಟಲಿನಿಂದ ಗಟ್ಟಿಯಾಗಿ ಕೂಗಿಕೊಂಡು ಮಕ್ಕಳಂತೆ ಚೀತ್ಕಾರಮಾಡುತ್ತಿದ್ದರು. ಬರಬರುತ್ತಾ ಅವರ ಆಕೃತಿಯೂ ಸಂಕುಚಿತವಾಗುತ್ತಿತ್ತು.

ನಡೂ ಮಳೆಗಾಲದಲ್ಲಿ ಚಂದ್ರಯ್ಯಗೌಡರ ಮೈಗೆ ಬಾಕು ಬಂದಿತು. ಸುಬ್ಬಮ್ಮ ಗಂಡನನ್ನು ಕುರಿತು, ತಾಯಿ ಕಂದಗೆ ಹೇಳುವಂತೆ, ಕಳ್ಳು ಕುಡಿಯುವುದು ಬೇಡವೆಂದು ಎಷ್ಟು ಹೇಳಿದರೂ ಅವರು ಕೇಳಲಿಲ್ಲ. ಕಡೆಗೆ ಸುಬ್ಬಮ್ಮ ಹಳೆಪೈಕದ ತಿಮ್ಮನಿಗೂ ಸೇರೆಗಾರರಿಗೂ ಕಳ್ಳು ತರಬಾರದೆಂದು ಹೇಳಿಬಿಟ್ಟಳು. ಗೌಡರು ರೇಗಿಕೊಂಡು ಆಹಾರವನ್ನೂ ಹೆಂಡತಿಯೊಡನೆ ಮಾತನ್ನೂ ಬಿಟ್ಟರು.

ಸುಬ್ಬಮ್ಮ ಕಣ್ಣೀರು ಕರೆಯುತ್ತಾ ಎಷ್ಟು ದಮ್ಮಯ್ಯ ಹೇಳಿದರೂ ಸಫಲವಾಗ ಲಿಲ್ಲ. ಕಡೆಗೆ, ಏನಾದರಾಗಲಿ ದೇವರೇ ಗತಿಯೆಂದು, ಎಂದಿನಂತೆ ಕಳ್ಳು ತರಿಸಿ ಕೊಡಲಾರಂಭಿಸಿದಳು. ಗೌಡರು ಕಳ್ಳನ್ನೂ ಕುಡಿಯುತ್ತಿದ್ದರು, ಆಹಾರವನ್ನೂ ಕೊಂಚಮಟ್ಟಿಗೆ ಸ್ವೀಕರಿಸುತ್ತಿದ್ದರು. ಆದರೆ ಹೆಂಡತಿಯೊಡನೆಯಾಗಲಿ ಇನ್ನಾ ರೊಡನೆಯಾಗಲಿ ಮಾತಾಡುತ್ತಿರಲಿಲ್ಲ.

ಒಂದೆರಡು ದಿನಗಳು ಹೀಗೆ ಕಳೆದ ತರುವಾಯ, ಸುಬ್ಬಮ್ಮ ಗಂಡನ ಕಾಲು ಹಿಡಿದುಕೊಂಡು ತನ್ನ ಮೇಲೆ ಸಿಟ್ಟುಮಾಡಬಾರದೆಂದೂ ಮಾತಾಡಬೇಕೆಂದೂ ಬೇಡಿಕೊಂಡಳು. ಗೌಡರು ಮಾತಾಡಲು ಯತ್ನಿಸಿದರೂ ಆಗಲಿಲ್ಲ. ಆಗ ಸುಬ್ಬಮ್ಮ ನಿಗೆ ಗೊತ್ತಾಯಿತು, ಗಂಡನಿಗೆ ನಾಲಗೆ ಬಿದ್ದುಹೋಗಿದೆ ಎಂದು! ಅಯ್ಯೋ, ಇಷ್ಟೆಲ್ಲ ಮಾಡಿದರೂ ಗಂಡನ ಕೊನೆಯ ಮಾತು ಜಗಳದಲ್ಲಿಯೆ ಪರ್ಯವಸಾನ ವಾಯಿತೆ ಎಂದು ಸುಯ್ದು ಶೋಕಿಸಿದಳು.

ಕಾನೂರು ಚಂದ್ರಯ್ಯಗೌಡರಿಗೆ ಕಾಯಿಲೆ ಜೋರಾಗಿದೆ ಎಂದು ಸುದ್ದಿ ಹಬ್ಬಿತು. ಅನೇಕರು ಒಂದು ಒಂದು ಕಡೆಯಸಾರಿ ನೋಡಿಕೊಂಡು ಹೋಗ ತೊಡಗಿದರು. ಆದರೆ ಮುತ್ತಳ್ಳಿಯಿಂದ ಯಾರೂ ಬರಲಿಲ್ಲ. ಮನೆಯ ಹೆಣ್ಣು ಮಗಳು ಪುಟ್ಟಮ್ಮನನ್ನೂ ಕೂಡ ಕಳುಹಿಸಲಿಲ್ಲ. ಪುಟ್ಟಮ್ಮ ಅತ್ತು ಬೇಡಿದಾಗ ಚಿನ್ನಯ್ಯ 'ನೀನು ಹೋದರೆ ಹಿಂದಕ್ಕೆ ಬರೋದೆ ಬೇಡ!' ಎಂದು ಗದರಿಸುತ್ತಿದ್ದನಂತೆ!

ಆದರೂ ಚಂದ್ರಯ್ಯಗೌಡರು ಸಾಯಲಿಲ್ಲ. ಇಂದು ನಾಳೆ ನಾಡಿದ್ದು ಆಚೆ ನಾಡಿದ್ದು ಅದರಾಚೆನಾಡಿದ್ದು ಎಂದು ಕಾಲವನ್ನೂ ಕಾಲನನ್ನೂ ಮುಂದು ಮುಂದಕ್ಕೆ ತಳ್ಳುತ್ತಿದ್ದರು.

ಗದ್ದೆ ಕೊಯಿಲ ಪೂರೈಸಿ ಸುಮಾರು ಒಂದು ತಿಂಗಳು ಕಳೆದಿದ್ದಿರಬಹುದು. ಒಂದು ಸಂಜೆ; ಕಾನೂರುಮನೆಯಲ್ಲಿ ಕೋಣೆಯೊಳಗೆ ಹಾಸಗೆಯ ಮೇಲೆ ಶವಸದೃಶವಾಗಿ ಮೂಕವಾಗಿ ಮಲಗಿದ್ದ ಚಂದ್ರಯ್ಯಗೌಡರ ಪಕ್ಕದಲ್ಲಿ, ತಲೆಯ ಬಳಿ, ಗೋಡೆಗೊರಗಿ ನಸು ತಲೆಬಾಗಿ ದೀರ್ಘಚಿಂತಾಮಗ್ನಳಾಗಿ ಕುಳಿತಿದ್ದ ಸುಬ್ಬಮ್ಮನ ಹೊರತೂ ಬೇರೆ ಯಾರೂ ಇರಲಿಲ್ಲ. ಅಷ್ಟು ದೊಡ್ಡಮನೆ ನಿರ್ಜನವಾಗಿ ನಿಶ್ಯಬ್ದವಾಗಿ ಪಾಳಾಗಿ ಗಾಳಾಗಿತ್ತು.

ಹೊರಗೆ ಎಲ್ಲಿಯೋ ಹೋಗಿದ್ದ ನಿಂಗನ ಮಗ ಪುಟ್ಟ ಇದ್ದಕ್ಕಿದ್ದ ಹಾಗೆ ಕೋಣೆ ಯೊಳಕ್ಕೆ ಓಡಿಬಂದು "ಅಮ್ಮ ಯಾರೋ ಬರ್‍ತಿದ್ದಾರೆ. ಗಡ್ಡ ಬಿಟ್ಕೊಂಡಾರೆ" ಎಂದು ಸಡಗರದಿಂದ ಹೇಳಿದನು. ಹುಡುಗನ ಕಣ್ಣಿನಲ್ಲಿಯೂ ದನಿಯಲ್ಲಿಯೂ ಅಷ್ಟೊಂದು ಉದ್ವೇಗವಿದ್ದುದನ್ನು ಕಂಡು ಸುಬ್ಬಮ್ಮನೂ ಸ್ವಲ್ಪ ಕುತೂಹಲಿತೆ ಯಾಗಿ ಮೆಲ್ಲನೆದ್ದು ಕೋಣೆಯ ಬೆಳಕಿಂಡಿಯಿಂದ ಹೊರಗೆ ನೋಡಿದಳು.

ಬರುತ್ತಿದ್ದ ವ್ಯಕ್ತಿ ಹೂವಯ್ಯನೆಂದು ಒಡನೆಯೆ ಗೊತ್ತಾಗಿ, ಪುಟ್ಟನಿಗೆ, "ಒಳಗೆ ಕರಕೊಂಡುಬಾರೊ" ಎಂದು ಹೇಳಿ, ಒಂದು ಚಾಪೆ ಹಾಸಿದಳು.

ತಾಯಿ ಸತ್ತುಹೋದಮೇಲೆ ಹೂವಯ್ಯ ಮೊದಲಿಗಿಂತಲೂ ಹೆಚ್ಚು ಗಭೀರನೂ ಮೌನಿಯೂ ಆಗತೊಡಗಿದನು. ಸೀತೆ ಕೆಳಕಾನೂರಿನಲ್ಲಿರುವ ತನಕ ಹಗಲಿರುಳೂ ಆಕೆಯ ಶುಶ್ರೂಷೆ ಮಾಡುತ್ತಿದ್ದನು. ಅವಳ ಸಾನ್ನಿಧ್ಯ ಸೇವೆಗಳಿಂದ ಅವನಿಗೆ ತಾಯಿಯನ್ನು ಕಳೆದುಕೊಂಡ ದುಃಖಭಾರ ಬೆನ್ನು ಮುರಿಯುವಷ್ಟು ಅಸಹನೀಯವಾಗಿರಲಿಲ್ಲ. ಆದರೆ ಸೀತೆ ಮುತ್ತಳ್ಳಿಗೆ ಹೋದಮೇಲೆ ಆತನ ರೀತಿ ಬೇರೆಯಾಯಿತು. ತನ್ನ ದುಃಖವನ್ನಾಗಲಿ ಚಿಂತೆಯನ್ನಾಗಲಿ ಯಾರೊಬ್ಬರಿಗೂ ಪ್ರದರ್ಶಿಸದೆ ಗುಟ್ಟಾಗಿ ಮೆಲುಕುಹಾಕುತ್ತಿದ್ದನು. ಮನೆಗೆಲಸಗಳಲ್ಲಿಯೂ ಇತರ ಕಾರ್ಯಗಳಲ್ಲಿಯೂ ಪ್ರಯತ್ನಪೂರ್ವಕವಾಗಿ ಎಂದಿನಂತಿರುವಂತೆ ನಟಿಸುತ್ತಿದ್ದನು. ಆದರೂ ದಿನದಿನಕ್ಕೂ ಹೆಚ್ಚು ಹೆಚ್ಚು ಕೃಶವಾಗುತ್ತಿದ್ದ ದೇಹವೂ ಕ್ಷೌರವಿಲ್ಲದೆ ನೀಳ ನೀಳವಾಗಿ ಬೆಳೆಯುತ್ತಿದ್ದ ಗಡ್ಡ ಮೀಸೆ ಕೂದಲುಗಳೂ ಆತನ ಮನಃಸ್ಥಿತಿಯನ್ನೂ ಆತ್ಮಾನುಭವಗಳನ್ನೂ ಘೋಷಿಸಿ ಚಿತ್ರಿಸುತ್ತಿದ್ದುವು.

ಹೂವಯ್ಯ ಕೋಣೆಯೊಳಕ್ಕೆ ಬಂದು ಸುಬ್ಬಮ್ಮನ ಇಷ್ಟದಂತೆ ಆಕೆ ಹಾಸಿದ್ದ ಗೀಕಿನ ಚಾಪೆಯಮೇಲೆ ಕೂತುಕೊಂಡನು. ಹರಳೆಣ್ಣೆಯ ದೀಪದ ಕೆಂಬೆಳಕಿನಲ್ಲಿ ಚಂದ್ರಯ್ಯಗೌಡರನ್ನು ನೋಡಿ ಅವನಿಗೆ ಬೆರಗೂ ನೋವೂ ಕನಿಕರ ಮರುಕಗಳೂ ಒಮ್ಮೆಯೆ ಉಂಟಾದುವು.

'ಆ ಅಂದಿನ ದರ್ಪದ ಚಂದ್ರಯ್ಯಗೌಡರೆಲ್ಲಿ? ಹಾಸಗೆಯ ಮೇಲೆ ಸುರುಟಿಕೊಂಡು ಗೇಣುದ್ದವಾಗಿರುವ ಈ ಕನಿಕರದ ಪದಾರ್ಥವೆಲ್ಲಿ?' ಎನ್ನಿಸಿತವನಿಗೆ.

"ಚಿಕ್ಕಯ್ಯಾ, ಈಗ ಹೇಗಿದ್ದೀರಿ?" ಎಂದು, ಸ್ವಲ್ಪ ಗಟ್ಟಿಯಾಗಿಯೆ, ರೋಗಿಯ ಗಮನವನ್ನು ಸೆಳೆಯಲೆಂದು ಕೇಳಿದನು. ಆದರೆ ಮರುಕ್ಷಣದಲ್ಲಿಯೆ ತಾನು ಹಾಕಿದ್ದ ಪದ್ಧತಿಯ ಪ್ರಶ್ನೆಗೆ ತಾನೆ ನಾಚಿಕೊಂಡನು. ಅಷ್ಟು ಹಾಸ್ಯಾಸ್ಪದವಾಗಿ ಕಂಡಿತು ತಾನು ಹಾಕಿದ್ದ ಪ್ರಶ್ನೆ ಆ ವಾಸ್ತವತೆಯ ಸಮ್ಮುಖದಲ್ಲಿ.

ರೋಗಿ ಮೆಲ್ಲಗೆ ತಲೆ ತಿರುಗಿಸಿ ನೋಡಿದನು. ಆ ದೃಷ್ಟಿ ಅತ್ಯಂತ ನಿರ್ಭಾವವಾಗಿತ್ತು.

"ನನ್ನ ಗುರುತು ಸಿಕ್ಕಲಿಲ್ಲೇನು, ಚಿಕ್ಕಯ್ಯ? ನಾನು ಹೂವಯ್ಯ" ಎಂದ ಹೂವಯ್ಯ ಇನ್ನೂ ಸ್ವಲ್ಪ ಮುಂದಕ್ಕೆ ಸರಿದನು.

ನಿರ್ಭಾವವಾಗಿದ್ದ ರೋಗಿಯ ಕಣ್ಣುಗಳಲ್ಲಿ ತಟಕ್ಕನೆ ಭಾವಸಂಚಾರವಾಯಿತು. ಚಂದ್ರಯ್ಯಗೌಡರು ಹೂವಯ್ಯನನ್ನು ಎವೆಯಿಕ್ಕದೆ ನೋಡತೊಡಗಿದರು.

ಅವರೆದೆ ಮೇಲಕ್ಕೂ ಕೆಳಕ್ಕೂ ಏರಿಳಿಯುತ್ತಿತ್ತು. ಮೊದಲು ನಿಃಶಬ್ದವಾಗಿದ್ದ ಉಸಿರಾಟ ಈಗ ಕೇಳಿಸತೊಡಗಿತ್ತು. ಹೂವಯ್ಯ ನೋಡುತ್ತಿದ್ದ ಹಾಗೆಯೇ, ಸ್ವಲ್ಪ ಕಾಲಕ್ಕೆ ಮೊದಲು ಸತ್ತಹಾಗಿದ್ದ ಆ ಕಣ್ಣುಗಳಿಂದ ಜೀವಪೂರ್ಣವಾದ ಬೆಚ್ಚನೆಯ ಕಣ್ಣೀರು ಬಳ ಬಳ ಬಳನೆ ಸೋರತೊಡಗಿ, ಹೊದೆಯಾಗಿ ಬೆಳೆದಿದ್ದ ಗಡ್ಡ ಮೀಸೆಗಳಲ್ಲಿ ಹೀರಿಹೋಗತೊಡಗಿತು. ಏನನ್ನೊ ಮಾತಾಡಲು ಪ್ರಯತ್ನಿಸಿದರು; ಆಗಲಿಲ್ಲ. ಕಡೆಗೆ ಎಲುಬು ಚರ್ಮ ಮಾತ್ರವಾಗಿದ್ದ ತಮ್ಮ ಬಲಗೈಯನ್ನು ಹೂವಯ್ಯನಕಡೆಗೆ, ಪ್ರೀತಿಯ ದುಃಖದ ಪಶ್ಚಾತ್ತಾಪದ ಕ್ಷಮಾಪಣೆಯ ಗೌರವದ ಪ್ರಾರ್ಥನೆಯ ಕಾಲುವೆಯೆ ಹರಿದುದೋ ಎಂಬಂತೆ ಸಪ್ರಯತ್ನವಾಗಿ ನೀಡಿದರು! ಹೂವಯ್ಯನೂ ರಕ್ತಮಾಂಸಗಳಿಂದ ಕೂಡಿ ಸುಪುಷ್ಟವಾಗಿದ್ದ ತನ್ನ ಸಶಕ್ತ ಸಜೀವ ಹಸ್ತದಿಂದ ಆ ಪ್ರೇತಹಸ್ತವನ್ನು ಅನಂತ ಕ್ಷಮೆಯಿಂದಲೂ ಪ್ರೀತಿಯಿಂದಲೂ ಎದೆಗರಗಿ ಹಿಡಿದುಕೊಂಡು ಉಕ್ಕಿಬರುತ್ತಿದ್ದ ಅಸಂಖ್ಯಭಾವಗಳ ಆವೇಗವನ್ನು ತಡೆಯಲಾರದೆ ಸುಮ್ಮನೆ ಕಣ್ಣೀರಿಡತೊಡಗಿದನು. ಬಾಗಿ ಕುಳಿತಿದ್ದ ಅವನ ಕಣ್ಣಿನ ಹನಿಗಳು ಆ ಪ್ರೇತಹಸ್ತದಮೇಲೆ ಬೆಚ್ಚಗೆ ಬಿದ್ದುವು.

ಅದನ್ನು ನೋಡುತ್ತಿದ್ದ ಸುಬ್ಬಮ್ಮನೂ ಕಂಬನಿಗರೆಯತೊಡಗಿದಳು. ಆಕೆಯ ಹೃದಯದಲ್ಲಿ ಮಹಾಯಾತನೆಯ ಬಾಣದ ಮೊನೆಗೆ ಮಹಾನಂದದ ಮಾಧುರ್ಯದ ಹದವಾಗುತ್ತಿದ್ದ ಹಾಗಿತ್ತು.

ಕೆಲ ಹೊತ್ತಿನಮೇಲೆ ಹೂವಯ್ಯ 'ಹೋಗಿಬರುತ್ತೇನೆ' ಎಂದು ಮೇಲೆದ್ದಾಗ, ಚಂದ್ರಯ್ಯಗೌಡರು ತಮ್ಮೆರಡು ಕೈಗಳನ್ನೂ ಹಣೆಗಿಟ್ಟು ನಮಸ್ಕಾರ ಮಾಡಿಬಿಟ್ಟರು! ಹೂವಯ್ಯನಿಗೆ ಅದನ್ನು ನೋಡಿ ಬೆಪ್ಪು ಹೊಡೆದಂತಾಗಿ, ತಾನೂ ಪ್ರತಿ ನಮಸ್ಕಾರ ಮಾಡಿ, ಅವರನ್ನು ಬೀಳ್ಕೊಟ್ಟನು.

ಹೊರಗೆ ಬಂದು ಸುಬ್ಬಮ್ಮಗೆ ಧೈರ್ಯ ಹೇಳಿ ಕೆಳಕಾನೂರಿನ ಕಡೆಗೆ ಹೋಗುತ್ತಿದ್ದಾಗ ದಾರಿಯಲ್ಲಿ ನಿರಾಶೆಯಿಂದ ನಿಟ್ಟುಸಿರು ಬಿಟ್ಟನು! "ರಾಮಯ್ಯ ತಂದೆಯ ವಿಚಾರದಲ್ಲಿ ಇಷ್ಟೊಂದು ಉದಾಸೀನನಾಗಿದ್ದಾನಲ್ಲಾ! ಏಕೆ ಹೀಗಾಗಿ ಬಿಟ್ಟಿದ್ದಾನೆ?" ಎಂದುಕೊಂಡನು.

ಎಂಟು ದಿನಗಳ ಮೇಲೆ, ಒಂದು ದಿನ ಬೆಳಿಗ್ಗೆ ಹತ್ತು ಹತ್ತೂವರೆ ಗಂಟೆಯ ಹೊತ್ತಿನಲ್ಲಿ, ಪುಟ್ಟಣ್ಣ ಸೋಮ ಬೈರ ಇವರೊಡನೆ ಹೂವಯ್ಯ ತೋಟದಲ್ಲಿ ಕೆಲಸಮಾಡುತ್ತಿದ್ದಾಗ ಕಾನೂರು ಮನೆಯಿಂದ ಗುಢುಂ ಗುಢುಂ ಗುಢುಂ ಎಂದು ಕದನಿಗಳ ಸದ್ದು, ಕಣಿವೆ ನಡುಗಿ, ಬೆಟ್ಟಗಳು ಮರುದನಿ ಬೀರುವಂತೆ ಕೇಳಿಸಿತು.

"ಹೌದಾ ಕಾಣೆ! ಕಾನೂರು ಗೌಡರು ಹೋದ್ರಂಬುದಾಗಿ ಕಾಣ್ತದೆ!" ಎಂದು ಸೋಮ ಹೆಗ್ಗಣ್ಣುಮಾಡಿ ಖಿನ್ನಮುಖಿಯಾದನು.

೭೪

## ಮತ್ತೆ, ಸುಬ್ಬಮ್ಮ ಕಾನೂರಿಗೆ ಹೆಗ್ಗಡಿತಿ!

ಚಂದ್ರಯ್ಯಗೌಡರ ದಹನ ಸಂಸ್ಕಾರಕ್ಕೆ ನಂಟರಿಷ್ಟರೆಲ್ಲರೂ ಕಿಕ್ಕಿರಿದು ಬಂದಿದ್ದರು. ಮುತ್ತಳ್ಳಿಯವರೂ ಸೀತೆಮನೆಯವರೂ ಕೆಳಕಾನೂರಿನವರೂ ನೆಲ್ಲುಹಳ್ಳಿಯವರೂ ಹಿಂದಿನ ತೋಡು ತೊಳಸುಗಳನ್ನೆಲ್ಲ ಮರೆತು ನೆರೆದಿದ್ದರು. ಸಿಂಗಪ್ಪಗೌಡರೂ ಕೂಡ ಬಂದಿದ್ದರು. ಆದರೆ ಹೂವಯ್ಯ ಬಂದಿರಲಿಲ್ಲ. ತನಗೆ ಪ್ರತಿನಿಧಿಗಳಾಗಿ ಸೋಮ ಮತ್ತು ಪುಟ್ಟಣ್ಣರನ್ನು ಕಳುಹಿಸಿದ್ದನು. ಮುತ್ತಳ್ಳಿಯಿಂದ ಪುಟ್ಟಮ್ಮ, ಚಿನ್ನಯ್ಯ, ಶಾಮಯ್ಯಗೌಡರು ಇವರೆಲ್ಲರೂ ಬಂದಿದ್ದರೂ ಸೊಸೆಯಾಗಿದ್ದ ಸೀತೆ ಬಂದಿರಲಿಲ್ಲ.

ಸಂಸ್ಕಾರಗಳೆಲ್ಲವೂ ಮುಗಿದಮೇಲೆ ಸುಬ್ಬಮ್ಮ ತಿಂಗಳಂಗಟ್ಟಲೆ ತಮ್ಮ ಕತ್ತಲೆಯ ಕೋಣೆಯಲ್ಲಿ ಕೂತು ಅತ್ತು ಅತ್ತು ದುಃಖಿಸತೊಡಗಿದಳು. ಅವರೂ ಇವರೂ ನಂಟರೂ ಇಷ್ಟರೂ ಮನೆಗೆ ಬಂದುಬಂದವರೆಲ್ಲರೂ ಬಂದು 'ಮಾತಾಡಿಸಿ' ಹೋಗುತ್ತಿದ್ದರು. ನಾನಾ ವಿಧವಾಗಿ ಚಿತ್ರವಿಚಿತ್ರವಾಗಿ ಸಮಾಧಾನ ಹೇಳುತ್ತಿದ್ದರು; ಸಹಾನುಭೂತಿ ತೋರಿಸುತ್ತಿದ್ದರು. ಆಕೆಯ ತಂದೆ ತಾಯಿಗಳು ತವರುಮನೆಗೆ ಕರೆದರೂ ಅಲ್ಲಿಗೆ ಹೋಗಲೊಪ್ಪಲಿಲ್ಲ. ನೆಲ್ಲುಹಳ್ಳಿಗೆ ಪುನಃ ಕಾಲಿಡುವುದಿಲ್ಲವೆಂದು ಆಕೆ ಅಲ್ಲಿಂದ ಹೊರಟಾಗಲೆ ಮನಸ್ಸುಮಾಡಿದ್ದಳು.

ಸುಬ್ಬಮ್ಮ ಮೊದಮೊದಲು ಪತಿಯ ನಿಧನಕ್ಕಾಗಿ ದುಃಖಿಸಿದರೂ ಕಡೆಕಡೆಗೆ ತನಗೊದಗಿದ ವೈಧವ್ಯದ ದುಃಸ್ಥಿತಿಗಾಗಿಯೆ, ತನಗೆ ಮುಂದೇನು ಗತಿ ಎಂದು, ಆತ್ಮಕನಿಕರದಿಂದ ಕಣ್ಣೀರಿನಲ್ಲಿ ಮೀಯುತ್ತಿದ್ದಳು. ದಿನವೂ ಸಾಯುವವರಿಗೆ ಅಳುವವರಾರು ಎಂಬ ಗಾದೆಯಂತೆ ದಿನವೂ ಅಳುವವರಿಗೆ ಸಮಾಧಾನ ಹೇಳುವವರಾರು? ಬಂದು ಬಂದು ಸಮಾಧಾನ ಹೇಳುತ್ತಿದ್ದ ಬಂಧುಗಳಿಗೆ ಬೇಜಾರಾಯಿತು. ಅಲ್ಲದೆ ಸತ್ತವರಿಗೆ ಅಳುತ್ತಾ ಕುಳಿತರೆ ಬದುಕಿರುವವರಿಗೆ ದುಡಿಯುವವರಾರು? ಅವರವರಿಗೆ ಅವರವರ ಕೆಲಸಕಾರ್ಯಗಳಿರುತ್ತವೆಯಷ್ಟೆ? ನಂಟರಿಷ್ಟರಿಗೆ ಬೇಜಾರಾದ ಕೆಲದಿನಗಳಲ್ಲಿಯೆ ಸುಬ್ಬಮ್ಮನಿಗೂ ಬೇಜಾರಾಗುತ್ತಾ ಬಂದಿತು. ದುಃಖವೂ ಕೂಡ ಅತಿಪರಿಚಯದಿಂದ ಮಂದನೀರಸವಾಗುತ್ತದೆಂದು ತೋರುತ್ತದೆ!

ಕಡೆಕಡೆಗೆ ಸುಬ್ಬಮ್ಮನನ್ನು ಸಮಾಧಾನ ಮಾಡುವುದಕ್ಕೆ ಯಾರೂ ಹೋಗದಿದ್ದುದನ್ನು ಕಂಡು, ಸೇರೆಗಾರರು ಒಂದು ಸಾರಿ ಆಕೆಯಿದ್ದ ಕೋಣೆಗೆ ಹೋಗಿ

ದೂರದಲ್ಲಿ, ಚಾಪೆಯ ಮೇಲೆ ಗೋಡೆಗೊರಗಿಕೊಂಡು ಕೂತರು. ಅಳುವನ್ನು ನಿಲ್ಲಿಸಿದ್ದ ಸುಬ್ಬಮ್ಮ ಅವರನ್ನು ಕಂಡಕೂಡಲೆ ಮತ್ತೆ ಅಳತೊಡಗಿದಳು. ಬಹಳ ಕಾಲದ ಅಭ್ಯಾಸದಿಂದ ಆಕೆಗೆ ಬೇಕೆಂದಾಗ ಅಳುಬರುತ್ತಿತ್ತು.

ಸೇರೆಗಾರರು ಅತ್ಯಂತ ಸಕರುಣವಾಣಿಯಿಂದ, ಹೃತ್ಪೂರ್ವಕವಾಗಿ, ತಾವು ದಶಾವತಾರದ ಆಟಗಳಲ್ಲಿ ಕೇಳಿ ತಿಳಿದಿದ್ದ ನೀತಿಧರ್ಮತತ್ವಗಳನ್ನೆಲ್ಲ ಅಡಕಮಾಡಿ, ಉಪದೇಶ ಮಾಡತೊಡಗಿದರು:

"ಸುಮ್ಮನೆ ಅತ್ತರೆ ಏನು ಪ್ರಯೋಜನ, ಅಮ್ಮಾ? ಭಗವಂತ ಕೊಟ್ಟಿದ್ದು ಭಗವಂತ ತೆಗೆದುಕೊಂಡು ಹೋಗ್ತಾನೆ. ನಾವ್ಯಾರು ಕೇಳೋಕೆ? ಎಲ್ಲ ಅವನ ಲೀಲೆ. ಅವನು ಕೊಟ್ಟಿದ್ದನ್ನು ನಾವು ಅನುಭವಿಸಬೇಕು . . . ಸಾವು ಯಾರಿಗೂ ತಪ್ಪಿದ್ದಲ್ಲ. ಅವರು ಮೊನ್ನೆ ಹೋದರೆ, ಇನ್ನೊಬ್ಬರು ನಾಳೆ ಹೋಗ್ತಾರೆ. ಏನೋ ಅವರ ಕಾಲ ಅವರು ಪೂರೈಸಿಕೊಂಡು ಪುಣ್ಯಕಟ್ಟಿಕೊಂಡು ಹೋದರು. ಇನ್ನು ಅತ್ತರೆ ಹಿಂದಕ್ಕೆ ಬರ್ತಾರೇ? ದೇವರಮೇಲೆ ಭಾರಹಾಕಿ, ನಮ್ಮ ಮುಂದಿನ ಜೀವನ ಸುಖವಾಗಿ ಮಾಡಿಕೊಂಡರಾಯ್ತು! ಯಜಮಾನರ ಕೈಹಿಡಿದ ನೀವೇ ಹೇಂಗಾದರೂ ಇನ್ನುಮೇಲೆ ಮನೆ ಆಡಳಿತ ನೋಡಿಕೊಳ್ಳಬೇಕಾಗ್ತದೆ. ರಾಮಯ್ಯ ಗೌಡರಿಗೆ ಚಿಂತೆ ಹಿಡಿದು, ಅವರಿಗೆ ಮನೆಮೇಲೆ ಮನಸೇ ಇಲ್ಲ. ತೀರಿಹೋದವರ ಕೀರ್ತಿ ಉಳಿಸಬೇಕಾದರೆ, ನೀವೇ ಸೈ. ಇನ್ನು ಮೇಲೆ ನೀವೇ ಕಾನೂರಿಗೆ ಹೆಗ್ಗಡಿತಮ್ಮ. ನೀವೇ ಹೀಂಗೆ ದುಃಖಾ ಮಾಡ್ತಾ ಕೋಣೆ ಸೇರಿಬಿಟ್ಟರೆ, ಮನೆ ಗತಿ ಏನಾಗಬೇಕಮ್ಮ? ಏನೋ ಸವತಿ ಮಗನಾದರೂ ನಿಮ್ಮ ಮಗನಹಾಗೆ ವಾಸು ಇದ್ದಾನೆ. ನೀವು ಮನಸ್ಸು ಮಾಡಿದರೆ ಈ ಮನೆ ಮುಳುಗಿ ಹೋಗದ ಹಾಗೆ ಉಳಿಸಬಹುದು. ನಾನೇನೋ ನಿಮ್ಮಮನೆ ಉಪ್ಪು ಅನ್ನ ತಿಂದದ್ದಕ್ಕೆ ಋಣ ತೀರಿಸಲೇಬೇಕೆಂದು ಮನಸ್ಸು ಮಾಡಿದ್ದೇನೆ . . ."

ಸೇರೆಗಾರರು ಗಟ್ಟದಮೇಲಿನವರು ಮಾತಾಡುವಂತೆ ಮಾತಾಡಿ, ಸಹಾನುಭೂತಿ ತೋರಿಸಿ, ಮುಂದಿನ ಬಾಳಿನ ಹೊಲಬನ್ನು ಸೂಚಿಸಲು, ಸುಬ್ಬಮ್ಮಗೆ ಹೊಸ ಸಾಹಸದ ಹುರುಪುಂಟಾಯಿತು. ತಾನು ಕಾನೂರು ಮನೆಗೆ ಸರ್ವಾಧಿಕಾರಿಣಿಯಾದ ಹೆಗ್ಗಡಿತಿ ಎಂಬುದನ್ನು ಕೇಳಿ, ಹೊಸಪಟ್ಟ ಸಿಕ್ಕಿದಂತೆ ಉತ್ಸಾಹಗೊಂಡಳು. ಸೇರೆಗಾರರ ಸಹಾಯದಿಂದ ಕಾನೂರು ಹೆಗ್ಗಡಿತಿಯಾಗಿ, ಎಲ್ಲರ ಗೌರವ ಪ್ರಶಂಸೆಗಳಿಗೆ ಪಾತ್ರಳಾಗುತ್ತೇನೆಂದು ನಿರ್ಧರಿಸಿದಳು.

ಕೆಲದಿನಗಳಲ್ಲಿಯೆ ಸುಬ್ಬಮ್ಮ ಅಳುವುದನ್ನು ನಿಲ್ಲಿಸಿ, ಕೋಣೆಯಿಂದ ಹೊರಗೆ ಬಂದು, ಮನೆವಾಳ್ತೆಯಲ್ಲಿ ಹೊಸ ಉತ್ಸಾಹದಿಂದಲೂ ದಕ್ಷತೆಯಿಂದಲೂ ಪಾಲುಗೊಂಡಳು. ಆಶ್ಚರ್ಯವೇನೆಂದರೆ, ಸೇರೆಗಾರರು ಹೇಳಿದಂತಲ್ಲದೆ

ರಾಮಯ್ಯನೂ ಹೊಸ ಉತ್ಸಾಹದಿಂದಲೂ ದಕ್ಷತೆಯಿಂದಲೂ ಮನೆಯ ಮೇಲ್ವಿಚಾರಣೆಯನ್ನು ನೋಡಿಕೊಳ್ಳುತ್ತಾ, ಕೆಲಸಕಾರ್ಯಗಳಲ್ಲಿ ಆಸಕ್ತನಾದನು.

ರಾಮಯ್ಯನ ನೂತನಾಸಕ್ತಿಗೆ ಪ್ರತ್ಯಾಶೆಯೇ ಮುಖ್ಯ ಕಾರಣವಾಗಿತ್ತು. ತಂದೆ ತೀರಿಕೊಂಡಮೇಲೆ ಮನೆಗೆ ತಾನೇ ಸಂಪೂರ್ಣವಾಗಿ ಯಜಮಾನನೆಂಬ ಹೆಮ್ಮೆ ಅವನ ಬೆನ್ನುಮೂಳೆಯನ್ನು ಸ್ವಲ್ಪ ನೆಟ್ಟಗೆ ಮಾಡಿತ್ತು. ಅಲ್ಲದೆ ಚಂದ್ರಯ್ಯಗೌಡರ ದೆಸೆಯಿಂದ ಮನೆಗೆ ವೈರಿಗಳಾಗಿದ್ದವರೆಲ್ಲರೂ ಈಗ ಮಿತ್ರ ರಾಗಿ ಹತ್ತಿರ ಹತ್ತಿರ ಬರತೊಡಗಿದರು. ಮುತ್ತಳ್ಳಿಯವರಿರಲಿ, ಸೀತೆಮನೆ ಸಿಂಗಪ್ಪಗೌಡರೂ ಕೂಡ ರಾಮಯ್ಯನಿಗೆ ಕೇವಲ ಆಪ್ತರಾಗಿ ಬುದ್ಧಿ ಹೇಳ ತೊಡಗಿದರು. ಎಲ್ಲರೂ ಅವನಿಗೆ ಕಷ್ಟ ಸಮಯದಲ್ಲಿ ನೆರವಾಗಲು ಸಂತೋಷಿ ಸುತ್ತಿದ್ದರು. ಹೀಗೆ ಸನ್ನಿವೇಶದ ಬದಲಾವಣೆಗೆ ತಕ್ಕಂತೆ ರಾಮಯ್ಯನ ಆವೇಶವೂ ಬದಲಾವಣೆ ಹೊಂದಿತ್ತು. ಎಲ್ಲಕ್ಕಿಂತಲೂ ಅತಿ ರಹಸ್ಯವಾಗಿ, ಅತಿ ಮುಖ್ಯವಾಗಿ, ಸೀತೆಯ ಪ್ರತ್ಯಾಗಮನದ ಆಶೆ ಅವನಿಗೆ ಇಮ್ಮಡಿ ಉತ್ಸಾಹ ಕರವಾಗಿತ್ತು !

ಅವನ ಆಶೆಗೆ ಆಧಾರವಿರದಿರಲಿಲ್ಲ. ಶ್ಯಾಮಯ್ಯಗೌಡರು ತಮ್ಮ ಮಗಳಿಗೆ "ನಿನ್ನ ಮಾವ ತೀರಿಹೋಗಿದ್ದಾರೆ. ಇನ್ನೇನು ನಿನಗೆ ಹೆದರಿಕೆ ಬೇಡ. ಗಂಡನ ಮನೆಗೆ ಹೋಗಿ, ಮುತ್ತೈದೆಯಾಗಿ ಬಾಳು. ಮದುವೆಯಾದ ಗಂಡನ್ನ ಬಿಟ್ಟು ಹೀಂಗಿರೋದು ಚೆನ್ನಾಗಿಲ್ಲ. ಜನರ ಬಾಯಿಗೆ ಬರಬೇಕಾಗುತ್ತದೆ" ಎಂದು ಮೊದಲಾಗಿ ಸೀತೆಯನ್ನು ಒತ್ತಾಯಪಡಿಸತೊಡಗಿದ್ದರು. ಗೌರಮ್ಮನವರೂ ಅದೇ ಅರ್ಥ ಬರುವಂತೆ ಮಗಳಿಗೆ ಸಮಯ ಸಿಕ್ಕಾಗೆಲ್ಲ ಹೇಳತೊಡಗಿದ್ದರು. ಚಿನ್ನಯ್ಯನೂ ಸೀತೆಯ ಮುಂದೆ ರಾಮಯ್ಯನಲ್ಲಿ ಅವನ ತಂದೆ ತೀರಿಕೊಂಡಮೇಲೆ ಆಗಿರುವ ವ್ಯತ್ಯಾಸವನ್ನು ಕುರಿತು ಶ್ಲಾಘಿಸುತ್ತ, ಆಕೆಯ ಮನಸ್ಸನ್ನು ತಿರುಗಿಸ ಲೆಳಸಿದನು. ಅಲ್ಲದೆ ಚಂದ್ರಯ್ಯಗೌಡರು ತೀರಿಕೊಂಡ ಎರಡು ತಿಂಗಳೊಳಗಾಗಿ ರಾಮಯ್ಯನನ್ನು ಮುತ್ತಳ್ಳಿಗೆ ಕರೆಸಿಕೊಂಡು ಬೀಗರುಪಚಾರ ಮಾಡಿದರು. ಇದೆಲ್ಲ ದರ ಜೊತೆಗೆ ಶ್ಯಾಮಯ್ಯಗೌಡರು ಸಿಂಗಪ್ಪಗೌಡರೊಡನೆ "ಹೂವಯ್ಯ ಇಲ್ಲಿಗೆ ಬರುತ್ತಾ ಇದ್ದರೆ ಸರಿಹೋಗುವುದಿಲ್ಲ. ಸೀತೆ ಗಂಡನ ಮನೆಗೆ ಹೋಗುವವರೆಗೆ ಇಲ್ಲಿಗೆ ಬರುವುದು ಬೇಡ ಅಂತಾ ಅವನಿಗೆ ಹೇಳಿ" ಎಂದು ಹೇಳಿಕಳುಹಿಸಿದ್ದರು.

ಸಿಂಗಪ್ಪಗೌಡರು ಆ ವಿಷಯವನ್ನು ಹೂವಯ್ಯನಿಗೆ ತಿಳಿಸಿ "ಹೌದಪ್ಪ, ನೀನ್ಯಾಕೆ ಅವರಿಷ್ಟಕ್ಕೆ ಅಡ್ಡಹೋಗ್ತೀಯಾ? ಅವರ ಮಗಳನ್ನು ಅವರು ಏನಾದ್ರೂ ಮಾಡಿಕೊಳ್ಳಲಿ. ಆಮೇಲೆ ಸುಮ್ಮನೆ ನಿನ್ನ ಮೇಲೆ ದೂರು ಯಾಕೆ?" ಎಂದು ರಾಮಯ್ಯನ ಪರವಾಗಿ ಮಾತಾಡಿದರು.

ಗಡ್ಡಮೀಸೆಗಳ ಸಂದಿಯಲ್ಲಿ ಹೂವಯ್ಯನ ಮುಖ ಕೆಂಪೇರಿದುದನ್ನು ಕಂಡು ಸಿಂಗಪ್ಪಗೌಡರು ಚಕಿತರಾದರು. ಒಡನೆಯೆ ಅವನ ಕಠಿಣವಾಣಿ ಹೊರ ಹೊರಟಿತು. ಕಲ್ಲಿನಂತೆ ನಿಶ್ಚಲನಾಗಿ ಮಾತಾಡಿದನು:

"ಏನೆಂದೆ? 'ಅವರ ಮಗಳನ್ನು ಅವರು ಏನಾದರೂ ಮಾಡಿಕೊಳ್ಳಲಿ! ನಿನಗೇಕೆ ದೂರು?' ಎಂದೆಯಲ್ಲವೆ? ಬಹಳ ಚೆನ್ನಾಗಿದೆ. ಈ ಬುದ್ಧಿ ನಿನಗೆ ಮೊದಲಲ್ಲಿ ಹೋಗಿತ್ತು! ಚಿಕ್ಕಯ್ಯ ಸತ್ತಕೂಡಲೆ ನೀವೆಲ್ಲರೂ ಬಣ್ಣ ಬದಲಾಯಿಸಿದ ಹಾಗೆ ಕಾಣ್ತದೆ! ನೀನೇ ಹೇಳುತ್ತಿದ್ದೆ: ಸೀತೆಯ ಇಷ್ಟಕ್ಕೆ ವಿರುದ್ಧವಾಗಿ ಮದುವೆ ಮಾಡಿದ್ದಾರೆ ಎಂದು! ನೀನೇ ಹೇಳ್ತಿದ್ದೆ: ಜೋಯಿಸರು ಕೈಬೆಚ್ಚಗೆ ಮಾಡಿಕೊಂಡು ಜಾತಕ ಹೇಳಿದ್ದಾರೆ ಎಂದು! ನೀನೇ ಹೇಳಿದ್ದೆ: ನಿಜವಾಗಿಯೂ ಗಂಡು ಹೆಣ್ಣಿಗೆ ತಾಳಿ ಕಟ್ಟಲಿಲ್ಲಾ ಎಂದು! ನೀನೇ ಹೇಳಿದ್ದೆ: ಸೀತೆಯನ್ನು ಖಂಡಿತ ಕಾನೂರಿಗೆ ಕಳಿಸಬೇಡ ಎಂದು!— ಈಗ ಇದ್ದಕ್ಕಿದ್ದ ಹಾಗೆ ಗೋಸುಂಬೆಯ ಹಾಗೆ ಬಣ್ಣ ಬದಲಾಯಿಸಿ ಅವಿವೇಕ ಆಡ್ತಿದ್ದೀಯಲ್ಲ! ಹೂವಿನ ಮೇಲೆ ಕೂತುಕೊಳ್ಳುವ ಚಿಟ್ಟೆಯನ್ನು ಹಿಡುಕೊಂಡುಹೋಗಿ ಬೆಂಕಿಗೆ ಹಾಕಲು ಹುನಾರು ಮಾಡ್ತಿದ್ದೀರಲ್ಲವೆ ನೀವೆಲ್ಲ ಸೇರಿ!... ಸೀತೆಗೆ ಒಪ್ಪಿಗೆ ಇದೆಯೇನು ಕಾನೂರಿಗೆ ಹೋಗೋಕೆ?"

"ಹಾಗಂದ್ರೇನೋ ನೀ ಹೇಳೋದು? ಸೀತೆ ಒಪ್ಪಿಗೆಯಂತೆ, ಸೀತೆ ಒಪ್ಪಿಗೆ?" ಸಿಂಗಪ್ಪಗೌಡರೂ ನಸುಕೆರಳಿಯೆ ಮಾತಾಡತೊಡಗಿದ್ದರು, "ಕೈಹಿಡಿದ ಗಂಡನ ಮನೆಗೆ ಹೋಗೋಕೆ ಅವಳ ಒಪ್ಪಿಗೆ ಯಾಕೆ? ನೀನೇನೊ ಹೊಸ ಕಾನೂನು ಹೇಳೋಹಾಗಿದೆ!"

"ಕಾನೂನು ಕಲ್ತೇ ನೀವೆಲ್ಲ ಬೂದಿಹೊಯ್ಕೊಂಡಿದ್ದು! ಕೈಹಿಡಿದ ಗಂಡನಂತೆ? ಯಾರು ಕೈಹಿಡಿದೋರು?"

"ಯಾರು ಕೈಹಿಡಿದೋರು? ರಾಮಯ್ಯ!"

"ಸೀತೆ?"

"ಹೊಳೆನೀರಿಗೆ ದೊಣೆನಾಯ್ಕನ ಅಪ್ಪಣೆ? ನೀನೊಬ್ಬ!"

"ಇಲ್ಲಿ ಕೇಳು, ಸಿಂಗಪ್ಪ ಕಕ್ಕಯ್ಯ! ನಿನಗೆ ಒಂದು ತತ್ತ್ವವಿಲ್ಲ; ಒಂದು ಮಾರ್ಗವಿಲ್ಲ. ಗಾಳಿ ಎತ್ತಕಡೆ ಬೀಸಿದರೆ ಅತ್ತಕಡೆ ಹೋಗ್ತೀಯ! ನೀನೇನೇ ಹೇಳು: ಸೀತೆ ನನಗೆಲ್ಲ ಹೇಳಿದ್ದಾಳೆ: ಅವಳು ರಾಮಯ್ಯನನ್ನು ಮದುವೆಯಾಗಲೂ ಇಲ್ಲವಂತೆ; ಕೈಹಿಡಿದೂ ಇಲ್ಲವಂತೆ; ಬಲಾತ್ಕಾರ ಮಾಡಿದರೆ ಅನಾಹುತ ಮಾಡಿಕೊಳ್ಳಲೂ ಸಿದ್ಧಳಾಗಿದ್ದಾಳಂತೆ!"

"ಮತ್ತೇನು? ನಿನ್ನ ಕೂಡಿಕೆಯಾಗ್ತಾಳಂತೇನು?" ಎಂದು ಸಿಂಗಪ್ಪಗೌಡರು ಶುದ್ಧ ಅನಾಗರಿಕನಂತೆ ಮಾತಾಡಿಬಿಟ್ಟರು.

ಹೂವಯ್ಯನ ಎದೆಗೆ ಈಟಿ ಇರಿದಂತಾಯಿತು. ಅವನ ಕೋಪ ಹೆಡೆಮುಚ್ಚಿ ದೀನವಾಯಿತು. ಶೋಕಭಾರದಿಂದ ತಲೆಬಾಗಿತು. ಒಂದೆರಡು ನಿಮಿಷಗಳು ಬಳ ಬಳನೆ ಕಣ್ಣೀರು ಸುರಿಸಿ ಮೌನವಾಗಿದ್ದನು.

ಮತ್ತೆ ತಲೆಯೆತ್ತಿ ಹೇಳಿದನು: "ಕಕ್ಕಯ್ಯ, ಯಾತಕ್ಕೆ ಹಿಂಗೆಲ್ಲಾ ಮಾತಾಡ್ತೀಯಾ? ಸ್ವಾರ್ಥತೆಯಿಂದಲ್ಲ ನಾನು ಹಾಗೆ ಮಾತಾಡಿದ್ದು. ಅವಳಾತ್ಮ ಬಲಿಯಾಗದಂತೆ ಮಾಡೋಣ ಎಂದು ಹೇಳಿದೆನಷ್ಟೆ! ನಾನು ಸೀತೆಯನ್ನು ಮದುವೆಯಾಗುವ ಹೊಂಗನಸು ಎಂದೋ ಬಿರಿದುಹೋಯಿತು, ಕಕ್ಕಯ್ಯ! ಹೊಂಗನಸನ್ನು ಕಟ್ಟಲು ನೀನೂ ಬಹಳ ಸಹಾಯಮಾಡಿದ್ದೆ. ಆಗಲೂ ನೀನು ಈಗ ಮಾಡುತ್ತಿರುವಂತೆಯೆ, ಒಂದು ತತ್ತ್ವಕ್ಕಾಗಿ ಕಾರ್ಯಸಾಧನೆ ಮಾಡಲಿಲ್ಲ; ಚಿಕ್ಕಯ್ಯನ ಮೇಲಣ ವೈರಕ್ಕಾಗಿ, ಹಠಕ್ಕಾಗಿ ಮಾಡಿದೆಯಷ್ಟೆ! ನಾ ಬಲ್ಲೆ! ಈಗಲೂ ನೀನು ರಾಮಯ್ಯನ ಪರವಾಗಿ ಮಾತಾಡುತ್ತಿರುವುದಕ್ಕೆ ಕಾರಣ ನನಗೆ ಗೊತ್ತಿಲ್ಲ ಎಂದು ತಿಳಿಯಬೇಡ. ಅವನಿಂದ ನೀನೊಂದು ಜಮೀನು ತೆಗೆದುಕೊಳ್ಳಬೇಕು ಎಂದು ಹವಣಿಸುತ್ತಿದ್ದೀಯಂತೆ! ಆ ಆಶಾಪಿಶಾಚದ ತೃಪ್ತಿಗಾಗಿ ಸೀತೆಯನ್ನು ಬಲಿಕೊಡಲು ಪ್ರಯತ್ನ ಮಾಡ್ತಿದ್ದೀಯೆ! ಕಕ್ಕಯ್ಯ, ನನ್ನನ್ನೇನು ಕೈಲಾಗದ ಬೆಪ್ಪ ಎಂದು ತಿಳಿದುಕೊಳ್ಳುವುದು ಬೇಡ. ಇಲ್ಲಿ ಕೇಳು; ನನ ಮನಸ್ಸನ್ನು ಹೇಳಿಬಿಡ್ತೇನೆ ನಿನಗೆ! ತಾಯಿ ಸಾಯುವಾಗ ಆಕೆಗೇನೋ ಮಾತು ಕೊಟ್ಟುಬಿಟ್ಟೆ, ನಾನು ಮದುವೆ ಮಾಡಿಕೊಳ್ತೀನಿ ಅಂತಾ: ಆದರೂ ನಾನು ಮದುವೆ ಮಾಡಿಕೊಳ್ಳೋದಿಲ್ಲ! ಅಂದರೆ ಸಾಮಾನ್ಯರೀತಿಯಿಂದ ನಾನು ಮದುವೆ ಮಾಡಿಕೊಳ್ಳುವುದಿಲ್ಲ. ನನಗೂ ಸೀತೆಗೂ ಆತ್ಮಪ್ರಪಂಚದಲ್ಲಿ ಹಿಂದೆಯೇ ಮದುವೆಯಾಗಿದೆ! ಆ ಪ್ರೇಮಬಂಧನ ಚಿರವಾದುದು. ಈಗ ಆತ್ಮವಾಗಿರುವ ನನ್ನ ತಾಯಿಗೆ ಆ ಆತ್ಮವಿವಾಹಬಂಧನ ಗೊತ್ತಾಗುತ್ತದೆ; ಆದ್ದರಿಂದ ತಾಯಿಗೆ ನಾನು ಕೊಟ್ಟ ಮಾತೂ ಹುಸಿಯಾಗುವುದಿಲ್ಲ. ಅಲ್ಲದೆ, ಅಂದಿನಿಂದ, ನಿನ್ನಿಂದ ತಿಳಿದುಕೊಳ್ಳಲು ಸಾಧ್ಯವಲ್ಲದ ಒಂದು ವ್ರತವನ್ನು ಕೈಕೊಂಡು ಈ ಗಡ್ಡ ಬೆಳೆಸಿದ್ದೇನೆ ಗೊತ್ತಾಯ್ತೆ? ಸೀತೆಯನ್ನು ಭಕ್ಷಿಸಲಲ್ಲ, ರಕ್ಷಿಸಲೋಸ್ಕರ, ಪ್ರಾಣವಿರುವವರೆಗೂ ಪ್ರಯತ್ನಿಸುತ್ತೇನೆ. ಆ ವಿಚಾರದಲ್ಲಿ ಮನುಷ್ಯಶಕ್ತಿಗೆ ಮೀರಿದ ಶಕ್ತಿ ನನಗೆ ಸಹಾಯಮಾಡುತ್ತಿದೆ! ಗೊತ್ತಾಯ್ತೆ?"

ಆ ವಾಣಿಯಲ್ಲಿ ಅಷ್ಟೊಂದು ದೃಢತೆಯಿತ್ತು; ಶ್ರದ್ಧೆಯಿತ್ತು, ಶಕ್ತಿಯಿತ್ತು. ಸಿಂಗಪ್ಪಗೌಡರಿಗೆ ಸರ್ವವೂ ಸತ್ಯವಾಗಿ ತೋರಿತು. "ಮಾರಾಯ, ನನ್ನಿಂದ

ತಪ್ಪಾಯ್ತು. ಇನ್ನು ನಾನೀ ಸುದ್ದಿಗೇ ಬರೋದಿಲ್ಲ" ಎಂದು ತಮ್ಮನ್ನು ತಾವು ಸಮರ್ಥಿಸಿಕೊಳ್ಳುವುದಕ್ಕಾಗಿ ಮತ್ತೆ ಹೇಳಿದರು: "ಅವನ ಜಮೀನನ್ನು ನಾನು ಕೇಳಿದವನೇ ಅಲ್ಲ. ಅವನೇ ಹೇಳ್ದ: ಸಾಲ ತೀರಿಸುವುದಕ್ಕಾಗಿಯೂ ಮನೆ ಖರ್ಚಿಗಾಗಿಯೂ ಹಣ ಬೇಕಿತ್ತಂತೆ. ಅದಕ್ಕೆ ಆ ಜಮೀನು ಕೊಡ್ತೀನಿ ಅಂದ. ನಾನು 'ಆಗ್ಲಪ್ಪಾ, ನೋಡಾನ ಅಂದಿದ್ದೆ' ಅಷ್ಟೇ ಹೊರತೂ ಅವನ ಜಮೀನು ನನಗ್ಯಾಕೆ? ಇದ್ದಿದ್ದನ್ನು ನೋಡಿಕೊಂಡ್ರೆ ನಂಗೆ ಸಾಕಾಗಿದೆ..."

ಅಂತೂ ಐದಾರು ತಿಂಗಳು ಕಳೆದರೂ ರಾಮಯ್ಯನ ಆಶೆ ಕೈಗೂಡಲೂ ಇಲ್ಲ; ಕೈಗೂಡುವ ಸೂಚನೆಯೂ ತೋರಲಿಲ್ಲ. ಸೀತೆ ಯಾರೊಬ್ಬರ ಮಾತಿಗೂ ಸೊಪ್ಪು ಹಾಕದೆ, ಹೊಳೆಯ ನಡುವಣ ಕಲ್ಲುಬಂಡೆಯಾಗಿ ನಿಂತುಬಿಟ್ಟಳು.

ರಾಮಯ್ಯ ಕ್ರಮಕ್ರಮೇಣ ಪುನಃ ತನ್ನ ಪೂರ್ವದ ಸ್ಥಿತಿಗೇ ಇಳಿಯತೊಡಗಿದನು. ಬರಬರುತ್ತಾ ಮೊದಲಿಗಿಂತಲೂ ಹೆಚ್ಚುಹೆಚ್ಚಾಗಿ ಮೂಲೆ ಹಿಡಿಯತೊಡಗಿದನು. ಎಲ್ಲರ ಮೇಲೆಯೂ ಕೋಪದ್ವೇಷಗಳೇರಿ, ಅವನ ಮನಸ್ಸಿನ ಅಂತರಾಳದಲ್ಲಿ ಕರಾಳವ್ಯೂಹಗಳು ಇಣುಕಲಾರಂಭಿಸಿದ್ದುವು.

ಆದರೆ ಕಾನೂರು ಮನೆಯ ಕೆಲಸಕಾರ್ಯಗಳೆಲ್ಲ ಬಹಳ ವಿಚಕ್ಷಣತೆಯಿಂದ ಸಾಗುತ್ತಿದ್ದುವು. ಸುಬ್ಬಮ್ಮನ ಹೆಗ್ಗಡಿತಿತನದಲ್ಲಿ ಸೇರೆಗಾರರೂ ಗಟ್ಟದಾಳುಗಳೂ ಬೇಲರೂ ತೆರಪಿಲ್ಲದೆ ದುಡಿಯಬೇಕಾಗಿತ್ತು. ಆಕೆ ಅಡುಗೆ ಮನೆಯಿಂದ ಹಿಡಿದು ಗದ್ದೆ, ತೋಟ, ಹಿತ್ತಲು, ಕೊಟ್ಟಿಗೆ, ಗೊಬ್ಬರಗುಂಡಿ, ತರಗಿನ ಹಾಡ್ಯ, ಕಬ್ಬಿನ ಗದ್ದೆ ಎಲ್ಲೆಡೆಯಲ್ಲಿಯೂ ಇದ್ದು, ಮೇಲ್ವಿಚಾರಣೆ ನೋಡಿಕೊಳ್ಳುತ್ತಿದ್ದಳು. ಆಕೆಗೆ ಸಾವಿರ ಕಣ್ಣಾಗಿತ್ತು. ಅದನ್ನು ಕಂಡು ಎಲ್ಲರಿಗೂ ಆಶ್ಚರ್ಯವಾಗುತ್ತಿತ್ತು.

## ೭೫

## ಸುಬ್ಬಮ್ಮನ ದುಃಸ್ವಪ್ನ

ಚಂದ್ರಯ್ಯಗೌಡರು ತೀರಿಹೋಗಿ ಒಂದು ವರ್ಷದ ಮೇಲಾಗಿತ್ತು. ಸುಬ್ಬಮ್ಮ ಹೆಗ್ಗಡಿತಿಯ ಸಾಮರ್ಥ್ಯದ ಖ್ಯಾತಿ ನಾಡನುಡಿಯಾಗಿತ್ತು. ಗಂಡಸರು ಕೂಡ ಒಬ್ಬರನ್ನೊಬ್ಬರು ಮೂದಲಿಸುವಾಗ 'ಅಯ್ಯೋ ಕೈಲಾಗದಿದ್ದವನೆ, ಕಾನೂರಿಗೆ ಹೋಗಿ, ಸುಬ್ಬಮ್ಮ ಹೆಗ್ಗಡಿತಿಯ ಕಾರುಬಾರನ್ನಾದರೂ ನೋಡಿ ಕಲಿತುಕೊಂಡು ಬಾ, ನಡಿ!' ಎಂದುಕೊಳ್ಳತೊಡಗಿದ್ದರು.

"ಬೇಲರೂ ಗಟ್ಟದವರೂ ಥರಥರ ನಡುಗುತ್ತಾರಂತೆ ಸುಬ್ಬಮ್ಮನ ಬಾಯಿ

ಕೇಳಿದರೆ!...ಆ ಸೇರೆಗಾರ ರಂಗಪ್ಪಸೆಟ್ಟರಂತೂ ಕಾಲುಸಂದಿಯಲ್ಲಿ ಬಾಲ ಮುದುರಿಕೊಂಡು ನಾಯಿಮರಿ ಆಗಿಬಿಟ್ಟಿದ್ದಾರಂತೆ!...ರಾಮಯ್ಯಗೌಡರು ಮನೆ ವೈವಟ್ಟಿನ ಗೋಜಿಗೇ ಹೋಗುವುದಿಲ್ಲವಂತೆ; ಎಲ್ಲ ತಮ್ಮ ಚಿಕ್ಕಮ್ಮನ ಕೈಲಿ ಬಿಟ್ಟುಬಿಟ್ಟಿದ್ದಾರಂತೆ!...ಏನು ಧೈರ್ಯ ಅಂದರೆ ಅವರಿಗೆ! ಹೆಂಗಸಾದರೂ ಒಬ್ಬ ದಿಂಡೇ ದಾಂಡಿಗ ಬೇಲರಾಳಿಗೆ ಹುಣಿಸೆಬರಲು ತಗೊಂಡು ಮೈಯೆಲ್ಲ ಬರೆ ಬೀಳುವಂತೆ ಹೊಡೆದುಬಿಟ್ಟರಂತೆ!...ಚಂದ್ರಯ್ಯಗೌಡರ ಹೆಂಡತಿ ಚಂದ್ರಯ್ಯಗೌಡರೇ ಆಗಿಬಿಟ್ಟಿದ್ದಾರಂತೆ!..." ಎಂದು ಮೊದಲಾಗಿ ಜನರ ಪಡೆಮಾತು ಹಬ್ಬಿದ್ದಿತು.

ಜನರ ಮಾತಿನಲ್ಲಿ ಅತಿಶಯೋಕ್ತಿ ಇದ್ದಿದ್ದರೂ ಸುಳ್ಳಿರಲಿಲ್ಲ. ಸುಬ್ಬಮ್ಮನ ಪ್ರಭಾವ ಮೆಲ್ಲಮೆಲ್ಲನೆ ಬೆಳೆದು ಅಪ್ರತಿಹತವಾಗಿತ್ತು. ಆಕೆಯ ಅಪ್ಪಣೆಯ ಹೊರತು ಯಾರೂ ಹೆಜ್ಜೆಯಿಡುತ್ತಿರಲಿಲ್ಲ. ಗಂಡನ ಗದ್ದುಗೆಗೆ ತಾನು ಏರಿದ್ದೇನೆ ಎಂಬ ಶ್ರದ್ಧೆಯಿಂದ ಆಕೆಯಲ್ಲಿ ಚಂದ್ರಯ್ಯಗೌಡರ ದರ್ಪವೂ ಅದರೊಡನೆ ಕಾಠಿನ್ಯವೂ ಮತ್ತೆ ಒಂದಿನಿತು ಕ್ರೌರ್ಯ ಸಂಮಿಶ್ರವಾದ ಧೂರ್ತತೆಯೂ ಮೊಳೆತು ಬೆಳೆಯುತ್ತಿದ್ದುವು. ಅಧಿಕಾರಮದದೊಡನೆ ಯೌವನಮದವೂ ಕೂಡಿತ್ತು. ತಾರುಣ್ಯದ ಗಿರಿಶಿಖರವೇರಿರುವ ಹೆಣ್ಣು ಅಧಿಕಾರಿಯಾದರೆ, ಅನೇಕರು ಅನೇಕ ಕಾರಣಗಳಿಂದ ಅವಳಿಗೆ ಆಳಾಗಿ, ಅವಳ ವ್ಯಕ್ತಿತ್ವಕ್ಕೆ ತಲೆಬಾಗುತ್ತಾರೆ. ಕಿವಿಗಳಲ್ಲಿ ಮೂಗಿನಲ್ಲಿ ಕೊರಳಿನಲ್ಲಿ ಮುಡಿಯಲ್ಲಿ ಒಡವೆಗಳಿಲ್ಲದಿದ್ದರೇನಂತೆ? ವಿಧವೆಯಾದ ಸುಂದರ ತರುಣಿ ದಟ್ಟವಾಗಿ ಬೆಳೆದ ತಲೆಕೂದಲನ್ನು ಬಾಚಿ ಬೈತಲೆ ತೆಗೆದು ತುರುಬುಕಟ್ಟಿ, ಕಾಗಿನ ಸೀರೆಯನ್ನು ಬಿಗಿದು ಮಲೆನಾಡಿನ ಉಡುಗೆಯುಟ್ಟು, ಕೈಕಡಗದಿಂದಲೂ, ಸುಪುಷ್ಟ ಕಾಯದಿಂದಲೂ, ತುಂಬಿದೆದೆಗಳಿಂದಲೂ, ದುಂಡುಮೊಗದಿಂದಲೂ ಹುಕುಂ ಚಲಾಯಿಸುತ್ತ ಎದುರು ನಿಂತರೆ, ಸೇರೆಗಾರ ರಂಗಪ್ಪಸೆಟ್ಟರಂತಹ ಯಾವ ಗಂಡಸು ತಾನೆ ಆಕೆಯಾಜ್ಞೆಯನ್ನು ಶಿರಸಾವಹಿಸದೆ ಇರುತ್ತಾನೆ? ಆಕೆ ಬೈದರೆ ಮಹಾ ಆಶೀರ್ವಾದವೆಂದೂ, ಹೊಡೆದರೆ ಧನ್ಯನಾದೆನೆಂದೂ ಭಾವಿಸದೆ ಇರುತ್ತಾನೆ? ಸುಬ್ಬಮ್ಮನ ಪ್ರಭಾವಕ್ಕೆ ಕಾರಣ ಅರೆಪಾಲು ಆಕೆಯ ತರುಣವ್ಯಕ್ತಿತ್ವವಾಗಿತ್ತು. ಆದರೆ ಆಕೆಗೆ ಮಾತ್ರ ಆ ಗುಟ್ಟು ತಿಳಿದಿರಲಿಲ್ಲ.

ಗೃಹಕೃತ್ಯವನ್ನು ಬಿಗಿಯಾಗಿ ಯಶಸ್ವಿಯಾಗಿ ನಡೆಸುತ್ತೇನೆ ಎಂಬ ಹೆಮ್ಮೆಯ ಸಲುವಾಗಿ ಆಕೆ ತನ್ನ ಹಿಂದಿನ ಬಡಸ್ಥಿತಿಯನ್ನೂ ತನಗೊದಗಿದ್ದ ಕಷ್ಟಸಂಕಟ ಅನ್ಯಾಯ ನಿಂದೆಗಳ ಪರಂಪರೆಗಳನ್ನೂ ಮರೆತು, ಬರಬರುತ್ತಾ ಹೆಚ್ಚುಹೆಚ್ಚು ಕ್ರೂರವಾಗಿ ವರ್ತಿಸತೊಡಗಿದ್ದಳು. ರಾಮಯ್ಯ ತನ್ನ ಮನೋವ್ಯಥೆಯ

ಮೊಟ್ಟೆಯಮೇಲೆ ಕಾವುಕೂತು ಮನೆವಾರ್ತೆಯ ಯಾವ ಗೋಜಿಗೂ ಹೋಗದೆ ತಟಸ್ಥನಾಗಿದ್ದುದರಿಂದ ಸುಬ್ಬಮ್ಮನ ಮೈಗೆ ಬಣ್ಣವೂ, ಕೈಗೆ ನಖಗಳೂ, ತಲೆಗೆ ಕೋಡೂ ಮೂಡಿದಹಾಗಿತ್ತು. ತನ್ನ ಹೆಗ್ಗಡಿತಿತನದಲ್ಲಿ ಪಾಳುಬಿದ್ದಿದ್ದ ಹಳೆಯ ದೆಯ್ಯ, ಜಕ್ಕಣಿ, ಪಂಜ್ರೊಳ್ಳಿ ಮೊದಲಾದ ಅಂತರ ಬೆಂತರಗಳನ್ನೆಲ್ಲ ವೆಂಕಪ್ಪಯ್ಯನವರ ಕೈಯಿಂದಲೆ ಮರಳಿ ಸ್ಥಾಪಿಸಿ ಜೀರ್ಣೋದ್ಧಾರ ಮಾಡಿದ್ದಳು. ಚಂದ್ರಯ್ಯಗೌಡರ ಕಡೆಗಾಲದಲ್ಲಿ ಇನ್ನೂ ಬದುಕಿದ್ದ ಭೂತ ರಣಾದಿಗಳಿಗೆ ಹರಕೆಯ ಕಂದಾಯವನ್ನು ಹೆಚ್ಚುಮಾಡಿ, ಒಂದು ಕುರಿ 'ಆಯಾರ' ಕೊಡುತ್ತಿದ್ದಲ್ಲಿ ಎರಡು ಕುರಿಗಳನ್ನೂ, ಒಂದು ಕೋಳಿ ಕೊಡುತ್ತಿದ್ದಲ್ಲಿ ಎರಡು ಕೋಳಿಗಳನ್ನೂ ಕೊಡ ತೊಡಗಿದ್ದಳು. ಕಾನೂರಿಗೆ ಬಂದೊದಗಿದ್ದ ಕಷ್ಟಗಳಿಗೆಲ್ಲಾ ಭೂತಾದಿಗಳಿಗೆ ಸರಿಯಾದ 'ಆಯಾರ' ಕೊಡದಿದ್ದುದೆ ಮುಖ್ಯ ಕಾರಣವೆಂದು ತಿಳಿದಿದ್ದ ಆಕೆಯ ಮೌಢ್ಯಕ್ಕೆ ವೆಂಕಪ್ಪಯ್ಯ ಜೋಯಿಸರು ತಮ್ಮ ಮಹಾಜ್ಞಾನದ ಆಧಾರವನ್ನೂ ದಯ ಪಾಲಿಸಿದ್ದರು. ಇದನ್ನೆಲ್ಲ ಕಂಡುಂಡು ಸಾಮಾನ್ಯ ಜನರಿಗೆ ಬಹಳ ಸಂತೋಷವಾಗಿತ್ತು. ಅವರಿಗೆ ತುಂಡು ಕಡುಬು ಹೆಂಡ ಕಳ್ಳು ಯಥೇಚ್ಛವಾಗಿ ದೊರೆಯ ಬಹುದಾದ ಪ್ರತಿಯೊಂದು ಕ್ರಿಯೆಯೂ ಎಂದೆಂದಿಗೂ ನಿಲ್ಲಿಸಬಾರದ ಅತ್ಯಂತ ಪವಿತ್ರವಾದ 'ಸನಾತನ ಧರ್ಮ'ವಾಗಿತ್ತು. ಆ ಕಾರಣದಿಂದಲೂ ಅನೇಕರು ಸುಬ್ಬಮ್ಮ ಹೊಡೆದರೂ ಬೈದರೂ ಕೇಳಿಕೊಂಡು ತುಟಿಪಿಟಕ್ಕೆನ್ನದೆ ಇದ್ದದ್ದು!

ಒಂದು ದಿನ ಬೆಳಗ್ಗೆ ಹೊಂಬಿಸಿಲು ಮರಗಳ ಹಸುರಿನ ಮೇಲಿದ್ದ ಹನಿಗಳಲ್ಲಿ ರಮಣೀಯವಾಗಿ ಮಿರುಗುತ್ತಿರಲು, ಹೊದೆಹೊದೆಗಳಲ್ಲಿ ಹಕ್ಕಿಗಳು ಮನೋಹರವಾಗಿ ಹಾಡುತ್ತಿರಲು, ಸುಬ್ಬಮ್ಮ ಅಡಿಗೆಯವನಿಗೆ ಅವನು ಮಾಡಬೇಕಾದ ಕೆಲಸಗಳನ್ನೆಲ್ಲ ಹೇಳಿ, ತೋಟದಾಚೆ ಹೊಸದಾಗಿ ಅಗೆಯುತ್ತಿದ್ದ ಅಗಳಿನ ಕೆಲಸವನ್ನು ನೋಡಲೋಸ್ಕರ ವಲ್ಲಿ ಕಟ್ಟಿಕೊಂಡು ಹೊರಡುತ್ತಿದ್ದಳು.

ಅಡಿಗೆಯವನು "ಎಂಥ ಮೇಲೋಗರ ಮಾಡಾದಮ್ಮ? ತರಕಾರಿ ಏನು ಇಲ್ಲ" ಎಂದನು.

"ಪುಟ್ಟಗೆ ಹೇಳಿದ್ದೆನಲ್ಲಾ, ತರಲಿಲ್ಲೇನು?" ಎಂದು ಸುಬ್ಬಮ್ಮ ಸಿಡುಕಿದಳು.

"ಅಳಿವ ಎತ್ತ್ರಮಕ ಹೋದ್ನಪ್ಪಾ? ಆವಾಗ್ಲೆ ಹೋದಾವ್ನು ಇನ್ನೂ ಕಣ್ಣಿಗೆ ಕಾಣಾಕೇ ಇಲ್ಲ. ಏನು ಪ್ಯಾರ್ಲುಮರಾ ಹತ್ತಿದನೋ? ಪನ್ನೇರ್ಲುಮರಾ ಹತ್ತಿದನೋ?" ಎನ್ನುತ್ತಿದ್ದ ಅಡಿಗೆಯವನ ಕೈಯಲ್ಲಿದ್ದ ಒಳ್ಳೆಣ್ಣೆಯ ಕುಡಿಕೆ ಆಕಸ್ಮಾತ್ತಾಗಿ ಕೆಳಗೆ ಬಿದ್ದು ಒಡೆದು ಚೂರಾಯಿತು. ಅವನಂತೂ ಭೀತಿ ಹೊಡೆದಂತೆ ಕಲ್ಲಾಗಿ ನಿಂತುಬಿಟ್ಟನು. ಸುಬ್ಬಮ್ಮ 'ನಿನ್ನ ತಲೆಗೆ ಬೆಂಕಿ ಹಾಕ' ಎಂದು ಬೈಯುತ್ತಾ ನುಗ್ಗಿಬಂದು, ನೆಲದ ಮೇಲೆ ಹರಿದು ಇಂಗುತ್ತಿದ್ದ ಎಣ್ಣೆ

ಯನ್ನು ಬೊಗಸೆಗೈಯಲ್ಲಿ ಬಳಿದು, ತೆರೆದ ಕಣ್ಣು ಮುಚ್ಚದೆ ಹೆದರಿ ನಿಂತಿದ್ದ ಅಡುಗೆಯವನ ಮುಖಕ್ಕೆ ಪಚಕ್ಕನೆ ಹೊಡೆದು, ಚೂರಾಗಿದ್ದ ಕುಡಿಕೆಯ ಓಡು ಗಳನ್ನು ಎತ್ತಿ 'ನಿನ್ನ ಹೆಣಕ್ಕೆ ಹಾಕಿಕೋ' ಎಂದು ಶಪಿಸಿ ಬೀಸಿ ಬಡಿದು, ಕೈಗೆ ಹಿಡಿದಿದ್ದ ಎಣ್ಣೆಯನ್ನು ತನ್ನ ತಲೆಕೂದಲಿಗೆ ಉಜ್ಜಿಕೊಳ್ಳುತ್ತಾ ಹೊರಗೆ ಹೋದಳು.

ತೋಟಕ್ಕೆ ಇಳಿಯುತ್ತಿದ್ದಾಗಲೆ ಪುಟ್ಟ ಸುಬ್ಬಮ್ಮನ ಅಪ್ಪಣೆಯಂತೆ ಬಾಳೆಯ ದಿಂಡನ್ನು ಪಚ್ಚಡಿಗಾಗಿ ಹೊತ್ತು, ತನ್ನ ಸುತ್ತಲೂ ಹಿಂಬಾಲಿಸಿ ಬರುತ್ತಿದ್ದ ನಾಯಿಗಳೊಡನೆ ಆಟವಾಡುತ್ತಾ ಬರುತ್ತಿದ್ದನು. ಸುಬ್ಬಮ್ಮ ಉರಿಮೋರೆ ಯಿಂದ "ಇಷ್ಟೊತ್ತು ಏನುಮಾಡ್ತಿದ್ದ್ಯೋ?" ಎಂದವಳೆ ಮರುಮಾತಿಗವ ಕಾಶ ಕೊಡದೆ, ಅವನ ಕಿವಿಯನ್ನು ಅಯ್ಯೋ ಎಂದು ಚೀರಿಡುವಂತೆ ಹಿಂಡಿ ಮುಂಬರಿದಳು.

ಪುಟ್ಟ ಕಣ್ಣೀರಿಡುತ್ತಾ ತುಟಿ ನಡುಗಿಸುತ್ತಾ ಸುಬ್ಬಮ್ಮ ಮರೆಯಾಗುವುದನ್ನೇ ತಿರುಗಿ ನೋಡುತ್ತಿದ್ದವನು "ಹಡ್ಬೆಹಾದರಗಿತ್ತಿ!" ಎಂದು ಮೊದಲಾಗಿ ಗುಟ್ಟಾಗಿ ಬೈಯುತ್ತಾ ಮೆಟ್ಟಲೇರಿದನು.

ಆಳುಗಳೆಲ್ಲಾ ಅಷ್ಟು ಮುಂಬೊತ್ತಿಗಾಗಲೆ ಬಂದು ಅಗಳು ತೋಡುವ ಕೆಲಸ ದಲ್ಲಿ ತೊಡಗಿದ್ದರು. ಸೇರೆಗಾರರು ಗಟ್ಟಿಯಾಗಿ ಅಪ್ಪಣೆಗಳನ್ನು ಅತ್ತ ಇತ್ತ ಬೀಸುತ್ತಾ ಮೇಲ್ವಿಚಾರಣೆ ನೋಡಿಕೊಳ್ಳುತ್ತಿದ್ದರು. ಸುಬ್ಬಮ್ಮ ಬರುತ್ತಿರುವು ದನ್ನು ದೂರದಿಂದಲೆ ಕಂಡ ಅವರು ದನಿ ತಗ್ಗಿಸಿ ತಮ್ಮ ಆಳುಗಳಿಗೆ 'ಹೋಯ್, ಹೆಗ್ಗಡಿತಮ್ಮ ಬಂದರು ಗಡೆ!' ಎಂದು ಬೇಹುಗೊಟ್ಟರು. ಆಳುಗಳೆಲ್ಲ ಮೊದಲಿಗಿಂತಲೂ ಹೆಚ್ಚಾದ ಶ್ರದ್ಧೆಯಿಂದ ಕೆಲಸದಲ್ಲಿ ತೊಡಗಿದರು.

ಸುಬ್ಬಮ್ಮ ಬೇಲರಾಳೊಬ್ಬನು ಕೆಲಸಕ್ಕೆ ಬರದಿದ್ದುದನ್ನು ಕಂಡು, ದೂರದಲ್ಲಿ ಮಾತಿಲ್ಲದೆ ದರೆ ಅಗೆಯುತ್ತಿದ್ದ ಓಬಯ್ಯನನ್ನು ಕುರಿತು, ಹಿಂದಿನ ವಾಡಿಕೆಯಂತೆ 'ಓಬಣ್ಣಯ್ಯ!' ಎಂದು ಸಂಬೋಧಿಸಿ "ಆ ಬಚ್ಚ ಯಾಕೆ ಕೆಲಸಕ್ಕೆ ಬರಲಿಲ್ಲಾ?" ಎಂದು ಕೇಳಿದಳು.

ಓಬಯ್ಯ ಅಗೆಯುವುದನ್ನು ತುಸುನಿಲ್ಲಿಸಿ "ಅವನಿಗೆ ಮೈ ಕೈ ನೋವಂತೆ" ಎಂದುಸುರಿ, ಮತ್ತೆ ದರೆ ಅಗೆಯತೊಡಗಿದನು.

ಸುಬ್ಬಮ್ಮ ಸಿದ್ದನನ್ನು ಕಳುಹಿಸಿ, ಬಚ್ಚನನ್ನು ಬಲಾತ್ಕಾರದಿಂದ ಕರೆತರಿಸಿ, ಅವನನ್ನು ಕೆಲಸಕ್ಕೆ ಹಚ್ಚಿಸದೆ ಬಿಡಲಿಲ್ಲ.

ಆಳುಗಳೆಲ್ಲ ಕೆಲಸ ಮಾಡುವುದನ್ನು ನೋಡುತ್ತಾ ಒಂದು ದಿಣ್ಣೆಯ ಮೇಲೆ ಕುಳಿತಿದ್ದ ಸುಬ್ಬಮ್ಮ ತನ್ನ ಮಡಿಲಿನಿಂದ ಬಾಯಿಗೆ ಹಾಕಿಕೊಳ್ಳುವ ಸಾಮಾನು

ಗಳನ್ನು ಒಂದೊಂದನ್ನಾಗಿ ತೆಗೆದು ಎಲೆಯಡಕೆ ಹಾಕಿಕೊಳ್ಳತೊಡಗಿದಳು. ಸೇರೆಗಾರರೂ ಬಹಳ ಚಟುವಟಿಕೆಯಿಂದ ಅಲ್ಲಿಂದಿಲ್ಲಿಗೆ ಇಲ್ಲಿಂದಲ್ಲಿಗೆ ಹೋಗಿ ಹದಕೆ ಹೇಳುತ್ತಾ ಇದ್ದು, ತುಸುಹೊತ್ತಿನಲ್ಲಿಯೆ ಸುಬ್ಬಮ್ಮನ ಬಳಿಗೆ ಬಂದು, ಸ್ವಲ್ಪ ದೂರದಲ್ಲಿ ಕುಳಿತು, ಬಹಳ ವಿನಯದಿಂದಲೂ ನಮ್ರತೆಯಿಂದಲೂ "ನನಗೊಂದು ಚೂರು ಬಾಯಿಗೆ ಕೊಡ್ತೀರಾ!" ಎಂದು ಉಬ್ಬು ಹಲ್ಲುಗಳನ್ನು ಚೆನ್ನಾಗಿ ಪ್ರದರ್ಶಿಸಿ ಮುಗುಳು ನಗುತ್ತಾ ಬೇಡಿದರು. ಸುಬ್ಬಮ್ಮ ತನ್ನ ಮಡಿಲಿನಿಂದ ಎಲೆ ಅಡಕೆ ಸುಣ್ಣ ಹೊಗೆಸೊಪ್ಪುಗಳನ್ನು ಒಂದೊಂದನ್ನಾಗಿ ತೆಗೆದಿತ್ತಳು. ಸೇರೆಗಾರರು ಆನಂದದಿಂದ ಬಾಯಿಗೆ ಹಾಕಿಕೊಂಡು ತುಟಿ ನಾಲಗೆ ಹಲ್ಲುಗಳೆಲ್ಲ ಕೆಂಪಾಗುವಂತೆ ಅಗಿಯುತ್ತಾ, ಆಗಾಗ ಪಿಚಕ್ಕನೆ ಕೆಂಪು ಎಂಜಲನ್ನು ಉಗುಳುತ್ತಾ ಮಾತಾಡುತ್ತಾ ಕುಳಿತರು.

ಮೊದಮೊದಲನೆಯ ಮಾತು ಆಳುಗಳು ಅಗೆಯುತ್ತಿದ್ದ ಅಗಳಿನ ವಿಚಾರವಾಗಿತ್ತು. ಅಲ್ಲಿಂದ ತೋಟದ ಬೇಲಿಯ ಕಡೆಗೆ ತಿರುಗಿತು. ಆಮೇಲೆ ತೋಟದ ಬೇಸಾಯದ ವಿಚಾರವಾಗಿ ತುಸುದೂರ ಸಾಗಿತ್ತು. ಅಲ್ಲಿಂದ ಆ ವರ್ಷದ ಅಡಕೆಯ ಫಸಲಿನ ಕಡೆಗೆ ಹರಿಯಿತು. ಆಮೇಲೆ ಅಡಕೆ ಧಾರಣೆ. ಅಲ್ಲಿಂದ ಮುತ್ತಳ್ಳಿಯವರಿಗೆ ಕೊಡಬೇಕಾಗಿದ್ದ ಸಾಲದ ಮಾತು ಬಂದಿತು. ಅಲ್ಲಿಂದ ಸೀತೆ, ರಾಮಯ್ಯ, ಚಿನ್ನಯ್ಯ ಇತ್ಯಾದಿಗಳ ಕಡೆಗೆ ಒಲೆಯಿತು.

"ಹೌದಾ, ರಾಮೇಗೌಡರು ಬೇರೆ ಮದೇಮಾಡಿಕೊಂಡರೆ ಏನಾಗ್ತದೆ? ನಿಮ್ಮ ಯಜಮಾನರಿಗೂ ಅದೇ ಇದ್ದಿತಲ್ಲಾ? ಆ ಹೆಣ್ಣಿಗೆ (ಸೀತೆಗೆ ಎಂದು ಅವರ ಭಾವ) ಹುಚ್ಚು ಹಿಡಿದಿತ್ತು! ಅದನ್ನು ಕಟ್ಟಿಕೊಂಡು ಇವರು ಗುಂಡಿಗೆ ಬೀಳುವುದಾ?" ಎಂದರು ಸೇರೆಗಾರರು.

ಸುಬ್ಬಮ್ಮ ಅವರ ಕಡೆಗೆ ನೋಡದೆ ಕೆಲಸ ಮಾಡುತ್ತಿದ್ದ ಆಳುಗಳ ಕಡೆಗೇ ನೋಡುತ್ತಾ "ಆ ಹೆಣ್ಣಿನ ದೆಸೆಯಿಂದಲೇ ನಮ್ಮ ಮನೆಗೆ ಶನಿ ಹಿಡಿದುಹೋಯ್ತು. ಮನೆ ಪಾಲಾಗಿ ಹಾಳಾಯ್ತು! ಅವರೂ ಬಾಳದೆ ಹೋದರು! ಮದುವೆ ಆದವರಿಗೂ ಶನಿ ತಪ್ಪಲಿಲ್ಲ..." ಎಂದು ಹನಿ ತುಂಬುತ್ತಿದ್ದ ಕಣ್ಣುಗಳನ್ನು ವಲ್ಲಿಯ ಸೆರಗಿನಿಂದ ಒರಸಿಕೊಳ್ಳುತ್ತಾ "ಇನ್ನೂ ಏನೇನು ಆಗಬೇಕು ಅಂತಾ ಇದೆಯೋ ದೇವರ ಮನಸ್ಸಿನಲ್ಲಿ!" ಎಂದು ಸುಮ್ಮನಾದಳು.

ಸೇರೆಗಾರರೂ ಆಮೇಲೆ ಮಾತಾಡಲಿಲ್ಲ. ಆಳುಗಳು ಅಗೆಯುತ್ತಿದ್ದ ಹಾರೆ ಗುದ್ದಲಿಗಳ ಸದ್ದಿನೊಡನೆ ಸುತ್ತಲೂ ಮರಗಿಡಗಳಲ್ಲಿ ಹಾರಾಡುತ್ತಿದ್ದ ಹಕ್ಕಿಗಳ ಉಲಿಯೂ ಸೇರಿ ಕೇಳಿಬರುತ್ತಿತ್ತು.

ಸುಬ್ಬಮ್ಮ ಹತ್ತು ನಿಮಿಷಗಳವರೆಗೆ ಸುಮ್ಮನೆ ಕುಳಿತಿದ್ದು, ಹೊರಡಲು

ಮೇಲೆದ್ದು ನಿಂತಳು. ಸೇರೆಗಾರರೂ ಎದ್ದು ಅವಳನ್ನು ಕಿಂಕರರಂತೆ ಹಿಂಬಾಲಿಸಿದರು. ಹತ್ತುಮಾರು ಹೋದಮೇಲೆ ಸೇರೆಗಾರರು "ಹೆಗ್ಗಡಿತಮ್ಮಾ, ಆ ತೋಟದ ಮೇಲಿನ ಕೆರೇ ಕೋಡಿ ಸರಿಮಾಡಲಕ್ಕು. ನೀವು ಸ್ವಲ್ಪ ನೋಡಿ ಹೇಳಿಬಿಟ್ಟಿದ್ರೆ..." ಎಂದು ನಿಲ್ಲಿಸಿದರು.

ಸುಬ್ಬಮ್ಮ ಮೌನವಾಗಿ ಸಮ್ಮತಿಸಿ, ಸೇರೆಗಾರರನ್ನು ಹಿಂಬಾಲಿಸಿದಳು. ಇಬ್ಬರೂ ಕೆರೆಯ ಕೋಡಿಯನ್ನು ಸೇರಿ, ನೋಡಿದರು. ಸೇರೆಗಾರರೇ 'ಅದನ್ನು ಹಾಗೆ ರಿಪೇರಿಮಾಡಬೇಕು, ಹೀಗೆ ರಿಪೇರಿ ಮಾಡಬೇಕು' ಎಂದು ಸಲಹೆ ಕೊಟ್ಟರು. ಸುಬ್ಬಮ್ಮ 'ಆಮೇಲೆ ಯೋಚನೆ ಮಾಡಾನ; ಸದ್ಯಕ್ಕೆ ಅಗಳಿನ ಕೆಲಸ ಮುಗಿಯಲಿ' ಎಂದು, ಬಂದ ದಾರಿಯಲ್ಲಿಯೆ ಹಿಂತಿರುಗಲಿದ್ದುದನ್ನು ಕಂಡು, ಸೇರೆಗಾರರು ಬೇರೊಂದು ಹತ್ತಿರದ ಒಳದಾರಿಯನ್ನು ಸೂಚಿಸಿ, ಅದರಲ್ಲಿ ಹೊರಟರು.

ಆ ದಾರಿಯಲ್ಲಿ ಸ್ವಲ್ಪ ದೂರ ಹೋಗುವುದರೊಳಗೆ ಒಂದು ದೊಡ್ಡ ಅಗಳೂ ಅದಕ್ಕೆ ಹಾಕಿದ್ದ ಬೇಲಿಯ ಒಡ್ಡೂ ಅಡ್ಡಬಂದುವು. ಸೇರೆಗಾರರು 'ಅಲ್ಲೊಂದು ಸಾರ ಹಾಕಿದೆ. ಅದರಮೇಲೆ ದಾಟಬಹುದು' ಎಂದು ಹೇಳಿ ಸುಬ್ಬಮ್ಮನನ್ನು ಅಗಳಿನ ಪಕ್ಕದಲ್ಲಿಯೇ ಕರೆದುಕೊಂಡು ಹೋದರು.

ಕಡೆಗೆ ಎರಡು ಅಡಕೆಮರಗಳನ್ನು ಜೋಡಿಸಿ ಅಗಳಿಗೆ ಅಡ್ಡವಾಗಿ ಸೇತುವೆಯಂತೆ ಹಾಕಿದ್ದ ಸಾರವೂ ಗೋಚರಿಸಿತು. ಸೇರೆಗಾರರು ಅದರಮೇಲೆ ನಡೆದು ಆಚೆಗೆ ದಾಟಿದರು. ಆದರೆ ಸುಬ್ಬಮ್ಮ ಅದರಮೇಲೆ ಹೋಗಲು ಹೆದರಿ ಈಚೆಯ ದಡದಲ್ಲಿಯೆ ನಿಂತುಬಿಟ್ಟಳು. ಅಗಳೂ ಆಳವಾಗಿತ್ತು. ಸಾರವೂ ಸ್ವಲ್ಪ ಬಳುಕುತ್ತಿತ್ತು. ಅಭ್ಯಾಸವಿಲ್ಲದವರಿಗೆ ಕಣ್ಣುಹೆದರಿಕೆ ಆಗಿಯೆ ತಲೆ ಸುತ್ತುವಂತಿತ್ತು. ಅದರಲ್ಲಿಯೂ ಹೆಣ್ಣು ಹೆಂಗಸಿಗೆ ಅದರಮೇಲೆ ನಡೆಯುವ ಸಾಹಸ ಅಸಾಧ್ಯವಾಗಿತ್ತು. ಸೇರೆಗಾರರು ಆಚೆಯ ದಡದಿಂದ 'ಹೆದರಬೇಡಿ ಬನ್ನಿ. ಬಲವಾಗಿದೆ ಸಾರ' ಎಂದು ಧೈರ್ಯ ಹೇಳಿದರೂ ಸುಬ್ಬಮ್ಮ ಒಂದೆರಡು ಸಾರಿ ಪ್ರಯತ್ನಿಸಿಯೂ ಎದೆಯಾಗದೆ 'ಅಯ್ಯಪ್ಪಾ!' ಎನ್ನುತ್ತ ಹಿಂದೆ ಸರಿದಳು.

ಸೇರೆಗಾರರು ಏನೋ ಸಾಧಾರಣ ಎಂಬಂತೆ ದನಿಯಲ್ಲಿ ಮುಗ್ಧತೆಯನ್ನು ನಟಿಸುತ್ತಾ "ನನ್ನ ಕೈಹಿಡಿಕೊಂಡು ಮೆಲ್ಲಗೆ ದಾಟಿಬನ್ನಿ!" ಎನ್ನುತ್ತಾ ಮತ್ತೆ ಸಾರವನ್ನು ಹಿಂದಕ್ಕೆ ದಾಟಿ ಸುಬ್ಬಮ್ಮನಿದ್ದೆಡೆಗೆ ಹೋದರು. ಆ ಮಾತನ್ನು ಕೇಳಿದ ತರುಣ ವಿಧವೆಯ ಎದೆನೆತ್ತರು ಮುಖಕ್ಕೆ ಉಕ್ಕಿದಂತಾಗಿತ್ತು.

ಸರಕ್ಕನೆ ದೂರ ಸರಿದು ನಿಂತು "ಬ್ಯಾಡ, ಬಂದ ಹಾದೀಲೆ ಹೋಗಾನ ಬನ್ನಿ. ಸಾರದ ಮೇಲೆ ಹೋಗಾಕೆ ನನ್ನಿಂದಾಗಾದಿಲ್ಲ" ಎಂದಳು.

ಸೇರೆಗಾರರ ಮನಸ್ಸಿನಲ್ಲಿ ಬಹಳ ಕಾಲದಿಂದ ಅದುಮಿಕೊಂಡಿದ್ದ ಏನೇನೊ ಕಾಮಭಾವಗಳು ಮತ್ತೆ ತಲೆಯೆತ್ತಿದ್ದುವು. ಸುತ್ತಲೂ ಹೆಗ್ಗಾಡೂ ಅಡಕೆ ತೋಟಗಳೂ ಬೆಳೆದು ಸ್ಥಳ ಏಕಾಂತವಾಗಿತ್ತು; ನಿರ್ಜನವಾಗಿತ್ತು. ಆದರೆ ಸುಬ್ಬಮ್ಮ ಕೂಗಿಕೊಂಡರೆ ತುಸು ದೂರದಲ್ಲಿ ಕೆಲಸಮಾಡುತ್ತಿದ್ದ ಆಳುಗಳು ಬರದೆ ಇರಲಾರರೆಂಬ ಅಳುಕಿನಿಂದ ತಮ್ಮ ಆಳಿಯಾಸೆಯನ್ನು ಪ್ರಯತ್ನಪೂರ್ವಕ ವಾಗಿ ದಮನಮಾಡಿಕೊಂಡು "ಹೆದರಬೇಡಿ, ಹೆಗ್ಗಡಿತಮ್ಮಾ, ನಾನೊಂದು ಕೋಲು ಹಿಡುಕೊಳ್ತೀನಿ. ನೀವು ಆ ಕೋಲಿನ ತುದಿ ಹಿಡಿದುಕೊಂಡು ಬನ್ನಿ" ಎಂದು ಒಂದು ಗಿಡವನ್ನು ಮುರಿದು ದೊಣ್ಣೆಮಾಡಿ ನೀಡಿದರು.

ಸುಬ್ಬಮ್ಮಗೆ ಆ ಸಲಹೆ ಮುಗ್ಧವಾಗಿ ತೋರಿತು. 'ಹ್ಞೂ' ಎಂದು ಸೇರೆಗಾರರು ಹಿಡಿದುಕೊಂಡಿದ್ದ ದೊಣ್ಣೆಯ ತುದಿಯನ್ನು ಬಲಗೈ ಮುಷ್ಟಿಯಿಂದ ಬಲವಾಗಿ ಹಿಡಿದುಕೊಂಡಳು. ಸೇರೆಗಾರರು ಮೆಲ್ಲಗೆ ಸಾರದಮೇಲೆ ನಡೆಯ ತೊಡಗಿದರು. ಸುಬ್ಬಮ್ಮನಂತೂ ಬಲಗೈ ಮುಷ್ಟಿಯಲ್ಲಿ ದೊಣ್ಣೆಯ ತುದಿ ಯನ್ನೂ ಎಡಗೈ ಮುಷ್ಟಿಯಲ್ಲಿ ಜೀವವನ್ನೂ ಭದ್ರವಾಗಿ ಹಿಡಿದುಕೊಂಡು ಒಂದೂವರೆ ಮಾರು ಹಿಂಬಾಲಿಸಿದ್ದಳು. ಅಷ್ಟರಲ್ಲಿ ಅಡಕೆಯ ಮರಗಳ ಬಳು ಕಾಟವೂ ಹೆಚ್ಚಾಯಿತು. ಅವು ಸ್ವಾಭಾವಿಕವಾಗಿಯೆ ಬಳುಕುತ್ತಿದ್ದುದೇನೋ ನಿಜ. ಆದರೆ ಸೇರೆಗಾರರೂ ಬೇಕೆಂದೇ ತಮ್ಮ ಪದತಾಡನದಿಂದ ಸಾರದ ಬಳುಕಾಟವನ್ನು ಹೆಚ್ಚಿಸುತ್ತಿದ್ದರೆಂಬುದು ಸುಬ್ಬಮ್ಮಗೆ ಗೊತ್ತಾಗಲಿಲ್ಲ.

ಸುಬ್ಬಮ್ಮ ಮುಂಬರಿಯದೆ ನಿಂತು "ಅಯ್ಯಯ್ಯೋ, ಸೇರೆಗಾರರೆ, ಹಿಂದಕ್ಕೆ ಬನ್ನಿ; ಹಿಂದಕ್ಕೆ ಬನ್ನಿ" ಎಂದು ಕೂಗಿದಳು.

ಸೇರೆಗಾರರು "ಹೆದರಬೇಡಿ, ಬನ್ನಿ; ಇನ್ನೇನು ಸಾರ ಪೂರೈಸಿಹೋಯ್ತು" ಎಂದು ದೊಣ್ಣೆಯನ್ನು ಮುಂದೆ ಮುಂದೆ ಎಳೆದರು.

ಅಗಳಿನ ಆಳವನ್ನು ನೋಡಿ ಸುಬ್ಬಮ್ಮಗೆ ತಲೆ ತಿರುಗಿದಂತಾಯಿತು. ಹಿಂದಕ್ಕೂ ಮುಂದಕ್ಕೂ ತೂರಾಡತೊಡಗಿದಳು. ತನ್ನ ಗತಿ ಪೂರೈಸಿತೆಂದು ತಿಳಿದು ಕೂಗಲೆಳಸಿದರೂ ದನಿ ಹೊರಡಲೇ ಇಲ್ಲ. ಆಕೆಗೆ ಅಷ್ಟೊಂದು ಭೀತಿಯಾಗಿತ್ತು. ಎಂತಿದ್ದರೂ ಕೆಳಗೆ ಬಿದ್ದು ತಲೆಯೊಡೆದು ಸಾಯುತ್ತೇನೆ ಎಂದುಕೊಂಡ ಅವಳು ದೊಣ್ಣೆಯ ತುದಿಯನ್ನು ಛಕ್ಕನೆ ಕೈಬಿಟ್ಟು, ಎರಡು ಹೆಜ್ಜೆ ಮುಂದೆ ಸರಿದು ಓಡಿ, ಸೇರೆಗಾರರನ್ನೇ ಹಿಡಿದುಕೊಂಡಳು. ಸೇರೆಗಾರರೂ ಅಯ್ಯಯ್ಯೊ ಎಂದು ತತ್ತರಿಸಿದರು. ಅವರೂ ಅಸ್ಥಿರರಾಗಿದ್ದರೆ, ಇಬ್ಬರೂ ಒಬ್ಬರನ್ನೊಬ್ಬರು ಅಪ್ಪಿ ಕೊಂಡೇ ಅಗಳಿಗೆ ಬೀಳುತ್ತಿದ್ದರು. ಆದರೆ ಅವರು ಸುಬ್ಬಮ್ಮನನ್ನು ತಬ್ಬಿಹಿಡಿದು ಸಪ್ರಯತ್ನದಿಂದ ನಿಂತು, ಜಾಗರೂಕತೆಯಿಂದ ಆಚೆಯ ದಡವನ್ನು ಸೇರಿದರು.

ಒಡನೆಯೆ ಸುಬ್ಬಮ್ಮ ಸೇರೆಗಾರರನ್ನು ಕೈಬಿಟ್ಟಳು. ಆದರೆ ಸೇರೆಗಾರರು ಬಿಡಲಿಲ್ಲ.

ಆಕೆಯನ್ನು ಇನ್ನೂ ಸ್ವಲ್ಪಹೊತ್ತು ಹಾಗೆಯೇ ರಕ್ಷಿಸುವ ಮನಸ್ಸಿತ್ತು ಅವರಿಗೆ. ಆದರೆ ಸುಬ್ಬಮ್ಮ ಅವರನ್ನು ದಬ್ಬಿ ತಳ್ಳಿ ದೂರ ನಿಂತು, ಹೆದರುಗಣ್ಣಿನಿಂದ ಸುತ್ತಲೂ ನೋಡಿದಳು.

"ಯಾರೂ ಕಾಣಲಿಲ್ಲ!" ಎಂದರು ಸೇರೆಗಾರರು. ಅವರ ಮುಖದ ಮೇಲೆ ಸುಬ್ಬಮ್ಮನಲ್ಲಿದ್ದಂತೆ ಗಾಬರಿಯಿರಲಿಲ್ಲ. ನಗೆಯಿತ್ತು.

"ನಿಮ್ಮ ಮುಖಕ್ಕೆ ಬೆಂಕಿಹಾಕ! ಬ್ಯಾಡ ಅಂದ್ರೂ ಕೇಳ್ದೆ ನನ್ನ ಕೊಂದ ಹಾಕಕ್ಕೆ ಮಾಡಿದ್ರಲ್ಲಾ!" ಎಂದು ಸುಬ್ಬಮ್ಮ ಸಿಡುಕಿದಳು.

"ಇಬ್ಬರೂ ಬಿದ್ದು ಸಾಯುತ್ತಿದ್ದೆವಲ್ದಾ! ಹಾಂಗೆ ಬಂದು ಹಿಡಿದರೆ ನಿಲ್ಲು ವುದಾದರೂ ಹ್ಯಾಂಗೆ? ನೀವೇ ಹೇಳಿ" ಎಂದು ಸೇರೆಗಾರರು ನಕ್ಕರು.

"ನಿಮ್ಮ ಹಾಳಾಯ್ತು" ಎಂದು ಸುಬ್ಬಮ್ಮನೂ, ತಾನೂ ಅಪಾಯದಿಂದ ಪಾರಾದುದನ್ನು ನೆನೆದು ನಕ್ಕರೂ, ಒಡನೆಯೆ ಸನ್ನಿವೇಶ ನಗೆಗೆ ಯೋಗ್ಯವಲ್ಲ ವೆಂದು ತಿಳಿದು ಸಿಟ್ಟಿನಿಂದ ಹುಬ್ಬುಗಂಟುಹಾಕಿಕೊಂಡು ಮನೆಯ ಕಡೆಗೆ ನಡೆದಳು.

ಸೇರೆಗಾರರು ಹೆಣ್ಣಿನ ಮೈಸೋಂಕಿನಿಂದ ತಮಗೊದಗಿದ ಸುಖವನ್ನು ಮನ ದಲ್ಲಿಯೆ ನೆನೆದು ಸವಿಯುತ್ತಾ ನಡುನಡುವೆ ಕಿಲಕ್ಕನೆ ನಗುತ್ತಾ ಆಳುಗಳಿದ್ದಲ್ಲಿಗೆ ಹೋದರು.

ಸುಬ್ಬಮ್ಮ ಉದ್ವಿಗ್ನ ಸ್ಥಿತಿಯಲ್ಲಿಯೆ ಮನೆ ಸೇರಿದಾಗ ಉಪ್ಪರಿಗೆಯಲ್ಲಿ ಯಾರೋ ಇಬ್ಬರು ಮೂವರು ಮಾತಾಡುತ್ತಿದ್ದುದು ಕೇಳಿಬಂದಿತು. ಪುಟ್ಟ ನನ್ನು ಕೇಳಿದಾಗ ಮುತ್ತಳ್ಳಿ ಚಿನ್ನಯ್ಯಗೌಡರೂ ಸೀತೆಮನೆ ಸಿಂಗಪ್ಪಗೌಡರೂ ಅತ್ತಿಗದ್ದೆ ಹಿರಿಯಣ್ಣಗೌಡರೂ ಬಂದಿದ್ದಾರೆ ಎಂದು ಹೇಳಿದನು. ಅವರು ಬಂದುದು ಏಕೆ ಎಂಬುದು ಸುಬ್ಬಮ್ಮಗೆ ತಕ್ಷಣ ಮನಸ್ಸಿಗೆ ಹೊಳೆಯಿತು.

ಸೀತೆ ತನ್ನ ಮಾಂಗಲ್ಯಸೂತ್ರವನ್ನು ಕಿತ್ತೆಸೆದು ಕಾನೂರಿಗೆ ಕಾಲಿಡುವುದಿಲ್ಲ ವೆಂದು ಹಟಹಿಡಿದಮೇಲೆ ರಾಮಯ್ಯನಿಗೆ ಮತ್ತೊಂದು ಮದುವೆ ಮಾಡಿ ಕೊಳ್ಳುವಂತೆ ಹೇಳಿ, ಹಿತಚಿಂತಕರೆಲ್ಲರೂ ಒತ್ತಾಸೆಮಾಡತೊಡಗಿದ್ದರು. ಅತ್ತಿ ಗದ್ದೆ ಹಿರಿಯಣ್ಣಗೌಡರೂ ತಮ್ಮ ಮಗಳು ರಂಗಮ್ಮನನ್ನು ರಾಮಯ್ಯನಿಗೆ ಕೊಡಲೊಪ್ಪಿ ಕಾತರರಾಗಿ ಪ್ರಯತ್ನಿಸುತ್ತಿದ್ದರು. ಆ ಕಾರ್ಯದಲ್ಲಿ ಶ್ಯಾಮಯ್ಯ ಗೌಡರು, ಚಿನ್ನಯ್ಯ, ಸಿಂಗಪ್ಪಗೌಡರು, ಎಲ್ಲರೂ ಯತ್ನಶೀಲರಾಗಿದ್ದರು. ಹೂವಯ್ಯ ಕೂಡ ಸಿಂಗಪ್ಪಗೌಡರೊಡನೆ ಇಷ್ಟಪಡದ ಹುಡುಗಿಯನ್ನು ಬಲಾ ತ್ಕರಿಸುವುದಕ್ಕಿಂತಲೂ ಮತ್ತೊಂದು ಮದುವೆ ಮಾಡಿಕೊಳ್ಳುವುದೇ ಲೇಸೆಂದು

ಸೂಚಿಸಿದ್ದನು. ಆ ಪ್ರಸ್ತಾವವನ್ನೇ ಮಾತಾಡಿ, ರಾಮಯ್ಯನನ್ನು ಮದುವೆಗೆ ಒಪ್ಪಿಸಲು ಇಂದು ಅವರು ಮೂವರೂ ಕಾನೂರಿಗೆ ಬಂದು ರಾಮಯ್ಯನೊಡನೆ ವಾದಿಸುತ್ತಿದ್ದರು.

ಸುಬ್ಬಮ್ಮ ನಿಂತು ಸ್ವಲ್ಪ ಹೊತ್ತು ಆಲಿಸಿ, ರಾಮಯ್ಯನನ್ನು ಹೇಗಾದರೂ ಮದುವೆಗೆ ಒಪ್ಪಿಸಿದ್ದರೆ ಸಾಕಿತ್ತಲ್ಲಾ ಎಂದು ಹಾರೈಸುತ್ತಾ, ಬಂದ ನೆಂಟರಿಗೆ ಏನಾದರೂ ವಿಶೇಷ ಮಾಡಲೋಸ್ಕರ ಅಡುಗೆಮನೆಗೆ ಹೋದಳು.

ಆ ಹಗಲೆಲ್ಲ ನಂಟರುಪಚಾರದಲ್ಲಿಯೂ ಮಾತುಕತೆಗಳಲ್ಲಿಯೂ ತುಂಬಿ ಕಳೆಯಿತು. ಅಂತೂ ರಾಮಯ್ಯ ಮತ್ತೊಂದು ಮದುವೆ ಮಾಡಿಕೊಳ್ಳುವುದಕ್ಕೆ ಸಮ್ಮತಿಸಲಿಲ್ಲ. ಹುಚ್ಚು ಹುಚ್ಚಾಗಿ ಅಸಂಬದ್ಧವಾಗಿ ಮಾತಾಡಿ, ಎಲ್ಲರಿಗೂ ಇಸ್ಸಿ ಅನ್ನಿಸುವಂತೆ ಮಾಡಿಬಿಟ್ಟನಂತೆ. ಅದನ್ನು ಕೇಳಿ ಸುಬ್ಬಮ್ಮ ಹೆಣ್ಣು ಹೆಂಗುಸಾಗಿ ತಾನೊಬ್ಬಳೆ ಈ ಮನೆಯಲ್ಲಿ ಕಾಲಹಾಕಬೇಕಲ್ಲಾ ಎಂದು ನಿಡು ಸುಯ್ದಳು.

ಸಂಜೆ ನಂಟರೆಲ್ಲ ನಿರಾಶರಾಗಿ ಬೀಳ್ಕೊಂಡರು.

ಅದುವರೆಗೆ ಆ ದಿನ ಬೆಳಿಗ್ಗೆ ತೋಟದಂಚಿನಲ್ಲಿ ನಡೆದಿದ್ದ ಪ್ರಸಂಗ ಆಕೆಯ ಮನಸ್ಸಿನೊಳಗೆ ಮುಳುಗಿಕೊಂಡಿದ್ದುದು ಆಗ ನೀರೊಳಕ್ಕೆ ತಳ್ಳಿ ಕೈಬಿಟ್ಟ ಬೆಂಡು ಮೇಲಕ್ಕೇಳುವಂತೆ ಮೇಲೆದ್ದಿತು. ಆದರೆ ಅದನ್ನು ಪ್ರಯತ್ನಪೂರ್ವಕವಾಗಿ ಮನಸ್ಸಿನಿಂದಾಚೆಗೆ ತಳ್ಳಿ, ಬಿಡಾರಕ್ಕೆ ಹೋಗುವ ಆಳುಗಳಿಗೆ ಅಕ್ಕಿಪಡಿ, ಉಪ್ಪು, ಮೆಣಸಿನಕಾಯಿ, ಅಡಕೆ, ಹೊಗೆಸೊಪ್ಪು ಮೊದಲಾದುವುಗಳನ್ನು ಕೊಡುವ ಮತ್ತು ಕೊಡಿಸುವ ಕೆಲಸದಲ್ಲಿ ತೊಡಗಿದಳು.

ಆದರೆ ನನಸಿನಲ್ಲಿ ಹೊರತಳ್ಳಿದುದು ಕನಸಿನಲ್ಲಿ ಮರಳಿ ಒಳನುಗ್ಗಿತು. ಆ ರಾತ್ರಿ ಸುಬ್ಬಮ್ಮಗೆ ಒಂದು ಸ್ವಪ್ನವಾಯಿತು:

ತಾನು ಒಂದು ಆಳವಾದ ಕಂದಕದ ಅಂಚಿನಲ್ಲಿ ನಿಂತಿದ್ದಾಳೆ. ಅದನ್ನು ದಾಟಬೇಕೆಂದು ಆಕೆಯ ಪ್ರಯತ್ನ. ಆದರೆ ಆ ಕಂದಕವೊ ಎರಡು ಮೂರು ಅಡಕೆ ಮರಗಳ ಎತ್ತರದ ಪ್ರಮಾಣವಿದೆ. ಅದರ ಪಾತಾಳದಲ್ಲಿ ಹೊಳೆಯೊಂದು ನೊರೆಗರೆದು ಭೋರೆಂದು ಕೊಚ್ಚಿ ಹರಿಯುತ್ತಿದೆ. ಸುಬ್ಬಮ್ಮನ ಎದೆ ಹೆದರಿ ಹೋಗಿದೆ. ಆಚೆಯ ದಡದಲ್ಲಿ ಚಂದ್ರಯ್ಯಗೌಡರು ನಿಂತು ಸಾರದ ಮೇಲೆ ದಾಟಿಬರುವಂತೆ ಕರೆಯುತ್ತಿದ್ದಾರೆ. ಸುಬ್ಬಮ್ಮ ಅವರನ್ನು ತನ್ನೆಡೆಗೆ ಬಂದು ಕೈಹಿಡಿದು ಕರೆದುಕೊಂಡು ಹೋಗುವಂತೆ ಬೇಡುತ್ತಿದ್ದಾಳೆ. ಕಡೆಗೆ ಚಂದ್ರಯ್ಯ ಗೌಡರು ಬಂದು ಸುಬ್ಬಮ್ಮನನ್ನು ಕೈಹಿಡಿದು ಸಾರದಮೇಲೆ ನಡೆಸಿಕೊಂಡು ಹೋಗುತ್ತಿದ್ದಾರೆ. ಇಬ್ಬರೂ ಸಾರದ ಮಧ್ಯಕ್ಕೆ ಬಂದಿದ್ದಾರೆ. ಇದ್ದಕ್ಕಿದ್ದ

ಹಾಗೆ ಸುಬ್ಬಮ್ಮ ನೋಡುತ್ತಾಳೆ: ತನ್ನನ್ನು ಕೈಹಿಡಿದಿದ್ದವರು ಚಂದ್ರಯ್ಯ ಗೌಡರಲ್ಲ ಸೇರೆಗಾರರು! ಸುಬ್ಬಮ್ಮ ಬಿಡಿಸಿಕೊಳ್ಳಲು ಯತ್ನಿಸುತ್ತಿದ್ದಾಳೆ. ಸೇರೆಗಾರರು ಬಿಗಿಯಾಗಿ ಅಪ್ಪಿ ಹಿಡಿಯುತ್ತಿದ್ದಾರೆ. ಸಾರ ಮೇಲಕ್ಕೂ ಕೆಳಕ್ಕೂ ಬಳುಕಲು ತೊಡಗುತ್ತದೆ. ಸುಬ್ಬಮ್ಮ ಕೆಳಕ್ಕೆ ನೋಡಿ ತಲೆ ತಿರುಗಿ, ಹೇಗಾದರೂ ತನ್ನನ್ನು ದಡಗಾಣಿಸಿ ಎಂದು ಸೇರೆಗಾರರನ್ನೇ ಬಿಗಿದಪ್ಪಿ ಹಿಡಿಯುತ್ತಾಳೆ. ಆ ಗಲಿಬಿಲಿಯಲ್ಲಿ ಇಬ್ಬರೂ ಒಬ್ಬರನ್ನೊಬ್ಬರು ಅಪ್ಪಿಕೊಂಡು ಆ ಕಂದಕದ ಪಾತಾಳದ ನದಿಗೆ ದುಢುಮ್ಮನೆ ಬೀಳುತ್ತಿದ್ದಾರೆ! ಆ ಪಾತಾಳನದಿಯಲ್ಲಿ ಕೊಚ್ಚಿಹೋಗುತ್ತಿದ್ದಾಗ ಸುಬ್ಬಮ್ಮ ಹೆದರಿ ಸೇರೆಗಾರರನ್ನು ಮತ್ತೂ ಬಿಗಿಯಾಗಿ ಅಪ್ಪಿ ಹಿಡಿಯುತ್ತಾಳೆ. ಆದರೆ ಸೇರೆಗಾರರು ಸುಬ್ಬಮ್ಮನನ್ನು ರಭಸದಿಂದ ತಳ್ಳಿ, ತಕ್ಕೆಯಿಂದ ಬಿಡಿಸಿಕೊಂಡು ಈಜಿ ದಡ ಸೇರುತ್ತಾರೆ. ಸುಬ್ಬಮ್ಮ ಪ್ರವಾಹದಲ್ಲಿ ಬಂಡೆಬಂಡೆಗೆ ಬಡಿದು ಕೊಚ್ಚಿಹೋಗುತ್ತಿದ್ದಾಳೆ. ಮೈಮುರಿದು ಮೂಗು ಬಾಯಿಗಳಲ್ಲಿ ನೀರು ನುಗ್ಗಿ ಉಸಿರು ಕಟ್ಟುತ್ತಿದೆ! ಅಯ್ಯೊ ಉಸಿರು ಕಟ್ಟುತ್ತಿದೆ!

ಸುಬ್ಬಮ್ಮ ಹಾಸಗೆಯಮೇಲೆ ಕುಮುಟಿಬಿದ್ದಳು. ಎಚ್ಚರವಾಯಿತು. ನಿಜ ವಾಗಿಯೂ ಅಳುತ್ತಿದ್ದಾಳೆ! ಎದೆ ಡವಡವ ಹೊಡೆದುಕೊಳ್ಳುತ್ತಿದೆ! ಕಣ್ಣಿ ಗೇನೂ ಕಾಣಿಸುವುದಿಲ್ಲ; ಕೋಣೆ ಕಗ್ಗತ್ತಲ ಕಗ್ಗವಿಯಾಗಿದೆ. ನಿಶ್ಶಬ್ದತೆ ಸರ್ವತ್ರ ಸಾಮ್ರಾಜ್ಯವಾಳುತ್ತಿದೆ.

## ೭೩

## ಮನೆಯಲ್ಲಿ 'ಮುಟ್ಟುಚಿಟ್ಟು'!

ಎರಡು ತಿಂಗಳಾದಮೇಲೆ ಒಂದಿರುಳು ಪುಟ್ಟಣ್ಣನೂ ಸೋಮನೂ ನಾಯಿ ಕರೆದುಕೊಂಡು, ಕೋವಿ ತೆಗೆದುಕೊಂಡು, ರಾತ್ರಿ ಶಿಕಾರಿಗೆ ಹೋಗಿದ್ದರು. ಕಾನೂರಿನಿಂದ ಓಬಯ್ಯನೂ ಪುಟ್ಟನೂ ತಮ್ಮ ನಾಯಿಗಳೊಡನೆ ಬಂದು ಅವರನ್ನು ಗುಟ್ಟಾಗಿ ಸೇರಿದ್ದರು. ಬೇಟೆಯೇನೂ ಆಗಲಿಲ್ಲ. ತಿರುಗಿ ತಿರುಗಿ ದಣಿದು, ಸುಮಾರು ರಾತ್ರಿ ಒಂದು ಗಂಟೆಯ ಹೊತ್ತಿಗೆ ತಿಂಗಳು ಮುಳುಗು ತ್ತಿರಲು, ಬೇಟೆಗಾರರು ಅವರವರ ಮನೆಗಳ ಕಡೆಗೆ ತಿರುಗಿದರು.

ಓಬಯ್ಯನೂ ಪುಟ್ಟನೂ ಮನೆಯ ಹತ್ತಿರ ಬಂದಿದ್ದರು. ಪುಟ್ಟ ಇದ್ದಕ್ಕಿದ್ದ ಹಾಗೆ ಸ್ವಲ್ಪ ಹೆದರಿಕೆಯ ಪಿಸುಮಾತಿನಲ್ಲಿ "ಓಬೇ ಗೌಡ್ರೆ! ಓಬೇ ಗೌಡ್ರೆ! ಅಲ್ಲಿ ಯಾರೋ ಹೋದಹಾಂಗಾಯ್ತು!" ಎಂದು ನಿಂತು ಕೈ ತೋರಿಸಿದನು.

ಓಬಯ್ಯನೂ ನಿಂತು ನೋಡಿದನು. ಯಾರೂ ಕಾಣಿಸಲಿಲ್ಲ. ಮುಳುಗುತ್ತಿದ್ದ ತಿಂಗಳ ಬೆಳಕಿನಲ್ಲಿ ಮರಗಿಡಗಳೂ ನೆರಳುಗಳೂ ಮಾಯೆ ಮಾಯೆಯಾಗಿ ನಿಂತಿದ್ದುವು. ನಾಯಿಗಳೂ ದಣಿದು ಅತ್ತಯಿತ್ತ ಹೋಗದೆ, ದಾರಿಯಲ್ಲಿಯೆ ಬರುತ್ತಿದ್ದುವು. ಮನುಷ್ಯರು ನಿಂತು ನೋಡಲು ಅವುಗಳೂ ಚುರುಕಾಗಿ ಕಿವಿ ನಿಮಿರಿ ನಿಂತು ನೋಡತೊಡಗಿದುವು.

"ಯಾರೂ ಇಲ್ಲ ಕಣೋ. ತಿಂಗಳಬೆಳಕಿನಲ್ಲಿ ಮರದ ನೆರಳು ಒಂದೊಂದು ಸಾರಿ ಹಾಂಗೆ ಕಾಣ್ತದೆ" ಎಂದು ಓಬಯ್ಯ ಮುಂದುವರಿದನು.

ಪುಟ್ಟ ಮಾತ್ರ ಅತ್ತಕಡೆಯೇ ನೋಡುತ್ತಾ ಹಿಂಬಾಲಿಸುತ್ತಿದ್ದನು. ಅವನ ಕಣ್ಣಿಗೆ, ಮತ್ತೆ ಯಾರೊ ಹಲಸಿನಮರವೊಂದರ ಬುಡದಲ್ಲಿ ನಿಂತಿದ್ದಂತೆ ಭಾಸವಾಗಿ "ಓಬೇಗೌಡ್ರೆ, ಅದು ಯಾರೋ ನಿಂತಹಾಗೆ ಕಾಣ್ತದೆ ನೋಡಿ; ಓ ಅಲ್ಲಿ" ಎಂದು ಕೈ ತೋರಿಸಿದನು.

ಅವನು ಕೈತೋರಿಸಿದ ಕಡೆ ನಾಯಿಗಳು ಅವುಗಳ ಸ್ವಭಾವಕ್ಕೆ ತಕ್ಕಹಾಗೆ ನುಗ್ಗಿ ಓಡಿದುವು. ಕಣ್ಣುಮುಚ್ಚಿ ಬಿಡುವಷ್ಟರಲ್ಲಿ ಯಾರನ್ನೊ ಕಂಡಂತೆ ಬಗುಳಿದುವು. ಅಲ್ಲದೆ ಆ ನಾಯಿಗಳ ಕೂಗಾಟವನ್ನು ಮೀರಿ ಯಾರೊ "ಹಚಾ! ಹಚಾ! ಕಣ್ಣು ಹೊಟ್ಟಿ ಹೋಗಿತ್ತಲ್ಲಾ ಇವಕ್ಕೆ!" ಎಂಬುದೂ ಕೇಳಿಸಿತು.

"ಯಾರದು?" ಎಂದು ಕೂಗಿ ಕೇಳಿದನು ಓಬಯ್ಯ.

"ನಾನಲ್ದಾ!" ಎಂದು ಉತ್ತರವೂ ಬಂದಿತು. ಉತ್ತರದೊಡನೆ ಕೋವಿಯನ್ನು ಹೆಗಲಮೇಲೆ ಹಾಕಿಕೊಂಡು ಬರುತ್ತಿದ್ದ ಮನುಷ್ಯಾಕಾರವೂ ಮರದ ನೆರಳಿನಲ್ಲಿ ತಮ್ಮ ಕಡೆಗೇ ಚಲಿಸುತ್ತಿದ್ದುದು ಕಾಣಿಸಿತು. ನಾಯಿಗಳು ಕೂಗುವುದನ್ನು ನಿಲ್ಲಿಸಿ ಬಾಲವನ್ನಲ್ಲಾಡಿಸುತ್ತಾ ಆ ವ್ಯಕ್ತಿಯ ಸುತ್ತ ಬರುತ್ತಿದ್ದುವು.

"ಯಾರು? ಸೇರೆಗಾರ್ರೇನು?" ಎಂದನು ಓಬಯ್ಯ.

"ಹೌದು ಮಾರಾಯಾ, ಈ ಕುನ್ನಿಗಳೆಲ್ಲ ಸೇರಿ ತೆಗೆದಿದ್ದುವಲ್ದಾ ನನ್ನ!" ಎಂದು ಸೇರೆಗಾರರು ಟೊಳ್ಳಾಗಿ ನಗುತ್ತಾ ಸಮೀಪಿಸಿದರು.

"ಇತ್ತ ಎಲ್ಲಿಗೆ ಹೋಗಿದ್ರಿ?"

"ಇಲ್ಲೇ ಕೋವಿ ತಗೊಂಡು ಮೊಲದ ಮರಸಿಗೆ ಹೋಗಿದ್ದೆ... ನೀವೆತ್ತ ಹೋಗಿದ್ದಿರಿ?"

"ಗದ್ದೆ ಕಡೆ ಹೋಗಿದ್ವು. ಏನೂ ಕಾಣಲಿಲ್ಲ."

"ಒಂದು ಎಲೆಚೂರು ಇದ್ರೆ ಕೊಡ್ತೀಯೇನು, ಮಾರಾಯ್ಯಾ. ಮೊಲದ ಮನೆ ಹಾಳಾಗಿಹೋಯ್ತು! ಕಣ್ಣು ಕುಗುರಿ ಕುಗುರಿ ಸಾಕಾಯ್ತು."

ಸೇರೆಗಾರರು ಓಬಯ್ಯನಿಂದ ಎಲೆಯಡಕೆ ಹೊಗೆಸೊಪ್ಪು ತೆಗೆದುಕೊಂಡು

ವೀಳ್ಯ ಹಾಕಿಕೊಳ್ಳುತ್ತಾ ತಮ್ಮ (ಮತ್ತು ಗಂಗೆಯು) ಬಿಡಾರದ ಕಡೆಗೆ ಹೋದರು. ಹುಡುಗನಾದ ಪುಟ್ಟನಿಗೆ ಸೇರೆಗಾರರ ಮಾತಿನಲ್ಲಿ ಸ್ವಲ್ಪವೂ ಸಂಶಯ ತೋರಲಿಲ್ಲ. ಆದರೆ ಓಬಯ್ಯನಿಗೆ ಅನುಮಾನವಾಗಿ, ಅದನ್ನೇ ಆಲೋಚಿಸುತ್ತಾ ಹೋಗಿ ಮಲಗಿಕೊಂಡನು.

ಇತ್ತೀಚೆಗೆ ಸೇರೆಗಾರರಿಗೂ ಸುಬ್ಬಮ್ಮನಿಗೂ ಬೆಳೆಯುತ್ತಿದ್ದ ಸಂಬಂಧವನ್ನು ನೋಡಿ ಓಬಯ್ಯನಿಗೆ ಸ್ವಲ್ಪ ಅನುಮಾನಕ್ಕಾಸ್ಪದವಾಗಿತ್ತು. ಆದರೆ ಕಂಡರೂ ಕಾಣದವನಂತೆ ಸುಮ್ಮನಿರುತ್ತಿದ್ದನು. ದೊಡ್ಡವರ ಕೆಸರಿಗೆ ಕಾಲಿಟ್ಟರೆ ಕಡಿಜಲು ಕೊಟ್ಟೆಗೆ ಕೈಹಾಕಿದಂತಾಗುತ್ತದೆಂದು, ಯಾರೊಡನೆಯೂ ಆ ವಿಚಾರವನ್ನೆತ್ತದೆ, ಕಲ್ಲಿನಂತೆ ಸುಮ್ಮನಿದ್ದನು.

ಅವನು ಕಣ್ಣು ಬಿಟ್ಟುಕೊಂಡೇ ಆಲೋಚಿಸುತ್ತಾ ಮಲಗಿರಲು ಉಪ್ಪರಿಗೆಯ ಮೇಲೆ ಮಲಗಿದ್ದ ರಾಮಯ್ಯ ಅತ್ಯಂತ ಭೀತವಾಣಿಯಿಂದ "ಅಯ್ಯೋ! ಓಬಯ್ಯ! ಓಬಯ್ಯ! ಓಡಿಬಾರೋ! ಸತ್ತೆನಲ್ಲೋ!" ಎಂದು ಕೂಗಿ ಕೊಂಡದ್ದು ಆ ರಾತ್ರಿಯ ನಿರ್ಜನತೆ ನೀರವತೆಗಳಲ್ಲಿ, ರಕ್ತನಾಳಗಳಲ್ಲಿ ಚಳಿ ಹರಿಯುವಂತೆ ಕೇಳಿಸಿತು.

ಓಬಯ್ಯ ಗಾಬರಿಯಿಂದ ದಡಕ್ಕನೆ ಎದ್ದು, ಏಣಿಮೆಟ್ಟಲುಗಳನ್ನು ಏರಿ, ಉಪ್ಪರಿಗೆಗೆ ಓಡಿದನು. ಅಲ್ಲಿ ಯಾರೂ ಕಾಣಿಸಲಿಲ್ಲ. 'ರಾಮೇಗೌಡ್ರೇ! ರಾಮೇಗೌಡ್ರೇ!' ಎಂದು ಕರೆದನು. ಉತ್ತರ ಬರಲಿಲ್ಲ. ಓಬಯ್ಯನಿಗೆ ಬಹಳ ಹೆದರಿಕೆಯಾಯಿತು. ಹಾಗೆಯೆ ಕೆಳಗಿಳಿದು ಬಂದು ಲಾಟೀನು ಹೊತ್ತಿಸಿ ಕೊಂಡು ಮತ್ತೆ ಉಪ್ಪರಿಗೆಗೆ ಹೋದನು.

ರಾಮಯ್ಯ ಒಂದು ಮೂಲೆಯಲ್ಲಿ ತನ್ನ ಹಾಸಗೆಯಮೇಲೆ ರಗ್ಗು ಹೊದೆದು ಮಲಗಿದ್ದನು. ಲಾಟೀನಿನ ಬೆಳಕಿನಲ್ಲಿ ಅವನು ಕಣ್ಣು ಬಿಟ್ಟುಕೊಂಡಿರುವುದೇನೋ ಕಾಣಿಸಿತು. ಆದರೆ ಓಬಯ್ಯ 'ಯಾಕೆ ಕೂಗಿದ್ದು?' ಎಂದಾಗ ಅವನು ಮಾತನಾಡಲು ಪ್ರಯತ್ನಿಸಿದರೂ ಆಗಲಿಲ್ಲ. ಮೈಯೆಲ್ಲಾ ಗಡ ಗಡ ಗಡನೆ ನಡುಗುತ್ತಿತ್ತು. ಮುಖದಲ್ಲಿ ಬೆವರಿಳಿಯುತ್ತಿತ್ತು. ಕಣ್ಣೀರು ಸುರಿಯುತ್ತಿತ್ತು.

ರಾಮಯ್ಯ ಮಾತನಾಡುವ ಸ್ಥಿತಿಗೆ ಬರುವುದಕ್ಕೆ ಅರ್ಧ ಗಂಟೆಯಾಯಿತು. ತಾನು ನಿದ್ರಿಸುತ್ತಿದ್ದಾಗ ಯಾರೊ ತನ್ನನ್ನು ಹೆಸರು ಹಿಡಿದು ಕೂಗಿದಂತಾಯಿ ತೆಂದೂ, ಕಣ್ಣು ತೆರೆದಾಗ ಆಕೃತಿಯೊಂದು ಮುಂಡಿಗೆಯ ಪಕ್ಕದಲ್ಲಿ ನಿಂತಿ ತ್ತೆಂದೂ, 'ಯಾರದು' ಎಂದು ಕೇಳಿದಾಗ, ಅದು ಮಾತಾಡದೆ ತನ್ನ ಕಡೆಗೆ ಮುಂಬರಿಯತೊಡಗಿತೆಂದೂ, ನೋಡಿದಾಗ ತನ್ನ ತಂದೆಯಂತೆ ತೋರಿತೆಂದೂ, ಇನ್ನೂ ಹತ್ತಿರ ಬಂದಾಗ ಅತ್ಯಂತ ವಿಕಾರವಾಗಿ, ತಲೆ ಕೆದರಿಕೊಂಡು ಹಲ್ಲು

ಚಿಲಿದುಕೊಂಡಿದ್ದ ಸ್ತ್ರೀಯಾಕೃತಿಯಂತೆ ತೋರಿತೆಂದೂ, ನೋಡುತ್ತಿದ್ದಹಾಗೆ ರೋಷದಿಂದ ನಕ್ಷತ್ರಗಳಂತೆ ಉರಿಯುತ್ತಿದ್ದ ಕಣ್ಣುಗಳನ್ನು ಕೆರಳಿಸಿ, ಹಲ್ಲು ಕಡಿಯುತ್ತಾ ತನ್ನ ಮೈಮೇಲೆ ಬೀಳುವಂತೆ ತೋರಿತೆಂದೂ, ಆಗ ಕೂಗಿಕೊಂಡು ಪ್ರಜ್ಞೆ ತಪ್ಪಿದೆನೆಂದೂ ಭಯಂಕರವಾಗಿ ಕಥೆ ಹೇಳಿದನು. ಅವನ ಭೀತಿ ಓಬಯ್ಯ ನಿಗೂ ತಟ್ಟದಿರಲಿಲ್ಲ.

ಅಂತೂ ಬೆಳಗಾಗುವವರೆಗೆ ಓಬಯ್ಯ ರಾಮಯ್ಯನ ಪಕ್ಕದಲ್ಲಿಯೆ ದೀಪ ಹೊತ್ತಿಸಿಕೊಂಡು ಕೂತಿರಬೇಕಾಯಿತು. ಅವರಿಬ್ಬರಲ್ಲಿ ಯಾರೂ ಕಣ್ಣು ಹಚ್ಚಲಿಲ್ಲ.

ಮರುದಿನ ಅಗ್ರಹಾರದ ವೆಂಕಪ್ಪಯ್ಯ ಜೋಯಿಸರನ್ನು ಕರೆಸಿ ನಿಮಿತ್ತ ನೋಡಿಸಿದರು. ಅವರು 'ಮನೆಯಲ್ಲಿ ಏನೋ ಅನಾಚಾರ ನಡೆದು ಮುಟ್ಟು ಚಿಟ್ಟು (ಮೈಲಿಗೆ) ಆಗಿಬಿಟ್ಟಿದೆ. ಮನೆಯನ್ನೆಲ್ಲಾ ಶೌಚಹಾಕಿಸಿ ಭೂತಾದಿಗಳಿಗೆ ಹಣ್ಣು ಕಾಯಿ ಹಾಕಿಸಿ, ಚಂದ್ರಮೌಳೇಶ್ವರ ದೇವಸ್ಥಾನದಲ್ಲಿ ವ್ರತಮಾಡಿಸಿ...' ಎಂದು ಮೊದಲಾಗಿ ವಿಧಿಸಿದರು. ಬಹಳ ಮುತುವರ್ಜಿವಹಿಸಿ ಆ ಕೆಲಸ ಗಳನ್ನೆಲ್ಲ ಮಾಡಲು ತಾವೇ ಒಪ್ಪಿಕೊಂಡರು. ಅದರಂತೆ ಎಲ್ಲ ಕಾರ್ಯಗಳೂ ನಡೆದು, ಮನೆಯ ಬಾಗಿಲುಗಳಲ್ಲಿ ಪ್ರತಿಯೊಂದಕ್ಕೂ ಒಂದೊಂದು ಮಂತ್ರಿಸಿದ ತೆಂಗಿನಕಾಯನ್ನು ವಿಭೂತಿ ಪ್ರಸಾದಗಳೊಡನೆ ಕಟ್ಟಿ ನೇತುಹಾಕಿದರು.

ಆದರೆ ಜೋಯಿಸರು ಕನಸಿನಲ್ಲಿಯೂ ಊಹಿಸದಿದ್ದ ನಿಜವಾದ 'ಮುಟ್ಟು ಚಿಟ್ಟು' ಮಾತ್ರ ನಿರಾತಂಕವಾಗಿ ನಡೆಯುತ್ತಿತ್ತು.

ತೋಟದಾಚೆ ಸಾರ ದಾಟುವಾಗ, ಸೇರೆಗಾರರು ಸುಬ್ಬಮ್ಮನ ಕೈ ಹಿಡಿದು ಮೈಯಪ್ಪಿದ ದಿನದಿಂದ ಅವರಿಬ್ಬರ ಮನಸ್ಸಿನಲ್ಲಿ ಹೊಸ ಹೊಸ ಭಾವಗಳೂ ರಾಗಗಳೂ ಹಾರೈಕೆಗಳೂ ಮೂಡತೊಡಗಿದ್ದುವು! ತಾವು ಕೈ ಹಿಡಿದು ಅಪ್ಪಿ ದಾಗಲೂ, ಸಾರವನ್ನು ದಾಟಿದಮೇಲೆಯೂ, ತುಸು ಹೊತ್ತು ಹಾಗೆಯೇ ಹಿಡಿದಿದ್ದಾಗಲೂ, ಸುಬ್ಬಮ್ಮ ಗಟ್ಟಿಯಾಗಿ ಕೂಗಿಕೊಂಡು ಗಲಾಟೆಯೆಬ್ಬಿಸದೆ ಸಾಧಾರಣವಾಗಿ ಮಾತ್ರ ಮುನಿದು ಬೈದು, ತರುವಾಯವಾದರೂ ಆ ವಿಚಾರ ವನ್ನು ಯಾರೊಡನೆಯೂ ಹೇಳದೆ ಸುಮ್ಮನಿದ್ದುದನ್ನು ನೋಡಿ ಅಭಿಸಾರ ಕಲೆಯಲ್ಲಿ ನಿಷ್ಣಾತರಾಗಿದ್ದ ಸೇರೆಗಾರರಿಗೆ ಹೊಸ ಹುರುಪೂ ಹೊಸ ಹಾರೈಕೆಯೂ ಮೂಡಿದಂತಾಗಿ, ತಮ್ಮ ಸಾಹಸ ಪ್ರಯತ್ನವನ್ನು ಮುಂದುವರಿಸತೊಡಗಿದರು.

ಸುಬ್ಬಮ್ಮನ ಮನಃಸ್ಥಿತಿಯ ಮಾವಿನಕಾಯಿಯೂ ಸೇರೆಗಾರರ ಒಲುಮೆ ಗಿಳಿಯ ಕೊಕ್ಕಿನ ಕುಟುಕಿಗೆ ಯೋಗ್ಯವಾಗುವಂತೆ ಹಣ್ಣಾಗುತ್ತಿತ್ತು; ಮೃದು ವಾಗುತ್ತಿತ್ತು; ಒಗರನ್ನೂ ಹುಳಿಯನ್ನೂ ಗಟ್ಟಿಯನ್ನೂ ಮೆಲ್ಲಮೆಲ್ಲನೆ ಬಿಡುತ್ತಾ

ಸಿಹಿಯಾಗುತ್ತಿತ್ತು. ಕಾಯಾಗಿದ್ದಾಗ ಮರವನ್ನಾಗಲಿ ಕೊಂಬೆಯನ್ನಾಗಲಿ ಅಲುಗಾಡಿಸಿದರೆ ಕೆಳಗೆ ಬೀಳದಿದ್ದುದು, ಚೆನ್ನಾಗಿ ಹಣ್ಣಾದ ಮೇಲೆ ಬೀಳದಿರುತ್ತದೆಯೆ? ಕೈವಶವಾಗದಿರುತ್ತದೆಯೆ?

ಚಂದ್ರಯ್ಯಗೌಡರ ಮೂರನೆಯ ಹೆಂಡತಿಯಾಗಿದ್ದ ಸುಬ್ಬಮ್ಮ ಅವರನ್ನು, ಇನಿಯಳು ಇನಿಯನನ್ನು ಒಲಿಯುವಂತೆ ರಾಗಭಾವ ಪೂರ್ವಕವಾದ ಕಾಮ ಪೂರ್ಣತೆಯಿಂದ ಎಂದಿಗೂ ಒಲಿದಿರಲಿಲ್ಲ. ಗೌಡರ ಎರಡನೆಯ ಹೆಂಡತಿ (ಪುಟ್ಟಮ್ಮ–ವಾಸುವಿನ ತಾಯಿ) ತೀರಿಹೋಗಿ ಸುಬ್ಬಮ್ಮ ಘಟನಾಕ್ರಮದಂತೆ ಅವರನ್ನು ಹಠಾತ್ತಾಗಿ ಮದುವೆಯಾಗುವ ಮೊದಲು, ಆಕೆಯ ಮನಸ್ಸು ಬೇರೆಯ ಕಡೆಗಳಲ್ಲಿ ಸುಳಿದಾಡುತ್ತಿತ್ತು. ಕಾನೂರಿಗೆ ತನ್ನನ್ನು ಕೊಡುತ್ತಾರೆಂದು ತಿಳಿದಾಗಲೂ ಕೂಡ ವಯಸ್ಕರಾಗಿದ್ದ ಮೂರು ಮಕ್ಕಳ ತಂದೆಯಾಗಿದ್ದ ಚಂದ್ರಯ್ಯ ಗೌಡರಿಗೆಂದು ಆಕೆ ಭಾವಿಸಲಿಲ್ಲ. ಹೂವಯ್ಯನಿಗಿರಬಹುದೆಂದು ಮನದಲ್ಲಿ ಮಂಡಿಗೆ ತಿಂದಿದ್ದಳು. ತನ್ನನ್ನು ಕೊಡುವುದು ಚಂದ್ರಯ್ಯಗೌಡರಿಗೆಂದು ಚೆನ್ನಾಗಿ ಗೊತ್ತಾದಾಗ ಸ್ವಲ್ಪ ಆಶಾಭಂಗವನ್ನು ಅನುಭವಿಸಿದರೂ, ದೊಡ್ಡ ಮನೆಯ ಯಜಮಾನರೂ ನಾಡಿನ ಶ್ರೀಮಂತ ಸುಪ್ರಸಿದ್ಧರೂ ಆದವರ ಕೈಹಿಡಿದು ಎಲ್ಲರ ಗೌರವ ಭಯಗಳಿಗೂ ಪಾತ್ರಳಾಗಿ, ಕಾನೂರು ಮನೆಯ ಹೆಗ್ಗಡಿತಿಯಾಗಿ ಮೆರೆಯುತ್ತೇನೆ ಎಂಬ ಬಣ್ಣದ ಕನಸನ್ನು ಕಟ್ಟಿಕೊಂಡು ಸುಬ್ಬಮ್ಮ ಹಿಗ್ಗಿದಳು. ಆದರೆ ಆ ಕನಸು ನನಸಾಗುವಂತೆ ಅವಳ ಹಣೆಯಲ್ಲಿ ಬರೆದಿರಲಿಲ್ಲ. ಆಕೆ ಕಾನೂರಿಗೆ ಕಾಲಿಡುವ ಮೊದಲೇ ಗಂಗೆಯ ಮೋಹಕೀಟ ಗೌಡರ ಹೃದಯ ಕುಸುಮವನ್ನು ಆಕ್ರಮಿಸಿ, ಕೊರೆಯಲು ತೊಡಗಿದ್ದಿತು. ಮೊದಮೊದಲು ಗೌಡರು ರಸ ತುಂಬಿದ ಹೊಸ ಹಣ್ಣನ್ನು ಮುದ್ದಿಸಿದರೂ, ಕೆಲಕಾಲದಲ್ಲಿಯೆ ಸುಬ್ಬಮ್ಮಗೆ ನರಕಯಾತನೆ ಪ್ರಾರಂಭವಾಯಿತು. ಅದಕ್ಕೆ ಅವಳೂ ತುಸು ಮಟ್ಟಿಗೆ ಕಾರಣವಾಗಿದ್ದಳು. ತಾನು ಮನೆಯ ಯಜಮಾನರನ್ನು ಮದುವೆಯಾದ ಮಾತ್ರದಿಂದ ಮನೆಗೆ ಹೆಗ್ಗಡಿತಿಯಾದೆನೆಂಬ ಅಹಂಕಾರದಿಂದ, ತನಗಿಂತಲೂ ಎಷ್ಟೋ ಹಿರಿಯರಾದ ಹೂವಯ್ಯನ ತಾಯಿ ನಾಗಮ್ಮನವರ ಮೇಲೆಯೂ ಸವಾರಿ ಮಾಡತೊಡಗಿದಳು. ಆಳುಕಾಳುಗಳೊಡನೆಯೂ ಅದೇ ರೀತಿಯಾಗಿ ಚೇಳಿಗೆ ಪಾರುಪತ್ಯ ಕೊಟ್ಟಂತೆ ವರ್ತಿಸುತ್ತಿದ್ದಳು. ಆದರೆ ಆ ಆಟೋಪವೆಲ್ಲ ಮುಗಿದು ,ಸ್ವಲ್ಪ ಕಾಲದಲ್ಲಿ ಇರುಳಿನಲ್ಲಿಯೆ ,ಕಾನೂರನ್ನು ಬಿಟ್ಟು, ತನ್ನನ್ನು ಕತ್ತರಿಸಿಹಾಕುವುದರಲ್ಲಿದ್ದ ಗೌಡರ ಕತ್ತಿಯಿಂದ ಪಾರಾಗಿ, ತವರೂರಿಗೆ ಓಡಿ ಹೋಗಬೇಕಾಯಿತು. ಚಂದ್ರಯ್ಯಗೌಡರೊಡನೆ ಪ್ರೇಮಸಂಬಂಧವಿಲ್ಲದೆ ವಿವಾಹ ಬಂಧನ ಮಾತ್ರವಿದ್ದ ಆಕೆಗೆ ಅವರು ಕಠೋರವಾದ ಪಿಶಾಚದಂತೆ ತೋರಿದರು.

ಅವರನ್ನು ಶಪಿಸಿದಳು. ಚಂದ್ರಯ್ಯಗೌಡರು ಹಾಸಗೆ ಹಿಡಿದ ತರುವಾಯ ಮತ್ತೆ ಕಾನೂರಿಗೆ ಬಂದಾಗಲೂ ಸುಬ್ಬಮ್ಮಗೆ ಗೌಡರಮೇಲಿದ್ದುದು ಒಂದು ತರಹದ ಕನಿಕರವಾಗಿದ್ದಿತೆ ಹೊರತು ಪ್ರಣಯಭಾವವಾಗಿರಲಿಲ್ಲ! ಅಲ್ಲದೆ ತವರು ಮನೆಯ ಪೀಡನೆಯಿಂದ ತಪ್ಪಿಸಿಕೊಳ್ಳುವುದಕ್ಕೆ ಸಹಾಯಮಾಡಿದ್ದ ಆ ಘಟನೆಯಲ್ಲಿ ಆಕೆಗೆ ಕೃತಜ್ಞತೆಯಿತ್ತು. ಹೆಂಡತಿಯಾದವಳು ಗಂಡನನ್ನು ಶುಶ್ರೂಷೆ ಮಾಡಬೇಕೆಂಬ ವಾಡಿಕೆಗನುಸಾರವಾಗಿ ಸುಬ್ಬಮ್ಮನೂ ಇತರರಂತೆ ವರ್ತಿಸಿದ್ದಳು. ಗೌಡರು ತೀರಿಹೋದಮೇಲೆ, ಸುಬ್ಬಮ್ಮ ನಿಜವಾಗಿಯೂ ಎದೆಹಿಂಡಿ ದುಃಖಪಟ್ಟಿದ್ದಳು. ತವರುಮನೆಯವರು ಕರೆದರೂ ಅಲ್ಲಿಗೆ ಕಾಲಿಡದೆ ಕಾನೂರಿನ ಹೆಗ್ಗಡಿತಿತನವನ್ನು ಮತ್ತೊಮ್ಮೆ ಇಮ್ಮಡಿ ಉತ್ಸಾಹದಿಂದ ಕೈಕೊಂಡಿದ್ದಳು.

ಕಾನೂರು ಮನೆಗೆಲ್ಲ ಸುಬ್ಬಮ್ಮ ಒಬ್ಬಳೇ ಹೆಂಗಸಾಗಿದ್ದಳು. ಅನೇಕಸಾರಿ ಬೇಸರದಿಂದ ಅವಳ ಮನಸ್ಸು ಸುಯ್ದು ಸುಯ್ದು ಯಾವುದನ್ನೋ ಹಾರೈಸಿ, ಕಣ್ಣೀರು ಕರೆಯುತ್ತಿತ್ತು. ಮನೆಗೆಲಸಗಳನ್ನು ನೋಡಿಕೊಳ್ಳುವುದಕ್ಕಾಗಿ ಮನಸ್ಸನ್ನು ಎಷ್ಟು ಉಪಯೋಗಿಸಿದರೂ ಮಧ್ಯೆ ಮಧ್ಯೆ ಬೇಸರವೂ ರೇಜಿಗೆಯೂ ಶೂನ್ಯತೆಯೂ ಆಕೆಯನ್ನು ಆಕ್ರಮಿಸುತ್ತಿದ್ದುವು. ರಾಮಯ್ಯ ಮತ್ತೊಂದು ಮದುವೆ ಮಾಡಿಕೊಂಡರೆ ಸೊಸೆ ಮನೆಗೆ ಬರುತ್ತಾಳೆ ಎಂದಿದ್ದ ಹಾರೈಕೆಯೂ ಬರಿದಾಯ್ತು. ಇವೆಲ್ಲದರ ಜೊತೆಗೆ, ಆಕೆಗೆ ಯೌವನವೂ ಕುದಿದುಕ್ಕತೊಡಗಿತ್ತು. ಬಡತನದಲ್ಲಿ ಹುಟ್ಟಿ ದುಡಿದಿದ್ದ ಆಕೆಗೆ ಈಗ ವಿರಾಮದಲ್ಲಿ ಮೈಕೊಬ್ಬಿತ್ತು. ಸಂಸ್ಕೃತಿಯಿಲ್ಲದ ಮತ್ತು ಸಂಸ್ಕೃತಿಗಾಗಿಯಲ್ಲದ ವಿರಾಮ ನರಕಕ್ಕೆ ದಾರಿ. ಹೆಗ್ಗಡಿತಿಯೆಂಬ ಅಹಂಕಾರವೂ ನೆತ್ತಿಗೇರಿತ್ತು. ಗ್ರಹಚಾರಕ್ಕೆ ತಕ್ಕಹಾಗೆ ಸೇರೆಗಾರರೂ ಹೊಂಚುತ್ತಿದ್ದರು.

ಮೊದಲಿನಿಂದಲೂ ಸೇರೆಗಾರರ ಕಣ್ಣು ತನ್ನಮೇಲಿದೆ ಎಂಬುದು ಸುಬ್ಬಮ್ಮಗೆ ಗೊತ್ತಿತ್ತು. ಹಿಂದೆ ಅವರ ಪ್ರಯತ್ನಗಳನ್ನೆಲ್ಲ ತೃಪ್ತಿಕರವಾಗಿ ನಿವಾರಿಸಿದ್ದಳು. ಆದರೆ ಈಗ ಯಾರೂ ತನ್ನನ್ನು ಲೆಕ್ಕಿಸದ ಕಾಲದಲ್ಲಿ ಸೇರೆಗಾರರ ಲಕ್ಷ್ಯ, ಒಂದು ರೀತಿಯಿಂದ, ಇದ್ದರೂ ಇರಲಿ ಎನ್ನಿಸಿತು. ತೋಟದಾಚೆಯ ಸಾರದ ಘಟನೆ ನಡೆದಮೇಲಂತೂ ಸೇರೆಗಾರರು ಅವಕಾಶ ಸಿಕ್ಕಿದಾಗಲೆಲ್ಲ ತಮ್ಮ ವಿಶ್ವಾಸಾನುರಾಗಗಳನ್ನು ಪ್ರದರ್ಶಿಸತೊಡಗಿದ್ದರು; ಎಷ್ಟೋಸಾರಿ ಅವಕಾಶ ಕಲ್ಪಿಸಿಕೊಂಡೂ! .... 'ಥೂ! ನೀವು ಹಾಂಗೆ ಮಾಡಬೇಡಿ!' 'ನೀವು ಹಾಳಾಗಿಹೋಗಿ!' ಎಂದು ಸುಬ್ಬಮ್ಮ ಮುನಿದು ಬೈಯುತ್ತಿದ್ದರೂ, ಕಣ್ಣುಗಳಲ್ಲಿ ಅನ್ಯಭಾವವಿರುತ್ತಿದ್ದುದನ್ನು ಕಂಡು, ಸೇರೆಗಾರರು ಆ ಬೈಗುಳಗಳನ್ನೆಲ್ಲ ಚಾತಕಪಕ್ಷಿ ಮೋಡದ ಮಳೆಯನ್ನು ಕುಡಿದು ನಲಿಯುವಂತೆ ನಲಿಯುತ್ತಿದ್ದರು.

ಒಂದುಸಾರಿ, ಸೇರೆಗಾರರು ಸುಬ್ಬಮ್ಮ ಬೇಡವೆಂದರೂ ಕೇಳದೆ ಆಕೆಯ ಸ್ನಾನಕ್ಕೆ ನೀರು ಹಾಕಿಕೊಟ್ಟರು. ಹಳೆಪೈಕದ ತಿಮ್ಮನಿಂದ ಕಳ್ಳು ತಂದು ದಿನವೂ ನಿವೇದಿಸತೊಡಗಿದರು! ಗಂಗೆಯ ವಶವಾಗಿದ್ದ ಸುಬ್ಬಮ್ಮನ ಒಂದು ಒಳ್ಳೆಯ ಸೀರೆಯನ್ನು ವಾಪಸು ತಂದುಕೊಟ್ಟರು. ಈ ಮೊದಲಾದ ಉಪಕೃತಿಗಳಿಗೆಲ್ಲ ಕೃತಜ್ಞತೆಯನ್ನು ಸೂಚಿಸುವುದಕ್ಕಾಗಿ ಸುಬ್ಬಮ್ಮ ಸೇರೆಗಾರರಿಗೆ ಸ್ವಲ್ಪ ಹೆಚ್ಚಾಗಿ ಕಾಫಿ ತಿಂಡಿ ಕೊಟ್ಟಳು. ಅವರು ಮಧ್ಯಾಹ್ನ ಕಾನೂರು ಮನೆಯಲ್ಲಿಯೆ ಊಟಮಾಡುತ್ತಿದ್ದರಾದ್ದರಿಂದ ತುಪ್ಪ, ಮೊಸರು, ಮಾಂಸದ ಪಲ್ಯ ಮೊದಲಾದ ವಿಶೇಷಗಳನ್ನು ಹೆಚ್ಚು ಹೆಚ್ಚಾಗಿ ಬಡಿಸತೊಡಗಿದಳು. ರಾತ್ರಿ ಅವರು ಗಂಗೆಯ ಬಿಡಾರದಲ್ಲಿ ಊಟಮಾಡಿ ಅಲ್ಲಿಯೆ ಮಲಗುತ್ತಿದ್ದರಾದ್ದರಿಂದ, ಅವರ ರಾತ್ರಿಯೂಟಕ್ಕೆ ತಾನು ಮಾಡಿದ್ದ ಭಕ್ಷ್ಯ ಭೋಜ್ಯಗಳನ್ನು, ಮೊದಲು ಒಮ್ಮೊಮ್ಮೆ, ಆಮೇಲೆ ಆಗಾಗ, ಕಳುಹಿಸತೊಡಗಿದಳು. ಹೀಗೆ ಅವರಿಬ್ಬರ ಪರಸ್ಪರ ಉಪಕಾರದ ಕೃತಜ್ಞತೆ ಸ್ನೇಹಕ್ಕೆ ತಿರುಗಿತು. ಎಷ್ಟರ ಮಟ್ಟಿಗೆಂದರೆ: ಒಂದುಸಾರಿ ಸೇರೆಗಾರರು ಅವಕಾಶ ಕಲ್ಪಿಸಿಕೊಂಡು ತಾವೊಬ್ಬರೇ ಊಟಕ್ಕೆ ಕೂತಿದ್ದಾಗ, ಏನೋ ಮಾತು ಮಾತಿಗೆ ಕುಶಾಲಿಗಾಗಿ, ತಮ್ಮ ಪಕ್ಕದಲ್ಲಿದ್ದ ಚೊಂಬಿನಿಂದ ನೀರನ್ನು ಬೊಗಸೆ ತೆಗೆದು ಸುಬ್ಬಮ್ಮನ ಮುಖಕ್ಕೆ ಎರಚಿದರು. ಸುಬ್ಬಮ್ಮ ನಗುತ್ತಾ ಬೈಯುತ್ತಾ ತನ್ನ ಕೈಯಲ್ಲಿದ್ದ ಪಾತ್ರೆಯಿಂದ ಮೊಸರನ್ನು ತೆಗೆದು ಅವರ ಮುಖಕ್ಕೆ ಎರಚಿ, ಅವರ ಕೆನ್ನೆ ಮೀಸೆಗಳ ಮೇಲೆಲ್ಲ ಮೊಸರು ಬಿದ್ದುದನ್ನು ಕಂಡು ನಗತೊಡಗಿದಳು. ಸೇರೆಗಾರರು ಮುಖ ಉಜ್ಜಿಕೊಳ್ಳುತ್ತಾ ನಗತೊಡಗಿದರು. ಅದನ್ನು ಕೇಳಿ ಒಳಗೆ ಬಂದ ಓಬಯ್ಯನಿಗೆ ಇಬ್ಬರೂ ಸೇರಿ 'ಬೆಕ್ಕಿನ ಕಣ್ಣಿಗೆ ಉಪ್ಪಿನಕಾಯಿಯ ರಸವನ್ನು ಸಿಡಿಯಲು ಅದು ಕಣ್ಣು ಕಾಣದೆ ಕಡೆಗೋಲು ಕಂಭಕ್ಕೆ ಢಿಕ್ಕಿ ಹೊಡೆದು ಮಗುಚಿಬಿದ್ದು, ಅವಾಂತರ ಮಾಡಿತು' ಎಂಬ ಕಥೆ ಹೇಳಿದರು. ಅವನೂ ಅವರ ಕಥೆಯನ್ನು ನಂಬಿದವನಂತೆ ನಟಿಸಿ ಮರಳಿದನು.

ಈ ಎಲ್ಲದರ ಫಲರೂಪವಾಗಿ ಸೇರೆಗಾರರು ರಾತ್ರಿ ಗಂಗೆಯ ಬಿಡಾರದಲ್ಲಿ ಊಟಮಾಡಿಕೊಂಡು ಅಲ್ಲಿ ಮಲಗದೆ, ದಿನವೂ ಕೋವಿ ತೆಗೆದುಕೊಂಡು ಮೊಲದ ಮರಸಿಗೆ ಹೋಗತೊಡಗಿದರು. ಗಂಗೆಗೆ ಸಂಶಯವಾಗಿ ಒಂದು ಸಾರಿ 'ತಿಂಗಳುಬೆಳಕಿಲ್ಲ, ಏನಿಲ್ಲ. ಈ ಕತ್ತಲಲ್ಲಿ ನಿಮಗೆ ಮೊಲ ಕಾಣಿಸುವುದಾದರೂ ಹೇಗೆ?' ಎಂದು ಕೇಳಿದಳು. ಸೇರೆಗಾರರು ಮೊಲ ಬೆಳ್ಳಗಿರುವುದರಿಂದ ನಕ್ಷತ್ರದ ಬೆಳಕಿನಲ್ಲಿ ಅದರ ಆಕಾರ ಕಾಣಿಸುತ್ತದೆಂದೂ ಅಭ್ಯಾಸವಿರುವುದರಿಂದ ಅಂದಾಜಿನಮೇಲೆ ಗುರಿಯಿಟ್ಟು ಹೊಡೆಯಬಹುದೆಂದೂ ಹೇಳಿದರು. ಅದಕ್ಕವಳು ಮುಗುಳು ನಗುತ್ತಾ ಅರ್ಥಪೂರ್ಣವಾಗಿ ವ್ಯಂಗ್ಯದೃಷ್ಟಿಯಿಂದ

ನೋಡುತ್ತಾ "ನಿಮ್ಮ... ಹಾಳಾಯ್ತು! ನಂಗೆಲ್ಲ ಗೊತ್ತದೆ!" ಎಂದು ಅವರ ಮೀಸೆಯನ್ನು ಹಿಡಿದೆಳೆದಳು.

ಸೇರೆಗಾರರು ನೋವಿನಿಂದ "ಅಯ್ಯೋ ಪುಣ್ಯಾತಗಿತ್ತಿ" ಎಂದು ಮೆಲ್ಲನೆ ಕೂಗಿ, ಗಂಗೆಯಿಂದಲೆ ತಲೆಬಾಚಿಸಿ ಹೂ ಮುಡಿದುಕೊಂಡು, ಮೀಸೆಗೆ ಪರಿಮಳ ಹಚ್ಚಿಸಿಕೊಂಡು, ಹೂವಿನ ಕುಚ್ಚೊಂದನ್ನು ಬಕ್ಕಣಕ್ಕೆ ಹಾಕಿಕೊಂಡು, ಕೋವಿ ತೆಗೆದುಕೊಂಡು 'ಮೊಲದ ಮರಸಿ'ಗೆ ನಿತ್ಯವೂ ಹೋಗುವಂತೆ ಹೋದರು.

## ೭೭

## ಬುದ್ಧದೇವನ ಕೃಪಾಮಹಿಮೆ

ಕಾನುಬೈಲಿನ ಎತ್ತರದಮೇಲೆ ಪಡುವಣ ಮಲೆಗಳ ನೆತ್ತಿಯಲ್ಲಿ ಕೆಂಪಗೆ ಮುಳುಗುತ್ತಿದ್ದ ಸಂಧ್ಯಾಸೂರ್ಯನ ಕುಂಕುಮಕಾಂತಿ ಮನಮೋಹಕವಾಗಿ ಓಕುಳಿ ಯೆರಚುತ್ತಿತ್ತು. ಬೆಟ್ಟಗಳ ನೆರಳು ಕಣಿವೆಗಳನ್ನೆಲ್ಲ ಆವರಿಸಿತ್ತು. ಓಬಯ್ಯ ಹಳೆಪೈಕದ ತಿಮ್ಮನಿತ್ತ ಕಳ್ಳುಕುಡಿದು, ಕಾನೂರು ಮನೆಯ ಕಡೆಗೆ ಇಳಿಯು ವುದರಲ್ಲಿದ್ದನು. ತಿಮ್ಮ ಉಳಿದಿದ್ದ ಕಳ್ಳನ್ನು ಸೇರೆಗಾರರಿಗೆಂದು ಹೊತ್ತುಕೊಂಡು ಬೇಗ ಬೇಗನೆ ಹೋಗಿದ್ದನು. 'ಈಗೀಗ ಸೇರೆಗಾರರು ಮೊದಲಿಗಿಂತ ಎರಡರಷ್ಟು ಕುಡೀತಾರೆ ಕಣ್ರೋ?' ಎಂದು ಅವನು ಮುಗುಳುನಗೆ ನಗುತ್ತಾ ತನ್ನ ಕಡೆ ನೋಡಿದ್ದನ್ನೇ ಕುರಿತು ಆಲೋಚಿಸುತ್ತಾ ಮೆಲ್ಲನೆ ನಡೆಯುತ್ತಿರಲು, ಯಾರೋ ಮಾತಾಡುತ್ತಾ ಕಾಡಿನ ಕಡೆಯಿಂದ ಬರುತ್ತಿರುವುದು ಗೊತ್ತಾಗಿ, ಓಬಯ್ಯ ನಿಂತು ಅತ್ತ ಕಡೆ ನೋಡಲಾರಂಭಿಸಿದನು.

ನೋಡುತ್ತಿದ್ದಂತೆ ಇಬ್ಬರು ವ್ಯಕ್ತಿಗಳೂ ಅವರ ಸುತ್ತಮುತ್ತ ನಾಯಿಗಳೂ ಹೊದೆಗಳ ನಡುವೆ ಕಾಣಿಸಿಕೊಂಡರು. ಅವರು ಬೇಟೆಯ ವಿಚಾರವಾಗಿ ಮಾತಾಡುತ್ತಾ ಬರುತ್ತಿದ್ದುದನ್ನು ಆಲಿಸಿದ ಓಬಯ್ಯನಿಗೆ ಪುಟ್ಟಣ್ಣನ ಧ್ವನಿಯ ಪರಿಚಯವಾಗಿ "ಏನು ಪುಟ್ಟಣ್ಣಾ, ಷಿಕಾರಿ ಆಯ್ತೇನು?" ಎಂದು ಗಮನ ಸೆಳೆಯುವಂತೆ ಕೂಗಿದನು.

ಹೆಗಲಮೇಲೆ ಕೋವಿ ಹೊತ್ತಿದ್ದ ಪುಟ್ಟಣ್ಣನೂ, ಬೆನ್ನಿನಮೇಲೆ ಕಂಬಳಿಯಲ್ಲಿ ಯಾವುದೋ ಭಾರವಾದ ವಸ್ತುವನ್ನು ಹೊತ್ತಿದ್ದರಿಂದ ಸ್ವಲ್ಪ ಬಾಗಿ ನಡೆಯುತ್ತಿದ್ದ ಸೋಮನೂ ಬಳಿ ಸಾರಿದರು. ಬೊಗಳುತ್ತಾ ಹತ್ತಿರ ಬಂದ ನಾಯಿಗಳು ಓಬಯ್ಯನನ್ನು ಗುರುತಿಸಿ, ಮೂಸಿ, ಬಾಲವಲ್ಲಾಡಿಸಿದುವು.

ಏನು? ಶಿಕಾರಿ ಆಯ್ತೇನು?" ಎಂದು ಓಬಯ್ಯ ಮತ್ತೆ ಕೇಳಿದನು.

ಹಿಂದುಗಡೆಯಿಂದ ಸೋಮ "ಆಯಿತು ಎಂದರೆ ಆಯಿತು. ಇಲ್ಲ ಎಂದರೆ ಇಲ್ಲ" ಎಂದು, ಕಷ್ಟಪಟ್ಟು, ಪುಟ್ಟಣ್ಣನಿಗಿಂತಲೂ ಮೊದಲೇ ಮಾತಾಡಿದನು. ಅವನ ಮಾತಿನಲ್ಲಿ ಅವನು ಹೊತ್ತಿದ್ದ ಭಾರದ ಮಹಿಮೆ ಗೊತ್ತಾಗುತ್ತಿತ್ತು.

"ಅದು ಎಂಥದು, ಮಾರಾಯ, ನೀನು ಹೊತ್ತಿದ್ದು? ಅಷ್ಟೊಂದು ಉಸಿರು ಕಟ್ಟಿ ಮಾತಾಡುತ್ತಿದ್ದೀಯಲ್ಲಾ?" ಎಂದನು ಓಬಯ್ಯ.

"ಎಂಥದು ಇಲ್ಲೋ. ನಾಯಿ ಹಿಡಿದಿದ್ದು ಒಂದು ಬರ್ಕನ ಮರಿ" ಎಂದನು ಪುಟ್ಟಣ್ಣ.

"ಮರಿಯೇ ಸೈ! ಹೊರಲಾರದೆ ಹೊತ್ತುಕೊಂಡು ಬರ್‍ತಾನೆ ಸೋಮ!" ಎಂದನು ಓಬಯ್ಯ.

ಸೋಮ "ಹೌದು ಕಾಣಿ, ಸಿಕ್ಕಿದಾಗ ಮರಿಯಾಗಿತ್ತು; ಈಗ ಕರಿಯಾಗಿತ್ತಲ್ದಾ!" ಎಂದು ತನ್ನ ಹಾಸ್ಯಕ್ಕೆ ತಾನೆ ನಗುತ್ತಾ, ಹೊತ್ತಹೊರೆಯನ್ನು ದೊಪ್ಪನೆ ಕೆಳಗೆ ಹಾಕಿದನು. ಭಾಗವತರಾಟದಲ್ಲಿ ಕೇಳಿ ತಾನು ಕಲಿತಿದ್ದ ಕರಿ ಎಂಬ ಪದವನ್ನು ಮರಿಗೆ ಪ್ರಾಸವಾಗಿ ಉಪಯೋಗಿಸಿದ್ದರಿಂದ ಹಾಸ್ಯದ ಜೊತೆಗೆ ವಿದ್ವತ್ತಿನ ಹೆಮ್ಮೆಯೂ ಅದರಲ್ಲಿತ್ತು. ಪುಟ್ಟಣ್ಣನಾಗಲಿ ಓಬಯ್ಯನಾಗಲಿ ತನ್ನ ಮಾತಿನ ಹಾಸ್ಯವಾಗಲಿ ವಿದ್ವತ್ತಾಗಲಿ ವೇದ್ಯವಾಗಲಿಲ್ಲ ಎಂಬುದನ್ನು ಅವರು ನಗದಿದ್ದುದರಿಂದ ಅರಿತು ಸೋಮ "ಕರಿ ಅಂದರೆ ಏನು ಗೊತ್ತೇನು, ಓಬೇಗೌಡ್ರೇ?" ಎಂದು ಕೇಳಿದನು.

"ಕರಿ ಅಂದರೆ ಮಸೀ ಕರಿ; ಸುಟ್ಟ ಕರಿ."

"ಆ ಅರ್ಥದಲ್ಲಿ ನಾ......"

ಸೋಮ ಓಬಯ್ಯನನ್ನು ತಿದ್ದಿ ವ್ಯಾಖ್ಯಾನ ಮಾಡುವುದಕ್ಕೆ ಅವಕಾಶ ಸಿಕ್ಕಲಿಲ್ಲ. ಬರ್ಕ ನೆಲದಮೇಲೆ ಕಂಬಳಿಯ ಸಹಿತವಾಗಿ ಬಿದ್ದುದನ್ನು ಕಂಡು ನಾಯಿಗಳು ಮುತ್ತಿದುವು. ಪುಟ್ಟಣ್ಣ ಅವುಗಳನ್ನು ಓಡಿಸಲು ಪ್ರಯತ್ನಿಸುತ್ತಿದ್ದನು. ಆದರ ನಾಯಿಗಳಲ್ಲಿ ಒಂದು ಕಂಬಳಿಯನ್ನೇ ಕಚ್ಚಿ ಎಳೆಯುತ್ತಿದ್ದುದನ್ನು ನೋಡಿ, ಸೋಮ ವ್ಯಾಖ್ಯಾನವನ್ನು ಅರ್ಧಕ್ಕೇ ಮುಕ್ತಾಯಮಾಡಿ "ಅಯ್ಯೊ ಅಯ್ಯೊ ಅಯ್ಯೊ ಅಯ್ಯೊ, ಹೋಯ್ತಲ್ದಾ ನನ್ನ ಕಂಬಳಿ! ಈ ಹಾಳು ಕುನ್ನಿಗಳಿಗೆ! ಬಾಡು ಅಂದರೆ ಬೇಗುತ್ತವೆ! ಹಥಾ! ಹಥಾ! ಹಥಾ!" ಎಂದು ಕೂಗುತ್ತಾ ಕಂಬಳಿಯನ್ನೂ ಬರ್ಕವನ್ನೂ ಬೇಗ ಬೇಗನೆ ಎತ್ತಿಕೊಂಡನು. ಎತ್ತಿಕೊಂಡವನು ಅಲ್ಲಿ ನಿಲ್ಲದೆ, ಕೆಳಕಾನೂರಿನ ಕಡೆಗೆ ನೆಟ್ಟಗೆ ನಡೆದನು. ನಾಯಿಗಳೂ ಅವನನ್ನೆ ಹಿಂಬಾಲಿಸಿದುವು.

ಓಬಯ್ಯ "ಏನು ಮಾರಾಯ, ನಾನು ಪಾಲು ಕೇಳ್ತೀನಿ ಅಂತಾ ತಗೊಂಡು ಓಡ್ತಿದ್ದೀಯೇನು?" ಎಂದು ಹಿಂದಿನಿಂದ ಕೂಗಿದನು.

ಸೋಮ ಹಿಂತಿರುಗದೆ ಯಕ್ಷಗಾನದ ಹಾಡುಗಳನ್ನು ಗಟ್ಟಿಯಾಗಿ ಹಾಡುತ್ತಾ ನಡೆದನು.

"ಸೋಮ ಏನು ಬದಲಾಯಿಸಿಬಿಟ್ಟಿದ್ದಾನೆ!" ಎಂದನು ಓಬಯ್ಯ.

ಪುಟ್ಟಣ್ಣ ಉಸ್ಸೆಂದು ಕೋವಿಯನ್ನು ಕೆಳಗಿಟ್ಟು, ನಿಂತಿದ್ದ ಬಂಡೆಗಲ್ಲಿನ ಮೇಲೆ ಕಂಬಳಿ ಹಾಕಿಕೊಂಡು ಅದರಮೇಲೆ ಕುಳಿತುಕೊಳ್ಳುತ್ತಾ "ಮುಂದಿನ ವರ್ಷ ಆಳು ಕರಕೊಂಡು ಬರ್‍ತಾನಂತೆ. ಸೇರೆಗಾರಿಕೆ ಮಾಡ್ತಾನಂತೆ, ಈ ಆಜುಬಾಜಿನ ಕೆಲಸಾನೆಲ್ಲ ತಾನೆ ಹಿಡಿದು, ಕಾನೂರು ಸೇರೆಗಾರರಿಗೆ ಮಣ್ಣು ಮುಕ್ಕಿಸಬೇಕು ಅಂತಾ ಅವನ ಮನಸ್ಸು ... ಹೂವಯ್ಯಗೌಡರ ಹತ್ತಿರ ಮುಂಗಡ ಕೇಳ್ತಿದ್ದಾನೆ. ಅವರೂ ನೋಡಾನ ನೋಡಾನ ಅಂತಿದ್ದಾರೆ" ಎಂದು ಕೆಮ್ಮಿ, ಕ್ಯಾಕರಿಸಿ, ದೂರಕ್ಕೆ ಉಗುಳಿದನು. ಕುರುಡುಗಪ್ಪಟೆ ಹಕ್ಕಿಯೊಂದು ಕೂಗುತ್ತಾ ಹಾರಿಹೋಯಿತು. ನೇಸರು ಮುಳುಗಿದಮೇಲೆ ಬೈಗುಗಪ್ಪಿನ ಪ್ರಥಮಛಾಯೆ ಕವಿಯುತ್ತಿತ್ತು. ಸಂಜೆಯ ಬಾನಿನಲ್ಲಿ ಬಣ್ಣದ ಮೆರವಣಿಗೆ ಹೊರಟಿತ್ತು. ಒಂದೆರಡು ಉಜ್ವಲ ನಕ್ಷತ್ರಗಳೂ ಹೊಳೆಯತೊಡಗಿದ್ದುವು.

"ಕಾನೂರು ಸೇರೆಗಾರ್‍ರನ್ನ ಊರು ಬಿಟ್ಟು ಓಡಿಸೋದೆ ಒಳ್ಳೇದೆಂದು ಕಾಣ್ತದೆ" ಎಂದು ಓಬಯ್ಯ ತಾನು ಕೈಯಲ್ಲಿ ಉರುಳಿಸಿ ಆಟವಾಡುತ್ತಿದ್ದ ಸಣ್ಣ ಕಲ್ಲೊಂದನ್ನು ಎತ್ತಿ ಒಂದೆರಡು ಮಾರು ದೂರದಲ್ಲಿದ್ದ ಬಂಡೆಗೆ ಹೊಡೆದನು.

"ಯಾಕೋ? ನಿಮ್ಮ ಹೆಗ್ಗಡಿತಮ್ಮನ ಕಾರುಬಾರಿಗೆ ಅವರು ಮಂತ್ರಿ ಆಗಿದ್ದಾರಂತೆ!"

ಓಬಯ್ಯ ನಿಟ್ಟುಸಿರುಬಿಟ್ಟು ಸುಮ್ಮನಿದ್ದನು.

ಪುಟ್ಟಣ್ಣ ಓಬಯ್ಯನ ಮೌನದ ಅರ್ಥವನ್ನು ಅರಿತವನಂತೆ ಆ ವಿಚಾರವನ್ನು ಮುಂಬರಿಸದೆ "ನಿಮ್ಮ ಗೌಡ್ರು ಹ್ಯಾಂಗಿದ್ದಾರೆ ಈಗ?" ಎಂದು ಕೇಳಿದನು.

ಓಬಯ್ಯನ ಬಾಯಿಂದ ಕಳ್ಳಿನ ಕಂಪು ಹರಡುತ್ತಿತ್ತು.

"ಹ್ಯಾಂಗಿದ್ದಾರೆ? ಇದ್ದಾರೆ! ಊಟ ಮಾಡ್ತಾರೆ. ತಿಂಡಿ ತಿನ್ತಾರೆ. ಈಚೀಚೆಗೆ ಸರಿಯಾಗಿ ನಿದ್ದೆ ಬರೋದಿಲ್ಲ ಅಂತಾ, ಅದೆಂತದೋ ಅಫೀಮು ಹಾಕಿದ್ದಂತಪ್ಪಾ, ಅದನ್ನೂ ತಿನ್ನೋಕೆ ಸುರುಮಾಡಿದ್ದಾರೆ. ನಾನೂ ಉಪ್ಪರಿಗೆಯಲ್ಲಿ ಅವರ ಹತ್ರಾನೇ ಮಲಗ್ತೀನಿ. ಅವರಿಗೆ ಒಬ್ಬರೀಗೆ ಮಲಗಾಕೆ ಹೆದರಿಕೆ ಆಗ್ತದಂತೆ ... ಒಂದೊಂದು ಸಾರಿ ಅಫೀಮಿನ ಚಟಾ ಅಂತಾ ... ಕಾಣ್ತದೆ ... ರಾತ್ರಿ ಏನೇನೋ ಬಾಯಿಗೆ ಬಂದಹಾಗೆ ಮಾತಾಡ್ತಾರೆ. ಮೊನ್ನೆ ರಾತ್ರಿ ಅಮಲಿನಲ್ಲಿ

ಇದ್ದಾಗಲೇ ಗೋಳೋ ಅಂತಾ ಅಳುತ್ತಾ 'ಅಯ್ಯೋ ಓಬಯ್ಯ, ನನ್ನನ್ನು ಎಲ್ಲರೂ ಕೈಬಿಟ್ಟರಲ್ಲೋ! ನಾನು ಯಾತಕ್ಕೆ ಬದುಕಬೇಕೋ? ಹೊಳೆ ಹಾರಿ ಪ್ರಾಣ ಬಿಡ್ತೀನೋ!' ಅಂತಾ ಏನೇನೋ ಹೇಳಿಬಿಟ್ಟರು! ಆವತ್ತೊಂದು ದಿವಸ ನಡೂರಾತ್ರೀಲಿ 'ಓಬಯ್ಯ, ಕೋವಿ ತಗೊಂಡು ಬಾ' ಅಂದರು. 'ಯಾಕೆ?' ಅಂದೆ. 'ಅವನ್ನ ಗುಂಡಿನಲ್ಲಿ ಹೊಡೆದು, ನಾನೂ ಹೊಡಕೊಂಡು ಸಾಯ್ತೀನೆ' ಅಂದರು. ಯಾರನ್ನ ಅಂತಾ ಕೇಳಿದ್ರೆ ಹೇಳಲಿಲ್ಲ. ಏನೇನೋ ಸಮಾಧಾನ ಹೇಳಿ ಮಲಗಿಸಿದೆ. ನನಗಂತೂ ಸರಿಯಾಗಿ ನಿದ್ರೆಯಿಲ್ಲ... ಎಂಟು ದಿನದ ಹಿಂದೆ ವಾಸು ನೋಡಿಕೊಂಡು ಬರ್ತೀನಿ ಅಂತಾ ತೀರ್ಥಹಳ್ಳಿಗೆ ಗಾಡಿ ಕಟ್ಟಿಸಿ ಕೊಂಡು ಹೋದೋರು ಏನೇನೋ ಬಾಟ್ಲಿ, ಸುಮಾರು ಇಪ್ಪತ್ತು ಮೂವತ್ತು ತಂದಿಟ್ಟುಕೊಂಡಿದ್ದಾರೆ... ಎಂಥದದು? ಹಾಂಗೆ ನೋಡ್ತೀಯಲ್ಲಾ!" ಎಂದು ತನ್ನ ಕಥೆಯನ್ನು ನಿಲ್ಲಿಸಿ, ಓಬಯ್ಯನೂ ಪುಟ್ಟಣ್ಣ ನೋಡುತ್ತಿದ್ದ ಪಶ್ಚಿಮ ದಿಕ್ಕಿನ ಕಡೆಗೆ ನೋಡಿದನು.

ಅವರು ಕೂತಿದ್ದ ಸ್ಥಳಕ್ಕೆ ಸುಮಾರು ಅರ್ಧ ಫರ್ಲಾಂಗು ದೂರದಲ್ಲಿ ದೊಡ್ಡ ಬಂಡೆಯೊಂದು ಕಪ್ಪಗೆ, ಎತ್ತರವಾಗಿ, ಕೆಂಬಣ್ಣದ ಬೈಗಿನ ಬಾನಿನ ಪಟಕ್ಕೆ ಎದುರಾಗಿ, ದುಂಡಾದ ಗೋಪುರದಂತೆ ಮೇಲೆದ್ದಿತ್ತು. ಕವಿಯುತ್ತಿದ್ದ ಮುಂಗತ್ತಲೆ ಯಲ್ಲಿ ಅದರ ಆಕೃತಿ ಏನೋ ಒಂದು ಅರ್ಥದಿಂದ, ಯಾವುದೋ ಒಂದು ರಹಸ್ಯ ದಿಂದ ತುಂಬಿದ್ದಂತೆ ತೋರುತ್ತಿತ್ತು. ಹಗಲು ಬೆಳಕಿನಲ್ಲಿ ಆ ಬಂಡೆ ಅಷ್ಟೇನೂ ಪ್ರಮುಖವಾಗಿ ಕಾಣುವಂತಿರಲಿಲ್ಲ. ಆದರೆ ಅವರು ಕುಳಿತಿದ್ದ ಜಾಗಕ್ಕೆ ಅದು ಮುಚ್ಚಂಜೆಯ ಆಕಾಶಭಿತ್ತಿಗೆ ಕೆತ್ತಿ ಮೆತ್ತಿದ್ದಂತೆ ಎದ್ದು ಕಾಣುತ್ತಿದ್ದುದರಿಂದ, ಕತ್ತಲೆಯ ಮಬ್ಬುಮುಸುಗಿನಲ್ಲಿ ಅಜ್ಞಾತವಾಗಿ ಅಲಕ್ಷಿತವಾಗುತ್ತಿದ್ದ ಇತರ ಎಲ್ಲ ವಸ್ತುಗಳಿಗಿಂತಲೂ ಅದು ಅತ್ಯಂತ ಪ್ರಧಾನವಾಗಿತ್ತು. ಪುಟ್ಟಣ್ಣ ಓಬಯ್ಯನ ಮಾತು ಕೇಳುತ್ತಾ, ಆ ಬಂಡೆಯ ಕಡೆಗೆ ನೋಡುತ್ತಿದ್ದ ಹಾಗೆಯೆ ಮನುಷ್ಯಾಕೃತಿಯೊಂದು ಸಂಧ್ಯಾಕಾಶಕ್ಕೆದುರಾಗಿ, ಆ ಬಂಡೆಯಂತೆಯೆ ಕಪ್ಪಗೆ ಅದರ ಮೇಲೇರಿತು. ಮಷೀಪೂರ್ಣವಾದ ರೇಖಾಚಿತ್ರದಂತೆ ಕಾಣಿಸುತ್ತಿದ್ದ ಆ ನರಾಕೃತಿ, ರೂಪದ ವಿವರಗಳಿಲ್ಲದ ಆಕಾರ ಮಾತ್ರವಾಗಿತ್ತು. ಆ ಮಷೀ ಚಿತ್ರದ ವ್ಯಕ್ತಿ ಬಂಡೆಯ ನೆತ್ತಿಯಲ್ಲಿ ಧೀರವಾಗಿ ನೇರವಾಗಿ ನಿಂತು ಸಂಧ್ಯಾಕಾಶ ವನ್ನು ನೋಡತೊಡಗಿತು. ತಲೆಯುಡೆಯಿಲ್ಲದೆ ಕೂದಲಿಲ್ಲದ ಶಿರಸ್ಸಿನ ಹೊರ ಗೆರೆಯ, ಎರಡು ಕಿವಿಗಳ ರೇಖಾಕೃತಿಯ, ಹಾಕಿಕೊಂಡಿದ್ದ ಷರ್ಟು ಮತ್ತು ಉಟ್ಟುಕೊಂಡಿದ್ದ ಅಡ್ಡಪಂಚೆಯ ಆ ವ್ಯಕ್ತಿ, ಬಂಡೆಯ ಮೇಲೆ ನೆಟ್ಟ ಶಿಲಾಮೂರ್ತಿ ಯಂತೆ ತುಸು ಹೊತ್ತು ನಿಂತಿದ್ದು, ಮತ್ತೆ ಉತ್ತರಕ್ಕೆ ತಿರುಗಿ ನಿಂತಾಗ, ನೀಳವಾದ

ಮೂಗೂ, ತುಟಿ ಬಾಯಿ ಗಲ್ಲಗಳ ಗೆರೆಯೂ ಕಡೆದಿಟ್ಟಂತೆ ಗೋಚರಿಸಿ ಪುಟ್ಟಣ್ಣಗೆ ಪರಿಚಯವಾಯಿತು.

"ಯಾರೋ ಅದು?" ಎಂದು ಕೇಳಿದ ಓಬಯ್ಯನ ಪ್ರಶ್ನೆಗೆ ಪುಟ್ಟಣ್ಣ ಗೌರವಸೂಚಕವಾದ ಪಿಸುದನಿಯಲ್ಲಿ "ಹೂವಯ್ಯಗೌಡರು!" ಎಂದು ದೇವಾಲಯದ ಗರ್ಭಗುಡಿಯಲ್ಲಿ ದೇವರ ವಿಗ್ರಹದ ಮುಂದೆ ಭಯ ಭಕ್ತಿಯಿಂದ ಮಾತಾಡುವಂತೆ ಹೇಳಿದನು.

"ಗಡ್ಡಾ ಕೂದಲೂ ಒಂದೂ ಇಲ್ಲ! ಸನ್ನೇಸಿ ಬೋಳುತಲೆ ಇದ್ದಾಂಗಿದೆ!" ಎಂದು ಓಬಯ್ಯ ಪಿಸುಮಾತಿಗೆ ಪ್ರಾರಂಭಿಸಿದನು.

"ಮೊನ್ನೆ ಮೊನ್ನೆ ಗಡ್ಡ ಕೂದಲು ಮೀಸೆ ಎಲ್ಲಾ ನುಣ್ಣಗೆ ತೆಗೆಸಿಬಿಟ್ಟಿದಾರೆ!"

"ಅದೇನು?"

ಇವರಿಬ್ಬರೂ ಮಾತಾಡುತ್ತಿದ್ದ ಹಾಗೆಯೆ, ಹೂವಯ್ಯನ ಆಕೃತಿ ಬಂಡೆಯ ಮೇಲೆ ಪದ್ಮಾಸನ ಹಾಕಿ ಕೂತುಕೊಂಡಿತು.

"ಅವರು ನಿತ್ಯ ಇಲ್ಲಿಗೆ ಬಂದು ಧ್ಯಾನಮಾಡ್ತಾರೆ... ಈಗೀಗ ನನಗೆ ಅವರ ಹತ್ರ ಹೋಗೋಕೆ ಹೆದರಿಕೆಯಾಗ್ತದೆ. ಹೆದರಿಕೆ ಅಂದರೆ, ಹೆದರಿಕೆ ಅಲ್ಲ... ಅವರ ಹತ್ರ ಹೋದರೆ ಏನೋ ಒಂದು ತರಾ ಆಗ್ತದೆ... ಮೊದಲಿಗೆ ಬೇಟೆ ಅಂದರೆ ಪ್ರಾಣ ಬಿಡ್ತಿದ್ದರಲ್ಲಾ? ಈಗ ಅದರ ತಂಟೆಗೇ ಹೋಗೋದಿಲ್ಲ. ಮಾಂಸ ತಿನ್ನೋದು ಕೂಡ ವಜಾ ಮಾಡಿಬಿಟ್ಟಿದ್ದಾರೆ... ಹಗಲು ಒಂದೇ ಹೊತ್ತು ಊಟ... ಬೆಂಗಳೂರಿನಿಂದ ಅವರ ಸ್ನೇಹಿತರಿಗೆ ಕಾಗದ ಬರೆದು ಒಂದು (ಕೈಯಿಂದ ಎತ್ತರವನ್ನು ತೋರಿಸುತ್ತಾ) ಇಷ್ಟೆತ್ತರ ಬುದ್ಧ ದೇವರ ಮೂರ್ತಿ ತರಿಸಿದ್ದಾರೆ! ಇಂದಿಗೆ ಸುಮಾರು ಹತ್ತು ಹದಿನೈದು ದಿನ ಆಯ್ತು ಅಂತ ಕಾಣ್ತದೆ... ಪುಟ್ಟಮ್ಮ ಹಡೆಯುವುದಕ್ಕೆ ಹಿಂದಿನ ದಿನ ಅಲ್ಲ, ಅದರ ಹಿಂದಿನ ದಿನ ಅಂತ ಕಾಣ್ತದೆ... ಆಮೇಲೆ ಅವರು ತಲೆಕೂದಲು ಗಡ್ಡ ಎಲ್ಲ ಬೋಳಿಸಿಬಿಟ್ಟಿದ್ದು...!"

ಪುಟ್ಟಣ್ಣ ತನ್ನ ಇಷ್ಟವ್ಯಕ್ತಿಯನ್ನು ಕುರಿತು ನಾನಾಪರಿಯಾಗಿ ಪ್ರಶಂಸಿಸಿ ಮಾತಾಡಿದನು. ಸುಮಾರು ಅರ್ಧ ಗಂಟೆಯಾದರೂ, ಕ್ಷಣ ಕ್ಷಣಕ್ಕೂ ಮಸುಳುತ್ತಿದ್ದ ಕಾಂತಿಯ ಬಾನಿಗೆದುರಾಗಿ ಬಂಡೆಯ ಮೇಲೆ ಪದ್ಮಾಸನ ಹಾಕಿ ಕುಳಿತಿದ್ದ ಆ ನಿಶ್ಚಲ ಮಷೀಚಿತ್ರ ಅಲುಗಾಡಲಿಲ್ಲ.

ಓಬಯ್ಯ "ನಾನು ಹೋಗ್ತೀನಪ್ಪಾ. ನಮ್ಮ ಗೌಡ್ರೇನು ಕಪ್ಪಾದ ಕೂಡ್ಲೆ ನನ್ನ ಕೂಗ್ತಾರೆ. ಕತ್ತಲಾದ ಮೇಲಂತೂ ಒಂದುಚಣ ಅವರಿಂದ ಒಬ್ಬರೇ ಇರೋದಕ್ಕೆ ಆಗೋದಿಲ್ಲವಂತೆ! ಏನೇನೋ ಕುಡಿದುಬಿಡ್ತಾರೆ... ಸುಮ್ಮನೆ

ಮಲಗಿಕೊಂಡರೇನೇ, ಸೈ! ಆದರೆ ಒಂದೊಂದು ಸಾರಿ ಬುದ್ಧಿ ಕೆರಳಿಬಿಟ್ಟರೆ ದೇವರೇ ಗತಿ!—'ಅವರು ಬಂದರು! ಇವರು ಬಂದರು! ಹೊಡೀತಾರೆ! ಕೊಲ್ತಾರೆ!'— ಅಂತ ಕೂಗ್ತಾರೆ. ಏನೇನೋ ಗಾಬರಿ ಅವರಿಗೆ!" ಎಂದು ಓಬಯ್ಯ ಎರಡು ಮೂರು ಹೆಜ್ಜೆ ಮುಂದೆ ಹೋದವನು ಹಿಂತಿರುಗಿ ಬಂದು "ನನಗೆ ಒಂದೆರಡು ಈಡಿಗೆ ಮಸಿ ಕೊಡ್ತೀಯೇನೋ? ಕೊಪ್ಪದ ಸಂತೆಗೆ ಹೋದವನು ತಂದು ಕೊಡ್ತೀನಿ" ಎಂದನು.

"ಯಾಕೋ? ನಿಮ್ಮ ಗೌಡರನ್ನು ಕೇಳಿದ್ರೆ ಕೊಡೋದಿಲ್ಲೇನು?"

"ಅಯ್ಯೋ! ನಿನಗೆ ಸರಿಯಾಗಿ ಅರ್ಥವಾಗ್ಲಿಲ್ಲಾ ಅಂತ ಕಾಣ್ತದೆ ನಾ ಹೇಳಿದ್ದು! ಬಂದು ನೋಡು ಒಂದು ದಿವಸ, ಅವರ ಸ್ಥಿತಿ ಗೊತ್ತಾಗ್ತದೆ."

ಮರುದಿನ ಬೈರನ ಕೈಲಿ ಕೋವಿಮಸಿಯನ್ನು ಕೊಟ್ಟು ಕಳುಹಿಸುವುದಾಗಿ ಪುಟ್ಟಣ್ಣ ಹೇಳಿದಮೇಲೆ ಓಬಯ್ಯ ಬೆಟ್ಟವಿಳಿದು ಕಾನೂರಿನ ಕಡೆಗೆ ಹೋದನು.

ಆಕಾಶ ನಕ್ಷತ್ರಗಳಿಂದ ಕಿಕ್ಕಿರಿದಿತ್ತು. ಬೆಟ್ಟಗಾಡುಗಳು ಬರಿಯ ರೂಪು ರೇಖೆಗಳಾಗುವಷ್ಟರಮಟ್ಟಿಗೆ ಕತ್ತಲು ದಟ್ಟಯಿಸಿತ್ತು. ಮನೆಯ ಕಡೆ ಹೊರಟ ಹೂವಯ್ಯನನ್ನು ಪುಟ್ಟಣ್ಣ ಹಿಂಬಾಲಿಸಿ ಸೇರಿದನು.

ಹೂವಯ್ಯ ಬೇಟೆಯ ವಿಚಾರವಾಗಿ ಒಂದೆರಡು ಪ್ರಶ್ನೆಗಳನ್ನು ಹಾಕಿ, ತರುವಾಯ ಅಷ್ಟು ಹೊತ್ತಾದುದೇಕೆಂದು ಕೇಳಿದನು. ಪುಟ್ಟಣ್ಣ, ದಾರಿಯಲ್ಲಿ ಓಬಯ್ಯ ಸಿಕ್ಕಿ ಮಾತಾಡುತ್ತಾ ನಿಲ್ಲಿಸಿಕೊಂಡುಬಿಟ್ಟನೆಂದು ಪ್ರಾರಂಭಮಾಡಿ, ರಾಮಯ್ಯನ ವಿಷಯವಾಗಿ ತಾನು ಕೇಳಿದುದೆಲ್ಲವನ್ನೂ ಹೇಳುತ್ತಾ ನಡೆದನು. ಹೂವಯ್ಯ ಲಘು ಗುರುಗಳಿಂದ ಮಾತ್ರ ಆಗಾಗ ಉತ್ತರವೀಯುತ್ತಾ ಚಿಂತಾ ಮಗ್ನನಾಗಿ ಮನೆ ಸೇರಿದನು.

ರಾಮಯ್ಯನ ಅಧೋಗತಿಯನ್ನೂ ದುಃಸ್ಥಿತಿಯನ್ನೂ ಕೇಳಿದ್ದ ಹೂವಯ್ಯನ ಮನಸ್ಸು ದುಃಖ ಶೋಕ ಕನಿಕರಗಳಿಂದ ಕ್ಷುಬ್ಧವಾಗಿತ್ತು. ಅದಕ್ಕೆಲ್ಲ ತಾನೇ ಕಾರಣನಾಗಿದ್ದೇನೆ ಎಂಬ ಸೂಕ್ಷ್ಮಭಾವವೂ ಎದೆ ಚುಚ್ಚಿತ್ತು. ತನ್ನ ಸ್ವಾರ್ಥತೆ, ಅದೃಢತೆ, ಅನಿಶ್ಚಯಬುದ್ಧಿ, ತೂಗುಯ್ಯಾಲೆಯ ಮನಸ್ಸು — ಇವುಗಳೇ ಕಾರಣ ವಲ್ಲವೇನು — ಎರಡು ಮೂರು ಮನೆತನಗಳಲ್ಲಿ ನಡೆದಿದ್ದ ಮತ್ತು ನಡೆಯು ತ್ತಿರುವ ಅನರ್ಥಗಳಿಗೆ — ಎನ್ನಿಸಿತು. ಹೂವಯ್ಯ ತನ್ನನ್ನು ತಾನೇ ಅನಾವಶ್ಯಕ ವಲ್ಲದಿದ್ದರೂ ಅತಿ ಎಂದು ಹೇಳಬಹುದಾದ ಕಠಿಣತೆಯಿಂದ ಆತ್ಮ ಪರೀಕ್ಷೆ ಮಾಡಿಕೊಳ್ಳುತ್ತಾ, ತನ್ನೆದುರು ಮೇಜಿನಮೇಲಿದ್ದ ಬುದ್ಧದೇವನ ಧ್ಯಾನಸ್ಥಿಮಿತ ಮೂರ್ತಿಯನ್ನು ಎವೆಯಿಕ್ಕದೆ ನೋಡತೊಡಗಿದನು.

ಆ ಮಹಾಪುರುಷನ ಸ್ವಾರ್ಥತ್ಯಾಗ, ವೈರಾಗ್ಯ, ಔದಾರ್ಯ, ಕನಿಕರ, ಅಹಿಂಸೆ,

ತೀಕ್ಷ್ಣಮತಿ, ಪರದುಃಖಕಾತರತೆ — ಇವುಗಳಲ್ಲಿ ಒಂದೊಂದೂ ಅವನ ಜೀವನ ಚರಿತ್ರೆಯ ಘಟನಾಚಿತ್ರಗಳೊಡನೆ ಮೂರ್ತೀಭವಿಸಿ, ಮನೋಭಿತ್ತಿಯಲ್ಲಿ ಚರಿಸಿದುವು. ಆ ಭವ್ಯಭೈರವ ವ್ಯಕ್ತಿತ್ವದ ಮುಂದೆ ತನ್ನ ಅಲ್ಪತೆ ಕನಿಕರಣೀಯ ವಾಗಿ, ನೀಚವಾಗಿ ತೋರಿ, ಹೂವಯ್ಯನ ಕಣ್ಣುಗಳಿಂದ ಹನಿಗಳು ಒಂದಾದ ಮೇಲೊಂದು ಉದುರಿದುವು. ಹೂವಯ್ಯ ಆ ಮೂರ್ತಿಯ ಪಾದಪದ್ಮಗಳ ಮೇಲೆ ತನ್ನ ಹಣೆಯಿಟ್ಟು "ಗುರುದೇವ, ನನ್ನನ್ನು ಕೈ ಹಿಡಿದೆತ್ತಿಕೊ. ಉದ್ಧಾರ ಮಾಡು. ನಿನ್ನ ಮಹಾಗುಣಗಳಲ್ಲಿ ಒಂದಿನಿತನ್ನಾದರೂ ದಯಪಾಲಿಸು. ನನ್ನ ಜೀವನವನ್ನು ಸಾರ್ಥಕಮಾಡು" ಎಂದು ಬೇಡಿದನು.

ಬರಬರುತ್ತ ಹೂವಯ್ಯನ ಮನಸ್ಸು ಬುದ್ಧದೇವನ ಕಡೆಗೆ ಹೆಚ್ಚು ಹೆಚ್ಚಾಗಿ ಒಲಿದಿತ್ತು. ಆತನ ತಪಸ್ಸೂ, ಕಷ್ಟಗಳ ಸಮ್ಮುಖದಲ್ಲಿ ಆತನಿಗಿದ್ದ ವಜ್ರ ಮನಸ್ಸೂ, ಲೋಕಕ್ಕಾಗಿ ತನ್ನನ್ನು ತಾನೇ ಇಲ್ಲಗೈದುಕೊಳ್ಳುವ ಗಗನೋಪಮ ಮಹೌದಾರ್ಯವೂ ಹೂವಯ್ಯನ ಪ್ರಕೃತಸ್ಥಿತಿಗೆ ತಾರಕಮಂತ್ರವಾಗಿದ್ದುವು. ಕೈಲಾದಮಟ್ಟಿಗೆ ಆ ಗುರುವನ್ನು ಆದರ್ಶವಾಗಿಟ್ಟುಕೊಂಡು, ಆತನನ್ನು ಅನು ಸರಿಸಲು ಪ್ರಯತ್ನಿಸುತ್ತಿದ್ದನು. ಆದರೆ ಎಷ್ಟೋಸಾರಿ ಹಳೆಯ ರಾಗದ್ವೇಷ ಗಳಿಂದ ಆ ಪ್ರಯತ್ನ ವಿಫಲವಾಗುತ್ತಿತ್ತು. ಆದರೂ ಹೂವಯ್ಯ ಎದೆಗುಂದದೆ ಸಾಧನೆಯಲ್ಲಿ ತೊಡಗಿದ್ದನು.

ಆ ರಾತ್ರಿ ಬುದ್ಧದೇವನ ಕೃಪಾಬಲವನ್ನು ಬೇಡಿ, ಮನಸ್ಸನ್ನು ಗಟ್ಟಿಮಾಡಿ ಕೊಂಡು, ಮುಂದಿನ ಹಾದಿಯನ್ನು ನಿಶ್ಚಯಿಸಿದನು: ನಾಳೆ ಕಾನೂರಿಗೆ ಹೋಗಿ, ರಾಮಯ್ಯನನ್ನು ಕಂಡು, ತ್ಯಾಗಪೂರ್ಣವಾಗಿ ಅವನ ಉದ್ಧಾರಕ್ಕೂ ಸುಖಕ್ಕೂ ಪ್ರಯತ್ನಿಸುತ್ತೇನೆ; ಮತ್ತು ನಾಡಿದ್ದು ಮುತ್ತಳ್ಳಿಗೆ ಹೋಗುತ್ತೇನಷ್ಟೆ? (ತನ ಗಂಡುಕೂಸನ್ನು ತೊಟ್ಟಿಲಿಗೆ ಹಾಕುವ ಉತ್ಸವದಲ್ಲಿ ಖಂಡಿತ ಬಂದು ಭಾಗಿ ಯಾಗಬೇಕೆಂದು ಚಿನ್ನಯ್ಯ ಕಾಗದ ಬರೆದಿದ್ದನು) ಅಲ್ಲಿ ಸೀತೆಯನ್ನು ಕಂಡು, ಕಾನೂರಿಗೆ ಹೋಗಿ ರಾಮಯ್ಯನ ಹೆಂಡತಿಯಾಗಿರುವಂತೆ ಆಕೆಯನ್ನು ಒಪ್ಪಿಸಲು ಪ್ರಯತ್ನಿಸುತ್ತೇನೆ!

ಎರಡನೆಯ ಸಂಕಲ್ಪವನ್ನು ಮಾಡುತ್ತಿದ್ದಾಗ ಹೂವಯ್ಯನಿಗೆ ತನ್ನ ಪ್ರಾಣವೇ ಶೂನ್ಯವಾಗುತ್ತಿದ್ದಂತೆ ತೋರಿತು. ಎದೆ ಹಿಂಡಿ ಹೀರಿದಂತಾಯಿತು. ಗರಗಸ ದಿಂದ ತನ್ನ ಕರುಳನ್ನು ತಾನೆ ಕೊಯ್ದುಕೊಳ್ಳುವಂತಾಯಿತು. ಮೈ ಬೆವರಿತು. ಕಣ್ಣೀರು ಸುರಿಯಿತು. ಮನಸ್ಸು ಬಿಕ್ಕಿ ಬಿಕ್ಕಿ ಅಳುವಂತಾಯಿತು. ಆದರೂ ತನ್ನ ಪ್ರಯತ್ನಕ್ಕೆ ಬುದ್ಧದೇವನ ಕೃಪಾಹಸ್ತ ನೆರವಾಗಿದೆಯೆಂಬ ಶ್ರದ್ಧೆಯಿಂದ ಆತನು ಉತ್ತೀರ್ಣನಾದನು.

ಉತ್ತೀರ್ಣನಾಗಿ, ಕೊಟಡಿಯಿಂದ ಹೊರಗೆ ಬಂದು, ಗಗನದ ಕಡೆಗೆ ನೋಡಿದಾಗ, ಆತನ ಮನಸ್ಸು ಶಾಂತಿಸಾಗರವಾಗಿತ್ತು. ಅಸಂಖ್ಯ ನಕ್ಷತ್ರಮಯವಾಗಿದ್ದ ಆ ಮಧ್ಯರಾತ್ರಿ ಗುರುವಿನ ಆಶೀರ್ವಾದದಂತೆ ತೋರಿತು. ಆತನಾತ್ಮದಲ್ಲಿ, ಹೊಗೆ ತುಂಬಿದ ಕೊಟಡಿಯಲ್ಲಿ ಉಸಿರುಕಟ್ಟಿ ಕಣ್ಣೀರು ಕಾರಿ ಒದ್ದಾಡುತ್ತಿದ್ದವನು ಹೊರಗೆ ನಿರ್ಮಲವಾದ ಗಾಳಿಗೆ ಬಂದಹಾಗಾಗಿತ್ತು; ನೀರಿನಲ್ಲಿ ಮುಳುಗಿ ಗಾಳಿಗಾಗಿ ಹಾತೊರೆಯುತ್ತಿದ್ದವನನ್ನು ದಡಕ್ಕೆ ಎಳೆದಹಾಗಾಗಿತ್ತು; ವಿಶೃಂಖಲವಾಗಿತ್ತು; ಸ್ವತಂತ್ರವಾಗಿತ್ತು; ಗರಿಯಂತೆ ಹಗುರವಾಗಿತ್ತು: ಶಾಂತವಾಗಿ ಆನಂದಪೂರ್ಣವಾಗಿತ್ತು. ಕಲ್ಲಿನಿಂದ ಹೂವು ಮೂಡುತ್ತದೆಂದು ಅವನು ಭಾವಿಸಿರಲಿಲ್ಲ! ಅಂತಹ ದುಃಖದಿಂದ ಇಂತಹ ಆನಂದ, ಅಂತಹ ಕಠೋರ ತ್ಯಾಗದಿಂದ ಇಂತಹ ಪರಮ ಶಾಂತಿ ದೊರೆಕೊಳ್ಳುವುದೆಂದು, ಅನುಭವಿಸುವ ಮೊದಲು ಯಾರಿಗೆ ತಾನೆ ಹೇಗೆ ಗೊತ್ತಾಗಬೇಕು?

ಮರುದಿನ ಪ್ರಾತಃಕಾಲದಲ್ಲಿ ಹೂವಯ್ಯನಿಗೆ ಪುನರ್ಜನ್ಮ ಬಂದಹಾಗಿತ್ತು. ಎದೆಯಲ್ಲಿ ಉಕ್ಕುತ್ತಿದ್ದ ಶಾಂತಿಯಾನಂದಗಳ ಉತ್ಕರ್ಷದಿಂದ ಕೆಳಕಾನೂರಿನ ಮನೆ ತುಂಬಿ ತುಳುಕಾಡುವಂತೆ ತನ್ನಷ್ಟಕ್ಕೆ ತಾನೆ ಹಾಡತೊಡಗಿದ್ದನು. ಅದನ್ನು ಕೇಳಿದ ಸೋಮನೂ ಪುಟ್ಟಣ್ಣನೂ ಅಡಿಗೆಯವನೂ ಸ್ವಲ್ಪಕಾಲ ತಮ್ಮ ತಮ್ಮ ಕೆಲಸಗಳನ್ನು ನಿಲ್ಲಿಸಿ, ನಿಷ್ಪಂದರಾಗಿ ಆಲಿಸಿ, ಆನಂದಪಟ್ಟು, ಆಶ್ಚರ್ಯ ಪಟ್ಟರು.

ಅನಂತ ಔದಾರ್ಯದಿಂದಲೂ ಅಪಾರ ತ್ಯಾಗದಿಂದಲೂ ಎದೆ ತುಂಬಿ ತುಳುಕುತ್ತಾ ಹೂವಯ್ಯ ತಾನೊಬ್ಬನೆ ಕಾನೂರಿಗೆ ಹೊರಟನು. ಎತ್ತ ನೋಡಿದರತ್ತ ಸೃಷ್ಟಿ ಸ್ವರ್ಗೀಯವಾಗಿತ್ತು. ಹಸುರು ಹುಲ್ಲಿಗೆ ನೋವಾಗಬಾರದೆಂದು ದಾರಿಯಲ್ಲಿ ಹುಲ್ಲು ಹುಟ್ಟದ ಕಡೆಯೇ ಹೆಜ್ಜೆಯಿಡುತ್ತಾ ನಡೆದಿದ್ದನು!

ಆದರೆ ಕಾನೂರು ಮನೆ ಬೇರೆಯ ತೆರನಾಗಿತ್ತು. ಅಲ್ಲಿದ್ದವರ ಹೃದಯಗಳೂ ಹೂವಯ್ಯನ ಪ್ರಕೃತಸ್ಥಿತಿಗೆ ಬಹು ದೂರವಾಗಿದ್ದುವು. ಅಲ್ಲಿದ್ದ ಸೇರೆಗಾರರು, ಓಬಯ್ಯ, ಆಳುಗಳು — ಇವರಿಗೆಲ್ಲ ಹೂವಯ್ಯನನ್ನು ಕಂಡು ವಿಸ್ಮಯವಾಯಿತು. ಉಪ್ಪರಿಗೆಯಮೇಲೆ, ಹೂವಯ್ಯ ಬರುತ್ತಿದ್ದುದನ್ನು ಕಂಡೋ ಏನೋ, ಬಾಗಿಲುಹಾಕಿಕೊಂಡಿದ್ದ ರಾಮಯ್ಯ ಅವನನ್ನು ನೋಡಲೊಪ್ಪಲಿಲ್ಲ. ಕಠಿಣವಾಕ್ಯಗಳನ್ನಾಡಿ ತಿರಸ್ಕರಿಸಿದನು. ಓಬಯ್ಯನನ್ನು ಸಲಸಲವೂ ಕಳುಹಿಸಲು ರೇಗಿ, ಕೆಟ್ಟಮಾತುಗಳಿಂದ ಬಯ್ದುದಲ್ಲದೆ, ಮತ್ತೊಂದುಸಾರಿ ಬಂದು ಕರೆದರೆ 'ಚೂರಿ ಹಾಕಿಕೊಳ್ಳೇನೆ' ಎಂದೂ ಗದರಿಸಿಬಿಟ್ಟನು! ಹತಾಶನಾದ ಹೂವಯ್ಯ ಸುಬ್ಬಮ್ಮನನ್ನು ನೋಡಲಿಷ್ಟಪಟ್ಟನು. ಸೇರೆಗಾರರು 'ಅವರೆಲ್ಲೊ ಕೆಲಸದ ಮೇಲೆ ಹೋಗಿದ್ದಾರೆ' ಎಂದು ಹೇಳಿ ನಿವಾರಿಸಿಬಿಟ್ಟರು.

ಹೂವಯ್ಯ ದೃಷ್ಟಿಪ್ರಸಾರಮಾಡಿ ಮನೆಯನ್ನೆಲ್ಲಾ ಒಂದು ಸಾರಿ ನೋಡಿ ಕೊಂಡು, ನಿಡುಸುಯ್ಯುತ್ತಾ ಹೆಬ್ಬಾಗಿಲನ್ನು ದಾಟಿದನು. ಆತನ ಪರಿಚಯವಿದ್ದ ಕಾನೂರುಮನೆಯ ನಾಯಿಗಳು ಬಾಲವಲ್ಲಾಡಿಸುತ್ತ, ಮೈಮೇಲೆ ನೆಗೆಯುತ್ತ ಮೂಲಗಿಸುತ್ತ, ಬಂದಾಗ ಸ್ವಾಗತಿಸಿದ್ದಂತೆಯೇ ಹೋಗುವಾಗಲೂ ಬೀಳ್ಕೊಳ್ಳಲು ತೊಡಗಿದುವು.

ಓಬಯ್ಯ 'ಹಚೀ ಹಚೀ' ಎಂದು ಅವುಗಳನ್ನು ದೂರ ಹೋಗುವಂತೆ ಗದರಿಸಿದನು.

ಹೂವಯ್ಯನಿಗೆ ಆ ಮನೆಯ ಮರುಭೂಮಿಯಲ್ಲಿ ನಾಯಿಗಳ ಪ್ರೀತಿಯೊಂದೇ ಮರುವನದಂತೆ ತೋರಿದುದರಿಂದ, ಅವುಗಳ ತಲೆಯಮೇಲೆ ಕೈಸವರಿ ಮುದ್ದು ಮಾಡುತ್ತಾ "ಅವನ್ನೇಕೆ ಹೆದರಿಸ್ತೀಯೊ? ಮೂಗು ಪ್ರಾಣಿಗಳಾದರೂ ಮನುಷ್ಯರಿಗಿಂತ ಮೇಲಾಗಿ ನಡೆದುಕೊಳ್ಳುತ್ತಿಲ್ಲವೆ?" ಎಂದು ನಾಯಿಗಳಿಂದ ಓಬಯ್ಯನ ಕಡೆಗೆ ನೋಡಿ ಮುಗುಳುನಕ್ಕನು.

ಓಬಯ್ಯನಿಗೆ ಆ ಮಾತಿನ ಭಾವ ಗೊತ್ತಾಗಲಿಲ್ಲ.

"ಅದಕ್ಕಲ್ಲ. ನೀವು ಉಟ್ಟುಕೊಂಡ ಮಡಿಬಟ್ಟೆ ಹಾಳಾಗ್ತದೆ ಅಂತಾ ಹೆದರಿಸಿದೆ" ಎಂದನು.

"ಪರ್ವ ಇಲ್ಲ!"

ಹೂವಯ್ಯ ಕೆಳಕಾನೂರಿನ ಕಡೆಗೆ ಮುಂದುವರಿಯುತ್ತಾ ಅಡಕೆಯ ತೋಟದ ಕಡೆಗೆ ನೋಡಿ "ಓಹೋ! ಅಲ್ಲಿದ್ದ ಸಂಪಗೆ ಮರ ಏನಾಯ್ತೊ?" ಎಂದು ಕೈನೀಡಿ ನಿರ್ದೇಶಿಸಿದನು.

"ರಾಮಯ್ಯಗೌಡರು ಕಡಿಸಿಹಾಕಿದರು."

"ಯಾಕೆ? ತುಂಬಾ ಹೂ ಬಿಡ್ತಿತ್ತಲ್ಲಾ!"

"ಉಪ್ಪರಿಗೆಯೆಲ್ಲಾ ಅದರ ಹೂವಿನ ವಾಸನೆ ತುಂಬಿಕೊಂಡು ಅವರಿಗೆ ತಡಿಯೋಕೆ ಆಗ್ತಿರಲಿಲ್ಲಂತೆ!"

ಹೂವಯ್ಯ ಮೆಲ್ಲಗೆ ಕಿಲಕ್ಕನೆ ನಕ್ಕು "ಓಹೋ, ಅದಕ್ಕೋ!" ಎಂದನು.

## ೭೮

# ಚಿನ್ನಯ್ಯ, ಪುಟ್ಟಮ್ಮ ಮತ್ತು ಅವರ ರಮೇಶ!

ಔದಾರ್ಯದ ಉದ್ದೇಶ ಸಾರ್ಥಕವಾಗದೆ ನಿರಾಶೆಯಿಂದ ಹಿಂತಿರುಗಿದ್ದರೂ ಹೂವಯ್ಯನ ಹೃದಯಮಾನಸಸರೋವರದಿಂದ ಹೊಸದಾಗಿ ಹೊರಹೊಮ್ಮಿದ್ದ ಆನಂದಗಂಗೆಯ ಅಪ್ರತಿಹತಪ್ರವಾಹ ನಿಲ್ಲಲೂ ಇಲ್ಲ; ಕಡಮೆಯಾಗಲೂ ಇಲ್ಲ. ಹಿಂದೆ ಕ್ಷಣಿಕವಾಗಿ ಬಂದು ಬಂದು ಹೋಗುತ್ತಿದ್ದ ದಿವ್ಯಾನುಭವ ಈಗ ನಿರಂತರ ಶಾಶ್ವತವಾಗಿದ್ದಂತೆ ತೋರಿತು. ಕಾಮಳ್ಳಿಯ ಇಂಪಾದ ಹಾಡು ಎದುರಿಗಿದ್ದ ಮರದ ನೆತ್ತಿಯಿಂದ ಬರುತ್ತಿರಲಿಲ್ಲ; ಅನಂತತೆಯ ಬಸಿರಿನಿಂದ ಅರ್ಥಪೂರ್ಣವಾಗಿ ಬರುತ್ತಿತ್ತು. ಅಲ್ಲಲ್ಲಿ ಶೋಭಿಸುತ್ತಿದ್ದ ಕಾಡುಹೂವುಗಳು ಬರಿಯ ಹೂವುಗಳಾಗಿರಲಿಲ್ಲ; ಆತ್ಮದ ಮನೋಹರ ಭಾವ ಸಂದೇಶವನ್ನು ಹೊತ್ತುತಂದ ದೇವದೂತರುಗಳಾಗಿದ್ದುವು. ಜಗತ್ತಿನ ಜಡತೆಯೂ ಸ್ಥೂಲತೆಯೂ ವಾಸ್ತವತೆಯೂ ಕನಸಿನಂತೆ ಮಿಥ್ಯವಾಗಿ ತೋರಿದುವು; ಇಂದ್ರಿಯಗಳಿಗೆ ಗೋಚರವಾಗುವುದಕ್ಕಾಗಿ ವೇಷಹಾಕಿಕೊಂಡ ರಸಸಮುದ್ರದ ತರಂಗಗಳಾಗಿ ಕಂಡುವು. ಹೂವಯ್ಯನ ದೇಹವೂ ಆ ಆತ್ಮದ ಒಂದು ಭಾವಮಾತ್ರವಾಗಿರುವಂತೆ ಭಾಸವಾಗಿ, ನಡೆಯುತ್ತಿದ್ದರೂ ತೇಲುತ್ತಿದ್ದಂತೆ ಅನುಭವವಾಯಿತು. ಅವನಿಗೆ ತನ್ನ ಅನುಭವ ಮಹಾದ್ಭುತವಾಗಿ ತೋರಿತು.

"ಇಷ್ಟು ಸ್ವಲ್ಪ ತ್ಯಾಗದಿಂದ ಇಂತಹ ಮಹಾಭೋಗ ಲಭಿಸುತ್ತದೆಯೆ? — ಏಕಾಗಬಾರದು? ಐಶ್ವರ್ಯ ತುಂಬಿರುವ ದೊಡ್ಡ ಪೆಟ್ಟಿಗೆಯ ಬೀಗದ ಕೈ ಆ ಪೆಟ್ಟಿಗೆಯಷ್ಟು ದೊಡ್ಡದಾಗಿರಬೇಕೆ?" ಎಂದುಕೊಂಡನು.

ಹೂವಯ್ಯ ಆ ದಿನವೆಲ್ಲ ಆ ಆನಂದದ ಸ್ಥಿತಿಯಲ್ಲಿದ್ದನು. ಅವನನ್ನು ಸಮೀಪಿಸಿದವರ ಮೇಲೆಲ್ಲ ಆ ಅನುಭವದ ಛಾಯೆ ಬೀಳದಿರುತ್ತಿರಲಿಲ್ಲ. ಪುಟ್ಟಣ್ಣ ಬಂದೂಕಿಗೆ ತೋಟಾಗಳನ್ನು ಕೇಳಿದಾಗ ಹಿಂದೆ ಕೊಡುತ್ತಿದ್ದಂತೆ ಮೂರು ನಾಲ್ಕನ್ನು ಮಾತ್ರ ಕೊಡದೆ, ಹದಿನೈದಿಪ್ಪತ್ತನ್ನು ಕೊಟ್ಟನು. ಸೋಮು ಮುಂದಿನ ವರ್ಷ ಕನ್ನಡ ಜಿಲ್ಲೆಯಿಂದ ಆಳುಗಳನ್ನು ತಂದು ಸೇರೆಗಾರಿಕೆ ಮಾಡುವುದಕ್ಕಾಗಿ ಮುಂಗಡ ಕೇಳಿದಾಗ ದಿನವೂ ಹೇಳುತ್ತಿದ್ದಂತೆ 'ನೋಡೋಣ' ಎನ್ನುವುದಕ್ಕೆ ಬದಲಾಗಿ, ಸೋಮು ನಿರೀಕ್ಷಿಸಿದ್ದಕ್ಕಿಂತಲೂ ಹೆಚ್ಚು ಹಣವನ್ನು ಮುಂಗಡವಾಗಿ ಕೊಡಲೊಪ್ಪಿದುದಲ್ಲದೆ, ಆಳುಗಳನ್ನು ಆರಿಸುವಾಗ ಎಂಥವರನ್ನು ಆರಿಸಬೇಕೆಂಬ ವಿಚಾರವಾಗಿ ದೀರ್ಘವಾಗಿ ಮಾತಾಡಿ ಸಲಹೆಕೊಟ್ಟು, ಹುರಿ

ದುಂಬಿಸಿ “ ಆಗಲಿ, ಸೋಮ; ಮುಂದಿನ ವರ್ಷ ನಿನಗೆ ‘ ಸೇರೆಗಾರ ಸೋಮಯ್ಯ ಸೆಟ್ಟರು ’ ಎಂದು ಪಟ್ಟಕಟ್ಟುತ್ತೇವೆ ” ಎಂದು ವಿನೋದವಾಡಿದನು.

ಸಂಜೆಯ ಹೊತ್ತಿಗೆ ನಂಜ ಚಿನ್ನಯ್ಯನಿಂದ ಕಾಗದ ತಂದುಕೊಟ್ಟು “ ಖಂಡಿತ ಈಗ್ಲೆ ಬರಬೇಕಂತೆ ” ಎಂದನು.

“ ನಾಳೆ ಅಲ್ಲವೇನೋ ಬಾಲೆ ತೊಟ್ಟಲಿಗೆ ಹಾಕುವ ಮನೆ? ” ಎಂದು ಹೇಳುತ್ತಾ ಹೂವಯ್ಯ ಕಾಗದವನ್ನು ಬಿಚ್ಚಿ ಓದತೊಡಗಿದನು.

“ ಬಾಲೆ ತೊಟ್ಟಲಿಗೆ ಹಾಕುವ ಮನೆ ನಾಳೆ ಆದ್ರೆ, ನೀವು ಇವತ್ತು ಬರ ಬಾರದೇನು? ” ಎಂದು ನಂಜ ತನ್ನ ಒಡೆಯರ ಪರವಾಗಿ ತಾನೆ ವಾದಿಸ ತೊಡಗಿದನು.

ಚಿನ್ನಯ್ಯ ಆಗ್ರಹಪೂರ್ವಕವಾಗಿ ಆಹ್ವಾನಿಸಿ ಬರೆದಿದ್ದುದರಿಂದ ಹೂವಯ್ಯ ಉತ್ತರೀಯವೊಂದನ್ನು ಹೆಗಲಮೇಲೆ ಹಾಕಿಕೊಂಡು ಉಟ್ಟಬಟ್ಟೆಯಲ್ಲಿಯೆ ಮುತ್ತಳ್ಳಿಗೆ ಹೊರಟನು.

ದಾರಿಯಲ್ಲಿ ನಂಜ ಕಳ್ಳಂಗಡಿ ಹತ್ತಿರವಾಗಲು “ ಅಯ್ಯಾ, ಬಹಳ ಆಕರ ಆಗ್ತದೆ. ಒಂದೀಟು ನೀರು ಕುಡಕೊಂಡು ಬತ್ತೀನಿ ” ಎಂದನು.

ಹೂವಯ್ಯನಿಗೆ ಬಾಯಾರಿಕೆಯ ಒಳಗುಟ್ಟು ಗೊತ್ತಾಗಿ, ಸಮ್ಮತಿಸಿ, ‘ ಹೊತ್ತು ಮಾಡಬೇಡ, ಬೇಗ ಬಾ ’ ಎಂದು ಮೆಲ್ಲಗೆ ಹೆಜ್ಜೆ ಹಾಕಿದನು. ಸ್ವಲ್ಪ ಹೊತ್ತಿ ನಲ್ಲಿಯೆ ನಂಜನೂ ನೀರಡಿಕೆಗೆ ಮದ್ದು ಹೊಯ್ದುಕೊಂಡು ತೃಪ್ತನಾಗಿ ಹಿಂದು ಗಡೆಯಿಂದ ಬಂದು ಸೇರಿದನು.

ಹೂವಯ್ಯ ಹೆಂಡದ ವಾಸನೆಯ ದೆಸೆಯಿಂದ ಆದಷ್ಟು ಮಟ್ಟಿಗೆ ನಂಜನಿಂದ ದೂರವಾಗಿಯೆ ಅವನನ್ನು ಮಾತಾಡಿಸದೆ ನಡೆಯತೊಡಗಿದನು. ನಸುಗತ್ತಲೆ ಕವಿಯತೊಡಗಿತ್ತು. ಆದರೆ ಹಾದಿ ಚೆನ್ನಾಗಿಯೆ ಕಾಣಿಸುತ್ತಿತ್ತು.

ಸ್ವಲ್ಪದೂರ ಹೋಗುವುದರಲ್ಲಿಯೆ ಹಿಂದುಗಡೆ ದೊಪ್ಪನೆ ಸದ್ದಾಗಿ ಹೂವಯ್ಯ ತಿರುಗಿ ನೋಡಿದಾಗ, ನಂಜ ನೆಲದಿಂದ ಮೇಲೇಳುತ್ತಾ ಬೀದಿಯ ದೂಳನ್ನು ಕೊಡವಿಕೊಳ್ಳುತ್ತಿದ್ದನು. ಅವನ ನಿಲುವೂ ಅಸ್ಥಿರವಾಗಿತ್ತು.

ಹೂವಯ್ಯ ಸ್ವಲ್ಪ ಹಾಸ್ಯವಾಗಿ “ ಏನೋ? ” ಎಂದನು.

“ ಥೂಯ್ ಇದರ ಹೊಟ್ಟೆ ಹಾಳಾಗಿಹೋಯಿತಲ್ರೋ! ಅಲ್ಲಾ...... ದಾರಿ ಸುಮ್ಮ ಸುಮ್ಮನೆ ನನ್ನ ಕಾಲು ಹಿಡಿದು ಎತ್ತಿಬಿಡೋದೆ! ” ಎನ್ನುತ್ತಾ ತೂರಾಡುತ್ತಾ ನಂಜ ಮುಂದುವರಿದನು.

ಕುಡಿದಿದ್ದ ಕಳ್ಳು ನಂಜನ ತಲೆಗೇರುತ್ತಿರುವುದನ್ನು ಅರಿತು, ಹೂವಯ್ಯ ತನ್ನಷ್ಟಕ್ಕೆ ತಾನೆ ನಗುತ್ತಾ ಹಿಂತಿರುಗಿ ನೋಡದೆ ನಡೆಯತೊಡಗಿದನು. ಆದರೆ

ಸ್ವಲ್ಪ ದೂರ ಹೋಗುವುದರಲ್ಲಿ ನಂಜ ಮತ್ತೆ ಬಿದ್ದನು. ಬಿದ್ದವನು ಎದ್ದು ನಿಲ್ಲುವುದಕ್ಕೆ ಬದಲಾಗಿ ಹಾಗೆಯೆ ಬಿದ್ದುಕೊಂಡು "ಥೂಯ್! ಇದರ ಹೊಟ್ಟೆ ಹಾಳಾಗಿ ಹೋಯಿತಲ್ರೋ! ಅದು ಯಾಕ್ರೋ ಹಿಂಗೆ ಮಾಡ್ತದೆ ಈ ರಸ್ತೆ? ಹೆಜ್ಜೆ ಹಾಕೋಕೇ ಬಿಡೋದಿಲ್ಲ! ಥೂಯ್" ಎಂದು ಉಗುಳಿದನು.

"ಇದೇ ಏನೋ, ನೀನು ಆಕರ ಆಗ್ತದೆ, ನೀರು ಕುಡುಕೊಂಡು ಬರ್ತೀನಿ ಅಂತಾ ಹೇಳಿದ್ದು? ಏಳು ಏಳು!" ಎಂದನು ಹೂವಯ್ಯ.

"ಎಂಥಾ ಏಳೋದ್ರಪ್ಪಾ! ಥೂಯ್! ಇದರ ಮನೆ ಹಾಳಾಯ್ತಲ್ರೋ! ಮೇಲೆ ಏಳೋಕೆ ಬಿಡೋದಿಲ್ಲ... ಹಾಕಿ ಅಮುಕ್ತದೆ!" ಎಂದು ಎದ್ದು ನಡೆಯುವುದಕ್ಕೆ ಬದಲಾಗಿ ಮಕ್ಕಳಂತೆ ಕೈಯೂರಿಕೊಂಡು ಅಂಬೆಗಾಲಿಡುತ್ತಾ ಮುಂದುವರಿಯತೊಡಗಿದನು. ಹೂವಯ್ಯನಿಗೆ ನಗು ತಡೆಯಲಾಗಲಿಲ್ಲ.

ನಂಜನೂ ಯದ್ವಾತದ್ವಾ ನಗುತ್ತಾ ಅಂಬೆಗಾಲಿಟ್ಟು ಮುಂದೆ ಮುಂದೆ ಸಾಗುತ್ತಾ ತೊದಲು ತೊದಲಾಗಿ "ಅಯ್ಯಾ, ಸ್ವಲ್ಪ ಹಿಡಕೊಳ್ತೀರಾ ನನ್ನ ಕೈನಾ? ಈ ರಸ್ತೆ ದೆಸೆಯಿಂದ ಆಗೋದಿಲ್ಲ! ಬಹಳ ತಂಟೆ ಮಾಡ್ತದೆ!" ಎಂದನು.

ಅಂತೂ ಹೂವಯ್ಯ ಹಿಡಿದುಕೊಂಡಲ್ಲದೆ ನಂಜನಿಂದ ನಡೆಯಲಾಗಲಿಲ್ಲ. ಅವನನ್ನು ಕಷ್ಟದಿಂದ ನಡೆಯಿಸಿಕೊಂಡು ಹೋಗಿ, ಅವನ ಬಿಡಾರದ ಬಾಗಿಲಲ್ಲಿ ಬಿಟ್ಟು, ಮುತ್ತಳ್ಳಿಯ ಮನೆಗೆ ಚೆನ್ನಾಗಿ ಕತ್ತಲಾದಮೇಲೆಯೆ ಹೋದನು. ಹೂವಯ್ಯನಿಗಾಗಿ ಎದುರುನೋಡುತ್ತಿದ್ದ ಚಿನ್ನಯ್ಯ ಅಷ್ಟು ಹೊತ್ತಾದುದೇಕೆಂದು ಪ್ರಶ್ನಿಸಲು, ಹೂವಯ್ಯ ಸೀತೆ ತಂದುಕೊಟ್ಟ ಬಿಸಿನೀರಿನಿಂದ ಕಾಲು ತೊಳೆದುಕೊಳ್ಳುತ್ತಾ ನಡೆದ ಕಥೆಯನ್ನೆಲ್ಲಾ ಹೇಳಿದನು. ಅದನ್ನು ಕೇಳಿ ಎಲ್ಲರೂ ನಕ್ಕು ನಕ್ಕು ಸಾಕಾದರು.

ಶಾಮಯ್ಯಗೌಡರು ನಿಧಾನವಾಗಿ ಗಂಭೀರವಾಗಿ "ಆ ಮುಂಡೇಗಂಡನಿಂದ ಸುಖಾ ಇಲ್ಲ. ಹೋದಲ್ಲಿ ತನಕ ಕೊಂಬು ಹುಯ್ಲೋ? ಅವನಿಗೆ ಏನುಮಾಡಿದ ರಾಯ್ತೋ ನನಗೆ ಬೇರೆ ಗೊತ್ತಾಗಾದಿಲ್ಲ!" ಎಂದರು.

ಹೂವಯ್ಯನಿಗೆ ಮುತ್ತಳ್ಳಿಯ ಸಂತೋಷದ ವಾತಾವರಣವನ್ನು ನೋಡಿ ಆಶ್ಚರ್ಯವಾಯಿತು, ಅವನ ಗಡ್ಡ ಮೀಸೆಗಳೆಲ್ಲ ಕಟಾವಾದ ಬೋಳುಮುಂಡೆಯನ್ನು ನೋಡಿ ಉಳಿದವರಿಗೆ ಆಶ್ಚರ್ಯವಾದುದಕ್ಕಿಂತಲೂ ಹೆಚ್ಚಾಗಿ! ಕಾನೂರಿನ ವಿಷಣ್ಣ ಪರಿಸ್ಥಿತಿಗೆ ಸಂಪೂರ್ಣ ವ್ಯತ್ಯಾಸವಾಗಿತ್ತು ಮುತ್ತಳ್ಳಿಯ ಪ್ರಸನ್ನಪರಿಸ್ಥಿತಿ!

ಮನೆಯಲ್ಲಿ ಎಲ್ಲರೂ ಹರ್ಷಚಿತ್ತರಾಗಿದ್ದರು. ಶ್ಯಾಮಯ್ಯಗೌಡರಿಗೂ ಗೌರಮ್ಮನವರಿಗೂ ತಮ್ಮ ಮಗಳು ಸೀತೆಯ ವಿಚಾರವಾಗಿ ನೆನಪು ಬಂದಾಗ ಒಂದಿನಿತು ನೋವಿನ ಮೋಡ ಮುಖದಮೇಲೆ ಕವಿಯುತ್ತಿದ್ದಿರಬಹುದು.

ಆದರೆ ಆ ಮೋಡದ ಛಾಯೆಯನ್ನು ಸಂಪೂರ್ಣವಾಗಿ ಇಲ್ಲಗೈಯುವ ಸೂರ್ಯನ ತೇಜಸ್ಸೂ ಇರುತ್ತಿತ್ತು. ಹೆಚ್ಚಾಗಿಯೇ ಇರುತ್ತಿತ್ತು. ಇತರ ಯಾವ ವಿಷಯಗಳಲ್ಲಿಯೂ ಅವರಿಗೆ ಕೊರತೆಯಿರಲಿಲ್ಲ. ಮಗನ ಮತ್ತು ಸೊಸೆಯ ವಿಷಯದಲ್ಲಂತೂ ಅವರಿಗೆ ಸಂಪೂರ್ಣ ತೃಪ್ತಿಯಿತ್ತು. ಈಗ ಮೊಮ್ಮಗನೂ ಬಂದುದರಿಂದ ಆ ತೃಪ್ತಿಗೆ ಸಂಭ್ರಮವೂ ಸೇರಿತ್ತು.

ಸೀತೆ ಎಂದಿಗಿಂತಲೂ ಹೆಚ್ಚು ಆರೋಗ್ಯವಾಗಿ ಸಂತೋಷಚಿತ್ತಳಾಗಿ ಲವಲವಿಕೆಯಿಂದಿದ್ದಳು. ಅವಳಿಗೆ ಬಿದ್ದ ಬಾವಿಯಿಂದ ಮೇಲೆದ್ದು ಬಂದಹಾಗಿತ್ತು. ಹಿಂದಿನಂತೆ ಮೈಮೇಲೆ ಬರುವುದು ಮೊದಲಾದ ಯಾವ ದೆವ್ವ ಗಿವ್ವದ ಕೋಟಲೆಯೂ ಅವಳಿಗಿರಲಿಲ್ಲ. ಮುಂದೆ ತನ್ನ ಗತಿಯೇನು ಎಂದು ಯೋಚಿಸುವ ಗೋಜಿಗೂ ಆಕೆ ಹೆಚ್ಚು ಹೋಗಿರಲಿಲ್ಲವೆಂದು ತೋರುತ್ತದೆ. ಕಾನೂರಿಗೆ ಹೆಗ್ಗಡತಿಯಾಗಿ ಹೋಗುವ ವಿಚಾರವನ್ನು ಯಾರಾದರೂ ಎತ್ತಿದರೆಂದರೆ ಮಾತ್ರ ಆಕೆ ಹುಚ್ಚಿಯಂತೆ ವಿಚಿತ್ರ ರೀತಿಯಿಂದ ವರ್ತಿಸುತ್ತಿದ್ದಳಂತೆ. ಆದಕಾರಣ ಯಾರೂ ಈಗೀಗ ಆ ಪ್ರಸ್ತಾಪವನ್ನು ಎತ್ತುವ ತಂಟೆಗೆ ಹೋಗುತ್ತಿರಲಿಲ್ಲ. ಪುಟ್ಟಮ್ಮ, ಲಕ್ಷ್ಮಿ, ಕೆಲವು ಸಾರಿ ಗೌರಮ್ಮ — ಇವರುಗಳಿಗೆ ಕಥೆಗಳನ್ನು ಓದುವುದು, ಹೇಳುವುದು; ತಾಯಿಗೆ ಒಳಗಿನ ಕೆಲಸಗಳಲ್ಲಿ ಸಹಾಯ ಮಾಡುವುದು; ಆಕಿ ಎಂದು ಹೇಳಿಸಿಕೊಳ್ಳುವಷ್ಟರಮಟ್ಟಿಗೆ ಮೂರು ಹೊತ್ತೂ ಲಕ್ಷ್ಮಿಯನ್ನು ಮುದ್ದಿಸಿ ಶುಶ್ರೂಷೆ ಮಾಡುವುದು — ಇದು ಆಕೆಯ ದಿನಚರಿಯಾಗಿತ್ತು. ತನ್ನ ಕೊಟಡಿಯಲ್ಲಿ ದೇವರ ಪಟಗಳನ್ನೂ ಹೂವಯ್ಯನಿತ್ತ ಕೆಲವು ಮಹಾಪುರುಷರ ಪಟಗಳನ್ನೂ ಇಟ್ಟು, ನಿತ್ಯವೂ ಪೂಜಿಸಿ ಪ್ರಾರ್ಥಿಸುತ್ತಿದ್ದಳಂತೆ. ಕೆಲವು ಸಾರಿ ಗಂಟೆ ಗಂಟೆಗಳ ಕಾಲ ಬಾಗಿಲು ತಾಳ ಹಾಕಿಕೊಂಡು ತಾನೊಬ್ಬಳೆ ಕೊಟಡಿಯಲ್ಲಿರುತ್ತಿದ್ದಳಂತೆ. ಅಂತೂ, ಆ ದಿನ ಹೂವಯ್ಯನೊಡನೆ ನಿಸ್ಸಂಕೋಚವಾಗಿ ಸಹೋದರಿಯಂತೆ ವರ್ತಿಸುತ್ತಾ ಸರಳವಾಗಿ ಮಾತುಕಥೆಯಾಡಿದಳು.

ಆದರೆ ಚಿನ್ನಯ್ಯ ಮತ್ತು ಪುಟ್ಟಮ್ಮ ಇವರಿಗಿಂತಲೂ ಹೆಚ್ಚು ಸಂತುಷ್ಟರೂ ಹರ್ಷಿತರೂ ಸುಖಿಗಳೂ ಮುತ್ತಳ್ಳಿಯಲ್ಲಾಗಲಿ ಸುತ್ತಣ ಹಳ್ಳಿಗಳಲ್ಲಿಯಾಗಲಿ ಬೇರೆ ಯಾರೂ ಇರಲಿಲ್ಲ. ಮದುವೆಯಾದಂದಿನಿಂದಲೂ ಮುತ್ತಳ್ಳಿ ಮತ್ತು ಕಾನೂರುಗಳ ಕ್ಷುಬ್ಧಜೀವನಸಮುದ್ರದಲ್ಲಿ ಅವರ ಬದುಕು ಬೃಂದಾವನ ಸದೃಶವಾದ ದ್ವೀಪವಾಗಿಯೇ ನಡೆದುಕೊಂಡು ಬಂದಿತ್ತು. ಇತರರಿಗೆ ಬಂದೊದಗಿದ ಕಷ್ಟಗಳೂ ಯಾತನೆಗಳೂ ಉದ್ವೇಗಗಳೂ ಅವರ ಬಾಳಿನ ಸರೋವರವನ್ನು ಬಗ್ಗಡಗೊಳಿಸಿರಲಿಲ್ಲ. ಅಷ್ಟು ಸುಖಿಗಳಾಗಿದ್ದರು ಅವರಿಬ್ಬರು. ಎಂದರೆ ಅವರಿಬ್ಬರಿಗೂ ಹೃದಯವಿರಲಿಲ್ಲ ಎಂದಾಗಲಿ, ಅವರು ಕಣ್ಣೀರು ಸುರಿಸಲಿಲ್ಲ

ಎಂದಾಗಲಿ ಅರ್ಥವಲ್ಲ. ಅವರಿಬ್ಬರೂ ಪರಸ್ಪರ ಸಹಾಯದಿಂದ ದುಃಖ ಸಮುದ್ರದಲ್ಲಿ ನಿರಾತಂಕವಾಗಿ ತೇಲುವ ಸುಖದ ನಾವೆಯನ್ನು ನಿರ್ಮಿಸಿ ಕೊಂಡಿದ್ದರೆಂದರ್ಥ. ಈಗಲಂತೂ ಪುತ್ರರತ್ನದ ಜನನದಿಂದ ಅವರಿಬ್ಬರೂ ಆನಂದಾತಿಶಯದಿಂದ ಪರವಶವಾದಂತಿದ್ದರು. ಆದ್ದರಿಂದಲೆ ಕೂಸನ್ನು ತೊಟ್ಟಿಲಿಗೆ ಹಾಕುವ ದಿನ, ಆಹ್ವಾನಿಸಿದ್ದರೂ ಕೂಡ, ಕಾನೂರಿನಿಂದ ಯಾರೊಬ್ಬರೂ ಬರದಿದ್ದರೂ, ಪುಟ್ಟಮ್ಮ ನಿಜವಾಗಿ ವ್ಯಸನಪಡಲಿಲ್ಲ. ತಾನು ಮಲತಾಯಿಯ ಮಗಳಾದುದರಿಂದ ತನ್ನ ಮೇಲೆ ರಾಮಣ್ಣಯ್ಯನಿಗೆ ಅಕ್ಕರೆಯಿಲ್ಲ ಎಂದು ಮರುಗಲು ಪ್ರಯತ್ನಿಸಿದಳು. ಆದರೆ ಆ ಪ್ರಯತ್ನ ಕೂಡ ಕರ್ತವ್ಯ ಮಾತ್ರದಂತಿತ್ತು!

ಅಗ್ರಹಾರದ ವೆಂಕಪ್ಪಯ್ಯಜೋಯಿಸರು ಕೂಸಿಗೆ 'ಕರಿಯಣ್ಣ' ಎಂದು ಹುಟ್ಟು ಹೆಸರು ಇಟ್ಟುಕೊಟ್ಟಿದ್ದರಂತೆ.

ಚಿನ್ನಯ್ಯ "ಈ ಹಾರುವರ ದೆಸೆಯಿಂದ ನಮಗೆ ಉಳಿಗಾಲವಿಲ್ಲ! ನಮಗೆ ವಿದ್ಯೆ ಬುದ್ಧಿ ಚೆನ್ನಾಗಿ ಕೊಡಲಿಲ್ಲವಲ್ಲಾ, ಹೋಗಲಿ! ಒಳ್ಳೊಳ್ಳೆ ಹೆಸರುಗಳನ್ನಾದರೂ ಇಟ್ಟುಕೊಡಬಾರದೆ! ಅದಕ್ಕೂ ಹೊಟ್ಟೆಕಿಚ್ಚು ಅಂತಾ ಕಾಣ್ತದೆ. ಕರಿಯ, ಸಿಂಡ, ತಿಮ್ಮ, ಕಾಳ, ಬೋಳ ಇವೇ ತಮ್ಮ ಪಾಲಿಗೆ!" ಎಂದು ಹೂವಯ್ಯನಿಗೆ ಒಂದು ಒಳ್ಳೆಯ ಕರೆಯುವ ಹೆಸರು ಇಡುವಂತೆ ಹೇಳಿದನು.

ಸೀತೆ, ಸಿಂಗಪ್ಪಗೌಡರು, ಹೂವಯ್ಯ, ಚಿನ್ನಯ್ಯ, ಲಕ್ಷ್ಮಿ, ಕಾಳ, ನಂಜ, ಇನ್ನಿತರ ನಾಲ್ಕು ಐದು ನಂಟರು ಎಲ್ಲರೂ ಸೇರಿ ನಾಮಕರಣಕ್ಕಾಗಿ ಬಹಳ ಕಾಲ ಚರ್ಚೆ ಮಾಡಿದರು. ಆ ಕೂಗಾಟ, ಆ ಗಲಾಟೆ, ಆ ನಗು ಇವನ್ನೆಲ್ಲಾ ಕೇಳಿ ಶ್ಯಾಮಯ್ಯಗೌಡರೂ ಅಲ್ಲಿಗೆ ಬಂದು ಸೇರಿದರು. ಸ್ವಲ್ಪ ಹೊತ್ತಿನಲ್ಲಿಯೆ ಅವರೂ ಹುಡುಗರಂತೆ ಚರ್ಚೆಯಲ್ಲಿ ರಭಸದಿಂದ ಭಾಗಿಗಳಾಗಿದ್ದುದನ್ನು ಕಂಡು ಹೂವಯ್ಯನಿಗೆ ಆಶ್ಚರ್ಯವಾಯಿತು.

ಕಟ್ಟಕಡೆಗೆ ಸೀತೆ ತನ್ನ ಕೊಟಡಿಗೆ ಹೋಗಿ ವೆಂಕಟಾಚಾರ್ಯರ ಕಾದಂಬರಿಯಲ್ಲಿ ಹುಡುಕಿ ನೋಡಿಕೊಂಡು ಬಂದು 'ರಮೇಶ' ಎಂಬ ಹೆಸರು ಬಹಳ ಚೆನ್ನಾಗಿದೆ ಎಂದು ಹೇಳಿದಳು.

ಲಕ್ಷ್ಮಿ ಏತಕ್ಕೊ ಏನೊ ಸುಮ್ಮನೆ ಹಿಂದುಮುಂದು ನೋಡದೆ ಅಕ್ಕಯ್ಯನ ಮಾತನ್ನು ಸಮರ್ಥಿಸಿದಳು. ಆ ಹೆಸರು ಅಷ್ಟು ಚೆನ್ನಾಗಿಲ್ಲ ಎಂದು ಭಿನ್ನಾಭಿಪ್ರಾಯ ಬರಲು ಅಳತೊಡಗಿದಳು. ಅವಳ ಸತ್ಯಾಗ್ರಹಕ್ಕೆ ಬೆದರಿ ಒಡನೆಯೆ ಎಲ್ಲರೂ ಒಪ್ಪಿಗೆಯಿತ್ತರು. ಜಯಶೀಲಳಾದ ಲಕ್ಷ್ಮಿ ಕೂಸಿನ ಹತ್ತಿರ ಹೋಗಿ 'ರಮೇಶಾ! ರಮೇಶಾ!' ಎಂದು ಕರೆಯುತ್ತಾ ಅದರ ಎರಡು ತುಂಬು ಕೆನ್ನೆಗಳನ್ನೂ ತನ್ನೆರಡು ಮುದ್ದು ಕೈಗಳಿಂದ ಮುಟ್ಟಿ ಒತ್ತಿದಳು. ಜೊಲ್ಲುಸುರಿ

ಸುತ್ತಾ ತನ್ನ ಹೆಬ್ಬೆರಳನ್ನು ಚೀಪುತ್ತಿದ್ದ ಶಿಶು, ಆ ಕಾರ್ಯವನ್ನು ತತ್ಕಾಲಕ್ಕೆ ನಿಲ್ಲಿಸಿ, ತಿಳಿನೋಟದಿಂದ ನೋಡುತ್ತಾ ನಗೆಬೀರಿತು.

ಮರುದಿನ ಹೂವಯ್ಯ ಕೆಳಕಾನೂರಿಗೆ ಹಿಂತಿರುಗುವಾಗ ಕೆಲವು ದಿನಗಳ ಮೇಲೆ ಬಾಲೆ ಬಾಣಂತಿಯರನ್ನೂ ಲಕ್ಷ್ಮಿಯನ್ನೂ ಕರೆದುಕೊಂಡು ಕೆಳಕಾನೂರಿಗೆ ಬರಬೇಕೆಂದು ಸೀತೆಗೆ ಆಹ್ವಾನವಿತ್ತನು. ಸೀತೆ ಚಿನ್ನಯ್ಯನಕಡೆ ನೋಡಿದಳು. ಅವನು ಸುಖರಸದಿಂದ ತುಂಬಿ ತುಳುಕುತ್ತಾ "ಓಹೊ, ಅದಕ್ಕೇನಂತೆ!" ಎಂದು ಸಮ್ಮತಿಯಿತ್ತನು.

ಹೂವಯ್ಯ ಕಾನೂರಿಗೆ ಹೋಗುವ ಪ್ರಸ್ತಾಪವನ್ನೆ ಸೀತೆಯೊಡನೆ ಎತ್ತಲಿಲ್ಲ. ರಾಮಯ್ಯ ತನ್ನನ್ನು ನೋಡದೆ ತಿರಸ್ಕರಿಸಿದಮೇಲೆ ಆತನ ಸ್ಥಿತಿಗತಿಯನ್ನು ಅರಿಯದೆ, ಸೀತೆಯನ್ನು ಅಲ್ಲಿಗೆ ಹಿಂತಿರುಗುವಂತೆ ಕೇಳಿಕೊಳ್ಳುವುದು ಅಪಾಯ ವೆಂದು ಭಾವಿಸಿ ಸುಮ್ಮನಾದನು. ಆಳ ನೋಡದೆ ಬಾವಿಗೆ ತಳ್ಳಿದಂತಾದರೆ!

## ೬೯

## ಸೇರೆಗಾರರು ಪರಾರಿ!

ಜೀವನ ಸುಮಾರು ಒಂದು ಸಂವತ್ಸರದ ದೂರ ಹರಿದಿತ್ತು. ಸೋಮ ಗಟ್ಟದ ಕೆಳಗೆ ಹೋಗಿ ಆಳುಗಳನ್ನು ಕರೆತಂದು, ಹೊಸ ಸ್ಥಾನಕ್ಕೂ ಮಾನಕ್ಕೂ ತಕ್ಕ ವೇಷದಿಂದ ಶೋಭಿಸುತ್ತಾ, ದಕ್ಷತೆಯಿಂದ ಕೆಲಸ ನಡೆಸುತ್ತಾ 'ಕೆಳಕಾನೂರು ಸೇರೆಗಾರ ಸೋಮಯ್ಯಸೆಟ್ಟರು' ಎಂಬ ಅಭಿಧಾನದಿಂದ ಸರ್ವತ್ರ ಪ್ರಸಿದ್ಧನಾಗಿ ಗೌರವಭಾಜನನಾಗುತ್ತಿದ್ದನು. ಆತನ ನಕ್ಷತ್ರ ಮೂಡಿ ಮೇಲೇರಿದಂತೆಲ್ಲಾ ಕಾನೂರು ಸೇರೆಗಾರ ರಂಗಪ್ಪ ಸೆಟ್ಟರ ನಕ್ಷತ್ರ ಪಡುವಣೆಡೆಗೆ ಇಳಿಯುತ್ತಿತ್ತು. ಅವರ ಆಳುಗಳಲ್ಲಿ ಕೆಲವರಾಗಲೆ ಹೇಳದೆ ಕೇಳದೆ ಗಟ್ಟದ ಕೆಳಕ್ಕೆ ಹಾರಿದ್ದರು.

ಒಂದು ದಿನ ಪ್ರಾತಃಕಾಲದ ಹೊಂಬಿಸಿಲು ಹೂವಯ್ಯನ ಕೊಟಡಿಯ ಕಿಟಕಿಗಳಲ್ಲಿ ಕೋಲುಕೋಲಾಗಿ ತೂರಿಬಂದು ಮೇಜಿಮೇಲಿದ್ದ ಕೆಲವು ಚಿನ್ನ ದೊಡವೆಗಳ ಮೇಲೆ ಬಿದ್ದು ಪ್ರೋಜ್ವಲವಾಗಿತ್ತು. ಹೂವಯ್ಯ ಪುಟ್ಟಣ್ಣನನ್ನು ಕೂಗಿ ಕರೆದು, ಆ ಎಲ್ಲ ಒಡವೆಗಳನ್ನೂ ವಸ್ತ್ರದಲ್ಲಿ ಗಂಟುಕಟ್ಟಿ ಅವನ ಕೈಲಿಟ್ಟು "ಇವನ್ನು ತೆಗೆದುಕೊಂಡುಹೋಗಿ, ನಾನು ಕಳಿಸಿಕೊಟ್ಟೆ ಎಂದು ಹೇಳಿ, ಕಾನೂರು ಹೆಗ್ಗಡಿತಮ್ಮಗೆ ಕೊಟ್ಟು ಬಾ" ಎಂದನು.

"ಕೊಟ್ಟವನು ಹಾಂಗೆ ಕಾಡಿನ ಕಡೆಗೆ ಹೋಗಿಬರ್ತಿನಿ. ಹಂದಿ ಹಿಂಡು

ಬಂದಾವಂತೆ. ನಿನ್ನೆ ನಮ್ಮ ಸೇರೆಗಾರರ ಕಡೆ ಆಳು ಹೆಡಗೆ ಹೆಣೆಯೋಕೆ ಬೆತ್ರದ ಬಳ್ಳಿ ತರಾಕೆ ಹೋಗಿದ್ದಾಗ ಉತ್ತಾ ಇದ್ದವಂತೆ" ಎಂದು ಪುಟ್ಟಣ್ಣ ಕೆಂಪಾದ ಹಲ್ಲು ತೋರುವಂತೆ ಬಿರಿಮುಗುಳು ನಗೆ ನಗುತ್ತಾ ಕಿಟಕಿಯಾಚೆ ದೂರದಲ್ಲಿ ಕಾಣುತ್ತಿದ್ದ ಅರಣ್ಯಸಾಂದ್ರ ಪರ್ವತಶ್ರೇಣಿಯನ್ನು ಅಭೀಪ್ಸಕವಾಗಿ ನಿಟ್ಟಿಸಿದನು.

"ಏನಾದರೂ ಮಾಡು! ನಿನಗೆ ಮೂರು ಹೊತ್ತೂ ಷಿಕಾರಿ!" ಎಂದು ಹೂವಯ್ಯ ಸೂಕ್ಷ್ಮವಾಗಿ ತನ್ನ ಅಸಮ್ಮತಿಯನ್ನು ಸೂಚಿಸಿದರೂ ಪುಟ್ಟಣ್ಣ ಅದನ್ನು ಸಮ್ಮತಿಯೆಂದು ಧಾರಾಳವಾಗಿ ವ್ಯಾಖ್ಯಾನಮಾಡಿ ಮೆಲ್ಲಗೆ "ತೋಟಾ ಇಲ್ಲ" ಎಂದನು.

"ಹತ್ತು ತೋಟಾ ಕೊಟ್ಟಿದ್ದೆನಲ್ಲೋ ಮೊನ್ನೆ ಮೊನ್ನೆ!"

"ಅಂದು ಹಬ್ಬದ ಬೇಟೇಲಿ ಹುಲಿಗೆ ಹೊಡೆದು ಖರ್ಚಾಗಲಿಲ್ಲೇನು? ಒಂದೇ ಒಂದು ಚರೆ ತೋಟಾ ಇದೆ."

"ನಿನ್ನ ದೆಸೆಯಿಂದ ಮದ್ದು ಗುಂಡಿಗೆ ಉಳಿಗಾಲವಿಲ್ಲ" ಎಂದು ಹೇಳುತ್ತ ಹೂವಯ್ಯ ಬೀರುವಿನ ಅರೆಯಿಂದ ಹಿತ್ತಾಳೆಯ ಕಟ್ಟಿನ ಕೆಂಬಣ್ಣದ ಮನೋಹರವಾದ ಐದು ತೋಟಾಗಳನ್ನು ಕೊಡುತ್ತಾ "ಹಿಡಿ!... ಇನ್ನು ಮಾತ್ರ ಪದೇ ಪದೇ ಕೇಳೀಯಾ!" ಎಂದನು.

ಪುಟ್ಟಣ್ಣ ಆನಂದದಿಂದ ತೋಟಾಕೋವಿಯನ್ನು ಹೆಗಲಮೇಲಿಟ್ಟು, ಕೈಲಿ ನಗದ ಗಂಟು ಹಿಡಿದು, ನಾಯಿಗಳನ್ನು ಕರೆಯುತ್ತಾ ಕಾನೂರಿನ ಕಡೆಗೆ ಹೋದನು.

ಸುಬ್ಬಮ್ಮ ಪದೇ ಪದೇ ಕಾನೂರು ಸೇರೆಗಾರರ ಕೈಯಲ್ಲಿ, ಓಬಯ್ಯನ ಕೈಯಲ್ಲಿ, ಪುಟ್ಟನ ಕೈಯಲ್ಲಿ, ಬೇಲರ ಸಿದ್ದನ ಕೈಯಲ್ಲಿ ಕಡೆ ಕಡೆಗೆ ಸಿಕ್ಕಿ ಸಿಕ್ಕಿದವರ ಕೈಯಲ್ಲಿ ತನ್ನ ನಗಗಳನ್ನು ಕೊಟ್ಟುಕಳುಹಿಸಬೇಕೆಂದು ಹೇಳಿಕಳುಹಿಸಿದ್ದಳು. ಸೇರೆಗಾರರಿಂದ ಪ್ರಾರಂಭವಾದುದರಿಂದ, ನಿಜವಾಗಿಯೂ ಸುಬ್ಬಮ್ಮ ಹೇಳಿ ಕಳುಹಿಸಿದುದು ಹೌದೋ ಅಲ್ಲವೋ ಎಂಬ ಅಪನಂಬಿಕೆಯಿಂದ ಹೂವಯ್ಯ ಅವರಿವರ ಕೈಯಲ್ಲಿ ಬೆಲೆಯುಳ್ಳ ಆಭರಣಗಳನ್ನು ಕೊಡಲೊಪ್ಪದೆ, ಕಾನೂರು ಹೆಗ್ಗಡಿತಮ್ಮನೆ ಬಂದು ತೆಗೆದುಕೊಂಡುಹೋಗಲಿ ಎಂದು ಹೇಳಿಕಳುಹಿಸಿದ್ದನು. ಆದರೆ ಹೆಗ್ಗಡಿತಿಯೆ ಬರುವ ಸ್ಥಿತಿಯಲ್ಲಿ ಇರಲಿಲ್ಲವಾದ್ದರಿಂದ ಆಕೆ ಬರಲಿಲ್ಲ. ಅದಕ್ಕೆ ಬದಲಾಗಿ ನಂಬಿ ಕೊಟ್ಟ ತನ್ನ ನಗಗಳನ್ನೆಲ್ಲ ಹೂವಯ್ಯ ಅಪಹರಿಸುವುದಕ್ಕೆ ಹವಣಿಸುತ್ತಿದ್ದಾನೆ ಎಂಬರ್ಥದ ದೂರನ್ನು ಹಬ್ಬಿಸಿದ್ದಳು. ಆದ್ದರಿಂದಲೆ ಹೂವಯ್ಯನಿಗೆ ಜುಗುಪ್ಸೆಯಾಗಿ ಆ ದಿನ ಬೆಳಗ್ಗೆ ಪುಟ್ಟಣ್ಣನೊಡನೆ ನಗದ ಗಂಟನ್ನು ಕೊಟ್ಟು ಕಳುಹಿಸಿದ್ದು.

ಸುಬ್ಬಮ್ಮಗೆ ಆಭರಣಗಳು ಬೇಕಾಗಿದ್ದುದು ಅಲಂಕಾರ ಮಾಡಿಕೊಳ್ಳು

ವುದಕ್ಕಾಗಿರಲಿಲ್ಲ; ಅವಮಾನದಿಂದ ಪಾರಾಗುವುದಕ್ಕೆ. ಸೇರೆಗಾರರ ಸಹವಾಸ ದಿಂದ ಆಕೆಗೆ ಹೊಟ್ಟೆ ಮುಂದಕ್ಕೆ ಬಂದಿತ್ತು!

ಸುಬ್ಬಮ್ಮ ತಾನು ಊಹಿಸಿದ್ದಕ್ಕಿಂತಲೂ ಆಳವಾದ ಬಾವಿಗೆ ಹಾರಿದ್ದಳು. ಮುಂಡೆಯಾದ ತಾನು ಬಸುರಿಯಾದರೆ ಸಹಿಸಲಸಾಧ್ಯವಾಗಿ ಅವಮಾನವಾಗು ತ್ತದೆ; ಜಾತಿಯಿಂದ ಹೊರಗೆ ಹಾಕುತ್ತಾರೆ; ಶಿಶುಹತ್ಯ ಮಾಡಿದರೆ ಕಠಿಣ ಸಜಾ ಹಾಕುತ್ತಾರೆ; ಮನೆತನದ ಹೆಸರಿಗೆ ಎಳ್ಳು ನೀರಾಗುತ್ತದೆ; ತನ್ನ ತಾಯಿತಂದೆಗಳೂ ಹತ್ತಿರದ ಬಂಧುಗಳೂ ತಲೆಯೆತ್ತಿ ನಡೆಯದಂತಾಗುತ್ತದೆ; ಸಮಾಜದಿಂದಲೇ ತಿರಸ್ಕೃತಳಾಗಿ ನಾಯಿಯಂತೆ ಬಾಳಿ ಸಾಯಬೇಕಾಗುತ್ತದೆ. ಈ ಆಲೋಚನೆ ಗಳೆಲ್ಲವೂ ಆಕೆಗೆ ಬಂದಿದ್ದುವು. ಆದರೆ ವಿವೇಕವನ್ನು ಕೊಚ್ಚಿ ನುಗ್ಗಿದ ಕಾಮ ಲಾಲಸೆಯೂ, ತಾನು ಹುಟ್ಟುಬಂಜೆಯಾಗಿರುವುದರಿಂದ ಗರ್ಭಿಣಿಯಾಗುವುದಿಲ್ಲ ಎಂಬ ನಂಬುಗೆಯೂ ಆಕೆಗೆ ಧೈರ್ಯ ತಂದುಕೊಟ್ಟಿದ್ದುವು. ತನ್ನ ತೀರಿಹೋದ ಗಂಡ "ಬಂಜೆ ಬಂಜೆ!" ಎಂದು ಹಾಕುತ್ತಿದ್ದ ಶಾಪವೇ ಸುಬ್ಬಮ್ಮಗೆ ವರದಂತೆ ತೋರಿ ಸಂತೋಷವಾಗಿತ್ತು. ಜೊತೆಗೆ ನೀಚ ಜಾರನು ಬೀಸುತ್ತಿದ್ದ ಬಣ್ಣ ಬಣ್ಣದ ಬಲೆಯ ಆಕರ್ಷಣೆಯೂ ಆಕೆಯನ್ನು, ನಾಗರಹಾವಿನ ಹೆಡೆ ಹಕ್ಕಿಯನ್ನು ಮೋಹ ಮುಗ್ಧವಾಗಿ ಮಾಡಿ ಸೆಳೆಯುವಂತೆ, ಸೇದಿ ಸೆಳೆಯಿತು.

ಮೊದಲನೆಯಸಾರಿ ಎದೆ ನಡುಗುತ್ತಾ, ಹೆದರಿ ಹೆದರಿ ಕಣ್ಣೀರಿಡುತ್ತಾ, ಆದರೂ ಪಾಪದಿಂದ ದೂರವಾಗಲು ಮನಸ್ಸಿಲ್ಲದೆ, ಮುಂದುವರಿದು, ಸುಖದ ಭೀಕರವಾದ ಸುಳಿಗೆ ಸಂತೋಷದಿಂದ ಸಿಕ್ಕಿಬಿದ್ದಿದ್ದಳು. ಒಮ್ಮೆ ಪಾಪಕಾರ್ಯ ನಡೆದುಹೋದಮೇಲೆ ಪಶ್ಚಾತ್ತಾಪದಿಂದಲೂ ಭೀತಿಯಿಂದಲೂ 'ಅಯ್ಯೋ ಆದುದನ್ನು ಅಳಿಸಲು ಸಾಧ್ಯವಾಗಿದ್ದರೆ ಇನ್ನುಮುಂದೆ ಎಂದಿಗೂ ಅಂತಹ ಕೆಲಸಕ್ಕೆ ಹೋಗುತ್ತಿರಲಿಲ್ಲ' ಎಂದು ಎದೆ ಹಿಂಡಿಕೊಂಡಳು. ಸೇರೆಗಾರರನ್ನು ದ್ವೇಷಭಾವದಿಂದ ನೋಡಿ ತನ್ನ ದೃಢನಿಶ್ಚಯವನ್ನು ತಿಳಿಸಿದಳು.

ಆದರೆ ಆ ಹುಟ್ಟುಪಾಣ್ಬ ಮರುದಿನ ಮಧ್ಯರಾತ್ರಿಯೂ ಬಂದು ಹಿತ್ತಿಲ ಕಡೆಯ ಬಾಗಿಲನ್ನು ತಟ್ಟತೊಡಗಿದನು. ಸುಬ್ಬಮ್ಮಗೆ ಬಲು ರೇಗಿತು. 'ಕಳ್ಳರೂ! ಕಳ್ಳರೂ!' ಎಂದು ಕೂಗಿಕೊಳ್ಳಲೇ ಎಂದು ಯೋಚಿಸಿದಳು. ಆದರೆ ಆ ಹಾಳು ಸೊಣಗನೆಲ್ಲಿಯಾದರೂ ಹಿಂದಿನ ರಾತ್ರಿ ನಡೆದುದನ್ನು ಬಹಿ ರಂಗ ಪಡಿಸಿದರೆ! ಎಂದು ಹೆದರಿ, ಕೂಗಿಕೊಳ್ಳದೆ, ಹಿತ್ತಿಲು ಕಡೆಯ ಬಾಗಿಲಿಗೆ ಹೋಗಿ ಸಿಟ್ಟಿನಿಂದ ಹಿಂದಕ್ಕೆ ಹೋಗುವಂತೆ ಹೇಳಿದಳು. ಆದರೆ ಸೇರೆಗಾರರು ಇನ್ನೂ ಹೆಚ್ಚು ಹೆಚ್ಚು ಗಟ್ಟಿಯಾಗಿ ಬಾಗಿಲು ದಬ್ಬತೊಡಗಿದರು. ಗಲಾಟೆ ಎಲ್ಲಿಯಾದರೂ ಇತರರಿಗೆ ಕೇಳಿಸೀತು ಎಂದಳುಕಿ ಬಾಗಿಲು ತೆರೆದಳು.

ಆಮೇಲೆ ಪ್ರತಿರಾತ್ರಿಯೂ ಒಲ್ಲೆ ಒಲ್ಲೆ ಎನ್ನುತ್ತಲೇ ಹೋಗಿ ಬಾಗಿಲು ತೆರೆಯುತ್ತಿದ್ದಳು. ಬರಬರುತ್ತಾ ಪಾಪಕರ್ಮವೇ ನಿತ್ಯದ ಸಾಧಾರಣಾಭ್ಯಾಸ ವಾಗಿ, ಮೊದಲಿದ್ದ ಸಂಕೋಚ ಭೀತಿ ಪಶ್ಚಾತ್ತಾಪಗಳೆಲ್ಲ ಮಾಯವಾದುವು. ನವಾನುರಾಗದಲ್ಲಿ ನವರುಚಿ ಹೆಚ್ಚಿತು.

ಸ್ವಲ್ಪ ಕಾಲದಲ್ಲಿಯೆ ತಾನು ಗರ್ಭಧಾರಣೆ ಮಾಡಿರುವುದಾಗಿ ಸುಬ್ಬಮ್ಮಗೆ ತಿಳಿದಾಗ, ಆಕೆ ಗುಟ್ಟಾಗಿ ಬಿಕ್ಕಿ ಬಿಕ್ಕಿ ಅತ್ತಳು. ದೆವ್ವ ದೇವರಿಗೆಲ್ಲ ಹರಕೆ ಹೊತ್ತು ಕೊಂಡಳು. ಆತ್ಮಹತ್ಯೆ ಮಾಡಿಕೊಳ್ಳುತ್ತೇನೆಂದು ಸೇರೆಗಾರರಿಗೂ ಹೇಳಿದಳು. ಅವರು 'ಹೆದರಬೇಡಿ, ಗಂಗೆಗೆ ಮದ್ದು ಗೊತ್ತಿದೆ. ಯಾರಿಗೂ ತಿಳಿಯದಂತೆ ಕೆಲಸ ಮಾಡಿದರೆ ಸರಿ' ಎಂದು ಧೈರ್ಯ ಹೇಳಿದರು. ಆದರೆ ಗಂಗೆಗೂ ಸುಬ್ಬಮ್ಮಗೂ ವೈರವಿದ್ದುದರಿಂದಲೋ ಏನೋ ಸೇರೆಗಾರರು ಬಾಯಲ್ಲಿ ಆಡುತ್ತಿದ್ದರೇ ಹೊರತು ಮದ್ದನ್ನು ತಂದುಕೊಡಲಿಲ್ಲ. ಸುಬ್ಬಮ್ಮ ಬೇಗ ಬೇಗನೆ ಮದ್ದು ತಂದುಕೊಟ್ಟು ತನ್ನನ್ನು ಉದ್ಧಾರಮಾಡಬೇಕೆಂದು ಸೇರೆಗಾರರನ್ನು ಅಂಗಲಾಚಿ ಪೀಡಿಸತೊಡಗಿದಳು. ಒಂದೊಂದು ದಿನವೂ ಕಳೆದಹಾಗೆ ಉದ್ವೇಗದ ಶೂಲ ಆಕೆಯ ಹೃದಯದಲ್ಲಿ ಹೆಚ್ಚು ಹೆಚ್ಚಾಗಿ ಮುಂದುವರಿಯುತ್ತಿತ್ತು.

ಕಡೆಗೆ ಸೇರೆಗಾರರು ಗುಟ್ಟನ್ನು ಹೊರಗೆಡಹಿದರು: ಗಂಗೆಗೆ ಏನಾದರೂ ದಕ್ಷಿಣೆ ಕೊಟ್ಟ ಹೊರತು ಮದ್ದು ಕೊಡುವುದಿಲ್ಲವಂತೆ ಎಂದು! ಸುಬ್ಬಮ್ಮ ಮರುಮಾತಾಡದೆ ತನ್ನದೊಂದು ಚಿನ್ನದ ಬಳೆಯನ್ನು ಸೇರೆಗಾರರ ಕೈಯಲ್ಲಿ ಕೊಟ್ಟಳು. ಆದರೂ ಮದ್ದು ಬರಲಿಲ್ಲ!

ಕೆಲವು ತಿಂಗಳು ಕಳೆದು, ಹೊಟ್ಟೆ ಮುಂದಕ್ಕೆ ಉಬ್ಬಿ ಬರುತ್ತಿರಲು ಇತರರ ದೃಷ್ಟಿಯಿಂದ ತಪ್ಪಿಸಿಕೊಳ್ಳಲು ಅಸಾಧ್ಯವೆಂದು ತೋರಿ, ಸುಬ್ಬಮ್ಮ ತನಗೆ ಮೈ ಸರಿಯಿಲ್ಲ ಎಂದು ಹೇಳಿ, ತನ್ನ ಕತ್ತಲೆ ಕೋಣೆಯೊಳಗೆ ಹಾಸಗೆ ಹಿಡಿದು ಬಿಟ್ಟಳು. ಹಗಲು ಹೊರಗೆ ಬರುತ್ತಲೇ ಇರಲಿಲ್ಲ; ಬಂದರೂ ಯಾರೂ ಇಲ್ಲದಿದ್ದಾಗ ಅತಿಗೋಪ್ಯವಾಗಿ ಬರುತ್ತಿದ್ದಳು. ಆಕೆಯ ಕಷ್ಟ, ಯಾತನೆ, ಮನೋನರಕಗಳು ಶಿವನಿಗೇ ಸಂವೇದ್ಯ!

ತನ್ನ ಹತ್ತಿರವಿದ್ದ ಆಭರಣಗಳನ್ನೆಲ್ಲ ಒಂದಾದಮೇಲೆ ಒಂದನ್ನಾಗಿ ಸೇರೆಗಾರ ರಿಗೆ ಕೊಟ್ಟಳು. ಆದರೂ ಮದ್ದು ಬರಲಿಲ್ಲ. ಗಂಗೆಗಿನ್ನೂ ತೃಪ್ತಿಯಾಗಲಿಲ್ಲ ವೆಂದು ತೋರುತ್ತದೆ ಎಂದು ಭಾವಿಸಿ, ಜನದಮೇಲೆ ಜನ ಕಳುಹಿಸಿ, ಹೂವಯ್ಯ ನಲ್ಲಿ ತಾನಿಟ್ಟಿದ್ದ ನಗಗಳನ್ನೂ ತರಿಸಿ, ಗಂಗೆಗೆ ಸೇರೆಗಾರರ ಕೈಯಿಂದ ಕೊಟ್ಟಳು. ಸೇರೆಗಾರರೆ ತನ್ನ ಆಭರಣಗಳನ್ನೆಲ್ಲ ಲಬಟಾಯಿಸಿಕೊಳ್ಳಲು ಗಂಗೆಯೊಡನೆ ಮಸಲತ್ತು ಮಾಡುತ್ತಿದ್ದಾರೆ ಎಂಬುದು ಆಕೆಯ ಅದೂರದೃಷ್ಟಿಗೆ ಹೊಳೆಯಲಿಲ್ಲ!

ಒಡವೆಗಳೆಲ್ಲ ಮುಗಿದುದು ಸೇರೆಗಾರರಿಗೆ ಸಂಪೂರ್ಣವಾಗಿ ಗೊತ್ತಾದಮೇಲೆ ಒಂದು ರಾತ್ರಿ ಹಿತ್ತಿಲು ಕಡೆಯ ಬಾಗಿಲಿನಿಂದ ಅವರೂ ಗಂಗೆಯೂ ಸುಬ್ಬಮ್ಮನ ಕೋಣೆಯನ್ನು ಪ್ರವೇಶಿಸಿದರು. . .

ಮರುದಿನ ರಂಗಪ್ಪಶೆಟ್ಟರು ರಾಮಯ್ಯನ ಬಳಿಗೆ ಹೋಗಿ, ಕಿವಿಗಿಂಪಾಗಿ ಮಾತಾಡಿ, ತಮ್ಮ ಆಳುಗಳಲ್ಲಿ ಕೆಲವರು ಬಿಟ್ಟುಹೋದುದರಿಂದ ಹೊಸ ಆಳುಗಳನ್ನು ತರಬೇಕೆಂದೂ, ಅದಕ್ಕಾಗಿ ಮುನ್ನೂರು ರೂಪಾಯಿ ಮುಂಗಡ ಬೇಕೆಂದೂ, ಹೂವಯ್ಯನು ರಾಮಯ್ಯನಮೇಲಿನ ಜಿದ್ದಿನಿಂದಲೇ ಸೋಮನಿಗೆ ಮುಂಗಡಕೊಟ್ಟು, ಆಳುಗಳನ್ನು ತರಿಸಿ, ಅವನನ್ನು ಸೇರೆಗಾರನನ್ನಾಗಿ ಮಾಡಿದ್ದಾನೆಂದೂ, ಆ ಮುಂಡೆಮಗನ ಪಿತೂರಿಯಿಂದಲೇ ತಮ್ಮ ಆಳುಗಳಲ್ಲಿ ಕೆಲವರು ಓಡಿಹೋದರೆಂದೂ, ಹತ್ತು ಹದಿನೈದು ದಿನಗಳೊಳಗೆ ಆಳು ಕರೆದುಕೊಂಡು ಬರುತ್ತೇನೆಂದೂ, ಅಲ್ಲಿಯವರೆಗೆ ತಮ್ಮ ಬಗಲಿಯೇ ಕಾನೂರಿನಲ್ಲಿರುವ ಆಳುಗಳ ಮೇಲ್ವಿಚಾರಣೆ ವಗ್ಯೆರೆ ನೋಡಿಕೊಳ್ಳುತ್ತಾನೆಂದೂ ಹೇಳಿ ರೂಪಾಯಿ ತೆಗೆದುಕೊಂಡು ಹೋದರು.

ಆ ದಿನವೇ ಮಧ್ಯಾಹ್ನ ಕಾನೂರು ಸೇರೆಗಾರ ರಂಗಪ್ಪಸೆಟ್ಟರು ರಾಮಯ್ಯನಿಂದ ತೆಗೆದುಕೊಂಡ ರೂಪಾಯಿಗಳನ್ನೂ ಸುಬ್ಬಮ್ಮನಿಂದ ಸುಲಿದುಕೊಂಡ ಒಡವೆ ವಸ್ತುಗಳನ್ನೂ ಗಂಟುಕಟ್ಟಿಕೊಂಡು ಗಂಗೆಯೊಡನೆ ಗಟ್ಟದ ಕೆಳಕ್ಕೆ ಕಟ್ಟಕಡೆಯ ಪ್ರಯಾಣ ಬೆಳಸಿದರು. ಸುಬ್ಬಮ್ಮಗೆ ಮಾತ್ರ ಸೇರೆಗಾರರ ಪ್ರಯಾಣದ ವಿಚಾರವಾಗಿ ಸಂಪೂರ್ಣ ಅಜ್ಞಾನವಿತ್ತು !

ಅದೇ ದಿನದ ಇರುಳಿನಲ್ಲಿ ಸೇರೆಗಾರರ ಗುಟ್ಟಾದ ಕಟ್ಟಪ್ಪಣೆಯ ಮೇರೆಗೆ ಅವರ ಆಳುಗಳೆಲ್ಲರೂ ಗಂಟುಮೂಟೆಕಟ್ಟಿಕೊಂಡು ಪರಾರಿಯಾದರು. ಮರುದಿನ ಸೇರೆಗಾರರೂ ಅವರಾಳುಗಳೂ ರಾಮಯ್ಯನಿಗೆ ಮೋಸಮಾಡಿ ಹೋದ ವರ್ತಮಾನ ಪಡೆಮಾತಾಗಿ ಹಬ್ಬಿತು. ರಾಮಯ್ಯ ಹುಚ್ಚು ಹುಚ್ಚಾಗಿ ಕೋವಿಯನ್ನು ಹೆಗಲಮೇಲೆ ಹಾಕಿಕೊಂಡು, ಪರಾರಿಯಾಗಿದ್ದವರನ್ನು ಹಿಡಿದು ತರುತ್ತೇನೆಂದು ಕೆಲವು ಬೇಲರಾಳುಗಳೊಡನೆ ತೀರ್ಥಹಳ್ಳಿ, ಕೊಪ್ಪಗಳಿಗೆ ಹೋಗುವ ರಸ್ತೆಗಳಲ್ಲಿ ವ್ಯರ್ಥವಾಗಿ ತೊಳಲಿ ತೊಳಲಿ ಬಂದನು. ಯಾವಾಗಲೂ ತೆಪ್ಪಗಿರುತ್ತಿದ್ದ ಅವನ ಆ ದಿನದ ವರ್ತನೆಯನ್ನು ನೋಡಿ ಕೆಲವರು ಚಂದ್ರಯ್ಯಗೌಡರು ಮಗನಮೇಲೆ ಬಂದಿದ್ದಾರೆ ಎಂದು ಕೂಡ ಮಾತಾಡಿಕೊಂಡರು !

ಸೇರೆಗಾರರೂ ಗಂಗೆಯೂ ಆಳುಗಳೂ ಓಡಿಹೋದರೆಂಬ ಸಮಾಚಾರ ಗೊತ್ತಾದೊಡನೆ ಸುಬ್ಬಮ್ಮ ಸಿಟ್ಟಿನಾವೇಶದಿಂದ ಕಟ ಕಟನೆ ಹಲ್ಲು ಕಡಿದುಕೊಂಡಳು. ಸೇರೆಗಾರರ ಪೈಶಾಚಿಕತೆ ಆಕೆಯೆದುರಿಗೆ ಕರಾಳವಾಗಿ ದಿಗಂಬರವಾಗಿ ನಿಂತಿತು.

ಗಂಗೆ ಸುಬ್ಬಮ್ಮನ ಕೈಯಲ್ಲಿ ಮದ್ದು ಕೊಟ್ಟು, ಅದನ್ನು ಹುಣ್ಣಿಮೆ ಕಳೆದ ಮೇಲೆ ಉಪಯೋಗಿಸಬೇಕೆಂದೂ ತಾನೆ ಪ್ರಯೋಗಿಸುತ್ತೇನೆಂದೂ ಹೇಳಿದ್ದಳು!

ಅಂತರಾಳದಲ್ಲಿ ಕೈಬಿಟ್ಟಂತಾಗಿ ಸುಬ್ಬಮ್ಮನ ಆಲೋಚನೆಗಳು ಭಯಂಕರವಾದುವು. ಕೆರೆ, ಮರ, ನೇಣುಗಳೆಲ್ಲ ಮನಸ್ಸಿಗೆ ಬಂದುವು. ಆದರೆ ಆಕೆಗೆ ಅವಮಾನದಿಂದ ಪಾರಾಗುವ ಆಸೆಯಲ್ಲದೆ ಸಾಯಲು ಇಚ್ಛೆಯಾಗಲಿಲ್ಲ. ಸತ್ತರಾದರೂ ಸುಖವುಂಟೆ? ಅಲ್ಲಿ ಚಂದ್ರಯ್ಯಗೌಡರಿದ್ದಾರೆ! ಯಮದೂತರು ಕಾಯಿಸಿದ ಕಬ್ಬಿಣದ ಮೂರ್ತಿಯನ್ನು ತಬ್ಬುವ ಶಿಕ್ಷೆ ಕೊಡುತ್ತಾರೆ! ನರಕದ ವರ್ಣನೆಯನ್ನು ಕೇಳಿ ನಂಬಿದ ಎಂಥ ಋಷಿಯೂ ಸಾಯಲು ಹೆದರದಿರುವುದಿಲ್ಲ ಅಂದಮೇಲೆ ಬಡಪಾಯಿ ಸುಬ್ಬಮ್ಮನ ಮಾತೇನು?

ಸುಬ್ಬಮ್ಮ ಗಂಗೆ ಕೊಟ್ಟ ಮದ್ದನ್ನು ತಾನೇ ಪ್ರಯೋಗಿಸಿಕೊಳ್ಳಲು ದೃಢ ಮನಸ್ಸು ಮಾಡಿದಳು. ಆದರೆ ಅವಳಿಗೆ ಉಪಯೋಗಿಸುವ ವಿಧಾನವಾಗಲಿ ಪ್ರಮಾಣವಾಗಲಿ ತಿಳಿದಿರಲಿಲ್ಲ. ಆದ್ದರಿಂದ ಮಿತಿಮೀರಿ ಹೋಯಿತು.

ರಾತ್ರಿ ಸುಮಾರು ಹನ್ನೆರಡು ಗಂಟೆಯ ಹೊತ್ತಿಗೆ ಉಪ್ಪರಿಗೆಯ ಮೇಲೆ ರಾಮಯ್ಯನಿಗೆ ತುಸು ದೂರದಲ್ಲಿ ಮಲಗಿದ್ದ ಓಬಯ್ಯನಿಗೆ ಕನಸಿನಲ್ಲಿ ಯಾರೋ ನರಳುವಂತಾಗಿ ಎಚ್ಚರವಾಯಿತು. ಇರುಳು ಮೌನದಲ್ಲಿ ನರಳುವ ದನಿ ವಾಸ್ತವವಾಗಿಯೂ ಕಿವಿಗೆ ಬಿದ್ದು, ಬೆಚ್ಚಿ ಭೀತನಾಗಿ ಹಾಸಗೆಯಮೇಲೆ ಎದ್ದು ಕುಳಿತು ಕಿವಿಗೊಟ್ಟನು. ನರಳುದನಿ ಯಾತನಾಕ್ಲಿಷ್ಟವಾಗಿ ಸ್ಪಷ್ಟವಾಗಿ ಕೇಳಿಸಿತು. ಪ್ರೇತ ಪಿಶಾಚಿಗಳಿರಬಹುದೆ? ಅವುಗಳೂ ಹಾಗೆ ಮಾಡುತ್ತವೆಂದು ಕೇಳಿದ್ದನು. ಇರಲಾರದು. ಕೆಳಗೆ ಮನೆಯೊಳಗಣಿಂದ ಕೇಳಿಬರುತ್ತಿದೆ. ಏಕಾಗಬಾರದು? ದೆವ್ವ ಮನೆಯೊಳಗೆ ಬಂದು ನರಳಲಾರದೇನು? ಆಲೋಚಿಸುತ್ತಿದ್ದ ಹಾಗೆ ನರಳುವಿಕೆಯ ಮಧ್ಯೆ ಕರುಳನಿರಿಯುವ ಚೀತ್ಕಾರವೂ ಕೇಳಿಸಿತು. ಇರುಳಿಗೇ ಮೈನವಿರು ನಿಮಿರಿದಂತಾಯಿತು! ಓಬಯ್ಯನಿಗೆ ತಾನೊಬ್ಬನೆ ಕೆಳಗಿಳಿದು ಹೋಗುವುದಕ್ಕೆ ಹೆದರಿಕೆಯಾಗಿ, ಲಾಟೀನು ಹೊತ್ತಿಸಿ, ರಾಮಯ್ಯನನ್ನೂ ಎಬ್ಬಿಸಿದನು.

ಕಿವಿಗೊಟ್ಟು ಆಲಿಸಿದ ರಾಮಯ್ಯನ ಭೀತಿಯಾಶಂಕೆಗಳು ಅವನ ಮುಖದ ಮೇಲೆ ಮುದ್ರಿತವಾದುವು. ಇಬ್ಬರೂ ಏಣಿ ಮೆಟ್ಟಲುಗಳನ್ನು ನಿಧಾನವಾಗಿ ಇಳಿದರು. ನರಳುವಿಕೆಯೂ ಚೀತ್ಕಾರಗಳೂ ನಡುನಡುವೆ 'ಅಯ್ಯೋ! ಸತ್ತೆನಲ್ಲಪ್ಪಾ! ಮುಂಡೇಗಂಡ ಹಾಳಾದನಲ್ಲಪ್ಪಾ! ಹಾಳು ಮುಂಡೇ!' ಇತ್ಯಾದಿ ಕೂಗುಗಳೂ, ಕಠೋರವಾಗಿ, ಸುಬ್ಬಮ್ಮನ ಕೊಟಡಿಯಿಂದ ಕೇಳಿ ಬಂದುವು. ಪುಟ್ಟನೂ ಅಡಿಗೆಯವನೂ ಜಗಲಿಯಲ್ಲಿ ಹೆದರಿ ಬೆವರುತ್ತ ಮಲಗಿದ್ದವರು ದಡಬಡನೆ ಎದ್ದುಬಂದರು!

ಸುಬ್ಬಮ್ಮನ ಕೊಟಡಿಯ ಬಾಗಿಲು ಹಾಕಿತ್ತು. ಎಷ್ಟು ಕೂಗಿದರೂ ತಳ್ಳಿದರೂ ತೆರೆಯಲಿಲ್ಲ. ಬೇರೆ ಕಡೆಯಿಂದ ಹೋಗಿ ನೋಡಿದಾಗ, ಅದಕ್ಕಿದ್ದ ಒಂದೇ ಒಂದು ಚಿಕ್ಕ ಕಿಟಕಿಯೂ ಕೂಡ ಮುಚ್ಚಿತ್ತು. ನರಳಾಟವೂ ಚೀತ್ಕಾರಗಳೂ ಶಾಪಗಳೂ ಭಯಾನಕವಾಗಿ ಒಳಗಣಿಂದ ಕೇಳಿ ಬರುತ್ತಿದ್ದುವು. ಅನಿರ್ದಿಷ್ಟವಾದ ಅಪಾಯಭಾವನೆ ಇಮ್ಮಡಿ ಭಯಂಕರವಾಗುತ್ತದೆ. ಹೊರಗಿದ್ದವರು ಕತ್ತಿಮೊನೆಗಳಮೇಲೆ ನಿಂತಂತಿದ್ದರು.

ಓಬಯ್ಯ ಓಡಿಹೋಗಿ ಒಂದು ಕೊಡಲಿಯನ್ನು ತಂದು ದಢಾರ್ ದಢಾರ್ ದಢಾರನೆ ಬಾಗಿಲನ್ನು ಒಡೆಯತೊಡಗಿದನು. ಐದೇ ನಿಮಿಷಗಳಲ್ಲಿ ಆ ದಪ್ಪನೆಯ ಬಾಗಿಲು ಬಿರುಕು ಬಿಡತೊಡಗಿ, ಕೋಣೆಯೊಳಗಿದ್ದ ದೀಪದ ಬೆಳಕು ಕೆಂಪಗೆ ಕಾದ ಲೋಹದ ರೇಖೆಯಂತೆ ಗೋಚರಿಸಿತು. ಒಂದೇಟು! ಇನ್ನೊಂದು! ಮತ್ತೊಂದು! ಮಗುದೊಂದು! ಬಾಗಿಲು ಬಿರಿಯಿತು. ಕೋಣೆಯ ಬೆಳಕು ಪ್ರವಾಹದಂತೆ ಹೊರ ನುಗ್ಗಿತು, ಹೊರಗಿದ್ದವರು ಒಳನುಗ್ಗಿದರು.

ನುಗ್ಗಿ ನೋಡಿದೊಡನೆಯೆ ರಾಮಯ್ಯ 'ಅಯ್ಯೋ ಓಬಯ್ಯ!' ಎಂದು ಚೀತ್ಕರಿಸಿ ಹಿಂಜರಿದು ಗರಬಡಿದಂತೆ ನಿಂತನು. ಅಷ್ಟು ಬೀಭತ್ಸಕರವಾಗಿತ್ತು ಆ ದೃಶ್ಯ!

ದುರ್ಬಲ ದೇಹಿಯೂ ಮನಸ್ಕನೂ ಆಗಿದ್ದ ರಾಮಯ್ಯನಿಗೆ ಮಿದಳು ಕದಡಿದಂತಾಯಿತು. ರಕ್ತಸ್ರಾವ, ಕೆಂಬಣ್ಣವಾಗಿದ್ದ ಮೃತಶಿಶುವಿನ ಕಳೇಬರ, ವಾಕರಿಕೆ ಬರುವಂತಹ ದುರ್ವಾಸನೆ, ಹೆಂಗಸಿನ ಅಸ್ತವ್ಯಸ್ತ ಸ್ಥಿತಿ, ರೋದನ, ಚೀತ್ಕಾರ, ನರಳುವಿಕೆ, ಶಪಿಸುವಿಕೆ—ಒಂದೊಂದೂ ಎಲ್ಲವೂ ತಲೆಯಲ್ಲಿ ತಾಂಡವವಾಡತೊಡಗಿ, ಅವನಿಗೆ ದಿಗ್ಭ್ರಾಂತಿ ಹಿಡಿದಂತಾಗಿ, ಅಲ್ಲಿ ನಿಲ್ಲಲಾರದೆ ಜಗಲಿಗೆ ತತ್ತರಿಸುತ್ತ ಹೋದನು. ಕತ್ತಲೆಯಲ್ಲಿ ಅಲ್ಲೊಂದು ಮುಂಡಿಗೆಗೆ ಒರಗಿ ನಿಂತನು. ಸುಬ್ಬಮ್ಮನ ಕೂಗಾಟದ ಮಧ್ಯೆ ಮಧ್ಯೆ ಓಬಯ್ಯನ ಮಾತುಗಳು, ರಾಮಯ್ಯನ ಮನಸ್ಸಿನ ದೂರದ ದಿಗಂತದಲ್ಲಿ ಎಂಬಂತೆ, ಮಂಜಾಗಿ ಕೇಳಿಬರುತ್ತಿದ್ದುವು.

ಸುಬ್ಬಮ್ಮನ ಶಾಪಗಳನ್ನೂ ಓಬಯ್ಯನ ಮಾತುಗಳನ್ನೂ ಆಲಿಸುತ್ತ ನಿಂತಿದ್ದ ರಾಮಯ್ಯನ ಮನಸ್ಸಿಗೆ, ಸೇರೆಗಾರರು ಆಳುಗಳೊಡನೆ ಓಡಿಹೋದುದಕ್ಕೆ ಕಾರಣ ಗೊತ್ತಾಗಿ, ಎದೆಗೆ ಶೂಲವಿರಿದಂತಾಯಿತು. ಮನೆತನದ ಕೀರ್ತಿ ಮಣ್ಣಾಯಿತೆಂದುಕೊಂಡನು. ಬಂದೊದಗುವ ಅವಮಾನದ ಮುಂದೆ ಬದುಕಿದ್ದರೂ ಸತ್ತಂತೆ ಎಂದು ತೋರಿತು. ಬಹುಕಾಲದಿಂದಲೂ ಮನಸ್ಸಿನಲ್ಲಿ ಇಣಿಕಿ ಇಣಿಕಿ ಹೊಂಚಿಹೋಗುತ್ತಿದ್ದ ಆತ್ಮಹತ್ಯೆಯ ಪಿಶಾಚ ಸಾಕಾರವಾಗಿ ಅವನೆದುರು ನಿಂತು ಆಹ್ವಾನಿಸಿತು. ಬಾಳಿನ ಹೊರೆ ತನ್ನ ಬೆನ್ನುಮೂಳೆಯ ಬಲಕ್ಕೆ ಮೀರಿ

ದ್ದಂತೆ ತೋರಿತು. ಜೀವನದ ಜಟಿಲ ಸಮಸ್ಯೆ ತನ್ನಿಂದ ಬಿಡಿಸಲಸಾಧ್ಯವಾಗಿ ತೋರಿತು. ಸಾವು ಬಿಡುಗಡೆಯ ಬೀಡಾಗಿ ತೋರಿತು. ಕತ್ತಲೆಯಲ್ಲಿಯೆ ಉಪ್ಪರಿಗೆಗೆ ಹೋಗಿ, ಒಂದು ಶೀಶೆಯನ್ನು ಹುಡುಕಿ ತೆಗೆದು, ಹಿಂದೆ ಅನೇಕಸಾರಿ ಕುಡಿಯಲು ಯತ್ನಿಸಿ ಕುಡಿಯಲಾರದೆ ಹಿಂಜರಿದುಬಿಟ್ಟಿದ್ದುದನ್ನು ಸಂಪೂರ್ಣ ವಾಗಿ ಗಂಟಲಿಗೆ ಹೊಯ್ದುಕೊಂಡು, ಬಾಗಿಲಿಗೆ ಅಗಣಿ ಹಾಕಿ, ಕಂಬಳಿ ಸುತ್ತಿ ಕೊಂಡು ನೆಲದಮೇಲೆ ಮೂಲೆಯಲ್ಲಿ ಬಿದ್ದುಕೊಂಡನು.

## ೬೦

## ಮೃತ್ಯುಮೂರ್ತಿಯ ಮುಂದೆ

ರಾತ್ರಿ ಸುಮಾರು ನಾಲ್ಕೂವರೆ ಗಂಟೆಯಲ್ಲಿ ಬೇಲರ ಸಿದ್ದನೊಡನೆ ಕೆಳಕಾನೂರಿಗೆ ಬಂದ ಪುಟ್ಟ ಹೂವಯ್ಯನ ಕೊಟಡಿಯ ಕಿಟಕಿಯಲ್ಲಿ 'ಅಯ್ಯಾ, ಅಯ್ಯಾ, ಅಯ್ಯಾ' ಎಂದು ಒಂದೇ ಉಸಿರಿನಲ್ಲಿ ಕೂಗಿ ಕರೆದನು. ಹೂವಯ್ಯ ಗಾಬರಿಯಿಂದೆದ್ದು ಹೊರಗೆ ಬಂದು ಕೇಳಲು ಏದುತ್ತ, ತೊದಲುತ್ತ, ಭಯದಿಂದ ಕಂಪಿಸುತ್ತ, ಅಳುತ್ತ "ನೀವು ಕೂಡ್ಲೆ ಬರಬೇಕಂತೆ!" ಎಂದನು.

"ಯಾರು ಹೇಳಿದರೋ?"

"ಓಬೇಗೌಡ್ರು."

"ಯಾಕೆ?"

ಪುಟ್ಟ ಪ್ರತ್ಯುತ್ತರಕ್ಕೆ ಬದಲಾಗಿ, ಬಿಕ್ಕಿ ಬಿಕ್ಕಿ ಅಳುತ್ತಾ "ದಮ್ಮಯ್ಯ, ಬನ್ನಿ! ಅಷ್ಟು ಉಪಕಾರ ಮಾಡಿ!" ಎಂದನು.

"ಏನೋ ಅದು ಸಿದ್ದಾ?" ಎಂದು ಕೇಳಿದನು ಹೂವಯ್ಯ.

ಲಾಟೀನು ಹಿಡಿದು, ಚಳಿಗೆ ಕಂಬಳಿ ಹೊದೆದು ನಿಂತಿದ್ದ ಸಿದ್ದ "ಏನ್ರೋ ಅಯ್ಯಾ? ನಂಗೊತ್ತಿಲ್ಲ. ನಾ ಮನ್ಗಿದ್ದೆ. ಬಂದು ಕರೆದ್ರು, 'ಕೆಳಕಾನೂರಿಗೆ ಬಾ' ಅಂದ್ರು ಬಂದೆ" ಎಂದನು.

ಹೂವಯ್ಯ ಏನೋ ಪ್ರಮಾದ ನಡೆದಿರಬೇಕೆಂದು ಊಹಿಸಿ, ಪುಟ್ಟಣ್ಣನನ್ನೂ ಸೇರೆಗಾರ ಸೋಮಯ್ಯಸೆಟ್ಟರನ್ನೂ ಕೂಡಿಕೊಂಡು ನೆಟ್ಟಗೆ ಕಾನೂರಿಗೆ ನಡೆದನು.

ಕಂಡೊಡನೆಯೆ ಹೂವಯ್ಯನೊಬ್ಬನನ್ನೆ ಎಕ್ಕಟಿ ಕರೆದು ಓಬಯ್ಯ ನಡೆದುದೆಲ್ಲ ವನ್ನೂ ಸಂಕ್ಷೇಪವಾಗಿ ಹೇಳಿದನು. ಕೋಣೆಗೆ ಹೋಗಿ ನೋಡಿದಾಗ ಸುಬ್ಬಮ್ಮನ ಶವ ಮಾತ್ರ ನೀರವವಾಗಿ ಬಿದ್ದಿತ್ತು. ಮನೆತನದ ಹೆಸರು ಕೆಡ

ಬಾರದೆಂದು ಓಬಯ್ಯ ಕೂಸಿನ ಕಳೇಬರವನ್ನೂ ಬಲಾತ್ಕಾರದ ಪ್ರಸವದ ಉಳಿದ ಚಿಹ್ನೆಗಳನ್ನೂ ಇಲ್ಲದಂತೆ ಮಾಡಿಬಿಟ್ಟಿದ್ದನು.

"ರಾಮಯ್ಯ ಎಲ್ಲಿ?" ಎಂದನು ಹೂವಯ್ಯ.

"ಉಪ್ಪರಿಗೆಮೇಲೆ ಕೋಣೆ ಬಾಗಿಲು ಬಲವಾಗಿ ಹಾಕಿಕೊಂಡು ಮಲಗಿ ಬಿಟ್ಟಿದ್ದಾರೆ. ಎಷ್ಟು ಕರೆದರೂ ಮಾತೇ ಇಲ್ಲ."

ಓಬಯ್ಯನ ಮಾತು ಕೇಳಿ, ನಿಟ್ಟುಸಿರೆಳೆದು, ಕಣ್ಣರಳಿಸಿ, ಹೂವಯ್ಯ ಉಪ್ಪರಿಗೆಗೆ ಓಡಿದನು. ಇತರರೂ ಹಿಂಬಾಲಿಸಿದರು. ಆತನಿಗೆ ಇರುಳು ಕನಸಿನಲ್ಲಿ ಕಂಡದ್ದು ನಿಜವಾಗುವಂತೆ ಭಾಸವಾಗಿತ್ತು.

ಕೂಗಿದರೂ ಕರೆದರೂ ದಬ್ಬಿದರೂ ಬಾಗಿಲು ತೆರೆಯಲಿಲ್ಲ. ಕಿಟಕಿಯಲ್ಲಿ ದೀಪವನ್ನು ಹಿಡಿದು ನೋಡಲು ರಾಮಯ್ಯ ಕಂಬಳಿ ಹೊದೆದು ಮಲಗಿದ್ದುದು ಕಾಣಬರುತ್ತಿತ್ತು.... ನೆಲ್ಲುಹಳ್ಳಿ, ಮುತ್ತಳ್ಳಿ, ಸೀತೆಮನೆ, ತೀರ್ಥಹಳ್ಳಿಗಳಿಗೆ ಆಳುಗಳನ್ನಟ್ಟಿದರು.

ನಕ್ಷತ್ರಗಳು ಬಾಡಿ, ತಂಗಾಳಿ ಬೀಸಿ, ಕಾಜಾಣದ ಇನಿಗಾನದೊಂದಿಗೆ ಬೆಳಕು ಹರಿಯಿತು. ಸ್ವಲ್ಪ ಸ್ವಲ್ಪವಾಗಿ ವಸ್ತುಗಳ ರೂಪ ಸ್ಪಷ್ಟವಾಗತೊಡಗಿ, ಲಾಟೀನಿನ ಬೆಳಕು ಸಪ್ಪೆಯಾಯಿತು. ಚೆನ್ನಾಗಿ ಬೆಳಕು ಬಿಟ್ಟಮೇಲೆ ಕಿಟಕಿಯಿಂದ ಉದ್ದವಾದ ಗಳುವನ್ನು ಹಾಕಿ ಸಾಹಸದಿಂದ ಅಗಣೆಯನ್ನು ತೆಗೆದು ನೋಡಲಾಗಿ ರಾಮಯ್ಯ ಕಂಬಳಿ ಸುತ್ತಿದ್ದ ಹೆಣವಾಗಿದ್ದನು.

"ಅಯ್ಯೋ, ತಮ್ಮಾ, ಏನು ಮಾಡಿಬಿಟ್ಟೆ! ಏಕೆ ದುಡುಕಿಬಿಟ್ಟೆ!" ಎಂದು ರೋದಿಸುತ್ತ ಹೂವಯ್ಯ ಶವವನ್ನಪ್ಪಿಕೊಂಡು ಹುಚ್ಚು ಹಿಡಿದವನಂತೆ ವರ್ತಿಸ ತೊಡಗಿದನು. ಸುಬ್ಬಮ್ಮನ ಹೆಣವನ್ನು ಕಂಡಾಗ ಅವನಿಗೆ ಉಂಟಾದ ಶೋಕ ಸಂಯಮಕ್ಕೆ ಒಳಗಾಗುವಂತಿತ್ತು. ಆದರೆ ಇಲ್ಲಿ ಸಹೋದರನ ಶವವನ್ನು ಕಂಡಾಗ ಅವನೆದೆಯನ್ನು ಗಾಣಕ್ಕೆ ಕೊಟ್ಟಂತಾಗಿತ್ತು.

* * * * *

ಒಂಬತ್ತು ಗಂಟೆ ಹೊಡೆಯುವಷ್ಟರಲ್ಲಿ ಬಂಧು ಬಾಂಧವರೆಲ್ಲರೂ ನೆರೆದರು. ಪೋಲೀಸು, ಬಹಿರಂಗ ವಿಚಾರಣೆ, ಡಾಕ್ಟರ ಶವಪರೀಕ್ಷೆ ಮುಂತಾದ ಕ್ಲೇಶಾವಮಾನಗಳಿಂದ ಪಾರಾಗಲು ಸಿಂಗಪ್ಪಗೌಡರು, ಪೆದ್ದೇಗೌಡರು, ಚಿನ್ನಯ್ಯ, ಆ ಗ್ರಾಮದ ಪಟೇಲರು ಮೊದಲಾದ ಎಲ್ಲರೂ ಸೇರಿ, ಸರಕಾರದ ಕಾನೂನಿನ ಕಣ್ಣಿಗೆ ಒಪ್ಪುವ ಹಾಗೆ ವಿಷಯಗಳನ್ನು ವಿರಚಿಸಿ, ಸಂಘಟಿಸಿ, ಮುಂದಿನ ಕಾರ್ಯಗಳನ್ನು ಸಾಂಗವಾಗಿ ನೆರವೇರಿಸಿದರು.

ಹೂವಯ್ಯ ಅಂದಿನಿಂದ ಯಾರೊಡನೆಯೂ ಮಾತನಾಡದೆ, ನಿದ್ರಾಹಾರಗಳಿಗೂ ಮನೆಗೆ ಬಾರದೆ, ಬೆಟ್ಟಗುಡ್ಡಗಳಲ್ಲಿ ಮರುಳು ಹಿಡಿದವನ ಹಾಗೆ ಅಲೆಯತೊಡಗಿದನು. ಯಾರಾದರೂ ಸಮಾಧಾನ ಹೇಳುವುದಕ್ಕೆ ಬಂದರೆ, ಕುಳಿತಲ್ಲಿಂದ ಎದ್ದು ಬೇರೆಯ ಕಡೆಗೆ ಹೋಗುತ್ತಿದ್ದನು. ಓಬಯ್ಯ, ಪುಟ್ಟಣ್ಣ, ಸೇರೆಗಾರ ಸೋಮಯ್ಯಸೆಟ್ಟರು ಇವರು ಮೂವರೂ ಅವನಿಂದ ತುಸು ದೂರದಲ್ಲಿದ್ದುಕೊಂಡು ಕಾಯುತ್ತಾ, ಅಪಾಯ ಬರದಹಾಗೆ ನೋಡಿಕೊಳ್ಳುತ್ತಿದ್ದರು. ಮೂರನೆಯ ದಿನ ಸೇರೆಗಾರ ಸೋಮಯ್ಯಸೆಟ್ಟರು ತಮ್ಮ ಒಡೆಯ ಊಟ ನಿದ್ದೆಗಳಿಲ್ಲದೆ ಬಯಲಿನಲ್ಲಿ ಮಲಗಿ ಎದ್ದು ಕ್ಷಯಿಸುತ್ತಿರುವುದನ್ನು ನೋಡಿ ಸಹಿಸಲಾರದೆ ಅಳುತ್ತ ಹೂವಯ್ಯನ ಕಾಲುಗಳನ್ನು ಭದ್ರವಾಗಿ ಹಿಡಿದುಕೊಂಡು, ಮನೆಗೆ ಬರಬೇಕೆಂದು ಹಟಮಾಡಿದರು. ಹೂವಯ್ಯ ಮಾತಾಡಲಿಲ್ಲ; ಬಾಹ್ಯಪ್ರಜ್ಞೆಯಿದ್ದವನಂತೆ ವರ್ತಿಸಲೂ ಇಲ್ಲ. ಸೇರೆಗಾರರು ಒಡೆಯನ ಮನಸ್ಸನ್ನು ಕರಗಿಸಿ ತಿರುಗಿಸಲೋಸ್ಕರ ತಾವೂ ಅವನ ಪಕ್ಕದಲ್ಲಿರುತ್ತ ಉಪವಾಸಮಾಡಲು ಸಂಕಲ್ಪಿಸಿದರು. ಆದರೆ ಸಿಂಗಪ್ಪಗೌಡರು ಅವರನ್ನು ಗದರಿಸಿ ಹಾಗೆ ಮಾಡಗೊಡಲಿಲ್ಲ.

ಐದನೆಯ ದಿನ ಸೀತೆ, ವಾಸು ಪುಟ್ಟಮ್ಮರೊಡಗೂಡಿ ಹೋಗಿ, ಹೂವಯ್ಯನನ್ನು ಕಾನುಬೈಲಿನ ನೆತ್ತಿಯ ಬಂಡೆಯಮೇಲೆ ಕಂಡಳು. ಸೀತೆ ಅದುವರೆಗೂ ಕಾನೂರಿಗೆ ಬಂದಿರಲಿಲ್ಲ. ಕಾನೂರಿನಲ್ಲಾದ ಮರಣಗಳ ವಿಷಯದಲ್ಲಿ ಆಕೆ ಒಂದು ರೀತಿಯ ಅವಜ್ಞೆಯಿಂದಿದ್ದಳು. ಆದರೆ ಹೂವಯ್ಯಬಾವನ ದುಃಖವನ್ನೂ ಉಪವಾಸವನ್ನೂ ಅಪಾಯಸ್ಥಿತಿಯನ್ನೂ ಕೇಳಿ ಕಾತರಳಾಗಿ ಕಾನೂರಿಗೆ ಓಡಿಬಂದಿದ್ದಳು.

ಅದುವರೆಗೆ ಯಾರೊಡನೆಯೂ ಮಾತಾಡದಿದ್ದ ಹೂವಯ್ಯ "ನಾಳೆ ಬೆಳಿಗ್ಗೆ ಬರುತ್ತೇನೆ" ಎಂದು ಅವರೊಡನೆ ಹೇಳಿಕಳುಹಿಸಿದನಂತೆ!

ಹೂವಯ್ಯ ಮನೆಗೇನೊ ಬಂದನು. ಆದರೆ ಮೊದಲಿನ ಹೂವಯ್ಯನಾಗಿರಲಿಲ್ಲ. ಸುಬ್ಬಮ್ಮನ ಮರಣವೂ, ಬಹುಕಾಲದ ಪ್ರೀತಿಯ ಸಹೋದರನ ಆತ್ಮಹತ್ಯೆಯೂ, ಐದು ದಿನಗಳ ನಿರಂತರ ತಪಸ್ಸೂ, ಗಭೀರ ಧ್ಯಾನವೂ ಆತನನ್ನು ಆತ್ಮಸಾಧನೆಯ ಮಾರ್ಗದಲ್ಲಿ ಮತ್ತಷ್ಟು ದೂರ ಕೊಂಡೊಯ್ದಿದ್ದುವು. ಆತನು ನಡೆದರೆ ಪರ್ವತವೆ ಚಲಿಸಿದಂತಾಗುತಿತ್ತು; ನುಡಿದರೆ ಸಮುದ್ರವೆ ನುಡಿದಂತಾಗುತಿತ್ತು; ನೋಡಿದರೆ ನೀಲಾಕಾಶವೆ ನೋಡಿದಂತಾಗುತಿತ್ತು!

ಕರ್ಮಕ್ರಿಯೆಗಳೆಲ್ಲ ಪೂರೈಸಿದ ಒಂದು ತಿಂಗಳಲ್ಲಿ, ಒಡೆದು ಪಾಲಾಗಿದ್ದ ಕಾನೂರಿನ ಆಸ್ತಿ ಮತ್ತೆ ಒಂದಾಯಿತು. ಹೂವಯ್ಯ ಕೆಳಕಾನೂರಿನಿಂದ ಕಾನೂರಿಗೆ ಮತ್ತೆ ತನ್ನ ನಿವಾಸವನ್ನು ಸಾಗಿಸಬೇಕಾಗಿ ಬಂದಿತು.

ಸೀತೆಯೂ ಅನೇಕರಿಗೆ ಆಶ್ಚರ್ಯವಾಗುವಂತೆ ತನ್ನ ಎರಡನೆ ಜೀವವಾಗಿದ್ದ ಲಕ್ಷ್ಮಿಯೊಡಗೂಡಿ ಕಾನೂರಿನಲ್ಲಿಯೆ ನೆಲಸಿದಳು. ಆಕೆಯ ಮತ್ತು ಹೂವಯ್ಯನ ಬಾಳು, ಒಡಲ ಸೋಂಕಿನ ಗೊಡವೆಯಿಲ್ಲದ ಪರಸ್ಪರ ಪ್ರೇಮದ ಎರಡು ಆತ್ಮಗಳ ಪ್ರೋಜ್ವಲ ಜೀವನವಾಗಿತ್ತು. ಅವರ ಪ್ರೀತಿಗೆ ರೂಢಿಯ ಕಟ್ಟುನಿಟ್ಟಿನ ಶಾಸ್ತ್ರಕ್ರಮದ ಅವಲಂಬನೆ ಅನಾವಶ್ಯಕವಾಗಿತ್ತು; ಅದಕ್ಕೆ ಸಂಪರ್ಕದ ಸುಖಕ್ಕಿಂತಲೂ ಸಾನ್ನಿಧ್ಯದ ಪವಿತ್ರ ಮಧುರತರವಾದ ಆನಂದವೆ ಹೆಚ್ಚು ಪ್ರಿಯವಾಗಿತ್ತು; ಅದು ಶುದ್ಧವಾಗಿ ಆತ್ಮಕ್ಕೆ ಸಂಬಂಧಪಟ್ಟು ಅತೀಂದ್ರಿಯವಾಗಿತ್ತು. ಆ ಹೊನ್ನಿನ ಗಟ್ಟಿಯಲ್ಲಿ ಎಲ್ಲಿಯಾದರೂ ಒಂದು ವೇಳೆ ಕಾಳಿಕೆಯ ರೇಖೆ ಸುಳಿದುದಾದರೆ, ಒಡನೆಯೆ ಇಬ್ಬರೂ ಪ್ರಯತ್ನದಿಂದ ಅದನ್ನು ನಿವಾರಿಸುತ್ತಿದ್ದರು: ಉರಿಯುವ ಬತ್ತಿಯ ತುದಿಯಲ್ಲಿ ಕರಿಕಟ್ಟಿಕೊಂಡರೆ ಅದನ್ನು ತೊಡೆದು ಹಾಕಿ ದೀಪದ ಕುಡಿ ಮತ್ತಷ್ಟು ಉಜ್ವಲವಾಗಿ ತೊಳಗಿ ಬೆಳಗಲೆಸಗುವಂತೆ.

## ೮೧
## ಹತ್ತು ವರ್ಷಗಳಾದಮೇಲೆ

ಮಲೆನಾಡಿಗೆ ನವಜೀವನ ಕಾಲಿಟ್ಟಿತು. ಅದಕ್ಕೆ ಮುಖ್ಯಕಾರಣ ಕಾಲಮಹಿಮೆಯಾಗಿದ್ದರೂ ಕೂಡ ಕಾನೂರು, ಮುತ್ತಳ್ಳಿ, ಸೀತೆಮನೆ ಮತ್ತು ಸುತ್ತಣ ಹಳ್ಳಿಗಳಲ್ಲಿ ಹೂವಯ್ಯನ ಪ್ರಭಾವವೂ ಗಣ್ಯವಾಗಿತ್ತು. ಮಹಿಳೆಯರಲ್ಲಿ ತಪಸ್ವಿನಿಯ ಸ್ಥಾನಮಾನ ಗೌರವಗಳಿಗೆ ಪಾತ್ರಳಾಗಿದ್ದ ಸೀತೆಯ ಪ್ರಭಾವವೂ ಸದ್ದುಗದ್ದಲವಿಲ್ಲದೆ ಕೆಲಸಮಾಡಿತ್ತು !

ಕಾನೂರು ಮುತ್ತಳ್ಳಿಗಳಿಗೆ ಮಧ್ಯೆ, ರಸ್ತೆಗೆ ಸಮೀಪವಾಗಿ, ಕಾಡಿನ ನಡುವೆ ಇದ್ದ ಕಳ್ಳಂಗಡಿ ಕುಸಿದುಬಿದ್ದು, ಒರಲೆ ಹಿಡಿದು, ಪಾಳಾಗಿತ್ತು. ನಾಲ್ಕಾರು ಗ್ರಾಮಗಳಿಗೆ ಅನುಕೂಲವಾಗುವಂತೆ ಒಂದು ಆಸ್ಪತ್ರೆ, ಸ್ಕೂಲು, ಪೋಸ್ಟಾಫೀಸು, ಅಂಗಡಿಗಳು ಮೂಡಿ ವರ್ಧಿಸುತ್ತಿದ್ದುವು. ಹಿಂದೆ ಬೈಸಿಕಲ್ಲಿನ ಪರಿಚಯಕ್ಕೂ ಪರದೇಶಿಯಾಗಿದ್ದ ಆ ರಸ್ತೆ ಮೋಟಾರುಕಾರು, ಬಸ್ಸುಗಳ ಕೋಟಲೆಯಿಂದ ಬೇಸರಗೊಂಡಿತ್ತು; ಸ್ವದೇಶಿ ಖಾದಿಗಳ ಪ್ರಚಾರವೂ ತಕ್ಕಮಟ್ಟಿಗೆ ನಡೆದಿತ್ತು. ಗಾಂಧಿ ಟೋಪಿಗಳೂ ಆಗಾಗ ಬಂದು ಉಪನ್ಯಾಸ ಕೊಡುತ್ತಿದ್ದುವು. ಅಕ್ಷರ ಬಲ್ಲವರು ಪತ್ರಿಕೆಗಳನ್ನು ಓದುವ ಅಭ್ಯಾಸಮಾಡಿ, ವಿಶಾಲ ಪ್ರಪಂಚದ ವಿಚಾರಗಳನ್ನು ಕುರಿತು ಮಾತಾಡುತ್ತಿದ್ದರು. ಮಾರಿಯ ಹರಕೆ, ದೆವ್ವದ ಪೂಜೆ ಮೊದ

ಲಾದ ಮೂಢಾಚಾರಗಳಿಗೆ ಬದಲಾಗಿ ಉತ್ಕೃಷ್ಟವಾದ ಮತವಿಧಾನಗಳು ಆಚರಣೆಗೆ ಬರುತ್ತಿದ್ದುವು. ಕಾಡಿಗೆ ನಾಗರಿಕತೆ ಕಾಲಿಟ್ಟಿತ್ತು.

ಕಾನೂರಿನಲ್ಲಿ ಹೂವಯ್ಯನ ಪ್ರಯತ್ನದಿಂದ ಬೇಲರೂ ಸೇರೆಗಾರ ಸೋಮಯ್ಯ ಸೆಟ್ಟರೂ (ಅವರು ಕನ್ನಡಜಿಲ್ಲೆಗೆ ಹೋಗಿ ಮದುವೆ ಮಾಡಿಕೊಂಡು ಬಂದು ಮೂರು ವರ್ಷಗಳಾಗಿತ್ತು.) ಗಟ್ಟದವರೂ ಕುರಿಮಂದೆಯಂತೆ ಬಿಡಾರಗಳನ್ನು ಕಟ್ಟಿಕೊಂಡು ಹಂದಿಗಳಂತೆ ವಾಸಮಾಡುವುದಕ್ಕೆ ಬದಲಾಗಿ ಸುವ್ಯವಸ್ಥಿತವಾದ ಸಣ್ಣ ಸಣ್ಣ ಮನೆಗಳಲ್ಲಿ ಆದಷ್ಟು ಚೊಕ್ಕಟವಾಗಿ ಬದುಕುತ್ತಿದ್ದರು. ಕಾಯಿಲೆ ಬಂದರೆ ಜೋಯಿಸರಲ್ಲಿಗೆ ಹೋಗುವುದಕ್ಕೆ ಬದಲಾಗಿ ಆಸ್ಪತ್ರೆಗೆ ಹೋಗುವುದನ್ನು ಕಲಿತಿದ್ದರು. ನಿಂಗನ ಮಗ ಪುಟ್ಟ ಸೀತೆಯ ಪ್ರಯತ್ನದಿಂದ ಅಕ್ಷರಸ್ಥನಾಗಿ, ಮದುವೆಯಾಗಿ, ಕೆಳಕಾನೂರಿನಲ್ಲಿ ಒಕ್ಕಲಾಗಿದ್ದನು. ಈಗ ಅವನನ್ನು ಬೇಟೆಗಾರ ಪುಟ್ಟಣ್ಣನಿಂದ ಬೇರ್ಪಡಿಸುವುದಕ್ಕಾಗಿ 'ಸಣ್ಣ ಪುಟ್ಟಣ್ಣ' ಎಂದು ಕರೆಯುತ್ತಿದ್ದರು. ಕಾನೂರು ಮನೆಯೂ ಕೂಡ ಅಲ್ಲಲ್ಲಿ ಕಿತ್ತು ಹೊಸದಾಗಿ ಕಟ್ಟಲ್ಪಟ್ಟು ನವೀನತೆಗೆ ಯೋಗ್ಯವಾದ ಆಕಾರದಿಂದ ಮೆರೆಯುತ್ತಿತ್ತು. ಆದರೆ ಈಗ ಹೂವಯ್ಯ ಅಲ್ಲಿ ವಾಸಿಸುತ್ತಿರಲಿಲ್ಲ.

ಹಿಂದೆ ಹಳೆಪೈಕದ ತಿಮ್ಮ ಚಂದ್ರಯ್ಯಗೌಡರಿಗೂ ಸೇರೆಗಾರ ರಂಗಪ್ಪಸೆಟ್ಟರಿಗೂ ಕಳ್ಳು ಕಾಯಿಸಿಕೊಡುತ್ತಿದ್ದ ಎತ್ತರವಾದ ಕಾನುಬೈಲಿನಲ್ಲಿ ಒಂದು ಸುಂದರ ಮಂದಿರವನ್ನು ನಿರ್ಮಿಸಿ, ಅಲ್ಲಿ ಕರ್ಮಯೋಗಿಯಾಗಿ ತಪಸ್ವಿಯಾಗಿ ವಾಸಿಸು ತ್ತಿದ್ದನು. ಓಬಯ್ಯ ಸಂಸಾರದ ಗೊಡವೆಗೆ ಹೋಗದೆ ಭಕ್ತಿಯಿಂದ ಹೂವಯ್ಯನ ಕಿಂಕರನಾಗಿ ಸೇವೆ ಮಾಡಿಕೊಂಡಿದ್ದನು. ಕೆಲವರು ಅವನಿಗೆ ದೊರೆಯುತ್ತಿದ್ದ ಗೌರವವನ್ನು ಕಂಡು ಕರುಬಿ 'ಮುಖವೆಲ್ಲ ಮೈಲಿಕಜ್ಜಿ! ಒಕ್ಕಣ್ಣು! ಆ ವಿಕಾರಕ್ಕೆ ಯಾರುತಾನೆ ಹೆಣ್ಣು ಕೊಡ್ತಾರೆ? ಹೆಣ್ಣು ಸಿಕ್ಕದಿದ್ದುದಕ್ಕೆ ವೇಷ ಹಾಕಿಕೊಂಡು ಬೆಕ್ಕಿನ ಸನ್ಯಾಸ ತೆಗೆದುಕೊಂಡಿದ್ದಾನೆ!' ಎಂದು ಆಡಿಕೊಳ್ಳು ತ್ತಿದ್ದರು. ಪುಟ್ಟಣ್ಣ ಮೊದಲಿನಂತೆಯೆ ಬೇಟೆಗಾರನಾಗಿ, ವಿದ್ಯಾಭ್ಯಾಸವನ್ನು ಪೂರೈಸಿ ಬಂದು ಸೀತೆಯ ತಂಗಿ ಲಕ್ಷ್ಮಿಯನ್ನು ಮದುವೆಯಾಗಿ ಮೆರೆಯುತ್ತಿದ್ದ ಕಾನೂರು ವಾಸಪ್ಪಗೌಡರಿಗೆ ಬೇಟೆಯಲ್ಲಿ ಮುಖ್ಯವಾಗಿಯೂ ಬೇರೆ ಕೆಲಸಗಳಲ್ಲಿ ಗೌಣವಾಗಿಯೂ ಕಾರ್ಯದರ್ಶಿಯಾಗಿದ್ದನು! ಅವನೂ ಹೂವಯ್ಯನ ಜೊತೆ ಯಲ್ಲಿ ಓಬಯ್ಯನಂತೆ ಇರಬೇಕೆಂದು ಪ್ರಯತ್ನಿಸಿದ್ದನು. ಆದರೆ ಬೇಟೆಯ ಹುಚ್ಚಿನಿಂದ ಪಾರಾಗಲಾರದೆ ಗಿರಿನೆತ್ತಿಯ ಮಂದಿರದಿಂದ ಗಿರಿಪಾದದ ಮನೆಗೆ ಮೆಲ್ಲಗೆ ಜಾರಿಬಿಟ್ಟಿದ್ದನು! ಶಿಖರದ ಮಂದಿರದ ಚಳಿಗಾಳಿಗಿಂತಲೂ ಕಣಿವೆಯ ಮನೆಯ ಬೆಚ್ಚನೆಯ ಮಡಿಲೆ ಅವನಿಗೆ ಸುಖದಾಯಕವಾಗಿತ್ತು. ಅವನ ಆ

ವರ್ಗಾವರ್ಗಿಯನ್ನು ಕುರಿತು ಎಲ್ಲರೂ ಹಾಸ್ಯಮಾಡಿ ನಗುತ್ತಿದ್ದರು. ಸೀತೆ ಕೆಮ್ಮಿನ ನೆವದಿಂದ ಕೆಳಗಿಳಿದವನು ಮೇಲಕ್ಕೆ ಹೋಗದೆ ಇತರರಿಂದ ಅಲ್ಲಿದ್ದ ಬಟ್ಟೆಬರೆಗಳನ್ನು ತರಿಸಿಕೊಂಡಿದ್ದನಂತೆ! ಕಾನೂರಿನ ಹೊಸ ಸೊಸೆ ಲಕ್ಷ್ಮೀದೇವಿಯಂತೂ ಸಮಯ ದೊರೆತಾಗಲೆಲ್ಲ ಪುಟ್ಟಣ್ಣನನ್ನು ಹಾಸ್ಯಮಾಡಿ ಜೀವ ಹಿಂಡುತ್ತಿದ್ದಳು. ಅದಕ್ಕೆ ಬದಲಾಗಿ ಅವನು ರಾಗವಾಗಿ "ಸಾಕು ಸುಮ್ಮನಿರಿ ಅಮ್ಮಾ; ನಾನೆಲ್ಲ ಬಲ್ಲೆ. 'ನಾನೂ ಅಕ್ಕಯ್ಯನ ಹಾಂಗೆ ಇರ್ತೀನಿ, ಇರ್ತೀನಿ' ಅಂತ ಹೇಳ್ತಿದ್ದು, ಕಡೆಗೆ ಹೇಳದೆ ಕೇಳದೆ ವಾಸಪ್ಪಗೌಡರ ಸಂಗಡ ಹಸೇಮೇಲೆ ಕೂತಿದ್ದು ಯಾರು? ನೀವೋ? ನಾನೋ?" ಎಂದು ಮೊದಲಾಗಿ ಅಣಕಿಸುತ್ತಿದ್ದನು. ಲಕ್ಷ್ಮಿಗೆ ಅಂತಹ ಮಾತುಗಳನ್ನು ಕೇಳುವುದಕ್ಕೆ ಪ್ರಿಯವಾಗಿಯೇ ಅವನನ್ನು ಹಾಗೆ ಕೆಣಕುತ್ತಿದ್ದಳು!

* * * * *

ವೈಶಾಖ ಮಾಸದ ಒಂದು ಪೂರ್ಣಿಮಾ ರಾತ್ರಿ ಕೊನೆಗೊಂಡು ರಮಣೀಯವಾಗಿ ಪ್ರಾತಃಕಾಲವಾಗುತ್ತಿತ್ತು. ಕಾನೂರು ಮನೆಯಿಂದ ಕಾನುಬೈಲಿನ ಶಿಖರಕ್ಕೇರಿ ಸುತ್ತಿ ಸುತ್ತಿ ಹೋಗುತ್ತಿದ್ದ ಹೊಸದಾಗಿ ಮಾಡಿದ್ದ ರಸ್ತೆಯಲ್ಲಿ ಕೆಂಚಗೆ, ಎತ್ತರವಾಗಿ, ಬಲಿಷ್ಠನಾಗಿ, ಭದ್ರರೂಪಿಯಾಗಿದ್ದ ತುಪ್ಪುಳುಮೀಸೆಯ ತರುಣನೊಬ್ಬನು ಖಾದಿಯ ಬಿಳಿಯ ಪಾಯಿಜಾಮೆಯನ್ನೂ ಖಾದಿಯ ಪಂಜಾಬಿಯನ್ನೂ ಧರಿಸಿ, ಬಯಲು ಸೀಮೆಯ ತೆಳ್ಳನೆಯ ಮೆಟ್ಟುಗಳನ್ನು ಮೆಟ್ಟಿ ನುಣ್ಣಗೆ ಹೊಳೆಯುವಂತೆ ಬಾಚಿ ಬೈತಲೆ ತೆಗೆದಿದ್ದ ಕ್ರಾಪಿನಿಂದ ಶೋಭಿಸುತ್ತ ನಿರಾಯಾಸವಾಗಿ ಹಾರಿ ಹಾರಿ ನಡೆಯುತ್ತ, ಶಿಖರದಲ್ಲಿದ್ದ ಮಂದಿರದ ಕಡೆಗೆ ಸಾಗುತ್ತಿದ್ದನು. ಅವನ ಎರಡು ಪಕ್ಕಗಳಲ್ಲಿ ಇಬ್ಬರು ಸಣ್ಣ ಹುಡುಗರು ಅವನಂತೆಯೇ ಉಡುಪನ್ನೂ ಕ್ರಾಪನ್ನೂ ಧರಿಸಿ, ಕೇಕೆ ಹಾಕುತ್ತಾ ಸ್ಪರ್ಧೆಯಿಂದಲೋ ಎಂಬಂತೆ ಹಿಂಬಾಲಿಸುತ್ತಿದ್ದರು. ಒಬ್ಬ ಹುಡುಗ ಮುತ್ತಳ್ಳಿ ಚಿನ್ನಯ್ಯಗೌಡರ ಮಗ ಹನ್ನೊಂದು ವರ್ಷದ ರಮೇಶನಾಗಿದ್ದನು. ಮತ್ತೊಬ್ಬ ಅವನಿಗಿಂತಲೂ ಸ್ವಲ್ಪ ಹಿರಿಯವನಾಗಿದ್ದ ಸೀತೆಮನೆ ಸಿಂಗಪ್ಪಗೌಡರ ಮಗ ಶಂಕರಯ್ಯನಾಗಿದ್ದನು.

ರಮೇಶ ಮುಂದೆ ಹೋಗುತ್ತಿದ್ದ ತರುಣನ ಕೈಯನ್ನು ಓಡಿಹೋಗಿ ಹಿಡಿದುಕೊಂಡು "ಸಣ್ಣಮಾವ, ನಾನೇ ಗೆದ್ದೆ! ಶಂಕರ ಹಿಂದೆ ಬಿದ್ದ!" ಎಂದು ಬಿಳಿಯ ಹಲ್ಲುಗಳೆಲ್ಲ ಮುದ್ದಾಗಿ ಶೋಭಿಸುವಂತೆ ಕೋಮಲವಾದ ಕೆಂದುಟಿಗಳನ್ನು ತೆರೆದು ನಕ್ಕನು.

ಶಂಕರನೂ ಹಿಂದಿನಿಂದ "ನನ್ನ ಕಾಲಿಗೆ ಮುಳ್ಳು ಹೊಕ್ಕಿತು. ನಾನೇನು ಮಾಡಲಿ!" ಎಂದನು.

ಅಷ್ಟರಲ್ಲಿ ಹಿಂದಿನಿಂದ ಚಿನ್ನಯ್ಯನ ಜೊತೆಯಾಗಿ ಮೆಲ್ಲಗೆ ಬರುತ್ತಿದ್ದ ಕೂದಲು ಹಣ್ಣಾಗತೊಡಗಿದ್ದ ಸಿಂಗಪ್ಪಗೌಡರು "ಓ ವಾಸಪ್ಪಾ" ಎಂದು ಓರೆಗಣ್ಣಿನಿಂದ ನೋಡುತ್ತಾ ಕಂಚಿನ ಧ್ವನಿಯಿಂದ ಕರೆದರು.

ಮುಂದೆ ಹೋಗುತ್ತಿದ್ದ ತರುಣನೂ ಹುಡುಗರೂ ತಿರುಗಿ ನಿಂತು ಬೆಟ್ಟದ ಇಳಿಜಾರಿನ ಕಡೆಗೆ ನೋಡಿದರು.

ಸಿಂಗಪ್ಪಗೌಡರು ಮತ್ತೆ ಗಟ್ಟಿಯಾಗಿ ಕಂಚಿನ ಧ್ವನಿಯಿಂದಲೇ "ನಿಲ್ಲು ಮಾರಾಯಾ; ನಾವೂ ಬರ್ತೀವಿ, ಏನು ಹೊಸ ಹೆಣ್ಣು ಮದುವೆಯಾದ ಹುಮ್ಮಸ್ಸಿನಲ್ಲಿ ನಿನಗೆ ಗುಡ್ಡ ಹತ್ತುವುದೆಂದರೆ ಕುಶಾಲಾಗಿದೆ!" ಎಂದು ಮುಂದುವರಿಯತೊಡಗಿದರು.

ಸಿಂಗಪ್ಪಗೌಡರ ಕರೆಯನ್ನು ಕೇಳಿ ಹಿಂತಿರುಗಿ ನಿಂತ ವಾಸಪ್ಪ ಅವರು ತಾನಿದ್ದೆಡೆಗೆ ಮೆಲ್ಲಗೆ ಏರಿಬರುವವರೆಗೂ ಅವರನ್ನು ನಿರೀಕ್ಷಿಸಿ ನೋಡುತ್ತಿದ್ದಂತೆ ನಟಿಸುತ್ತಿದ್ದನೇ ಹೊರತು, ನಿಜವಾಗಿಯೂ ಅವನ ದೃಷ್ಟಿ ಮತ್ತೊಂದು ಕಡೆಯಲ್ಲಿ ನೆಟ್ಟಿತ್ತು: ಹಿಂತಿರುಗಿ ನಿಂತ ಕೂಡಲೆ ಅವನ ಕಣ್ಣು ಪುಟ್ಟಮ್ಮನ ಆರು ವರ್ಷದ ಹೆಣ್ಣು ಹುಡುಗಿ ಲಲಿತೆಯನ್ನು ಕೈಹಿಡಿದು ನಡೆಸಿಕೊಂಡು ಖಾದಿ ಸೀರೆಯನ್ನುಟ್ಟು ಬರುತ್ತಿದ್ದ ಸೀತೆ, ಒಂದು ವರ್ಷದ ಗಂಡು ಕೂಸನ್ನು ಎತ್ತಿಕೊಂಡು ಬರುತ್ತಿದ್ದ ಪುಟ್ಟಮ್ಮ, ಮತ್ತು ಅವರೊಡನೆ ಸಿಂಗಾರಗೆಯ್ದು ವಸಂತಶ್ರೀಯಂತೆ ನೀಲಿಯ ರೇಶ್ಮೆಯ ಸೀರೆಯುಟ್ಟು ಬರುತ್ತಿದ್ದ ತನ್ನ ನೂತನ ರತಿ ಲಕ್ಷ್ಮೀದೇವಿ ಇವರ ಮೇಲೆ ಎರಗಿತ್ತು. ಸಿಂಗಪ್ಪಗೌಡರ ನುರಿತ ಅನುಭವಕ್ಕೆ ಅದು ಗೊತ್ತಾಗದೆ ಇರಲಿಲ್ಲ. ವಾಸಪ್ಪನಿಗೆ ಒಂದು ಮಾರು ಸಮೀಪಕ್ಕೆ ಬಂದೊಡನೆಯೆ "ಸಾಕು ಕಣೋ! ಎಷ್ಟು ನೋಡೋದು? ದೃಷ್ಟಿಯಾಗಿ ಬಿಟ್ಟರೆ! ತಿರುಗು, ಹೋಗೋಣ" ಎಂದು ಹಾಸ್ಯಮಾಡಿದರು.

ವಾಸಪ್ಪ ನಾಚಿ ತಿರುಗಿ ಮುಂದುವರಿಯುತ್ತ "ಕಕ್ಕಯ್ಯಾ, ನೀವು ಸುಮ್ಮನಿರಿ. ನನಗೆಲ್ಲ ಗೊತ್ತದೆ, ನೀವು ಹುಡುಗರಾಗಿದ್ದಾಗ ಎಷ್ಟು ಸಂಯಮಿಗಳಾಗಿದ್ದಿರಿ ಎಂದು! ನಿಮಗೆ ಮರೆತುಹೋಗಿದ್ದರೆ ಹೂವಣ್ಣಯ್ಯನನ್ನು ಕೇಳಿ, ಹೇಳ್ತಾರೆ!" ಎಂದು ಹೊಂಬಿಸಿಲಿನಲ್ಲಿ ಹಾರಾಡುತ್ತಿದ್ದ ಬಣ್ಣದ ಚಿಟ್ಟೆಗಳನ್ನು ಹಿಡಿಯಲು ಪ್ರಯತ್ನಿಸುತ್ತಿದ್ದ ಹುಡುಗರನ್ನು ಕುರಿತು "ಬನ್ನಿ, ಬನ್ನಿ, ಹೊತ್ತಾಯ್ತು" ಎಂದು ಕರೆದನು.

'ಹೊತ್ತಾಯ್ತು' ಎಂಬುದನ್ನು ಕೇಳಿ, ಹಿಂದೆ ಸ್ವಲ್ಪ ದೂರದಲ್ಲಿ ಬರುತ್ತಿದ್ದ

ಪುಟ್ಟಮ್ಮ "ಲಕ್ಷ್ಮೀ, ಮಾಧೂನ ಸ್ವಲ್ಪ ಕರಕೊಳ್ತೀಯಾ? ನನಗೆ ದಣಿವು!" ಎಂದಳು.

"ನನಗೂ ಸಾಕಾಗಿದೆ" ಎಂದುಸುರಿ, ಮುಂದೆ ಹೋಗುತ್ತಿದ್ದ ಲಕ್ಷ್ಮೀದೇವಮ್ಮನವರ ಸವಾರಿ ಹಿಂತಿರುಗಿಯೂ ನೋಡಲಿಲ್ಲ. ಆರೋಗ್ಯವಾಗಿ ರಸವತ್ತಾಗಿದ್ದ ಅವಳಿಗೆ ದಣಿವಾಗಿಯೂ ಇರಲಿಲ್ಲ; ಕೂಸನ್ನು ಎತ್ತಿಕೊಂಡು ಹತ್ತಿದರೆ ದಣಿವಾಗುತ್ತಲೂ ಇರಲಿಲ್ಲ; ಆದರೆ ಕೂಸನ್ನು ಎತ್ತಿಕೊಳ್ಳುವುದರಿಂದ ತನ್ನ ಶೃಂಗಾರ ವೆಲ್ಲಿ ಹಾಳಾಗಿಬಿಡುತ್ತದೆಯೋ, ಎಲ್ಲಿ ಬಟ್ಟೆ ಹಾಳಾಗಿಬಿಡುತ್ತದೆಯೋ ಎಂಬುದು ಅವಳ ಒಳಗುಟ್ಟಾಗಿತ್ತು.

ಸೀತೆಗೆ ತಂಗಿಯ ಭಾವ ಗೊತ್ತಾಗಿ, ನಗುತ್ತ "ಸಾಕು ಸಾಕು, ಎತ್ತಿಕೊಳ್ಳೆ! ಈಗಲೇ ಹೀಗೆಂದರೆ ಮುಂದೆ ಹೇಗೆ?" ಎಂದು ಅಕ್ಕರೆಯಿಂದ ಗದರಿಸಿದಳು.

ಪುಟ್ಟಮ್ಮ "ಮುಂದೆ ಹ್ಯಾಂಗೇ? ಅವಳ ಬಾಲೆ ಎತ್ತಿಕೊಳ್ಳಾಕೆ ಒಬ್ಬಳು ಜವಾನಗಿತ್ತಿ ಬೇಕು ಅಂತ ಕಾಣ್ತದೆ! ವಾಸೂಗೆ ಈಗಲೆ ಹೇಳಿದ್ದರೆ ವಾಸಿ" ಎಂದು ಮುಂದೆ ದೂರದಲ್ಲಿ ಗಟ್ಟಿಯಾಗಿ ಮಾತಾಡಿಕೊಂಡು ಹೋಗುತ್ತಿದ್ದ ಗಂಡಸರ ಗುಂಪನ್ನು ನೋಡಿ "ವಾಸೂ! ಏ, ವಾಸು!" ಎಂದು ಕರೆದಳು.

ಆ ಕೂಗು ಅವರು ಯಾರಿಗೂ ಕೇಳಿಸಲಿಲ್ಲ. ಆದರೂ ಲಕ್ಷ್ಮಿ ತಟಕ್ಕನೆ ಹಿಂತಿರುಗಿ ಓಡಿಬಂದು, ಅತ್ತಿಗೆಯ ಬಾಯಿಮುಚ್ಚಿ "ದಮ್ಮಯ್ಯಾ, ಸುಮ್ಮನಿರಿ. ನಿಮ್ಮ ಪುಣ್ಯ!" ಎಂದು ತನ್ನೆರಡೂ ಅಲಂಕೃತವಾಗಿದ್ದ ತೋಳ್ಗಳನ್ನೂ ಕೂಸಿನ ಮುಂದೆ ಚಾಚಿ "ಮಾಧೂ, ಬಾ ಅಪ್ಪಾ" ಎಂದು ಮಾಧುವನ್ನು ಎತ್ತಿಕೊಂಡು ಬಿರುಬಿರನೆ ಮೇಲೇರಿದಳು.

ಸೇರೆಗಾರ ಸೋಮಯ್ಯಸೆಟ್ಟರ ಆಳುಗಳೂ, ಬೇಲರೂ, ಸುತ್ತಮುತ್ತಣ ಹಳ್ಳಿಗಳ ಅನುಕೂಲಸ್ಥರೂ, ವಾಸುವಿನ ಸಹಪಾಠಿಗಳಾಗಿದ್ದ ಅಗ್ರಹಾರದ ವೆಂಕಪ್ಪಯ್ಯನವರ ಇಬ್ಬರು ಮಕ್ಕಳೂ, ಇನ್ನೂ ಅನೇಕರು ಬುದ್ಧಜಯಂತಿಯ ಉತ್ಸವಕ್ಕಾಗಿ, ಹಸುರು ಹೂ ತಳಿರು ತೋರಣಗಳಿಂದಲೂ ವಿವಿಧ ಪರಿಮಳಗಳಿಂದಲೂ ತಪೋವನದಂತೆ ಶೋಭಿಸುತ್ತಿದ್ದ ಮಂದಿರದಲ್ಲಿ ಕಿಕ್ಕಿರಿದಿದ್ದರು. ವಾಸು ತನ್ನ ಬ್ರಾಹ್ಮಣ ಸ್ನೇಹಿತರೊಡನೆ ತರಳಸುಲಭವಾದ ಅಟ್ಟಹಾಸದಿಂದ ಮಾತಾಡತೊಡಗಿದನು. ಸಿಂಗಪ್ಪಗೌಡರು ಪರಿಚಯದವರನ್ನೆಲ್ಲ ಮಳೆ ಬೆಳೆಗಳ ವಿಚಾರವಾಗಿ ಆರೋಗ್ಯದ ವಿಚಾರವಾಗಿ ಮಾತಾಡಿಸತೊಡಗಿದರು. ಸೀತೆ, ಪುಟ್ಟಮ್ಮ, ಲಕ್ಷ್ಮಿ ಮೂವರೂ ಮಹಿಳೆಯರ ಗುಂಪಿಗೆ ಹೋಗುವ ಮೊದಲು ಹೂವಯ್ಯನ ಕೊಟಡಿಗೆ ಹೋದರು. ಸೀತೆ ತನ್ನ ವಾಡಿಕೆಯಂತೆ ಹೂವಯ್ಯನನ್ನು ಕಾಲು ಮುಟ್ಟಿ ನಮಸ್ಕರಿಸಿದಳು. ಅವನು ತನ್ನೆದುರಿಗೆ ಇದ್ದ ಬುದ್ಧದೇವನ ಪಟಕ್ಕೆ ನಮಸ್ಕರಿಸಿ, ಅದನ್ನು

ಗುರುದೇವನಿಗೆ ಸಮರ್ಪಿಸಿದನು. ಮತ್ತು ಲಕ್ಷ್ಮಿಯ ಕಂಕುಳಿಂದ ಮಾಧುವನ್ನು ಕರೆದೆತ್ತಿ, ತೊಡೆಯಮೇಲೆ ಕೂರಿಸಿಕೊಂಡು, ಮುದ್ದಿಸುತ್ತಾ, ಸಂಭಾಷಿಸಿದನು.

ಸ್ವಲ್ಪಹೊತ್ತಿನಲ್ಲಿ ಉತ್ಸವ ಆರಂಭವಾಯಿತು. ವಾಸು, ಆತನ ಇಬ್ಬರು ಬ್ರಾಹ್ಮಣ ಮಿತ್ರರು, ಶಂಕರಯ್ಯ, ರಮೇಶ ಇಷ್ಟುಜನರು ವೇದಿಕೆಯ ಪಕ್ಕದಲ್ಲಿ ನಿಂತು ನವಜೀವನ ಮಂತ್ರಗಾನವನ್ನು ಹಾಡತೊಡಗಿದರು. ಲಕ್ಷ್ಮಿ ಹಿಂದುಗಡೆಯಿಂದ ಹಾರ್ಮೋನಿಯಂ ಬಾರಿಸುತ್ತಾ ಹಿಮ್ಮೇಳವಾಗಿದ್ದಳು. ಸೀತೆ ತಾನು ಕೂತೆಡೆಯಿಂದಲೆ ಮಾನಸಿಕವಾಗಿ ಅದರಲ್ಲಿ ಭಾಗವಹಿಸಿದ್ದಳು. ಆ ರಮಣೀಯ ವಸಂತ ಪ್ರಭಾತದಲ್ಲಿ, ಶಿಖರ ಕಂದರಮಯವಾದ ಸಹ್ಯಾದ್ರಿಯ ವನಭೂಮಿಯಲ್ಲಿ, ಹೊಸದಾಗಿ ಮೂಡಿಬಂದ ದಿನಮಣಿಯ ಕಾಂಚನಕಾಂತಿಯಲ್ಲಿ, ಗಿಳಿ ಕಾಮಳ್ಳಿ ಕಾಜಾಣ ಕೋಗಿಲೆ ಪಿಕಳಾರ ಮೊದಲಾದ ಹಕ್ಕಿಗಳಿಂಚರದೊಡಗೂಡಿ ಆ ಗಾನ ಆಲಿಸಿದವರನ್ನೆಲ್ಲ ಬೇರೊಂದು ನವೀನ ಆಶಾಜಗತ್ತಿಗೆ ತೇಲಿಸಿತು:

ಉದಯಿಸುತಿಹನದೊ ಅಭಿನವ ದಿನಮಣಿ
ಸಹ್ಯಾದ್ರಿಯ ಶೃಂಗಾಳಿಯ ಮೇಲೆ.
ಹರಿದೋಡಿದೆ ನಿಶೆ, ನಗೆ ಬೀರಿದೆ ಉಷೆ,
ಶೀಡುತಲಿದೆ ತಂಗಾಳಿಯ ಲೀಲೆ.
ಮಲೆನಾಡನು ಮನಮೋಹಿಸುತಿದೆ ಓ
ದಿನಮುಖದಿನ ಕಾಂಚನಕಾಂತಿ;
ಏಳೇಳಿರಿ! ಕರೆಯುತ್ತಿದೆ ಕೇಳಿರಿ,
ಓ ನವಜೀವನ ಸಂಕ್ರಾಂತಿ!

ಉದಯಿಸುತಿದೆ ನೂತನಯುಗದೇವತೆ
ಮಿಥ್ಯೆಯ ಮೌಢ್ಯತೆಯನು ಸೀಳಿ;
ಜ್ಞಾನದ ವಿಜ್ಞಾನದ ಮತಿಖಡ್ಗದಿ
ಮೈದೋರುವಳೈ ನವಕಾಳಿ!
ಕೆಚ್ಚಿನ ನೆಚ್ಚಿನ ತನುಮನ ಪಟುತೆಯ
ಸಂಪಾದಿಸಿ ಓ ಮೇಲೇಳಿ;
ಕಣ್ದೆರೆಯಿರಿ ನವಕಾಂತಿಗೆ, ಶಾಂತಿಗೆ,
ಓ ಕ್ರಾಂತಿಯ ಪುತ್ರರೆ, ಬಾಳಿ!

---

